# ನನ್ನ ಕಥೆ

ಪಂ. ಚೆನ್ನಪ್ಪ ಎರೇಸೀಮೆ

**ಪಂ. ಚೆನ್ನಪ್ಪ ಎರೇಸೀಮೆ ಅಭಿನಂದನ ಸಮಿತಿ**
ಶ್ರೀ ಸಿದ್ಧಗಂಗಾ ಸಾಮೂಹಿಕ ಭವನ,
ನಂ.14, 1ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ,
ಮಂಜುನಾಥನಗರ, ಬೆಂಗಳೂರು-560 010

***Nanna Kathe*** *- Auto-biography of Pandit Channappa Yaresime,*
*Published by C.M. Yaresime Felicitation committee,*
*Sri Siddaganga Choultry, 14, Ist Main, 8th Cross, Manjunatha*
*Nagar, Bangalore-560 010. Pages : 505 +iv + 6; 1999.*

*Price : Rs. 100/-*



**ಕಲೆ** : ಶ್ರೀ ಎಲ್. ಶಿವಲಿಂಗಪ್ಪ
ಶ್ರೀ ಎಂ. ಎಸ್.ಸಿ. ಆರಾಧ್ಯ



ಮುದ್ರಕರು :
***ಗೀತಾಂಜಲಿ ಪ್ರಿಂಟರ್ಸ್***
ನಂ. 5, ಎಂ.ಎಸ್. ರಾಮಯ್ಯ ಕೈಗಾರಿಕಾ ಬಡಾವಣೆ,
ಮತ್ತಿಕೆರೆ, ಬೆಂಗಳೂರು-54.

# ಪ್ರಕಾಶಕರ ನುಡಿ

ಪಂಡಿತ ಚೆನ್ನಪ್ಪ ಎರೇಸೀಮೆಯವರು ನಮ್ಮ ನಾಡಿನ ಶ್ರೇಷ್ಠವಿದ್ವಾಂಸರಲ್ಲೊಬ್ಬರು; ಆದರ್ಶ ಶಿಕ್ಷಕರು. ಮೇಲಾಗಿ ಪ್ರವಚನ ಮತ್ತು ಕಥಾಕಾಲಕ್ಷೇಪಗಳ ಮೂಲಕ ಜನಮನವನ್ನು ಸೂರೆಗೊಂಡವರು. ನಾಡು-ನುಡಿಯ ಸೇವೆಯಲ್ಲಿ ಬಾಳು ಸವೆಸಿದವರು. ಅವರ ಸಾಧನೆಗಳನ್ನು ಪರಿಗಣಿಸಿ ಅವರನ್ನು ಯುಕ್ತರೀತಿಯಲ್ಲಿ ಅಭಿನಂದಿಸಬೇಕೆಂದು ಅವರ ಅಭಿಮಾನಿಗಳು, ಮಿತ್ರರು, ಶಿಷ್ಯರು ತೀರ್ಮಾನಿಸಿ ಒಂದು ಅಭಿನಂದನ ಸಮಿತಿಯನ್ನು ರಚಿಸಿ ಕಾರ್ಯೋನ್ಮುಖರಾದರು. ಶಿಕ್ಷಣತತ್ತ್ವಗಳನ್ನು ಕುರಿತ ಒಂದು ಅಭಿನಂದನ ಗ್ರಂಥವನ್ನು ಅವರಿಗೆ ಸಮರ್ಪಿಸಲು ತೀರ್ಮಾನಿಸಲಾಯಿತು.

ಅದರಂತೆ ಅವರ ಜೀವನಚರಿತ್ರೆಯನ್ನು ಬರೆಸಿದರೆ ಅದನ್ನು ಪ್ರಕಟಿಸುವುದಾಗಿ ಬೆಂಗಳೂರಿನ ಸದಾಶಿವ & ಕಂಪನಿಯ ಶ್ರೀ ಎಂ. ಸದಾಶಿವಪ್ಪನವರು ತಿಳಿಸಿದರು. ಪಂ. ಚೆನ್ನಪ್ಪನವರು ತಮ್ಮ ಆತ್ಮಚರಿತ್ರೆಯನ್ನು ಬರೆದಿರುವುದಾಗಿಯೂ, ಈ ಸಂದರ್ಭದಲ್ಲಿ ಅದನ್ನೇ ಪ್ರಕಟಿಸುವುದು ಉಚಿತವಾದುದೆಂದು ಶ್ರೀ ಟಿ.ಆರ್. ಮಹಾದೇವಯ್ಯನವರು ಅಭಿಪ್ರಾಯ ಪಟ್ಟರು. ಅಭಿನಂದನ ಸಮಿತಿ ಅದಕ್ಕೆ ಒಪ್ಪಿಗೆ ನೀಡಿತು. ಪ್ರಕಟಣೆಗೆ ಮತ್ತಷ್ಟು ಸಂಪನ್ಮೂಲವನ್ನು ದೊರಕಿಸಿಕೊಳ್ಳುವ ಪ್ರಯತ್ನ ಮಾಡಿತು. ಕೆಲವು ಮಠಾಧೀಶರು, ಸಂಸ್ಥೆಗಳವರು ಹಾಗೂ ಅಭಿಮಾನಿಗಳು ನೆರವು ನೀಡಿದರು. ಹೀಗಾಗಿ ಎರೇಸೀಮೆಯವರ **'ನನ್ನ ಕಥೆ'** ಹೊರಬರಲು ಸಾಧ್ಯವಾಯಿತು. ಇದಕ್ಕೆ ಕಾರಣರಾದ ಎಲ್ಲ ಪೂಜ್ಯರಿಗೆ, ಸಹೃದಯಿ ಬಂಧುಗಳಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಪ್ರಕಟಣೆಗೆ ಹಸ್ತಪ್ರತಿ ನೀಡಿದ. ಪಂ. ಚೆನ್ನಪ್ಪ ಎರೇಸೀಮೆಯವರಿಗೆ ಧನ್ಯವಾದಗಳು.

ಅಭಿನಂದನ ಸಮಿತಿಯ ಉಪಾಧ್ಯಕ್ಷರಾದ ಶ್ರೀ ಬಿ. ಎಸ್. ಮುದ್ದಪ್ಪನವರು, ಶ್ರೀ ಬಿ. ಎಸ್. ಶಿವಣ್ಣನವರು, ಕೋಶಾಧ್ಯಕ್ಷರಾದ ಶ್ರೀ ಎಂ. ಶ್ರೀಕಂಠಾರಾಧ್ಯರು, ಪ್ರಧಾನ ಕಾರ್ಯದರ್ಶಿಗಳಾದ ಶೀ ಟಿ. ಆರ್. ಮಹಾದೇವಯ್ಯನವರು ಮತ್ತು ಇತರ ಸದಸ್ಯರೆಲ್ಲರಿಗೂ, ಈ ಬೃಹತ್ ಕೃತಿಯನ್ನು ಶ್ರದ್ಧೆಯಿಂದ ಅಚ್ಚುಮಾಡಿಕೊಟ್ಟ ಗೀತಾಂಜಲಿ ಪ್ರೆಸ್‌ನ ಶ್ರೀ ಜಿ. ನಾಗಸುಂದರ್ ಅವರಿಗೂ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಕನ್ನಡ ಜನತೆ ಪ್ರಾಮಾಣಿಕ ಹಾಗೂ ನಿಸ್ಪೃಹ ಶಿಕ್ಷಕರ, ಸಂಸ್ಕೃತಿ ಸಂಪನ್ನ ವಿದ್ವಾಂಸರ ಈ ನೆನಪಿನ ರಸಾಯನ ವನ್ನು ಸವಿಯುವರೆಂಬ ವಿಶ್ವಾಸದಲ್ಲಿ ಇದನ್ನು ಅವರ ಕೈಯಲ್ಲಿಡುತ್ತಿದ್ದೇವೆ. ಅವರು ಇದನ್ನು ಆದರಿಸಲಿ.

ಬೆಂಗಳೂರು
3-3-1999

***ಡಿ.ಎಂ. ಚಂದ್ರಶೇಖರ್***
ಅಧ್ಯಕ್ಷ
ಪಂ. ಚೆನ್ನಪ್ಪ ಎರೇಸೀಮೆ ಅಭಿನಂದನ ಸಮಿತಿ

# ಲೇಖಕರ ಮಾತು

ಬಾಳಸಂಧ್ಯೆಯಲ್ಲಿ, ನಾನು ಸಾಗಿ ಬಂದ ದಾರಿಯನ್ನೊಮ್ಮೆ ತಿರುಗಿ ನೋಡಿದಾಗ ಕಂಡ ನೆನಪಿನ ದಿಬ್ಬಣಗಳ ಸಾಲು ಈ **'ನನ್ನ ಕಥೆ'**ಯಲ್ಲಿವೆ. ಅವುಗಳಲ್ಲಿ ಕೆಲವನ್ನು ನನ್ನ ಆತ್ಮೀಯರ ಮುಂದೆ ಹೇಳಿದಾಗ ಅವರು ಅವು ತೀರಾ ಅಪರೂಪದವು, ಸ್ವಾರಸ್ಯಕರವಾದವು; ಅವನ್ನು ನೀವು ಬರೆದಿಡಬೇಕು ಎಂದು ಒತ್ತಾಯಮಾಡಿದರು. ನಾನು ಅವನ್ನು ಬರೆಯುತ್ತಾ ಹೋದಂತೆ ಅವು ಬೆಳೆಯುತ್ತಾ ಹೋದವು. *1952*ರವರೆಗೆ ಹಾಗೆ ಬರೆದು ನಿಲ್ಲಿಸಿದ್ದೆ.

ಈಗ ಅಭಿನಂದನ ಸಮಿತಿಯವರು ಅದನ್ನು ಪ್ರಕಟಿಸಲು ಸಂಕಲ್ಪಿಸಿದ್ದರಿಂದ ಮುಂದಿನ ಕಥೆಯನ್ನು ಸಂಕ್ಷಿಪ್ತಗೊಳಿಸಿ ಮುಗಿಸಿ ಕೊಟ್ಟಿದ್ದೇನೆ. ಈ ಕೃತಿ ಹೊರಬರಲು ಕಾರಣರಾದ ಎಲ್ಲರನ್ನೂ ಕೃತಜ್ಞತೆಯಿಂದ ನೆನೆಯುತ್ತೇನೆ.

'ನನ್ನ ಕಥೆ'ಯ ಹಸ್ತಪ್ರತಿಯನ್ನು ಓರಣಗೊಳಿಸಿ, ಕರಡನ್ನು ತಿದ್ದಿ ಈ ಕೃತಿ ಇಷ್ಟರ ಮಟ್ಟಿಗೆ ಹೊರಬರಲು ಕಾರಣ ಆತ್ಮೀಯರಾದ ಶ್ರೀ ಟಿ. ಆರ್. ಮಹಾದೇವಯ್ಯನವರ ಶ್ರದ್ಧಾಸಕ್ತಿಗಳು. ಅವರಿಗೆ ನನ್ನ ವಿಶೇಷ ಧನ್ಯವಾದಗಳು ಸಲ್ಲುತ್ತವೆ.

'ನನ್ನ ಕಥೆ'ಯಲ್ಲಿ ನನ್ನ ಮನದಲ್ಲಿ ಅಚ್ಚೊತ್ತಿದ ಅನೇಕ ವಿಷಯಗಳು ಅಚ್ಚಾಗಿವೆ. ಅವು ಅಂದಿನ ಗ್ರಾಮೀಣ ಜೀವನದ ಚರಿತ್ರೆಗಳೂ ಆಗಿವೆ. ಕನ್ನಡ ಓದುಗರಿಗೆ. ಆ ನನ್ನ ನೆನಪುಗಳು ಹಿಡಿಸಿದರೆ ನಾನು ಕೃತಾರ್ಥ.

ದಿನಾಂಕ 3-3-1999 | ಚೆನ್ನಪ್ಪ ಎರೇಸೀಮೆ

ಬೆಂಗಳೂರು

# ನನ್ನ ಕಥೆ

ನನಗೀಗ 79 ತುಂಬಿ 80ನೇ ವರ್ಷದಲ್ಲಿ ಆಯುಷ್ಯದ ದಿನಗಳು ಉರುಳುತ್ತಿವೆ. ನನಗೆ ನನ್ನ ಜೀವನದ ಭಾವನೆಗಳನ್ನು ಬರೆಯಬೇಕೆಂಬ ಬಹುದಿನದ ಆಸೆಗಳಿಗೆ ಈ ದಿನ ಗರಿಮೂಡಿ ಲೆಕ್ಕಣಿಕೆ ಹಿಡಿಸಿವೆ. ಬಾಲ್ಯದಿಂದ ಮೊದಲ್ಗೊಂಡು ಇಂದಿನವರೆಗೆ ನನ್ನ ಜೀವನ ಅನೇಕ ಏರುಪೇರುಗಳಲ್ಲಿ ಸಾಗಿದೆ.ಆಳಕ್ಕಿಳಿದು ತಲೆಕೆರೆದುಕೊಂಡು ಹಿಂದಿನ ಘಟನೆಗಳನ್ನು ನೆನೆದು ಪ್ರಾಮಾಣಿಕವಾಗಿ ಬರೆಯಬೇಕೆಂಬ ಬಯಕೆ. ಎಲ್ಲವನ್ನೂ ಬರೆಯಲಾಗದಿದ್ದರೂ ಜ್ಞಾಪಕಕ್ಕೆ ಬಂದ ಅನೇಕ ಘಟನೆಗಳನ್ನು ಬರೆಯತೊಡಗಿದ್ದೇನೆ. ಅವು ಓದುವವನಿಗೆ ಬೇಸರ ತರಬಹುದು. ಅದು ಮುಖ್ಯವಲ್ಲ. ಸಾಮಾನ್ಯ ಹಳ್ಳಿಯಲ್ಲಿ ಹುಟ್ಟಿ ಬೆಳೆದ ಒಂದು ಜೀವದ ಅನುಭವಗಳು ಏನೇನಿರಬಹುದು. ಮುಂದೆ ಅಂಥ ಜೀವನದ ಸ್ವಾರಸ್ಯಗಳನ್ನು ದಾಟಿ ಬೇರೆಬೇರೆ ಜೀವನಸ್ತರಗಳಲ್ಲಿ ಕಾಲಿಟ್ಟಾಗ ಪುಟಿದೇಳುತ್ತವೆ, ಮಾರ್ಪಾಡಾಗುತ್ತವೆ ಎಂಬ ಒಂದು ಚರಿತ್ರೆಯು ಜನಕ್ಕೆ ತಿಳಿಯಲೆಂದೇ ಈ ಪ್ರಯತ್ನ.

ನಮ್ಮ ಪೂರ್ವಜರು ಉತ್ತರ ಕರ್ನಾಟಕದಿಂದಲೋ ದಕ್ಷಿಣ ಮಹಾರಾಷ್ಟ್ರದಿಂದಲೋ ಬಂದವರಂತೆ. ಬಂದವನು ನಮ್ಮ ಮುತ್ತಾತ. ಅವನ ಹೆಸರು ಬಾಳಪ್ಪ ಎಂದು. ಎಲ್ಲಿಂದ ಬಂದರು. ಯಾವಾಗ ಬಂದರು? ಎಂಬುದಕ್ಕೆ ದಾಖಲೆ ಇಲ್ಲ. ದಾಖಲೆ ಬರೆದಿಡುವ ಜನವೂ ಅಲ್ಲ ಇವರು. ಕೇಳಿಕೆ ಹೇಳಿಕೆ ಸುದ್ದಿಯಂತೆ ಈಗ ದೋಣಿಸಾಲು ಎಂದು ಕರೆಯುವ ಬೆಳಗಾವಿ ಜಿಲ್ಲೆಯಲ್ಲಿ ಹರಿಯುವ ಕೃಷ್ಣಾ ತೀರದ ಯಾವುದೋ ಊರಿನಿಂದ ಐದಾರುಜನ ಅಣ್ಣತಮ್ಮಂದಿರ ಒಂದು ಗುಂಪು ಎತ್ತು ಹಸುಗಳ ಮೇಲೆ ಕಂಟಲಿ ಹೇರಿಕೊಂಡು ಖರ್ಚಿ, ಕತ್ತಿ, ಖಡ್ಗಗಳ ಹೊರೆಗಳನ್ನು ಎತ್ತಿನ ಮೇಲೆ ಹೊರೆಕಟ್ಟಿ ಹೇರಿಕೊಂಡು ಊರುಗಳ ಮೇಲೆ ಊರು ದಾಟುತ್ತ ಈಗಿನ ಹಾನಗಲ್ಲು ತಾಲ್ಲೂಕು ಹರವಿ ಎಂಬ ಗ್ರಾಮಕ್ಕೆ ಬಂದು ಬೀಡುಬಿಟ್ಟರು. ಬಹುಶಃ ಈ ಗುಂಪು ಅಲ್ಲಿಂದ ಬಂದದ್ದು ಭಾರತವನ್ನೆಲ್ಲ ಅಲ್ಲೋಲ ಕಲ್ಲೋಲಗೊಳಿಸಿದ್ದ ಸಿಪಾಯಿ ದಂಗೆಯ ಕಾಲವಿರಬೇಕೆಂದು ನನ್ನ ಊಹೆ. ಸರಿಸುಮಾರು ಅದೇ ಕಾಲದಲ್ಲಿ ನಮ್ಮ ವಂಶಸ್ಥರ ಇನ್ನೊಂದು ಗುಂಪು ಮಲೆನಾಡ ಕಡೆಗೆ ಹೋಯಿತಂತೆ. ಯಾವೂರಿಗೆ ಹೋಯಿತು, ಹೋದವರ ಹೆಸರೇನು? ಒಂದೂ ಗೊತ್ತಿಲ್ಲ. ತಂದ ಕತ್ತಿ ಖಡ್ಗಗಳನ್ನು ಬ್ರಿಟಿಷ ಸರ್ಕಾರದ ಕಾಟಕ್ಕೆ ಹೆದರಿ ಒಂದು ಹಳ್ಳತೋಡಿ ಹುಗಿದು ಬಿಟ್ಟರಂತೆ. ಅದು ಎಲ್ಲದೆಯೊ ಗೊತ್ತಿಲ್ಲ. ಆದರೆ ಪೂಜೆಗೆ ಒಂದು ಕತ್ತಿ, ಭರ್ಜಿ ಇಟ್ಟುಕೊಂಡರು. ಅವು ಈಗಲೂ ನಮ್ಮ ಮನೆಯಲ್ಲಿವೆ. ಆಗ ಬ್ರಿಟಿಷರು ಭಾರತವನ್ನೆಲ್ಲ ತಮ್ಮ ಹಿಡಿತದಲ್ಲಿಟ್ಟುಕೊಳ್ಳುವ ಕಾಲವಾದ್ದರಿಂದ ಆಯುಧ ಇಟ್ಟುಕೊಳ್ಳುವಂತಿರಲಿಲ್ಲವಾಗಿ ಬ್ರಿಟಿಷರ ಹೆದರಿಕೆಯಿಂದ ಹಗೇವಿನಲ್ಲಿ ಹಾಕಿ ಬಿಟ್ಟರಂತೆ. ನಮ್ಮ ಹಿರಿಯರು ಮಾತನಾಡುವುದನ್ನು ಕೇಳಿದ್ದೇನೆ. ನಮ್ಮ ಮುತ್ತಜ್ಜನ ಅಣ್ಣತಮ್ಮಂದಿರು ಸಿದ್ಧಪ್ಪ-ಅಮ್ಮಣ್ಣ-ತಮ್ಮಣ್ಣ. ಇನ್ನೊಬ್ಬರು ಇದ್ದರಂತೆ. ಅವರಾರೋ ಗೊತ್ತಿಲ್ಲ. ಭದ್ರಣ್ಣ ಅನ್ನುವವನೊಬ್ಬ ಇದ್ದನಂತೆ. ಅವನು ನಮ್ಮ ಮುತ್ತಜ್ಜನ ಚಿಕ್ಕಪ್ಪನ ಮಗನೊ ದೊಡ್ಡಪ್ಪನ ಮಗನೊ ಗೊತ್ತಿಲ್ಲ. ಹೀಗೆ ನಮ್ಮೂರಲ್ಲಿ ಈ ಅಣ್ಣ ತಮ್ಮಂದಿರ ಸುಮಾರು ಈಗ 20-25 ಮನೆತನಗಳು ಈಗ ಇವೆ. ಅವರಿಗೆಲ್ಲ ಭದ್ರಣ್ಣನವರ, ಬಾಳಣ್ಣನವರ, ಅಮ್ಮಣ್ಣನವರ, ತಮ್ಮಣ್ಣನವರ, ಮೇಗಡಿಯವರು ಇತ್ಯಾದಿ ಅಡ್ಡಹೆಸರು ಉಳಿದಿವೆ. ಎಲ್ಲರಿಗೂ ಏರೇಸೀಮೆಯವರು ಎಂಬ ಇನ್ನೊಂದು ಅಡ್ಡ ಹೆಸರೂ ಇದೆ. ಸರಕಾರಿ ವ್ಯವಹಾರದಲ್ಲಿ

ಎರೇಸೀಮೆ ಎಂಬ ಅಡ್ಡಹೆಸರೇ ನಮ್ಮ ವಂಶಸ್ಥರಿಗೆಲ್ಲ ಇದೆ. ಭದ್ರಣ್ಣನವರ ಎಂಬುವರು ಮಾತ್ರ ಎರೇಸೀಮೆಯವರು ಎಂದು ಬರೆದುಕೊಳ್ಳುತ್ತಿಲ್ಲ. ಆದರೂ ನಾವೆಲ್ಲ ಒಂದೇ ಬೊಡ್ಡೆಯ ಬೇರೆ ಬೇರೆ ಹರಿಗಳು.

ನಮ್ಮ ಮನೆತನಕ್ಕೆ ಈ ಮೊದಲೇ ಹೇಳಿದಂತೆ ನಮ್ಮ ಮುತ್ತಜ್ಜ ಬಾಳಪ್ಪ ಅವರ ಹೆಸರಿನಿಂದಲೇ ಊರಲ್ಲಿ ಬಾಳಣ್ಣನವರ ಎಂದು ಕರೆಯುವುದೇ ಹೆಚ್ಚು. ಫಾಲಲೋಚನ ಎಂಬುದೇ ಸವೆದು ಬಾಳಪ್ಪ ಆಗಿರಬೇಕು. ಮಹಾರಾಷ್ಟ್ರದಲ್ಲಿ ಬಾಳಾಸಾಹೇಬ, ಬಾಳಾ, ಬಾಳಾಅಣ್ಣಾ ಬಾಳಾಟಕ್ರೆ, ಇತ್ಯಾದಿ ಹೆಸರು ಕೇಳುತ್ತೇವೆ. ಮರಾಠಾಗಡಿಗೆ ಹೊಂದಿಕೊಂಡೇ ನಮ್ಮ ಪೂರ್ವಜರ ಊರೂ ಇರಬಹುದು. ಆದ್ದರಿಂದಲೇ ನಮ್ಮ ಮುತ್ತಾತನಿಗೆ ಬಾಳಪ್ಪ ಬಂದಿರಬಹುದು. ನಮ್ಮ ಮುತ್ತಾತನಿಗೆ ಮರಾಠಿಯಲ್ಲಿ ಸಹಿಮಾಡಲು ಬರುತ್ತಿತ್ತಂತೆ. ಮರಾಠಿಯಲ್ಲಿ ಮತ್ತು ಕನ್ನಡದಲ್ಲಿ ಧಾರಾಳವಾಗಿ ಮಾತನಾಡುತ್ತಿದ್ದನಂತೆ. ಈ ಮಾತನ್ನು ನಮ್ಮ ದೊಡ್ಡಪ್ಪ ಹೆಮ್ಮೆಯಿಂದ ಹೇಳುತ್ತಿದ್ದ. ಸಹಿಮಾಡುವುದಕ್ಕೆ ಬಂದರೆ ಹೆಮ್ಮೆಯೇನು ಬಂತು ಅನ್ನಬೇಡಿ. ಆ ಕಾಲದಲ್ಲಿ ಸಹಿಮಾಡುವುದಕ್ಕೆ ಬಂದವನೂ ಒಬ್ಬ ವಿದ್ಯಾವಂತನೇ. ಅಷ್ಟು ಇತ್ತು ನಮ್ಮ ಅಕ್ಕರಿಗತನ! ಮೊಗಲರು, ಮಹಮ್ಮದೀಯ ರಾಜರ ಕಾಲದಿಂದಲೂ ಹಿಂದೂ ಜನಾಂಗ ಒಂದು ರೀತಿಯ ದಾಸ್ಯಜೀವನದಲ್ಲೆ ಬದುಕುವ ಸನ್ನಿವೇಶವೊದಗಿ ವ್ಯವಸಾಯದಿಂದ ಅಹನ್ಯಹನಿ ಜೀವನ ಸಾಗಿಸುತ್ತ ಬಂದರು. ಕೆಲವು ದೇವಾಲಯ ಮಠಮಾನ್ಯಗಳಲ್ಲಿ ಮಾತ್ರ ಸ್ವಲ್ಪ ವಿದ್ಯಾವಂತರು ಇರುತ್ತಿದ್ದರು. ಬ್ರಿಟಿಷರ ಕಾಲದಲ್ಲಂತೂ ರಾಜ್ಯವನ್ನು ಕಟ್ಟುವ ಭರಾಟೆಯಲ್ಲಿ ಅವರೂ ಹಿಂದೂಗಳನ್ನು ದಾಸ್ಯದಲ್ಲಿಟ್ಟು ಕೊನೆಗೆ 1857ರ ಬಂಡಾಯದ ನಂತರ ಜಗತ್ತಿನ ಜೀವನದಲ್ಲಿಯೇ ಬದಲಾವಣೆಯ ಕಾಲ ಬಂದಿದ್ದರಿಂದ ವಿದ್ಯಾಭ್ಯಾಸಕ್ಕೆ ಸ್ವಲ್ಪ ಪ್ರೋತ್ಸಾಹಕೊಟ್ಟರೂ ಅದೆಲ್ಲ ಅವರ ನಾಡಿನ ಮಾದರಿಯ ಶಿಕ್ಷಣವಾಗಿ ತಮ್ಮ ಆಡಳಿತದಲ್ಲಿ ಸಹಾಯಕರಾಗುವ ಜನರನ್ನು ತಯಾರಿಸುತ್ತಿದ್ದರು. ಸಾಮಾನ್ಯ ಜನರಿಗೆ ಈ ಕಾರಣವಾಗಿ ವಿದ್ಯಾಭ್ಯಾಸ ಎಟುಕಲಾರದ ತುತ್ತಾಗಿ ಹೋಗಿ ತಮ್ಮತನವನ್ನೇ ಮರೆತು ಹೋದರಾದ್ದರಿಂದ ಮೈಮುರಿಯುವಂತೆ ದುಡಿದು, ಇದ್ದರೆ ಊಟ ಇಲ್ಲದಿದ್ದರೆ ಉಪವಾಸ. ಈ ರೀತಿಯಲ್ಲಿ ಬಹಳ ದಿನ ಅವರು ಜೀವನ ಸಾಗಿಸಿಕೊಂಡು ಬಂದದ್ದರಿಂದ ಮೂಲೆಸೇರಿ ಬಿಟ್ಟರು.

ನಮ್ಮ ಪೂರ್ವಜರ ಗುಂಪಿನಲ್ಲೇ ನಮ್ಮ ಮುತ್ತಾತ ಸ್ವಲ್ಪ ಬುದ್ಧಿವಂತನಂತೆ. ಉಳಿದ ಅಮ್ಮಣ್ಣ ತಮ್ಮಣ್ಣ ಎಲ್ಲರೂ ಅಕ್ಕರಿಗರಲ್ಲ. ಭದ್ರಣ್ಣ ಮಾತ್ರ ಒಂದು ರೀತಿಯ ವ್ಯಾವಹಾರಿಕ ಚತುರತೆಯಲ್ಲಿ ಬುದ್ಧಿವಂತನಂತೆ.

ನಮ್ಮ ಪೂರ್ವಜರ ಜೊತೆಯಲ್ಲಿ ಮೂಲಸ್ಥಳದಲ್ಲಿಯೇ ಬೀಗರಾಗಿದ್ದ ಅನೇಕ ಮನೆತನಗಳೂ ಇವರ ಜೊತೆಗೇ ಹರವಿಗೆ ಬಂದರಂತೆ. ಕೆಲವರು ಆಮೇಲೆ ನಮ್ಮವರೆಲ್ಲ ಹರವಿಯಲ್ಲಿ ಬೀಡು ಮಾಡಿದ್ದಾರೆಂದು ತಿಳಿದು ಕೆಲ ದಿನಗಳ ನಂತರ ಬಂದರಂತೆ.

## ನಮ್ಮ ಮುತ್ತಜ್ಜ ಹರವಿಯಲ್ಲಿ ಆಸ್ತಿ ಮಾಡಿದ

ಹರವಿ ಧರ್ಮಾನದಿಯ ದಂಡೆಯ ಮೇಲೆ, ಧರ್ಮಾನದಿ ವರದಾ ನದಿಗೆ ಕೂಡುವಲ್ಲಿಗೆ ಅತಿ ಸಮೀಪದಲ್ಲಿಯೇ ಇರುವ ಊರು. ಮಲೆನಾಡಿನ ಸೆರಗು ಅಥವಾ ಅರೆಮಲೆನಾಡು

ಎಂದರೂ ಆದೀತು. ಆದರೆ ನಮ್ಮೂರ್ರ ಪೂರ್ವಭಾಗಕ್ಕೆ ಬೈಲುಸೀಮೆ ಹತ್ತಿದೆ. ಭೂಮಿಯೆಲ್ಲ ಎರೆಭೂಮಿಯೇ. ಪಶ್ಚಿಮಕ್ಕೆ ಏಳೆಂಟು ಮೈಲು ಹೋದರೆ ಪಕ್ಕಾ ಮಲೆನಾಡೇ. ಭತ್ತ, ಕಬ್ಬು ಬೆಳೆಯುವ ನಾಡು. ಹದಿನೈದು ಇಪ್ಪತ್ತು ಮೈಲು ಹೋದರಂತೂ ಅರಣ್ಯ ಪ್ರದೇಶವೇ. ಇಂಥ ಪ್ರಶಸ್ತವಾದ ಸ್ಥಳದಲ್ಲಿ ನಮ್ಮ ಮುತ್ತಾತ ಬೀಡು ಬಿಟ್ಟದ್ದನ್ನು ಕಂಡು ಈಗ ನಾವು ಅವನಿಗೆ ಧನ್ಯವಾದ ಸಮರ್ಪಿಸುತ್ತಿದ್ದೇವೆ. ಬಹುಶಃ ನಮಗೆ ಬರಗಾಲದ ಬವಣೆ ಕಡಿಮೆ. ಆದರೂ ಯಾವಾಗಲಾದರೊಮ್ಮೊಮ್ಮೆ ದುಷ್ಕಾಲ ಬರದೆ ಇಲ್ಲ. ಬಂದೇ ಬಂದಿದೆ. ನಾವೂ ಅನುಭವಿಸಿದ್ದೇವೆ. ಈ ವಿಷಯ ಮುಂದೆ ಹೇಳುತ್ತೇನೆ.

ನಮ್ಮ ಮುತ್ತಾತ ಹರವಿಗೆ ಬಂದೊಡನೆ ತನ್ನ ಮನೆತನಕ್ಕೆ ½ ಎಕರೆಯಷ್ಟು ಭೂಮಿಯಲ್ಲಿ ಒಂದು ಗುಡಿಸಲು ಹಾಕಿಬಿಟ್ಟ. ಅದಕ್ಕೇನು ದುಡ್ಡಿಲ್ಲ ಕಾಸಿಲ್ಲ. ಮಕ್ಕಳು ಮೂವರೇ. ಆದ್ದರಿಂದ ಹೆಚ್ಚಿನ ಜಾಗ ಏಕೆ ಬೇಕು ಎಂದು ಅಷ್ಟೇ ಜಾಗದಲ್ಲಿ ಮನೆ, ದನಗಳ ರೊಪ್ಪ ಇತ್ಯಾದಿ ಮಾಡಿಕೊಂಡು ಕ್ಷಣವೇ ಅರ್ಜಿಗುಜರಾಯಿಸಿ ಹರವಿ ಗ್ರಾಮದಲ್ಲಿ ಹತ್ತು ಎಕರೆ ಹೊಲ, ತೆವರವಳ್ಳಿ ಗ್ರಾಮದಲ್ಲಿ ನಾಲ್ವತ್ತು ಎಕರೆ ಪ್ರಶಸ್ತವಾದ ಭೂಮಿಯನ್ನು ಹಿಡಿದು ಮೂವರು ಮಕ್ಕಳಾದ ದಾನಪ್ಪ, ಚನ್ನಮಲ್ಲಪ್ಪ, ಸಂಗಪ್ಪ ಅವರಿಗೆ ಗುದ್ದಲಿ ಕೊಟ್ಟು ಹೊಲದ ಕರಿಕೆ ನಟ್ಟು ಕಡಿಯಲು ನೇಮಿಸಿ ಭೂಮಿಯನ್ನು ಸಾಗುವಳಿ ಮಾಡಿಬಿಟ್ಟ. ಉಳಿದರರಿಗೆ ಇಷ್ಟು ಉತ್ಕೃಷ್ಟ ಭೂಮಿ ಸಿಗಲಿಲ್ಲ. ಇದರ ಮೇಲಿಂದಲೇ ನಮ್ಮ ಮುತ್ತಜ್ಜ ಬಹಳ ಬುದ್ಧಿವಂತ ಎಂದು ನಾವು ಈಗ ಊಹಿಸುತ್ತೇವೆ. ಮುಂದೆ ಒಂದೆರಡು ವರ್ಷಗಳಲ್ಲಿ ಭೂಮಿ ಬಹಳ ಆಯಿತು. ಇರುವ ಮಕ್ಕಳು ಮೂರೇ ಜನ, ಇಷ್ಟೇತಕ್ಕೆ ಎಂದು ಮೆಳ್ಳಳ್ಳಿಯ ನಾಲ್ವತ್ತು ಎಕರೆ ಹೊಲದಲ್ಲಿ ಅರ್ಧಭಾಗವನ್ನೂ ನಮ್ಮೂರಿನಲ್ಲಿ ಹಂಜಿ ನೂತು ಗಂಜಿ ಕುಡಿಯುತ್ತ ನಿರ್ಗತಿಕರಾಗಿದ್ದ ಪಿಂಜಾರ ಮನೆತನವೊಂದಕ್ಕೆ ಮಾಡಿಕೊಂಡು ಊಟ ಮಾಡುವಂತೆ ಹೇಳಿ ಬಿಟ್ಟರು. ಆ ಪಿಂಜಾರರು ಇಪ್ಪತ್ತು ಎಕರೆ ಉತ್ಕೃಷ್ಟ ಭೂಮಿಯನ್ನು ಅನುಭವಿಸುತ್ತಲೇ ಬಂದರು. ಮುಂದೆ ಎಂದೋ ಒಂದು ದಿನ ಆ ಭೂಮಿಯೆಲ್ಲ ಅವರ ಪಾಲೇ ಆಯಿತು. ಆದರೆ ಅವರು ನಮ್ಮ ಮುತ್ತಜ್ಜ ಅಜ್ಜಂದಿರುಗಳಿಗೆ ಅಜ್ಜ, ಅಪ್ಪ, ಕಾಕಾ ಇತ್ಯಾದಿಯಾಗಿಯೇ ಕರೆಯುತ್ತ ಬಂದು ನಮ್ಮ ಮನೆತನದವರಲ್ಲಿ ಪೂಜ್ಯಭಾವ ಇಟ್ಟುಕೊಂಡೇ ಬಂದರು. ಇಂದಿಗೂ ನನಗೆ ಚಿಕ್ಕಪ್ಪ ಎಂದೇ ನನಗಿಂತ 50-60 ವರ್ಷ ಹಿರಿಯರೂ ಕರೆಯುತ್ತಿದ್ದುದುಂಟು. ನಾನು ಇನ್ನೂ 5-6 ವರ್ಷದ ಹುಡುಗನಿದ್ದಾಗಲೇ 50-60 ವರ್ಷದ ಆ ಪಿಂಜಾರ ಹೆಂಗಸರು, ಗಂಡಸರು ಚಿಕ್ಕಪ್ಪ ಅನ್ನುತ್ತಿದರು. ಹೀಗೇಕೆ ಅನ್ನುತ್ತಾರೆ ಎಂಬುದು ನನಗೆ ಗೊತ್ತಾಗದೆ ನಮ್ಮ ದೊಡ್ಡಪ್ಪನನ್ನು ಕೇಳಿದೆ. ದೊಡ್ಡಪ್ಪ ಹೇಳಿದ್ದು ಹೀಗೆ : ನಿನಗೆ ನಿಮ್ಮಜ್ಜನ ಹೆಸರು ಇಟ್ಟಿದ್ದೇನೆ. ನಿಮ್ಮ ಅಜ್ಜನಿಗೆ ಅವರೆಲ್ಲ ಚಿಕ್ಕಪ್ಪ ಎಂದೇ ಕರೆಯುತ್ತಿದ್ದರು. ಆದ್ದರಿಂದ ನಿನಗೂ ಚಿಕ್ಕಪ್ಪ ಅನ್ನುತ್ತಾರೆ ಎಂದನು. ಕೆಲವು ಇತ್ತೀಚಿನವರು ಅವರ ಮಕ್ಕಳುಗಳು ನನ್ನನ್ನು ಅಜ್ಜ ಎಂದೇ ಕರೆಯುತ್ತಿದ್ದರು. ಹೀಗೆ ಕರೆಯಿಸಿಕೊಳ್ಳುವುದು ನನಗೆ ಮೋಜು ಎನ್ನಿಸುತ್ತಿತ್ತು. ಇದೊಂದು ರೀತಿಯ ಕತೆ, ಹೋಗಲಿಬಿಡಿ.

ನನ್ನ ಅಜ್ಜಂದಿರು ಮೂವರು ಎಂದು ಹೇಳಿದೆನಲ್ಲವೆ? ಎಲ್ಲಕ್ಕೂ ಚಿಕ್ಕವನಾದ ಚನ್ನಮಲ್ಲಪ್ಪನೇ ನಮ್ಮ ಅಜ್ಜ. ಅಂದರೆ ನಮ್ಮ ತಂದೆಯ ತಂದೆ.

***ನಮ್ಮಜ್ಜನ ಕತೆ***

ನಮ್ಮಜ್ಜನ ಬಗ್ಗೆ ನಾಲ್ಕು ಮಾತು ನಿಮಗೆ ತಿಳಿಸುವುದು ಒಳ್ಳೆಯದೆಂದು ತೋರುತ್ತದೆ.

ನಮ್ಮ ಮುತ್ತಜ್ಜ ಬಾಳಪ್ಪ ಸತ್ತುಹೋದ ಮೇಲೆ ನಮ್ಮ ಅಜ್ಜಂದಿರಾದ ಮೂವರು ಅಣ್ಣತಮ್ಮಂದಿರು ಕೂಡಿಯೇ ಇದ್ದು ಭೂಮಿಯನ್ನು ಸಾಗುವಳಿ ಮಾಡಿಕೊಂಡು ಅಭಿವೃದ್ಧಿಗೆ ಬಂದರು. ಆದರೆ ಇವರೆಲ್ಲ ಒಂದೇ ದೊಡ್ಡಗುಡಿಸಲಿನಲ್ಲಿ ಬೇರೆ ಬೇರೆ ಭಾಗ ಮಾಡಿಕೊಂಡು ಜೀವಿಸುತ್ತಿದ್ದರಂತೆ. ದನಕರುಗಳಿಗಾಗಿ ಬೇರೊಂದು ದೊಡ್ಡ ಗುಡಿಸಲು ಇತ್ತಂತೆ. ನಮ್ಮ ದೊಡ್ಡಜ್ಜ ಸಂಗಪ್ಪ ಸಾಧು, ಸಜ್ಜನ. ಮಧ್ಯದ ದಾನಪ್ಪಜ್ಜ ಸ್ವಲ್ಪ ಸಿಟ್ಟು ಸಿಡುಕಿನವ. ನಮ್ಮಜ್ಜ ಚನ್ನಮಲ್ಲಪ್ಪನ ಮೇಲೆ ಆಗಾಗ ಕೋಪ ಮಾಡುತ್ತಿದ್ದನಂತೆ. ಇದಕ್ಕೆ ಕಾರಣ ನಮ್ಮಜ್ಜ ಸ್ವಲ್ಪ ರಸಿಕನಾಗಿದ್ದು ಮತ್ತು ಗಾಂಜಾ ಸೇದುತ್ತಿದ್ದುದು. ಅವನು ಗಾಂಜಾ ಸೇದುವುದನ್ನು ಕಲಿತದ್ದಕ್ಕೂ ಒಂದು ಕತೆ ಇದೆ.

ಹಿಂದೆ ಬಹಳ ದಿನಗಳಿಂದ ಬಂಕಾಪುರದಿಂದ ಹಾವೇರಿಗೆ ಹೋಗುವ ಸರಕಾರಿ ಮಾರ್ಗ (ಈಗಿನ ಜಲ್ಲಿಕಲ್ಲುಗಳಿಂದ ಮಾಡಿದ ರಾಜಮಾರ್ಗವಲ್ಲ ಅದು. ಗಾಡಿಗಳು, ಕಂಟಲಿ ಎತ್ತುಗಳು ಓಡುವ ಓಣಿಗಳು) ನಮ್ಮ ಹೊಲದ ಪಕ್ಕದಿಂದಲೇ ಹೋಗಬೇಕು. ಈಗಲೂ ಆ ಮಾರ್ಗ ಹಾಗೇ ಇದೆ. ಅದು ಯಾವ ಸರ್ವೆ ನಂಬರಿಗೂ ಸೇರದೆ ನಕ್ಷೆಯಲ್ಲಿ ಸರಕಾರಿ ಓಣಿ ಎಂದೇ ಇದೆ. ಬಂಕಾಪುರದಿಂದ ಕೂಡಲಸಂಗಮೇಶ್ವರ ಕ್ಷೇತ್ರಕ್ಕೂ, ಹಾವೇರಿಗೂ ಹೋಗುವ ಪ್ರಾಚೀನ ರಾಜಮಾರ್ಗವು ಇದೇ. ಬಂಕಾಪುರ ಪ್ರಾಚೀನವಾದ್ದರಿಂದ ಅಲ್ಲಿಂದ ಹತ್ತಾರು ಕಡೆಗೆ ಹೀಗೆ ರಾಜಮಾರ್ಗಗಳು ಆಗ ಇದ್ದವು. ಆದರೆ ಈಗ ಅದರಲ್ಲಿ ಯಾರೂ ಓಡಾಡುವುದಿಲ್ಲ. ಅಲ್ಲಿ ಕಾಲುದಾರಿ ಆಗಿದೆ. ದನಕರುಗಳನ್ನು ಓಡಾಟಕ್ಕೆ ಮತ್ತು ಬೇಸಿಗೆಯಲ್ಲಿ ಹೊಲವಾರಿಗೆ ಹೋಗಿಬರಲು ದಾರಿಯಾಗಿ ಮಾತ್ರ ಇದೆ.

ಈ ದಾರಿಯಲ್ಲಿ ಹಿಂದೆ ಒಬ್ಬ ದೊಡ್ಡ ಗಾಂಜಾ ಮಾರಾಟ ಮಾಡುವ ಮನುಷ್ಯ ಬಂಕಾಪುರದಿಂದ ಹಾವೇರಿಗೆ ಎತ್ತಿನ ಕಂಟಲಿಯಲ್ಲಿ ಗಾಂಜಾ ತುಂಬಿಕೊಂಡು ಹೋಗುತ್ತಿದ್ದನಂತೆ. ಹಿಂದಿನ ದಿನ ಮಳೆ ಬಂದ ಕಾರಣವಾಗಿ ನಮ್ಮ ಹೊಲದ ಪಕ್ಕದಲ್ಲಿಯೇ ಇರುವ ಹಳ್ಳದ ಅಟ್ಟಲಿನಲ್ಲಿ ಎತ್ತು ಸಿಕ್ಕು ಹಾಕಿಕೊಂಡಿತಂತೆ. ಏನು ಮಾಡಿದರೂ ಎತ್ತು ಮೇಲೆ ಬರಲಾಗದೆ ಚಟಪಡಿಸುವಾಗ ನಮ್ಮ ಅಜ್ಜ ಚನ್ನಮಲ್ಲಪ್ಪ ಅವನ ಸಹಾಯಕ್ಕೆ ಬಂದು ಎತ್ತನ್ನು ಆ ಅಟ್ಟಲಿನಿಂದ ಎತ್ತಿ ದಾರಿಗೆ ತಂದು ಬಿಟ್ಟನಂತೆ. ಈ ಕಾರಣಕ್ಕಾಗಿ ಆಗ ನಮ್ಮಜ್ಜನಿಗೆ ತನ್ನ ಕಂಟಲಿಯಲ್ಲಿ ಕೈಗಳನ್ನು ಹಾಕಿ ಎರಡೂ ಕೈಗಳಿಗೆ ಹತ್ತುವಷ್ಟು ಗಾಂಜಾವನ್ನು ಕೊಟ್ಟು ಮುಂದೆ ಹೋದನಂತೆ. ನಮ್ಮಜ್ಜ ಆ ಗಾಂಜಾವನ್ನು ಯಾರಿಗೂ ಕಾಣದಂತೆ ಮನೆಯಲ್ಲಿ ತಂದಿಟ್ಟು ದಿನವೂ ಸ್ವಲ್ಪ ಸ್ವಲ್ಪ ಮಿದ್ದಿ ಚಿಲುಮೆ (ಮಣ್ಣಿನಲ್ಲಿ ಮಾಡಿದ ತಂಬಾಕು ಸೇದುವ ಒಂದು ಸಾಧನ) ಯಲ್ಲಿ ಹಾಕಿ ಸೇದತೊಡಗಿದನಂತೆ. ಗಾಂಜಾ ಸೇದುವ ಅಭ್ಯಾಸ ನಮ್ಮಜ್ಜನಿಗೆ ಈ ರೀತಿ ಆದದ್ದು. ಬೇರೆ ಮತ್ತಾರೂ ಕಲಿಸಿದ್ದಲ್ಲ. ಈ ಅಭ್ಯಾಸ ನಮ್ಮ ದೊಡ್ಡಜ್ಜನ ಸಿಟ್ಟಿಗೆ ಒಂದು ಕಾರಣವಾದರೆ ಇನ್ನೊಂದು ಕಾರಣವೂ ಇತ್ತು. ನಮ್ಮಜ್ಜನು ನಮ್ಮೂರಿನಿಂದ ನಾಲ್ಕೈದು ಮೈಲು ದೂರದಲ್ಲಿರುವ ಸಂಗೂರೆಂಬ ಊರಲ್ಲಿದ್ದು ದೇವರಿಗೆ ಬಿಟ್ಟ ಬಸವಿಯ ಸಹವಾಸ ಮಾಡಿ ಅವಳಿಗೆ ಸಂಗೂರಿನಲ್ಲಿ ಮನೆ ಕಟ್ಟಿಸಿ ಸ್ವಲ್ಪ ಹೊಲ ಹಿಡಿದು ಕೊಟ್ಟು, ಆ ಒಂದು ಮನೆತನದ ಯೋಗಕ್ಷೇಮ ನೋಡುತ್ತಿದ್ದುದು. ಅವಳ ಹೊಟ್ಟೆಯಲ್ಲಿ ಹುಟ್ಟಿದ ಇಬ್ಬರು ಮಕ್ಕಳು ಆಗಾಗ ನಮ್ಮೂರಿಗೆ

ಬಂದು ನಮ್ಮ ಮನೆಯ ಕೆಲಸಕಾರ್ಯಗಳನ್ನು ಮಾಡಿ ಹೋಗುತ್ತಿದ್ದರು. ಅವರಲ್ಲಿ ಒಬ್ಬನ ಹೆಸರು ಹೊನ್ನಪ್ಪ ಎಂದು ಜ್ಞಾಪಕ. ಇನ್ನೊಬ್ಬನದು ನಮ್ಮ ಮುತ್ತಜ್ಜನ ಹೆಸರಾದ ಬಾಳಪ್ಪ ಎಂದು. ಅವರು ನಮ್ಮ ಜಾತಿಯವರಲ್ಲ ಎಂಬುದೊಂದು ಬಿಟ್ಟರೆ, ಉಳಿದಂತೆಲ್ಲ ನಮ್ಮ ಮನೆಯ ಮಕ್ಕಳೇ ಆಗಿರುತ್ತಿದ್ದರು. ನಾವು ಚಿಕ್ಕವರಿರುವಾಗ ನಮ್ಮನ್ನು ಅವರು ಎತ್ತಿ ಆಡಿಸುತ್ತಿದ್ದುದೂ ಉಂಟು. ಅವರಿಗೆ ನಾವೂ ಕೂಡ ಕಾಕಾ (ಚಿಕ್ಕಪ್ಪ) ಎಂದೇ ಕರೆಯುತ್ತಿದ್ದೆವು. ಇದೇನು ಕದ್ದು ಮುಚ್ಚಿ ಆದ ವ್ಯವಹಾರವೇನೂ ಅಲ್ಲ. ಆ ಕಾಲದ ಜನಜೀವನದ ಒಂದು ಪದ್ಧತಿ. ನಮ್ಮಜ್ಜನ ಆ ಹೆಂಗಸು ಆಗಾಗ ನಮ್ಮ ಮನೆಗೆ ಬಂದು ನಮ್ಮ ಹೊಲಮನೆಗಳಲ್ಲಿ ಕೆಲಸ ಕಾರ್ಯ ಮಾಡಿ ಹೋಗುತ್ತಿದ್ದುದೂ ಉಂಟಂತೆ. ಆದರೆ ನಮ್ಮ ಅಜ್ಜಿ ಗುರಮ್ಮ ಅವಳನ್ನು ತಂಗಿಯಂತೆ ಕಾಣುತ್ತಿದ್ದುದೊಂದು ದೊಡ್ಡತನವಾಗಿತ್ತು. ಇವಳಿಗೆ ಓರ್ವ ಹೆಣ್ಣು ಮಗಳೂ ಇದ್ದಳು. ನನ್ನನ್ನು ಆಕೆ ಅಪ್ಪಾ ಎಂದೇ ಕರೆಯುತ್ತಿದ್ದಳು. ಏಕೆಂದರೆ ನನಗೆ ನಮ್ಮ ಅಜ್ಜನ ಹೆಸರಿಟ್ಟಿದುದು. ನಮ್ಮಜ್ಜ ಅವಳಿಗೆ ತಂದೆಯಲ್ಲವೇ? ಆದ್ದರಿಂದ ಆ ಹೆಸರಿನ ನಾನೂ ಅವಳಿಗೆ ಅಪ್ಪಾ ಆಗಬೇಕಾಯಿತು. ಇದೊಂದು ಅಪೂರ್ವ ನಡವಳಿಕೆ. ನನ್ನ ತಾರುಣ್ಯ ಕಾಲದಲ್ಲಿ ಅವಳು ನನ್ನನ್ನು ಹಾವೇರಿಯಲ್ಲಿರುವ ತನ್ನ ಮನೆಗೆ ಕರೆಯಿಸಿಕೊಂಡು ನಮ್ಮ ದೊಡ್ಡಪ್ಪನಿಗೆ. ಅಣ್ಣಾ ಸಂಬಂಧ ತಪ್ಪಿ ಹೋಗುತ್ತದೆ. ನಿಮ್ಮ ಈ ಮಗನಿಗೆ ಒಂದು ಹೆಣ್ಣು ಕೊಡುತ್ತೇವೆ. ಮಾಡಿಕೊಂಡು ಸಂಬಂಧ ಉಳಿಸಿ ಎಂದು ಹೇಳಿದ್ದುಂಟು. ನಾನು ಸಾಧ್ಯವಿಲ್ಲ ಎಂದು ಹೇಳಿಬಂದದ್ದುಂಟು. ನಮ್ಮ ಅಜ್ಜನ ಮೇಲೆ ನಮ್ಮ ದೊಡ್ಡಜ್ಜ ದಾನಪ್ಪನ ಕೋಪ ಇದರಿಂದ ಬಹಳ ಹೆಚ್ಚಾಗಿತ್ತಂತೆ. ಅವನು ಹೆಂಗಸು ಇಟ್ಟುಕೊಂಡಿದ್ದಾನೆ ಅನ್ನುವ ಸಿಟ್ಟಲ್ಲ ಅದು. ಆಗ ಅದೊಂದು ಕ್ಷಮ್ಯವಾದ ವಿಷಯವೇ. ಅವರಿಗೆ ಮನೆ ಹೊಲ ಮಾಡಿಕೊಟ್ಟದ್ದು ಸಿಟ್ಟು ತರಿಸಿತ್ತು. ಅದರಿಂದ ನಮ್ಮ ಮನೆ ಹಾಳಾಯಿತಲ್ಲ ಎಂದು. ಇಷ್ಟರಿಂದ ನಮ್ಮ ಮನೆ ಏನೂ ಹಾಳಾಗಿರಲಿಲ್ಲ. ಸ್ವಲ್ಪ ಭಾಗ ಅವರಿಗೆ ಕೊಡಬೇಕಾಗಿತ್ತು ಕೊಟ್ಟ ಅಷ್ಟೆ. ಸಂಗೂರಿನ ಆ ಹೆಂಗಸು ನಮ್ಮ ಅಜ್ಜನ ಸೇವೆಯನ್ನು ತ್ರಿಕರಣ ಶುದ್ಧವಾಗಿ ಮಾಡಿದ್ದೊಂದು ದೊಡ್ಡ ಇತಿಹಾಸ. ಅದರ ವಿಷಯ ನನಗಿಲ್ಲಿ ಅಪ್ರಕೃತ.

### *ಗಾಂಜಾ ಸೇದಿ ನಮ್ಮಜ್ಜ ಮನೆ ಸುಟ್ಟ*

ಈ ಪೂರ್ವದಲ್ಲಿ ನಮ್ಮಜ್ಜ ಗಾಂಜಾ ಸೇದುವ ಚಟ ಹೇಗೆ ಕಲಿತುಕೊಂಡ ಅನ್ನುವುದನ್ನು ಹೇಳಿದ್ದೇನಷ್ಟೆ. ನಮ್ಮಜ್ಜನ ಈ ಗಾಂಜಾ ಸೇದುವ ಚಟಕ್ಕೆ ಆಹುತಿಯಾಗಿ ನಮ್ಮ ದೊಡ್ಡ ಗುಡಿಸಲು ಮನೆ ಹಾಡುಹಗಲಿನಲ್ಲೇ ಸುಟ್ಟು ಮನೆಯಲ್ಲಿನ ಕಾಳು ಕಡಿ ಎಲ್ಲ ಭಸ್ಮವಾದದ್ದೊಂದು ದೊಡ್ಡ ದುರಂತ. ಬೆಂಕಿ ಹತ್ತುವುದಕ್ಕೆ ಕಾರಣ ಹೀಗಿದೆ:

ಚಿಲುಮೆಯಲ್ಲಿ ಗಾಂಜಾ ಮಿದ್ದಿಹಾಕಿ ಒಳ್ಳೆ ಸಿಸ್ತಾಗಿ ಕುಳಿತು ಕೊಂಡು ಚಿಲುಮೆಯ ತಳದ ತೂತಿನ ಕಡೆ ಒದ್ದೆಬಟ್ಟೆಯನ್ನು ಸುತ್ತಿ ಚೆನ್ನಾಗಿ ಗಾಂಜಾ ಸೇದಿ ಆ ಬಟ್ಟೆಯನ್ನು ಬಿಚ್ಚಿ ಗಾಂಜಾ ಇರುವ ಚಿಲುಮೆಯಲ್ಲಿ ಒತ್ತಿ ತುರುಕುವುದು ಗಾಂಜಾ ಸೇದುವವರೆಲ್ಲ ಮಾಡುವ ವಿಧಾನವೇ. ಆ ವಿಧಾನಕ್ಕನುಸರಿಸಿ ನಮ್ಮಜ್ಜ ಬಟ್ಟೆಯನ್ನು ಬೆಂಕಿ ಇರುವ ಸ್ಥಳದಲ್ಲಿ ಒತ್ತಿ ತುರುಕಿ ತಟ್ಟಿ(ತಡಕಿ)ಯಲ್ಲಿ ಇಟ್ಟು ಹೊಲಕ್ಕೆ ಹೋಗಿಬಿಟ್ಟ. ಆದರೆ ದುರ್ದೈವಕ್ಕೆ ಅದರಲ್ಲಿ ಸ್ವಲ್ಪ ಬೆಂಕಿ ಇನ್ನು ಉಳಿದಿತ್ತೆಂದು ತೋರುತ್ತದೆ. ಬೆಂಕಿ ಬಟ್ಟೆಗೆ ಹೊತ್ತಿ ಅಡವಿಯ ಹುಲ್ಲಿನಿಂದ ಮಾಡಿದ ಕಟ್ಟಿಗೆ ಬೆಂಕಿ ಹತ್ತಿ ಗುಡಿಸಲಿಗೆ ಮಧ್ಯಾಹ್ನ 12 ಘಂಟೆ ಸುಮಾರಿಗೆ ಬೆಂಕಿ ಹತ್ತಿಬಿಟ್ಟಿತು. ನಮ್ಮ

ದಾನಪ್ಪಜ್ಜ ಮನೆಯಲ್ಲೇ ಇದ್ದ. ಅವನು ನಮ್ಮಜ್ಜನ ಚಿಲುಮೆ, ಗಾಂಜಾದ ಗಂಟು ಎಲ್ಲಿದೆ ಎಂಬುದನ್ನು ಮೊದಲು ಹುಡುಕಿ ಕಯ್ಯಲ್ಲಿ ಹಿಡಿದು 'ಅಯೋಗ್ಯ ಸೂ..... ಮಗ ಮನೆಸುಟ್ಟು ಹಾಳುಮಾಡಿಬಿಟ್ಟ' ಎಂದು ಬೈಯ್ಯುತ್ತ ಮನೆ ಆರಿಸಲು ಪ್ರಯತ್ನಿಸದೆ ಧರ್ಮಾ ವರದಾ ನದಿಗಳ ಸಂಗಮಕ್ಕೆ ಬಿಸಾಡಿ ಬರುತ್ತೇನೆಂದು ಅಲ್ಲಿಗೆ ಓಡಿ ಹೋದನಂತೆ. ಊರ ಜನರೆಲ್ಲ ಸೇರಿ ಬೆಂಕಿ ಆರಿಸುವುದು, ಒಳಗಿನ ಸಾಮಗ್ರಿಗಳನ್ನು ಹೊರಕ್ಕೆ ಬಿಸಾಡುವುದು ಇತ್ಯಾದಿ ಕಾರ್ಯದಲ್ಲಿ ನಿರತರಾಗಿದ್ದರು. ದನಗಳು ಕುರಿ ಮೇಕೆಗಳು ಮಧ್ಯಾಹ್ನವಾದ್ದರಿಂದ ಹೊಲದ ಕೆಲಸಕ್ಕೆ ಮತ್ತು ಮೇಯುವುದಕ್ಕೆ ಹೋದದ್ದರಿಂದ ಪ್ರಾಣಿಗಳಾವುವೂ ಬೆಂಕಿಗೆ ಆಹುತಿಯಾಗಲಿಲ್ಲವೆಂಬುದು ಸಮಾಧಾನದ ಸಂಗತಿ.

ಈ ಘಟನೆ ನಡೆದ ಮೇಲೆ ನಮ್ಮ ಎರಡನೇ ಅಜ್ಜನಿಗೂ ನಮ್ಮ ಅಜ್ಜನಿಗೂ ಆಗಾಗ ಜಗಳಗಳು ಆಗುತ್ತಲೇ ಇದ್ದುವಂತೆ . ಆದರೆ ನಮ್ಮ ಹಿರಿಯ ಅಜ್ಜ ಸಂಗಪ್ಪ ಮಾತ್ರ ಯಾವ ತಂಟೆಗೂ ಬರುತ್ತಿರಲಿಲ್ಲವಂತೆ. ಮನೆ ಸುಟ್ಟಾಗ ಏನೋ ಅಚಾತುರ್ಯ ಆಗ್ತದೆ. ಇದೇನು ಭಾರೀ ಕಿಮ್ಮತ್ತಿನ ಮನೆ ಅಲ್ಲ, ಏನಲ್ಲ. ಒಂದು ವಾರದ ಕೆಲಸ, ಕಟ್ಟಿಕೊಂಡರಾಯಿತು, ಎಂದನಂತೆ ನಿರ್ವಿಕಾರಭಾವದಿಂದ.

ಆದರೆ ನಮ್ಮ ಎರಡನೇ ಅಜ್ಜ ಮಾತ್ರ ಈ ಘಟನೆ ಆದ ಮೇಲೆ ಬಹಳ ದಿವಸ ಕೂಡಿ ಇರಲಿಲ್ಲವಂತೆ, ಬೇರೆಯಾಗಿಬಿಟ್ಟರು. ಬೇರೆಯಾದ ಮೇಲೆ ನಮ್ಮಜ್ಜ ಬೇರೆ ಮೇಲು ಮುದ್ದೆಯುಳ್ಳ ಐದಂಕಣ ಹಕ್ಕಿ, ಐದಂಕಣ ಪಡಸಾಲೆ, ಐದಂಕಣ ಅಡಿಗೆ ಮನೆ, ದೇವರಮನೆ ಬಚ್ಚಲುಳ್ಳ ಒಂದು ಮನೆ ಕಟ್ಟಿಕೊಂಡು ಬಿಟ್ಟ. ಉಳಿದವರೂ ಈ ಗುಡಿಸಲು ಮನೆಯ ಸಹವಾಸ ಬೇಡೆಂದು ಮೇಲುಮುದ್ದೆಮನೆ ಕಟ್ಟಿಸಿಕೊಂಡರು. ಅವರ ದೃಷ್ಟಿಯಿಂದ ಅವರು ಕಟ್ಟಿಕೊಂಡ ಮನೆಗಳು ಅವರ ಕುಟುಂಬಕ್ಕೆ ಸಾಕಾಗುವಷ್ಟು ಆಗಿದ್ದವು.

ನಮ್ಮ ಮುತ್ತಜ್ಜ ಸುಮಾರು ಅರ್ಧ ಎಕರೆ ಮನೆಗೆ ಜಾಗ ಹಿಡಿದಿದ್ದು ಅದರಲ್ಲಿ ಗುಡಿಸಲು ಹಾಕಿಕೊಂಡಿದ್ದನೆಂದು ಈ ಪೂರ್ವದಲ್ಲಿ ಹೇಳಿದ್ದೆನಲ್ಲವೇ? ನಮ್ಮ ಹಳೆಗಾಲದ ಬೀಗರ ಮನೆತನವೊಂದು ಮಹಾರಾಷ್ಟ್ರದ ಕಡೆಯಿಂದ ಬಹುಶಃ ತುಳಜಾಪುರದ ಕಡೆಯಿಂದಲೋ, ಕೊಲ್ಲಾಪುರಕಡೆಯಿಂದಲೋ ಸರಿಯಾಗಿ ಜ್ಞಾಪಕವಿಲ್ಲ, ಅಲ್ಲಿಂದ ನಮ್ಮ ಹಿರಿಯರ ಗುಂಪನ್ನು ಪತ್ತೆ ಹಚ್ಚಿಕೊಂಡು ನಮ್ಮ ಊರಾದ ಪರವಿಗೆ ಬಂದುಬಿಟ್ಟರು. ಅವರು ಬಂದ ಮೇಲೆ ನಮ್ಮ ಈ ¼ ಎಕರೆಯಷ್ಟು ಭಾಗ ಜಾಗ ಕೊಟ್ಟು ಅವರಿಗೆ ಇರಲಿಕ್ಕೆ ಗುಡಿಸಲು ಇತ್ಯಾದಿ ಅನುಕೂಲ ಮಾಡಿಕೊಟ್ಟುಬಿಟ್ಟ. ಅವರೂ ಇಲ್ಲೆ ಉಳಿದ ಮೇಲೆ ಅವರಿಗೆ ಸುಮಾರು ಇಪ್ಪತ್ತು ಎಕರೆ ಆಗಬಹುದು. ಅಷ್ಟು ಜಮೀನು ಕೊಡಿಸಿ ತಮ್ಮ ನೆರೆಹೊರೆಯಲ್ಲಿರಿಸಿ ಕೊಂಡು ಬಿಟ್ಟ. ಮೂರುತಲೆಮಾರು ಕಳೆದರೂ ಅವರ ನಮ್ಮ ಬೀಗತನಗಳು ಇನ್ನು ನಡೆಯುತ್ತಲೇ ಇವೆ. ಅವರ ಮನೆಯಲ್ಲಿ ತುಳಜಪ್ಪ, ತುಳಜವ್ವ ಇತ್ಯಾದಿ ಹೆಸರುಗಳು ಇನ್ನು ಇದ್ದೇ ಇವೆ.

### *ನಮ್ಮ ಹಿರಿಯರ ಅಂದಿನ ಜೀವನ*

ನಮ್ಮ ಹಿರಿಯರ ಅಂದಿನ ಜೀವನದ ಬಗ್ಗೆ ಸ್ವಲ್ಪ ಹೇಳಲೇಬೇಕು. ಅವರ ಪ್ರಧಾನ ವೃತ್ತಿ ವ್ಯವಸಾಯವೇ. ವ್ಯವಸಾಯಕ್ಕೆ ಅಂಗವಾಗಿ ಹಸು ಎಮ್ಮೆಗಳನ್ನು ಸಾಕಷ್ಟು ಕಟ್ಟಿಕೊಂಡಿದ್ದರು.

ಹಸು ಎಮ್ಮೆಗಳು ಗೊಬ್ಬರ ಮತ್ತು ಊಟಕ್ಕೆ ಹಾಲು ಮೊಸರು ಮಜ್ಜಿಗೆಗಾಗಿ. ಹಾಲು ಮೊಸರು ಮಾರುತ್ತಾರೆ ಅಥವಾ ಕೊಳ್ಳುತ್ತಾರೆ ಎಂಬುದನ್ನೇ ಅರಿಯರು ಅವರು. ಜೊತೆಗೆ ಕುರಿಮೇಕೆಗಳನ್ನು ಮನೆಯಲ್ಲಿ ಇಟ್ಟುಕೊಳ್ಳುತ್ತಿದ್ದರು. ಮೇಕೆಗಳು ಕೇವಲ ಹಾಲಿಗಾಗಿ, ಕುರಿಗಳು ಮಾರಾಟ ಮಾಡಲಿಕ್ಕಾಗಿ. ಗಂಡುಕುರಿ - ಮೇಕೆಗಳನ್ನು 3-4 ವರ್ಷ ಜೋಪಾನ ಮಾಡಿ ಮಾರಿಬಿಡಬೇಕು. ಇದು ಅವರಿಗೆ ರೊಕ್ಕದ ಬೆಳೆಗಳಲ್ಲಿ ಒಂದಾಗಿತ್ತು.

ಹೊಲದಲ್ಲಿ ಬೆಳೆದ ಹತ್ತಿಯನ್ನು ಬೀಜವನ್ನು ಅರೆದು ಬೇರ್ಪಡಿಸಿ ಕೇವಲ ಅರಳಿಯನ್ನು ಮಾತ್ರ ಮಾರುತ್ತಿದ್ದರು. ಹತ್ತಿಯ ಕಾಳು ಎತ್ತು, ಎಮ್ಮೆ, ಆಕಳುಗಳು ತಿನ್ನಬೇಕು. ಪ್ರಸಂಗದಲ್ಲಿ ಹಾಲುಕೊಡುವ ಮೇಕೆಗಳಿಗೂ ತಿನ್ನಿಸಬೇಕು. ಹತ್ತಿ ಕಾಳನ್ನು ಯಥೇಚ್ಛೆಯಿಂದ ತಿಂದ ಎತ್ತುಗಳು ಆನೆ ಬೆಳೆದಂತೆ ಬೆಳೆಯುತ್ತಿದ್ದವಂತೆ. ಎರಡೇ ಎತ್ತುಗಳು ತುಂಬಿದ ಹಳಿಬಂಡಿಯನ್ನು ಎಳೆದುಕೊಂಡು ಬರುತ್ತಿದ್ದವಂತೆ. ಕೆಸರಲ್ಲಿ ಬಂಡಿ ಸಿಕ್ಕರೆ ಎರಡೇ ಎತ್ತುಗಳು ಮಂಡಿಯೂರಿ ಕಿತ್ತುಕೊಂಡು ಬಂದು ಬಿಡುತ್ತಿದ್ದುವಂತೆ. ಎತ್ತುಗಳು ಇವರ ಮನೆತನದ ಪ್ರತಿಷ್ಠೆಯ ವಸ್ತುಗಳು. ದುರ್ಬಲ ಎತ್ತು ಕಟ್ಟಿ ಬೇಸಾಯ ಮಾಡುವವ ಆಗ ಅಪಹಾಸ್ಯಕ್ಕೆ ಗುರಿಯಾಗುತ್ತಿದ್ದ ಕಾಲ.

ಇನ್ನು ಎಣ್ಣೆಗೆ ಅವರು ಪರಾವಲಂಬಿಗಳಲ್ಲ. ಹೊಲದಲ್ಲಿ ಬೆಳೆದ ಕುಸುಬಿಯನ್ನು ಊರ ಹೊರಗೆ ಇರುವ ಸಾರ್ವಜನಿಕ ಗಾಣದಲ್ಲಿ ಆಡಿಸಿ ಎಣ್ಣೆ ತೆಗೆದು ಮನೆಗೆ ಆಗುವಷ್ಟು ಎಣ್ಣೆ ಮಾಡಿಕೊಳ್ಳಬೇಕು. ಇದರಂತೆ ದೀಪ ಹಚ್ಚಲು ಔಡಲ ಎಣ್ಣೆ ಮಾಡಿಟ್ಟುಕೊಳ್ಳುತ್ತಿದ್ದರು. ಎಳ್ಳು ಬೆಳೆದರೆ ಎಳ್ಳಿನ ಎಣ್ಣೆಯನ್ನು ಮಾಡಿಟ್ಟುಕೊಳ್ಳುವುದು. ಅವರು ಯಾವ ಎಣ್ಣೆಯನ್ನು ಕೊಂಡವರಲ್ಲ. ಸೀಮೆಎಣ್ಣೆ ಅವರಿಗೆ ಗೊತ್ತೇ ಇರಲಿಲ್ಲವಂತೆ. ಸೀಮೆಎಣ್ಣೆ ಗೊತ್ತಿದ್ದರೂ ಅದನ್ನು ಉರಿಸುತ್ತಿದ್ದಲ್ಲವಂತೆ. ಅದರ ವಾಸನೆಯೇ ಅವರಿಗೆ ಅಸಹ್ಯ. ಮೇಲಾಗಿ ಸೀಮೆ ಎಣ್ಣೆ ಪ್ರಚಾರಕ್ಕೆ ಬಂದದ್ದು ನಮ್ಮ ಅಪ್ಪಂದಿರ ಕಾಲಕ್ಕೆ. ಆ ಕಾಲಕ್ಕೆ ಲಾಟೀನು, ಲ್ಯಾಂಪು ಹಚ್ಚುವರು ಬಹಳ ಮುಂದುವರಿದವರೆಂಬ ಗ್ರಹಿಕೆ. ಓಗಲೇಕಂದೀಲು ಬಂದದ್ದು ಇತ್ತೀಚೆಗೆ ತಾನೆ. ನಾವು ಮೊದಲು ಹಚ್ಚುತ್ತಿದ್ದ ಸೀಮೆಎಣ್ಣೆ ದೀಪವೆಂದರೆ ಬುಡ್ಡಿಗಳು ಮಾತ್ರ. ಅವುಗಳ ವಾಸನೆಯೋ ಹೊಗೆಯೋ ದೇವರೆ ಬಲ್ಲ. ಆಗ ಚಹಾ ಕಾಫಿಗಳ ಸುಳಿವೇ ಇಲ್ಲ. ಲಾಟೀನು ನಮ್ಮ ಗೃಹ ಪ್ರವೇಶ ಮಾಡಿದ್ದು ನಾನು ಐದಾರು ವರ್ಷದವನಿರುವಾಗ. ಲಾಟೀನಿನ ಬೆಳಕಿನಲ್ಲಿ ಓದುವುದೆಂದರೆ ನನಗೆ ಬಹು ಖುಷಿ ಕೊಡುತ್ತಿತ್ತು. ಗಾಳಿಗೆ ಆರದಿರುವ ದೀಪದ ಲಾಟೀನು ನಮಗೆ ಆ ಕಾಲದಲ್ಲಿ ಬಹುದೊಡ್ಡ ವೈಜ್ಞಾನಿಕ ತಯಾರಿಕೆಯ ವಸ್ತುವೇ ಆಗಿತ್ತು. ಕಣಕ್ಕೋ ಹೊಲಕ್ಕೋ ಅದನ್ನು ಹಚ್ಚಿಕೊಂಡು ಕೈಯಲ್ಲಿ ಹಿಡಿದುಕೊಂಡು ಹೋಗುವುದು ಒಂದು ಪ್ರತಿಷ್ಠೆಯ ವಸ್ತುವೇ ಆಗ ಆಗಿತ್ತು. ಇಂಥ ಕಾಲದಲ್ಲಿ ನನ್ನ ಬಾಲ್ಯದ ಮಹತ್ವದ ದಿನಗಳು ಉರುಳಿ ಹೋಗುತ್ತಿದ್ದವು.

ಬೆಳಿಗ್ಗೆ ಎದ್ದ ಕೂಡಲೆ ಹೊಳೆಯಲ್ಲಿ ಸ್ನಾನ ಮಾಡಿಕೊಂಡು ಬಂದ ಮೇಲೆ ಉಪ್ಪು ಹಾಕಿ ದಪ್ಪನಾಗಿ ಸುಟ್ಟ ಜೋಳದ ಬಿಸಿರೊಟ್ಟಿ ಎರಡು ಮೂರನ್ನು ಹಾಲು ಹಾಕಿ ಕಿವುಚಿಕೊಂಡು ಸ್ವಲ್ಪ ಕಾರದ ಪುಡಿ ನಂಜಿಕೊಂಡು ಉಂಡು ಹೊಲಕ್ಕೆ ಹೋದರಾಯಿತು. ಹೊಲದಲ್ಲಿ 11 ಗಂಟೆ ಸುಮಾರಿಗೆ ಮನೆಯಿಂದ ಬಂದ ರೊಟ್ಟಿ, ತೊಗರಿಬೇಳೆ ಪಲ್ಯ, ಹುಳಿಪಲ್ಯ (ಕಾರಬೇಳೆ : ಪರಿಷ್ಕೃತ ಪೇಟೆ ಹೆಸರು) ಅಥವಾ ಹೆಸರುಕಾಳು ಮಿಜ್ಜಿ, ಇಲ್ಲವೆ ಹೆಸರಕಾಳು ಹಿಟ್ಟಿನ ಪಲ್ಯ,

ಕೆಂಪುಕಾರದ ಚಟ್ನಿ ಅಥವಾ ಹಣ್ಣು ಮೆಣಸಿನ ಕಾಯಿ ಚಟ್ನಿ, ಮೊಸರು ಬೆಣ್ಣೆಗಳೊಡನೆ ತಿಂದು ತನಿಯಂಬಲಿ ಕುಡಿದರೆ ಆಯಿತು. ಪುನಃ ಎರಡು ಮೂರು ಘಂಟೆಯ ವರೆಗೆ ಏನೂ ಇಲ್ಲ. ಜೋಳವೇ ನಮ್ಮ ಮನೆಯ ಮುಖ್ಯ ಆಹಾರ. ರೊಟ್ಟಿ, ಅಂಬಲಿ ಎಲ್ಲಾ ಅದರದ್ದೇ. ವಿಶೇಷ ಸಂದರ್ಭದಲ್ಲಿ ಅದೇ ಜೋಳಕ್ಕೆ ಸ್ವಲ್ಪ ನೀರು ಹಾಕಿ ಒರಳಲ್ಲಿ ಕುಟ್ಟಿ ತೌಡು ತೆಗೆದು ಮಾಡಿದ ಕಾಳುಗಳನ್ನೇ ಕುದಿಸಿ ಮಾಡಿದರೆ ಅದು ಕಿಚಡಿ. ಕಿಚಡಿ ಮಾಡಿದರೆ ಅದಕ್ಕೆ ಬದನೇಕಾಯಿ ಪಲ್ಯ ಬೇಕೇ ಬೇಕು. ಹಾಲಿನೊಡನೆ ಕಿಚಡಿ ಉಣ್ಣುವುದು ನಮ್ಮವರ ವಿಶೇಷ ಊಟ. ಅಂತು ಜೋಳದ ಸಡಗರವೋ ಸಡಗರ. ಬಡವರ ಊಟ ತನಿ ಅಂಬಲಿ ಎಂದು ಹೇಳಿದೆನಲ್ಲವೆ? ಅದೊಂದು ಸ್ವಾರಸ್ಯಕರ ಅಂಬಲಿ. ಬಸವಣ್ಣನ ಹೊಗಳಿಕೆಗೆ ಪಾತ್ರನಾದ ಮಾದಾರಚನ್ನಯ್ಯ ಉಣ್ಣುತ್ತಿದ್ದ ಅಂಬಲಿ ಇದೆಯೋ ಏನೊ! ಆದನ್ನು ಮಾಡುವುದು ಹೀಗೆ :

ಜೋಳವನ್ನು ನಾಲ್ಕೈದು ಭಾಗವಾಗುವಂತೆ ಒಡೆದು ನುಚ್ಚುಮಾಡಿ ರಾತ್ರಿ ಆ ನುಚ್ಚನ್ನು ನೆನೆಹಾಕಿಬಿಡುತ್ತಿದ್ದರು. ಜೋಳ ಎಂದರೆ ಈಗ ನಾವು ಬಳಸುವ ಜೋಳದಂತಲ್ಲ. ಒಳ್ಳೆಯ ಜೋಳ. ಅದಕ್ಕೆ ಮಲ್ಲರ ಅಂತಾ ಏನೋ ಹೆಸರು. ಗೋಧಿಯೊಡನೆ ಸ್ಪರ್ಧಿಸಬಲ್ಲ ಜೋಳ ಅದು. ರೊಟ್ಟಿ ಬೆಳ್ಳಗೆ ಬಹಳ ಮೃದು ಮತ್ತು ರುಚಿ. ಇಂಥ ಜೋಳದ ಅಂಬಲಿ ಬಹಳ ರುಚಿ. ಬೆಳಿಗ್ಗೆ ಅದನ್ನು ಅತಿ ತೆಳುವೂ ಅಲ್ಲ, ತೀರಾ ಗಟ್ಟಿಯೂ ಅಲ್ಲವೆಂಬಂತೆ ಸ್ವಲ್ಪ ಉಪ್ಪು ಹಾಕಿ ಕುದಿಸಿ ಮಾಡಿದರೆ ಅದೇ ಅಂಬಲಿ. ಇದಕ್ಕೆ ನೀರು ಬೆರೆಸಿದ ಎಮ್ಮೆ ಹಾಲು ಹಾಕಿಕೊಂಡು ಉಣ್ಣುವ ಪದ್ಧತಿ. ಇದೇ ಅಂಬಲಿಗೆ ಉಳ್ಳೆಗಡ್ಡೆಯನ್ನು ಹೆಚ್ಚಿ ಹಾಕಿ ಒಳ್ಳೆ ಗಟ್ಟಿಮಜ್ಜಿಗೆ ಹಾಕಿ ತಕ್ಕಷ್ಟು ಉಪ್ಪುಹಾಕಿ ಗಡಿಗೆಯಲ್ಲಿ ತುಂಬಿಟ್ಟುಕೊಂಡು ಹೊಲಕ್ಕೆ ಒಯ್ಯುತ್ತಿದ್ದರು. ಹೊಲದಲ್ಲಿ ಕೆಲಸ ಮಾಡುವವರಿಗೆ ಈ ಅಂಬಲಿ ಬಹಳ ಹಿತಕರವಂತೆ. ಇದನ್ನೇ ತನಿ ಅಂಬಲಿ ಅನ್ನುವುದು. ಅಂಬಲಿಯನ್ನು ಬಹಳ ತೆಳುವಾಗಿ ಮಾಡಿಕೊಂಡು ಕುಡಿಯುವುದು ಬಡತನದ ಲಕ್ಷಣ. ಅವರಿಗೆ ಕಾಟಿಕುಡಿಯೋರು ಎಂದು ಅಪಹಾಸ್ಯ ಮಾಡುತ್ತಿದ್ದರಂತೆ.

ಅವರ ಜಾನಪದ ಹಾಡುಗಳಲ್ಲಿ ಅವರು ಪ್ರಸ್ತಾಪ ಮಾಡದೆ ಬಿಟ್ಟಿಲ್ಲ. ಶಿವನ ಹೆಂಡತಿ ಪಾರ್ವತಿ ತವರುಮನೆಗೆ ಹೋಗಿ ಬರುತ್ತೇನೆಂದಾಗ,

ಕಾಟಿಯ ಕುಡಿಯೋರು ರಾಟೀಯ ನೂಲೋರು
ಸಾಟಿಯೇನೆ ನಮಗೆ ಸಿರಿಗೌರಿ
ಸಾಟಿಯೇನೆ ನಮಗೆ ಸಿರಿಗೌರಿ ಆ ಮನೆಗೆ
ಏನು ಹೋದೆ ನಂದೀಯ ಸಿರಿಗೌರಿ॥

ಅನ್ನ ಗಿನ್ನ ಎಲ್ಲಾ ಹಬ್ಬ ಹುಣ್ಣಿಮೆಯ ದಿನ ಮಾತ್ರ. ಬೇಕಾದರೆ ನವಣೆ ಅಕ್ಕಿ ಅನ್ನ ಹಾಲು ಮೊಸರು, ಮಜ್ಜಿಗೆ ಸಾರಿನೊಡನೆ ಊಟ ಮಾಡುವುದೂ ಆಢ್ಯರ ಮನೆತನದ ಲಕ್ಷಣಗಳಲ್ಲೊಂದಾಗಿತ್ತು.

ಮನೆ ಸುತ್ತ, ಹೊಲದಲ್ಲಿ ಬೆಳೆದ ಗೊರಜಿ, ಸಬ್ಬಸಿಗೆ, ಪುಂಡಿ, ಎಲೂರಿಣ್ಣ-ಅಣೆ ದಾಗಡಿ (ಇದು ಗಂಡಸರಿಗೆ ನಿಷಿದ್ಧ. ಏಕೊ ಗೊತ್ತಿಲ್ಲ) ಹರವೆ, ಚಿಲಕ ಪಲಕ, ಕಿರುಕಸಾಲೆ. ಹೊನಗನ್ನೆ, ಉತ್ತರಾಣಿ ಮೊದಲಾದ ಸೊಪ್ಪನ್ನು ಧಾರಾಳವಾಗಿ ತಂದು ಉಪಯೋಗಿಸುತ್ತಿದ್ದರು.

ಕೇಸಿನ ಸೊಪ್ಪು ಮತ್ತು ಅದರ ದೇಟು (ಕೆಸುವೆ)ಗಳನ್ನು, ಮಂಗರೋಳಿ ಕುಡಿಯನ್ನು ಯಾವಾಗಲೋ ಒಮ್ಮೊಮ್ಮೆ ಪಲ್ಯ ಮಾಡಿಕೊಂಡು ತಿನ್ನುವ ಪದ್ಧತಿ ಇತ್ತು. ಇದರಿಂದ ಹೊಟ್ಟೆಯ ಹುಳ ಹೋಗುತ್ತವೆ ಎನ್ನುತ್ತಿದ್ದರು. ಹೊಟ್ಟೆ ಹುಳ ಹೋಗುತ್ತವೋ ಅಥವಾ ಬರುತ್ತವೆಯೋ ದೇವರೆ ಬಲ್ಲ. ಅಂತು ಅವರು ಡಾಕ್ಟರರ ಹಂಗಿಗರಲ್ಲ. ಆಗ ಹೋಟಲಿನ ಕಾಟವೂ ಇರಲಿಲ್ಲ. ಆಗ ಕಾಯಿಲೆಗಳು ಬರುವುದೇ ಕಡಿಮೆ. ಬಂದರೆ ಉಳಿಯುವುದು ಇನ್ನೂ ಕಡಿಮೆ. ನಮಗೆ ಕೆಮ್ಮು , ಗಂಟಲನೋವು ಆದರೆ ನಮ್ಮ ತಾಯಿ ಬೇಲಿ ಮೇಲಿನ ಯಾವುದೋ ಸೊಪ್ಪು ತಂದು ಮೆಣಸು ಬೆಳ್ಳುಳ್ಳಿ ಉಪ್ಪಿನ ಹರಳು ಹಾಕಿ ತಿನ್ನಿಸಿಬಿಡುತ್ತಿದ್ದಳು. ಆಗಿನ ನಮ್ಮವರ ಆಹಾರದಲ್ಲಿ ಅಧಿಕ ಸತ್ವ ಇರುತ್ತಿತ್ತು. ಸೊಪ್ಪಿಗಂತೂ ದುಡ್ಡಿಲ್ಲ ಕಾಸಿಲ್ಲ. ನಮ್ಮ ತಾಯಿ ದಿನವೂ ಹತ್ತಾರು ಬಗೆಯ ಸೊಪ್ಪನ್ನು ಮಡಿಲಲ್ಲಿ ಕಟ್ಟಿಕೊಂಡು ಬಂದು ಅಂದಂದಿನ ಅಡಿಗೆ ಮಾಡುತ್ತಿದ್ದರು. ಮನೆಯಲ್ಲಿಯೇ ಮಾಡಿದ ಕುಸುಬೆ ಎಣ್ಣೆಯ ಒಗ್ಗರಣೆಯಲ್ಲಿ ಮೇಲ್ಕಂಡ ಸೊಪ್ಪು ಬೇಯಿಸಿಬಿಟ್ಟರೆ ಪಂಚಾಮೃತ ಪ್ರಾಯ. ಇವುಗಳ ಜೊತೆಗೆ ಬದನೆ, ಹೀರೆ, ಚವಳಿ, ಕಾಡುಬೆಂಡೆ, ಹಾಗಲ, ಮೂಲಂಗಿ ಗಡ್ಡೆ, ಸೊಪ್ಪುಗಳನ್ನು ಕೂಡಿಸಿ ಹೆಚ್ಚಿ ಮಾಡಿದ ಪಚಡಿ, ಮೆಂತೆಸೊಪ್ಪು ಹಸಿಯದು, ಹಸಿಯ ಈರುಳ್ಳಿಸೊಪ್ಪು ಇವೆಲ್ಲ ನಮ್ಮ ಮನೆಯ ಆಹಾರದ ಮುಖ್ಯವಸ್ತುಗಳು. ಈ ಕಥೆಯನ್ನೆಲ್ಲ ನಮಗೆ ನಮ್ಮ ತಾಯಿ ಹೇಳುತ್ತಿದ್ದಳು. ಆ ವಿಷಯವನ್ನು ಮುಂದೆ ಹೇಳುತ್ತೇನೆ. ಸಾಮಾನ್ಯವಾಗಿ ರಾಗಿಯನ್ನು ನಮ್ಮ ಮನೆಯಲ್ಲಿ ತಿನ್ನುವುದು ತೀರಾ ಕಡಿಮೆ. ಇಲ್ಲವೆಂದರೂ ತಡೆದೀತು. ರಾಗಿಯನ್ನು ಅಲ್ಪ ಸ್ವಲ್ಪ ಬೆಳೆಯುತ್ತಿದ್ದರೂ ಅದನ್ನು ಏನಿದ್ದರೂ ಆಳುಗಳಿಗೆ ಅಳೆದು ಬಿಡುತ್ತಿದ್ದರು. ರಾಗಿರೊಟ್ಟಿ, ಅಂಬಲಿ ಉಣ್ಣುವುದೆಂದರೆ ಬಡತನದ ಲಕ್ಷಣವಂತೆ. ನಮ್ಮ ಮನೆಯವರು ಶ್ರೀಮಂತರಲ್ಲ; ವ್ಯವಸಾಯಗಾರರಲ್ಲೇ ತಮ್ಮ ದೊಡ್ಡಸ್ತಿಕೆ ಉಳಿಸಿಕೊಂಡು ಬಂದವರು. ಬಡವರು, ನಿರ್ಗತಿಕರು ಎನ್ನಿಸಿಕೊಳ್ಳಲು ಅವರಿಗೆ ಇಚ್ಛೆ ಇಲ್ಲ, ಅಷ್ಟೆ. ಆದ್ದರಿಂದ ಜೋಳದ ಊಟವೇ ನಮ್ಮ ಮನೆತನದ ಸಾಮಾನ್ಯ ದಿನನಿತ್ಯದ ಊಟಗಳಾಗಿರಬಹುದು.

### *ಹಬ್ಬ ಹುಣ್ಣಿಮೆಗಳಲ್ಲಿ ನಮ್ಮ ಊಟ ತಿಂಡಿಗಳು*

ಹಬ್ಬಗಳಲ್ಲಿ ಯಾವ ಯಾವ ಹಬ್ಬದಲ್ಲಿ ಏನೇನು ಅಡಿಗೆ ಎಂಬುದು ನಮ್ಮಲ್ಲಿ ಶಾಸನವಿದ್ದ ಹಾಗೆಯೇ. ಆಯಾಯ ಹಬ್ಬದಲ್ಲಿ ಅದು ಆಗಲೇಬೇಕು. ಇಲ್ಲದಿದ್ದರೆ ಅಸಹಾಸ್ಯ. ಆ ಪಟ್ಟಿಯನ್ನು ಸ್ವಲ್ಪಹೇಳಿ ಬಿಡುತ್ತೇನೆ. ಹಬ್ಬದ ಈ ಅಡಿಗೆಗಳು ನಮ್ಮ ಅಜ್ಜಮುತ್ತಜ್ಜನವರ ಕಾಲದಿಂದ ಬಂದ ನಮ್ಮ ಮನೆಯ ಅಥವಾ ನಮ್ಮ ಅಣ್ಣತಮ್ಮಂದಿರ ಮನೆಯ ಸಂಪ್ರದಾಯಗಳು.

ಮಹಾನವಮಿಯಲ್ಲಿ ಎರಡು ದಿನ ಮಾತ್ರ ಹಬ್ಬದ ಅಡಿಗೆ. ಆಯುಧ ಪೂಜೆಯ ದಿನ ಗೋಧಿ ಹುಗ್ಗಿ ಅಥವಾ ಗುಳಿಗೆ ಹುಗ್ಗಿ. ಗುಳಿಗೆಂದರೆ ಅದೂ ಗೋದಿಯಲ್ಲಿ ಮಾಡಿದ್ದೇ. ವಿಜಯದಶಮಿ ದಿನ ಹೋಳಿಗೆ ಅಥವಾ ಕರಿಗಡಬಿನ ಊಟ. ಮುಂದೆ ಐದೇ ದಿನಗಳಲ್ಲಿ ಬರುವ ಸೀಗೆಹುಣ್ಣಿಮೆಗೆ ಕರಜೀಕಾಯಿ, ಕೊಡಂಬಳೆ, ಕಲಸನ್ನ, ಕರಿಗಡಬು, ಪುಂಡಿಪಲ್ಯ, ಉಂಡಿಗಡಬು, ಅನ್ನಸಾರು ಇಷ್ಟೂ ಭೂಮಿ ತಾಯಿಗೆ ಎಡೆಗೆ ಬೇಕೇ ಬೇಕು. ಮುಂದೆ ಬರುವ ದೀಪಾವಳಿ ಹಬ್ಬದಲ್ಲಿ ನರಕ ಚತುರ್ದಶಿಯ ಹಿಂದಿನ ರಾತ್ರಿಯಲ್ಲಿ ನೀರು ತುಂಬುವಿಕೆ. ನೀರು ಕಾಸುವ ಹಂಡೆ ತೊಳೆದು ಪೂಜಿಸಿ ಅದರಲ್ಲಿ ಮಹಾಲಿಂಗನ ಬಳ್ಳಿ (ಇದೊಂದು ಕಹಿ ಗುಣದ ಬಳ್ಳಿ) ಯನ್ನು ಹುಡುಕಿತಂದು ಹಂಡೆಯಲ್ಲಿ ಹಾಕುವುದು ಮತ್ತು ಹಂಡೆಗೆ ಅದನ್ನು

ಸುತ್ತುವುದು. ಅದರಲ್ಲಿ ನೀರು ತುಂಬಿ ನಸುಕಿನಲ್ಲಿ ನೀರು ಕಾಸಿ ಬೆಳಕು ಹರಿಯುವುದರೊಳಗೆ ಎಣ್ಣೆ ಹಚ್ಚಿಕೊಂಡು ಸ್ನಾನಮಾಡಿ ಗೋದಿಯ ಸೇವಗೆಯನ್ನು ಬಸಿದು ಹೊಲದಲ್ಲಿ ಚರಗ ಚಲ್ಲಲು ಮಾಡಿಕೊಡಬೇಕು. ಚರಗ ಚಲ್ಲಿ ಬಂದು ಮಧ್ಯಾಹ್ನ ಸೇವಗೆ ಸಕ್ಕರೆ ತುಪ್ಪಹಾಲು ಹಾಕಿಕೊಂಡು ಊಟ. ಅನ್ನ ಸಾರು ಮಾತ್ರ ಇದ್ದೇ ಇರುತ್ತದೆ. ಆದರೆ ಆ ದಿನಗಳಲ್ಲಿ ನವಣೆ ಅಕ್ಕಿ, ನೆಲ್ಲಕ್ಕಿಯ ಅನ್ನವೇ ಆಗಬೇಕು.

ಮರುದಿನ ಅಮಾವಾಸ್ಯೆಯ ರಾತ್ರಿ ಕರಿಕಡಬು ಆಗಲೇಬೇಕು. ಆ ದಿನ ಕರಿಯವ್ವ ಎಂಬ ಕೊಟ್ಟಿಗೆಯಲ್ಲಿನ ಒಂದು ದೇವರಿಗೆ ಎಡೆಯಾಡಿ ಊಟಮಾಡಿ ಮುಗಿಸಿದರೆ ಆಯಿತು. ಮರುದಿನವೇ ಕಾರ್ತೀಕ ಶುದ್ಧ ಪ್ರತಿಪದೆ ದಿನದ ಹಟ್ಟಿಪೂಜೆಯ ಹಬ್ಬ. ಬೆಳಿಗ್ಗೆ ಹೊಲಕ್ಕೆ ಹೋಗಿ ಎಷ್ಟು ಬಗೆ ಹೂ ಸಿಗುತ್ತವೆಯೋ ಅವನ್ನು ಮತ್ತು ಚಿಕ್ಕ ಚಿಕ್ಕ ಹೊಡೆಗಳು, ಹುಚ್ಚೆಳ್ಳು ಹೂವು ಗಿಡಗಳು - ಎಲ್ಲವನ್ನು ಕಿತ್ತುಕೊಂಡು ಬಂದು ಕೊಟ್ಟಿಗೆಯಲ್ಲಿ ಇಟ್ಟು ಸೆಗಣಿಯಿಂದ ಮಾಡಿದ ಹಟ್ಟಿಗೆ ಪೂಜೆಮಾಡಬೇಕು. ಹಟ್ಟಿಯ ಮಧ್ಯದಲ್ಲಿ ಬನ್ನಿಮೇಟಿಯನ್ನಿಟ್ಟು ಪೂಜೆಮಾಡಬೇಕು. ಪೂಜೆ ಆದ ಮೇಲೆ ಹೋಳಿಗೆ ತುಪ್ಪದ ಊಟ. ತುಪ್ಪಕ್ಕೆ ಕೊರತೆಯಿರಲಿಲ್ಲ ನಮ್ಮ ಕಾಲಕ್ಕೆ ಆ ಕೊರತೆ ನಮ್ಮ ಅಜ್ಜ ಮುತ್ತಜ್ಜಗಳ ಕಾಲದಿಂದ ತುಪ್ಪ ಕಾಸಿ ಕಾಸಿ ಗಡಿಗೆಗಳಲ್ಲಿ ತುಂಬಿ ಇಟ್ಟುಕೊಳ್ಳುವ ಪದ್ಧತಿ ಇತ್ತಲ್ಲವೆ? ಅದರಿಂದ ಬೇಕಾದಷ್ಟು ಬಗ್ಗಿಸಿಕೊಂಡು ಊಟ ಮಾಡಬಹುದಾಗಿತ್ತು. ಇಲ್ಲಿಗೆ ಹಟ್ಟಿಹಬ್ಬದ ಸಡಗರ ಮುಗಿಯಿತು. ಎಲ್ಲ ಹಬ್ಬಗಳಲ್ಲೂ ಅಕ್ಕಿಹುಗ್ಗಿ ಇರಲೇಬೇಕು. ಅಕ್ಕಿಹುಗ್ಗಿಯೆಂದರೆ ಬೆಲ್ಲ ಸಕ್ಕರೆ ಹಾಕಿದ್ದಲ್ಲ. ಅಕ್ಕಿಯನ್ನು ಚೆನ್ನಾಗಿ ಬೇಯಿಸಿ ಅದರಲ್ಲಿ ಕುಸುಬೆ ತಿರುವಿ ಬಂದ ಅದರ ರಸ, ಅರಿಸಿನ, ಎಲೆಗಳು ಹಸಿ ಅರಿಸಿನ, ಹಾಲುಕೆನೆ ಹಾಕಿ ಕುದಿಸಿದ ಹುಗ್ಗಿ. ಇದನ್ನು ಎಲ್ಲಕ್ಕೂ ಮೊದಲು ಸ್ವಲ್ಪ ಊಟ ಮಾಡಿಯೇ ಉಳಿದವುಗಳ ಊಟ ಮಾಡಬೇಕು.

ಮುಂದೆ ಬರುವ ದೊಡ್ಡ ಹಬ್ಬ ಮಕರ ಸಂಕ್ರಮಣ. ಆ ಹಬ್ಬದಲ್ಲಿ ಜೋಳದ ದೋಸೆ ಬೆಲ್ಲದ ಪಾಕ(ಯಾಲಕ್ಕಿ ಕೊಬ್ರಿ ಗಸಗಸೆ ಹಾಕಿ ಕುದಿಸಿದುದು) ಗಳೊಡನೆ ಊಟ ಮಾಡಬೇಕು. ಈ ಮಧ್ಯೆ ಮನೆ ಮಂದಿಯೆಲ್ಲ ಕೂಡಿ ಹತ್ತಿಹೊಲಕ್ಕೆ ಹೋಗಿ ಅಲ್ಲಿ ಭೂಮಿತಾಯಿಗೆ ದೋಸೆಯನ್ನು ಎಡೆಮಾಡಿ ಊಟಮಾಡಿ ಬರಬೇಕು. ಭೂಮಿತಾಯಿ ಆಗ ದೋಸೆಯನ್ನು ಬಯಸಿರುತ್ತಾಳಂತೆ. ಇದಾದ ಮೇಲೆ ಬರುವ ಭಾರತ ಹುಣ್ಣಿಮೆ ಹಬ್ಬ. ಇದೊಂದು ವಿಚಿತ್ರ ಬಗೆಯ ಊಟ ಮಾಡುವ ಹಬ್ಬ. ಆ ದಿನ ಹೋಳಿಗೆಯನ್ನೇನೋ ಮಾಡುತ್ತಾರೆ. ಇದರ ಜೊತೆಗೆ ಅಂದು ಮಾಡಿದ ಅನ್ನ ಸಾರು, ಪಲ್ಯೆ, ಬಾಳೆಹಣ್ಣು, ಕೊಬ್ರಿ, ಹೋಳಿಗೆ ಅಕ್ಕಿ ಹುಗ್ಗಿ ಏನೇನು ಅಡಿಗೆಮಾಡಿದೆಯೋ, ಹಣ್ಣುಹಂಪಲು ಎಷ್ಟೆಷ್ಟು ಇರುವುದೊ ಅದನ್ನೆಲ್ಲ ಸ್ವಲ್ಪ ಹಾಲುಹಾಕಿ ಕೂಡಿಸಿ ಚೆನ್ನಾಗಿ ಕಲಸಿ ಮಾಡಿದ್ದನ್ನು ಭರತಬುತ್ತಿ ಎಂದು ಕರೆದು ಎಲ್ಲರೂ ಮೊದಲು ಅದನ್ನು ತಿಂದು ಆಮೇಲೆ ಹೋಳಿಗೆ ಅಥವಾ ಕರಿಗಡಬು ಊಟಮಾಡಬೇಕು.

ಮುಂದೆ ಬರುವುದೇ ಶಿವರಾತ್ರಿ. ಅಂದು ಉಪವಾಸ ಮುಗಿಸಿ ಮರುದಿನ ಗೋದಿ ಹುಗ್ಗಿ ಮಾಡುವುದೇ ಹೆಚ್ಚು. ಅಕ್ಕಿಹುಗ್ಗಿ ಮತ್ತು ಗೋದಿಹುಗ್ಗಿಗಳನ್ನು ಸಾಮಾನ್ಯವಾಗಿ ಪಾಯಸ ಎಂದು ಕರೆಯುವ ಪರಿಪಾಠವಿಲ್ಲ. ಇದಾದ ಮೇಲೆ ಹೋಳಿಹುಣ್ಣಿಮೆಯ ಎರಡು ದಿನಗಳು ಹೋಳಿಗೆ ಆಗಲೇಬೇಕು. ಹೋಳಿಗೆಯಲ್ಲಿ ನಮ್ಮ ಮನೆಯಲ್ಲಿ ಸಜ್ಜಕದಿಂದ ಮಾಡಿದ ಹೋಳಿಗೆ,

ಕಡಲೆಬೇಳೆಯಿಂದ ಮಾಡಿದ ಹೂರಣದ ಹೋಳಿಗೆ ಎರಡರಲ್ಲಿ ಯಾವುದಾದರೂ ಆಗಬಹುದು. ಅದರ ಮುಂದಿನ ಯುಗಾದಿಯಲ್ಲಿ ಯುಗಾದಿಯ ಮುನ್ನಾದಿನ ದೀಪಾವಳಿಯಲ್ಲಿ ಮಾಡಿದಂತೆ ನೀರು ಹಂಡೆಯನ್ನು ಶುದ್ಧಗೊಳಿಸಿ ಪೂಜಿಸಿ ಬೇವಿನ ಸೊಪ್ಪಿನಿಂದ ಹಂಡೆಯನ್ನು ಅಲಂಕರಿಸಿ ಹಂಡೆಯಲ್ಲಿ ನೀರು ತುಂಬಿ ನಸುಕಿನಲ್ಲಿ ಅಭ್ಯಂಜನ ಸ್ನಾನ ಮಾಡಿ ಸೇವೆಗೆ ಬಸಿದು ತುಪ್ಪ, ಸಕ್ಕರೆ ಅಥವಾ ಬೆಲ್ಲ ಹಾಕಿ ಹೊಲಕ್ಕೆ ನೈವೇದ್ಯ ಮಾಡಿಕೊಂಡು ಹೋಗಿ ಪೂಜಿಸಿ ನೈವೇದ್ಯ ಸಮರ್ಪಿಸಿ ಕುಂಟೆಯನ್ನು ಹೂಡಿ ನಾಲ್ಕು ಸಾಲು ಹರಗಿ ಬರುವುದು. ಮಧ್ಯಾಹ್ನ ಸೇವಗೆ, ಅಕ್ಕಿಹುಗ್ಗಿಯ ಊಟ. ಮರುದಿನ ಚಂದ್ರ ದರ್ಶನವಾದ ಮೇಲೆ ಹೋಳಿಗೆ ಊಟ ಆಗಲೇಬೇಕು.

ಇದಾದ ಮೇಲೆ ಬರುವ ಕಾರಹುಣ್ಣಿಮೆ ದಿವಸ ಕೋಡಬಳೆ, ಉದ್ದಿನ ವಡೆ, ಕರಿಗಡಬು ಆಗಬೇಕು. ಅಂದು ಕರಿ ಹರಿಯಲು ಬಿಟ್ಟ ದನಗಳ ಕೋಡಿಗೆಲ್ಲ ಕೋಡಬಳೆ, ಕೊರಳಲ್ಲಿ ಕೋಡಬಳೆ, ಒಡೆಗಳ ಸರ, ಕೊಬ್ರಿಯ ಬಟ್ಟಲು, ಬೇವಿನ ಸೊಪ್ಪಿನ ಜೊತೆ ಕಟ್ಟಿ ಕರಿಹರಿಯಲು ಊರ ಅಗಸೆಯಿಂದ ಮನೆ ಕಡೆ ಓಡಿಸಬೇಕು. ಅವನ್ನು ಊರಿನ ಬೇರೆ ಬೇರೆ ಜನ ಹರಿದುಕೊಳ್ಳಬೇಕು. ಹರಿಸಿಕೊಳ್ಳದೆ ಬಂದ ದಿನಗಳು ಶ್ರೇಷ್ಠವೆಂದು ಭಾವನೆ.

ಇದಾದ ನಂತರ ಬರುವ ದೊಡ್ಡ ಹಬ್ಬ ನಾಗರಪಂಚಮಿ. ಇದೇ ನಮ್ಮನೆಯಲ್ಲಿ ಮತ್ತು ನಮ್ಮ ವಂಶಸ್ಥರ ಮನೆಯಲ್ಲಿ ಬಹಳ ವಿಜೃಂಭಣೆಯಿಂದ ಎರಡು ದಿನ ಆಚರಿಸುವ ಹಬ್ಬ. ಈ ಹಬ್ಬದ ದಿನ ಪೂರಿಟ್ಟು, ತಂಬಿಟ್ಟು, ಎಳ್ಳುಂಡೆ, ಅರಳುಂಡೆ, ಕಡಲೆಉಂಡೆ - ಈ ಉಂಡೆಗಳ ಸಡಗರವೇ ಸಡಗರ. ಹತ್ತಾರು ಬಗೆಯ ಉಂಡೆಗಳ ಜೊತೆಗೆ ಕಡಲೆ, ಹೆಸರುಗಳ ಉಸುಳಿ - ಇವು ಪ್ರಧಾನ. ಬಾಕಿ ಉಳಿದಂತೆ ಅಕ್ಕಿ ಹುಗ್ಗಿ, ಅನ್ನ ಸಾರು ಉಂಟೇ ಉಂಟು. ಹೀಗೆ ನಮ್ಮ ವಂಶಸ್ಥರೆಲ್ಲ ಸಾಮಾನ್ಯವಾಗಿ ಇಂಥಿಂಥ ಹಬ್ಬದಲ್ಲಿ ಇಂಥಿಂಥ ಅಡಿಗೆ ಆಗಬೇಕೆಂದು ನಿರ್ಣಯಿಸಿ ಬಿಟ್ಟಿದ್ದಾರೆ. ಇದುವರೆಗೆ ಹೇಳಿದ ತಿನಿಸುಗಳ ಜೊತೆಗೆ ಇತ್ತೀಚಿಗೆ ಬೇರೆ ಬೇರೆ ಅಡಿಗೆ ಮಾಡುತ್ತಿರಬಹುದು. ಆದರೆ ಪ್ರಧಾನ ಅಡಿಗೆ ಅಷ್ಟು ಆಗಲೇಬೇಕು. ಗಣೇಶ ಗೌರಿಹಬ್ಬಗಳನ್ನು ನಾವು ಮಾಡುವುದಿಲ್ಲ. ಆಗ ಅವು ಅಷ್ಟು ಪ್ರಚಾರದಲ್ಲೂ ಇರಲಿಲ್ಲ.

ಇಷ್ಟಾದರೂ ನಮ್ಮ ಮನೆಯಲ್ಲಿ ಹಿಂದಿನಿಂದಲೂ ಗೌಲಿ, ಗಳಿಗೆ, ಸವತೇ ಬೀಜ. ಇತ್ಯಾದಿಯಾಗಿ ಗೋದಿಹಿಟ್ಟಿನಲ್ಲಿ ಮಾಡಿ ಇಡಲ್ಪಟ್ಟ ಅನೇಕ ಬಗೆಯ ಪದಾರ್ಥಗಳ ಅಡಿಗೆಯನ್ನು ಮಾಡುವುದುಂಟು. ಅವೆಲ್ಲ ಈ ದೊಡ್ಡ ದೊಡ್ಡ ಹಬ್ಬಗಳ ಸಂದಿಯಲ್ಲಿ ಬರುವ ಗುಳ್ಳಪ್ಪನ ಹಬ್ಬ, ಅಲ್ಲಿಗೇರಿಹಬ್ಬ, ಕಾರ್ತೀಕ ಅಮಾವಾಸ್ಯೆಯ ಹಬ್ಬ, ಕಾರ್ತೀಕಮಾಸದಲ್ಲಿ ಬರುವ ಗಜಗೌರೀಹಬ್ಬ, ಶ್ರಾವಣ ಸೋಮವಾರದ ಹಬ್ಬಗಳು, ಮಣ್ಣೆತ್ತಿನ ಅಮವಾಸ್ಯೆಯ ಹಬ್ಬ, ಪರ್ವತ ಮಲ್ಲಯ್ಯನ ಹಬ್ಬಗಳು ನಮ್ಮ ಮನೆತನದವರು ಆಚರಿಸುವ ಚಿಕ್ಕ ಚಿಕ್ಕ ಹಬ್ಬಗಳು.

### *ಗೃಹಕಸಬು*

ನಾನು ನಿಮ್ಮನ್ನು ಹಬ್ಬಗಳ ವಿಷಯಕ್ಕೆ ಎಳೆದು ಹಿಂದೆ ಹೇಳುತ್ತಿದ್ದ ನಮ್ಮ ಗೃಹ ಕಸಬುಗಳ ವಿಷಯದಿಂದ ದೂರಬಂದು ಬಿಟ್ಟೆ. ಕ್ಷಮಿಸಿ, ನಮ್ಮ ಗೃಹಕಸಬುಗಳಲ್ಲಿ ಹತ್ತಿ ಅರೆಯುವುದು ಎಂದು ಹೇಳುತ್ತಿದ್ದೆನಲ್ಲವೆ? ಹತ್ತಿಯನ್ನು ಅರೆದು ಮನೆಗೆ ಬೇಕಾಗುವ ಬಿಳಿಬಟ್ಟೆಗಳಿಗೆ (ಬಿಳಿಜವಳಿ - ಪುರುಷರ ಬಟ್ಟೆಗಳು) ಬೇಕಾಗುವಷ್ಟು ಅರಳಿ ಇಟ್ಟುಕೊಂಡು ಉಳಿದದ್ದನ್ನು ಮಾರಿ ಅದರಿಂದ

ಮನೆಗೆ ಬೇಕಾದ ಕರಿಜವಳಿ (ಸ್ತ್ರೀಯರ ಉಡುಪು) ಉಪ್ಪು, ಬೆಲ್ಲ, ಸಕ್ಕರೆ - ಇವನ್ನು ಕೊಂಡು ಹಾಕುತ್ತಿದ್ದರು. ಇಟ್ಟುಕೊಂಡ ಅರಳಿಯನ್ನು ಹಂಜಿಮಾಡಿ ದಾರ ನೂಲುವ ಕೆಲಸ ವರ್ಷವಿಡೀ ನಮ್ಮ ಅಜ್ಜಿ, ಮುತ್ತಜ್ಜಿ ಮಾಡುತ್ತಿದ್ದರಂತೆ. ದಾರ ತೆಗೆದು ಅದನ್ನು ಲಡಿಗಳನ್ನಾಗಿ ಮಾಡಿ ಜೇಡರ ಮನೆಗೆ ಕಳಿಸಿ ದುಪ್ಪಟ್ಟ ಪಂಚೆಗಳನ್ನು ನೇಯಿಸುವುದು. ಅವರಿಗೆ ಕೂಲಿ ಅಥವಾ ಆಯ ಕೊಡುತ್ತಿದ್ದರು. ಪಂಚೆಗಾಗಿ ನೆಯ್ದದ್ದೂ ಅಂಗಿ ಹೊಲಿಸಲು ಆಗುತ್ತಿತ್ತು. ಎಲ್ಲ ದಪ್ಪ ನೂಲಿನ ಒರಟು ಬಟ್ಟೆಗಳು (ಇಂದಿನ ನಾಗರಿಕತೆಯ ದೃಷ್ಟಿಯಿಂದ) ದುಪ್ಪಟ್ಟ ಮಾತ್ರ ಬಹಳ ಬಂಧುರವಾಗಿರುತ್ತಿದ್ದಂತೆ. ಅವನ್ನು ನಾವು ನೋಡಿಲ್ಲ. ನಮ್ಮ ದೊಡ್ಡಪ್ಪ ಕತೆ ಹೇಳುತ್ತಿದ್ದುದನ್ನು ನಿಮಗೆ ಹೇಳುತ್ತೇನೆ. ನಮ್ಮ ಹಿರಿಯರ ಬಟ್ಟೆಯ ಸಿರಿಯೆಂದರೆ ಉಟ್ಟ ಪಂಚೆ, ಹೊರುವ ದುಪ್ಪಟ್ಟ, ಎರಡೇ ಅಂಗಿ. ಅಂದರೆ ಬಗಲಗಸೆ ಅಂಗಿ. ಮದುವೆಯಲ್ಲೂ ಇದೇ. ರುಮಾಲಕ್ಕೆ ಉಂಡೇರುಮಾಲ ಎಂದು ಚಚ್ಚೌಕಾದ ಒಂದು ಜಾಳಬಟ್ಟೆಯ ಚೌಕ. ಅದರ ವಿರುದ್ಧ ಮೂಲೆಗಳ ವರೆಗೆ ಉದ್ದ ಮಾಡಿ ಸುತ್ತಿದರೆ ಆಯಿತು. ಇದೇ ಅವರ ಪೂರ್ಣ ಉಡುಪು. ಈ ಪದ್ಧತಿ 50-60 ವರ್ಷಗಳ ಹಿಂದಿನ ವರೆಗೆ ಇತ್ತು. ಅವರೆಲ್ಲ ಸತ್ತರು. ಅವರ ಜೊತೆ ಅವರ ಉಡುಪಿನ ವೈಖರಿಯೂ ಸತ್ತಿತು. ನಮ್ಮ ಮನೆಯಲ್ಲಿ ಮೊನ್ನೆ ಮೊನ್ನೆಯವರೆಗೆ ನಾಲ್ಕೈದು ದಾರ ತೆಗೆಯುವ ರಾಟಿಗಳು, ದಾರವನ್ನು ಸುತ್ತುವ ತಟ್ಟೆ (ಅದರ ಹೆಸರೂ ಕೂಡ ನಮಗೆ ತಿಳಿಯದಾಗಿದೆ) ಅಂತಾ ಏನೋ ಅನ್ನುತ್ತಿದ್ದರು. ಅದು ಹತ್ತಿ ಅರೆಯುವ ಕಬ್ಬಿಣ ಕುಳ, ಅರೆಯಲು ಕಾಲಿನ ಕೆಳಗೆ ಉಪಯೋಗಿಸುತ್ತಿದ್ದ ಕಬ್ಬಿಣದ ಸಾಧನಗಳು, ಅನೇಕ ಬಗೆಯ ಅವಶೇಷಗಳು ನಮ್ಮ ಕೀಲಿಮನೆ ಅನ್ನುವ ಮನೆಯಲ್ಲಿ ಒಟ್ಟಿದ್ದರು.

ಈಗ ಐವತ್ತು ವರ್ಷಗಳ ಹಿಂದೆ ನಾನು ಮನೆ ಕೆಲಸಕ್ಕೆ ನಿಂತ ಮೇಲೆ 1932ರಿಂದ 1937ರವರೆಗೆ ಬಂದೊದಗಿದ ಘೋರ ಅಭಾವ ಕಾಲದಲ್ಲಿ ಸೌದೆಯ ಅಭಾವವು ಅಧಿಕವಾದಾಗ ಎಲ್ಲವನ್ನು ಒಲೆಗೆ ಆಹುತಿಮಾಡಿ ಇಂದು ಎಂಥ ಹಳೆಯ ನಮ್ಮ ಗೃಹ ಕೈಗಾರಿಕೆಯ ವಸ್ತುಗಳನ್ನು ಅಳಿದೆನಲ್ಲಾ ಎಂದು ಚಿಂತಿಸುತ್ತೇನೆ. ಮೇಲೆ ಹೇಳಿದ ಅವಧಿಯಲ್ಲಿ ಅತಿವೃಷ್ಟಿ, ಅನಾವೃಷ್ಟಿ, ಕೀಟಬಾಧೆಯಿಂದ ವ್ಯವಸಾಯಗಾರ ತತ್ತರಿಸಿದ. ಯಾರೆದುರಿಗೆ ತನ್ನ ಕಷ್ಟ ಕಾರ್ಪಣ್ಯ ಹೇಳಬೇಕು. ಹೇಳಿ. ಈಗಿನಂತೆ ಸ್ವಾತಂತ್ರ್ಯವಿತ್ತೇ ಬಾಯಿಬಡಿದುಕೊಳ್ಳಲು. ಬಡಿದುಕೊಂಡರೆ ಅವರನ್ನು ಕೇಳುವವರಾರಿದ್ದರು? ಬೆಳೆಯಾಗದೆ ಜನ ತಿನ್ನಲು ಗತಿಯಿಲ್ಲ. ಉರಿಸಲು ಸೌದೆ ಇಲ್ಲ. ಹೀ ೯ಗಿದ್ದಾಗ ಎಂಟುದಿನ ನಮ್ಮ ಮನೆಯ ಒಲೆಗೆ ಆ ದಾರ ನೂಲುವ ರಾಟಿದಾರ ಸುತ್ತುವ ಪಟ್ಟಿ ಗಿಟ್ಟಿ ಎಲ್ಲವೂ ಆಹುತಿಯಾಗಿ ತಮ್ಮ ಹುಟ್ಟಡಗಿಸಿಕೊಂಡು ಬೂದಿಯಾದವು. ಆ ರಾಟಿಗಳು ಚಿತ್ರವಿಚಿತ್ರವಾಗಿದ್ದವು. ಯಾವುದಾದರೂ ವಸ್ತುಪ್ರದರ್ಶನಾಲಯಕ್ಕಾದರೂ ಕೊಟ್ಟಿದ್ದರೆ ಅಲ್ಲಿ ನಮ್ಮ ಹೆಸರು ಹೇಳಿಕೊಂಡು ಬದುಕಿ ಚೆನ್ನಾಗಿ ಆರೈಕೆಕೊಂಡು ಬಿದ್ದಿರುತ್ತಿದ್ದವಲ್ಲಾ ಎಂಬ ಸಂಕಟವಾಗುತ್ತದೆ.

ಮೇಲಿನ ನಮ್ಮ ವಂಶಸ್ಥರ ವ್ಯಕ್ತಿಜೀವನ, ಊಟ ಪಾಟ, ಹಬ್ಬಹುಣ್ಣಿಮೆ ವಿಷಯವನ್ನು ಸಂಕ್ಷೇಪವಾಗಿ ತಿಳಿಸಿದೆನಷ್ಟೆ. ಬಹುಶಃ ನಮ್ಮ ಹುಟ್ಟಿನೊಡನೆ ನಮ್ಮ ಮನೆತನದ ಪ್ರಾಚೀನ ಸಂಪ್ರದಾಯಗಳಲ್ಲಿ ಬಹಳಷ್ಟು ಪರಿಷ್ಕಾರವುಂಟಾಯಿತು. ಕೆಲವು ಪದ್ಧತಿಗಳು ರದ್ದಾದವು ಅಂತಾ ಕೂಡ ಭಾವಿಸಬಹುದು.

## ನನ್ನ ಹುಟ್ಟು, ಬೆಳವಣಿಗೆ

ನಮ್ಮಜ್ಜ ಚನ್ನಮಲ್ಲಪ್ಪನಿಗೆ ಮೂವರು ಮಕ್ಕಳು : ತಿಪ್ಪಣ್ಣ, ಕಲ್ಲಪ್ಪ, ಬಾಳಪ್ಪ (ಮುದುಕಪ್ಪ). ಬಾಳಪ್ಪನ ಮಗ ನಾನು. ನಮ್ಮಪ್ಪನಿಗೆ ಅವನ ಅಜ್ಜನ ಹೆಸರಾದ ಬಾಳಪ್ಪ ಎಂದು ಇಟ್ಟರು. ಬಾಳಪ್ಪನನ್ನು ಆಗಿನ ನಮ್ಮ ಊರ ಜನ ಹೆಸರುಗೊಂಡು ಕರೆಯದೆ ಮುದುಕಪ್ಪ ಎಂದು ಕರೆಯುತ್ತಿದ್ದರಂತೆ. ಆ ಹೆಸರನ್ನು ನಮ್ಮ ಅಪ್ಪನಿಗಿಟ್ಟದ್ದರಿಂದ ಇವನನ್ನು ಮುದುಕಪ್ಪ ಎಂದು ಕರೆಯುವ ಪದ್ಧತಿಯಾಗಿ ಮುದುಕಪ್ಪ ಎಂಬುದೇ ಶಾಶ್ವತ ಹೆಸರಾಗಿ ಬಿಟ್ಟಿತು. ನನ್ನನ್ನು ಅನೇಕರು ಈ ಬಗ್ಗೆ 'ಇದೇನ್ರಿ ಮುದುಕಪ್ಪ ಅಂತಾ ಹೀಗೆ ಹೆಸರಿಟ್ಟಿದ್ದಾರಲ್ಲ ನಿಮ್ಮ ತಂದೆಗೆ?' ಎಂದು ಪ್ರಶ್ನಿಸುತ್ತಿದ್ದರು. ನಾನು ಆಗ ಮಾನ ಉಳಿಸಿಕೊಳ್ಳಲು ಈ ಮೇಲಿನ ವಿವರಣೆ ಹೇಳಿ ನಮ್ಮ ಮನೆತನದ ಘನತೆ ಉಳಿಸಿಕೊಂಡಿದ್ದೇನೆ ಅನ್ನಿ.

ನಾನು ಹುಟ್ಟಿದ ಇಸ್ವಿ, ದಿನಾಂಕ ಇತ್ಯಾದಿ ಒಂದೂ ಗೊತ್ತಿಲ್ಲ. ನಮ್ಮ ತಾಯಿಯನ್ನು ಆಗಾಗ ನನ್ನ ನಿಜವಾದ ಹುಟ್ಟಿದ ತಾರೀಖು, ಇಸ್ವಿ ಕಂಡು ಹಿಡಿಯಲು ಪ್ರಶ್ನಿಸಿ ವಿಫಲನಾದೆ. ಆಕೆ ಹೇಳುತ್ತಿದ್ದುದು, ಗುದ್ದಪ್ಪನ ಬೇನೆಯಲ್ಲಿ ನೀನು ಹುಟ್ಟಿರಲಿಲ್ಲ. ಅದಾದ ಒಂದು ವರ್ಷ ಮೇಲೆಯೋ ಒಂದು ಕಾಲು ವರ್ಷದ ಮೇಲೆಯೋ ಒಂದು ಭಾನುವಾರ ಬೆಳಿಗ್ಗೆ ಸೂರ್ಯಹುಟ್ಟುವ ಹೊತ್ತಿಗೆ ಹುಟ್ಟಿದ್ದೀಯೆ, ಎನ್ನುವರು. ಸರಿ ಅವಧಿಯಲ್ಲಿನ ದಿನಗಳಲ್ಲಿ ಎಲ್ಲಿಯೋ ಒಂದು ದಿನ ನನ್ನ ಜನ್ಮತಾರೀಖು ಇದೆ. ಹೀಗಿದೆ ನಮ್ಮ ಹಿರಿಯರ ಅಕ್ಕರಿಗತನ! ನನ್ನ ನಿಜವಾದ ಜನನ ದಿನಾಂಕವನ್ನು ನಮ್ಮ ಹಿರಿಯರ ಹೇಳಿಕೆ ಕೇಳಿಕೆಗಳ ಆಧಾರದ ಮೇಲೆ ರೀಸರ್ಚ್‌ವರ್ಕ್ ಮಾಡಿದೆ. ಆದರೂ ಪಿಹೆಚ್.ಡಿ. ಸಿಗುವಷ್ಟು ಪ್ರಬಲವಾಗಲಿಲ್ಲ ನಮ್ಮ ಸಂಶೋಧನ. ಅಂತೂ ಇಂದಿಗೂ ನನ್ನ ಜನನ ದಿನಾಂಕ ಚಿದಂಬರ ರಹಸ್ಯ ನನಗೆ ಅರ್ಥವಾಗೇ ಇಲ್ಲ. ನಮ್ಮ ತಂದೆಯ ಮಿತ್ರರಾಗಿದ್ದ ಹಾದರಗೇರಿಯ ಕರಿಬಸಪ್ಪ ಎಂಬುವರು ಯಾವಾಗೋ ಒಂದು ದಿನ ನನ್ನ ಜನನದ ಇಸ್ವಿ, ತಿಂಗಳು ಹೇಳಿದ ಜ್ಞಾಪಕ. ಆದರೆ ದಿನಾಂಕ ಗೊತ್ತಾಗಲಿಲ್ಲ. ಅದನ್ನು ನಾನು ಬರೆದಿಟ್ಟುಕೊಳ್ಳಲಿಲ್ಲ ಅದೂ ನೆನೆಪುಹಾರಿತು. ಇದರಿಂದ ನನಗೆ ಏನೂ ನಷ್ಟವಿಲ್ಲವೆಂದು ಭಾವಿಸಬೇಡಿ. ದೊಡ್ಡ ನಷ್ಟವಾಯಿತು. ಅನೇಕ ಸಾವಿರ ರೂಪಾಯಿಗಳ ನಷ್ಟ ಅನುಭವಿಸಿದೆ. ಸುಮಾರು ಒಂದು ವರ್ಷ ಮೂರುನಾಲ್ಕು ತಿಂಗಳಷ್ಟು ಕಾಲ ವ್ಯತ್ಯಾಸವಾಗಿ ಹೋಯಿತು. ಈ ಲೆಕ್ಕದ ಪ್ರಕಾರ ನನಗೆ ನನ್ನ ಸರ್ವಿಸ್‌ನಿಂದ ನಿವೃತ್ತಿಯಾಗುವ ಕಾಲ ಒಂದು ವರ್ಷ ಮೂರು ತಿಂಗಳು ಮುಂದೆ ಹೋಗುತ್ತಿತ್ತು. ಆಗ ನನಗೆ ಮೊದಮೊದಲು ಕಡಿಮೆ ಸಂಬಳದಲ್ಲಿ ಕೆಲಸ ಮಾಡಿ ಕೊನೆಯಲ್ಲಿ ಗಣನೀಯ ಸಂಬಳ ಬರುತ್ತಿದ್ದ ಕಾಲದಲ್ಲಿ 15 ತಿಂಗಳ ಸಂಬಳದ ನಷ್ಟವಾಯಿತು. ಅಷ್ಟೇ ಅಲ್ಲ, ನಾನು ನಿವೃತ್ತನಾದ ಮೇಲೆ ಪೇ ಕಮಿಷ್ನನವರು ಸೂಚಿಸಿದ ಸಂಬಳ ಇತ್ಯಾದಿಗಳ ಕಾರಣವಾಗಿ ನನಗೆ ಇನ್ನೂರು ಮುನ್ನೂರು ರೂಪಾಯಿಯ ಹೆಚ್ಚಳ ಅರ್ಧ ಪೆನ್ಷನ್, ಗ್ರಾಚುಟಿಯಲ್ಲಾದ ಹೆಚ್ಚಳ - ಎಲ್ಲ ಸೇರಿ ದೊಡ್ಡ ನಷ್ಟವಾಯಿತು. ಹೋಗಲಿ ಕಳೆದುಹೋದುದಕ್ಕೆ ಚಿಂತಿಸಿ ಫಲವಿಲ್ಲ ಎಂಬ ಯಾವುದೋ ದೊಡ್ಡವರ ಮಾತಿನಿಂದ ಸಮಾಧಾನ ಮಾಡಿಕೊಂಡೆ. ಇನ್ನೊಂದು ವಿಚಾರವೆಂದರೆ ಆದದ್ದೆಲ್ಲ ಒಳ್ಳೆಯದಕ್ಕೆ ಎಂಬ ಪುರಂದರ ದಾಸರ ಮಾತಿನಂತೆ ಒಂದು ಕಾಲು ವರ್ಷ ಮೊದಲೇ ನಿವೃತ್ತಿಯಾದದ್ದು ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು. ಏಕೆ ಎನ್ನುವಿರೋ ಇಷ್ಟು ಹೊತ್ತಿಗಾಗಲೇ ವಿದ್ಯಾಸಂಸ್ಥೆಗಳು ಕೊಳೆತು ನಾರಹತ್ತಿದವು. ಶಿಸ್ತು ಹಾಳು. ಎಲ್ಲೆಲ್ಲೂ ಗಲಾಟೆ. ಓದುವವರಿಲ್ಲ, ಬರೆಯುವವರಿಲ್ಲ, ಉಪಾಧ್ಯಾಯರ ಶಿಸ್ತು

ಹಾಳು. ಶಾಲೆಗಳು ಅವನತಿಯ ಹಾದಿ ಹಿಡಿದಿದ್ದವು. ನಾವು ಅದಷ್ಟು ಶ್ರದ್ಧೆಯಿಂದ 1938 ರಿಂದ ಗ್ರಾಂಟ್ ಇನ್ ಏಡ್ ಸ್ಕೂಲಿನಿಂದ ಮೊದಲ್ಗೊಂಡು ಜೂನಿಯರ್ ಕಾಲೇಜಿನ ಎಲ್ಲ ಹಂತಗಳಲ್ಲಿ ಕೆಲಸ ಮಾಡಿ ಒಂದು ರೀತಿಯಲ್ಲಿ ಒಳ್ಳೆಯ ಉಪಾಧ್ಯಾಯರೆಂದು ಹೆಸರು ಗಳಿಸಿದ್ದೇವೆಂದು ಧೈರ್ಯವಾಗಿ ಹೇಳಬಲ್ಲಂಥ ಜನ. ಈ ಶಿಸ್ತಿನ ಶಾಲೆಗಳಲ್ಲಿ ಕೆಲಸ ಮಾಡಿ ನಮ್ಮ ಹಿಂದಿನ ಕೀರ್ತಿಯನ್ನು ಹಾಳುಮಾಡಿಕೊಳ್ಳುವ ಕಾಲದಲ್ಲಿ ನಾವು ಆ ಕ್ಷೇತ್ರದಲ್ಲಿಲ್ಲದಿದ್ದುದೇ ಒಳ್ಳೆಯದಾಯಿತು. ಹೀಗೆ ಹಲವಾರು ರೀತಿಯಲ್ಲಿ ಸಮಾಧಾನ ಮಾಡಿಕೊಂಡೆವು ಎನ್ನಿ.

ಹೀಗೆ ನನ್ನ ಜನ್ಮದಿನಾಂಕ ತಪ್ಪಾಗಿದ್ದುದಕ್ಕೆ ನಮ್ಮ ಮನೆಯವರನ್ನಾಗಲಿ ಇನ್ನಾರನ್ನಾಗಲಿ ದೂರುವಂತಿರಲಿಲ್ಲ. ನಮ್ಮೂರ ಪ್ರೈಮರಿ ಶಾಲಾ ಮಾಸ್ತರರಾದ ಬಸವಣ್ಣೆಪ್ಪ ಭದ್ರಣ್ಣನವರ ಅವರೇ ಇದಕ್ಕೆ ಕಾರಣ. ಏಕೆಂದರೆ ಅವರು ಶಾಲೆಗೆ ದಾಖಲಾಗಲು ಯಾವುದೇ ಹುಡುಗನನ್ನು ಯಾರೇ ಕರೆದು ಕೊಂಡು ಬರಲಿ ಹುಡುಗನಿಗೆ ನಾಲ್ಕೇ ವರ್ಷವಾಗಿರಲಿ, ಐದೇ ವರ್ಷವಾಗಿರಲಿ ಆರು ವರ್ಷ ತುಂಬಿದ ಮೇಲೆ ಶಾಲೆಗೆ ದಾಖಲ್ಮಾಡಿಕೊಳ್ಳಬೇಕೆಂಬ ಸರಕಾರೀ ನೇಮದ ಪ್ರಕಾರ ಆರು ವರ್ಷಕ್ಕೆ ಸರಿಹೊಂದುವಂತಹ ಯಾವುದೋ ಒಂದು ತಾರೀಖನ್ನು ತಾವೇ ನಿಗದಿಪಡಿಸಿ ದಾಖಲ್ಮಾಡಿಕೊಂಡರೆ ಆಗಿಹೋಯಿತು. ಅದೇ ಕೊನೆಯ ಬ್ರಹ್ಮಬರವಣಿಗೆಯಾಗಿ ಬಿಡುತ್ತಿತ್ತು. ಹುಟ್ಟಿದ ಐದನೇ ದಿನಕ್ಕೆ ಯಾವುದೋ ದೇವತೆ ಬಂದು ನಮ್ಮ ಹಣೆಯ ಬರಹವನ್ನು ಬರೆದು ಹೋಗುತ್ತಾಳಂತೆ. ಆ ಬರಹವನ್ನು ಹರಿಹರಬ್ರಹ್ಮರೂ ಅಳಿಸಲು ಸಾಧ್ಯವಿಲ್ಲವಂತೆ. ಹಾಗೆ ನಮ್ಮ ಬಸವಣ್ಣೆಪ್ಪ ಬರೆದ ನಮ್ಮ ಜನ್ಮದಿನಾಂಕವನ್ನು ಯಾರೂ ಬದಲಾಯಿಸಲು ಶಕ್ಯವಿಲ್ಲ. ನನ್ನನ್ನು ಐದು ವರ್ಷತುಂಬುವ ಮೊದಲೇ ಮನೆಯಲ್ಲಿ ಗಲಾಟೆ ಎಂದು ಶಾಲೆಗೆ ಕರೆದುಕೊಂಡು ಬಂದು ದಾಖಲ್ಮಾಡಲು ಬಂದಾಗ ಆ ಮಾಸ್ತರರ ದಿವ್ಯದೃಷ್ಟಿಗೆ ಅಥವಾ ಅವರ ಅಪರೋಕ್ಷ ಜ್ಞಾನಕ್ಕೆ ಕಂಡ ನನ್ನ ಜನ್ಮತಾರೀಖು 3-9-1919. ಅದರಂತೆ ರಿಜಿಸ್ಟರಿನಲ್ಲಿ ಶಾಶ್ವತಗೊಳಿಸಲ್ಪಟ್ಟಿತು. ಇಂದಿಗೂ ಅದೇ ನನ್ನ ಹುಟ್ಟಿದ ಹಬ್ಬದ ದಿನವಾಗಿದೆ. ನಮ್ಮೂರ ಮಾಸ್ತರರೆಂದರೆ ಬಹು ಸಿಟ್ಟಿನವರು. ಅವರು ಹುಟ್ಟಿದ್ದೂ ಇದೇ ಊರಿನಲ್ಲಿ. ಮುಲ್ಕೀ ಪರೀಕ್ಷೆಯನ್ನ ನಮ್ಮೂರಿನಲ್ಲಿ ಪಾಸು ಮಾಡಿದವರು ಅವರೇ. ಅವರು ಉಪಾಧ್ಯಾಯರಾಗಿ ತಮ್ಮ ಪೂರ್ಣಸರ್ವೀಸನ್ನು ಒಂದೆರಡು ವರ್ಷಗಳ ಹೊರತಾ ನಮ್ಮೂರಿನಲ್ಲೇ ಮುಗಿಸಿದರು. ಊರ ಸಾಹುಕಾರರೂ ಅವರೇ; ಮಾಸ್ತರರೂ ಅವರೇ. ಎಲ್ಲ ಅವರೇ ಆದ್ದರಿಂದ ಅವರೆದುರು ಯಾರೂ ಪ್ರಶ್ನೆ ಮಾಡುವಂತೆಯೇ ಇರಲಿಲ್ಲ. ನನಗಂತೂ ನಾನು ಶಾಲೆಗೆ ದಾಖಲಾದ ದಿನಗಳೇ ಜ್ಞಾಪಕವಿಲ್ಲ. ನನಗೆ ಓದಲು ಮೊದಲು ಪುಸ್ತಕ ತಂದುಕೊಟ್ಟದ್ದು ಮಾತ್ರ ಸ್ವಲ್ಪ ಸ್ವಲ್ಪ ಜ್ಞಾಪಕ. ಅದು ಮರಾಠಿಯಿಂದ ಕನ್ನಡಕ್ಕೆ ಭಾಷಾಂತರಿಸಿದ ಪುಸ್ತಕವೆಂದು ಇತ್ತೀಚೆಗೆ ಗೊತ್ತಾಯಿತು. ಮೊದಲ ಆರುತಿಂಗಳು ಬಿನ್ ಇರುತ್ತೆ. ಆಮೇಲೆ ಬಾಲಬೋಧೆ ಕ್ಲಾಸು. ಆಗಲೇ ಒಂದು ಚಿಕ್ಕಪುಸ್ತಕ ರಠ ರಥ, ಠಠ-ಪೀಠ, ಈಈ ಈಳಿಗೆ - ಇತ್ಯಾದಿ ಮೊದಲ ಓದಿನ ಪಾಠ. ಇದಾದ ಮೇಲೆ ಒಂದನೇ ಪುಸ್ತಕ ಓದಬೇಕು. ಈಗಿನಂತೆ ಮಾಸ್ತರರೇ ಮೇಲಿನ ತರಗತಿಗೆ ಹಾಕುವಂತಿಲ್ಲ. ಸಾಲಿ ಸಾಹೇಬರೇ ಬಂದು ಪರೀಕ್ಷಿಸಿ ಮೇಲೆ ಹಾಕಿಹೋಗಬೇಕು. ಇದೇ ಮೊದಲನೇ ಕ್ಲಾಸ್.

### *ನನ್ನ ಪ್ರಾಥಮಿಕ ಶಾಲೆ; ಅಲ್ಲಿನ ಪಾಠ ಪ್ರವಚನಗಳ ರೀತಿ*

ಈ ನನ್ನ ವಿದ್ಯಾಭ್ಯಾಸ ವೈಖರಿ ಹೇಳುವ ಪೂರ್ವದಲ್ಲಿ ಇನ್ನೊಂದು ಸ್ವಾರಸ್ಯ ಕಥೆ

ನಿಮಗೆ ತಿಳಿಸಬೇಕು. ನಮ್ಮ ಮುತ್ತಜ್ಜನಿಗೆ ಮರಾಠಿಯಲ್ಲಿ ಸಹಿಮಾಡಲಿಕ್ಕೆ ಬರುತ್ತಿತ್ತೆಂದು ಮೊದಲೇ ಹೇಳಿದ್ದೆನಲ್ಲವೆ? ಅಲ್ಲಿಂದ ನನ್ನವರೆಗೆ ಯಾರೂ ಅಆಇಈ - ಕಲಿತವರಿಲ್ಲ. ಎಲ್ಲರೂ ಹೆಬ್ಬೆಟ್ಟಿನವರೇ! ನಮ್ಮ ಅಜ್ಜ ಚೆನ್ನಮಲ್ಲಪ್ಪ ತನ್ನ ಮಕ್ಕಳಿಗೆ ಸಹಿಮಾಡುವವರೆಗಾದರೂ ಸಾಲಿ ಹತ್ತಲಿ ಎಂದು ಮೊದಲಿನವನನ್ನು ವ್ಯವಸಾಯಕ್ಕಿಟ್ಟುಕೊಂಡು ಉಳಿದ ಇಬ್ಬರನ್ನು ಒಂದೇ ಕಾಲಕ್ಕೆ ಶಾಲೆಗೆ ಕರೆದುಕೊಂಡು ಬಂದನಂತೆ. ಆಗ ಯಾರೋ ನೀರಲಗಿ ಮಾಸ್ತರ ಅಂತ ಇದ್ದರಂತೆ. ಅದೂ ಗಾವಠಿ ಶಾಲೆ. ನಾಲ್ಕೋ ಐದೋ ರೂಪಾಯಿ ಅವರಿಗೆ ತಿಂಗಳ ಸಂಬಳ. ಅದೂ ವರ್ಷಕ್ಕೊಮ್ಮೆ. ಅವರಿಗೆ ಸಿಟ್ಟು ಬಹಳ ಅಂತೆ. ಅವರ ಮಂತ್ರವೆಂದರೆ ಛಡಿ. ಛರ್ಮ್‌ಛರ್ಮ ಛಡಿ. ಶಾಲೆಯಲ್ಲಿ ಛರ್ಮ್‌ಛರ್ಮ್ ಎಂದರೆ ವಿದ್ಯೆ ಘಮಘಮ ಎಂದು ಹೊರಸೂಸುವುದಂತೆ. ಹುಡುಗರನ್ನು ಹೊಡೆದಷ್ಟೂ ಅವರು ವಿದ್ಯಾವಂತರಾಗುತ್ತಾರೆ ಎಂಬ ನಂಬುಗೆಯವನಂತೆ. ಸರಿ, ನಮ್ಮ ದೊಡ್ಡಪ್ಪ ಮತ್ತು ಅಪ್ಪ ಇಬ್ಬರನ್ನು ಶಾಲೆಗೆ ಸೇರಿಸಿದ ದಿನವೇ ಪಾಟಿಯಲ್ಲಿ ಅಆ ಬರೆಸುವಾಗ ದನಗಳನ್ನು ಬಡಿದಂತೆ ಬಡಿದು ಬಿಟ್ಟರಂತೆ. ನಮ್ಮ ದೊಡ್ಡಪ್ಪ ಪಂಚೆಯಲ್ಲಿ .... ಮಾಡಿಕೊಂಡು ಅಳಲು ಪ್ರಾರಂಭಿಸಿದರಂತೆ ಪಂಚೆಯಲ್ಲಿ ..... ಮಾಡಿಕೊಂಡದ್ದಕ್ಕೆ ಪುನಃ ಕೆನ್ನೆಗೆ ಏಟು. ಹೊಡೆದರೆ ಮಕ್ಕಳು ಪಂಚೆಯಲ್ಲಿ ಏಕೆ ಮಾಡಿಕೊಳ್ಳಬೇಕು? ಹೊಡೆದಾಗ ಬೇಕಾದರೆ ಅಳಲಿ ಪರವಾಯಿಲ್ಲ. ಹೀಗೆ ಮಾಡಿಕೊಳ್ಳಲು ಕಾರಣವೇನು? ಎಂಬುದು ಆ ಮಹನೀಯರ ತರ್ಕವಂತೆ. ಶಾಲೆ ಬಿಟ್ಟ ಮೇಲೆ ಮನೆಗೆ ಅಳುತ್ತ ಮುಖ ಬೆನ್ನು ಬಾಯಿಸಿಕೊಂಡು ಬಂದಾಗ ನಮ್ಮಜ್ಜ ಮನೆಯಲ್ಲೇ ಗುಡುಗಾಡಿ ಮಕ್ಕಳ ದುರವಸ್ಥೆಯನ್ನು ಕಂಡು ನಮಗೂ ಶಾಲೆಗೂ ಬಲಪಿಲ್ಲ. 'ಆ ಸಾಲೆಯೇ ಸಾಕು, ಮನೆಯಲ್ಲಿ ಉಂಡು ಆಡಿಕೊಂಡು ದಿನಾಲು ಗರಡಿ ಮನೆಗೆ ಹೋಗಿ' ಎಂದು ಹೇಳಿ ಇಬ್ಬರನ್ನೂ ಪೈಲ್‌ವಾನ್‌ರನ್ನಾಗಿ ಮಾಡಲು ಸಂಕಲ್ಪ ಮಾಡಿಬಿಟ್ಟನಂತೆ. ಹೀಗಾಗಿ ನಮ್ಮ ಮನೆಯಲ್ಲಿ ಯಾರೂ ಓದಿದವರೇ ಇಲ್ಲ. ನಾನೇ ನಮ್ಮ ಮನೆಯಲ್ಲಿ ಓದುವುದಕ್ಕೆ ಬಂದು ಸ್ವಲ್ಪ ಓದಿ ನೌಕರಿ ಮಾಡಿ ಮುಗಿಸಿದ ಪ್ರಪ್ರಥಮ ಸಾಹಸಿ. ನೀವೇನಾದರೂ ಕರೆಯಿರಿ. ನಮ್ಮ ಮೊದಲನೆ ದೊಡ್ಡಪ್ಪನ ಮಗ ಒಬ್ಬನಿದ್ದ. ಅವನು ನಮ್ಮ ಮನೆಯಲ್ಲಿ ಮೊದಲು ಹುಟ್ಟಿದ ನಮ್ಮಜ್ಜನ ಮೊಮ್ಮಗ. ನಮ್ಮಜ್ಜನ ಮೊಮ್ಮಕ್ಕಳನ್ನು ನೋಡಿ ಸಾಯಬೇಕೆಂಬ ಬಯಕೆಯನ್ನು ಪೂರೈಸಿದವನು ಅವನೇ. ನಾನು ನಮ್ಮ ಅಜ್ಜ ಅಜ್ಜಿ ಯಾರನ್ನೂ ನೋಡಲೇ ಇಲ್ಲ. ಆಗ ಬಂದ ಯಾವುದೋ ಕೆಟ್ಟಕಾಯಿಲೆಯಿಂದ ನಮ್ಮ ಮನೆಯಲ್ಲಿ ನಾಲ್ಕೈದು ಜನ ಸತ್ತು ಹೋದರಂತೆ. ಒಂದೇ ದಿನದಲ್ಲಿ ನಮ್ಮಜ್ಜ ಮತ್ತು ಅವನ ಮಗಳು ನನ್ನ ಅತ್ತೆ ಸತ್ತರಂತೆ. ಅವರಿಬ್ಬರನ್ನು ಒಂದೇ ಕುಣಿಯಲ್ಲಿ ಹುಗಿದರೆಂದು ಆಗಾಗ ನಮ್ಮ ದೊಡ್ಡಪ್ಪ ಕಥೆ ಮಾಡಿ ಹೇಳುತ್ತಿದ್ದುದು ಜ್ಞಾಪಕ. ನನಗೂ ನಮ್ಮಣ್ಣನಿಗೂ ಐದಾರು ವರ್ಷ ವ್ಯತ್ಯಾಸ. ಅವನ ಹೆಸರು ಬಸವಂತಪ್ಪ. 4ನೇ ತರಗತಿಯಲ್ಲಿ ಓದುವಾಗಲೇ ಜ್ವರಬಂದು ತೀರಿಕೊಂಡು ನಮ್ಮ ಮನೆಯನ್ನು ದುಃಖಸಾಗರದಲ್ಲಿ ಮುಳುಗಿಸಿಹೋದ. ಅವನ ತಂದೆ-ತಾಯಿಯರೂ ಆ ಹೊತ್ತಿಗೆ ತೀರಿಹೋಗಿದ್ದರು. ಎಂಟು ಹತ್ತು ವರ್ಷಗಳಲ್ಲಿ ಏಳೆಂಟು ಜನಗಳನ್ನು ಯಮಪುರಿಗೆ ಸಾಗಿಸಿ ಸುಸ್ತಾಗಿದ್ದ ನಮ್ಮ ತಂದೆ-ದೊಡ್ಡಪ್ಪಗಳಿಗೆ ನಮ್ಮಣ್ಣನ ಮರಣ ದಾರುಣವೆನಿಸಿ ಅನೇಕ ದಿನಗಳು ನಮ್ಮಣ್ಣ ಸತ್ತದ್ದಕ್ಕಾಗಿ ಅತ್ತದ್ದು ನನಗೆ ಮಸಮಸಕು ಜ್ಞಾಪಕ. ನನಗೂ ಈ ಸಮಸ್ಯೆ ಒಮ್ಮೊಮ್ಮೆ ಕರುಳು ಕಿತ್ತು ಬರುವಂತಹ ಸಂಕಟವನ್ನು ಇಂದೂ ಉಂಟು ಮಾಡುತ್ತಿದೆ. ಅದೇನೆಂದು ಕೇಳಬಹುದು. ನಮ್ಮಣ್ಣನ ಸಾವಿಗೆ ನಾನು ಕಾರಣನಾಗಿರಬಹುದೇ? ಎಂಬ ಒಂದು ಪ್ರಶ್ನಾರ್ಥಕ ಕೊರಗು ಈಗಲೂ ನನ್ನನ್ನು ಬಾಧಿಸುತ್ತಿದೆ. ಈ ಕೊರಗಿಗೆ ಕಾರಣವೇನೆಂದರೆ ನನಗೆ ಬಾಲ್ಯದಲ್ಲಿ

ಬಹಳ ಕೋಪ. ನಮ್ಮಣ್ಣನ ಜೊತೆಗೆ ದಿನಾಲು ಶಾಲೆಗೆ ಹೋಗಬೇಕು, ಬರಬೇಕು. ನನ್ನನ್ನು ಆತನು ಬಹಳ ಪ್ರೀತಿಯಿಂದ ಕಾಣುತ್ತಿದ್ದ. ರಿಜಿಸ್ಟರಿಗೆ ದಾಖಲಾಗದೆ ನಾನು ಅದೇ ಶಾಲೆಗೆ ಹೋಗುತ್ತಿದ್ದ ಕಾಲ ಅದು. ಅವನು ಓದುತ್ತಿದ್ದುದನ್ನೆಲ್ಲ ಕೇಳಿ ಕೇಳಿ ಮೂರುನಾಲ್ಕನೇ ಇಯತ್ತೆಯ ಕವಿತೆಗಳನ್ನು ನಾನು ಹೇಳುತ್ತಿದ್ದೆ. ಒಂದು ದಿನ ನಾನು ಆತನ ಕವಿತೆಗಳನ್ನು ಗಟ್ಟಿಯಾಗಿ ಹೇಳುತ್ತಿದ್ದೆ. ಇದೇ ಒಂದು ತಪ್ಪೆಂದು ಭಾವಿಸಿ ಅವನು ನನ್ನನ್ನು ಒಮ್ಮೆ ಹೊಡೆದನೆಂದು ಜ್ಞಾಪಕ. ನಾನೂ ಅತೀವ ಸಿಟ್ಟಿನವನೇ. ನನ್ನ ಕಯ್ಯಲ್ಲಿ ತಗಡಿನ ಪಾಟಿಯಿತ್ತು. ಅದಕ್ಕೆ ಸುತ್ತಲೂ ಕಟ್ಟು ಇರಲಿಲ್ಲ. ಅದರಿಂದಲೇ ಹೊಡೆದೆ. ಅವನ ಹೆಬ್ಬೆರಳಿಗೆ ಗಾಯವಾಯಿತು. ಆ ಕೂಡಲೆ ವೀಳ್ಯೆದ ಎಲೆ ತಂದು ಆ ಗಾಯದ ಮೇಲೆ ಹಾಕಿ ಬಟ್ಟೆ ಕಟ್ಟಿದರು. ಗಾಯ ಹೇಳಿಕೊಳ್ಳುವಷ್ಟು ದೊಡ್ಡದೇನೂ ಅಲ್ಲ. ವ್ಯವಸಾಯಗಾರರ ಮನೆಯಲ್ಲಿ ಇವೆಲ್ಲ ಗಾಯಗಳೇ ಅಲ್ಲ. ಆದರೆ ಮರುದಿನ ನಮ್ಮ ಅಣ್ಣ ಜ್ವರಬಂದು ಹಾಸಿಗೆಹಿಡಿದು ಮಲಗಿದ. ಆಗಿನ ಕಾಲದಲ್ಲಿ ಡಾಕ್ಟರರನ್ನು ಕರೆಸುವುದಾಗಲಿ ಅಥವಾ ಡಾಕ್ಟರರಿದ್ದ ಕಡೆ ಹೋಗುವುದಾಗಲಿ ಇರಲಿಲ್ಲ. ಜ್ವರಗಿರ ಬಂದರೆ ಯಾವುಯಾವುದೋ ಕಷಾಯ ಕುಡಿಸುವುದು, ಗಿಡದ ಎಲೆ ತಿನ್ನಿಸುವುದು... ಇತ್ಯಾದಿ ಇತ್ಯಾದಿ. ನಮ್ಮ ಹಳ್ಳಿಯ ವೈದ್ಯಗಳನ್ನು ಕಂಡ ಕಂಡವರೆಲ್ಲ ಮಾಡುತ್ತಿದ್ದರು. ಯಾವುದಕ್ಕೂ ಗುಣವಾಗದೆ ನಮ್ಮಣ್ಣ ನಾಲ್ಕೈದು ದಿನಗಳಲ್ಲಿ ಸತ್ತೂಹೋದ. ಇಡೀ ಊರೇ ಅವನನ್ನು ಕಳೆದುಕೊಂಡು ಗೊಳೋ ಅಂದದ್ದೂ ನನಗೆ ಇನ್ನೂ ಜ್ಞಾಪಕ. ನಮ್ಮ ಸೋದರ ಮಾವ ಒಬ್ಬನಿದ್ದ. ಅವನು ನೆಲದ ಮೇಲೆ ಬಿದ್ದು ಉರುಳಾಡಿ ಅತ್ತದ್ದು ನನ್ನ ಕಣ್ಣಮುಂದೆ ಕಟ್ಟಿದೆ. ಅವನನ್ನು ಇಡೀ ಊರೇ ಸಮಾಧಾನ ಮಾಡಬೇಕಾಯಿತು. ಇಂದು ನನ್ನ ಮನಸ್ಸನ್ನು ಕೊರೆಯುತ್ತಿರುವ ಒಂದು ದೊಡ್ಡ ಅನುಮಾನವೆಂದರೆ ನನ್ನ ಹೊಡೆತದಿಂದ ನಮ್ಮಣ್ಣನಿಗೆ ಸೆಪ್ಟಿಕ್‌ಆಗಿ ಜ್ವರಬಂದು ಆ ನಂಜಿನಿಂದ ಸತ್ತಿರಬಹುದೆ? ಎಂಬುದು. ಆದರೂ ಆಗಿರಬಹುದು, ಇಲ್ಲದೆಯೂ ಇರಬಹುದು. ಯೋಚಿಸುವ ಸಾಮರ್ಥ್ಯ ಬಂದಿರುವ ಈಗಿನ ಸ್ಥಿತಿಯಲ್ಲಿ ಅದು ಕೊರೆಯ ಹತ್ತಿದೆ, ಅಷ್ಟೆ. ಅಂದಿನ ದಿನದಲ್ಲಿ ನನ್ನ ಹೊಡೆತದಿಂದ ಹೀಗಾಯಿತೆಂದು ಯಾರೂ ನಂಬಿಲ್ಲ; ಯಾರೂ ಹಾಗೆ ಅಂದಿಲ್ಲ. ನನ್ನ ಮಾನಸಿಕ ತುಮಲಕ್ಕೆ ಒಂದು ಸೂಕ್ಷ್ಮಧ್ವನಿ ನನಗೆ ಸುಳುವು ಕೊಟ್ಟು ಹೀಗೆ ಸಂಕಟಕ್ಕೀಡುಮಾಡಿದೆ. ಆ ಧ್ವನಿಯೆಂದರೆ ನಮ್ಮಣ್ಣನ ಅಕ್ಕ ಒಬ್ಬರಿದ್ದರು. ಅವರು 'ತಮ್ಮ ಸಾಯುವಾಗ ನಿನ್ನ ಹೊಡೆತದಿಂದ ಆದ ಗಾಯ ಹಸುರುಗಟ್ಟಿತ್ತು' ಎಂಬ ಮಾತು. ಈ ಮಾತನ್ನು ಕೇಳಿ ನಾನು ಸಣ್ಣವನಿದ್ದಾಗ ಅಲಕ್ಷ್ಯಮಾಡಿದ್ದೆ. ವಿಚಾರಮಾಡುವಂತಾಗಿರುವ ಈ ದಿನದಲ್ಲಿ ನಮ್ಮಣ್ಣನ ಸಾವಿಗೆ ಕಾರಣವಾದ್ದೂ ನನ್ನ ಹೊಡೆತವೇ. ಈ ವಿಷಯವನ್ನು ಬರೆಯುವಾಗಲೂ ನಾಲ್ಕಾರು ಕಣ್ಣೀರು ಹರಿದು ಬಂದವು. ಒರೆಸಿಕೊಂಡು ಒರೆಸಿಕೊಂಡು ಇದನ್ನು ಬರೆದಿದ್ದೇನೆ. ಆದದ್ದಾಗಿ ಹೋಯಿತು. ನಾನೇ ಆ ಮನೆಯಲ್ಲಿ ಹುಟ್ಟಿದ ಮೊದಲ ಮಗನಾಗಿ ಅನೇಕ ಕಷ್ಟಗಳನ್ನು ಅನುಭವಿಸುವುದನ್ನು ಅವನೇ ನನಗೆ ಉಂಟುಮಾಡಿರಬಹುದೆಂದು ಆದದ್ದನ್ನೆಲ್ಲಾ ನುಂಗಿಕೊಂಡು 78 ವರ್ಷ ಕಳೆದಿದ್ದೇನೆ.

ಇದಿರಲಿ, ನನ್ನ ವಿದ್ಯಾಭ್ಯಾಸ ರೀತಿಯನ್ನು ಹೇಳುತ್ತಿದ್ದೆನಲ್ಲವೇ. ಈ ಸನ್ನಿವೇಶದಲ್ಲಿ ನಡೆದ ಕೆಲವು ಪ್ರಮುಖ ಘಟನೆಗಳನ್ನು ಹೇಳದೆ ಮುಂದೆ ಹೋದರೆ ಹೇಗೆ?

ನಾಲ್ಕನೇ ಇಯತ್ತೆ ಮುಗಿಸುವವರೆಗೆ ಒಟ್ಟು ಆರು ವರ್ಷಗಳ ವಿದ್ಯಾಭ್ಯಾಸ. ಈ ಮೊದಲೇ ಹೆಸರಿಸಿರುವ ನಮ್ಮ ಊರವರೇ, ನಮ್ಮ ವಂಶಸ್ಥರೇ, ಅದರಲ್ಲೂ ಅಜ್ಜನೇ ಆಗಬೇಕಾದ ಭದ್ರಣ್ಣನವರ ಬಸವಣ್ಣಪ್ಪನವರ ಹತ್ತಿರ ಆಯಿತು. ವಿದ್ಯಾಭ್ಯಾಸ ಪರವಾಯಿಲ್ಲ... ಎಂದು

ಎನಿಸುತ್ತದೆ. ಬಸವಣ್ಣೆಪ್ಪನವರು ನನಗೆ ಹೆಚ್ಚು ಹೊಡೆದುದು ಜ್ಞಾಪಕವಿಲ್ಲ. ಆದರೆ ಒಂದು ದಿನ ಮಾತ್ರ ಎಂದೂ ನೆನಪಿರುವಂತೆ ರೂಲು ದೊಣ್ಣೆಯಿಂದ ಎಂಟು ಹತ್ತು ಹುಡುಗರಿಗೆ ಮನಸ್ವಿ ಹೊಡೆದರು. ನನಗೆ ಎಂದೂ ಬೀಳದಿದ್ದ ಹೊಡೆತಗಳೆಲ್ಲ ಒಂದೇ ದಿನ ಬಿದ್ದು ಬಿಟ್ಟವು.

ಮಾಸ್ತರರು ಮೂರು ನಾಲ್ಕನೇ ತರಗತಿಯವರಿಗೆ ಬಾಯಿಲೆಕ್ಕಕ್ಕಾಗಿ ನಿಲ್ಲಿಸಿ ಲೆಕ್ಕ ಹೇಳಿದರು. ನಾವು ಬಾಯಿಲೆಕ್ಕವನ್ನು ಮಾಡಿ ನಮ್ಮ ಪಾಟಿಯಲ್ಲಿ ಉತ್ತರ ಬರೆದು ಕುಳಿತೆವು. ಮಾಸ್ತರರಿಗೆ ಏಕೋ ಆ ದಿನ ನಿದ್ರೆ ಬಂದಿತು. ಆಗಾಗ ಅವರು ಹುಡುಗರನ್ನು ಪಾಠ ಒಪ್ಪಿಸಿಕೊಳ್ಳಲು ನಿಲ್ಲಿಸಿ ಒಮ್ಮೊಮ್ಮೆ ನಿದ್ರೆ ಹೋಗುತ್ತಿದ್ದುದೂ ಉಂಟು. ಆ ದಿನ ಕಾಲುಗಳನ್ನು ಮೇಜಿನ ಮೇಲೆ ಚಾಚಿ ಕುರ್ಚಿಯ ಮೇಲೆ ನಿದ್ರೆ ಹೋಗಿ ಬಿಟ್ಟರು. ನಮ್ಮ ತರಗತಿಯಲ್ಲಿ ಬಹಳ ಸಗುವ ಯಮುನಪ್ಪ ಎಂಬುವನಿದ್ದ. ಮಹಾಕಿಡಿಗೇಡಿ. ಮೇಜಿನ ಮೇಲೆ ಕಾಲು ಚಾಚಿದ ಕಾರಣವಾಗಿ ಅವರ ಮರ್ಮಾಂಗದ ಭಾಗ ಹೊರಬಂದುದನ್ನು ನಾವಾರೂ ಗಮನಿಸಿದ್ದಿಲ್ಲ. ಯಮನಪ್ಪ ಎಂಬುವವನು ನಮಗೆಲ್ಲ ಬೆರಳುಮಾಡಿ ತೋರಿಸಿ ಕಿಸಕ್ ಎಂದು ನಕ್ಕುಬಿಟ್ಟ. ಉಳಿದ ಹುಡುಗರೆಲ್ಲ ಅದನ್ನು ಕಂಡು ತಡೆಯಲಾರದ ನಗುವಿನಿಂದ ಕೂಡಿದರು. ಏನು ಮಾಡಿದರೂ ನಗು ನಿಲ್ಲಲಿಲ್ಲ. ಎಲ್ಲರೂ ನಗುವುದಕ್ಕೆ ಮೊದಲಾಗಿ ಬಿಟ್ಟರು. ಯಮನಪ್ಪ ನಗಿಸದಿದ್ದರೆ ನಾವು ಸ್ವಲ್ಪ ನಕ್ಕು ಸುಮ್ಮನಾಗುತ್ತಿದ್ದೇವೋ ಏನೋ. ಯಮನಪ್ಪ ಕೈಮಾಡಿ ಮಾಡಿ ನಮ್ಮನ್ನೆಲ್ಲ ನೋಡಿ ನಗುವುದನ್ನು ನಿಲ್ಲಿಸಲೇ ಇಲ್ಲ. ಉಳಿದ ತರಗತಿಯ ಹುಡುಗರೂ ತಮ್ಮ ತಮ್ಮ ಸ್ಥಳದಲ್ಲಿ ಕುಳಿತೇ ನಗ ತೊಡಗಿದ್ದರು ಈ ಗದ್ದಲಕ್ಕಾಗಿ ಬಸವಣ್ಣೆಪ್ಪ ಮಾಸ್ತರರು ಎಚ್ಚರಗೊಂಡರು. ಎಚ್ಚರಗೊಂಡ ಮೇಲೆಯೂ ಯಮುನಪ್ಪನ ನಗು ನಿಲ್ಲಲಿಲ್ಲ. 'ಯಾಕಲೇ ಅಯೋಗ್ಯ, ಇಷ್ಟು ನಗುತ್ತಿದ್ದೀಯೆ' ಎಂದು ಭಡಿಯಿಂದ ಹೊಡೆದರು. ಅವನು ಆ ಹೊಡೆತ ತಿಂದ ಮೇಲಾದರೂ ಸುಮ್ಮನಿರಬೇಕೊ ಬೇಡವೋ. ಆಗಲೂ ಮುಖ ಕಿವುಚಿಕೊಂಡು ಹೊಡೆತ ಬಿದ್ದ ಕೈಯನ್ನು ಬಾಯಲ್ಲಿಟ್ಟುಕೊಳ್ಳುತ್ತಲೇ ನಗತೊಡಗಿದ. ಅವನ ನಗುವಿನಿಂದ ಉಳಿದವರೂ ನಗುವುದಕ್ಕೆ ಪ್ರಾರಂಭಿಸಿ ಬಿಟ್ಟರು. ಬಸವಣ್ಣೆಪ್ಪ ಖುರ್ಚಿ ಬಿಟ್ಟೆದ್ದು ಅದೇ ಭಡಿಯಿಂದ ಸಾಲಾಗಿ ಹೊಡೆಯುತ್ತ ಬಂದರು. ಬೇವಿನ ಕಡ್ಡಿಯ ಆ ಚುಳುಕಿ ಮುರಿದು ಚೂರು ಚೂರಾಯಿತು. ನಾನಿದ್ದಲ್ಲಿಗೆ ಬರುವ ಹೊತ್ತಿಗೆ ಅವರ ಕೈಗೆ ರೂಲುದೊಣ್ಣೆ ಬಂತು. ನನಗೆ ರೋಮ ರೋಮವೆಲ್ಲ ನಡುಕಹುಟ್ಟಿ ಈ ದಿನ ಈ ವೀರಭದ್ರಾವತಾರಿ ಬಸವಣ್ಣೆಪ್ಪನ ಕೈಯಲ್ಲಿ ಉಳಿಯುವುದಿಲ್ಲವೆಂದುಕೊಂಡೆ. ನನಗರಿಯದಂತೆಯೇ ಪಂಜೆ ತೊಯ್ದುಹೋಯಿತು. ರೂಲು ದೊಣ್ಣೆಯ ಎರಡು ಹೊಡೆತಗಳು ಎರಡೂ ಕೈಗೆ ಬಿದ್ದ ಕೂಡಲೆ ಪಂಜೆತೊಯ್ದು ಕಾಲೂ ತೊಯ್ದವು. ಉಳಿದವರಿಗೆ ರೂಲು ದೊಣ್ಣೆಯ ಹೊಡೆತಗಳು ಸಾಲಾಗಿ ಬಿದ್ದು ಹೋದವು. ಇಷ್ಟಾದರೂ ಮಾಸ್ತರರಿಗೆ ಇಷ್ಟೇಕೆ ನಗುತ್ತಿದ್ದಾರೆಂಬುದಕ್ಕೆ ಕಾರಣ ಗೊತ್ತಾಗಲಿಲ್ಲ. ನಾನು ಪ್ರಾಥಮಿಕ ವಿದ್ಯಾಭ್ಯಾಸ ಮಾಡುವಾಗ ಎಷ್ಟೇ ಘಟನೆ ನಡೆದರೂ ಅಷ್ಟೂ ನೆನಪಿನಲ್ಲಿ ಇಲ್ಲ. ಈ ಒಂದು ಘಟನೆ ಮಾತ್ರ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯಿತು. ಮುಂದೆ ನಾನು ಮಾಸ್ತರನಾಗಿ ಕೆಲಸ ಮಾಡುವಾಗ ಮಕ್ಕಳೆದುರು ಉಪಾಧ್ಯಾಯ ಮಾಡುವ ಅಸಭ್ಯವರ್ತನೆಗಳನ್ನು ಮಕ್ಕಳು ಕ್ಷಮಿಸುವುದಿಲ್ಲ ಎಂಬುದರ ಅರ್ಥ ತಿಳಿದು ವರ್ತಿಸಿದೆ. ಆದರೆ ನಾನೂ ಒಮ್ಮೆ ಮಕ್ಕಳ ಎದುರಿಗೆ ಅಪಮಾನಗೊಳ್ಳಬೇಕಾದ ಸಂದರ್ಭ ಬಂದಿತು. ಆ ಸಂದರ್ಭ ಬೇರೆ. ಅದನ್ನು ಆಮೇಲೆ ಹೇಳುತ್ತೇನೆ. ಆಗ ಒಂದನೇ ತರಗತಿಯಲ್ಲೋ ಎರಡನೇ ತರಗತಿಯಲ್ಲೊ ಓದುತ್ತಿದ್ದ

ಮಾಸ್ತರರ ಮಗ ತಿರಕ ಎಂಬ ಹುಡುಗ "ಅವರೆಲ್ಲ ನೀಸು ಮೇಜಿನ ಮೇಲೆ ಕಾಲು ಇಟ್ಟು ನಿದ್ದೆ
ಮಾಡುತ್ತಿದ್ದಾಗ ಏನನ್ನೋ ಕಂಡು ನಕ್ಕುಬಿಟ್ಟರು. ಆ ಯಮುನ್ಯಾ ಅದಾನಲ್ಲ ಹಲ್ಲುಗಿಸಗ, ಅವ
ಎಲ್ಲಾರಿಗೂ ಕೈ ಮಾಡಿಮಾಡಿ ತೋರಿಸಿ ನಗಾಕ ಹಚ್ಚಿಬಿಟ್ಟ" ಎಂದು ಬಿಟ್ಟ. ಮಾಸ್ತರರು
ಯಮುನಪ್ಪನನ್ನು ಮತ್ತೊಂದು ಸಲ ನೋಡಿ ಅದೇ ಸಿಟ್ಟಿನಲ್ಲಿ ಗಂಟುಪಾಟಿ ಕಟ್ಟಿರಿ. ಮೇಲಕ್ಕೆ
ಎದ್ದುನಿಲ್ರಿ. ಸಾಲಾಗಿ ಹೋಗ್ರಿ. ಬೆಳಿಗ್ಗೆ ಬೇಗನೆ ಸಾಲಿಗೆ ಬರ್ರಿ ಎಂದು ಹೇಳುವುದನ್ನು ಮರೆಯಲಿಲ್ಲ
ಅವರಿಗೆ ಆಗ ತಮ್ಮ ತಪ್ಪಿನ ಅರಿವಾಗಿರಬೇಕು. ಎರಡು ಮೂರುದಿನ ಯಾರನ್ನೂ ಹೊಡೆಯಲೂ
ಇಲ್ಲ, ಪಾಠವನ್ನು ಮಾಡಲಿಲ್ಲ. ತಮ್ಮ ಆಫೀಸ ಬರವಣಿಗೆ ರಿಜಿಸ್ಟರ್ ಬರೆಯುವುದು
ಮಾಡುವುದು ಏನೇನೋ ಬರವಣಿಗೆಯಲ್ಲಿಯೇ ನೂಕಿಬಿಟ್ಟರು. ಮುಂದೆ ಮತ್ತೆ ಯಥಾ ರೀತಿ
ಶಾಲೆಯ ಪಾಠಮಾಡಿಕೊಂಡು ಬರತೊಡಗಿದರು. ಮುಂದೆ ಯಮುನಪ್ಪ ಆಗಾಗ ಕಿಸಕ್
ಎಂದು ಹಲ್ಲು ಕಿರಿಯುತ್ತಿದ್ದ. ಆಗ ಮಾಸ್ತರರ ಮಗ ತಿರುಕ 'ಯಾಕೋ ಯಮುನಪ್ಪ, ಮತ್ತೆ
ನಗುತ್ತೀರೇನು ಹೇಳ್ತನಿ ನೋಡು' ಎಂದು ಗಟ್ಟಿಯಾಗಿ ಹೇಳಿದರೂ ಮಾಸ್ತರರು ಕೇಳಿಯೂ
ಕೇಳದವರಂತೆ 'ಗಲಾಟೆಮಾಡಬೇಡಿ, ಸುಮ್ಮನೆ ಕೇಳ್ರಿ' ಅಂದುಬಿಡುತ್ತಿದ್ದರು.

ನಾಲ್ಕನೆಯ ತರಗತಿಯವರೆಗೆ ನನ್ನ ವಿದ್ಯಾಭ್ಯಾಸದಲ್ಲಿ ಒಂದು ಘಟ್ಟ. ಇಷ್ಟು ಓದಿದವರು
ಆ ಕಾಲದಲ್ಲಿ ಸಾಮಾನ್ಯವಾಗಿ ಓದುಬರೆಹವನ್ನು ಚೆನ್ನಾಗಿಯೇ ಕಲಿತಿರುತ್ತಿದ್ದರು. ಆಗ ನಾಲ್ಕನೆಯ
ಇಯತ್ತೆಗೆ ಗದುಗಿನ ಭಾರತದ ಪದ್ಯಗಳು, ಸೋಮೇಶ್ವರ ಶತಕದ ಪದ್ಯಗಳು, ನಿಜಲಿಂಗಶತಕದ
ಪದ್ಯಗಳು ಇರುತ್ತಿದ್ದವು. ಅವೆಲ್ಲವನ್ನೂ ಚಾಚೂತಪ್ಪದೆ ಬಾಯಿ ಪಾಠವಾಗಲೇಬೇಕು.ಮತ್ತು
ಕೇಳಿದಲ್ಲಿ ಅರ್ಥ ಹೇಳುವಷ್ಟರ ಮಟ್ಟಿಗೆ ಓದಿಕೊಂಡು ಬರಬೇಕಾಗಿತ್ತು. ಇಲ್ಲದಿದ್ದರೆ ಬೇವಿನ
ಚುಳಕಿ ಮತ್ತು ದಪ್ಪ ಚರ್ಮದವರಿಗೆ ರೂಲು ದೊಣ್ಣೆಯ ಏಟುಗಳು ಯಾವ ಮುಲಾಜು
ಇಲ್ಲದೆ ಬೀಳುತ್ತಿದ್ದವು. ಊರಿನವರು ಯಾರೂ ಕಮಕ್ ಕಿಮಕ್ ಅನ್ನುವಂತಿಲ್ಲ. ನಮ್ಮ
ಊರಿನವರೇ ಪ್ರತಿಷ್ಠಿತರಾದ ಮಾಸ್ತರರಲ್ಲವೆ? ಅವರು ಸಿಟ್ಟಾದರೆ ಕಷ್ಟ ಎಂದು ಯಾರೂ
ಅವರನ್ನು ಪ್ರಶ್ನಿಸುತ್ತಿರಲಿಲ್ಲ. ಹುಡಗನನ್ನು ಶಾಲೆಗೆ ಕಳಿಸದಿದ್ದರೆ ಗೌಡರು ವಾಲೀಕಾರನಿಂದ
ಊರ ಆರೋಪಿಯನ್ನ ಕರೆಸಿ ಚಾವಡಿಯಲ್ಲಿ ವಿಚಾರಣೆ ಮಾಡಿದಂತೆ ಮಾಸ್ತರರು ಹುಡುಗರಿಂದ
ಆ ಹುಡಗನ್ನ ಕರೆಸಿ ಛೀಮಾರಿ ಹಾಕಿ ಹುಡುಗನನ್ನು ಶಾಲೆಗೆ ಬರುವಂತೆ ಮಾಡುತ್ತಿದ್ದರು
ಉಪಾಧ್ಯಾಯ ವೃತ್ತಿಯ ಗುಣಮಟ್ಟವೂ ಚೆನ್ನಾಗಿರುತ್ತಿತ್ತು. ಘಟಿಂಗ ಉಪಾಧ್ಯಾಯರ ಸಂಖ್ಯೆ
ತೀರ ಕಡಿಮೆ. ಅದೊಂದು ಘನತೆಯ ಕಾರ್ಯವೆಂದು ಭಾವಿಸಿದ ಶಿಕ್ಷಕರೇ ಅಧಿಕ.

ನಮ್ಮ ಶಾಲೆಯಲ್ಲಿ ಗಡಿಯಾರ ವಗೈರೆ ಏನೂ ಇಲ್ಲ. ಹೊತ್ತು ಮೂಡಿ ಬಿಸಿಲು ಬಿದ್ದರೆ
ಆಯಿತು, ಶಾಲೆಯ ಹೊತ್ತು. ನಾವು ಪಾಟಿ ಪುಸ್ತಕದ ಗಂಟು, ಹಾಸಿಕೊಳ್ಳಲು ಒಂದು ಚೀಲ
ಇವನ್ನು ಮಡಿಸಿ ಎಡಗೈಯ ತೆಕ್ಕೆಯಲ್ಲಿ ಇಟ್ಟುಕೊಂಡು ಬಲಗೈಯಲ್ಲಿ ಮಸೀ ದೌತಿಯನ್ನ
ಹಿಡಿದು ಶಾಲೆಗೆ ಓಡಬೇಕು. ಅಷ್ಟು ಹೊತ್ತಿಗೆ ಪ್ರಾರ್ಥನೆ ಪ್ರಾರಂಭವಾಗಿದ್ದರಂತೂ ಶಾಲೆಯೊಳಗೆ
ಹೋಗುವಂತೆಯೇ ಇಲ್ಲ. ಪ್ರಾರ್ಥನೆಗೆ ನಿಂತವರು ಅದನ್ನು ಮುಗಿಸಿ ತಮ್ಮ ತಮ್ಮ ಸ್ಥಳ
ಹೋಗಿ ಕುಳಿತ ಮೇಲೆ ಹೊರಗೆ ನಿಂತ ತಡವಾಗಿ ಬಂದವರನ್ನು ಒಬ್ಬೊಬ್ಬರನ್ನೇ ಕರೆ
ಛಡಿಯಿಂದ ಅಂಗೈಗೆ ಬಲವಾಗಿ ಏಟುಕೊಟ್ಟರೆ ಕೈಚುರುಗುಟ್ಟಿ ಮುಖವೆಲ್ಲ ಕೆಟ್ಟು ಹೋಗುತ್ತಿತ್ತು
ಛಳಿಗಾಲವಾದರಂತೂ ಆ ನರಕ ವೈರಿಗೂ ಬೇಡ ಎನ್ನಿಸುತ್ತಿತ್ತು.

ಸರಿ, ಆಮೇಲೆ ಪಾಠ ಪ್ರವಚನ ಶುರುವಾಗಬೇಕು. ಒಮ್ಮೊಮ್ಮೆ ಯಾವ ಪಾಠಪ್ರವಚನವೂ ಇಲ್ಲದೆ ಅವರ ಶಾಲಾ ಕಾಗದ ಪತ್ರಗಳ ಬರವಣಿಗೆಯಲ್ಲೋ. ಯಾರಾದರೂ ಬಂದವರೊಡನೆ ಮಾತಾಡುವುದರಲ್ಲೋ ಮಗ್ನರಾಗಿದ್ದ ದಿನ ನಾವು ನಮ್ಮ ಸಾಲೀಗುಡಿಯಲ್ಲಿ ಬಸವಣ್ಣ, ಹನುಮಪ್ಪದೇವರಿಗೆ ಕೈಮುಗಿಯುತ್ತಿದ್ದೆವು. ಅವರು ಮಾತಿನ ಭರದಲ್ಲಿದ್ದುದನ್ನು ಕಂಡು ಬಲಗೈ ಕಿರಿಬೆರಳನ್ನು ಮುಂದೆ ಮಾಡಿ ನಿಲ್ಲುತ್ತಿದ್ದೆವು. ಇದರರ್ಥ ಮೂತ್ರ ವಿಸರ್ಜನೆಗೆ ಹೋಗುತ್ತೇನೆ ಎಂದು. ತರ್ಜನಿ ಮತ್ತು ನಡುಬೆರಳನ್ನು ಕೊಂಕಿಸಿ ಹಿಡಿದರೆ ಮಲ ವಿಸರ್ಜನೆಗೆ ಎಂದು ಅರ್ಥ. ಒಮ್ಮೊಮ್ಮೆ ಮಲ ವಿಸರ್ಜನೆಗೆ ಕೇಳಿ ನಿಂತವರನ್ನು ಮನೆಗೆ ಹೋಗಲು ಸುಳ್ಳು ಹೇಳುತ್ತಾನೆಂದು ಕರೆದು ಛಡಿ ಏಟು ಕೊಡುವುದುಂಟು. ಆ ಛಡಿ ಏಟಿಗೆ ಹೆದರಿ ಕೆಲವರು ತಮ್ಮ ಪಂಚೆಯಲ್ಲೇ.... ಮಾಡಿಕೊಂಡದ್ದುಂಟು. ಆಗ ಬೈದು ಮನೆಗೆ ಕಳಿಸುತ್ತಿದ್ದರು. ಅವನು ಮನೆಗೆ ಹೋಗಿ ಬಟ್ಟೆ ಬದಲಾಯಿಸಿಕೊಂಡು ಪುನಃ ಶಾಲೆಗೆ ಬರಲೇಬೇಕು. ಇಲ್ಲದಿದ್ದರೆ ಅದೂ ಕಷ್ಟವೇ.

ಒಮ್ಮೊಮ್ಮೆ ಅವರ ಕೆಲಸವೆಲ್ಲ ಮುಗಿದ ಮೇಲೆ, ಬಂದವರೊಡನೆ ಮಾತಾಡುವುದು ಮುಗಿದ ಮೇಲೆ ತರಗತಿ ತೆಗೆದುಕೊಳ್ಳುತ್ತಿದ್ದರು. 12 ಘಂಟೆ ಹೊಡೆದರೂ ಪಾಠ ಮುಗಿಯದೆ ಕೊನೆಗೆ ಬಿಡುತ್ತಿರಲಿಲ್ಲ. ಕೆಳಗಿನ ಮೂರು ತರಗತಿಗಳನ್ನು ಮಾತ್ರ ಬಿಟ್ಟು, ಮೂರು ನಾಲ್ಕನೆ ತರಗತಿಗಳನ್ನು ಪಾಠವೆಲ್ಲ ಮುಗಿದ ಮೇಲೆ ಬಿಡುತ್ತಿದ್ದರು.

ಪುನಃ ಮಧ್ಯಾಹ್ನ ಊಟಮಾಡಿ ಎರಡು ಘಂಟೆ ಹೊತ್ತಿಗೆ ಶಾಲೆಗೆ ಹಾಜರಾಗಲೇಬೇಕು. ಮಾಸ್ತರರು ಶಾಲೆಯಲ್ಲೇ ಒಂದು ಬೆಂಚಿನ ಮೇಲೆ ತಮ್ಮ ರುಮಾಲದ ಒಂದು ಸೆರಗನ್ನು ಮುಖಕ್ಕೆ ಮುಚ್ಚಿಕೊಂಡು ನಿದ್ರೆ ಮಾಡುತ್ತಿರುತ್ತಾರೆ. ಆಗ ಯಾರೂ ಉಸಿರೆತ್ತುವಂತಿಲ್ಲ. ಕೈಸನ್ನೆ ಮುಖಸನ್ನೆ ಮಾತ್ರ. ಗಲಾಟೆ ಮಾಡದರೆ ಚರ್ಮಸುಲಿಯುತ್ತೇನೆ ಎಂದು ಎಂದೋ ಗದರಿಸಿದ್ದ ಗದರಿಕೆಯಿಂದ ಎಲ್ಲರೂ ಗಪ್‌ಚುಪ್ ಆಗಿ ಕುಳಿತಿರುತ್ತಿದ್ದರು. ಎದ್ದು ಮುಖತೊಳೆದು ಎಲ್ಲ ತರಗತಿಗಳಿಗೆ ಗಣಿತಪಾಠ, ಬಾಯಿಲೆಕ್ಕ, ಮಗ್ಗಿ, ಪುರೋಚಿಗಳು ನಡೆಯಬೇಕು. ಯಾರಾದರೂ ಮಾತನಾಡುವರು ಬಂದು ಕುಳಿತು ಮಾತನಾಡ ಹತ್ತಿದರೆ ಅಥವಾ ಅವರ ಮನಸ್ಸಿಗೆ ಹಿ ತವಿಲ್ಲದಿದ್ದರೆ, ಹೊಟ್ಟೆನೋವು ಅವರಿಗೆ ಪೆಚ್ಚಾದರೆ (ಅವರಿಗೆ ಆಗಾಗ ಹೊಟ್ಟೆನೋವು ಬರುತ್ತಿತ್ತು. ಅದಕ್ಕಾಗಿ ಮನೆಗೆ ಒಮ್ಮೊಮ್ಮೆ 'ಸೋಡಾ ತಕ್ಕೊಂಡು ಬರುತ್ತೇನೆ. ಗಲಾಟೆ ಮಾಡಬೇಡಿ' ಎಂದು ಹೇಳಿ ಹೋಗಿಬರುತ್ತಿದ್ದುದುಂಟು) ಆಡಲಿಕ್ಕೆ ಬಿಡುತ್ತಿದ್ದರು. ಶಾಲೆಯ ಮುಂಭಾಗದಲ್ಲೇ ಕೆಲವು ಆಟ ಆಡುತ್ತಿದ್ದೆವು. ಅದೂ ಚಿಣ್ಣಿ ಕೋಲಾಟ ಅಥವಾ ತುಳ್ಳೇಗೇರಿ ಆಟಗಳು. ಯಾವಾಗಲೋ ಒಮ್ಮೊಮ್ಮೆ ಕುಂಟುವ ಆಟ. ನನಗಂತೂ ಆಟದಲ್ಲಿ ಗಮನ ಕಡಿಮೆ. ಆಡುವುದನ್ನು ನೋಡುವುದರಲ್ಲೇ ತೃಪ್ತಿಯಾಗುತ್ತಿತ್ತು.

ಮಾತನಾಡುವವರು ಎದ್ದುಹೋದ ಮೇಲೆ ಐದು ಘಂಟೆಯಾಗಿದ್ದರೂ ಶಾಲೆ ಬಿಡುವಂತಿಲ್ಲ. ಪುನಃ ಪಾಠಗಳು ಸೂರ್ಯ ಮುಳುಗುವವರೆಗೆ ಉಂಟೇಉಂಟು. ಕೊನೆಯ ಪಾಠವೆಂದರೆ ಎರಡು - ಮೂರು- ನಾಲ್ಕನೆಯ ಇಯತ್ತೆಯವರನ್ನು ತಮ್ಮ ಸುತ್ತಮುತ್ತ ಬೇರೆ ಬೇರೆ ನಿಲ್ಲಿಸಿ ಬಾಯಿಲೆಕ್ಕ ಹೇಳುತ್ತಿದ್ದರು. ಐದೋ ಆರೋ ಬಾಯಿಲೆಕ್ಕಗಳು ಮುಗಿದ ಮೇಲೆ ಪುರೋಚಿ ಹೇಳಿಸಿಯೇ ಶಾಲೆಯನ್ನು ಬಿಡಬೇಕು. ಪುರೋಚಿಯೆಂದರೆ ಅ ಆ ಇ ಈ .....

ಯಿಂದ ಕ ಕಾ ಕಿ ಕೀ........ ಎಲ್ಲ ಸ್ವರ ಗುಣಿತಾಕ್ಷರಗಳನ್ನು ಹೇಳಿಸುವುದು. ಇಬ್ಬರು ಮುಮ್ಮೇಳ ಉಳಿದವರೆಲ್ಲ ಹಿಮ್ಮೇಳ. ಅನಂತರ ಮಗ್ಗಿ, ಅರ್ಧ, ಕಾಲು ಧೀಡು, ಅಡಚಿ - ಇವೆಲ್ಲ ಹೇಳಬೇಕು. 30ರವರೆಗೆ ಮಗ್ಗಿ ಬರಬೇಕು. ಇಷ್ಟಾಗುವ ಹೊತ್ತಿಗೆ ಹೊತ್ತು ಮುಳುಗುತ್ತಿತ್ತು. ಆಮೇಲೆ 'ನಾಳೆ ಸಾಲಿಗೆ ಯಾರೂ ತಪ್ಪಿಸಬೇಡ್ರಿ, ಗೊತ್ತಾತ್ತಲ್ಲ ಮನೆಗೆ ಹೋಗಿರಿ' ಅಂದ ಮೇಲೆ ಸಾಲಿ ಬಿಟ್ಟ ಹಾಗೆ. ಇದು ನಮ್ಮ ಪ್ರಾಥಮಿಕ ಶಾಲೆಯ ವಿದ್ಯಾಭ್ಯಾಸದ ವೈಖರಿ.

ಆ ಕಾಲದಲ್ಲಿ ನಾಲ್ಕನೆ ತರಗತಿಯವರೆಗೆ ನಾವು ಲೆಕ್ಕ ಮಾಡುವುದು, ಶುದ್ಧಬರಹ ಬರೆಯುವುದು ಎಲ್ಲದಕ್ಕೂ ನಮ್ಮ ಪಾಟಿ (ಸ್ಲೇಟು), ಬಳಪಗಳೇ ಮುಖ್ಯ ಸಾಧನಗಳು. ಪ್ರತಿಪಾಠದ ಕಠಿಣಪದಗಳ ಅರ್ಥವನ್ನು ಮಾತ್ರ ಟಾಕಿನಿಂದ (ನಿಬ್ ಹಾಕಿದ ಕಡ್ಡಿಯಿಂದ) ಪುಸ್ತಕವೊಂದರಲ್ಲಿ ಮಸಿಯಿಂದ ಬರೆಯಬೇಕು. 2ನೇ ಇಯತ್ತೆಯಿಂದಲೇ ಕಾಪಿ ಬರೆಯಬೇಕು. ಎರಡನೆಯ ಇಯತ್ತೆಗೆ ಎರಡು ಸಾಲು, ಮೂರನೆಯ ಇಯತ್ತೆಗೆ ಮೂರು ಸಾಲು, ನಾಲ್ಕಕ್ಕೆ ನಾಲ್ಕು ಸಾಲು. ಬಗನಿಯ ಕಡಿಯನ್ನು ಕೆತ್ತಿ ಮಾಡಿದ ಲೆಕ್ಕಣಿಕೆಯಿಂದಲೇ ಅದನ್ನು ಬರೆಯಬೇಕು. ಈಗಿನಂತೆ ಬಹಳ ಪುಸ್ತಕಗಳು ಇಲ್ಲ. ಗದ್ಯದ ಒಂದು ಪುಸ್ತಕದಲ್ಲಿಯೇ ಮೂರು ಭಾಗ ಇರುತ್ತಿತ್ತು. ಅದರಲ್ಲಿ ನೀತಿ ಪಾಠಗಳು, ವಿಜ್ಞಾನ, ಸಮಾಜ ವಿಜ್ಞಾನ, ಚರಿತ್ರೆಗಳಿಗೆ ಸಂಬಂಧಿಸಿದ ಪಾಠಗಳು ಅಡಕವಾಗಿರುತ್ತಿದ್ದವು. ಭೂಗೋಳಕ್ಕೆ ಮಾತ್ರ ಎರಡನೇ ತರಗತಿಗೆ ನಮ್ಮ ತಾಲೂಕಿನ ಪರಿಚಯ, ಮೂರನೆಯ ತರಗತಿಗೆ ನಮ್ಮ ಜಿಲ್ಲೆಯ ಪರಿಚಯ, ನಾಲ್ಕನೆಯದಕ್ಕೆ ಒಟ್ಟು ಒಂದು ಇಲಾಖೆ. ಆಗ ಮುಂಬಯಿ ಇಲಾಖೆಯೆಂಬುದು ಸಿಂಧಪ್ರಾಂತ ಮೊದಲ್ಗೊಂಡು ಈಗಿನ ಕರ್ನಾಟಕದ ಧಾರವಾಡ, ಬಿಜಾಪುರ, ಬೆಳಗಾವಿ, ಕಾರವಾರಗಳವರೆಗೆ ಬಹುದೊಡ್ಡ ಭೂಭಾಗದ ಪರಿಚಯವಾಗಬೇಕಾಗಿತ್ತು. ನಾಲ್ಕನೆಯ ತರಗತಿಗೆ ಚರಿತ್ರೆಯೂ ಪ್ರತ್ಯೇಕವಾಗಿರುತ್ತಿತ್ತು. ಗದ್ಯದ ಪುಸ್ತಕದಲ್ಲಿ ಚರಿತ್ರೆಯ ಕಥೆಗಳೂ ಇರುತ್ತಿದ್ದವು. ಜೊತೆಗೆ ಕನ್ನಡನಾಡಿನ ಸಂಕ್ಷೇಪಚರಿತ್ರೆ ಓದಬೇಕಾಗುತ್ತಿತ್ತು.

ಭಿನ್ನರಾಶಿ, ಸರಳ ಬಡ್ಡಿ, ಚಕ್ರಬಡ್ಡಿಯ ಲೆಕ್ಕಗಳ ಪರಿಚಯ ನಾಲ್ಕನೇ ತರಗತಿಯಲ್ಲಿ ಇರುತ್ತಿದ್ದವು. ಹೀಗಾಗಿ ನಾಲ್ಕನೆಯ ತರಗತಿ ಓದಿದವರು ಗ್ರಾಮಮಟ್ಟದಲ್ಲಿ ಓದು ಬರಹಬಲ್ಲವರೆಂದೇ ಅರ್ಥ. ಆಗಿನ ಬಹಳ ಜನ ಗೌಡ, ಶಾನುಭೋಗರು ನಾಲ್ಕನೆಯ ಇಯತ್ತೆ ಪಾಸಾದವರೇ. ನಾಲ್ಕನೇ ತರಗತಿ ಪಾಸಾಗಿ 5ನೇ ತರಗತಿಗೆ ನಾವು ತೆವರಮೆಳ್ಳಳ್ಳಿಗೆ ಹೋಗಬೇಕಾಗಿತ್ತು. ಐದನೇ ತರಗತಿಗೆ ಅಲ್ಲಿಗೆ ಹೋಗಿಬಂದು ಕಲಿತೆ.

**ಪ್ರಾಥಮಿಕ ವಿದ್ಯಾಭ್ಯಾಸ ಕಾಲದ ನಮ್ಮ ಹವ್ಯಾಸಗಳು; ಆಮೋದ ಪ್ರಮೋದಗಳು.**

ಐದನೇ ತರಗತಿಯ ಶಾಲೆ ಕಲಿಯಲು ತೆವರಮೆಳ್ಳಳ್ಳಿಗೆ ಹೋಗತೊಡಗಿದ ಮೇಲೆ ನನಗೆ ಸ್ವಲ್ಪಮಟ್ಟಿಗೆ ಲೌಕಿಕ ಪರಿಜ್ಞಾನ ಹೆಚ್ಚಾಯಿತೆನ್ನಬೇಕು. ಇದಕ್ಕೆ ಮೊದಲು ನನ್ನ ಸರ್ವಸ್ವ ನನ್ನ ಹರಪಿಯೇ ಆಗಿತ್ತು. ಆಗಾಗ ನರೇಗಲ್ಲು ಸಂತೆಗೆ ನಮ್ಮ ಅಪ್ಪ ದೊಡ್ಡಪ್ಪಂದಿರ ಸಂಗಡ ಹೋಗಿ ಬರುತ್ತಿದ್ದುದನ್ನು ಬಿಟ್ಟರೆ ಪರ ಊರಿಗೆ ಹೋದುದೇ ಇಲ್ಲ. ಹೋದರೆ ನಮ್ಮ ದೊಡ್ಡಮ್ಮನ ತವರುಮನೆಯಾದ ಖಿರಸಾಪುರಕ್ಕೆ ಹೋದರೆ ಅದೇ ನನ್ನ ದೊಡ್ಡ ಪ್ರವಾಸ. ಖಿರಸಾಪುರ ನಮ್ಮ ಊರಿಂದ 8-9 ಮೈಲು ದೂರ. ಆದರೆ ಅದರ ಮೇಲೆ ಗಾಡಿಯ ಮೇಲೆ ಹೋಗುತ್ತಿದ್ದೆ. ಖಿರಸಾಪುರಕ್ಕೆ ಹೋಗುವ ಮಾರ್ಗದಲ್ಲಿ ಸಂಡೂರು, ಬಂಕಾಪುರ, ಮಳ್ಳಿ, ಹೊಸಪೇಟೆ,

ಹೊಟ್ಟೂರುಗಳು ಸಿಗುತ್ತಿದ್ದವು. ಗಾಡಿಯಲ್ಲಿ ಕುಳಿತೇ ಕುಂದೂರು ಗುಡ್ಡವನ್ನು ನೋಡಿ ಬಹಳ ಪ್ರಭಾವಿತನಾಗುತ್ತಿದ್ದೆ. ನಮ್ಮ ಊರ ಹತ್ತಿರ ಇಂಥ ಒಂದು ಗುಡ್ಡವಿಲ್ಲವಲ್ಲ ಎಂಬ ವ್ಯಥೆಯಾಗುತ್ತಿತ್ತು. ಬಂಕಾಪುರದ ಕೋಟೆಯನ್ನೂ ಬಹಳ ಗಮನವಿಟ್ಟು ವೀಕ್ಷಿಸುತ್ತಿದ್ದೆ. ಎರಡನೆಯ ಬಹುದೊಡ್ಡ ನನ್ನ ಗಮನ ಸೆಳೆದ ನೋಟವೆಂದರೆ ಇದೇ ಆಗಿತ್ತು ಬಂಕಾಪುರ ಊರಹೊರಗಿನ ಕೋಟೆಯಲ್ಲಿ ಡಬಗಳ್ಳಿಯಿಂದ ತುಂಬಿ ರೌದ್ರಾಕಾರ ತಾಳಿ ನಿಂತಿರುತ್ತಿತ್ತು. ನಮ್ಮೂರ ಬದಿಯಲ್ಲಿ ಇಂಥದೇನಾದರೂ ಇದ್ದರೆ ದಿನದಿನವೂ ತಿರುಗಾಡಬಹುದಾಗಿತ್ತಲ್ಲ ಎಂಬ ಯೋಚನೆ ಬರುತ್ತಿತ್ತು. ಖುರಸಾಪುರಕ್ಕೆ ಹೋದರಾಯಿತು, ಅಲ್ಲಿನ ನಮ್ಮ ಮಾವನವರ ಹೊಲಗಳಿಗೆ ಹೋದರೆ ನನ್ನ ಅತ್ಯಂತ ಆಕರ್ಷಣೆಯ ಸ್ಥಳಗಳೆಂದರೆ ಸಿದ್ಧನ ಬೆಟ್ಟ, ನಾಗನೂರು ಕೆರೆಗಳು. ಒಬ್ಬನೇ ಸಿದ್ಧನ ಬೆಟ್ಟದೊತ್ತಿನಲ್ಲಿ ತಿರುಗಾಡಿ ಉಡಿಯ ತುಂಬ ಕೆಂಪುಹಳದಿ ಬಣ್ಣಗಳ ಕಲ್ಲುಗಳನ್ನು ಸಂಗ್ರಹಿಸಿ ತರುತ್ತಿದ್ದುದುಂಟು. ಆ ಗುಡ್ಡ ನನ್ನನ್ನು ಬಹಳ ಆಕರ್ಷಿಸಿತ್ತು. ಈಗಲೂ ಅದು ನಾನು ಯಾವಾಗಲಾದರೂ ಪ್ರವಾಸಮಾಡುತ್ತಿದ್ದರೆ, ದೂರದಿಂದಲೇ ನನ್ನ ಪ್ರೀತಿಯ ಸಿದ್ಧನ ಗುಡ್ಡದ ಕಡೆ ನನ್ನ ಕಣ್ಣುಗಳು ಹರಿದಾಡುತ್ತವೆ.

### ಉಳವಿ ಪ್ರವಾಸ

ಬಾಲ್ಯದ ಬಹುದೊಡ್ಡ ಪ್ರವಾಸವೊಂದು ಮಾತ್ರ ಇಂದಿಗೂ ನನ್ನ ಗಮನದಲ್ಲಿ ಮಸಮಸಕಾಗಿ ಉಳಿದು ಆಗಾಗ ಮೆಲಕು ಹಾಕಿಸುತ್ತಿರುತ್ತದೆ. ಅದೇ ನಮ್ಮ ಮನೆಯವರು ಕೊಲ್ಲಾರಿಬಂಡಿಯಲ್ಲಿ ಹೋಗಿ ಉಳುವಿ ಚನ್ನಬಸವೇಶ್ವರರ ಯಾತ್ರೆ ಮುಗಿಸಿಕೊಂಡು ಬಂದದ್ದು. ಆಗ ನನ್ನ ವಯಸ್ಸು ಸುಮಾರು ಐದು ವರ್ಷವಿರಬಹುದೆಂದು ತೋರುತ್ತದೆ. ನಮ್ಮ ಊರಿಂದ ನಮ್ಮ ಸಂಬಂಧದವರದೇ ಆದ 8-10 ಗಾಡಿಗಳು ಉಳವಿಯ ಯಾತ್ರೆಗೆ ಹೊರಟಿದ್ದವು. ಹುರಗೆಜ್ಜೆ ಸರಕಟ್ಟಿಕೊಂಡು ಹೆಮ್ಮೆಯಿಂದ ಹೆಜ್ಜೆಹಾಕುವ ಆನೆಯಂಥ ಎತ್ತುಗಳು, ಬಂಡಿಯ ಪಕ್ಕ ಹಾಗೂ ಮೇಲ್ಭಾಗದಲ್ಲಿ ಮೇವಿನ ಹೊರೆಗಳು, ಹೊಟ್ಟಿನ ಕಲ್ಲಿಗಳು, ಡಂಬರಿಗೆಯ ತಳದಲ್ಲಿ ಬೆತ್ತದ ಬುಟ್ಟಿಯಲ್ಲಿ ಕಟ್ಟಿದ ತಿನಸಿನ ಸಾಮಗ್ರಿಗಳು. ಇಂದಿನ ದಿನಮಾನಗಳಲ್ಲಿ ಆ ಸಡಗರವಿಲ್ಲ. ದಾರಿಯಲ್ಲಿ ಕಂಡದ್ದನ್ನೆಲ್ಲ ನೋಡಿಕೊಂಡು ನಮ್ಮ ಹಿರಿಯರೆಲ್ಲ ಬಂಡಿಯ ಹಿಂದೆ ಮುಂದೆ ನಡೆಯುತ್ತಲೆ ಹೋಗುತ್ತಿದ್ದರು. ಬಂಕಾಪುರಕ್ಕೆ ಬಂದು ಅಲ್ಲಿಂದ ಮುಂಡಗೋಡ ಮೇಲುಗೈಯೆಲ್ಲಾಪುರ ಮಾರ್ಗವಾಗಿ ನಮ್ಮ ಈ ತೀರ್ಥಯಾತ್ರೆಯ ಮಹಾಪ್ರವಾಹ ಸಾಗಿತು.

ಆ ವೈಭವವೋ ಸಡಗರವೋ ನನಗೆ ಇನ್ನು ಮಸಕುಮಸಕಾಗಿ ಜ್ಞಾಪಕವಿದೆ. ಅಂದಿನ ದಿನಗಳಲ್ಲಿ ಹೋಟಲ್‌ಗಳೇ ಇರಲಿಲ್ಲ. ಅಲ್ಲೊಂದು ಇಲ್ಲೊಂದು ಯಾರೋ ಇಟ್ಟುಕೊಂಡರೂ ಅಲ್ಲಿಗೆ ಹೋಗುವ ಹಳ್ಳಿಗ ತೀರ ಕಡಿಮೆ. ಹೋಟಲಿಗೆ ಹೋಗಿ ಅಲ್ಲಿ ತಿಂದು ಬರುವುದು ಜಾತಿಗೆಟ್ಟವರ ನಡೆ ಎಂದು ನಮ್ಮ ಜನಗಳ ತೀರ್ಮಾನ ಆಗಿತ್ತು. ಆದ್ದರಿಂದ ಉಳವಿ ಪ್ರವಾಸ ಕಾಲದಲ್ಲಿ ನಮ್ಮ ಮನೆಯಿಂದ ಮಾಡಿಕೊಂಡು ಹೋದ ತಿಂಡಿ ಮೊದಲಾದವುಗಳ ವಿಷಯ ನಿಮಗೆ ಬೇಕೆ? ಕೇಳಿ: ಕರಜೀಕಾಯಿ, ಕೋಡಬಳೆ. ನಾಲ್ಕೈದು ದಿನವಿದ್ದರೂ ಕೆಡದ ಕಲಸನ್ನದ ಬುತ್ತಿ, ರೊಟ್ಟಿ, ಅಗಸೆ - ಗುರೆಳ್ಳು - ಕಡಲೆ - ಮಿಜ್ಜಿ ಚಟ್ನಿಗಳು, ಹಿಟ್ಟಿನಲ್ಲೇ ಐದಾರು ದಿನ ಇದ್ದರೂ ಕೆಡದಂತಹ ವಿಧಾನದ ಪಂಡಿ ಹುಳಿ. ಈ ಹುಳಿಯಿದ್ದರೆ ಆಯಿತು. ಸಾರು ಮಾಡುವ ಪ್ರಮೇಯವೇ ಇಲ್ಲ. ಒಳ್ಳೆ ಶುದ್ಧವಾದ ಹುಣಸೇ ಹಣ್ಣಿಗೆ ಬೆಲ್ಲ, ಬೆಳ್ಳುಳ್ಳಿ, ಜೀರಿಗೆ, ಕೋತಂಬ್ರಿ

ಸೊಪ್ಪು, ಕಾರ ಸಂಬಾರ ಪುಡಿ, ಹುರಿದ ಎಳ್ಳು, ಹುರಿದ ಗಸಗಸೆ, ಮೆಂತ್ಯ, ಕಾಯಿಸಿದ ಎಳ್ಳೆಣ್ಣೆ - ಇವನ್ನೆಲ್ಲ ಕೂಡಿಸಿ ಚೆನ್ನಾಗಿ ಕುಟ್ಟಿದ್ದೇ ದಂಡಿನ ಹುಳಿ. ಹೋದಲ್ಲೆಲ್ಲ ಬೇಳೆ ಬೇಯಿಸುವಂತಿಲ್ಲ, ಸಾರು ಮಾಡುವಂತಿಲ್ಲ. ಸ್ವಲ್ಪ ಈ ದಂಡಿನ ಹುಳಿಯನ್ನು ತೆಗೆದುಕೊಂಡು ನೀರಿನಲ್ಲಿ ಕಲಸಿದರೆ ಆಯಿತು ಸಾರಿನ ಕಾರ್ಯ. ಅದು ಬಹಳ ರುಚಿಯೂ ಇರುತ್ತಿತ್ತು. ಆದ್ದರಿಂದಲೇ ಇದಕ್ಕೆ ಹಳ್ಳಿಯಲ್ಲಿ ಇಂದಿಗೂ ತಂಬುಳಿ ಎಂದು ಕರೆಯಲಾಗುತ್ತಿದೆ. ತಣ್ಣನೆಯ ಹುಳಿ - ತಂಬುಳಿ ಆಗಿರಬಹುದು.

ಒಂದೆ ಸೈನ್ಯದಲ್ಲಿ ಸೈನಿಕರಿಗೆ ನಿತ್ಯ ಸಾರು ಮಾಡುವ ತೊಂದರೆ ತಪ್ಪಿಸಿದ ಈ ಹುಳಿಗೆ 'ದಂಡಿನಹುಳಿ'ಯೆಂಬ ಹೆಸರನ್ನು ನಮ್ಮವರು ಕೊಟ್ಟಿರಬೇಕು. ಬಹುಶಃ ಇಂಥ ಹುಳಿ ಮಾಡುವುದನ್ನು ಅದೇ ಉದ್ದೇಶಕ್ಕೇ ಮೊದಲು ಮಾಡುತ್ತಿರಬಹುದು. ಮುಂದೆ ಪ್ರವಾಸದಲ್ಲಿ ಸಾರು ಮಾಡುವ ಕೆಲಸವನ್ನು ಹಗುರಮಾಡಲು ಈ ಹುಳಿಗೆ ಶರಣು ಬಂದಿರಬಹುದು ನಮ್ಮವರು. ಊರಿಂದ ಹೊರಟು ಗಣೇಶನ ಗುಡಿ ಬರುವವರೆಗೆ ದಾರಿಯುದ್ದಕ್ಕೂ ನಮಗೆ ಮನೆಯವರಿಗೆ ಎಲ್ಲರಿಗೂ ಕಟ್ಟಿಕೊಂಡು ಬಂದ ತಿಂಡಿಯೇ ವಿನಾ ಅಡಿಗೆ ಮಾಡಿದ್ದೇ ಇಲ್ಲ. ಗಾಡಿಯ ಮುಂಭಾಗದಲ್ಲಿ ನನ್ನ ತಂಗಿ ಗುರವ್ವ ಮತ್ತು ನಾನು ಇಬ್ಬರೂ ಕುಳಿತು ಅರಳುಗಣ್ಣುಗಳಿಂದ ಬೆರಗು ದೃಷ್ಟಿಯಿಂದ ಅರಣ್ಯಭೂಮಿಯ ಕಡುಚೆಲುವು ಮತ್ತು ಆಶ್ಚರ್ಯಗಳನ್ನು ನೋಡುತ್ತ ಏನೇನೋ ಉದ್ಗಾರ ಮಾಡುತ್ತಲೇ ಇದ್ದೆವು. ಅವುಗಳಲ್ಲಿ ಒಂದು ಮಾತ್ರ ಇಂದಿಗೂ ನೆನಪಿದೆ.

ಅತ್ತಿ ಆಲದ ಮರ ಸುತ್ತ ಬೇವಿನಮರ ಉತ್ತತ್ತಿವನದೊಳಗಿರುವ
ಉಳವೀ ಚೆನ್ನಬಸವಣ್ಣ ಬಹುಪರಾಕ್

ಇದರ ಜೊತೆಗೆ ಹರಹರಮಹಾದೇವ - ಈ ಸಾಮಾನ್ಯ ಘೋಷಣೆಯಂತೂ ಇದ್ದೇ ಇದೆಯಲ್ಲವೆ. ಈ ಘೋಷಣೆಗಳಲ್ಲಿ ಸುತ್ತಲೂ ಅರಣ್ಯ ಪ್ರದೇಶದ ವೀಕ್ಷಣೆಯಲ್ಲಿ ಕರಗಿ ಹೋಗಿದ್ದ ನನಗೆ 60-62 ವರ್ಷ ಕಳೆದರೂ ಅನೇಕ ಸ್ಪಷ್ಟಚಿತ್ರಗಳು ಇನ್ನು ಕಣ್ಣಮುಂದೆ ಇವೆ. ಪ್ರವಾಸ ಪ್ರಸಂಗಗಳಿಂದ ಬಾಲ್ಯದಲ್ಲಿ ಮಕ್ಕಳಿಗಾಗುವ ಪ್ರಯೋಜನಗಳೇನು? ಎಂಬುದು ಈಗ ನನ್ನ ಅನುಭವಕ್ಕೆ ಬರುತ್ತಿದೆ. ಅದರಿಂದ ಅನೇಕ ರಾಗ-ರಸ-ಭಾವಗಳು ನಮ್ಮ ಸುತ್ತ ಬೋಧೆಯಲ್ಲಿ ಕರಗಿ, ಮನಸ್ಸು ವಿಸ್ತಾರವಾಗುವ ಸಾಧನವೆಂಬ ತೀರ್ಮಾನಕ್ಕೆ ಬಂದಿದ್ದೇನೆ. ಇದು ಸತ್ಯವೂ ಹೌದು. ದೊಡ್ಡ ದೊಡ್ಡ ಕವಿಗಳು ಮಾಡುವ ಪ್ರಕೃತಿವರ್ಣನೆ, ಸ್ಥಳ ಸನ್ನಿವೇಶಗಳ ವರ್ಣನೆಗೆ ಬಹುಶಃ ಅವರು ಮಾಡಿದ ಪ್ರವಾಸದ ಅನುಭವಗಳೇ ಆಗಿರಬಹುದು. ಗಗನಚುಂಬಿ ಗಿಡಮರಗಳಿಂದ ತುಂಬಿದ ಕಾಡು, ಬಳ್ಳಿಗಳ ಹಬ್ಬುಗೆಯಿಂದ ನೆಲವೇ ಕಾಣದಂತಿರುವ ದಿವ್ಯ ಭವ್ಯ ದೃಶ್ಯ. ಅದು ಒಂದು ರೀತಿಯಿಂದ ಹೊಸಲೋಕದಲ್ಲಿ ಪ್ರವಾಸ ಮಾಡುವವರಂತೆ ನನ್ನ ಮನಸಿನಲ್ಲಿ ಆಗ ಮೂಡಿದ ಭಾವನೆಗಳು ವರ್ಣಿಲಸಾಧ್ಯವಾದ ಪ್ರಭಾವಕ್ಕೊಳಗಾಗಿ ಹೋದವು. ಇಂದಿಗೂ ಕಾಡುಮೇಡುಗಳನ್ನು ಕಂಡಾಗ ನನಗಾಗುವ ಆನಂದಕ್ಕೆ ಬಾಲ್ಯದ ನನ್ನ ಕಾಡಿನ ನೋಟದಲ್ಲುಂಟಾದ ಗಂಭೀರ ಸಂಸ್ಕಾರವೇ ಕಾರಣವಾಗಿರಬಹುದು. ಈಗ ಬಾಣಭಟ್ಟನ ಕಾದಂಬರಿ, ಹರಿಹರ, ಪಂಪ, ಷಡಕ್ಷರದೇವನಂಥ ಕವಿಗಳು ಮಾಡಿರುವ ಪ್ರಕೃತಿ ವರ್ಣನೆಯ ಹಿಂದೆ ಅವರು ಕಂಡ ಸತ್ಯ ಅಡಗಿರಬಹುದು ಎನ್ನಿಸುತ್ತದೆ. ಇದೇನೇ ಇರಲಿ ನಾನು ಹೇಳುವ ಹೊರಟಿರುವುದು ಕವಿಕಾವ್ಯ ವಿಮರ್ಶೆಯಿಲ್ಲ.

ನಮ್ಮ ಉಗ್ಗಡಣೆ ನಿಂತಾಗ ಹಿಂದೆ ಒಂದು ವರ್ಷದ ಮಗನಾದ ಗಿರಿಯಪ್ಪ ಎಂಬ ಬಗಲಗೂಸಿನೊಡನೆ ಕುಳಿತ ತಾಯಿ, ದೊಡ್ಡಮ್ಮ ನಮ್ಮ ಅಕ್ಕ 'ಯಾಕೆ ನಿಲ್ಲಿಸಿ ಬಿಟ್ಟಿರಲ್ಲ, ಹರಹರ ಮಹಾದೇವ ಎನ್ನಿರಿ, ಉಗ್ಗಡಣೆ ಕೂಗಿರಿ ಎಂದು ಎಚ್ಚರಿಸುತ್ತಿದ್ದರು. ಆಗ ಪುನಃ ಉಗ್ಗಡಿಸುತ್ತಿದ್ದೆವು.

ಗಣೇಶನ ಗುಡಿಗೆ ಬಂದ ನಂತರ ಅಲ್ಲಿ ಒಲೆ ಹಚ್ಚಿ ಅಲ್ಲಿ ಒಂದು ಗಣಪರ್ವ ಮಾಡಿ ಊಟಮುಗಿಸಿ ಎತ್ತು ಗಾಡಿಗಳನ್ನು ಅಲ್ಲಿಯೇ ಬಿಟ್ಟು ಮುಂದೆ ಸಾಗಬೇಕು. ಮುಂದೆ ಉಳವಿಗೆ ಗಾಡಿಗಳು ಹೋಗುವ ಮಾರ್ಗವಿಲ್ಲ. ಅದೊಂದು ಕಾಲು ನಡಿಗೆಯಲ್ಲಿ ಘಟ್ಟವನ್ನು ಹತ್ತಿ ಇಳಿದು ಹೋಗುವ ಅತಿ ಇಕ್ಕಟ್ಟಿನ ದಾರಿ. ಬೆಳಿಗ್ಗೆ ಗಣೇಶನ ಗುಡಿ ಬಿಟ್ಟು ಹೊರಟರೆ ಸಾಯಂಕಾಲಕ್ಕೆ ಉಳವಿ ತಲುಪಬೇಕು. ಪಾತ್ರೆಪಡಗ, ಅಕ್ಕಿ ಬೇಳೆ, ಗುಡಾರ-ಜಮಖಾನ, ರೊಟ್ಟಿ ಬುತ್ತಿಯ ಹೊರೆ ಇವನ್ನೆಲ್ಲ ಒಬ್ಬೊಬ್ಬರೂ ಹೊತ್ತುಕೊಂಡು ಸಾಗಿ ನಮ್ಮ ಪ್ರವಾಸ ಅಲ್ಲಿಯೇ ಸಮೀಪದಲ್ಲಿ ಇರುವ ಕಾಳಿನದಿಯನ್ನು ದಾಟಿದ್ದೊಂದು ನಮ್ಮ ದೃಷ್ಟಿಯಲ್ಲಿ ಸಾಹಸದ ಕಾರ್ಯವೇ ಆಯಿತು. ಕಾಲಿಟ್ಟರೆ ಜರ್ರನೆ ಜಾರುವ ಹಾವಸೆಗಟ್ಟಿದ ಕಲ್ಲುಗಳು, ಮೇಲಾಗಿ ಸ್ವಲ್ಪವೇ ನೀರಿದ್ದರೂ ಸೆಳವುಳ್ಳ ಆ ನೀರಿನಲ್ಲಿ ನಮ್ಮ ಕೈಗಳನ್ನು ಹಿಡಿದು ನದಿ ದಾಟಿದ ಮೇಲೆ ಮುಂದೆ ಘಟ್ಟಗಳನ್ನು ಏರಿಳಿಯುವ ಸಾಹಸ. ದೊಡ್ಡವರು ಭಾರಹೊತ್ತು ತೂಗುತ್ತ ಉಸ್ಸೆನ್ನುತ್ತ, ಕೈಯಲ್ಲಿ ಕೋಲು ಹಿಡಿದು ಊರುತ್ತಿದ್ದರೆ ನಮಗೋ ಅದೊಂದೂ ಇಲ್ಲದೆ ಉತ್ಸಾಹದಿಂದ ಕೇಕೆಹಾಕುತ್ತ ಘಟ್ಟಹತ್ತುವ ಭರಭರಾಟೆ. ನಮಗಂತೂ ಆಯಾಸದ ಅನುಭವ ಆಗಲೇ ಇಲ್ಲ.

ಅಲ್ಲಿ ನಡೆದ ಒಂದು ಘಟನೆ ಮಾತ್ರ ಅರವತ್ತೈದು ವರ್ಷ ದಾಟಿದರೂ ಇನ್ನೂ ನೆನಪಿನಲ್ಲಿ ಉಳಿದಿದೆ. ನಮ್ಮಂತೆ ಉಳವಿ ಯಾತ್ರೆಗೆ ಹೊರಟಿದ್ದ ಜನರಲ್ಲಿ ಓರ್ವ ಹೆಣ್ಣುಮಗಳು ತಲೆಯ ಮೇಲೆ ಪಾತ್ರೆ ಪಡಗಗಳನ್ನು ಹೊತ್ತು ಒಂದು ಕಿರಿಯಗಲ ದಾರಿಯ ಬೆಟ್ಟದ ಒತ್ತಿನಲ್ಲಿ ನಡೆದಿದ್ದಾಗ ಎಡವಿಯೇ ಏನೊ ಬಿದ್ದು ಬಿಟ್ಟಳು. ಪಾತ್ರೆ-ಕೊಡಪಾನ ಮೊದಲಾದವು ಎಡಗಡೆಯ ಬೆಟ್ಟದ ಇಳಕಲ್ಲಿನಲ್ಲಿ ಉರುಳುತ್ತ ಉರುಳುತ್ತ ಹೋಗುತ್ತಲೇ ಇವೆ. ಅವಳು ಎದ್ದು ಬಾಯಿ ಬಡಿದುಕೊಳ್ಳುತ್ತಲೇ ಇದ್ದಾಳೆ. ಎಲ್ಲರೂ ನೋಡುತ್ತಲೇ ಇದ್ದಾರೆ. ಆ ಸಮಯದಲ್ಲಿ ನಾನು ಆ ಇಳುಕಲಿನಲ್ಲಿ, ಅಲ್ಲಿದ್ದ ಚಿಕ್ಕಪುಟ್ಟ ಗಿಡಗಳನ್ನು ಹಿಡಿದು ಇಳಿಯಲು ಹೋದಾಗ ನನ್ನ ಹಿಂದೆಯೇ ಇದ್ದ ನನ್ನ ತಾಯಿ ನನ್ನ ಕೈಹಿಡಿದು ಅಯ್ಯೋ! ಎಂದು ಬೆದರಿ ಎಳೆದಳು. ಏಕೆಂದರೆ ಮುಂದೆ ಬಹು ಕಡಿದಾದ ಪ್ರಪಾತವಿತ್ತು. ಅವಳ ಪಾತ್ರೆ ಪಡಗಗಳು ಕೆಳಗೆ ದೂರದಲ್ಲಿ ಕೆಲವು ಮೆಳೆಗಳ ತಡೆಯಿಂದಾಗಿ ಪ್ರಪಾತಕ್ಕೆ ಬೀಳದೆ ನಿಂತವು. ಅವುಗಳನ್ನು ಆ ಹೆಣ್ಣುಮಗಳಿಗೆ ತೆಗೆದುಕೊಡುವವರು ಯಾರು? ಮುಂದೇನಾಯಿತೋ ಅರಿಯೆ. ಮುಂದೆ ಸಾಗಿತು ನಮ್ಮ ಪ್ರಯಾಣ. ಅಲ್ಲಿ ಕಿನ್ನರಿಬೊಮ್ಮಯ್ಯನ ಹೊಳೆಗೆ ಬಂದು ಒಂದು ಗಿಡದ ಬುಡದಲ್ಲಿ ಕುಳಿತು ತಿಂಡಿತೀರ್ಥ ಮಾಡಿಸುತ್ತಿರುವಾಗ ನನಗೆ ಕಂಡ ದೃಶ್ಯ ಭಾವನೆಯಲ್ಲಿ ಕರಗಿದೆ. ಇಬ್ಬನಿಯ ಬಿಳಿಯ ಮೋಡ, ಪರ್ವತ ಮಧ್ಯದಲ್ಲಿ ನಿಂತು ಪರ್ವತವನ್ನು ಎರಡು ಭಾಗ ಮಾಡಿತ್ತು. ನನ್ನ ದೃಷ್ಟಿಯಲ್ಲಿ ಪರ್ವತದ ಕೆಳಭಾಗವೇ ಭೂಲೋಕವಾಗಿ, ಮೋಡದ ಮೇಲೆ ಕಾಣುವ ಪರ್ವತ ಭಾಗವೇ ಸ್ವರ್ಗವಾಗಿ ಕಂಡಿತು. ನನ್ನ ದೃಷ್ಟಿಯಲ್ಲಿ ಅದ್ಭುತ ದೃಶ್ಯವಾಗಿ ಕಂಡ ಈ ಅನುಭವವನ್ನು ಎಲ್ಲರಿಗೂ ತೋರಿಸುತ್ತ ಅಲ್ಲಿರುವ ಸ್ವರ್ಗವನ್ನು ನೋಡಿರಿ ಎಂದು ಹೇಳಿದ್ದುಂಟು. ಅಲ್ಲಿಯೇ ಚನ್ನಬಸವಣ್ಣ ಇರಬಹುದು; ಅಲ್ಲಿಗೇ ನಾವು ಹೊರಟಿರಬಹುದು ಎಂಬ ಊಹೆಯಾಯಿತು.

ಹಿಮಾಲಯದಲ್ಲಿನ ಕೈಲಾಸಪರ್ವತವನ್ನು ನಮ್ಮ ಹಿಂದಿನವರು ಈ ದೃಷ್ಟಿಯಿಂದಲೇ ನೋಡಿ, ಮೇಲೆ ಶಿವನ ಕೈಲಾಸವಿದೆ ಎಂದಿರಬಹುದೇ? ಧರ್ಮರಾಯ ಅಲ್ಲಿಗೆ ಹೊರಟು ಕಡಿದಾದ ಬೆಟ್ಟ ಹತ್ತಲಾಗಿದೆ ದಾರಿಯಲ್ಲಿಯೇ ತಮ್ಮಂದಿರನ್ನು ಕಳೆದುಕೊಂಡಿರಬಹುದೇ? ಅದೇನೇ ಇರಲಿ.

ಉಳವಿಗೆ ಹೋದ ಮೇಲೆ ಅಲ್ಲಿ ಎರಡು ಮೂರುದಿನಗಳು ಗುಡಾರ ಹೊಡೆದುಕೊಂಡು ಇದ್ದು, ಆಕಳಗವಿ, ಮಹಾಮನೆಗವಿ, ವಿಭೂತಿಬಾಂಡಾರ, ಉಳವಿ ವಿಭೂತಿ ಗುಡ್ಡ, ನೀರಿನ ಚಿಲುಮೆಗಳನ್ನು ನೋಡಿದುದು ಇಂದಿಗೂ ಜ್ಞಾಪಕ. ಆಕಳಗವಿಯನ್ನು ಮಹಾಮನೆ ಗವಿಯನ್ನು ಒಳಹೊಕ್ಕು ನೋಡುವುದಕ್ಕೆ ನಮ್ಮವರು ನನಗೆ ಬಿಡಲಿಲ್ಲ. ನಾವು ಅದನ್ನೆಲ್ಲ ದೂರದಿಂದಲೇ ನೋಡಿ ಕೈಮುಗಿದು ಬಂದೆವು. ಮುಂದೆ ಚೆನ್ನಬಸವಣ್ಣನ ರಥೋತ್ಸವವನ್ನು ಭಾರತ ಹುಣ್ಣಿಮೆ ದಿನ ನೋಡಿ ಅಲ್ಲಿಯೂ ಗಣಪರ್ವಮಾಡಿ ಹಿಂದಿರುಗಿದೆವು. ಇದು ನನ್ನ ಬಹುದೊಡ್ಡ ವಿಶ್ವಪರ್ಯಟನ ಸದೃಶ ಬಾಲ್ಯದ ಪ್ರವಾಸ.

### *ಜೋಕಾಲಿ ಆಡುವ ಹವ್ಯಾಸ*

ಬಾಲ್ಯದಲ್ಲಿ ನನ್ನ ವಿಶೇಷ ಹವ್ಯಾಸಗಳಲ್ಲಿ ಜೋಕಾಲಿ ಆಡುವುದೂ ಒಂದು. ಶ್ರಾವಣಮಾಸ ಯಾವಾಗ ಬರುತ್ತದೋ ಎದುರು ನೋಡುತ್ತಿದ್ದೆವು. ಶ್ರಾವಣಮಾಸ-ಪೂರ್ಣ ಜೋಕಾಲಿ ಆಟದ ಹಬ್ಬ. ನಮ್ಮ ಹಿತ್ತಿಲಲ್ಲಿದ್ದ ದೊಡ್ಡ ಹುಣಸೇಮರ. ಇಡೀ ಊರಿನ ಹಳೆಯ ಹುಣಸೇಮರ. ವಯಸ್ಸಿನಲ್ಲಿ ಅಲ್ಲ, ಆಧ್ಯತೆಯಲ್ಲೂ ಕೂಡ. ನಮ್ಮ ಸುತ್ತು ಮುತ್ತಣ ಹತ್ತಾರು ಹಳ್ಳಿಗಳಲ್ಲಿ ಅಷ್ಟು ದೊಡ್ಡಮರ ಎಲ್ಲೂ ಇರಲಿಲ್ಲ. ಇಂಥ ಒಂದು ದೊಡ್ಡಮರ ನಮ್ಮದು ಅನ್ನುವ ಹೆಮ್ಮೆ ಅಧಿಕವಾಗಿ. ನನ್ನಲ್ಲಿ ಬೆಳೆದು ಬಂದಿತ್ತು. ಬಾಲ್ಯದಿಂದ ನನಗೂ ಈ ಮರಕ್ಕೂ ಬಹಳ ನಂಟು. ಆರೇಳು ವರ್ಷಗಳ ಹೊತ್ತಿಗೆ ಕಷ್ಟಪಟ್ಟು ಆ ಮರದ ಹತ್ತುವುದನ್ನು ಕಲಿತಿದ್ದೆ. ಮರ ಹತ್ತುವುದು ಶಕ್ಯವಾದ ಮೇಲೆ ಅದರ ಮೇಲೆ ಹತ್ತಿ ಬಹಳ ಹೆಮ್ಮೆಪಟ್ಟುಕೊಂಡಿದ್ದೇನೆ. ಆ ಮರದಲ್ಲಿ ಆರೇಳು ಅಡಿ ಹತ್ತಿದ ಮೇಲೆ ವಿಶಾಲವಾದ ಸ್ಥಳವಿದೆ. ಅಲ್ಲಿ ಮಲಗಲೂಬಹುದು. ಅಷ್ಟು ವಿಶಾಲತೆ ಅಲ್ಲಿತ್ತು.

ಶಾಲೆಗೆ ತಪ್ಪಿಸಿಕೊಂಡರೆ, ದನ ಅಟ್ಟಿಕೊಂಡು ಹೊಲಕ್ಕೆ ಹೋಗು ಎಂದು ಮನೆಯಲ್ಲಿ ಹೇಳಿದಾಗ ಮನಸ್ಸಿಲ್ಲದಿದ್ದರೆ, ಕದ್ದು ಕೂಡುವುದಕ್ಕೆ ಈ ಮರ ಒಳ್ಳೆಯ ರಕ್ಷಣೆ ಒದಗಿಸಿದೆ. ಅಂತೆಯೇ ಇದರ ಮೇಲೆ ನನಗೆ ಎಲ್ಲಿಲ್ಲದ ವಿಶ್ವಾಸ-ಭಕ್ತಿಯೂ ಕೂಡ. ಅದು ದೇವರ ಮರ ಎಂದು ನನ್ನ ಭಾವನೆಯಾಗಿತ್ತು. ಆ ಮರದ ಬುಡದಲ್ಲಿ ಒಂದು ಕಲ್ಲಿಗೆ ವಿಭೂತಿ ಅರಿಶಿಣ ಕುಂಕುಮ ಹಚ್ಚಿ ಯಾವುದೋ ದೇವರು ಎಂದು ಕೆಲವರು ಕರೆಯುತ್ತಿದ್ದು ಹುಣ್ಣಿಮೆ ಅಮಾವಾಸೆಗಳಲ್ಲಿ ಅಲ್ಲಿ ಪೂಜೆ ಸಲ್ಲುತ್ತಿತ್ತು. ಅಂತೂ ಆ ದಿನದ ಮಟ್ಟಿಗೆ ಅದು ನನಗೆ ದೇವರ ಮರವಾಗಿ ಕಂಡಿತ್ತು. ಆಸ್ತಿ ಪಾಸ್ತಿಯನ್ನು ಈ ಮರ ರಕ್ಷಣೆ ಮಾಡಿದೆ. ನಾವು ಮುಂದೆ ನಡೆಯುವ ಕೂಡಲ ಜಾತ್ರೆಗೆಂದು ಹೊಲದಲ್ಲಿ ಹತ್ತಿ ಬಿಡಿಸಿ ತಂದು ತೆಗ್ಗಿಹಳ್ಳಿ ಚೆನ್ನ ಬಸಪ್ಪನ ಅಂಗಡಿಗೆ ಹಾಕಿ ಅವನು ಕೊಟ್ಟಷ್ಟು ಪುಡಿ ಕಾಸನ್ನೆಲ್ಲ ಈ ಮರದ ಮೇಲೆ ಹತ್ತಿ ಅಲ್ಲಿನ ಪೊಟರೆಗಳಲ್ಲಿ ಇಟ್ಟುಬಿಟ್ಟರಾಯಿತು. ಯಾರೂ ಅದನ್ನು ಮುಟ್ಟುವುದಕ್ಕೆ ಶಕ್ಯವೇ ಇಲ್ಲ. ಒಮ್ಮೆ ತಮ್ಮಣ್ಣವರ ಸೆಟ್ಟೆಪ್ಪನ ಬಾಗಿಲ ಮುಂದಿನ ಅಂಗಳದಲ್ಲಿ ಸಿಕ್ಕ 13 ಆಣೆ ದುಡ್ಡನ್ನು ಈ ಮರದ ಪೊಟರೆಯಲ್ಲಿಟ್ಟು ಆ ವರ್ಷ ನಡೆದ ಕೂಡಲ ಜಾತ್ರೆಯಲ್ಲಿ ಬಹು ದೊಡ್ಡ ಶ್ರೀಮಂತನಂತೆ ತೋರಿಸಿಕೊಂಡುದುಂಟು.

ಈ ಮರವೇ ನನಗೆ ಉಳಿದ ಇನ್ನಿತರ ಮರ ಹತ್ತುವ ಅಭ್ಯಾಸ ಮಾಡಿಸಿದ ಗುರುವೂ ಹೌದು. ನೇರಳೆ, ಅತ್ತಿ, ಮಾವಿನ ಹಣ್ಣುಗಳ ಬೇಟೆಗೆ ಹೋದಾಗ ಮರಹತ್ತುವ ತಜ್ಞ ನಾನೇ. ಗಿಡದಲ್ಲಿ ಹಣ್ಣು ಯಾವ ಮೂಲೆಯಲ್ಲೇ ಇರಲಿ ಅಲ್ಲಿಯವರೆಗೆ ಹತ್ತಿ ಹೋಗಲು ಏನೇ ತೊಡಕಿರಲಿ ಅದನ್ನು ಕೆಳಗಿನಿಂದ ನೋಡಿ ಯೋಜನೆ ಹಾಕಿಕೊಂಡು ಹತ್ತಿದರೆ ಆಯಿತು. ಮೂಲೆಯಲ್ಲಿ ಅಡಗಿ ಕುಳಿತ ಮಾವು ನಮ್ಮ ವಶವೇ. ಜೇನು ಬಿಡಿಸಲು ಉತ್ತರೋತ್ತರ ಮರ ಹತ್ತುವ ಈ ವಿದ್ಯೆ ನನಗೆ ತುಂಬಾ ಪ್ರಯೋಜನವನ್ನು ಉಂಟುಮಾಡಿತು ಅನ್ನಿ. ಇಂಥ ನನ್ನ ಮಿತ್ರ, ರಕ್ಷಕ, ದೇವರು ಇತ್ಯಾದಿಯಾಗಿ ನನ್ನ ಬಾಲ್ಯಜೀವನದಲ್ಲಿ ಸಂಬಂಧ ಹೊಂದಿದ್ದ ಹುಣಸೇಮರದಲ್ಲಿ ಎರಡು ಮೂರು ಜೋಕಾಲಿಗಳನ್ನು ಕಟ್ಟುತ್ತಿದ್ದರು. ಅದರಲ್ಲಿ ಒಂದು ಜೋಕಾಲಿಯಂತೂ ನಮ್ಮ ಮನೆಯದು. ಒಂದು ಬಹುದೊಡ್ಡ ಜೋಕಾಲಿ ಊರಿನವರು ಯಾರು ಯಾರೋ ಬಂದು ಕಟ್ಟುತ್ತಿದ್ದು, ಒಂದು ದೃಷ್ಟಿಯಿಂದ ಇದು ಸಾರ್ವಜನಿಕ ಜೋಕಾಲಿಯೇ. ನಾವೆಲ್ಲ ಸ್ವತಃ ಅದನ್ನು ಹತ್ತಿ ಜೀಕಿ ನಮ್ಮ ಶಕ್ತಿ ಪ್ರದರ್ಶನ ಮಾಡಲು ಶಕ್ಯವಿಲ್ಲದ ಜೋಕಾಲಿಗಳು. ಇದು ಕುಸ್ತಿಪಟುಗಳು, ಊರಿಗೆ ಮಾವನ ಮನೆಗೆ ಬಂದ ಅಳಿಯ ಮೊದಲಾದವರ ಶಕ್ತಿಪರೀಕ್ಷೆಯ ಸಾಧನ. ಈ ಜೋಕಾಲಿಯನ್ನು ಜೀಕಿ ಮುಂದೆ ಒಂದು ಹರಿಯಲ್ಲಿ ಕಟ್ಟಿದ ದುಡ್ಡನ್ನೋ, ತಿಂಡಿ ಪದಾರ್ಥವನ್ನೋ ಬಾಯಿಂದ ಕಚ್ಚಿ ಹರಿದು ತರಬೇಕು ಅಥವಾ ಜೋಕಾಲಿಯ ಕಾಲು ಮಣೆಯನ್ನಾದರೂ ಬಡಿಸಬೇಕು. ಇಂಥ ದೊಡ್ಡ ಮರ ಈಗ ಇಲ್ಲ. ನನ್ನ ತಮ್ಮ ನನಗೆ ತಿಳಿಸದೆ ಆ ಮರ ಕಡಿಸಿದಾಗ ನನಗಾದ ಕಳಕಳ ಅಷ್ಟಿಷ್ಟಲ್ಲ. ನಾಲ್ಕಾರು ದಿನ ಅನ್ನ ರುಚಿಸಲಿಲ್ಲ. ಈ ಮರದ ದೊಡ್ಡ ಜೋಕಾಲಿಯಲ್ಲಿ ಜೋಕಾಲಿಯನ್ನಾಡ ಬಂದ ಹೆಣ್ಣುಮಕ್ಕಳಿಬ್ಬಿಬ್ಬರನ್ನು ಕುಳ್ಳಿರಿಸಿ ಎರಡು ಹಗ್ಗಗಳನ್ನು ಕಟ್ಟಿ ಎಳೆದು ಜೋಕಾಲಿ ಆಡಿಸಿ ಕಳಿಸಬೇಕು. ಸ್ವತಃ ಯಾವ ಹೆಣ್ಣುಗಳು ಈ ಜೋಕಾಲಿಯನ್ನು ಜೀಕುವ ಸಾಹಸ ಮಾಡುತ್ತಿರಲಿಲ್ಲ. ಒಮ್ಮೊಮ್ಮೆ ನನ್ನನ್ನು ಮಾತ್ರ ಶ್ರದ್ಧೆಯಿಂದ ಕುಳ್ಳಿರಿಸಿ ಮೆತ್ತಗೆ ಜೋಕಾಲಿ ಆಡಿಸಿ ಕಳಿಸುತ್ತಿದ್ದರು. ಏಕೆಂದರೆ ಗಿಡವೂ ನಮ್ಮದು, ಹಿತ್ತಲೂ ನಮ್ಮದು ಎಂದಲ್ಲ. ನಮ್ಮ ಮನೆತನದ ಮೇಲಿನ, ನಮ್ಮ ತಂದೆ ತಾಯಿಗಳ ಮೇಲಿನ ಗೌರವಾದರಗಳಿಂದ ಮತ್ತು ನಾನು ಬಹಳ ಬುದ್ಧಿವಂತ ಎಂದೂ ಕೂಡ. ನನ್ನ ಬಗ್ಗೆ ಬಾಲ್ಯದಿಂದಲೆ ಊರವರು ಗೌರವ ತೋರಿಸುತ್ತಿದ್ದರು. ನಾಲ್ಕು ಐದನೇ ತರಗತಿಗಳಲ್ಲಿ ಓದುತ್ತಿರುವಾಗಲೇ ನನ್ನನ್ನು ಊರಿನಲ್ಲಿ ನಡೆಯುವ ಲಗ್ನಗಳ ಪತ್ರಿಕೆಗಳನ್ನು ಬರೆಯಲು ಕರೆದುಕೊಂಡು ಹೋಗಿ ಮರ್ಯಾದೆ ತೋರಿಸುತ್ತಿದ್ದುದುಂಟು. ಆಗ ಈಗಿನಂತೆ ಲಗ್ನ ಮುಂದಿರುವಾಗಲೇ ಮುದ್ರಿಸಿ ಊರೂರಿಗೆ ಕಳಿಸುತ್ತಿರಲಿಲ್ಲ. 3 ದಿವಸದ ಲಗ್ನಗಳೇ ಹೆಚ್ಚು. ಮೊದಲ ದಿನ ಲಗ್ನದ ಹಂದರ ಹಾಕುವರು. ಹಂದರ ಹಾಕುತ್ತಿದ್ದಂತೆ ಅಯ್ಯನವರು ಲಗ್ನ ಕಟ್ಟಿಸುವ ವಿಧಿ ನೆರವೇರಿಸಬೇಕು. ಅದೊಂದು ಸಡಗರದ ದೃಶ್ಯವಾಗಿ ನನಗೆ ಕಾಣುತ್ತಿತ್ತು. ಲಗ್ನ ಕಟ್ಟಿಸಿ ಹೊಸ ವಸ್ತ್ರದಲ್ಲಿ ಮಡಿಲಕ್ಕಿ ಗಂಟು ಕಟ್ಟಿ ಬರೆದು ಅರಿಶಿಣ ಕುಂಕುಮ ಹಚ್ಚಿದ ಲಗ್ನಪತ್ರಿಕೆ ತೆಗೆದುಕೊಂಡು ಹೆಣ್ಣಿನವರ ಮನೆಗೆ ಶೀಘ್ರವಾಗಿ ಹೋಗಿ ಬರುವ ಅಲಂಕೃತ ಎತ್ತು ಮತ್ತು ಚಕ್ಕಡಿ ಓಡಬೇಕು. ಹೆಣ್ಣು ರಾತ್ರಿಗೋ, ಮರುದಿನ ಬೆಳಿಗ್ಗೆಯೋ ಬಂದ ಮೇಲೆ ಲಗ್ನದ ವಿಧಿವತ್ತಾದ ಕಾರ್ಯಗಳು ಸತತ ಜರುಗುತ್ತಿರುತ್ತವೆ. ಬಹುಶಃ ಆಗ ಮದುವೆಗಳೆಲ್ಲ ಗಂಡಿನವರ ಮನೆಯ ಮುಂದೆಯೇ ನಡೆಯಬೇಕು. ಎಲ್ಲ ಖರ್ಚು ಗಂಡಿನವರದೇ. ಹೆಣ್ಣಿನವರಿಗೆ ಹೆಚ್ಚಿನ ಖರ್ಚು ಇಲ್ಲ. ಹೀಗೆ ನನ್ನ ಬರವಣಿಗೆಗೆ ಮೊದಲ ಸರ್ಟಿಫಿಕೇಟ್ ಸಿಕ್ಕಿದ್ದು ಬಾಲ್ಯದಲ್ಲಿಯೇ, ನಮ್ಮೂರ ಲಗ್ನದ ಸಮಾರಂಭಗಳಲ್ಲಿ.

**ಈಸುವ ಹವ್ಯಾಸ**

ಜೋಕಾಲಿಯನ್ನಾಡುವ ಹವ್ಯಾಸದಂತೆಯೇ ನನ್ನ ಅತ್ಯಂತ ಪ್ರೀತಿಯ ಇನ್ನೊಂದು ಹವ್ಯಾಸವೆಂದರೆ ನಮ್ಮ ಊರ ಹೊಳೆಯಲ್ಲಿ ಈಸುವ ಹವ್ಯಾಸ. ಬಹುಶಃ ಬಹಳ ಚಿಕ್ಕಂದಿನಲ್ಲೇ ಮೊಳಕಾಲುದ್ದದ ನೀರಿನಲ್ಲಿ ನಾನು ಈಸುವುದನ್ನು ಕಲಿತೆ. ಆರೇಳು ವರ್ಷದ ಹುಡುಗನಿದ್ದಾಗಲೇ ಚೆನ್ನಾಗಿ ಈಸುವುದನ್ನು ಕಲಿತ ನನಗೆ ಹೊಸದಾಗಿ ಕೋಡು ಮೂಡಿದ ಹೋರಿಯ ಕರುವು ಕಂಡ ಕಂಡ ದಿಬ್ಬಗಳನ್ನು ಕೆದರುತ್ತ ಕೋಡು ಮಣ್ಣಾಟವಾಡುವಂತೆ ನಮ್ಮೂರ ಹೊಳೆಯ ಮೂರು ನಾಲ್ಕು ಕಡೆಗಳಲ್ಲಿ ಈಸುವ ಹವ್ಯಾಸವನ್ನು ಹೆಚ್ಚಾಗಿ ಇಟ್ಟುಕೊಂಡೆ. ಈಸುವಿಕೆಯಲ್ಲಿ ನನ್ನ ಇಬ್ಬರು ಮಿತ್ರರು ನನಗಿಂತಲೂ ಉತ್ಸಾಹಿಗಳಾದ್ದರಿಂದ ದಿನವೂ ಶಾಲೆ ಬಿಟ್ಟ ಮೇಲೆ ಬಹಳ ಹೊತ್ತು ಈಸಾಡಿ ಬರದಿದ್ದರೆ ಶಾಂತಿಯಿರುತ್ತಿದ್ದಿಲ್ಲ. ರಜಾ ಇದ್ದ ದಿನಗಳಲ್ಲಂತೂ ಈಸಾಡುವುದಕ್ಕೆ ಆಗಾಗ ಹೋಗುತ್ತಿದ್ದುದುಂಟು. ಮಳೆಗಾಲ ಪ್ರಾರಂಭವಾಗುತ್ತಲೇ ನಮ್ಮ ಹೊಳೆ ಏರುವುದಕ್ಕೆ ಪ್ರಾರಂಭಿಸುತ್ತಿತ್ತು. ಆಗ ಒಡಲುದುಂಬಿ ಹೊಳೆ ಹರಿಯ ತೊಡಗಿದಾಗ ಒಂದು ದಂಡೆಯಿಂದ ಇನ್ನೊಂದು ದಂಡೆಗೆ ಈಸಿ ಬರುವ ಸಾಹಸದ ಕೆಲಸವನ್ನು ಪ್ರಾರಂಭಿಸುತ್ತಿದ್ದೆವು. ಅದೊಂದು ಭಾರಿ ಸಾಹಸದ ಕೆಲಸವಾಗಿರುತ್ತಿತ್ತು. ಆದರೆ ಅಷ್ಟೇ ಹೆದರಿಕೆಯೂ ಇರುತ್ತಿತ್ತು. ನಮ್ಮ ಹೊಳೆ ಚಿಕ್ಕದು. ಕಿರಿಯಗಲುಳ್ಳದ್ದು. ಆದರೆ ಸೆಳವು ಮಾತ್ರ ಬಹಳ. ಸೆಳವಿಗೆ ಸಿಕ್ಕುಹಾಕಿಕೊಂಡು ಹೋಗಿ ಯಾವುದಾದರೂ ಸುಳಿಗೆ ಸಿಕ್ಕಿದರೆ ಏನು ಎಂಬ ಹೆದರಿಕೆ ಇದ್ದೇ ಇರುತ್ತಿತ್ತು. ಹೀಗಾಗಿ ಎಲ್ಲೆಲ್ಲಿ ಸುಳಿಗಳಿವೆ, ಎಲ್ಲಿ ಈಸಲು ಹೋಗಬಾರದು, ಎಲ್ಲಿ ಈಸಬೇಕು ಎಂಬ ಸರ್ವೇ ಕೆಲಸವನ್ನು ಮಾಡುತ್ತಿದ್ದುದೂ ಉಂಟು. ಮೃಗಶಿರಾ. ಆರಿದ್ರಾ ಮಳೆಗಳ ಸಮಯಕ್ಕೆ ನಮ್ಮ ಹೊಳೆಯಲ್ಲಿ ಪ್ರವಾಹ ಹೆಚ್ಚಾಗಿ ಶ್ರಾವಣ ಮಾಸದಲ್ಲಿ ಪರಮಾವಧಿ ಪ್ರವಾಹ ಬರುತ್ತಿತ್ತು. ಮೃಗಶಿರಾ, ಆರಿದ್ರಾ ಮಳೆಗಳ ಕಾಲದಲ್ಲಿ ನೇರಳೆಹಣ್ಣುಗಳ ಸುಗ್ಗಿಯಲ್ಲವೆ? ಅತ್ತಿ, ನೇರಳೆ ಹಣ್ಣಿನ ಮರಗಳು ಹೊಳೆಯಿಂದ ಆಚೆ ಇರುತ್ತಿದ್ದವು. ಅಲ್ಲಿ ಹೋಗಬೇಕಾದರೆ ನಾವು ನಮ್ಮ ಅಂಗಿ ಪಂಜೆಗಳನ್ನು ತಲೆಗೆ ಕಟ್ಟಿಕೊಂಡು ಒಂದು ಕೌಪೀನ ಧರಿಸಿ ಹೊಳೆಗೆ ಬಿದ್ದು ದಾಟಿ ಹೋಗಿ ಆ ಹಣ್ಣುಗಳನ್ನು ಸಾಕಾಗುವಷ್ಟು ತಿಂದು ಬಟ್ಟೆಯಲ್ಲಿ ಕೆಲವೊಂದು ಹಣ್ಣುಗಳನ್ನು ಕಟ್ಟಿ ಗಂಟನ್ನು ತಲೆಗೆ ಬಿಗಿದುಕೊಂಡು ದಾಟಿ ಬರುತ್ತಿದ್ದೆವು. ಈ ವಿಷಯ ಮನೆಯಲ್ಲಿ ಗೊತ್ತಾಗಿ ಒಮ್ಮೊಮ್ಮೆ ನಮ್ಮ ತಾಯಿಯಿಂದ ಚೆನ್ನಾಗಿ ಏಟು ತಿಂದುದೂ ಜ್ಞಾಪಕ. ಆದರೆ ಈ ಸುದ್ದಿ ನಮ್ಮ ತಂದೆ ದೊಡ್ಡಪ್ಪಗಳವರೆಗೆ ಹೋಗದಂತೆ ಜಾಗರೂಕತೆ ವಹಿಸುತ್ತಿದ್ದೆವು.

ಒಮ್ಮೆ ಒಂದು ಭಾರಿ ಅಪಾಯದಿಂದ ಪಾರಾಗಿ ಬದುಕಿ ಉಳಿದದ್ದು ನನ್ನ ಪುಣ್ಯವೇ ಅನ್ನಬೇಕು. ಪಂಚಮಿ ಹಬ್ಬದ ಸಂದರ್ಭ. ಮನೆಯಲ್ಲಿ ವಿವಿಧ ಉಂಡಿಗಳು, ಉಸುಳಿಗಳನ್ನು ತಿಂದು ನಮ್ಮ ಹುಣಸೇಮರದ ಜೋಕಾಲಿಯನ್ನು ಮನದಣಿ ಜೀಕಿ ಬರಚಿಕ್ಕನ ಹೊಳೆ (ನಮ್ಮ ಹೊಳೆಯ ಒಂದು ಭಾಗಕ್ಕೆ ಈ ಹೆಸರು) ಯಲ್ಲಿ ಈಸಾಡಿ ಬರೋಣವೆಂದು ನಾಲ್ಕೈದು ಜನ ಮಾತನಾಡಿಕೊಂಡು ಬಂದೆವು. ಹೊಳೆ ಏರುತ್ತಲೇ ಇತ್ತು. ಒಡಲು ಮಿಕ್ಕ ಹೊಲಗಳಿಗೆ ಇನ್ನು ನುಗ್ಗಿದ್ದಿಲ್ಲ. ಈ ದಂಡೆಯಿಂದ ಆ ದಂಡೆಗೆ ಆ ದಂಡೆಯಿಂದ ಈ ದಂಡೆಗೆ ಈಸಿಬರುವ ಸ್ಪರ್ಧೆಯಿಂದ ಈಸುತ್ತಿದ್ದೆವು. ಒಂದು ಸಲ ನಾನು ಹೊಳೆಗೆ ದಿಬ್ಬದ ಮೇಲಿಂದ ಹಾರಿದ್ದೇ ತಡ, ನನ್ನ ಮೇಲೆಯೇ ಕಪನಹಳ್ಳಿ ಪಕ್ಕೀರ ಎಂಬುವ ಓರ್ವ ದಾಂಡಿಗ ನೇರವಾಗಿ ಹಾರಿ ಬಿಟ್ಟ. ನಾನು ತಳ ಸೇರಿ ಗಾಬರಿಗೊಂಡು ಇಂದು ಸತ್ತೆನೆಂದೇ ಭಾವಿಸಿದೆ. ಹೇಗೋ ನೀರು ಕುಡಿದು

ಗಾಬರಿಗೊಂಡು ಎರಡು ಮೂರು ಮಾರುಗಳ ಮುಂದೆ ಮೇಲೆದ್ದು ಅಳುತ್ತ ಪುನಃ ದಂಡೆಗೆ ವಾಪಸು ಬಂದು ಬಟ್ಟೆ. ನನ್ನ ಇನ್ನೊಬ್ಬ ಮಿತ್ರ ಕಪನಳ್ಳಿ ಪಕ್ಕೀರನನ್ನು ಹಿಡಿದು ಹೊಡೆಯುಲು ಪ್ರಾರಂಭಿಸಿದ : ಸತ್ತರೆ ಗತಿಯೇನು ಅಯೋಗ್ಯ ಸೂ..... ಮಗನೇ. ಇತ್ಯಾದಿ ಬೈಯುವುದಕ್ಕೆ ಪ್ರಾರಂಭಿಸಿದ. ಉಳಿದವರೂ ಪಕೀರನನ್ನು ಛೀಮಾರಿ ಹಾಕಿದರು. ಆ ದಿನ ಸ್ವಲ್ಪ ಹೆಚ್ಚು ಕಡಿಮೆ ಆಗಿದ್ದರೆ ನನ್ನ ಕೊನೆಯೇ ಆಗುತ್ತಿತ್ತು. ಅಂತು ಈ ಘಟನೆ ಇಂದಿಗೂ ನನ್ನ ಮನಸ್ಸಿನಲ್ಲಿ ಉಳಿದಿದೆ.

ಹೊಳೆ ತುಂಬಿ ಹರಿಯುತ್ತಿರುವ ಕಾಲದಲ್ಲಿ ನಮ್ಮ ಧರ್ಮಾಹೊಳೆ ನಮ್ಮೂರಿನಿಂದ ಕೆಲವೇ ಫರ್ಲಾಂಗುಗಳಲ್ಲಿ (ಕೇವಲ 3-4 ಫರ್ಲಾಂಗುಗಳಲ್ಲಿ) ಕೋಳೀರಪ್ಪನ ಮಟ್ಟಿಯ ಹತ್ತಿರ ವರದಾನದಿಗೆ ಸೇರುತ್ತಿರುವ ರುದ್ರ ಮನೋಹರ ದೃಶ್ಯಗಳನ್ನು ನೋಡಲು ಆಗಾಗ ನಾವು ಅವಕಾಶ ಕಲ್ಪಿಸಿಕೊಳ್ಳುತ್ತಿದ್ದೆವು. ಅಲ್ಲಿ ಜೀರಂಗಿ, ಪರಗಿ, ಕಾರಿ, ಎಲಕ್ಕಿ, ಅತ್ತಿ, ನೇರಳೆ ಮೊದಲಾದ ಮರಗಳನೇರಿ ಜೇನುಗಳನ್ನು ಹುಡುಕಿಕೊಂಡು ಹೋಗುತ್ತಿದ್ದುದುಂಟು. ಕೋಳೀರಪ್ಪನ ಮಟ್ಟಿ ಎಂದು ಹೇಳಿದೆ. ಇದು ಧರ್ಮಾ ವರದಾ ನದಿಗಳು ಕೂಡುವ ಸ್ಥಳದ ಎಡಗಡೆ ಮಗ್ಗುಲಲ್ಲಿ ಇದೆ. ಇದೇ ಸ್ಥಳದಲ್ಲಿ ಕೂಡಲ ಸಂಗಮೇಶ್ವರನ ಗುಡಿಯ ಹತ್ತಿರದಿಂದ ಹರಿಗೋಲು ಹಾಕಿ ಜನಗಳನ್ನು ದಾಟಿಸುತ್ತಾರೆ. ಬಂಕಾಪುರದಿಂದ ಹಾವೇರಿಗೆ ಪ್ರಾಚೀನ ಕಾಲದಲ್ಲಿ ಪ್ರವಾಸ ಮಾಡುವ ರಾಜಮಾರ್ಗವೂ ಇಲ್ಲಿಯೇ ಇದೆ. ಇಲ್ಲಿಯೇ ಹಿಂದಿನಿಂದಲೂ ಹೊಳೆ ದಾಟುತ್ತಿದ್ದ ಸ್ಥಳವೆಂದು ಹರಿಗೋಲು, ದೋಣಿ ಹಾಕಲು ಪರವಾನಗಿ ಕೊಡುತ್ತಾರೆ. ಇಲ್ಲಿಯೇ ಕೋಳೀರಪ್ಪ ಇರುವುದು. ಈ ಹೆಸರು ಆ ದೇವತೆಗೆ ಏಕೆ ಬಂತೋ ಗೊತ್ತಿಲ್ಲ. ಇದೊಂದು ರಾವು ಸ್ಥಳವೆಂದು ನಮ್ಮೂರಿನಲ್ಲಿ ಏನೇನೋ ಕಥೆ ಹೇಳುತ್ತಿದ್ದರು. ಕೋಳೀರಪ್ಪ ಎಂದರೆ ಆ ಮಟ್ಟಿಯಲ್ಲಿ ಒಂದು ಕಲ್ಲಿಗೆ ಸುಣ್ಣ, ಕೆಮ್ಮಣ್ಣು, ಅರಿಸಿನ, ಕುಂಕುಮ ಹಚ್ಚಿ ಅವರು ಇವರು ಪೂಜೆ ಮಾಡುವ ಒಂದು ಬಯಲು ವಿಗ್ರಹ. ವೀರಶೈವರೇನೂ ಪೂಜೆ ಮಾಡುತ್ತಿರಲಿಲ್ಲ. ಹಲ ಕೆಲವರು ಅಮಾವಾಸ್ಯೆ ಹುಣ್ಣಿಮೆಗಳಲ್ಲಿ ಪ್ರಾಣಿ ಬಲಿಕೊಡುತ್ತಾರಂತೆ. ನಾವು ಅಲ್ಲಿಗೆ ಹೋದಾಗಲೆಲ್ಲ ಎದೆ ಜಲ್ ಎಂದು ಹಾರತೊಡಗುತ್ತಿತ್ತು. ಅದು ಒಂದು ರಾವುಸ್ಥಳವೆಂದೂ ಭೂತ ಪ್ರೇತಗಳು ವಾಸಮಾಡುವ ಸ್ಥಳವೆಂದೂ ಹೇಳುತ್ತಿದ್ದ ಕಥೆಗಳೇ ಕಾರಣ. ಅಲ್ಲಿ ಪ್ರಾಣಿಗಳನ್ನು ಕೊಂದ ಗುರುತು ಇರುತ್ತಿದ್ದುದು ಇನ್ನೊಂದು ನಮ್ಮ ಅಸಹ್ಯಕ್ಕೆ ಕಾರಣವಾಗುತ್ತಿತ್ತು. ಈ ಕೋಳೀರಪ್ಪನ ಮೊಟ್ಟೆ (ದಿಬ್ಬ) ಹಾಗೂ ಸುತ್ತಮುತ್ತಲ ಪ್ರದೇಶದಲ್ಲಿ ಬಹುಶಃ ಬಹಳ ಪ್ರಾಚೀನ ಕಾಲದಲ್ಲಿ ಒಂದು ಊರು ಇದ್ದು ಕಾರಣಾಂತರದಿಂದ ಅದು ಹಾಳಾಗಿ ಹೋಗಿರಬಹುದೆಂದು ಈಗ ನನಗೆ ಅನ್ನಿಸುತ್ತದೆ. ಏಕೆಂದರೆ ಅಲ್ಲಿ ಹಾಳುಹಂಚಿನ ಚೂರು, ಕುಡಿಕೆ ಮಡಿಕೆಗಳು ನೆಲದಲ್ಲಿ ಕಾಣುತ್ತಿದ್ದುದು ಮತ್ತು ಹಾಳುಮಣ್ಣಿನಿಂದ ಸುತ್ತ ಮುತ್ತಣ ಹೊಲಗಳು ಒಳ್ಳೆ ಫಲವತ್ತಾಗಿ ಬೆಳೆಬರುವುದು. ಸುಮಾರು ½ ಕಿಲೋಮೀಟರ್ ಚದರದ ಈ ಭೂಭಾಗದಲ್ಲಿ ಏನೇನೋ ವಿಚಿತ್ರವಾದ ಪದಾರ್ಥಗಳು ಆಗಾಗ ಜನರಿಗೆ ಸಿಗುತ್ತಿದ್ದುದು, ಕೆಲವರಿಗೆ ಆಗಾಗ ಬಂಗಾರದ ಚೂರುಗಳು ನಾಣ್ಯಗಳು ಸಿಗುತ್ತಿದ್ದುದೂ ಉಂಟು. ನಮಗೂ ಒಮ್ಮೊಮ್ಮೆ ತಾಮ್ರದ ಕೆಲವು ನಗಾಗಳಂಥ ವಸ್ತುಗಳು ಸಿಗುತ್ತಿದ್ದವು. ಅವುಗಳಿಗೆ ಆಗಿನ ಮಾರ್ಕೆಟ್‌ನಲ್ಲಿ ಬೆಲೆಯೇ ಇರುತ್ತಿದ್ದಿಲ್ಲವಾದ್ದರಿಂದ ಮನೆಗೆ ತಂದು ನಮ್ಮ ತಾಯಿಯ ಕೈಲಿ ಕೊಡುತ್ತಿದ್ದುದುಂಟು. ಅವರು ಅವನ್ನು ಎಣ್ಣೆಗೂಡಿಗೆ ಎಸೆದು ಬಿಡುತ್ತಿದ್ದರು. ಈಗ ನಮಗೆ ಅವುಗಳ ಐತಿಹಾಸಿಕತೆಯ ಬಗ್ಗೆ ಗಮನ ಬರುತ್ತಿದೆ. ಆಗ ಆ ಗಮನ ನಮಗೆ ಬರುತ್ತಿರಲಿಲ್ಲ; ಬರಲೂ ಸಾಧ್ಯವಿದ್ದಿಲ್ಲ.

ಈ ಭಾಗದಲ್ಲಿ ದುಡ್ಡು ವಗೈರೆ ಸಿಗುತ್ತದೆಂಬ ಭಾವನೆ ದೊಡ್ಡವರಲ್ಲೂ ಇರುತ್ತಿತ್ತು. ಇದಕ್ಕೊಂದು ಸಂದರ್ಭ ನಡೆದದ್ದು ಇಂದೂ ಜ್ಞಾಪಕವಿದೆ. ಈ ಭಾಗದ ಹೊಲದಲ್ಲಿ ಒಮ್ಮೆ ಒಬ್ಬರು ರಂಟೆ ಹೊಡೆಯುವಾಗ ರಂಟೆ ಕೆಳಗಿನ ಒಂದು ಕಲ್ಲಿನ ತಳಕ್ಕೆ ಸಿಕ್ಕಿ ಹಾಕಿಕೊಂಡುಬಿಟ್ಟಿತು. ಆಗ ಅವನು ಸಿಕ್ಕಿ ಹಾಕಿಕೊಂಡ ರಂಟೆಯನ್ನು ಹೊರಗೆ ತೆಗೆಯಲು ಪ್ರಯತ್ನಿಸುವಾಗ ದೊಡ್ಡ ಒಂದು ಚಪ್ಪಡಿಕಲ್ಲು ಸಿಕ್ಕಿತು. ಸುತ್ತಲೂ ಕಲ್ಲು ಕಟ್ಟಡವೂ ಕಂಡಿತು. ಆಗ ಅವನ ಭಾವನೆಗೆ ಬಂದುದು ಇದು ದುಡ್ಡು ಹೂಳಿದ ಸ್ಥಳವಾಗಿರಬಹುದು ಎಂಬುದು. ಊರಿನಲ್ಲಿ ಗುಪ್ತವಾಗಿ ನಾಲ್ಕಾರು ಜನಗಳಿಗೆ ವಿಷಯ ತಿಳಿಸಿ ರಾತ್ರಿ ಅಲ್ಲಿ ನೆಲ ಅಗಿಯಲು ಹಾರಿಗುದ್ದಲಿಗಳು, ಜೀರದುಂಬಿ ಒಬ್ಬ ಮಂತ್ರವಾದಿ ಇವರನ್ನೆಲ್ಲ ಜೊತೆ ಮಾಡಿಕೊಂಡು ಪೂಜಾ ಸಾಮಗ್ರಿಗಳೊಡನೆ ರಾತ್ರಿ ಹೋದರು. ಅವರಲ್ಲಿ ನಮ್ಮ ತಂದೆಯೂ ಒಬ್ಬ. ರಾತ್ರಿಯೆಲ್ಲ ನೆಲವನ್ನು ಅಗಿದದ್ದೇ ಅಗಿದದ್ದು. ಆದರೂ ಅವರಿಗೆ ಭಯ. ಅಗಿದಂತೆ ಕಲ್ಲು ಚಪ್ಪಡಿಯ ಕೆಳಗೆ ದೊಡ್ಡ ಒಂದು ಹಗೆ ಸಿಕ್ಕಿತು. ಆಗ ಅವರಿಗೆ ಆದ ಆನಂದ ಅಷ್ಟಿಷ್ಟಲ್ಲ. ಹಗೆಯ ಒಳಗಡೆ ಬಹಳಷ್ಟು ದ್ರವ್ಯವಿದೆ ಎಂಬುದೇ ಅವರ ಆನಂದಕ್ಕೆ ಕಾರಣವಾಗಿತ್ತು. ಭಯಕ್ಕೆ ಕಾರಣ ಈ ದ್ರವ್ಯವನ್ನು ಕಾಯಲು ಯಾವುದೋ ರಾಕ್ಷಸ ಅಥವಾ ಹಾವು ಇತ್ಯಾದಿಗಳು ಎಲ್ಲೋ ಅಡಗಿ ಕುಳಿತಿರುತ್ತವೆ ಎಂಬುದು. ಮಂತ್ರವಾದಿಯ ಮಂತ್ರ ಜೋರಾಗಿಯೇ ಇತ್ತು. ಲಿಂಬೆಹಣ್ಣು, ಬಾಳೆಹಣ್ಣು, ತೆಂಗಿನ ಕಾಯಿಗಳನ್ನು ಹೆಜ್ಜೆ ಹೆಜ್ಜೆಗೆ ಅವನು ಒಡೆಒಡೆದು ಪೂಜೆ ಮಾಡುತ್ತಲೇ ಇದ್ದ. ಕೊನೆಗೆ ಅವರಿಗೆಲ್ಲ ಸಿಕ್ಕಿದ್ದು ಒಂದು ದಪ್ಪನಾದ ಮಣ್ಣಿನ ಗುಡಾಣ, ಅದರಲ್ಲಿ ಮೂಳೆಗಳು ಮಾತ್ರ. ಆಗಲೂ ಅವರ ಭಾವನೆ ಇವು ಮೂಳೆಗಳಲ್ಲ ಬಂಗಾರವೇ ಆಗಿರಬೇಕು. ನಮ್ಮ ಕಣ್ಣಿಗೆ ಇವು ಈಗ ಮೂಳೆಗಳಾಗಿ ಕಾಣುತ್ತಿವೆ. ಯಾರದೋ ಕಣ್ಣಿಗೆ ಇವು ಬಂಗಾರವಾಗಿ ಕಾಣುತ್ತವೆ ಎಂದು ಭಾವಿಸಿದರು. ಅಗೆದುದ್ದನ್ನು ಹಾಗೆಯೇ ಮುಚ್ಚಿ ಕೆಲವು ಮೂಳೆ ತುಂಡನ್ನು ತೆಗೆದುಕೊಂಡು ಬಂದು ಮನೆಯ ಬಾಗಿಲ ಮುಂದೆ ಎಲ್ಲರೂ ಕಾಣುವಂತೆ ಆ ಮೂಳೆಯ ತುಂಡನ್ನು ತೂಗು ಹಾಕಿದರು. ನಮ್ಮ ಮನೆಯ ಮುಂದೆಯೂ ನಮ್ಮಪ್ಪ ಒಂದು ದೊಡ್ಡ ಮೂಳೆಯ ತುಂಡನ್ನೂ ತೂಗು ಹಾಕಿ ನನಗೆ 'ತಮ್ಮ ನೀನು ಬಾಗಿಲ ಮುಂದೆಯೇ ಕುಳಿತಿರು. ಯಾರಾದರೂ ಬಂದು ಇದೇನು ಬಾಗಿಲ ಮುಂದೆ ಬಂಗಾರ ತೂಗು ಹಾಕಿದ್ದೀರಲ್ಲ ಎಂದರೆ ಆ ಕೂಡಲೆ ನನಗೆ ತಿಳಿಸು' ಎಂದು ಹೇಳಿದ್ದ. ನಾನು ನಾಲ್ಕಾರುದಿನ ಬಾಗಿಲಲ್ಲೇ ಕುಳಿತು ಕಾಯುತ್ತಿದ್ದೆ. ಆದರೆ ಯಾರೂ ಇದು ಬಂಗಾರವೆಂದು ಹೇಳಲೇ ಇಲ್ಲ. ಇಲ್ಲೇಕೆ ಈ ಮೂಳೆ ತೂಗು ಹಾಕಿದ್ದೀರಿ ಎಂದು ಕೇಳುವರೇ ಆದರು. ನನಗೆ ಹೇಳಿ ಹೇಳಿ ಸಾಕಾಯಿತು. ಕೊನೆಗೆ ಒಂದು ದಿನ ಅದನ್ನು ಕಿತ್ತು ಬಿಸಾಡಿದ್ದೂ ಉಂಟು. ಈಗ ನನಗೆ ಅನ್ನಿಸುತ್ತದೆ ಬಹು ಪ್ರಾಚೀನ ಕಾಲದಲ್ಲಿ ಸತ್ತವರನ್ನು ದೊಡ್ಡ ದೊಡ್ಡ ಮಣ್ಣಿನ ಗುಡಾಣಗಳಲ್ಲಿ ಹಾಕಿ ಹೂಣುತ್ತಿದ್ದರು ಚಿತ್ರದುರ್ಗದ ಹತ್ತಿರ ಚಂದ್ರವಳ್ಳಿ ಮೊದಲಾದ ಕಡೆಗಳಲ್ಲಿ ಇಂಥ ಅನೇಕ ಅವಶೇಷಗಳು ಸಿಕ್ಕಿವೆಯಲ್ಲವೇ? ಈ ಕಾರಣದಿಂದ ನಮ್ಮೂರ ಹತ್ತಿರವೂ ಪ್ರಾಚೀನ ನಗರವೊಂದು ಇದ್ದು ಹಾಳಾದದ್ದು ಚಾರಿತ್ರಿಕ ಸತ್ಯ.

### ತೆವರಮೆಳ್ಳಳ್ಳಿ ಶಾಲೆಯಲ್ಲಿ ಓದುತ್ತಿರುವಾಗ

ನಾನು ನಮ್ಮೂರಿನಲ್ಲಿ ನಾಲ್ಕನೇ ಇಯತ್ತೆ ಪಾಸಾಗಿ ಐದನೆಯ ಇಯತ್ತೆಯಲ್ಲಿ ಓದಲು ತೆವರಮೆಳ್ಳಳ್ಳಿ ಶಾಲೆಗೆ ಹೋಗುತ್ತಿದ್ದೆನೆಂದು ಈ ಪೂರ್ವದಲ್ಲಿಯೇ ಹೇಳಿದೆನಲ್ಲವೆ? ಈ ಕಾಲದ್ದಿನ್ನು ಅನೇಕ ನೆನಪುಗಳು ಇಂದಿಗೂ ಹಚ್ಚ ಹಸುರಾಗಿಯೇ ಇವೆ. ಬಹುಮಟ್ಟಿಗೆ ಈ ಕಾಲದಲ್ಲಿ

ನಾನು ಅಪಾರ ಅನುಭವ ಗಳಿಸಿದೆನೆಂದರೆ ಸುಳ್ಳಲ್ಲ. ನನ್ನ ಅಭಿರುಚಿಗಳು ಅಪಾರವಾಗಿ ಬೆಳೆದದ್ದು ಆಗಲೇ.

ಹಿತ್ತಲಲ್ಲಿ ತರಕಾರಿ ತೋಟ ಮಾಡಿದ್ದು ಜ್ಞಾಪಕಕ್ಕೆ ಬರುತ್ತಿದೆ. ನಮ್ಮದು ಚಿಕ್ಕ ಹಿತ್ತಿಲು. ಅದರ ಸುತ್ತ ಬೇಲಿಯನ್ನು ಕೇವಲ ಹನ್ನೊಂದನೆಯ ವಯಸ್ಸಿನಲ್ಲಿ ನಾನೇ ಕಷ್ಟ ಪಟ್ಟು ಮುಳ್ಳು ಕಡಿದು ತಂದು ಚಿಕ್ಕತರಕಾರಿ ತೋಟ ಮಾಡಿದುದು ನನಗೆ ತುಂಬಾ ಸಂತೋಷವನ್ನುಂಟು ಮಾಡಿದ ಅಂಶ. ಅದರಲ್ಲಿ ಬದನೆಗಿಡಗಳು ಎಳೆಂಟು. ಒಂದು ಗೊಂಚಲು ಹೀರೇಬಳ್ಳಿ, ಸ್ವಲ್ಪ ಮೆಂತೆ ಸೊಪ್ಪಿನ ಮಡಿ, ಸ್ವಲ್ಪ ಕೊತ್ತಂಬ್ರಿ, ಒಂದು ಮೂಲೆಯಲ್ಲಿ ಉಳ್ಳೆಗಡ್ಡಿಯ ಪಣಜು ಹಚ್ಚಿದ್ದೆ. ಮುಳಗಾಯಗಿಡ ಬಹಳ ಚೆನ್ನಾಗಿ ಬೆಳೆದವು. ಮಳೆಗಾಲದಲ್ಲಿ ಈ ತೋಟ ಮಾಡಿದ್ದರಿಂದ ನೀರು ಹೊತ್ತು ಹಾಕುವ ಶ್ರಮವೊಂದನ್ನು ಬಿಟ್ಟರೆ, ಉಳಿದ ಎಲ್ಲ ಕೆಲಸ ಕಾರ್ಯಗಳನ್ನೂ ನಾನೇ ಮಾಡಿದೆ. ಇದು ಬಾಲ್ಯದಲ್ಲಿಯೇ ನನ್ನಲ್ಲಿ ಭಾರೀ ಆತ್ಮಪ್ರತ್ಯಯವನ್ನುಂಟುಮಾಡಿತು. ದಿನಾಲು ಶಾಲೆಬಿಟ್ಟ ಮೇಲೆ ಮನೆಗೆ ಬಂದು ರೊಟ್ಟಿಯನ್ನು ಈ ತೋಟದ ಮಧ್ಯದಲ್ಲಿಯೇ ಕುಳಿತು ತಿನ್ನುತ್ತಿದ್ದೆ. ಹೊಸದಾಗಿ ಬದನೆಗಿಡ ಹೀಚು ಬಿಟ್ಟಿತು. ಪ್ರತಿದಿನ ಬೆಳಿಗ್ಗೆ ಹೀಚು ಎಷ್ಟು ದಪ್ಪನಾಗಿದೆ ಎಂಬುದನ್ನು ಗಮನಿಸುವುದರಲ್ಲೇ ನನಗೆ ಎಲ್ಲಿಲ್ಲದ ಆನಂದವಾಗುತ್ತಿತ್ತು. ತಾವು ನೆಟ್ಟ ಗಿಡ ಪ್ರಥಮ ಫಲಕೊಟ್ಟಾಗ ಉಂಟಾಗುವ ಸಂತೋಷವೆಂತಹುದೆಂಬುದನ್ನು ಗಿಡ ನೆಟ್ಟೇ ಅನುಭವಿಸಬೇಕು. ಮೊದಲ ಕಾಯಿ ಬಹಳ ದಪ್ಪವೂ ಆಯಿತು. ಮೊದಲು ಬಿಟ್ಟ ಆ ಕಾಯಿ ದೊಡ್ಡದಾದ ಮೇಲೆ ಅದನ್ನು ಹರಿದುತಂದು ಪಲ್ಯ ಮಾಡಿ ನಮ್ಮ ಮನೆಯ ಪಕ್ಕದಲ್ಲೇ ಬಾಲ್ಯದಿಂದ ನನ್ನ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಬೀರಿದ್ದ ಶಿವಾಲಯಕ್ಕೆ (ಕಲ್ಲಪ್ಪನ ಗುಡಿ) ಎಡೆಮಾಡಿತಂದು ತಿಂದುದೊಂದು ಮಹತ್ಸಾಧನೆಯ ಫಲವಾಗಿ ಕಂಡಿತು. ಗೊಂಚಲು ಹೀರೆಬಳ್ಳಿಗೆ ನಾನೇ ಒಂದು ಚಿಕ್ಕ ಹಂದರ ಹಾಕಿ ಆ ಹಂದರಕ್ಕೆ ಬಳ್ಳಿಯನ್ನು ಹಬ್ಬಿಸಿದ್ದೆ. ಅದು ಕಾಯಿ ಬಿಡುವುದಕ್ಕೆ ಪ್ರಾರಂಭಿಸಿದ ಮೇಲಂತೂ ನಮ್ಮ ಮನೆಯವರಿಗೆ ಆ ಕಾಯಿಯ ಪಲ್ಲೆ ತಿಂದು ತಿಂದು ಬೇಸರವಾಗಿ ಹೋಗಿತ್ತು. ಅಷ್ಟು ಕಾಯಿಬಿಟ್ಟಿತು. ಕೋತಂಬ್ರಿ, ಉಳ್ಳೇಗಡ್ಡಿಯ ಹಸಿರು ತೊಪ್ಪಲನ್ನು ರೊಟ್ಟಿಯ ಜೊತೆಗೆ ನಂಚಿ ತಿನ್ನುತ್ತಿದ್ದೆನು. ಒಮ್ಮೆ ನನ್ನ ಈ ತೋಟವನ್ನು ಯಾವುದೋ ಆಡು ಹೊಕ್ಕು ಹಾಳು ಮಾಡಿದ್ದನ್ನು ಕಂಡು ಸಂಕಟಪಟ್ಟು ಮನೆಯವರ ಮೇಲೆಲ್ಲ ಸಿಟ್ಟು ಮಾಡಿಕೊಂಡು ಅತ್ತುಕರೆದು ಬೈದಾಡಿ ಊಟಬಿಟ್ಟು ಮಲಗಿದ್ದು ಇನ್ನೂ ಜ್ಞಾಪಕ. ಇದಾದ ಮೇಲೆ 2 ದಿನ ಶಾಲೆ ಬಿಟ್ಟ ಮೇಲೆ ಮುಳ್ಳು ಕಡಿದು ತಂದು ಬೇಲಿ ಹಾಕಿಬಿಟ್ಟೆ. ಈ ತೋಟ ನನ್ನಲ್ಲಿ ವ್ಯವಸಾಯದ ಮೇಲೆ ಭಕ್ತಿಯನ್ನು ಪ್ರೀತಿಯನ್ನು ಉಂಟುಮಾಡಿತು. ಈ ಭಕ್ತಿಯ ಫಲವಾಗಿಯೇ ನಾನು ಮುಲ್ಕೀ ಪರೀಕ್ಷೆ ಪಾಸಾದ ಮೇಲೆ ಬಹುಯಶಸ್ವಿಯಾಗಿ 3-4 ವರ್ಷ ವ್ಯವಸಾಯ ಮಾಡುವುದಕ್ಕೆ ಪ್ರೇರಣೆ ಒದಗಿಸಿತು. ವ್ಯವಸಾಯಕ್ಕೆ ಸಾಕಷ್ಟು ಭೂಮಿಯಿಲ್ಲದ ಕಾರಣವೇ ನಾನು ಬೇರೆ ಉದ್ಯೋಗ ಹುಡುಕಿಕೊಂಡು ಮನೆಯಿಂದ ಹಿಡಿಯಬೇಕಾಯಿತು. ಇಲ್ಲದಿದ್ದರೆ ನಾನು ವ್ಯವಸಾಯಗಾರ ತಾನೇ ಆಗಬೇಕಾಗಿತ್ತು?

**ಪ್ರಕೃತಿಯೊಡನೆ ಪ್ರಕೃತಿಯಾಗಿ ಬೆಳೆದೆ**

ಬಾಲ್ಯದಿಂದಲೇ ನಾನು ಪ್ರಕೃತಿಯೊಡನೆ ಪ್ರಕೃತಿಯಾಗಿ ಬೆಳೆದವನು. ಐದಾರುನೂರು ಜನ ವಸತಿಯುಳ್ಳ ನಮ್ಮ ಊರಿನವರೆಲ್ಲರ ಮುಖ್ಯಕಸಬು ವ್ಯವಸಾಯವೇ. ನಾಲ್ಕೈದು ಜನ ನಾವು ಮೆಳ್ಳಿ ಸಾಲೆಗೆ ಹೋಗುವವರು ಎಲ್ಲರೂ ಸೇರಿ ಹೋಗುವಾಗಲೆಲ್ಲ ಫಲವತ್ತಾದ

ಭೂಭಾಗದಲ್ಲಿ ಬೆಳೆದ ಹತ್ತಿ, ಜೋಳ, ಗೋಧಿ, ಬಟಗಡಲೆ, ಕೋತಂಬ್ರಿ ಮುಂತಾದ ಎರೆಹೊಲದ ಬೆಳೆಗಳ ಮಧ್ಯದಲ್ಲಿಯೇ ಸದಾ ಸ್ನೇಹ. ಆಷಾಢ ಮಾಸದಿಂದ ಮಾಘ ಮಾಸದ ವರೆಗೆ 8 ತಿಂಗಳು ನಾವು ಒಂದಿಲ್ಲೊಂದು ಬೆಳೆಗಳನ್ನು ನಮ್ಮ ಎರೆ ಜಮೀನಿನಲ್ಲಿ ಕಾಣುತ್ತಿದ್ದೆವು. ದಿನವೂ ಬೆಳಿಗ್ಗೆ ಸಾಲೆಗೆ ರೊಟ್ಟಿಕಟ್ಟಿಕೊಂಡು ಹೋಗಿ ಮಳ್ಳಳ್ಳಿಯಲ್ಲಿ ನಮ್ಮ ಗುರುತಿನವರ ಮನೆಯಲ್ಲಿ ರೊಟ್ಟಿಗಂಟನ್ನಿಟ್ಟು ಮಧ್ಯಾಹ್ನ ಶಾಲೆಬಿಟ್ಟ ಮೇಲೆ ಕಂಡವರ ಮನೆ ಕಟ್ಟೆಯ ಮೇಲೆ ಕುಳಿತು ರೊಟ್ಟಿ ತಿಂದು ನೀರು ಕುಡಿದು ಪುನಃ 2 ಘಂಟೆ ಸುಮಾರಿಗೆ ಶಾಲೆ ಮುಗಿಸಿಕೊಕಂಡು 6 ಘಂಟೆ ಹೊತ್ತಿಗೆ ಮನೆಗೆ ಬರುತ್ತಿದ್ದೆವು. ಬರಬರುತ್ತ ರೊಟ್ಟಿಯನ್ನು ಕಂಡವರ ಮನೆಯಲ್ಲಿಟ್ಟು ಅವರಿಗೆ ತೊಂದರೆ ಕೊಟ್ಟು ಅಲ್ಲಿ ಊಟ ಮಾಡುವುದಾಗಲಿ, ನಮ್ಮ ಬಡರೊಟ್ಟಿಗಂಟಿನ ಮೌಲ್ಯಮಾಪನ ಮಾಡಲು ಕಂಡ ಕಂಡವರಿಗೆ ಅವಕಾಶಕೊಡುವುದನ್ನು ತಪ್ಪಿಸುವ ಉಪಾಯ ಹುಡುಕಿದೆವು. ನಮ್ಮೂರಿಗೂ ಮೆಳ್ಳಳ್ಳಿಗೂ ಮಧ್ಯದಲ್ಲಿರುವ ಹಳ್ಳದಲ್ಲಿ ಸದಾ ನೀರು ಹರಿಯುತ್ತಿತ್ತು. ನೀರು ಹರಿಯದಿದ್ದಾಗ ಒರತೆಗಳನ್ನು ಕಯ್ಯಿಂದಲೇ ತೋಡಿ ಹತ್ತು ನಿಮಿಷಗಳಲ್ಲಿಯೇ ಅರ್ಜುನನಂತೆ ಭೂಗರ್ಭದ ಜಲವನ್ನೇ ಹೊರಚಿಮ್ಮಿಸುವ ಜಾಣ್ಮೆಯೂ ನಮ್ಮಲ್ಲಿತ್ತು. ಆದ್ದರಿಂದ ರೊಟ್ಟಿಯ ಗಂಟನ್ನು ಕಳ್ಳಿಸಾಲಿನ ಮಧ್ಯದಲ್ಲಿ, ಕರಡದ ಹುಲ್ಲಿನ ಮಧ್ಯದಲ್ಲಿ ಯಾರಿಗೂ ಗೊತ್ತಾಗದ್ದಂತೆ ಇಟ್ಟು ಶಾಲೆಬಿಟ್ಟ ಮೇಲೆ ಬಂದು ಹಳ್ಳದ ನಿರ್ಮಲ ವಾತಾವರಣದಲ್ಲಿ ಏಕೆ ತಿನ್ನಬಾರದೆಂದು ಯೋಚಿಸಿ. ಕಳ್ಳಿಸಾಲಿನಲ್ಲಿ ರೊಟ್ಟಿಯನ್ನು ದಿನದಿನವೂ ಸ್ಥಳ ಬದಲಾಯಿಸಿ, ಯಾರಿಗೂ ಗೊತ್ತಾಗದಂತೆ ಇಟ್ಟು ಹೋಗುತ್ತಿದ್ದೆವು. ಮಧ್ಯಾಹ್ನ ಬಂದು ಹಳ್ಳದಲ್ಲಿ ಕೈಕಾಲು ಮುಖತೊಳೆದು ರೊಟ್ಟಿಯನ್ನು ಪ್ರಕೃತಿಯ ಮಧ್ಯದಲ್ಲಿ ಅರಣ್ಯದ ಮೃಗಪಕ್ಷಿಗಳು ಸ್ವಚ್ಛಂದವಾಗಿ ಚಲಿಸಿ ಆನಂದ ಪಡುವಂತೆ ನಾವೂ ಪ್ರಕೃತಿ ಮಧ್ಯದಲ್ಲೆ ದಿನದಿನವೂ ಊಟವನ್ನು ಹೊಲಗಳಲ್ಲೆಲ್ಲ ಓಡಾಡಿಕೊಂಡು ರೊಟ್ಟಿಯ ಜೊತೆಗೆ ಹಕ್ಕರಿಕೆ ಸೊಪ್ಪು, ಕೋತಂಬ್ರಿ ಸೊಪ್ಪು, ಹಸಿಯ ಬೆಂಡೆಕಾಯಿ, ಮಿಳ್ಳೆಕಾಯಿ, ಹಸಿಮೆಣಸಿನ ಕಾಯಿ, ಹಸಿಹೆಸರುಕಾಯಿ ಮೊದಲಾದವನ್ನು ಕಂಡಕಂಡಲ್ಲಿ ಹರಿದು ತಿನ್ನುತ್ತ ರೊಟ್ಟಿಯನ್ನು ಮುಗಿಸಿ ಹಳ್ಳದ ನೀರು ಕುಡಿದು ಬೇವು, ಬನ್ನಿ ಮರಗಳ ನೆಳಲು ಹುಡುಕಿ ಹೋಗಿ ಅಲ್ಲಿ ವಿಶ್ರಾಂತಿ ಪಡೆಯುತ್ತಿದ್ದೆವು. ರೊಟ್ಟಿಯನ್ನು ಕಳ್ಳಿಸಾಲಿನಲ್ಲಿ ಇಟ್ಟು ಬರುತ್ತಿದ್ದ ಗುಟ್ಟು ಮಾತ್ರ ಯಾರಿಗೂ ಗೊತ್ತಾಗದ ಹಾಗೆ ಅತಿ ರಹಸ್ಯವಾಗಿಯೇ ಇರುತ್ತಿತ್ತು. ಹೀಗೆ ಕೆಲವು ದಿನ ಉರುಳಿ ಹೋದವು. ಈ ಕಾಲದಲ್ಲಿಯೇ ನನಗೆ ಯಕ್ಷಗಾನ ದೊಡ್ಡಾಟದ ವಿಷಯದಲ್ಲಿ ಎಲ್ಲಿಲ್ಲದ ಆಸಕ್ತಿ ಬೆಳೆದಿತ್ತು. ಯಾವ ಊರಿನಿಂದಲೋ ತಂದಿದ್ದ ತ್ರಿಪುರಸಂಹಾರ ಕಥೆಯನ್ನು ದಾನಣ್ಣನವರ ಹೊಲದಲ್ಲಿ ಹಾಳುಬಾವಿಯಲ್ಲಿ ಕುಳಿತು ಅನೇಕ ದಿನಗಳು ಆ ದೊಡ್ಡಾಟದ ಪ್ರಸಂಗಗಳನ್ನೆಲ್ಲ ಬರೆದು ನಮ್ಮೂರ್ರವರಿಂದ ಶಾಬಾಸ್‌ಗಿರಿ ಪಡೆದದ್ದೊಂದು ದೊಡ್ಡ ಇತಿಹಾಸ.

ನಾವು ರಹಸ್ಯವಾಗಿ ಇಡುತ್ತಿದ್ದ ನಾಲ್ಕೈದು ಜನಗಳ ರೊಟ್ಟಿಯ ಗಂಟು ಮನುಷ್ಯ ಮಾತ್ರಕ್ಕೆ ಗೊತ್ತಾಗದಿದ್ದರೂ ನರಿಗಳು ಮಾತ್ರ ಒಂದು ದಿನ ನಮ್ಮ ಗುಟ್ಟನ್ನು ರಟ್ಟು ಮಾಡಿಬಿಟ್ಟವು. ಸಾಲೆ ಬಿಟ್ಟ ಮೇಲೆ ಮಧ್ಯಾಹ್ನ 12 ಘಂಟೆಯ ಸುಮಾರಿಗೆ ಒಂದು ನಮ್ಮ ಅತಿರಹಸ್ಯ ಸ್ಥಳದಲ್ಲಿನ ರೊಟ್ಟಿಗಂಟನೆಲ್ಲ ಚಲ್ಲಾಪಿಲ್ಲಿ ಮಾಡಿ ರೊಟ್ಟಿಗಳನ್ನು ತಿಂದು ಮಾಡಿ ಅಧ್ವಾನ ಮಾಡಿಬಿಟ್ಟದ್ದವು. ಇನ್ನು ಊಟಕ್ಕೆ ಮಾಡಬೇಕೇನು? ಈ ವಿಷಯವನ್ನು ಯಾರೆದುರಿಗೂ ಹೇಳುವಂತಿರಲಿಲ್ಲ. ಅದಕ್ಕಾಗಿ ಕೆಲವರು ಹೆಸರುಕಾಯಿ ಹುಡುಕಿಕೊಂಡು ಹೋದರು. ನಾನು

ಇನ್ನಿಬ್ಬರನ್ನು ಕೂಡಿಕೊಂಡು ಜೇನು ಹುಡುಕಿಕೊಂಡು ಹೋದೆ. ಹಾನಣ್ಣನವರ ಹಾಲಪ್ಪ ಮೆಳ್ಳಳ್ಳಿಯ ದೊಡ್ಡರೈತ. ಅವನ ಹೊಲದಲ್ಲಿ ದೊಡ್ಡದೊಂದು ಆರಿಮರ (ಆಸಮರ)ವಿತ್ತು. ಅದರ ಪಕಕ್ಕೆ ಹೋದೆವು. ಅಲ್ಲಿಗೆ ಹೋಗಲು ಕಾರಣವೂ ಇತ್ತು. ಜೇನುಹುಳುಗಳು ಯಾವ ಮಾರ್ಗವಾಗಿ ಹೋಗುತ್ತವೆ, ಎತ್ತ ಕಡೆಯಿಂದ ಬರುತ್ತವೆ ಎಂಬುದನ್ನು ಗಮನಿಸಿ ಬಹುಶಃ ಇಂಥ ದಿಕ್ಕಿನಲ್ಲಿ ಜೇನು ಇರಲೇಬೇಕೆಂಬ ತೀರ್ಮಾನ ಕೈಕೊಳ್ಳುವಲ್ಲಿ ಆ ಹೊತ್ತಿಗಾಗಲೆ ಬಹಳ ನಿಷ್ಣಾತರಾಗಿ ಬಿಟ್ಟಿದ್ದೆವು. ಚೆನ್ನಾಗಿ ಬೆಳೆದುನಿಂತ ಕಬ್ಬಿನ ತೋಟದೋಪಾದಿಯಲ್ಲಿರುವ ಜೋಳದ ನಿಲುವಿನ ಮಧ್ಯದ ಆರಿಮರಕ್ಕೆ ಗುರಿಯಿಟ್ಟು ಬಹುಶಃ ಅಲ್ಲಿ ಜೇನು ಇದ್ದೇ ತೀರಬೇಕೆಂದು ಹೋದೆವು. ನಮ್ಮ ಊಹೆ ಸುಳ್ಳಾಗಲಿಲ್ಲ. ಆರಿಯ ಮರದ ದೊಣ್ಣೆಗೆ ಬಹುದೊಡ್ಡ ಹೆಜ್ಜೇನು ಕಟ್ಟಿತ್ತು. ಅದನ್ನು ನೋಡುತ್ತಲೇ. ನಮ್ಮಬಾಯಲ್ಲಿ ನೀರೂರಿದವು. ಹೆಸರು ಕಾಯಿ ಹುಡುಕಿಕೊಂಡು ಹೋದವರನ್ನು ಕರೆದೆವು. ಬಹುದೊಡ್ಡ ಜೇನು, ಮಧ್ಯಾಹ್ನದ ಕೆಟ್ಟ ಬಿಸಿಲು ಬೇರೆ. ಬಿಸಿಲಿನಲ್ಲಿ ಹೆಜ್ಜೇನು ಹುಳಕ್ಕೆ ಸಿಟ್ಟು ಬಹಳ ಎಂಬುದೂ ಗೊತ್ತಿತ್ತು. ಒಣಗಿದ ಹುಲ್ಲು ಮೊದಲಾದವನ್ನು ಸಂಗ್ರಹಿಸಿಕೊಂಡು ಜೇನಿನ ಸಮೀಪಕ್ಕೆ ಬಂದೆವು. ಆಗ ನಾವು ಉಂಡಿ ರುಮಾಲು ಸುತ್ತುತ್ತಿದ್ದೆವು. ಬಹು ಜಾಳುಜಾಳಾದ ಅದರ ಮೂಲವನ್ನು ಮುಖದ ಮೇಲೆ ಇಳಿಬಿಟ್ಟುಕೊಂಡು ಕೈಗಳನ್ನು ಹೊರಗೆ ಮಾಡಿಕೊಂಡು ತೊಗರಿಯ ಗಿಡಗಳನ್ನು ನಡುವಿಗೆ ಕಟ್ಟಿಕೊಂಡು ಜೇನಿನ ಕೆಳಗೆ ಹೊಗೆ ಹಾಕಲು ಹೋದೆವು. ಅಷ್ಟರಲ್ಲಿ ಒಬ್ಬಿಬ್ಬರು ಜೇನು ತುಂಬಲು ಎಕ್ಕದ ಎಲೆಗಳ ದೊಡ್ಡ ದೊಡ್ಡ ದೊನ್ನೆಗಳನ್ನು ಕಟ್ಟಿ ಸಿದ್ಧಮಾಡಿದರು. ಜೇನಿನ ಸಮೀಪಕ್ಕೆ ಹೋದುದೇ ತಡ ಜೇನುಹುಳುಗಳೆದ್ದು ನಮ್ಮನ್ನು ಮುತ್ತಿ ಬಿಟ್ಟವು. ಮಧ್ಯಾಹ್ನದ ಬಿಸಿಲು. ಹುಳುಗಳು ಕಂಡಕಂಡಲ್ಲೆಲ್ಲ ಕಚ್ಚತೊಡಗಿದವು. ಎಲ್ಲರೂ ಗಾಬರಿಯಾಗಿ ರುಮಾಲುಗಳನ್ನು ಕಿತ್ತು ಬಿಸಾಡಿ ದಾರಿ ಸಿಕ್ಕತ್ತ ಓಡತೊಡಗಿದೆವು. ನಾವು ಓಡಿದಂತೆಲ್ಲ ಅವೂ ನಮ್ಮನ್ನು ಬೆನ್ನ ಹತ್ತಿ ಕಡಿಯತೊಡಗಿದವು. ಮುಖ ಕೈ ಕಾಲು ಅಂಗಿಯ ಮೇಲೆ ಕಡಿಯ ತೊಡಗಿದವು. ಹೌಹಾರಿ ಹೋದೆವು. ಹಳ್ಳದ ಸಮೀಪಕ್ಕೆ ಬಂದು ಮರಳಿನಲ್ಲಿ ಹೊರಳಾಡಿದೆವು. ಬೇರೆ ಬೇರೆ ಜೋಳದ ಹೊಲಗಳಲ್ಲಿ ಓಡಾಡಿದೆವು. ಜೇನಿನಿಂದ ಒಂದೆರಡು ಫರ್ಲಾಂಗುಗಳ ದೂರಕ್ಕೆ ಹೋದ ಮೇಲೆ ಹುಳುಗಳ ಕಾಟ ತಪ್ಪಿತು. ಹಳ್ಳಕ್ಕೆ ಬಂದು ಆ ಜೇನಿನ ಮುಳ್ಳುಗಳನ್ನೆಲ್ಲ ತೆಗೆದುಕೊಳ್ಳುತ್ತ ಒಬ್ಬರ ಮುಖವನ್ನು ಒಬ್ಬರು ನೋಡಿ ಕೊಂಡೆವು. ಎಲ್ಲರ ಮುಖಗಳೂ, ಕೈಗಳೂ, ಕತ್ತು, ಕಾಲು ಎಲ್ಲವೂ ಊದಿಕೊಂಡು ಬಿಟ್ಟಿದ್ದವು. ಇನ್ನು ಮುಂದೆ ಮಾಡುವುದೇನು? ಶಾಲೆಗೂ ಹೋಗುವಂತಿಲ್ಲ. ಬೆಳಕು ಇರುವಾಗ ನಮ್ಮ ಊರನ್ನು ಹೊಗುವಂತಿಲ್ಲ. ಹೊಟ್ಟೆಯೋ ಹಸಿವಿನಿಂದ ಕಿತ್ತು ತಿನ್ನುತ್ತಿದೆ. ಏನು ಮಾಡಲು ತೋಚಲಿಲ್ಲ. ಯಾರದೋ ಹೊಲದಲ್ಲಿ ಕಿತ್ತು ಹಾಕಿದ ಬಟಗಡಲೆಯ ನಾಲ್ಕೈದು ಕಟ್ಟುಗಳನ್ನು ಕದ್ದು ತಂದು ಯಾರೂ ಬಾರದಿದ್ದ ಹಳ್ಳದ ಒಂದು ಮೂಲೆಯಲ್ಲಿ ಸುಟ್ಟು ಹುರಿದೆವು. ಸುತ್ತಲೂ ಐದೂ ಜನಗಳು ಕುಳಿತು ತಿಂದು ನೀರು ಕುಡಿದು ಒಂದು ಬೇವಿನ ಮರದ ನೆರಳಿನಲ್ಲಿ ಸ್ವಸ್ಥವಾಗಿ ಮಲಗಿದೆವು. ಮುಖಗಳೆಲ್ಲ ಇನ್ನು ಹೆಚ್ಚು ಊದಿಕೊಂಡು ಕಣ್ಣುಗಳೇ ಹುಗಿದು ಹೋದವು. ದೇಹವೆಲ್ಲ ಉರಿಉರಿ. ಒಬ್ಬರ ಮುಖವನ್ನೊಬ್ಬರು ನೋಡಿ ಅಳು ನಗು ಎರಡನ್ನು ಅನುಭವಿಸಿಬಿಟ್ಟೆವು. ಕತ್ತಲಾಗುವವರೆಗೆ ಹಳ್ಳದಲ್ಲಿಯೇ ಯಾರ ಕಣ್ಣಿಗೂ ಬೀಳದಂತೆ ಕಾಲಕಳೆದು ಕತ್ತಲಾದ ಮೇಲೆ ನಾನು ಮಾತ್ರ ಹಿತ್ತಲ ಬಾಗಿಲಿಂದ ಮನೆಹೊಕ್ಕು ನಮ್ಮ ತಾಯಿಗೆ ಮಾತ್ರ ವಿಷಯತಿಳಿಸಿದೆ. ಅವಳು ಹಣೆಹಣೆ ಚಚ್ಚಿಗೊಂಡು ಊಟ ಮಾಡಿಸಿ ಸುಮ್ಮನೆ ಮಲಗಿಸಿ ಬಿಟ್ಟಳು. ಈ ವಿಷಯ ಉಳಿದವರಿಗೆ ಯಾರಿಗೂ ಗೊತ್ತಾಗಲಿಲ್ಲ.

ಮನೆಯವರಿಗೆಲ್ಲ ಏಕೋ ತಲೆ ನೋಯುತ್ತದೆ ಎಂದು ಮಲಗಿದ್ದಾನೆ ಎಂದು ಸಬೂಬನ್ನು ನಮ್ಮ ತಾಯಿ ಹೇಳಿದ ಮೇಲೆ ಯಾರೂ ಪ್ರಶ್ನಿಸಲಿಲ್ಲ.

ಬೆಳಿಗ್ಗೆ ಬೇಗನೆ ಯಾರೂ ಏಳುವುದಕ್ಕೆ ಮೊದಲೇ ಎದ್ದು ರೊಟ್ಟಿ ಕಟ್ಟಿಸಿಕೊಂಡು ಎಲ್ಲರೂ ಮೊದಲೇ ಮಾತನಾಡಿದಂತೆ ಮತ್ತೆ ಊರು ಬಿಟ್ಟು ಹಳ್ಳದ ಜಾಲಿವನದಲ್ಲಿ ಹೋಗಿ ಕಾಲಕಳೆದು ಉಂಡು ತಿಂದು ನಿದ್ದೆ ಮಾಡಿದೆವು. ಮರುದಿನ ಮುಖದ ಬಾವು ಸ್ವಲ್ಪ ಇಳಿದರೂ ಯಾರಿಗೂ ಮುಖ ತೋರಿಸಲಿಲ್ಲ. ಮೂರನೆಯ ದಿನ ಶಾಲೆಗೆ ಹೋದೆವು. ಶಾಲೆ ತಪ್ಪಿಸಿದುದಕ್ಕೆ ಕಾರಣವೇನೆಂದು ಉಪಾಧ್ಯಾಯರು ಕೇಳಿದ್ದಕ್ಕೆ ಹಳ್ಳದಲ್ಲಿ ಯಾರೋ ಹೆಜ್ಜೇನು ಬಿಡಿಸಲು ಹೊಗೆ ಹಾಕಿಬಿಟ್ಟರು. ಅವು ಹಾರಿಬಂದು ನಮ್ಮನ್ನು ಬೆನ್ನಟ್ಟಿ ಕಡಿದು ಮೈಯೆಲ್ಲ ಬಾತುಕೊಂಡದ್ದರಿಂದ ನಮ್ಮ ಮನೆಯಲ್ಲಿ ಶಾಲೆಗೆ ಕಳಿಸಲಿಲ್ಲವೆಂಬ ಹಸಿಸುಳ್ಳು ಹೇಳಿ ಪಾರಾಗಿಬಿಟ್ಟೆವು. ಕೆಲವು ದಿನಗಳ ಮೇಲೆ ನಮ್ಮ ಈ ಜೇನು ಬಿಡಿಸಿದ ಪ್ರಸಂಗ ಹಾಗೆ ಹೊರಬಂದಿತಾದರೂ ಆ ಸುದ್ದಿ ಆಗಲೇ ಹಳೆಯದಾಗಿ ತನ್ನ ಪ್ರಾಶಸ್ತ್ಯ ಕಳೆದು ಕೊಂಡು ಬಿಟ್ಟಿತ್ತು.

ಮುಂದೆ ನಾವು ನಮ್ಮ ರೊಟ್ಟಿ ಗಂಟನ್ನು ಎಲ್ಲಿಟ್ಟು ಊಟ ಮಾಡಬೇಕೆಂಬ ಬಗ್ಗೆ ಜಿಜ್ಞಾಸೆ ಮೂಡಿತು. ಹಳ್ಳದ ಒತ್ತಿನಲ್ಲಿ ಅನೇಕ ಹೊಲಗಳವರು ಸರುಗಳಿಗೆ ಕಲ್ಲು ಕಟ್ಟಿದುದನ್ನು ಕಂಡು ಊರಿಗೂ ತಿಳಿಯದಂತೆ ನಾಲ್ಕಾರು ಕಲ್ಲು ಕಿತ್ತು ಕಲ್ಲುಸಂದಿಯಲ್ಲಿ ರೊಟ್ಟಿಯನ್ನು ಇಟ್ಟು ಹೋಗಿ ಬಂದು ಊಟ ಮಾಡುತ್ತ ಹಳ್ಳದಲ್ಲಿ ಹೊಲಗಳಲ್ಲಿ ತಿರುಗಾಡಿಕೊಂಡು ಐದನೆಯ ತರಗತಿಯಲ್ಲಿ ಓದು ಮುಗಿಸಿದ್ದೊಂದು ಒಳ್ಳೆಯ ಅಧ್ಯಾಯವೇ.

ಆ ವರ್ಷ ನಾವು ಜೇನುತುಪ್ಪವನ್ನು ವಿಶೇಷವಾಗಿ ತಿಂದೆವೆಂಬುದು ಇಂದಿಗೂ ಕಣ್ಮುಂದೆ ಕಟ್ಟಿದಂತೆ ಇದೆ. ನಮ್ಮ ಹೊಲವಾರಿ ತುಂಬ ವಿಶಾಲ. ಹಳ್ಳಿಗಳು ದೂರದೂರ. ಎತ್ತೆತ್ತ ನೋಡಿದತ್ತ ತೊಗರಿ, ಹುಚ್ಚೆಳ್ಳು, ಎಳ್ಳು, ಹತ್ತಿ, ಅಗಸಿ, ಪುಂಡಿ, ಕುಸುಬೆ, ಪುಟ್ಟಿಪುರ್ಲಿ, ಅಜವಾನ, ತಂಗಡಿ ಹೂಗಳಿಂದ ತುಂಬಿದ ನಮ್ಮ ಎರೆಹೊಲದ ಸಂಪತ್ತನ್ನು ಪುಷ್ಯಮಾಸ ಪೂರ್ತಿ ನೋಡಬಹುದು. ಹುಚ್ಚೆಳ್ಳು, ತೊಗರಿ ಹೂಗಳು ಸಮೃದ್ಧವಾಗಿ ಬಿಟ್ಟಾಗಲಂತೂ ಪ್ರಕೃತಿಗೆ ಹಳದಿಯ ಸೀರೆಯನ್ನುಡಿಸಿದಂತೆ ಭಾಸವಾಗುತ್ತದೆ. ಹಸಿರ್ಗರೆವ ಆಗಿನ ಪ್ರಕೃತಿ ಸಂಪತ್ತಿನ ಮಧ್ಯದಲ್ಲಿ ಸ್ವಲ್ಪ ಬೂದು ಹಸಿರು ಮಿಶ್ರ ಗೋದಿಯ ಹೊಲಗಳ ಸೊಗಸಂತೂ ಅವರ್ಣನೀಯ. ತೊಗರಿ, ಗುರೆಳ್ಳು ಹೂಗಳ ಸಮೃದ್ಧಿಯಿದ್ದಾಗ ನಮ್ಮ ಹೊಲವಾರಿಯಲ್ಲಿ ಕೈಯಿಟ್ಟಲ್ಲಿ ಜೇನುಗಳು. ವರ್ಷದ ಕೊನೆಗೆ ಬರುತ್ತಿದ್ದಂತೆ ನಾವು ಮೂವರು ಮಾತ್ರ ಒಂದಾದೆವು. ಇನ್ನಿಬ್ಬರು ತಾವು ತಮ್ಮಷ್ಟಕ್ಕೆ ಬೇರೆ ಬೇರೆಯಾಗಿಯೇ ಶಾಲೆಗೆ ಹೋಗಿ ಬರುತ್ತಿದ್ದರು. ನಾವು ಮೂವರು ಪರಸ್ಪರ ಸಂಬಂಧಿಗಳೇ. ಮಲ್ಲಪ್ಪ, ಎಲ್ಲಪ್ಪ ಮತ್ತು ನಾನು. ಎಲ್ಲಪ್ಪ 6ನೇ ತರಗತಿಯಲ್ಲೂ, ನಾವಿಬ್ಬರು ಐದರಲ್ಲಿಯೂ ಓದುತ್ತಿದ್ದೆವು. ಎಲ್ಲಪ್ಪ ಬಾಲ್ಯದಿಂದ ಆಡು ಕಾಯ್ದು 12ನೇ ವಯಸ್ಸಿಗೆ ಪ್ರಾಥಮಿಕ ಶಾಲೆ ಸೇರಿ ನಮಗಿಂತ ಸುಮಾರು ಆರೇಳು ವರ್ಷಕ್ಕೆ ಹಿರಿಯ. ಆದ್ದರಿಂದ ಅವನನ್ನು ನಾನು ಹಿರಿಯ ಎಂದೇ ಹೆದರಿಕೊಂಡು ಹೇಳಿದಂತೆ ಕೇಳುತ್ತಿದ್ದೆವು. ಮಧ್ಯಾಹ್ನದ ರೊಟ್ಟಿಯನ್ನು ತಿಂದು ಅವನು ಬೇಪಿನ ಗಿಡದ ಬುಡದಲ್ಲಿ ಹಾಯಾಗಿ ಮಲಗಿ ನಮಗೆ 'ಎಲ್ಲಿಯಾದರೂ ಒಂದೆರಡು ಜೇನು ನೋಡಿಕೊಂಡು ಬನ್ನಿ ಹೋಗ್ರಿ' ಎಂದು ಅಪ್ಪಣೆ ಮಾಡುತ್ತಿದ್ದ. ನಾವು ಹೊಲವಾರಿ

ಬೀಳುತ್ತಿದ್ದೆವು. ಸಮೃದ್ಧಹೂವಿನ ಸುಗ್ಗಿಯಲ್ಲಿ ಕೈಯಿಟ್ಟಲ್ಲಿ ಜೇನು ಸಿಗುತ್ತಿದ್ದವು. ಜೇನಿನ ಬಗ್ಗೆ ನಮಗೆ ಬಹಳಷ್ಟು ಅನುಭವವಾಗಿ ಹೋಗಿತ್ತು. ಜೇನುಹುಳಗಳು ತಲೆಯ ಮೇಲೆ ಒಂದೆರಡು ಸುತ್ತು ಹಾಕುವುದನ್ನು ಗಮನಿಸಿಯೇ ಯಾವ ದಿಕ್ಕಿನಲ್ಲಿ ಜೇನಿದೆ ಎಂಬುದನ್ನು ನಿರ್ಧರಿಸಿ ಬಿಡುತ್ತಿದ್ದೆವು. ಜಾಲಿಯ ಕಂಟಿ, ಬದುವಿನಲ್ಲಿದ್ದ ಪುರ್ಲಿ ಕಂಟಿ, ಜೋಳದ ಗಂಟು, ಹೆಸರುಬಳ್ಳಿ, ಗಿಡ, ಪೊಟರೆ, ತೆನೆಕೊಯ್ದು ಹಾಕಿದ ಜೋಳದ ಸಿಪ್ಪೆಯ ಇಕ್ಕಲು, ಎರೆಯ ಬಿರುಕುಗಳು, ಹೊಲದ ಮಧ್ಯದಲ್ಲಿರುವ ಬಾರಿ, ಕಾರಿಯ ಕಂಟಿಗಳು, ಹಳ್ಳದ ಬದಿಯ ಪೊದೆಗಳು ಎಲ್ಲೆಂದರಲ್ಲಿ ಜೇನು ಇರುತ್ತಿದ್ದವು.

ಆ ವರ್ಷದ ನಮ್ಮೂರ ಆ ನಂದಿ ಮುದಕಪ್ಪನ ಹೊಲದಲ್ಲಿ ಮನುಷ್ಯ ಹೊಕ್ಕರೆ ಕಾಣದಷ್ಟು ತೊಗರಿ ಬೆಳೆದುನಿಂತಿತ್ತು. ಜೋಳ ತೆನೆಕೊಯ್ದು ಹಾಕಿದ ಸೊಪ್ಪೆಯ ಇಕ್ಕಲದಲ್ಲಿ ಒಂದೊಂದು ಇಕ್ಕಲದಲ್ಲಿ ಒಂದು ಎರಡರಂತೆ ಜೇನುಗಳು ಇರುತ್ತಿದ್ದವು. ಕಾರಣ ಸಮೃದ್ಧ ತೊಗರಿ ಹೂವು ಬಿಟ್ಟಿದ್ದು. ತೊಗರಿ ಹೂವಿನ ಮಕರಂದ ಕುಡಿದು ಮಾಡಿದ ಜೇನುತುಪ್ಪ ಬಹುಮಧುರ, ಹೊಟ್ಟೆಗೂ ತಂಪಂತೆ. ಹುಚ್ಚೆಳ್ಳು ಹೂವಿನ ಮಕರಂದ ಕುಡಿದು ಮಾಡಿದ ತುಪ್ಪ ಉಷ್ಣವಂತೆ. ಬೇವು, ಅಜವಾನ, ಎಳ್ಳು, ಅಗಸೆ, ಪುಟ್ಟಂಪುರ್ಲಿಯಂಥ ಹೂಗಳ ಮಕರಂದದಿಂದಾದ ತುಪ್ಪ ಔಷಧಗುಣದಿಂದ ಕೂಡಿದ್ದಂತೆ. ಇದು ನಮ್ಮೂರ ಜೇನು ರಸಾಸ್ವಾದನ ಮತಿಗಳ ನಂಬುಗೆ. ನಾವು ಆನಂದಿ. ಮುದುಕಪ್ಪ ಹತ್ತು ಹನ್ನೆರಡು ಇಕ್ಕಲದಲ್ಲಿರುವ ಜೇನುಗಳನ್ನೂ ಎಂಟು ಹತ್ತು ದಿನಗಳಲ್ಲಿ ದಿನವೂ ಎರಡು ಮೂರರಂತೆ ಬಿಡಿಸಿ ಎಕ್ಕದ ಎಲೆಗಳಲ್ಲಿ ಜೇನು ಕೊಡಗಳನ್ನು ಇಟ್ಟುಕೊಂಡು ನಮ್ಮ ನಾಯಕ ಶಿರೋಮಣಿ ಎಲ್ಲಪ್ಪನ ಎದುರಿಗೆ ಇಟ್ಟು ಬಿಡುತ್ತಿದ್ದೆವು. ಅವನೇ ತುಪ್ಪವನ್ನು ನಮ್ಮ ಕೈಗೆ ಹಾಕಿ ತಾನು ತಿಂದು ಹಳ್ಳದ ನೀರು ಕುಡಿದು ಮಧ್ಯಾಹ್ನದ ಶಾಲೆಗೆ ಹೋಗುತ್ತಿದ್ದೆವು. ಮುಂದೆ ನಾವು ಜೇನುಗಳನ್ನು ಬಹಳ ಬಿಡಿಸಿ ತುಪ್ಪ ತಿನ್ನುತ್ತ ಬಂದೆವು. ಆದರೆ ಹೆಜ್ಜೇನು ಬಿಡಿಸುವಾಗ ಮಾತ್ರ ಮಧ್ಯಾಹ್ನ ಅವುಗಳ ತಂಟೆಗೆ ಹೋಗದೆ ಹೊತ್ತು ಮುಳುಗಿ ಮಬ್ಬುಗತ್ತಲಾದ ಮೇಲೆ ಬಿಡಿಸಿ ಯಥೇಚ್ಛವಾಗಿ ತುಪ್ಪ ತಿಂದುದುಂಟು. ಕೆಲ ದಿನಗಳ ಮೇಲೆ ನಮಪ್ಪನಿಗೆ ಈ ಸುದ್ದಿ ಗೊತ್ತಾಗಿ ನಮ್ಮನ್ನು ತರಾಟೆಗೆ ತಕ್ಕೊಂಡದ್ದು ಉಂಟು. ನಮಪ್ಪ ಎಲ್ಲಪ್ಪನಿಗೂ ಬೈದನಂತೆ. ಅಂದಿನಿಂದ ಎಲ್ಲಪ್ಪ ನಮ್ಮ ಮೇಲೆ ಗುರು ಗುರು ಮಾಡುತ್ತಿದ್ದ. ಈ ವಿಷಯ ನಮಗೆ ಗೊತ್ತಾಯಿತು. ನಮ್ಮ ತಂದೆ ಒಂದು ರೀತಿಯಲ್ಲಿ ಓದುಬರಹ ಬಾರದ ಮನುಷ್ಯನಾಗಿದ್ದರೂ ಬಹಳ ನ್ಯಾಯವಾದಿ. ಅವನು ಒಂದು ಜೇನು ಬಿಡಿಸಿದರೆ ಒಂದು ಪಟ್ಟಣ ಅಳಿದಂತೆ. ಹುಳಗಳ ನಾಶವೆಷ್ಟು, ಅವುಗಳ ಮರಿಗಳೆಷ್ಟು ನಾಶವಾಗುತ್ತವೆ, ಇನ್ನುಮೇಲೆ ಜೇನು ಬಿಡಿಸುವ ತಂಟೆಗೆ ಹೋಗಬೇಡಿ. ಬೇಕಾದರೆ ಹುಳುಹಾರಿಸಿ ಹುಟ್ಟುಮುರಿಯದೆ ತುಪ್ಪ ಬಳಿದುಕೊಂಡು ಬರಬಹುದು. ಹುಟ್ಟು ಮುರಿದರೆ ಮುಂದೆ ಜೇನಿನ ಪೀಳಿಗೆಯೇ ನಾಶವಾಗಿ ಹೋಗುತ್ತದೆ ಎಂದು ಹೇಳುತ್ತಿದ್ದುದು ಇಂದಿಗೂ ಜ್ಞಾಪಕವಿದೆ. ಆದರೆ ಕಲಿತ ಚಾಳಿ ಕಲ್ಲು ಹಾಕಿದರೂ ಹೋದೀತೆ? ಆಗೊಂದು ಈಗೊಂದು ಜೇನನ್ನು ಹುಡುಕಿ ತುಪ್ಪ ತಿಂದದ್ದು ಉಂಟು. ಹೆಜ್ಜೇನು ಬಿಡಿಸಿದ ದಿನ ಯಥೇಚ್ಛವಾಗಿ ತುಪ್ಪ ತಿಂದು ಹೊಟ್ಟೆ ಉರಿಗೊಳಿಸಿ ಕೊಂಡದ್ದೂ ಉಂಟು.

### ಬಾಲ್ಯದಲ್ಲೇ ನಾಟಕದ ಗೀಳು

ನಾಟಕ ನೋಡುವ ಗೀಳು ನನಗೆ 3-4ನೆಯ ತರಗತಿಯ ಹೊತ್ತಿಗೇ ಅತ್ಯಧಿಕವಾಗಿತ್ತು. ನಮ್ಮೂರ ಪಕ್ಕದಲ್ಲೇ ಕೇವಲ 4-5 ಫರ್ಲಾಂಗುಗಳ ಅಂತರದಲ್ಲೇ ಧರ್ಮಾ - ವರದಾನದಿಗಳ

ಸಂಗಮ ಸ್ಥಳವಷ್ಟೆ. ಆ ಸಂಗಮ ಸ್ಥಳದಲ್ಲಿ ಸಂಗಮೇಶ್ವರ ಜಾತ್ರೆ ಪ್ರತಿ ವರ್ಷ ಸೇರಿ ಆ ಭಾಗದಲ್ಲೇ ಬಹು ಪ್ರಸಿದ್ಧವಾದುದಾಗಿತ್ತು. ಒಂದು ತಿಂಗಳ ಪರ್ಯಂತ ನಡೆಯುವ ಆ ಜಾತ್ರೆಯಲ್ಲಿ ದೊಡ್ಡ ಎತ್ತಿನ ಪರಿಷೆ ನಡೆಯುತ್ತಿತ್ತು. ಜಾತ್ರೆಗೆ ಬರುವ ವ್ಯಾಪಾರಿಗಳು ಒಂದು ತರಹೆಯವರಲ್ಲ. ಕರಿ ಜವಳಿ, ಬಿಳಿಜವಳಿ, ಭಾಂಡೆ, ಕುಡಕಬ್ಬಿಣ, ಹೊಸ ಚಕ್ಕಡಿ, ಚಿನಿವಾಲರ ಅಂಗಡಿ, ಹೊಟೆಲುಗಳು, ಕಿರಾಣಿ ಸಾಮಾನಿನ ಅಂಗಡಿಗಳು, ವ್ಯವಸಾಯಗಾರರ ಮರಮುಟ್ಟುಗಳು, ಕಬ್ಬಿಣದ ಸಾಮಾನುಗಳು, ಹಣ್ಣು ಕಾಯಿಗಳ ಸಾಲು ಎಲ್ಲ ತರದ ಅಂಗಡಿಗಳು ಎಲ್ಲ ಕಡೆಯಿಂದಲೂ ಬಂದು ಸೇರುತ್ತಿದ್ದವು. ಹೀಗಾಗಿ ಗ್ರಾಮಾಂತರ ಪ್ರದೇಶದ ಬಹುದೂರದೂರದ ಜನ ಜಾತ್ರೆಗೆ ಬರುತ್ತಿದ್ದರು.

ಎತ್ತು ಮಾರಲು, ಕೊಳ್ಳಲು, ವರ್ಷಕ್ಕಾಗುವಷ್ಟು ಸಾಮಾನು ಸರಂಜಾಮು ಕೊಳ್ಳಲು, ಬಟ್ಟೆಬರೆ ತೆಗೆಯಲು ಅವರೆಲ್ಲ ಬರುತ್ತಿದ್ದರು. ಮಲೆನಾಡಿನವರಿಗೆ ಈ ಜಾತ್ರೆ ಒಂದು ವರವೇ ಆಗಿತ್ತು. ಧಾರವಾಡ ಜಿಲ್ಲೆಯಲ್ಲಿಯೇ ಇಂಥ ಜಾತ್ರೆ ಬೇರೊಂದಿರಲಿಲ್ಲ. ಚೈತ್ರಶುದ್ಧ ಪ್ರತಿಪದೆಯಂದು ಸಂಗಮೇಶ್ವರನ ರಥೋತ್ಸವವಾಗುತ್ತಿತ್ತು. ಮರುದಿನದಿಂದ ಜಾತ್ರೆ ಪ್ರಾರಂಭವಾಗಿ ಒಂದು ಒಂದೂವರೆ ತಿಂಗಳು ನಡೆಯುತ್ತಿತ್ತು. ಇಂಥ ಜಾತ್ರೆಗೆ ಎರಡು ಮೂರು ನಾಟಕ ಕಂಪನಿಗಳು, ಸರ್ಕಸ್‌ಗಳು ಬರದೆ ಇರುತ್ತವೆಯೇ? ಅವರು ಹಾಜರಾಗಿ ಒಂದು ತಿಂಗಳು ಸ್ಪರ್ಧಾತ್ಮಕವಾಗಿ ನಾಟಕ ಮಾಡುತ್ತಿದ್ದರು. ಆಗ ಸಿನಿಮಾಗಳ ಹಾವಳಿ ಇರಲಿಲ್ಲ. ಗದಗಿನ ವಾಮನ್‌ರಾವ್ ಕಂಪನಿ, ಶಿರಹಟ್ಟಿ ಕಂಪನಿ, ಹಲಗೇರಿ ನಾಟಕ ಮಂಡಳಿ, ಕೊಟ್ರಬಸಪ್ಪನ ಕಂಪನಿ ಇನ್ನು ಅನೇಕ ನಾಟಕ ಕಂಪನಿಗಳ ಜೊತೆಗೆ ಕೃಷ್ಣಪಾರಿಜಾತ ನಾಟಕ ಕಂಪನಿಯೂ ಬರುತ್ತಿದ್ದುದುಂಟು. ಕುಂಕೂರು ಮಳಲಿ ಕಡೆಯಿಂದ ಬರುತ್ತಿದ್ದ ಕೃಷ್ಣ ಪಾರಿಜಾತದ ನಾಟಕ ಗ್ರಾಮೀಣಜನರಿಗೆ ಬಹಳ ಅಚ್ಚುಮೆಚ್ಚಾಗಿರುತ್ತಿತ್ತು. ಈ ನಾಟಕಗಳನ್ನು ನೋಡುವ ಚಟ ನನ್ನಲ್ಲಿ ಅಧಿಕವಾಗಿ ಹೋಯಿತು. ನಾಟಕದ ಫರದೆ, ಸೀನರಿ, ಟ್ರಾನ್ಸ್‌ಫರ್ ಸೀನ್, ಸಂಗೀತ - ಎಲ್ಲವೂ ನನಗೆ ಸ್ವರ್ಗ ಸದೃಶ ದೃಶ್ಯವಾಗಿ ಕಾಣುತ್ತಿದ್ದವು.

ಹತ್ತಿಸುಗ್ಗಿಯಲ್ಲಿ ಹೊಲದಲ್ಲಿ ಹತ್ತಿ ಬಿಡಿಸಿಕೊಂಡು ಜೇಬುಗಳಲ್ಲಿ ಹತ್ತಿಕ್ಕಿ ತುಂಬಿಕೊಂಡು ನಮ್ಮೂರ್ರ ಕೆಗ್ಗೆಳ್ಳಿ ಚೆನ್ನಬಸಪ್ಪನ ಅಂಗಡಿಗೆ ಹಾಕುತ್ತಿದ್ದೆವು. ಅವನು ಒಂದು ಸೇರು ಹತ್ತಿಗೆ ಕಾಲುಆಣೆ ಕೊಡುತ್ತಿದ್ದ. ಒಮ್ಮೊಮ್ಮೆ ಕಣದಲ್ಲಿ ಉಳಿದ ಸರಗು ಜೋಳ, ಮಣ್ಣು ಜೋಳ (ಮಣ್ಣುಗಾಳು) ಮೊದಲಾದವನ್ನು ಹಸನುಮಾಡಿಕೊಂಡು ಹೋಗಿ ಹಾಕುತ್ತಿದ್ದೆವು. ಸೇರು ಜೋಳಕ್ಕೆ ಕಾಲಾಣೆಯೇ ಬೆಲೆ. ಜೋಳದ ಬೆಲೆಯೂ ಆಗ ತೀರಾ ಕಡಿಮೆ. 4 ರೂ.ಗೆ ಒಂದು ಚೀಲ. ಹೀಗಿರುವಾಗ ಅವನಿಗೆ ಲಾಭ ಬೇಡವೇ? ನಮ್ಮಂಥವರ ವ್ಯಾಪಾರದಿಂದಲೇ ಅವನಿಗೆ ಬಹಳ ಲಾಭ. ಜೊತೆಗೆ ಬಟಗಡಲೆಕಾಯಿಗಳನ್ನು ಹೊಲಗಳಲ್ಲಿ ಆರಿಸಿಕೊಂಡು ಬಂದು ಅವನ ಅಂಗಡಿಗೇ ಹಾಕಿ ದುಡ್ಡನ್ನು ಅಲ್ಲೇ ಬಿಡುತ್ತಿದ್ದೆವು. ಈ ವಿಷಯದಲ್ಲಿ ಚೆನ್ನಬಸಪ್ಪ ಬಹಳ ಪ್ರಾಮಾಣಿಕ. ಆದರೆ ಬೆಲೆ ಮಾತ್ರ ಬಹಳ ಕಡಿಮೆ. ಇಡೀ ಹತ್ತೀಸುಗ್ಗಿಯಲ್ಲಿ ಎರಡು ರೂಪಾಯಿನಷ್ಟು ಸಂಗ್ರಹಿಸುವಲ್ಲಿ ನಮ್ಮ ಪುಣ್ಯವೆಲ್ಲ ಖರ್ಚಾಗಿ ಹೋಗುತ್ತಿತ್ತು. ಈ ಎರಡು ರೂಪಾಯಿ ನಮ್ಮ ಮೂವತ್ತು ನಲ್ವತ್ತು ದಿನಗಳ ನಾಟಕ ನೋಡುವ ಹುಚ್ಚನ್ನು ಉಪಶಮನಗೊಳಿಸುತ್ತಿತ್ತು. ನಮ್ಮ ಮನೆಯಲ್ಲಿ ಸೋಮವಾರ ಮೊದಲಾದ ದಿನಗಳಲ್ಲಿ ಅರ್ಧಆಣೆ ಕೊಡುತ್ತಿದುದುಂಟು. ಇದು ಕಡಲೆಪುರಿಗಾಗುತ್ತಿತ್ತು. ನಾಟಕಕ್ಕೆ ನಾವು ಹೋಗುತ್ತಿದ್ದುದು ಎರಡಾಣೆ

ಸ್ಥಳಕ್ಕೆ. ಒಮ್ಮೊಮ್ಮೆ ಮ್ಯಾನೇಜರನ್ನೇ ಕಂಡು ಅರ್ಧಚಾರ್ಜು ತಕೊಳ್ಳಿ, ನಾನು ಚಿಕ್ಕವನು ಎನ್ನುತ್ತ ಅವರ ಮನಸ್ಸನ್ನು ಒಲಿಸಿ, ಒಂದಾಣೆಯಲ್ಲಿ ನಾಟಕ ನೋಡಿ ದೊಡ್ಡ ಲಾಭದ ವ್ಯಾಪಾರ ಮಾಡಿದವರಂತೆ ಹಿಗ್ಗಿ ಹೋಗುತ್ತಿದ್ದೆವು. ಎಲ್ಲರೂ ಹೀಗೆ ಕನ್ಸೇಷನ್ ತೋರಿಸುತ್ತಿದ್ದಿಲ್ಲ, ಅಯೋಗ್ಯರು. ಔದಾರ್ಯ ತೋರಿಸುವ ನಾಟಕ ಕಂಪನಿಗಳೆಂದರೆ ಶಿರಹಟ್ಟಿ ಕಂಪನಿ ಮತ್ತು ವಾಮನರಾವ್ ಮಾಸ್ತರರ ಕಂಪನಿಯವರು ಮಾತ್ರ. ಒಮ್ಮೊಮ್ಮೆ ನಾಟಕನೋಡಲು ದುಡ್ಡು ಇಲ್ಲದೆ ಹೊರಗೇ ನಿಂತುಕೊಂಡು ಹಾಡುಕೇಳುವುದು, ಮಾತುಗಾರಿಕೆಯನ್ನು ಆಲಿಸುವುದು ಮಾಡುತ್ತಿದ್ದೆವು. ನಾವು ನಾಟಕಥೇಟರ್ ಹತ್ತಿರ ಹೋದರಾಯಿತು, ಯಮದೂತರಂಥ ಆಳುಗಳು ನಮ್ಮನ್ನು ಗದರಿಸಿ ದೂರಕ್ಕೆ ಓಡಿಸಿಬಿಡುತ್ತಿದ್ದರು. ಒಂದು ವರ್ಷ ನನಗೆ ಅಕಸ್ಮಾತ್ ಹದಿಮೂರು ಆಣೆ ದಾರಿಯಲ್ಲಿ ಸಿಕ್ಕವು. ಅವನ್ನು ಯಾರಿಗೂ ತಿಳಿಯದಂತೆ ನಮ್ಮ ದೊಡ್ಡ ಹುಣಸಿಮರದ ಡಬ್ಬಿನ ಹೊದರಿನಲ್ಲಿ ಬಚ್ಚಿಟ್ಟುಬಿಟ್ಟೆ. ಈ ಹಣದಿಂದ ನಿರಾತಂಕವಾಗಿ ಆ ವರ್ಷ ಆರುನಾಟಕ ನೋಡಿದೆ. ಹೊಟ್ಟೆಗೆ ಕೂಳಿಲ್ಲದಿದ್ರೂ ನಡೆದೀತು. ಆದರೆ ನಾಟಕಕ್ಕೆ ದುಡ್ಡಿಲ್ಲದಿದ್ದರೆ ಆಗುತ್ತಿರಲೇ ಇಲ್ಲ. ದುಡ್ಡು ಹೊಂದಿಸಲು ನನ್ನ ಯೋಜನೆಗಳು ಅನೇಕ. ಆ ಮರ ನನ್ನ ರಕ್ಷಣೆಗಾಗಿ ನನ್ನ ಕೆಲವು ಗುಪ್ತ ಸಾಮಗ್ರಿಗಾಗಿ ಬಹಳ ಕೆಲಸಮಾಡಿದೆ.

ನಾನು ಕದ್ದು ಕೂತಾಗ ಈ ಮರ ನನ್ನನ್ನು ಯಾರಿಗೂ ಕಾಣಗೊಡದಂತೆ ಬಚ್ಚಿಟ್ಟಿದೆ. ನನ್ನ ಬಾಲ್ಯದ ಅನೇಕ ಚಟುವಟಿಕೆಗಳಲ್ಲಿ ಈ ಮರ ಮಾಡಿದ ಉಪಕಾರ ಅಷ್ಟಿಷ್ಟಲ್ಲ.

### *ಥೇಟರ್ ಚಾಪೆಯೆತ್ತಿ ಒಳಹೊಕ್ಕ ಪ್ರಸಂಗ*

ಒಮ್ಮೆ ದುಡ್ಡೆಲ್ಲ ಮುಗಿದು ಹೋಗಿತ್ತು. ನಾಟಕ ನೋಡುವ ಚಟ ಅಧಿಕವಾಗಿ ಹೋಯಿತು. ರಾತ್ರಿ ನಾವು ಮೂರು ಜನ ಥೇಟರ್ ಹತ್ತಿರ ಬಂದೆವು. ಶಿರಹಟ್ಟಿ ನಾಟಕ ಕಂಪನಿ ಅದು. ಆ ದಿನ ಸಂಪೂರ್ಣ ರಾಮಾಯಣ ನಾಟಕ. ಆ ನಾಟಕಕ್ಕೆ ಹರಿಹರದ ನಂಜುಂಡಯ್ಯ ಹನುಮಂತನ ಪಾತ್ರ ನಿರ್ವಹಿಸಲು ಬಂದಿದ್ದ. ಹನುಮಂತನ ಪಾತ್ರಕ್ಕೆ ಹರಿಹರದ ನಂಜುಂಡಯ್ಯ ಹೇಳಿ ಮಾಡಿಸಿದ ವ್ಯಕ್ತಿ. ಆಗ ಅವನನ್ನು ಕಲಿಯುಗದ ಹನುಮಂತನೆಂದೇ ಜನ ಕರೆಯುತ್ತಿದ್ದರು. ಅವನನ್ನು ಅನೇಕ ಕಂಪನಿಯ ರಾಮಾಯಣ ನಾಟಕಕ್ಕೆ ಹನುಮಂತನ ಪಾತ್ರಕ್ಕಾಗಿ ಕರೆಯಿಸಿಕೊಳ್ಳುತ್ತಿದ್ದರು. ಅವನು ಹನುಮಂತನ ಪಾತ್ರ ವಹಿಸುತ್ತಾನೆಂದು ಕಂಪನಿಯವರು ಮೊದಲೇ ಪ್ರಕಟಿಸುತ್ತಿದ್ದರು. ಆ ದಿನ ನಾಟಕ ಕಂಪನಿಯೊಳಗಡೆ ಹೆಜ್ಜೆಯಿಡಲೂ ಸಾಧ್ಯವಿಲ್ಲದಷ್ಟು ಜನ ನೆರೆದು ಬಿಡುತ್ತಿತ್ತು, ನಾವು ಅವನ ಪಾತ್ರವಹಿಸಿದ ನಾಟಕಗಳನ್ನು ಈ ಮೊದಲು ನೋಡಿದ್ದರೂ ಪುನಃ ಪುನಃ ನೋಡಬೇಕೆಂಬ ಆಸೆಯಾಗುತ್ತಿತ್ತು. ಆ ದಿನ ನಮ್ಮ ದುಡ್ಡೆಲ್ಲ ಮುಗಿದು ತೀರಾ ದರಿದ್ರಾವಸ್ಥೆಗಳಿದಿದ್ದೆವು. ಥೇಟರಿನ ಸುತ್ತ ಎರಡು ಮೂರು ಸುತ್ತು ಹಾಕಿದೆವು. ಹನುಮಂತನ ಪಾತ್ರ ರಂಗಭೂಮಿಯ ಮೇಲೆ ಬಂದುದನ್ನು ಜನಗಳ ನಗುವಿನ ಚಪ್ಪಾಳೆಗಳ ಕೋಲಾಹಲ, ಒನ್ಸ್‌ಮೋರ್, ಕೂಗಾಟ ಹೆಚ್ಚಾದುದನ್ನು ಕೇಳಿಯೇ ಗುರುತಿಸಿದೆವು. ಆಗ ನಮ್ಮ ಹುಚ್ಚು, ಜನರ ನಗುವಿನಿಂದ ನೆತ್ತಿಗೇರಿತು, ಚಪ್ಪಾಳೆಗೆ ಅವನ ಅಭಿನಯದ ಕೌಶಲ್ಯಗಳಲ್ಲೊಂದಾದ ಬಾಳೆಹಣ್ಣುಗಳನ್ನು ತಿನ್ನುವಿಕೆ, ಬಾಳೆ ಹಣ್ಣನ್ನು ಎರಡೂ ಕೈಯಲ್ಲಿ ಹಿಡಿದು ಕೋತಿಯಂತೆ ಮೈಕೆರೆದುಕೊಂಡು ಪಿಳಿಪಿಳಿ ಕಣ್ಣು ಬಿಟ್ಟು ಹಣ್ಣು ತಿನ್ನುವಲ್ಲಿ ಥೇಟ್ ಕೋತಿಯನ್ನೇ ನಾಚಿಸುವಂತೆ ಮಾಡುತ್ತಿದ್ದ ಹಣ್ಣು ತಿಂದು ಶ್ರೀರಾಮನ್ನು ಕಂಡು -

'ರಾಮ ರಾಮ ರಘು ರಾಮರಾಮ ರಘು ರಾಮರಾಮ ರಘ ರಾಮಾ' ಎಂದು ಹಾಡುತ್ತಿದ್ದ ಹಾಡು ಕೇಳಿ ಪ್ರೇಕ್ಷಕರಲ್ಲಿ ವಿದ್ಯುತ್ ಸಂಚಾರವಾದಂತಾಗುತ್ತಿತ್ತು. ಇಂಥ ದೃಶ್ಯ ನೋಡುವ ಪುಣ್ಯ ನಮಗಿಲ್ಲವಲ್ಲಾ ಎಂದುಕೊಂಡು ಕಾವಲುಗಾರರೂ ನಂಜುಂಡಯ್ಯನ ಪಾತ್ರನೋಡುವುದರಲ್ಲಿ ಮಗ್ನರಾಗಿದ್ದಾಗ ಅವರ ಕಣ್ಣುತಪ್ಪಿಸಿ ಹಿಂಭಾಗದಲ್ಲಿ ಕಟ್ಟಿದ ಬಿದಿರ ತಟ್ಟಿಯನ್ನು ಮೇಲಕ್ಕೆತ್ತಿ ಒಳಗೆ ಮುಖ ತೂರಿಸಿ ಹಾವಿನಂತೆ ದೇಹವನ್ನು ಒಳಗೆ ಎಳೆದುಕೊಳ್ಳತೊಡಗಿದೆವು. ಆ ದಿನ ಇದ್ದವರು ದುಂಡಪ್ಪ, ಬೂದ, ನಾನು ಮಾತ್ರ. ಮೂವರೂ ಪ್ರಳಯಾಂತಕರೇ. ಒಳಗೆ ಹೋಗುವುದು ಸುಲಭವಿರಲಿಲ್ಲ. ಥೇಟರಿನ ಕೊನೆಯ ಭಾಗವನ್ನು ವಿಸ್ತರಿಸಲು ಮಣ್ಣುಹೆಂಟೆಗಳನ್ನು ಜೋಡಿಸಿರುತ್ತಿದ್ದರು. ಆ ಹೆಂಟೆಗಳನ್ನು ಸರಿಸಿ ನಾವು ಎರಡಾಣೆಯವರು ಕೂಡ್ರುವ ಜನರಿದ್ದಲ್ಲಿಗೆ ಹೋಗಬೇಕಾಗಿತ್ತು. ಎದೆ ಕೆರೆಸಿಕೊಂಡು ಸಾಹಸಮಾಡಿ ಅರ್ಧದೇಹ ಒಳಗೆ ಹೊಕ್ಕ ಮೇಲೆ ಗೆದ್ದೆವೆಂದುಕೊಂಡೆವು. ದುರ್ವಿಧಿಯ ಲೀಲೆ ಬೇರೆ ಆಗಿತ್ತು. ಯಮನಂಥ ಆ ಕಾವಲುಗಾರರ ಗೃಧ ದೃಷ್ಟಿಗೆ ಹೇಗೆ ಬಿದ್ದೆವೋ ಗೊತ್ತಿಲ್ಲ. ಓಡಿ ಬಂದು ಹೊರಗಿದ್ದ ನಮ್ಮ ಕಾಲಿನ್ನು ಹಿಡಿದು ಎಳೆಯತೊಡಗಿದರು. ನಮ್ಮ ಸಾಹಸವೆಲ್ಲ ಮಣ್ಣಿಗೂಡಿದ್ದಷ್ಟೇ ಅಲ್ಲ. ಈ ಅಯೋಗ್ಯರು ಎಲ್ಲಿ ಬಡಿಯುವರೋ ಎಂಬ ಭಯದಿಂದ ಎದೆ ಬಡಿದುಕೊಳ್ಳತೊಡಗಿತು. ಅವರಿಗೆ ಕನಿಕರ ಬರಲಿಲ್ಲ. ಎಳೆದೇ ಬಿಟ್ಟರು. ಎದೆ, ಮೊಳಕಾಲು ನೆಲಕ್ಕೆ ತರಿದು ಉರಿಯತೊಡಗಿತು. ಮೇಲಕ್ಕೆಬ್ಬಿಸಿ ನಮ್ಮನ್ನು ಕೈಹಿಡಿದು ಎಳೆದುಕೊಂಡು ನಾಟಕ ಕಂಪನಿಯ ಮ್ಯಾನೇಜರ್ ಹತ್ತಿರಕ್ಕೇ ಕರೆದುಕೊಂಡು ಹೋಗಿ ನಮ್ಮ ಅಪರಾಧದ ಪಟ್ಟಿ ಸಲ್ಲಿಸಿದ. ಮ್ಯಾನೇಜರ್ ಮೊದಮೊದಲು ದರ್ಪದಿಂದ ನಮ್ಮ ಊರು, ಓದುವ ತರಗತಿ, ಮನತನದ ಹೆಸರು ಎಲ್ಲವನ್ನು ಕೇಳಿ ತಿಳಿದುಕೊಂಡು ಚಾಪೆ ಯಾಕೆ ಮುರಿದಿರಿ ಎಂದ. ನಾವು ಒಮ್ಮೆಲೆ ಸಂಗಮೇಶನಾಣೆ, ಚಾಪಿ ಮುರೀಲಿಲ್ಲ. ಹಾಗೆ ಮೇಲಕ್ಕೆತ್ತಿ ಒಳಗೆ ಹೊಗಲು ಪ್ರಯತ್ನಿಸಿದ್ದು ನಿಜ ಎಂದು ತಪ್ಪೊಪ್ಪಿಕೊಂಡೆವು. ಆಗ ಅವನು ಮೂಗು ಹಿಡಿದುಕೊಂಡು ಮೂರು ಸಲ ನಿಮ್ಮ ನಿಮ್ಮ ಕಪಾಳಕ್ಕೆ ನೀವೆ ಹೊಡೆದುಕೊಳ್ಳಿ ಎಂದು ಬಿಟ್ಟ. ನಾವು ಹಾಗೆ ಹೊಡೆದುಕೊಂಡು ಸುಮ್ಮನೆ ಅವನೆದುರಿಗೆ ತಲೆ ತಗ್ಗಿಸಿ, ನೆಲವನ್ನು ಕಾಲ್ಬೆರಳಿನಿಂದ ಕೆರೆಯುತ್ತ ನಿಂತು ಬಿಟ್ಟೆವು. ಹೋಗಿ ಇನ್ನು ಮನೆಗೆ ಎಂದ. ನಾವು ಹೋಗಲಿಲ್ಲ. ಈ ಮನುಷ್ಯ ಸ್ವಲ್ಪ ಒಳ್ಳೆಯವನು ಎಂಬ ಭಾವನೆ ಮನಸ್ಸಿಗೆ ಬಂತು. 'ನಮಗೆ ದುಡ್ಡು ಸಿಗಲಿಲ್ಲ. ನಾಟಕ ನೋಡಲು ಬಂದಿದ್ದೆವು. ಹಿಂದೆ ಕುಳಿತುಕೊಂಡು ನೋಡುತ್ತೇವೆ' ಎಂದು ಧೈರ್ಯಮಾಡಿ ಅಂದುಬಿಟ್ಟೆವು. ಅವನಿಗೇನು ಕರುಣೆಬಂತೋ ಏನೋ, ತಾನೆ ಬಂದು ಎರಡಾಣೆ ವಿಭಾಗದ ಗೇಟಿನಲ್ಲಿ ಒಳಗೆ ಬಿಡಿಸಿಹೋದ. ಇಷ್ಟು ಹೊತ್ತಿಗಾಗಲೆ ಹನುಮಂತ ಲಂಕಾಪಟ್ಟಣಕ್ಕೆ ಬಂದು ಅಶೋಕವನದಲ್ಲಿ ಸೀತಾದೇವಿಯೊಡನೆ ಮಾತನಾಡುವ ಭಾಗ ಪ್ರಾರಂಭವಾಗಿತ್ತು. ಜನಗಳು ನಗೆಗಡಲಲ್ಲಿ ತೇಲಾಡುತ್ತಿದ್ದರು.

ಸೀತಾದೇವಿಗೆ ಹನುಮಂತ ತಾನು ರಾಮನ ದೂತನೆಂದೂ ಕಿಷ್ಕಿಂಧೆಗೆ ಬಂದು ರಾಮನು ಕ್ಷೇಮವಾಗಿದ್ದನೆಂದೂ ಹೇಳುತ್ತಿದ್ದ ಪ್ರಸಂಗ ಅದು. ಸೀತಾದೇಪಿ ಇದು ರಾಕ್ಷಸರ ಮಾಯೆಯೆಂದು ಹೆದರಿ ತನ್ನ ಕೂದಲನ್ನು ತನ್ನ ಕತ್ತಿಗೆ ಬಿಗಿದು ಕೊಂಡು ಪ್ರಾಣ ಬಿಡುತ್ತೇನೆಂದು ತಾನೇ ಅಂದುಕೊಳ್ಳುವಾಗ ಹನುಮಂತ 'ಕೈ ಬಿಗಿಹಿಡಿ ದೇವಿ, ಜೀವಂತವಾಗಿದ್ದರೆ ಮನುಷ್ಯ ನೂರಾರು ಮಂಗಳಗಳನ್ನು ನೋಡುತ್ತಾನೆ. ಆತ್ಮಹತ್ಯೆ ಮಾಡಿಕೊಂಡು ಘೋರಪಾಪಕ್ಕೆ

ಹೋಗಬೇಡಿ. ಇಗೋ ನಾನು ಕಳ್ಳನಲ್ಲ, ಸುಳ್ಳನಲ್ಲ, ರಾಕ್ಷಸನು ನಾನಲ್ಲ' ರಾಮಚಂದ್ರನ ಭಟ. ಇತ್ಯಾದಿಯಾಗಿ ಒಂದು ಒಳ್ಳೆಯ ಹಾಡನ್ನು ಕೋತಿಯನ್ನು ಮಿಕ್ಕಿಸುವ ತನ್ನ ಚಾಣಕ್ಯಪೂರ್ಣ ಅಭಿನಯ ಕೌಶಲದೊಡನೆ ಹೇಳುತ್ತಿದ್ದ ನಂಜುಂಡಯ್ಯನ ಪ್ರತ್ಯುತ್ಪನ್ನಮತಿ ಮಾತಿನ ಸ್ವಾರಸ್ಯ ಮತ್ತು ಚಾತುರ್ಯದಿಂದ ತನ್ನೊಡನೆ ಸಂಭಾಷಿಸುವ ಪಾತ್ರವನ್ನು ಒಮ್ಮೊಮ್ಮೆ ಕಕ್ಕಾಬಿಕ್ಕಿಯಾಗುವಂತೆ ಮಾಡಿ ಬಿಡುತ್ತಿದ್ದ. ಹನುಮಂತನ ಮಾತಿಗೆ ಉತ್ತರ ಕೊಡಲು ಅಸಮರ್ಥಳಾದ ಸೀತೆಯ ಬಾಯಿಕಟ್ಟಿ ಮಾತು ಮರೆತು ಹೋದವೋ ಏನೋ ತಬ್ಬಿಬ್ಬಾದಳು. ಆಗ ಹನುಮಂತನೇ "ತಾಯಿ, ಶ್ರೀರಾಮಚಂದ್ರನ್ನು ಅಗಲಿದ ದುಃಖದಿಂದ ನಿನ್ನ ಕುತ್ತಿಗೆ ಬಿಗಿದು ಕಂಠದಿಂದ ಮಾತೇ ಹೊರಡುತ್ತಿಲ್ಲ. ಬೇಡ, ಮಾತನಾಡಬೇಡ ಸುಮ್ಮನಿದ್ದು ಬಿಡು. ಇಗೋ ಈ ರಾಮಚಂದ್ರನೇ ಕೊಟ್ಟ ಮುದ್ರೆಯ ಉಂಗುರವನ್ನಾದರೂ ನೋಡಿ ನನ್ನನ್ನು ನಂಬು" ಎಂದು ಬಿಟ್ಟ. ಜನ ಗೊಳ್ಳೆಂದು ನಕ್ಕುಬಿಟ್ಟಿತು. ನಮಗಂತೂ ಆಗ ಜನ ಏಕೆ ನಕ್ಕರೆಂದೇ ತಿಳಿಯಲಿಲ್ಲ. ಅಂದು ಬೆಳಕು ಹರಿಯುವವರೆಗೆ ರಾಮಾಯಣ ನೋಡಿ ಮಹಾಸಾಹಸದ ಕಾರ್ಯ ಮಾಡಿ ಎರಡಾಣೆ ಉಳಿಸಿ ಪುಕ್ಕಟ್ಟೆ ನಾಟಕ ನೋಡಿ ಬಂದೆವೆಂಬ ಹೆಮ್ಮೆಯಿಂದ ಮನೆಗೆ ಬಂದೆವು.

**ಇನ್ನೊಮ್ಮೆ ದುಡ್ಡಿಲ್ಲದೆ ನಾಟಕ ನೋಡಲು ಹೋಗಿ ಸಿಕ್ಕಿಬಿದ್ದದ್ದು**

ಕುಂಕೂರು ಮಳಲಿಯ ಕೃಷ್ಣಪಾರಿಜಾತ ನಾಟಕ ಕೂಡಲಜಾತ್ರೆಗೆ ಬಂದಿತ್ತು. ಅದೊಂದು ಒಳ್ಳೆ ಜಾನಪದ ಶೈಲಿಯ ಗತ್ತುಗಾರಿಕೆಯ ಹಾಡನ್ನುಳ್ಳ ನಾಟಕ. ಜನಗಳು ಹಿಂಡುಹಿಂಡಾಗಿ ಬಂದು ನಾಟಕ ನೋಡಿ ಬಾಯಿ ತುಂಬ ಹೊಗಳುತ್ತಿದ್ದ ನಾಟಕ ಅದು. ಆ ನಾಟಕದಲ್ಲಿ ಗೊಲ್ಲತಿಯ ಪಾರ್ಟ್ ಮಾಡುತ್ತಿದ್ದ ಹುಸೇನಿ ಅನ್ನುವ ಹುಡುಗನ ಅಭಿನಯ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿ ಅವನು ಹಾಡುತ್ತಿದ್ದ ಹಾಡುಗಳು ಎಲ್ಲರ ನಾಲಗೆಯ ಮೇಲೆ ನಲಿದಾಡುತ್ತಿದ್ದವು. ನಾವು ಏನಾದರೂ ಮಾಡಿ ಆ ನಾಟಕ ನೋಡೇ ನೋಡಬೇಕೆಂಬ ಸಂಕಲ್ಪ ಮಾಡಿದೆವು. ಅಷ್ಟು ಹೊತ್ತಿಗಾಗಲೆ ನಮ್ಮ ಟ್ರೆಝರಿ ಖಾಲಿಯಾಗಿ ಹೋಗಿತ್ತು. ಆದರೂ ನಾಟಕವನ್ನಂತೂ ನೋಡಲೇಬೇಕು, ಹೇಗೆ ಮಾಡಬೇಕು? ಎಂದು ಯೋಚನಾಮಗ್ನರಾದೆವು. ಒಂದು ದಿನ ಮಧ್ಯಾಹ್ನ ನಾಟಕ ಥೇಟರ್ ಹತ್ತಿರ ಹೋದೆವು. ಕಂಪನಿಯವರು ಅಲ್ಲಿಯೇ ಇದ್ದ ಮಾವಿನ ಮರದ ನೆರಳಲ್ಲಿ ಅಂದು ರಾತ್ರಿಗೆ ಬೇಕಾದ ಎರಡಾಣೆ-ನಾಲ್ಕಾಣೆ-ಎಂಟಾಣೆ ಟಿಕೇಟುಗಳನ್ನು ತಯಾರಿಸುತ್ತಿದ್ದರು. ಅವರಿಗೆ ಮುದ್ರಣ ಮಾಡಿಸಿದ ಟಿಕೇಟ್ ಬುಕ್ಕುಗಳಿರಲಿಲ್ಲ. ಗಣಪತಿ-ಶಿವ-ವಿಷ್ಣುವಿನ ರಬ್ಬರ್ ಸ್ಟಾಂಪುಗಳನ್ನು ಒತ್ತಿ ಆ ಟಿಕೆಟ್ ತಯಾರಿಸುತ್ತಿದ್ದರು. ಎರಡನೇ ಟಿಕೆಟ್ ಮೇಲೆ ಗಣಪತಿ-ನಾಲ್ಕಾಣೆ ಟಿಕೆಟ್ ಮೇಲೆ ವಿಷ್ಣು, ಎಂಟಾಣೆ ಟಿಕೆಟ್ ಮೇಲೆ ಶಿವ - ಈ ಚಿತ್ರಗಳಿರುತ್ತಿದ್ದವು. ರಬ್ಬರ್ ಸ್ಟಾಂಪ್ ಚೆನ್ನಾಗಿ ಮೂಡುತ್ತದೋ ಇಲ್ಲವೋ ಎಂದು ಬಿಳಿಹಾಳೆಗಳ ಮೇಲೆ ಒತ್ತಿ ನೋಡಿ ನೋಡಿ ಆ ಹಾಳೆಗಳನ್ನು ಅಲ್ಲಿ ಬಿಸಾಡಿದ್ದರು. ಅಧಿಕೃತ ಟಿಕೆಟ್‌ಗಳನ್ನು ಒಂದು ಕರಿ ಬಣ್ಣ, ಇನ್ನೊಂದು ಕಡೆ ಬಿಳಿಯದಾಗಿರುವ ಕಾಗದದ ಮೇಲೆ ಒತ್ತಿ ಒತ್ತಿ ಬುಕ್ಕು ಕಟ್ಟುತ್ತಿದ್ದರು. ನಮ್ಮ ದೃಷ್ಟಿ ಬಿದ್ದ ಕಾಗದದ ಚೂರುಗಳ ಮೇಲೆ ಹೋಯಿತು. ಅಲ್ಲಿ ನಮಗೆ ಗಣಪತಿ ರಬ್ಬರ್ ಸ್ಟಾಂಪ್ ಒತ್ತಿದ ಕೆಲವು ಚೂರುಗಳು ಸಿಕ್ಕವು. ಅವನ್ನು ಬಳಿದುಕೊಂಡು ಹೋದೆವು. ಅವರು ಗಣಪತಿಯನ್ನು ಒಂದು ಕಡೆ ಕೆಂಪು ಬಣ್ಣ, ಇನ್ನೊಂದು ಕಡೆ ಬಿಳಿ ಬಣ್ಣವಿರುವ ಕಾಗದದ ಮೇಲೆ ಒತ್ತಿದ್ದನ್ನು ನೋಡಿಕೊಂಡೆವು. ಮನೆಗೆ ಬಂದುದೇ ತಡ, ತೆಗ್ಗಳ್ಳಿ ಚನ್ನಬಸಪ್ಪನ ಅಂಗಡಿಗೆ ಜೋಳ ಸುರಿದು ಅಂಥದೇ ಹಾಳೆ ಖರೀದಿಸಿದೆವು. ಅದರಲ್ಲಿ ರಬ್ಬರ್

ಸ್ಟಾಂಪಿನ ಗಣಪತಿಯನ್ನು ಎಚ್ಚರದಿಂದ ಕತ್ತರಿಸಿ, ಅಂಟಿಸಿ, ಟಿಕೇಟ್ ಹರಿಯುವ ಸ್ಥಳದಲ್ಲಿ ಸೂಜಿಯಿಂದ ತೂತುಗಳನ್ನು ಮಾಡಿ ಅಂತೂ ಮೂರು ಟಿಕೆಟ್ ಮಾಡಿಕೊಂಡೆವು. ನಾವು ಈ ಕಾರ್ಯದಲ್ಲಿ ಯಶಸ್ವಿಗೊಳ್ಳುತ್ತೇವೆಂದು ಭಾವಿಸಿ ಜಾತ್ರೆಗೆ ಬಂದು ಥೇಟರಿನಲ್ಲಿ ಎರಡಾಣೆ ಗೇಟಿನಲ್ಲಿ ಟಿಕೆಟ್ ಕೊಟ್ಟೆವು. ಅರ್ಧ ಹರಿದು ಇನ್ನರ್ಧ ತನ್ನ ಕೈಯಲ್ಲಿಟ್ಟುಕೊಂಡು ಒಳಗೆ ಬಿಟ್ಟ. ಹೋಗಿ ಜನಗಳ ದಾರಿಯಲ್ಲಿ ಸ್ಥಳಮಾಡಿಕೊಂಡು ಕುಳಿತು ಬಿಟ್ಟೆವು. ಒಳ್ಳೆಯ ಸ್ವಾರಸ್ಯಕರ ಪ್ರಸಂಗವೇ ನಡೆದಿತ್ತು. ಕೃಷ್ಣ ಗೊಲ್ಲತಿಯ ಸೀರೆ ಸೆರಗು ಹಿಡಿದಿದ್ದ. ಅವಳು "ಅಪ್ಪ ಸೆರಗ ಬಿಡೊ...ಅಪ್ಪ ಸೆರಗ ಬಿಡೊ..ಅಣ್ಣ ಸೆರಗ ಬಿಡೊ" ಎಂದು ಹಾಡುತ್ತಿದ್ದರೆ ಕೃಷ್ಣ "ಅಪ್ಪನು ನಾನಲ್ಲ ಅಣ್ಣನೂ ನಾನಲ್ಲ, ನಿಮಪ್ಪನ ಅಳಿಯನಾಗುವನೇ ಗೊಲ್ಲರ ಬಾಲೆ...." ಎಂಬ ಬಹು ಮನಮೋಹಕ ಪ್ರಸಂಗವಿದು. ಇದ್ದಕ್ಕಿದ್ದಂತೆ ಈ ರಸಪ್ರಸಂಗವನ್ನು ಭಂಗಗೊಳಿಸುವುದಕ್ಕೆ ಓರ್ವ ಥಾಂಡಿಗ ಕೈಯಲ್ಲಿ ಬ್ಯಾಟರಿ ಹಿಡಿದುಕೊಂಡು ಬಂದ. ಹತ್ತು-ಹನ್ನೆರಡು ನಿಮಿಷಗಳಾಗಿರಬಹುದು ಅಷ್ಟೇ. ನಮ್ಮ ಪಾಲಿನ ಯಮನಂತೆ ಬ್ಯಾಟರಿ ಬೆಳಕು ಮಾಡಿ ಯಾರನ್ನೋ ಹುಡುಕುತ್ತ ಬರುತ್ತಿರುವ ಈ ಮನುಷ್ಯನನ್ನು ಕಂಡು ಎದೆ ಬಡಿದುಕೊಳ್ಳತೊಡಗಿತು. ಅವನು ಜನಗಳ ಮಧ್ಯೆ ನಮ್ಮ ಹತ್ತಿರವೇ ಬಂದು ನಮ್ಮ ಗುರುತು ಹಿಡಿದು ಮೂರು ಜನ ಕಳ್ಳರನ್ನು ಹಿ ಡಿಯುವಲ್ಲಿ ಯಶಸ್ವಿಯಾದ. ಹೊರಗೆ ಕರೆದುತಂದು ನಮ್ಮನ್ನು ನಗೆಪಾಟಲುಗೊಳಿಸಿಬಿಟ್ಟ. ನಾವು ಕತ್ತಲಲ್ಲಿ ಅವನ ಕೈಯಿಂದ ತಪ್ಪಿಸಿಕೊಂಡು ಬೀಳುತ್ತೇಳುತ್ತ ಕೂಡಲದ ಹೊಳೆಯ ಮೂಲೆಗೆ ಓಡಿ ಬಂದುಬಿಟ್ಟೆವು. ಆ ರಾತ್ರಿ ನಮಗಾದ ಭಂಗ ಅಷ್ಟಿಷ್ಟಲ್ಲ. ಇನ್ನು ಮುಂದೆ ನಮ್ಮನ್ನು ಹಿಡಿಯುವುದು ಅವರಪ್ಪನಿಂದಲೂ ಸಾಧ್ಯವಿಲ್ಲವೆಂಬ ಮೊಂಡುಧೈರ್ಯದಿಂದ ರಾತ್ರಿಯೆಲ್ಲ ಉಳಿದ ನಾಟಕ ಮಂದಿರಗಳ ಹಿಂದೆ ಮುಂದೆ ಸುಳಿದಾಡಿ, ಹೊರಗಿನಿಂದ ಎಷ್ಟು ಹಾಡು ಮೊದಲಾದವನ್ನು ಕೇಳಬೇಕೋ ಅಷ್ಟನ್ನೂ ಕೇಳಿ ನಸುಕಿನಲ್ಲಿ ನಾಲ್ಕೈದು ಘಂಟೆಯ ಸುಮಾರಿಗೆ ಮನೆಗೆ ಬಂದು ಮಲಗಿಬಿಟ್ಟೆವು. ಮುಂದೆ ನಾಲ್ಕೈದು ದಿನಗಳು ಈ ನಾಟಕ ಮಂದಿರದ ಹತ್ತಿರ ಸುಳಿಯಲೇ ಇಲ್ಲ. ಕೊನೆಗೊಂದು ದಿನ ಎರಡಾಣೆ ಹೊಂದಿಸಿಕೊಂಡು ಕೃಷ್ಣ ಪಾರಿಜಾತ ನಾಟಕವನ್ನು ನೋಡಿ ತೃಪ್ತಿಪಟ್ಟೆವು. ಅದರಲ್ಲಿ ಕೃಷ್ಣನ ಪಾತ್ರ ಮಾಡುವ ಹುಡುಗ ಮತ್ತು ಗೊಲ್ಲತಿ ಪಾತ್ರ ನಿರ್ವಹಿಸುವ ಹುಸೇನಿಯ ಪಾತ್ರಗಳು ಇಂದಿಗೂ ಕಣ್ಣ ಮುಂದೆ ಸುಳಿದಾಡುತ್ತಿವೆ. ಹುಸೇನಿಯನ್ನು ಗಂಡು ಹುಡುಗ ಎಂದು ಯಾರೂ ಕರೆಯುವಂತೆಯೇ ಇರಲಿಲ್ಲ. ಸ್ವರ ಮಾಧುರ್ಯವೂ ಅಷ್ಟೇ. ಬಹು ಮೋಹಕವಾದ ರೀತಿಯಲ್ಲಿ ಅಭಿನಯಿಸುತ್ತ ಹಾಡಿ ಜನ ಸಮೂಹವನ್ನೆಲ್ಲ ಆಕರ್ಷಿಸಿಬಿಟ್ಟಿದ್ದ. ಅವನಿಂದಲೇ ಆ ನಾಟಕಕ್ಕೆ ದುಡ್ಡಾಗುತ್ತಿತ್ತು.

### *ಹಲಗೇರಿ ಹಾಲಸಿದ್ಧೇಶ್ವರ ನಾಟಕ ಮಂಡಳಿ*

ವರ್ಷವರ್ಷವೂ ಕೂಡಲ ಜಾತ್ರೆಗೆ ಬರುವ ಅನೇಕ ಕಂಪನಿಗಳಲ್ಲಿ ನಮ್ಮನ್ನು ಬಹಳ ಆಕರ್ಷಿಸಿದ ಇನ್ನೊಂದು ದೊಡ್ಡ ಕಂಪನಿಯೆಂದರೆ ಹಲಗೇರಿ ಜಟ್ಟೆಪ್ಪನವರ ಪ್ರಸಿದ್ಧ ನಾಟಕ ಕಂಪನಿ. ಅವನು ಆಡುವ ಸ್ತ್ರೀ, ಬಿ.ಎ. ಮತ್ತು ಉತ್ತರ ಭೂಪ ನಾಟಕಗಳು ಆಗ ಕರ್ನಾಟಕದ ಎಲ್ಲರನ್ನೂ ಆಕರ್ಷಿಸಿಬಿಟ್ಟಿದ್ದವು. ಸ್ತ್ರೀ ನಾಟಕದಲ್ಲಿಯಂತೂ ಸಣ್ಣಜಟ್ಟೆಪ್ಪನ ಅಭಿನಯ ಮೊದಲಿನಿಂದ ಕೊನೆಯವರೆಗೆ ಜನಗಳನ್ನು ನಗೆಗಡಲಿನಲ್ಲಿ ಮುಳುಗಿಸಿಬಿಡುತ್ತಿತ್ತು. ಈ ಸ್ತ್ರೀ ನಾಟಕವನ್ನು ಮಾತ್ರ ಅನೇಕ ಸಲ ನೋಡಿಬಿಟ್ಟೆವು. ಆ ನಾಟಕದ ಪದ್ಯಗಳು, ಸಂಭಾಷಣೆಗಳು ಆಗ ನಮಗೆ ಬಾಯಿಪಾಠ ಆಗಿಬಿಟ್ಟಿದ್ದವು. ಜಟ್ಟೆಪ್ಪ ಸಂಗೀತಗಾರನಲ್ಲ. ಆದರೂ ಹಾಡಬಲ್ಲಾತ.

ಅವನು ರಂಗಕ್ಕೆ ಬಂದೊಡನೆಯೇ ಜನರಲ್ಲಿ ವಿದ್ಯುತ್ ಸಂಚಾರವಾದಂತಾಗುತ್ತಿತ್ತು. ನಕ್ಕು ನಗಿಸುವ ಹಾವಭಾವ, ಭಾವಪೂರ್ಣರಾಗಿರುವ ಹಾಸ್ಯಭರಿತ ಮಾತುಕತೆ ಮೊದಲಾದವುಗಳಿಂದ ಇಡೀ ನಾಟಕದ ಕೇಂದ್ರಬಿಂದುವೇ ಅವನಾಗಿದ್ದನು. ಅವನು ಸ್ತ್ರೀ ನಾಟಕದಲ್ಲಿ ತನ್ನ ಮಾವನನ್ನು ಕುರಿತು ಹಾಡುವ -

> ಬಡವನ ಕೆಡಿಸಿದ್ಯೊ ಮಾವಾ । ನಿನ್ನ । ಕಡಿದರು ಮರುಗದು ಜೀವಾ ।
> ಬೇಡಬೇಡೆಂದರ ಮದುವೆಯ ಮಾಡಿದ್ಯೋ ನೀ ।
> ಕಾಡಿದಳೋ ಆಕಿ ಓಡಿದಳೋ ॥ ಬಡವನ ಕೆಡಸಿದ್ಯೋ ಮಾವಾ ॥

ಈ ಹಾಡಾಗಲಿ, ಮದುವೆಯ ಸಮಯದಲ್ಲಿ ಹೆಂಗಸರು ಸಮೂಹ ಗಾನದಲ್ಲಿ ಹಾಡುತ್ತಿದ್ದ,

> ಜೂಜನಾಡಿದರ । ದಂಪತಿಗಳು । ಸರಿಬೆಸನಾಡಿದರ ।

ಎಂಬ ಹಾಡಾಗಲಿ ಜನಜೀವನದಲ್ಲಿ ಪ್ರವೇಶ ಮಾಡಿದ್ದವು. ಸ್ತ್ರೀ ನಾಟಕದಲ್ಲಿ ಭಗವಂತ ಎಂಬ ಮುಗ್ಧ ಮನುಷ್ಯ, ಚಾತುರ್ಯದ ವಿದ್ಯಾವತಿ ಹೆಣ್ಣಿನೊಡನೆ ವಿವಾಹವಾಗಿ ವಿಷಮ ಜೀವನ ನಡೆಸುತ್ತಿದ್ದ ಪಾತ್ರದಲ್ಲಿ ಜೆಟ್ಟೆಪ್ಪನ ಪಾತ್ರ ನಾಟಕಮುದ್ದಕ್ಕೂ ಜನಮನವನ್ನು ಸೂರೆಗೊಳ್ಳುತ್ತಿದ್ದ ದೃಶ್ಯ ಇಂದೂ ನನ್ನ ಕಣ್ಮುಂದೆ ಕಟ್ಟಿದಂತಿದೆ. ಬಹು ಸೊಗಸಾದ ಅಭಿನಯ ಅವನದು. ಈಗಿನಂತೆ ಅಶ್ಲೀಲ ಅಸಹ್ಯ ದೃಶ್ಯಾವಳಿಗಳು ಆಗ ಇರಲಿಲ್ಲ. 'ಉತ್ತರ ಭೂಪ' ನಾಟಕವಂತೂ ಈ ಕಂಪನಿಯವರ ಒಂದು ಮಹತ್ವದ ನಾಟಕ. ಬಹಳ ವರ್ಷ ಈ ನಾಟಕವನ್ನಾಡಿದರು. ಈ ನಾಟಕ ಕೆಲಕಾಲ ಅಸ್ತಿತ್ವದಲ್ಲಿರಲು ಈ ನಾಟಕದ ಸತ್ವವೇ ಕಾರಣವಾಗಿರಬೇಕೆಂದು ನನ್ನ ಊಹೆ. ಈ ನಾಟಕವನ್ನು ಸುಮಾರು ನಾನು ಹತ್ತಿಪ್ಪತ್ತು ಸಲ ನೋಡಿದ್ದೇನೆ. ಇದರಲ್ಲಿ ಸಣ್ಣ ಜೆಟ್ಟೆಪ್ಪನ 'ಉತ್ತರ ಭೂಪ'ನ ಪಾತ್ರ ಅತಿಶಯ ಜನಮೆಚ್ಚುಗೆ ಗಳಿಸಿತ್ತು. ನನಗಂತೂ ಈ ನಾಟಕ ನೋಡಿ ದಣಿಯೆನು. ಇದರ ಹಾಡುಗಳನ್ನು ಹಾಡಿ ದಣಿಯೆನು. ಈ ಕಂಪನಿಯಲ್ಲಿ ನನ್ನನ್ನು ಆಕರ್ಷಿಸಿದ ಇನ್ನೊಂದು ಮಹತ್ವದ ವ್ಯಕ್ತಿಯೆಂದರೆ ಮುದ್ದುವೀರಾಚಾರಿ ಎಂಬುವರು. ಅವರ ರಂಗಭೂಮಿಯ ಸಂಗೀತ ಬಹು ಮಧುರ. ವಿಶೇಷವಾಗಿ ಸ್ತ್ರೀ ಪಾತ್ರ ಮಾಡುತ್ತಿದ್ದ ಈತನು ಸ್ತ್ರೀ ಪಾತ್ರಕ್ಕೆ ಹೇಳಿ ಮಾಡಿಸಿದ ಮುಖಮಾಟ ವಗೈರೆ ಇಲ್ಲದಿದ್ದರೂ ತನ್ನ ಸಂಗೀತದ ಪ್ರೌಢಿಮೆಯಿಂದ ಜನಮನವನ್ನು ಸೆಳೆವನಾಗಿರುತ್ತಿದ್ದ.

ನನಗೆ ಉತ್ತರ ಭೂಪ ನಾಟಕದ ಅನೇಕ ದೃಶ್ಯಗಳು ಈಗಲೂ ಜ್ಞಾಪಕ. ನನ್ನ ಬಾಲ್ಯದ ಅಂಗಳದಲ್ಲಿ ನಾನು ಅವನ್ನು ಆಗಾಗ ಹಳ್ಳಿಯ ಸಭೆಗಳಲ್ಲಿ, ಮದುವೆ-ಮುಂಜಿಗಳಲ್ಲಿ, ವಿಶೇಷ ಸಂದರ್ಭಗಳಲ್ಲಿ ಯಾರಾದರೂ ಹಾಡು ಎಂದರೆ ಹಾಡಿ ಸಂಗೀತಗಾರನೂ ಎನಿಸಿದ್ದೆ. ನಸುಕಿನಲ್ಲಿ ಎದ್ದು ಹೊಲಕ್ಕೆ ಹತ್ತಿಕಡ್ಡಿ ಆಯಲಿಕ್ಕೆ, ಕುಂಟಿ ಮೆಟ್ಟಲಿಕ್ಕೋ ಹೋಗಬೇಕಾದ ಸಂದರ್ಭಗಳು ನನಗೆ ಆಗಾಗ ಬರುತ್ತಿದ್ದವಷ್ಟೇ. ಆಗ ನಸುಕಿನಲ್ಲಿ ಅನೇಕ ನಾಟಕ ಪದ್ಯಗಳನ್ನು ಹಾಡುತ್ತಿದ್ದೆ. ಈ ಹಾಡುಗಳ ಮೂಲಕವೇ ನಮ್ಮೂರ ಜನ ನನ್ನನ್ನು ಸಂಗೀತಗಾರನೆಂದು ಭಾವಿಸಿಬಿಟ್ಟಿದ್ದರು. ಉತ್ತರೋತ್ತರ ನಾನು ಸಂಗೀತಾಭ್ಯಾಸ ಮಾಡಿ ಸರಿಗಮ ಗೊತ್ತಿಲ್ಲದಿದ್ದರೂ, ರಾಗ-ತಾಳಗಳ ತಳಬುಡ ಗೊತ್ತಿಲ್ಲದಿದ್ದರೂ ಗವಾಯಿ ಎಂದು ಹಳ್ಳಿಜನಗಳಿಂದ ಕರೆಸಿಕೊಂಡು ನನ್ನ ಭುಜವನ್ನು ನಾನೇ ನೋಡಿಕೊಂಡುದೂ ಉಂಟು. ನಾನು ದೊಡ್ಡವನಾಗಿ ನಮ್ಮ ಮನೆತನದ ವ್ಯವಸಾಯ ಸಂತೆ ಪೇಟೆ ನೋಡಿಕೊಳ್ಳುತ್ತಿದ್ದ ಕಾಲದಲ್ಲಿ ನಾಲ್ಕಾಣೆ ಎಂಟಾಣೆ ಸೀಟುಗಳಲ್ಲಿ ಕುಳಿತು

ನಾಟಕ ನೋಡಿದ್ದುಂಟು. ಇದರ ಮುಖ್ಯ ಉದ್ದೇಶ ಈ ಪಾತ್ರಧಾರಿಗಳ ಆಕಾರ, ರೂಪಾದಿಗಳನ್ನು ನೋಡುವುದು ಮತ್ತು ಸಮೀಪದಿಂದ ಅವರ ಹಾಡು ಕೇಳುವುದು ಆಗಿತ್ತು. ಬಣ್ಣ ಬಳಿದುಕೊಂಡಾಗ ಹೀಗೆ ಕಾಣುವ ಇವರ ನಿಜರೂಪ ಹೇಗಿರುತ್ತದೆಂದು ತಿಳಿಯಲು ಮರುದಿನ ಥೇಟರಿನ ಸುತ್ತಮುತ್ತ ಅವರು ಹೋಗುವ ಹೋಟಲುಗಳತ್ತ, ಮಧ್ಯಾಹ್ನ ತಾಲೀಮ್‌ಮಾಡುವಾಗಿನ ಸಮಯದಲ್ಲಿ ಸುಳಿದಾಡಿ ಉದ್ದ ಕೂದಲಿನ ತಲೆ, ತಲೆಯ ಮೇಲಿನ ಟೋಪಿ, ಮುಖದ ನಿಸ್ತೇಜತೆ ಕಂಡು ಇಷ್ಟೆಯೋ ಇವರ ನಿಜವಾದ ಬಣ್ಣ ಅಂದದ್ದೂ ಉಂಟು. ಆದರೂ ನಾಟಕ ನೋಡುವ ಚಟ ಮಾತ್ರ ಕಡಿಮೆ ಆಗಿರಲಿಲ್ಲ.

ಮುಂದೆ ಕೆಲ ವರ್ಷಗಳ ಮೇಲೆ, ಅಂದರೆ ನಾನು ದೊಡ್ಡವನಾಗಿ ಮುಲ್ಕೀ ಪರೀಕ್ಷೆ ಪಾಸಾದ ಮೇಲೆ ನನ್ನ ಮೇಲೆ ಅತ್ಯಂತ ಪ್ರಭಾವ ಬೀರಿದ್ದ ನಾಟಕ ಕಂಪೆನಿಯೆಂದರೆ ಡಾ. ಮಲ್ಲಿಕಾರ್ಜುನ ಮನ್ಸೂರರವರ ಅಣ್ಣಂದಿರಾದ ಬಸವರಾಜ ಮನ್ಸೂರರ ನಾಟಕ ಕಂಪನಿ. ಆ ಕಂಪನಿಯವರು ಆಡುತ್ತಿದ್ದವು ಅಕ್ಷಯಾಂಬರ, ಕಡ್ಲಿಮಟ್ಟಿ ಸ್ಟೇಷನ್ ಮಾಸ್ತರ್, ಉಷಾಸ್ವಯಂವರಗಳು. ಈ ನಾಟಕಗಳನ್ನು ಅದೆಷ್ಟು ಸಲ ನೋಡಿದರೂ ನನಗೆ ತೃಪ್ತಿಯೇ ಆಗಲಿಲ್ಲ. ಆ ನಾಟಕದಲ್ಲಿ ರಂಗಭೂಮಿಯ ಮೇಲೆ ಸುಶ್ರಾವ್ಯವಾಗಿ ಹಾಡಿ ಜನಗಳನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತಿದ್ದ 'ಸುಶೀಲಾ', ಅದರ ಸಂಗೀತಕ್ಕೆ ಸಮಾನವಾದ ಇನ್ನೊಬ್ಬರ ಸಂಗೀತವನ್ನೇ ಕೇಳಿಲ್ಲ. ಇಂಥ ಬೇರೊಬ್ಬ ಅಭಿನೇತ್ರಿಯನ್ನು ನಾನು ನೋಡಲಿಲ್ಲ. ಈ ವಿಷಯವನ್ನು ಮುಂದೆ ಪ್ರಸ್ತಾಪಿಸುತ್ತೇನೆ.

ಒಟ್ಟಿನಲ್ಲಿ ನಾಟಕಗಳನ್ನು ನೋಡಿ ನನ್ನ ಜೀವನದಲ್ಲಿ ನಾನು ನನ್ನನ್ನು ಬೆಳೆಸಿಕೊಂಡದ್ದು ಬಹಳ. ನನ್ನ ಉತ್ತರ ವಯಸ್ಸಿನ ಶಿವಕಥೆ, ಪುರಾಣ ಪ್ರವಚನ, ನಾಟಕಗಳ ಬರವಣಿಗೆಗಳಿಗೆಲ್ಲ ಅಲ್ಪಸ್ವಲ್ಪ ಯಶಸ್ಸನ್ನು ಸಾಧಿಸಿದ್ದು ನಾಟಕಗಳನ್ನು ನೋಡಿ ಪ್ರಭಾವಿತನಾಗಿ ಸ್ವತಃ ನಾನೇ ಬೆಳೆಸಿಕೊಂಡ ಕೆಲವು ವ್ಯಕ್ತಿತ್ವಗಳು. ಈ ಬಗ್ಗೆಯೂ ಮುಂದೆ ಪ್ರಸ್ತಾಪಿಸುತ್ತೇನೆ. ಅಂತೂ ನನ್ನ ನಾಟಕ ನೋಡುವ ಚಟಕ್ಕೆ ನಮ್ಮ ಮನೆಯ ಎಣ್ಣೆಗೂಡಿನಲ್ಲಿ ಎಂದಿನಿಂದಲೂ ಬಿದ್ದಿದ್ದ ಬೆಳ್ಳಿಯ ಮೂರು ಕರಡಿಗೆ, ಇತರ ಬೆಳ್ಳಿ ಚೂರು, ಮುರುಕ ಜಾಗಟೆ, ಗಂಟೆ ಮೊದಲಾದವು ಕಾಸಿಗೆ ಪಂಚೇರಿನಂತೆ ನನ್ನಿಂದ ಮಾರಾಟವಾಗಿ ಹೋದವು. ಏಳು ತೊಲೆಯ ಒಂದು ಒಡಕ ಕರಡಿಗೆ ಒಂದೂವರೆ ರೂಪಾಯಿಗೆ ಚಿನಿವಾಲನ ಕೈ ಸೇರಿಹೋಯಿತು ಎಂಬುದು ಜ್ಞಾಪಕ.

# ಅಧ್ಯಾಯ - 2

## ಬಾಲ್ಯದಲ್ಲಿ ನನ್ನನ್ನು ಪ್ರಭಾವಿತನನ್ನಾಗಿ ಮಾಡುತ್ತಿದ್ದ ನಮ್ಮ ಹಳ್ಳಿಯ ಸಾಂಸ್ಕೃತಿಕ ಕಾರ್ಯಕ್ರಮಗಳು

### ದ್ಯಾಮವ್ವನ ಉಡಿ ತುಂಬುವ ಸಮಾರಂಭ

ನಮ್ಮೂರಿನ ಸುತ್ತಮುತ್ತಲಿನ 64 ಹಳ್ಳಿಗಳಿಗೆ ಗ್ರಾಮದೇವತೆ ಒಬ್ಬಳೇ. ಮೂಲತಃ ಅವಳು ನಮ್ಮೂರಿಂದ ನಾಲ್ಕು ಮೈಲು ದೂರವಿರುವ ಕುಂದೂರಿನ ದೇವತೆ. ಅದು ಅವಳ ಗಂಡನ ಮನೆ ಅಂತೆ. ಉಳಿದ ಅರವತ್ತು ನಾಲ್ಕು ಹಳ್ಳಿಗಳು ಅವಳ ತವರು ಮನೆಯಂತೆ. ಆ ದೇವತೆಯ ಹೆಸರು 'ದ್ಯಾಮವ್ವ'. ಇದು ಈಗ ಬಂಗಾಳದಲ್ಲಿ ಉಪಾಸನೆ ಮಾಡುವ ಶಕ್ತಿ ದೇವತೆ. ಅದೇ ಆಕಾರ, ಅದೇ ಅವಳ ಕಥೆ. ಕರ್ನಾಟಕದಲ್ಲಿ ಚಾಮುಂಡೇಶ್ವರಿ ಎಂದು ಕರೆಯುವುದು ಇದೇ ದೇವತೆಯನ್ನು. ಇವಳೇ ಮಹಿಷಾಸುರಮರ್ದಿನಿ. ಇದೊಂದು ಶಾಕ್ತೇಯರ ಉಪಾಸನಾ ಮೂರ್ತಿ. ಇವಳಿಗೆ ಅನೇಕ ಕೈಗಳು. ಕೈಗಳಲ್ಲಿ ಆಯುಧಗಳು. ಮುಂದೆ ಓರ್ವ ರಾಕ್ಷಸ. ಅವನನ್ನು ತಿವಿಯುವಂತೆ ರೂಪಿಸಿರುವ ಭಲ್ಲೆ. ಒಂದು ಕೋಣ. ಇವು ಈ ದೇವತೆಯ ಚಿಹ್ನೆಗಳು. ಇವಳಿಗೆ 'ದ್ಯಾಮವ್ವ' ಎಂಬ ಹೆಸರು ಹೇಗಂಟಿತೋ. ಇದರ ವ್ಯಾಕರಣ ದೃಷ್ಟಿಯ ಸಾಧುತ್ವದ ವಿಷಯ ಬೇಕಿಲ್ಲ. ಈ ದೇವತೆಯನ್ನು ಕೆಲವು ಕಡೆ 'ದ್ಯಾಮಲಾಂಬಾ' ಇತ್ಯಾದಿ ಸ್ವಲ್ಪ ಸುಸಂಸ್ಕೃತರೆನಿಸುವ ಹೆಸರಿನಿಂದ ಕರೆಯುವುದುಂಟು. ಅದರ ಗೊಡವೆ ಬೇಕಾಗಿಲ್ಲ.

ಈ ದೇವತೆ ಮಾತ್ರ ಹಳ್ಳಿಯ ಜನಜೀವನಕ್ಕೆ ಬಹಳ ಹೊಂದಿಕೊಂಡ ದೇವತೆ. ಪ್ರತಿಯೊಂದು ಊರಿನಲ್ಲಿರುವ ಎಲ್ಲ ವರ್ಗ-ವರ್ಣ-ಜಾತಿ-ಕಸಬುದಾರರಿಗೂ ಬೇಕಾದ ದೇವತೆ. ಇಷ್ಟೇ ಅಲ್ಲ. ಇವಳ ಸಂಬಂಧ ಎಂತಹುದು ಎಂದರೆ 'ಊರ ಮಗಳು' ಎಂಬ ಕಲ್ಪನೆ. ಕುಂದೂರಿನಲ್ಲಿರುವ ಈ ಶಕ್ತಿದೇವತೆಯನ್ನು ಕರೆಯುವ, ಕಳಿಸುವ ವಿಧಾನಗಳು ಬಹಳ ಹೃದಯಸ್ಪರ್ಶಿಯಾದವುಗಳು; ಭಾವೈಕ್ಯಪೂರ್ಣವಾದವುಗಳು. ಐದು ವರ್ಷಕ್ಕೋ ಆರು ವರ್ಷಕ್ಕೋ ಒಮ್ಮೊಮ್ಮೆ ಒಂದೊಂದು ಹಳ್ಳಿ ಪಂಚರೆಲ್ಲರೂ ಸೇರಿ "ದ್ಯಾಮವ್ವನನ್ನು ಕರೆಸಿ ಬಹಳ ದಿನ ಆದವು. ಈ ವರ್ಷ ಕರೆತರಬೇಕು" ಎಂದು ಮಾತನಾಡಿ ಕುಂದೂರಿನ ಪಂಚರಿಗೆ "ನಾವು ದ್ಯಾಮವ್ವನನ್ನು ಕರೆಯಲು ಇಂಥ ದಿನ ಬರುತ್ತೇವೆ" ಎಂದು ತಿಳಿಸಬೇಕು. ದರಂತೆ ಆ ದಿನ ಅಷ್ಟು ಹೊತ್ತಿಗೆ ಅಲ್ಲಿನ ಪಂಚರೂ ಸೇರಿ ಕರೆಯ ಹೋಗುವ ಊರಿನ ಪಂಚರ ದಾರಿ ಕಾಯುವರು. ಇವರು ಹೋದಮೇಲೆ ಆತ್ಮೀಯವಾಗಿ ಬೀಳ್ಕೊಂಡು ದ್ಯಾಮವ್ವನ ಗುಡಿಯಲ್ಲಿಯೇ ಬಂದಿರುವ ಇವರಗೆಲ್ಲ ನೆನೆದ ಕಡಲೆ, ಬೆಲ್ಲ, ನೀರು ಕೊಟ್ಟು ಸತ್ಕರಿಸುತ್ತಾರೆ. ಆಮೇಲೆ ಮಾತುಕತೆ ಪ್ರಾರಂಭವಾಗಿ ಸಾಧಕ ಬಾಧಕಗಳೆಲ್ಲವನ್ನೂ ಚರ್ಚೆ ಮಾಡಿ ಕುಂದೂರಿನವರು ಕರೆದುಕೊಂಡು ಹೋಗಿರೆಂದರೆ ಮಾತ್ರ ಕರೆಯಲು ಬರುವ ದಿನ ಗೊತ್ತು ಮಾಡಿ, ಊರಿಗೆ ಬರುವರು. "ಈಗ ಕಳಿಸಲು ಆಗುವುದಿಲ್ಲ. ಮುಂದೆ ಇಂಥ ದಿನ ಬನ್ನಿ, ಆಗ ಮಾತಾಡೋಣ, ಈಗ ಸದ್ಯಕ್ಕೆ ಕಳಿಸಲಾಗುವುದಿಲ್ಲ" ಎಂದರೆ ಏನೂ ಮಾಡುವಂತಿಲ್ಲ, ಬರಿಗೈಲೆ ಬರಬೇಕು. ಮನೆ ಮಗಳನ್ನು ಕರೆಕಳಿಸುವಾಗಿನ ನಿಜಜೀವನದ ಹತ್ತಿರದ ಮಾತುಕತೆಗಳು ಯಾವ ವಿರಸವೂ ಇಲ್ಲದೆ ನಡೆಯುವುದನ್ನು ನೋಡಿದರೆ ನಮ್ಮ ಗ್ರಾಮೀಣ ಬದುಕಿನಲ್ಲಿ ಹಿಂದೆ ಹಳ್ಳಿ ಹಳ್ಳಿಗಳಿಗಿದ್ದ ಸಾಮರಸ್ಯ ಈಗ ಎಲ್ಲಿ ಹೋದುವು ಎನ್ನಿಸುತ್ತದೆ.

ನಮ್ಮ ಊರಿನಲ್ಲಿ ನಮ್ಮ ದೊಡ್ಡಪ್ಪ ಮುಖ್ಯ ಪಂಚ. ಪಂಚ ಎಂದರೆ ಈಗಿನಂತೆ ಚುನಾಯಿತ ಪಂಚನಲ್ಲ. ನಮ್ಮ ಮುತ್ತಜ್ಜ ಬಾಳಪ್ಪನ ಕಾಲದಿಂದಲೂ ಈ ಪಂಚತನ ನಮ್ಮ ಮನೆತನಕ್ಕೆ ಜನಗಳಿಂದಲೇ ಕೊಡಲ್ಪಟ್ಟ ಒಂದು ಅನಭಿಷಿಕ್ತ ಚಕ್ರವರ್ತಿಯ ಹುದ್ದೆ. ಅದರಂತೆ ನಮ್ಮ ಬಾಲ್ಯದಲ್ಲಿ ನಮ್ಮ ದೊಡ್ಡಪ್ಪ ನಮ್ಮ ಊರ ಪಂಚಪ್ರಮುಖ. ದ್ಯಾಮವ್ವನನ್ನು ಕರೆಯಲು ಒಮ್ಮೆ ಹೋದಾಗ ನನ್ನನ್ನು ಕರೆದುಕೊಂಡು ಹೋಗಿದ್ದ. ಕರೆಯಲು ಹೋಗುವಾಗ ಗಾಡಿ ಗೀಡಿ ಮೇಲೆ ಹೋಗುವಂತಿಲ್ಲ, ನಡೆದುಕೊಂಡೇ ಹೋಗಬೇಕು. ಅಷ್ಟು ಶ್ರದ್ಧೆ ಅವರಿಗೆ ದ್ಯಾಮವ್ವನ ವಿಷಯದಲ್ಲಿ. ನಮ್ಮೂರ ಪಂಚರಲ್ಲಿ ಇನ್ನೊಬ್ಬಿಬ್ಬರ ಹೆಸರೆಂದರೆ ಮಳೆಪ್ಪನವರ ಬಸಪ್ಪ, ಹಿರೇಮನೆ ಕುರುವತ್ತೆಪ್ಪ, ಮುಸಲ್ಮಾನ ವರ್ಗದ ಪೀರು ಪಟೇಲ್.... ಇತ್ಯಾದಿ ಜ್ಞಾಪಕ. ಇವರೆಲ್ಲ ಹೋದಾಗ ಕುಂದೂರಿನ ಗೌಡ ಶಾನುಭೋಗ ಪಂಚರೇ ಮೊದಲಾದವರು ಗುಡಿಯಲ್ಲಿ ಗುಡಾರ ಹಾಸಿ ಹರವಿಯವರು ಬಂದರೆ ಏನು ಹೇಳಿ ಕಳಿಸಬೇಕೆಂಬ ಬಗ್ಗೆ ಸಾಕಷ್ಟು ಚರ್ಚೆಮಾಡೇ ಇರುತ್ತಿದ್ದರು. ನನಗೆ ಅಂದು ನಡೆದ ಅಲ್ಲಿನ ಮಾತುಕತೆಯಲ್ಲಿ ಕುಂದೂರಿನವರು ಈಗ ಕಳಿಸಲಾಗುವುದಿಲ್ಲ ಎಂದ ಮಾತಿಗೆ ಉತ್ತರವಾಗಿ ನಮ್ಮ ದೊಡ್ಡಪ್ಪ ದನಿ ಎತ್ತರಿಸಿ. 'ನಾವು ದೇವಿಯನ್ನು ಕರೆದೊಯ್ದು ಆರೇಳು ವರ್ಷಗಳಾದವು. ಆರೇಳು ವರ್ಷಗಳಿಗೊಮ್ಮೆಯಾದರೂ ಮನೆಮಗಳನ್ನ ಕಳಿಸಿಕೊಡಲಾಗುವುದಿಲ್ಲ ಎಂದು ನೆಪ ಹೇಳಿದರೆ ಹೇಗೆ?' ಎಂದು ಅವರನ್ನು ಗದ್ದರಿಸಿದ್ದು ಜ್ಞಾಪಕ. ಪೀರುಪಟೇಲನ ಅಬ್ಬರವಂತೂ ಹೇಳತೀರದು. ಕೊನೆಗೆ ಕೇವಲ ಒಂದು ತಿಂಗಳ ಅವಧಿಯೊಳಗೆ ದೇವಿಯನ್ನು ಉಡಿತುಂಬಿ ಕಳಿಸಿಕೊಡಬೇಕೆಂಬ ಕುಂದೂರಿನವರ ಹೇಳಿಕೆ ಒಪ್ಪಿ ಕರೆಯುವ ದಿನಾಂಕ ಗೊತ್ತು ಮಾಡಿಕೊಂಡು ಬಂದುದು ಕರೆಯಲು ಹೋಗುವ ದಿನ ಊರಿನ ನೂರಾರು ಹುಡುಗರು ಮುದುಕರು ಮಡಿಹುಡಿಯಿಂದ ಕೂಡಿದವರಾಗಿ ದೇವಿಯ ವಿವಿಧ ಭಾಗಗಳನ್ನು ಕಟ್ಟಿಕೊಂಡು ಹೊತ್ತುಕೊಂಡು ಬರಲು ಮಡಿಬಟ್ಟೆಗಳೊಡನೆ ಹೋಗಿ ದ್ಯಾಮವ್ವನ ವಿವಿಧ ಭಾಗಗಳನ್ನು ಬಿಚ್ಚಿ ಐವತ್ತು ಅರವತ್ತು ಜನ ಮಡಿಬಟ್ಟೆಯಲ್ಲಿ ಕಟ್ಟಿ ಹೊತ್ತುಕೊಂಡು ಬಂದ ದೃಶ್ಯದ ನೆನಪು ಎಂದೂ ಮಾಸುವಂತಹುದಲ್ಲ. ಆಗಲೂ ನಾನು ಕುಂದೂರಿಗೆ ಹೋಗಿದ್ದೆ. ಇದೆಲ್ಲ ಅರವತ್ತು ವರ್ಷಗಳ ಹಿಂದಿನ ಮಾತು.

ದ್ಯಾಮವ್ವನ ರಥ, ಆವಳ ವಿವಿಧ ಅಂಗಾಗಗಳು, ಮಹಿಷಾಸುರ, ಕೋಣ ಇತರ ಕಳಸ, ಮಣೆ ಹಲಗೆಗಳು ಮೊದಲಾದವುಗಳನ್ನು ಬಿಚ್ಚಿ ಬೇರೆ ಬೇರೆ ಮೂಟೆಗಳನ್ನು ಮಾಡಿ ಹೊತ್ತು ತರುವ ವಿಷಯವಾಯಿತು. ದ್ಯಾಮವ್ವನ ಮಹತ್ವವಿರುವುದು ಅವಳ ಮುಖದಲ್ಲಿ. ಆ ಮುಖವನ್ನು ಅಲಂಕೃತ ಪಲ್ಲಕ್ಕಿಯಲ್ಲಿ ಬಹಳ ಭಯಭಕ್ತಿಯಿಂದ ಬಿಚ್ಚಿತಂದು ಇಡುವುದು, ಪಲ್ಲಕ್ಕಿಯನ್ನು ಹಿಡಿದುಕೊಂಡು ಪೂಜಾರಿಗಳು ದೇವಿಗೆ ಆಗಾಗ ಚಾಮರ ಹಾಕುತ್ತಿದ್ದರು. ಉಳಿದ ಜನ ಸುತ್ತಮುತ್ತ ಉಘೇ ಉಘೇ ಉಘೇ ಎಂದು ಪದೇ ಪದೇ ನೂರಾರು ಕಂಠಗಳಿಂದ ಉಗ್ಗಡಿಸುತ್ತಿದ್ದರು ಶನಿವಾರದ ಶಿವಶರಣೀ ಸಿನ ಮಾಲ್ಕು ಉಘೋ ಉಘೋ. ಮಾಯಗಾರ್ತಿ. ದ್ಯಾಮವ್ವ ಸಿನ್ನಮ್ಮಾಲ್ಕುಘೋ ಉಘೋ ಎಂಬ ಕೂಗು ಆಗಾಗ ಕೇಳಿಬರುತ್ತಿತ್ತು. ದ್ಯಾಮವ್ವನನ್ನು ಎದುರುಗೊಳ್ಳಲು ಊರೆಲ್ಲ ಅಲಂಕೃತವಾಗಿರುತ್ತಿತ್ತು. ಊರ ಹೆಣ್ಣು ಗಂಡು ಊರ ಹೊರಗೆ ಈ ದೇವತೆಯ ಬರುವಿಕೆಗಾಗಿ ಎದುರು ಮಾಡುತ್ತಿದ್ದರು. ಪೂಜೆ ಮಾಡಿಸಲು ಬಂದವರಿಗೆ ಪೂಜೆ ನೈವೇದ್ಯ ಅರ್ಪಿಸುವುದು ಮಾತ್ರ ಕಂಡ ಕಂಡವರ ಕೆಲಸವಲ್ಲ. ಅದನ್ನು ಮಾಡಬೇಕಾದವರು

ನಮ್ಮೂರಿನಲ್ಲಿ ಬಡಿಗ ಕಮ್ಮಾರಿಕೆ ವೃತ್ತಿಯ ಪಾಂಚಾಳ ಜನಾಂಗದವರು ಮಾತ್ರ. ಪಲ್ಲಕ್ಕಿಯನ್ನು ಯಾರಾದರೂ ಹೊರಬಹುದು. ಆದರೆ ದ್ಯಾಮವ್ವನ ಮುಖದ ಜವಾಬ್ದಾರಿ ಪೂಜೆ ವಗೈರೆ ಪಂಚಾಳರದು. ಎಲ್ಲರನ್ನು ಅಚ್ಚರಿಗೊಳಿಸಿ ಎಲ್ಲರಲ್ಲಿ ಭಕ್ತಿಯನ್ನು ಭಯವನ್ನು ಹುಟ್ಟಿಸತಕ್ಕ ಒಂದೇ ಒಂದು ಕ್ರಿಯೆಯೆಂದರೆ ಈ ಪಲ್ಲಕ್ಕಿಯದೇ. ನಮಗೆ ದೇವಿಯನ್ನು ಕಂಡರೆ ಭಯ ಭಕ್ತಿಯನ್ನು ಹುಟ್ಟಿಸುತ್ತಿದ್ದುದು ಈ ಪಲ್ಲಕ್ಕಿಯ ಚಲನವಲನದ ಅದ್ಭುತವೇ. ಅದೊಂದು ಮರೆಯಲಾರದ ಅನುಭವ. ಈ ದೇವಿಗೆ ಎಷ್ಟೊಂದು ಶಕ್ತಿ, ಎಷ್ಟೊಂದು ಪರಿಚಯ ಅಬ್ಬಾ ಎನ್ನಿಸುತ್ತಿತ್ತು.

ಪಲ್ಲಕ್ಕಿಯನ್ನು ಮುಂದೆ ಇಬ್ಬರು, ಹಿಂದೆ ಇಬ್ಬರು ಹೊರುತ್ತಿದ್ದರು. ನಮ್ಮೂರ ಬಡಿಗರ ಈರಪ್ಪನೇ ಪಲ್ಲಕ್ಕಿಯನ್ನು ಮಧ್ಯದಲ್ಲಿ ಹಿಡಿದುಕೊಂಡು ಚಾಮರ ಬೀಸುತ್ತ, ಗಂಟೆ ಬಡಿಯುತ್ತ ಜಾಗಟೆ ಬಾರಿಸುತ್ತ ಬರುತ್ತಿರಬೇಕು. ಪಲ್ಲಕಿಯಲ್ಲಿ ಮುಖವನ್ನಿರಿಸಿಕೊಂಡು ಹೊರಟುದೇ ತಡ. ಪಲ್ಲಕ್ಕಿ ಗಿರಿಗಿರಿ ತಿರುಗಬೇಕು. ಹಿಂದಕ್ಕೆ ಮುಂದಕ್ಕೆ ಹೋಗಿಬರಬೇಕು. ಎಲ್ಲಕ್ಕೂ ಮೊದಲು ನೇರವಾಗಿ ಈಶ್ವರನ ಗುಡಿಗೆ ಬರಬೇಕು. ಅಲ್ಲಿ ಹಣ್ಣು ಕಾಯಿ ಮಾಡಿಸಬೇಕು. ಜನ ಈಶ್ವರನಿಗೆ ಹಣ್ಣು ಕಾಯಿ ಮಾಡಿಸಿದರೂ ದ್ಯಾಮವ್ವನೇ ಶಿವನಿಗೆ ಹಣ್ಣು ಕಾಯಿ ಒಡೆಸಿ ಹೇಳಿಬರುತ್ತಾಳೆ ಎಂದ ಭಾವನೆ. ಜನಗಳೆಲ್ಲ ಅವ್ವ ಹೊರಟಳು, ಹೋಗುವಾಗ ಶಿವನಿಗೆ ಹೇಳದೆ ಕೇಳದೆ ಹೋಗಲಿಕ್ಕಾಗುತ್ತದೆಯೇ ಎಂದು ಕಣ್ಣೀರು ತುಂಬಿ ಕೈಮುಗಿದು ನಿಂತಿರುತ್ತಿದ್ದರು. ಅಲ್ಲಿಂದ ನೇರವಾಗಿ ಊರಿನಲ್ಲಿರುವ ಎಲ್ಲ ಹೆಣ್ಣು ದೇವರು, ಗಂಡು ದೇವರುಗಳ ಗುಡಿಗಳಿಗೂ ಹೋಗಿಬರಬೇಕು. ಆಗ ಜನಗಳು ಹೋಗುವಾಗ ಅಕ್ಕ ತಂಗಿಯರಿಗೆ ಅಣ್ಣತಮ್ಮಂದಿರಿಗೆ ಹೇಳದೇ ಹೋಗಲಿಕ್ಕಾದೀತೇ? ನಮ್ಮವ್ವ ಒಬ್ಬರನ್ನು ಮರೆಯದೆ ಎಲ್ಲರಿಗೂ ಹೇಳಿ ಹಣ್ಣು ಕಾಯಿ ಮಾಡಿಸಿಕೊಂಡು ಹೋಗಿಬರ್ತೇನೆ ಎಂದು ಹೇಳುತ್ತಾಳಲ್ಲವ್ವಾ ಎಂದು ಹೆಂಗಸರು ಕಣ್ಣೀರುಗರೆಯುವರು. ದ್ಯಾಮವ್ವ ಅಂದು ಊರಿನ ಎಲ್ಲ ವರ್ಗದ ಜನರು ಪೂಜಿಸುತ್ತಿದ್ದ ದೇವರ ಹತ್ತಿರ ಹೋಗಿ ಬರಬೇಕು. ಇಲ್ಲದಿದ್ದರೆ ಗ್ರಾಮದೇವತೆ ಹೇಗಾದಾಳು? ಒಂದು ವೇಳೆ ಮರೆತಿದ್ದರೆ ಮುಂದೆ ಹೋಗಿ ಜ್ಞಾಪಿಸಿಕೊಡು ಬಂದವಳಂತೆ ಪಲ್ಲಕ್ಕಿಯನ್ನು ತಿರುಗಿಸಿಕೊಂಡು ಬರುತ್ತಿದ್ದಳು. ಆಮೇಲೆ ಪಲ್ಲಕ್ಕಿ ನೇರವಾಗಿ ನಮ್ಮೂರ ಕಡೆಗೆ ಹೊರಟು ಬಿಡುತ್ತಿತ್ತು. ಅಷ್ಟು ಹೊತ್ತಿಗಾಗಲೆ ಉಳಿದ ಸಾಮಾನು ಹೊತ್ತ ಜನಗಳು ನಾ ಮುಂದು ತಾ ಮುಂದು ಎಂದು ಉತ್ಸಾಹದಿಂದ ಹೋಗಿರುತ್ತಿದ್ದರು. ಪಲ್ಲಕ್ಕಿಯ ಪವಾಡವೆಲ್ಲ ನಮ್ಮೂರ ಈರಪ್ಪಜ್ಜನ ಕರಾಮತ್ತು ಎಂದು ಯಾರೂ ಭಾವಿಸುತ್ತಿರಲಿಲ್ಲ. ನಾವು ಕೂಡ ಈಗ ಅನ್ನುತ್ತೇವಷ್ಟೆ. ಆ ಕಾಲದಲ್ಲಿ ಆ ವಯಸ್ಸಿನಲ್ಲಿ ನಮಗೆ ಇದೆಲ್ಲ ದೇವರ ಮಹತ್ವ ಎಂದೇ ಭಾವನೆ. ಈ ಕರಾಮತ್ತಿನ ಹಿನ್ನೆಲೆಯಲ್ಲಿ ಜನಗಳಲ್ಲಿ ದೈವೀಭಾವ, ಸರ್ವದೇವತಾ ವಿಷಯಕವಾದ ಒಂದು ಬಗೆಯ ಭಾವೈಕ್ಯ, ಸರ್ವರಲ್ಲಿ ಸಮರಸ, ಹೊಂದಾಣಿಕೆ ಐಕಮತ್ಯದ ಕುರುಹೇ ಎಂದು ಈಗ ಊಹಿಸುತ್ತೇನೆ. ಹಿಂದೂಗಳೂ ವಿವಿಧ ರೀತಿಯಲ್ಲಿ ಇಟ್ಟುಕೊಂಡ ಧಾರ್ಮಿಕ ಶ್ರದ್ಧೆಗಳಲ್ಲಿ ಹೇಗಾದರೂ ಮಾಡಿ ಸಾಮರಸ್ಯವನ್ನುಂಟು ಮಾಡಲೇಬೇಕಲ್ಲವೆ? ಇಲ್ಲದಿದ್ದರೆ ಜನಾಂಗ ಚೂರುಚೂರು. ಇಂದಿನ ದಿನಮಾನಗಳಲ್ಲಿ ಈ ಅನಾರೋಗ್ಯಕರವಾದ ಅಸಮತೆಯ ಭಾವೈಕ್ಯರಾಹಿತ್ಯದ ಅಪಾಯಕಾರಿ ಸನ್ನಿವೇಶ ಕಾಣುತ್ತಿದ್ದೇವೆ. ಹಿಂದೆಯೂ ಇತ್ತು, ಆದರೆ ಅವರು ಚಮತ್ಕಾರಗಳಿಂದ ಜನಾಂಗದ

ಭಾವೈಕ್ಯ ತೂರಿಹೋಗದಂತೆ ಏನೇನೋ ಉಪಾಯ ಮಾಡಿದ್ದರು. ಈಗ ಹಿಂದೂಗಳಿಗೆಲ್ಲ ಒಂದೇ ಆಗಿರುವ -

ಗಂಗೇಚ ಯಮುನೇಚೈವ ಗೋದಾವರೀ ಸರಸ್ವತೀ
ನರ್ಮದಾ ಸಿಂಧು ಕಾವೇರೀ ಜಲೇಸ್ಮಿನ್ ಸನ್ನಿಧಿಂ ಕುರು ॥

ಈ ಮಂತ್ರವನ್ನು ಪ್ರತಿಯೊಬ್ಬ ಹಿಂದುವೂ ಸ್ನಾನ ಮಾಡುವಾಗ ದೇವರಿಗೆ ಅಭಿಷೇಕ ಮಾಡುವಾಗ ಹೇಳುತ್ತಾನೆ. ಪೂರ್ವಕಾಲದಲ್ಲಿ ಹಿಂದೂ ರಾಜರುಗಳ ಪಟ್ಟಾಭಿಷೇಕ ಕಾಲದಲ್ಲಿ ಈ ಸಪ್ತ ನದಿಗಳ ನೀರನ್ನು ತರಿಸಿಯೇ ಅವನಿಗೆ ಸ್ನಾನ ಮಾಡಿಸಬೇಕಾಗಿತ್ತು. ಭಾರತದ ಈ ಸಪ್ತನದಿಗಳ ಸನ್ನಿಧಿ ತಾನು ದೇವರಿಗೆ ಎರೆಯುವ ನೀರಿನಲ್ಲಿ ಉಂಟಾಗಲಿ ಎಂಬುದೇ ಮಂತ್ರದ ಅರ್ಥ. ಇದು ಅಖಂಡ ಭಾರತ ಒಂದೇ ಎಂಬ ಪ್ರಜ್ಞೆಯನ್ನು ಜನತೆಯಲ್ಲಿ ಉಂಟುಮಾಡುವುದೇ ಆಗಿತ್ತು. ಇದಲ್ಲದೆ ಹಿಮತ್ಕೇದಾರ ಮೊದಲ್ಗೊಂಡು ರಾಮೇಶ್ವರದವರೆಗೆ 12 ಕಡೆಗಳಲ್ಲಿ ಜ್ಯೋತಿರ್ಲಿಂಗಗಳನ್ನು ಸ್ಥಾಪಿಸಿ ಕೇದಾರೇಶ್ವನ ದರ್ಶನ ಮಾಡಿ ರಾಮೇಶ್ವರನನ್ನು ಕಂಡವರಿಗೇ ಮೋಕ್ಷ ಪ್ರಾಪ್ತಿಯೆಂದು ಹೇಳುವಲ್ಲಿಯೂ ಭಾರತೀಯರ ಭಾವೈಕ್ಯ ಕಾಪಾಡಲು ಮಾಡಿರುವ ತಂತ್ರವೇ. ಇಂಥ ಅನೇಕ ತಂತ್ರಗಳಿಂದ ವಿವಿಧ ಭಾಷೆ, ಕೋಮು, ವರ್ಗ, ವರ್ಣಗಳ ಜನಗಳನ್ನು ಒಂದು ಕಟ್ಟಿಗೆ ಒಳಪಡಿಸುವುದು ನಮ್ಮವರ ಮನೀಷೆಯಾಗಿತ್ತು. ಹಿಂದೂ ಜನಾಂಗ ಒಂದುಗೂಡುವುದು ಬಹುಕಷ್ಟದ ಕೆಲಸ. ಆದರೆ ಇವರನ್ನು ಒಡೆಯುವುದರಷ್ಟು ಸುಲಭವಾದ ಕೆಲಸ ಬೇರೊಂದಿಲ್ಲ. ಗುಡ್ಡದ ನೆತ್ತಿಯಿಂದ ಬಂಡೆಯನ್ನುರುಳಿಸಿದಷ್ಟು ಸುಲಭ. ಒಂದುಗೂಡಿಸುವುದು ಬಂಡೆಯನ್ನು ಗುಡ್ಡದ ನೆತ್ತಿಗೇರಿಸುವಷ್ಟು ಕಷ್ಟದ್ದು. ಹಿಂದಿಂದ ಒಡೆದೇ ಬಂದ ಈ ಜನರನ್ನೆಲ್ಲ ದ್ಯಾಮವ್ವನಂಥ ಕೆಲವು ದೇವತೆಗಳು ಒಂದುಗೂಡಿಸುತ್ತವೆ ಅನ್ನಿ.

ಇದೇನೇ ಇರಲಿ, ನಮ್ಮೂರಿನ ದ್ಯಾಮವ್ವನ ಕಥೆ ಈ ಸಮಸ್ಯೆಯ ವಿವರಣೆಯಲ್ಲಿ ಎಲ್ಲಿಯೂ ಹಾರಿಹೋಗಬಾರದು ಅಲ್ಲವೆ? ಊರಿಗೆ ದ್ಯಾಮವ್ವ ಮೊದಲು ಬಂದ ಕೂಡಲೆ ನಮ್ಮೂರ ಹೊಳೆಗೆ ಹೋಗಿ ಗಂಗೆಪೂಜೆ ಮಾಡಿದ ಮೇಲೆ ನೇರವಾಗಿ ಈಶ್ವರನ ಗುಡಿಗೆ ಬರಬೇಕು. ದೂರದ ಊರಿನಿಂದ ಬಂದವರು ಕೈಕಾಲು ಮುಖ ತೊಳೆಯದೆ ಹಾಗೇ ಹೋಗಲಾಗುವುದೇ? ಅಲ್ಲದೆ ಗಂಗವ್ವ ಈಶ್ವರನ ಅರ್ಧಾಂಗಿಯೂ ಹೌದು. ದ್ಯಾಮವ್ವ ಸಂಪ್ರದಾಯ ಮರೆಯಲೇ ಇಲ್ಲ. ಕೈಕಾಲು ಮುಖ ತೊಳೆದುಕೊಂಡು ಈಶ್ವರನ ದರ್ಶನಕ್ಕೆ ಬಂದಳೆಂದೇ ಜನಗಳ ಭಾವನೆ. ಆಮೇಲೆ ಊರಿನ ಇನ್ನಿತರ ದೇವರುಗಳ ದರ್ಶನ ಮಾಡಿ, ಹಿಂದೆ ಮುಂದೆ ಓಡಾಡಿ, ಚಕ್ರಾಕಾರ ವಾಹಿಕೆಯಾಗಿ ಗುಡಿಗೆ ಬರಬೇಕು. ಅಷ್ಟರಲ್ಲಿ ಗುಡಿ ಊರಿನ ಹೆಣ್ಣುಗಂಡು ಮಕ್ಕಳುಮರಿಗಳಿಂದ ಗಿಜಿ ಗಿಜಿ ಎನ್ನುವಂತೆ ತುಂಬಿರುತ್ತದೆ. ಗುಡಿಯ ಮುಂದೆ ಹಸಿರು ಚಪ್ಪರ ತಳಿರು ತೋರಣಗಳು ಜಗಜಗ ಎನ್ನುತ್ತಿರುತ್ತವೆ. ಒಂದು ಸಲ ದ್ಯಾಮವ್ವ ಊರನ್ನೆಲ್ಲ ಸುತ್ತಿ ಗುಡಿಗೆ ಬಂದೊಡನೆ ಎಲ್ಲ ಜನಗಳಲ್ಲಿ ಮೇರೆಮೀರಿದ ಉತ್ಸಾಹದ ಜಯಜಯಕಾರ. ಉಘೋ ಉಘೋ ಉಘೋ ಎಂಬ ಉದ್ಗಾರ. ಹಲಗೆ, ಕಹಳೆ, ಜಾಗಟೆ, ಢೋಲುಗಳ ಬಡಿತದ ಉತ್ಸಾಹಜನಕ ಸನ್ನಿವೇಶ. ಇಷ್ಟರಲ್ಲಿ ಗುಡಿಯಲ್ಲಿ ದ್ಯಾಮವ್ವನ ರಥ ಮೊದಲಾದ ಬಿಡಿ ಭಾಗಗಳನ್ನು ಹೊಂದಿಸಿ ಸಜ್ಜು ಮಾಡಿಸಿ ಪರದೆ ಕಟ್ಟಿಬಿಟ್ಟಿರುತ್ತಾರೆ. ದ್ಯಾಮವ್ವನ ಪಲ್ಲಕ್ಕಿ ಗುಡಿಯ ಒಳಗೆ ಬಂದ ಮೇಲೆ ಈರಪ್ಪಜ್ಜ ದ್ಯಾಮವ್ವನ ಮುಖವನ್ನು

ಬಟ್ಟೆ ಮುಚ್ಚಿ ಒಳಗೆ ಒಯ್ದು ಕದ ಮುಚ್ಚಿ ಎಲ್ಲರನ್ನು ಹೊರಗೆ ಕಳಿಸಿ ಮುಖವನ್ನು ಕೂಡ್ರಿಸಿ ತಾನೇ ಮೊದಲು ಹಣ್ಣು, ಕಾಯಿ ಮಾಡಿಸಿದ ಮೇಲೆ ಸಾರ್ವಜನಿಕರ ದರ್ಶನಕ್ಕೆ ಬಾಗಿಲು ತೆರೆಯುತ್ತಿದ್ದ. ಜನಗಳ ಆಗಿನ ಉತ್ಸಾಹ ನನ್ನನ್ನು ಈಗಲೂ ಪ್ರಭಾವಿತನನ್ನಾಗಿ ಮಾಡುತ್ತದೆ. ಮುಖ ಕೂಡಿಸಿದ ಮೇಲೆ ಮೇರೆ ಮೀರಿದ ಉತ್ಸಾಹದಿಂದ ದ್ಯಾಮವ್ವನನ್ನು ನೋಡಿದ್ದೇ ನೋಡಿದ್ದು. ಆ ಮೂರ್ತಿಯನ್ನು ಕಂಡು ಈ ಸಲ ದ್ಯಾಮವ್ವ ನಗುಮುಖದಿಂದ ಇದ್ದಾಳಪ್ಪ, ಸದ್ಯ ಬದುಕಿದಂಗಾಯ್ತು. ಹಿಂದೊಮ್ಮೆ ಬಂದಾಗ ಉರಿಗಣ್ಣು ಬಿಡ್ತಾಳೇ ಅನ್ನೊಹಾಂಗ ಇತ್ತು. ಅದಕ್ಕೇ ಅಲ್ವ ಆ ವರ್ಷ ದನದ ಬ್ಯಾನಿಬಂದದ್ದು ಎಂದು ಏನೇನನ್ನೋ ತಮ್ಮ ತಮ್ಮಷ್ಟಕ್ಕೆ ಮಾತಾಡಿಕೊಳ್ಳುತ್ತಿದ್ದರು. ಈ ಎಲ್ಲ ಮಾಟದ ಹಿಂದೆ ಏನೇ ಮೂಢಧರ್ಮ ಇರಲಿ, ಹಳ್ಳಿಯ ಎಲ್ಲ ವರ್ಗದ ಜನರನ್ನು ಒಂದುಮಾಡಿಸುವಲ್ಲಿ ಇದೊಂದು ಸತ್ವಪೂರ್ಣ ಮಾಧ್ಯಮವಾದ್ದಂತೂ ನಿಶ್ಚಯ.

**ತವರುಮನೆಯಲ್ಲಿ ದ್ಯಾಮವ್ವ**

ತವರು ಮನೆಗೆ ಮಗಳೊಬ್ಬಳು ಬಹಳ ದಿನಗಳ ನಂತರ ಬಂದಾಗ ತೋರಿಸುವ ಆದರದಂತೆಯೇ ತವರು ಮನೆಗೆ ದ್ಯಾಮವ್ವ ಬಂದಾಗ ಊರಎಲ್ಲ ವರ್ಗದ ಜನ ಭಾವಿಸುತ್ತ ತಮ್ಮ ಪೂಜೆ ಮೊದಲಾದವುಗಳನ್ನು ಸಲ್ಲಿಸಲು ಮೊದಲಾಗುತ್ತಾರೆ. ದಿನವೂ ಎರಡು ಹೊತ್ತು ಪೂಜೆಯನ್ನು ಪಾಂಚಾಳ ಜನಾಂಗದವರು ಮಾಡುತ್ತಾರೆ. ರಾತ್ರಿ ಲಾವಣಿ, ವೀರಗಾರರ ಪದ, ಹೆಣ್ಣು ಮಕ್ಕಳ ಸೋಬಾನೆ, ಒಂದೊಂದು ದಿನ ಹಲಗೆ ಮೇಳ, ಒಂದೊಂದು ದಿನ ಡೊಳ್ಳಿನ ಮೇಳ, ಕೋಲಾಟ ಏನೆಲ್ಲ ದ್ಯಾಮವ್ವನ ಮುಂದೆ ಅವಳ ತೃಪ್ತಿಗಾಗಿ ನಡೆಯಲೇಬೇಕು. ಒಂದೊಂದು ದಿನ ರಾಣಿಗರನ್ನುವ ವಿಶಿಷ್ಟ ರೀತಿಯ ಕಲಾವಂತರು ಬರುತ್ತಿದ್ದರು. ಇವರು ದ್ಯಾಮವ್ವನಿಗೆ ಬಹಳ ಸಮೀಪದವರಂತೆ. ಈ ಜನಾಂಗದ ವೇಶ್ಯೆಯರು ಬಂದು ದ್ಯಾಮವ್ವನೆದುರು ಮೇಳದೊಡನೆ ಹಾಡಿ ಕುಣಿಯಬೇಕು. ರಾಣಿಗರ ಮೇಳದ ದಿನ ಸುತ್ತುಮುತ್ತಿನ ಊರಜನ ಹಿಂಡು ಹಿಂಡಾಗಿ ಬಂದು ಬಿಡುತ್ತಿದ್ದರು. ಏಕೆಂದರೆ ಈ ರಾಣಿಗರ ಹಾಡುಗಳು ಆ ಹೆಂಗಸರು ಮುಕ್ತ ಮನಸ್ಸಿನ ಶೃಂಗಾರ ಪ್ರಚೋದಕಗಳು ಕೇಳುವವರಲ್ಲಿ ಒಂದು ಬಗೆಯ ಮುಜಗರವುಂಟು ಮಾಡಿದರೂ ಅವರಲ್ಲಿ ಸುಪ್ತವಾಗಿದ್ದ ಮರೆತು ಹೋದದ್ದನ್ನು ಜ್ಞಾಪಿಸಿ ಒಂದು ಬಗೆಯಲ್ಲಿ ಶೃಂಗಾರಜನಕವಾಗಿರುತ್ತಿರುವುದೇ ಆಗಿತ್ತು. ದೇವರಿಗೆಂದು ಬಿಟ್ಟಿದ್ದ ಈ ವೇಶ್ಯೆಯರು ಕುಣಿದು ಹಾಡಿ, ಜನಗಳಲ್ಲಿ ಶೃಂಗಾರ ಪ್ರಚೋದಕ ಭಾವವನ್ನು ಕೆರಳಿಸುತ್ತಿದ್ದರು. ಚಿಕ್ಕವರಾದ ನಮಗೆ ಇದು ಗೊತ್ತಿರದಿದ್ದರೂ ಅವರ ಆಕರ್ಷಕ ಉಡುಪು, ಹಾಡಿನ ವೈಖರಿ, ನಕ್ಕು ನಗಿಸುವ ರೀತಿ ನೀತಿ, ಬೆಡಗು ಬಿನ್ನಾಣಗಳನ್ನು ಕಂಡು ನಕ್ಕದ್ದೇ ನಕ್ಕದ್ದು. ಅವರ ವರ್ತನೆ ನಾವು ದಿನನಿತ್ಯ ನೋಡುವ ಹಳ್ಳಿಯ ಹೆಣ್ಣುಮಕ್ಕಳ ವರ್ತನೆಗಿಂತ ಭಿನ್ನವಾಗಿರುತ್ತಿದ್ದವು. ಇವು ಎಲ್ಲ ಗಂಡಸರೊಡನೆಯೂ ಮುಕ್ತ ಮನಸ್ಸಿನಿಂದ ನಕ್ಕು ನಕ್ಕು ಮಾತಾಡುತ್ತಿದ್ದುದು, ಪ್ರಸಂಗದಲ್ಲಿ ಹಾಡುವಾಗ ಒಮ್ಮೊಮ್ಮೆ ಎದುರಿಗೆ ಕುಳಿತ ವ್ಯಕ್ತಿಯನ್ನು ಕಂಡು 'ಈ ಮುದುಕ ನನಗೆ ವಂಕಿ ಕೊಡತೇನಂದಿದ್ದ' ಎನ್ನುತ್ತ ಬಂದು ಆತನ ಮುಖವನ್ನು ತಿವಿಯುತ್ತ ಎಲ್ಲರನ್ನೂ ನಗೆಗಡಲಲ್ಲಿ ಮುಳುಗಿಸುತ್ತಿದ್ದರು. ಆ ಮುದುಕನೂ ಹಲ್ಲುಕಿರಿದು ಹಿ ಹಿ ಹಿ ಅನ್ನುವಂತೆ ಮಾಡುತ್ತಿದ್ದವು. ಹಳ್ಳಿಯ ಜನಜೀವನಕ್ಕೆ ಮುಕ್ತ ಮನಸ್ಸಿನ ಶೃಂಗಾರ ಪ್ರಚೋದನೆಗೂ ಸನ್ನಿವೇಶಗಳು ಬೇಕಲ್ಲವೆ? ಅದಕ್ಕಾಗಿ ಇವರಮೂ ಈ ರೀತಿಯ ಸೇವೆ ದ್ಯಾಮವ್ವನ ಮುಂದೆ ನಡೆದು ಹೋಗುತ್ತಿತ್ತು.

ದ್ಯಾಮವ್ವನ ಉಡಿ ತುಂಬುವ ದಿನವಂತೂ ಇವರು ಬೇಕೇ ಬೇಕು. ಇದ್ದಲ್ಲಿಂದ ಇವರನ್ನು ಕೇಳಿದಷ್ಟು ದುಡ್ಡು ಕೊಟ್ಟು ಕರೆಸುತ್ತಿದ್ದರು.

ನಮ್ಮೂರಿನಲ್ಲೂ ಆಗ ಕೆಲವರು ರಸಿಕರು ಇದ್ದರು. ಅವರು ನಮ್ಮೂರಿನ ಪಂಚರ ಅಧೀನದಲ್ಲಿದ್ದರೂ ತಮ್ಮ ಶೃಂಗಾರ ಜೀವನದಲ್ಲಿ ಇವರು ಆ ಕಾಲದ ಪ್ರೌಢ ರಸಿಕರು ಒಂದು ರೀತಿಯಲ್ಲಿ ಹಾದರಿಗರು. ಇವರ ಕಾರಭಾರು ಊರಲ್ಲಿ ನಡೆಯುತ್ತಿರಲಿಲ್ಲ. ಊರ ಪಂಚರ ವಿರುದ್ಧ ಇವರು ಊರಲ್ಲಿ ಉಪಟಳ ಮಾಡಿದರೆ ಗೌಡ ಶಾನುಭೋಗ ಪಂಚರೆಲ್ಲ ಸೇರಿ ಅವರನ್ನು ಹೊಡೆಸಿ ಬಡಿಸುತ್ತಿದ್ದರು. ಹೀಗಾಗಿ ಇವರ ಶೃಂಗಾರ ಜೀವನ ಪುಂಡಾಟಿಕೆಯ ಮಟ್ಟಕ್ಕೆ ಹೋಗದೆ ಗೌರವದಿಂದಲೇ ಹಾದರಿಗಳಾಗಿ ಏನೇನೋ ವ್ಯವಹಾರ ಮಾಡುತ್ತಿದ್ದರು. ರಾಣಿಗರನ್ನು ಕರೆತರುವುದು, ಅವರ ಕಾರ್ಯಕ್ರಮಗಳನ್ನು ಏರ್ಪಡಿಸುವುದು, ಅವರಿಗೆ ಕೈ ತುಂಬ ಸಂಭಾವನೆ ಕೊಡಿಸಿ ಊರಿಗೆ ಕಳಿಸುವ ವ್ಯವಸ್ಥೆಗೆ ಇವರೇ ಮುಂದಾಗುತ್ತಿದ್ದರು. ಇದರಿಂದ ಅವರಿಗೂ ಸ್ವಲ್ಪ ಪ್ರಯೋಜನವಿದ್ದೇ ಇರುತ್ತಿತ್ತು. ಆದರೆ ಉಳಿದ ಇನ್ನಿತರ ವಿಚಾರದಲ್ಲಿ ಈ ಜನ ಕೈಹಾಕದಂತೆ ತಕ್ಕ ಬಂದೋಬಸ್ತು ಊರಲ್ಲೂ ಇತ್ತು. ಈ ರಸಿಕರೂ ತಮ್ಮ ರಸಿಕತನವನ್ನು ಗೌರವದಿಂದ ರಕ್ಷಣೆ ಮಾಡಿಕೊಂಡು ಗೌಪ್ಯ ಕಾಪಾಡಿಕೊಂಡು ಬಂದಿದ್ದರು ಅಂತಾ ಕೂಡ ಹೇಳಬಹುದು. ಅದೇನೇ ಇರಲಿ. ಇಂಥವರು ಎಲ್ಲ ಕಾಲದಲ್ಲೂ ಇರುವವರೇ. ಕಲಿತ ಚಾಳಿ ಕಲ್ಲುಹಾಕಿದರೂ ಹೋಗದು, ಅಲ್ಲವೆ?

### ಉಡಿ ತುಂಬಿ ದ್ಯಾಮವ್ವನನ್ನು ಕಳಿಸಿಕೊಡುವ ಸಮಾರಂಭ

ದ್ಯಾಮವ್ವನ ಉಡಿತುಂಬುವ ದಿನ ಊರಿನಲ್ಲಿ ಅತ್ಯಂತ ಸಂಭ್ರಮ ತೋರಿ ಬರುತ್ತಿತ್ತು. ಊರ ತುಂಬ ಜನವೇ ಜನ. ಇಷ್ಟೇ ಜನರನ್ನು ನಮ್ಮೂರಿನಲ್ಲಿ ದೊಡ್ಡಾಟ ಆದಾಗ ಮಾತ್ರ ನೋಡುತ್ತಿದ್ದೆ. ಬೀಗರು ಬಿಜ್ಜರಿಂದ ಮನೆ ತುಂಬಿರುತ್ತಿದ್ದವು. ಡೊಳ್ಳುಗಳ ಮೇಳದ ವಾದ್ಯದಿಂದ ಊರೇ ಕಿವುಡಾದಂತೆ ಆಗುತ್ತಿತ್ತು. ಆಗ ನಮ್ಮ ಭಾಗದಲ್ಲಿ ಕುಂದೂರಿನ ಡೊಳ್ಳಿನ ಮೇಳ ಬಹಳ ಪ್ರಸಿದ್ಧ. ಹತ್ತಿಪ್ಪತ್ತು ದೊಡ್ಡದೊಡ್ಡ ಡೊಳ್ಳುಗಳನ್ನು ಸೊಂಟಕ್ಕೆ ಬಿಗಿದುಕೊಂಡು ಮೈಮೇಲೆ ಎಚ್ಚರವಿಲ್ಲದವರಂಗೆ ಕುಣಿಯುತ್ತ ಡೊಳ್ಳು ಬಾರಿಸುತ್ತಿದ್ದರೆ ಹೊಟ್ಟೆಯಲ್ಲಿ ಗುಡುಗಟ್ಟಿದಂತಾಗುತ್ತಿತ್ತು; ಕಿವಿಗಳು ಗಡಚಿಕ್ಕುತ್ತಿದ್ದರು. ರಾಣಿಗರ ತಂಡದ ಹಾಡು ಕುಣಿತಗಳೊಡನೆ ದ್ಯಾಮವ್ವನಿಗೆ ಉಡಿತುಂಬುವ ಕಾರ್ಯ ಮುಗಿದ ಮೇಲೆ ದೇವರಿಗೆ ಕೋಣವೊಂದನ್ನು ತಂದು ಪೂಜಿಸಿ ಬಿಡುತ್ತಿದ್ದರು. ಆದರೆ ಕೋಣನ ವಧೆ ಮಾತ್ರ ಇರುತ್ತಿರಲಿಲ್ಲ. ಕುಂದೂರು ದ್ಯಾಮವ್ವ ಹೋಗಿಬರುತ್ತಿದ್ದ 64 ಹಳ್ಳಿಗಳಲ್ಲಿ ಯಾವ ಊರಲ್ಲೂ ಕೋಣನನ್ನು ಕಡಿಯುತ್ತಿರಲಿಲ್ಲವಾದ್ದರಿಂದ ಅಷ್ಟರಮಟ್ಟಿಗೆ ನಮ್ಮ ದ್ಯಾಮವ್ವ ಅಹಿಂಸಾವಾದಿನಿಯೆಂದು ಹೇಳಬಹುದು. ಉಡಿತುಂಬುವ ದಿನ ಗಂಡನ ಮನೆಯವರಾದ ಕುಂದೂರಿನವರೂ ಬರುತ್ತಿದ್ದರು. ಅವರ ಆದರೋಪಚಾರ ವ್ಯವಸ್ಥಿತವಾಗಿ ನಡೆಯುತ್ತಿತ್ತು.

### ದ್ಯಾಮವ್ವನನ್ನು ಕಳಿಸಿಕೊಡುವುದು

ಉಡಿತುಂಬಿ ಒಂದರೆಡು ದಿನ ಬಿಟ್ಟು ಕುಂದೂರಿನವರು ಕರೆಯಲು ಬರುತ್ತಿದ್ದರು. ಆಗ ನಮ್ಮ ಊರಿನವರೇ ಹೋಗಿ ಕಳಿಸಿಬರಬೇಕು. ಕರೆಯಲು ಹೋದ ದಿನದಂತೆಯೇ ನಮ್ಮೂರಿನ ನೂರಾರು ಜನ ಕಳಿಸಿ ಬರಲು ಮಡಿಹುಡಿಯಿಂದ ಹೋಗುತ್ತಿದ್ದರು. ಪಲ್ಲಕ್ಕಿಯಲ್ಲಿ

ದ್ಯಾಮವ್ವನ ಮುಖವನ್ನು ಹಾಕಿಕೊಂಡು ಪಲ್ಲಕ್ಕಿಯನ್ನು ಹೆಗಲಿಗೆ ಹೊತ್ತ ಮೇಲೆ ಚಿಕ್ಕ ಊರಿನಲ್ಲಿ ಒಂದು ಒಂದೂವರೆ ಘಂಟೆ ದೇವತೆ ತಿರುಗಾಡಿದ್ದುಂಟು. ಅದೊಂದು ಹೃದಯಸ್ಪರ್ಶಿ ಪ್ರಸಂಗ. ಎಷ್ಟೋಜನ ಹೆಂಗಸರು ಗಂಡಸರು ಕಣ್ಣೀರು ಸುರಿಸಿ, 'ಹೋಗಿ ಬಾರಮ್ಮ ತಾಯಿ' ಎಂದು ಹೇಳಿ ಕಣ್ಣೊರಿಸಿಕೊಳ್ಳುವವರೇ. ದ್ಯಾಮವ್ವ ಊರಿನ ಸಂದಿಗೊಂದಿಗಳಲ್ಲಿ ಎಲ್ಲೆಲ್ಲಿ ದೇವರುಂಟೋ ಅಲ್ಲೆಲ್ಲ ಹೋಗಿ ಹೇಳಿಬರಲೇಬೇಕು. ಊರ ಹೊರಗೆ ದ್ಯಾಮವ್ವನ ಕಟ್ಟೆಗೆ ಬಂದು (ಇದೊಂದು ಕಟ್ಟೆ. ಒಂದು ದೊಡ್ಡ ಅರಳೀನ ಮರದ ಸುತ್ತ ಕಟ್ಟೆ ಕಟ್ಟಿದ್ದಾರೆ) ಇಲ್ಲಿ ದ್ಯಾಮವ್ವನ ಪಲ್ಲಕ್ಕಿ ಇಳುಹಿ ವಿಶ್ರಾಂತಿ ಪಡೆಯಬೇಕು. ನಾಲ್ಕಾರು ಸಲ ಗಿರಿಗಿರಿ ತಿರುಗಿ ಹಿಂದಕ್ಕೆ ಹೋಗಿ ಮತ್ತೆ ಮುಂದಕ್ಕೆ ನಡೆಯುತ್ತಿದ್ದಳು. ಒಮ್ಮೆ ಒಂದು ಫರ್ಲಾಂಗ ದೂರ ಕುಂದೂರು ದಾರಿ ಹಿಡಿದುಹೋಗಿ ಪುನಃ ವಾಪಸು ಬಂದುಬಿಟ್ಟಳು. ಊರ ಜನವೆಲ್ಲ, ಯಾಕೆ ಅವ್ವ ವಾಪಸು ಬಂದಳು. ಏನು ಮರೆತಿರಬಹುದು, ಎಂದು ತಮ್ಮತಮ್ಮಲ್ಲೇ ಅಂದು 'ಅವ್ವಾ ಯಾಕವ್ವಾ ಬಂದೆ? ಹೋಗಲು ಮನಸ್ಸು ಬರಲಿಲ್ಲವೇನವ್ವ! ಕಾಡಬೇಡ ತಾಯಿ, ಹೋಗಿ ಬಾರವ್ವಾ. ಮುಂದೆ ಮತ್ತೆ ಕರೆಸುತ್ತೇವೆ' ಇತ್ಯಾದಿಯಾಗಿ ಹೇಳುತ್ತಿದ್ದ ಮಾತು ಕೇಳಿದಾಗಲಂತೂ ನಾನು ಪ್ರಭಾವಿತನಾಗಿ ಹೋಗುತ್ತಿದ್ದೆ. ಆಗ ಹೆಂಗಸರೆಲ್ಲ ಅಳುತ್ತಲೇ ದ್ಯಾಮವ್ವ ಹೋಗಿಬಾರವ್ವ ಕಾಡಬೇಡ, ಎಂದು ಅತ್ತುದನ್ನು ಕಂಡಿದ್ದೇನೆ. ಫರ್ಲಾಂಗ್ ದೂರ ಹೋಗಿವಾಪಸು ಬಂದದ್ದು ದ್ಯಾಮವ್ವನ ಇಚ್ಛೆಯೋ ನಮ್ಮ ಈರಪ್ಪಜ್ಜನ ಇಚ್ಛೆಯೋ, ದ್ಯಾಮವ್ವನೇ ಬಲ್ಲಳು; ಈರಪ್ಪಜ್ಜನೇ ಬಲ್ಲ. ನಮ್ಮ ಮನೆ ಹಿತ್ತಲಿನ ಮುಂದೆ ತಳವಾರರ ಮೂರು ನಾಲ್ಕು ಮನೆಗಳಿವೆ. ಅವರು ಅಲ್ಲಿ ಕರಿಯವ್ವ ಎಂಬ ಒಂದು ದೇವತೆಯನ್ನು ಮಾಡಿಕೊಂಡಿದ್ದಾರೆ. ಅದು ಕರಿಯವ್ವನ ಹಿತ್ತಿಲೆಂದೇ ಪ್ರಸಿದ್ಧಿ. ಆ ದೇವರನ್ನು ನೆನೆಸಿಕೊಂಡು ಸಂದಿಗೊಂದಿಗಳಲ್ಲಿ ತೂರಿಕೊಂಡು ಪಲ್ಲಕ್ಕಿ ಕರಿಯವ್ವನ ಹತ್ತಿರಕ್ಕೆ ಬಂದು ನಿಂತು ಬಿಟ್ಟಿತು. ಆ ಕರಿಯವ್ವ ಇರುವುದು ನಮ್ಮ ಹಿತ್ತಿಲಕ್ಕೆ ಹತ್ತಿಯೇ. ಆಗ ನನಗೆ ಹಿಡಿಸಲಾರದ ಹೆಮ್ಮೆ ನಮ್ಮ ಹಿತ್ತಿಲಿನವರೆಗೆ ದಾಮವ್ವನ ವೈಭವವೆಲ್ಲಾ ಬಂದಿತಲ್ಲಾ ಎಂದು. ಅಲ್ಲ ದ್ಯಾಮವ್ವನಿಗೆ ಹಣ್ಣು ಕಾಯಿ ಮಾಡಿಸಿಕೊಂಡು ನಮ್ಮ ಹಿತ್ತಿಲಲ್ಲಿ ದೇವರ ಹುಣಸೀಮರ ಇದೆ ಎಂದು ಈ ಪೂರ್ವದಲ್ಲೇ ಹೇಳಿದ್ದೆನಲ್ಲವೆ? ಅಲ್ಲಿಗೂ ಬಂದು ಬಿಡೋಣವೆ! ಆಗ ನಮ್ಮ ಮನೆಯಿಂದ ಬೆಲ್ಲ ನೀರು ವಿಭೂತಿ ಪತ್ರಿ ಊದಿನ ಕಡ್ಡಿ ಹೋಯಿತು ಪೂಜೆಗೆ. ಅಲ್ಲಿ ಪೂಜೆ ತೀರಿಸಿಕೊಂಡು ನೇರವಾಗಿ ನಮ್ಮ ಮನೆಯ ಬಾಗಿಲಿಗೆ ಬಂದುಬಿಟ್ಟಿತು. ಎಷ್ಟೇ ಆಗಲಿ ನಮ್ಮ ದೊಡ್ಡಪ್ಪ ಪಂಚನಲ್ಲವೇ? ನಮ್ಮ ದೊಡ್ಡಪ್ಪನಿಂದ ಎರಡು ರೂಪಾಯಿ ಕಾಣಿಕೆ ಸುಲಿಗೆ ಮಾಡಿ ಕೊಂಡು 'ಹಟಮಾಡಬೇಡಮ್ಮ ಹೋಗು' ಎಂದು ಎಲ್ಲರಿಂದ ಹೇಳಿಸಿಕೊಂಡು ಅಡ್ಡ ಬೀಳಿಸಿಕೊಂಡು ನೇರವಾಗಿ ಕುಂದೂರು ದಾರಿಹಿಡಿದಳು. ಮುಕ್ಕಾಲು ಮೈಲು ದೂರ ಹೋಗಿರಬಹುದು. ನಮ್ಮೂರ ಜನ ಅಗಸಿಯಲ್ಲಿ ಮೈಯೆಲ್ಲ ಕಣ್ಣಾಗಿ ದ್ಯಾಮವ್ವ ಹೋಗುವುದನ್ನು ಕೈಮುಗಿದು ನಿಂತು ನೋಡುತ್ತಿದ್ದಂತೆ ಮತ್ತೆ ತಿರುಗಿ ಭರಭರಾಟೆಯಿಂದ ಓಡಿಬರತೊಡಗಿದಳು. ಆಗ ಊರಿನವರಿಗೆಲ್ಲ ಏನೇನೋ ದಿಗಿಲು! ನಾವು ಏನೋ ತಪ್ಪುಮಾಡಿರಬಹುದೇ? ಎಂಬ ಅನುಮಾನ. ನಾವೇನೂ ತಪ್ಪಾ ಮಾಡಿರದಿದ್ದರೆ ಅವ್ವ ಯಾಕೆ ಇಷ್ಟು ಹಟ ಮಾಡಿ ಮಾಡಿ ಹಿಂದಕ್ಕೆ ಬರುತ್ತಿದ್ದಾಳೆ. ಎಂದು ತಮ್ಮ ತಮ್ಮೊಳಗೆ ಮಾತುಕತೆ. ಇದಂತೂ ನನಗೆ ರೋಮಾಂಚಕ ಘಟನೆಯಾಗಿ ಪರಿಣಮಿಸಿತ್ತು. ನಮ್ಮ ಮನೆಯ ಬಾಗಿಲಿಗೆ ಬಂದಾಗ ನಮ್ಮ ತಾಯಿಯಂತೂ ಹೆದರಿ ಕಣ್ಣೀರು ಸುರಿಸಿದ್ದು ನನಗೆ ಇನ್ನು ಕಣ್ಮುಂದೆ ಕಟ್ಟಿದಂತೆ ಇದೆ. ಸ್ನೇಹಿತರೆದುರು ದ್ಯಾಮವ್ವ ನಮ್ಮ ದೇವರ ಹುಣಸೀಮರಕ್ಕೆ ನಮ್ಮ ಮನೆಬಾಗಲಿಗೂ ಬಂದದ್ದನ್ನು ಹೆಮ್ಮೆಯಿಂದ ಹೇಳಿಕೊಂಡು

ನಮ್ಮ ಮನೆತನದ ಪ್ರತಿಷ್ಠೆಯ ಬಗ್ಗೆ ಗೌರವಭಾವ ಹೊಂದುತ್ತಿದ್ದೆ. ಹೀಗೆ ದ್ಯಾಮವ್ವ ಜನಗಳಲ್ಲಿ ಭಕ್ತಿಶ್ರದ್ಧೆಯನ್ನು ಹುಟ್ಟಿಸುತ್ತಿದ್ದುದು ಬಾಳಿನಲ್ಲಿ ದೈವಭಕ್ತಿ ಬೆಳೆ ಬೆಳೆಯಲು ಸಹಕಾರಿಯಾಗಿದ್ದಳು. ಈಗಿನ ಮನಶಾಸ್ತ್ರದವರಾಗಲಿ ತತ್ವಶಾಸ್ತ್ರದವರಾಗಲಿ, ವೈಜ್ಞಾನಿಕ ಮನೋಭಾವದವರಾಗಲಿ ಏನೇ ಹೇಳಲಿ ಹಳ್ಳಿಯ ಅಂದಿನ ಜನಜೀವನದಲ್ಲಿ ಭಯದ ಮೂಲಕ ಭಕ್ತಿಯ ಬೀಜವನ್ನು ಆಗಿನ ಸಮಾಜದವರು ಊರುತ್ತಿದ್ದರೆನ್ನಬೇಕು. ಇದು ಒಂದು ರೀತಿಯಲ್ಲಿ ತಪ್ಪಿರಬಹುದು, ತತ್ವಶಾಸ್ತ್ರಕ್ಕೆ ಅಪಚಾರವಾಗಬಹುದು ನಿಜ. ಆದರೆ ಬೇರೆ ಇನ್ನಾವ ಮಾಧ್ಯಮದಿಂದ ಹಿಂದೂ ಜನಾಂಗವನ್ನು ಕಟ್ಟಬೇಕೆಂಬುದು ನಿಗೂಢವಾದ ಸಮಸ್ಯೆಯೇ ಆಗಿದೆ. ಈ ಮೊದಲೇ ಹೇಳಿದಂತೆ ನಮ್ಮ ಊರಿನ ಈರಪ್ಪಜ್ಜನ ಕೈಚಳಕವೇ. ಪಲ್ಲಕ್ಕಿಯನ್ನು ತಿರುಗಿಸುವವನೂ ಹಿಂದಕ್ಕೆ ಮುಂದಕ್ಕೆ ಬರುವಂತೆ ಮಾಡುವವನೂ ಊರ ಮೂಲೆಮೂಲೆ ಸಂದಿಗೊಂದಿಗೆಲ್ಲ ದ್ಯಾಮವ್ವನ್ನು ತಿರುಗಿಸುವವನೂ - ಎಲ್ಲವೂ ಅವನೇ ಆಗಿದ್ದನು. ಹಾಗೆಂದು ಆ ಕಾಲದಲ್ಲಿ ನಮ್ಮೂರ್‍ರ ಯಾರ ಭಾವನೆಯಲ್ಲೂ ಇರಲಿಲ್ಲ. ದೇವರನ್ನು ಕಿರಿದು ಮಾಡಿ ಮನುಷ್ಯನನ್ನು ಹಿರಿದು ಮಾಡಲುಂಟೇ? ಆ ತಂತ್ರದ ಪರಿಚಯವಾದರೂ ಯಾರಿಗುಂಟು? ಈರಪ್ಪಜ್ಜನಿಗೊಬ್ಬನಿಗೇ ಗೊತ್ತು, ದ್ಯಾಮವ್ವನಿಗೆ ಗೊತ್ತು. ಪಲ್ಲಕ್ಕಿಯನ್ನು ಹೊತ್ತವರಿಗೂ ಅದು ಗೊತ್ತಿಲ್ಲ. ನಮ್ಮ ಊರಲ್ಲಷ್ಟೇ ಅಲ್ಲ, ಅವಳ 64 ಊರುಗಳಿಗೆ ದ್ಯಾಮವ್ವ ಬಂದರೂ ಇಷ್ಟು ಪವಾಡಗಳಾಗದಿದ್ದರೆ ಅದೆಂಥ ದ್ಯಾಮವ್ವ ಹೇಳಿ? ಪ್ರತಿ ಊರಿನಲ್ಲೂ ಈರಪ್ಪಜ್ಜನಂಥ ಚತುರರು ಇರಲೇಬೇಕು. ಅಂತೂ ದ್ಯಾಮವ್ವ ಮುಕ್ಕಾಲು ಮೈಲಿಯಿಂದ ಹಿಂದಿರುಗಿ ಅರ್ಧಫರ್ಲಾಂಗಿನಷ್ಟು ದೂರ ಬಂದು ಪುನಃ ನೇರವಾಗಿ ಕುಂದೂರು ಕಡೆಗೆ ನಡೆದು ಬಿಟ್ಟಳು. ಜನ ಚಪ್ಪಾಳೆ ತಟ್ಟಿ ಸಂತೋಷದಿಂದ ಮನೆ ಸೇರಿದರು. ದ್ಯಾಮವ್ವನ ಈ ಮಾಹಾತ್ಮೆಯಲ್ಲಿ ಅವಳದೆಷ್ಟು, ಈರಪ್ಪಜ್ಜನ ಕೈಚಳಕವೆಷ್ಟೆಂಬುದು ಬಹಳದಿನ ನನಗೆ ಗೊತ್ತಾಗಲಿಲ್ಲ. ಬಾಲ್ಯದಲ್ಲಿ ನನಗುಂಟಾದ ಈ ಸಮಸ್ಯೆ ಪರಿಹಾರವಾಗಲೇ ಇಲ್ಲ. ಆಗ ನಾನು ನಂಬಿದ್ದ ದ್ಯಾಮವ್ವನ ಮಹಾತ್ಮೆಯೇ ಎಂಬುದಂತೂ ನಿಜ. ಹೀಗಾಗಿ ಈ ಘಟನೆಯ ಕಾರಣ, ಬಹು ದಿನಗಳವರೆಗೆ ದ್ಯಾಮವ್ವ ಎಂದರೆ ಹೆದರಿ ನಡುಗುತ್ತಿದ್ದೆ. ದ್ಯಾಮವ್ವ ಒಂದು ಗ್ರಾಮದೇವತೆ. ಈ ದೇವತೆಯ ಕಾರಣವಾಗಿ ಭಿನ್ನಭಿನ್ನ ಮತಪದ್ಧತಿಯ ಜನರಾದ ಈ ಹಿಂದೂ ಸಮಾಜದಲ್ಲಿ ಒಂದು ರೀತಿಯ ಸಮರಸ ಸದ್ಭಾವಗಳಿಗೆ ಎಡೆಯಾಗುತ್ತಿತ್ತು. ಅಂತೆಯೇ ನಮ್ಮ ಪೂರ್ವಜರು ಭಿನ್ನತೆಯನ್ನು ಸರಿಪಡಿಸಲು ಶಕ್ಯವಿಲ್ಲದಿದ್ದಾಗ ಇಂಥ ಕೆಲವು ಸಾಂಸ್ಕೃತಿಕ ಸಮಾರಂಭಗಳನ್ನು ಕೈಕೊಂಡು ಬಾಳಿನಲ್ಲಿ ಒಂದು ರೀತಿಯ ತೃಪ್ತಿ ಮತ್ತು ಭಾವೈಕ್ಯದಿಂದ ಕಾಲ ನೂಕುತ್ತ ಬಂದಿದ್ದರು ಎಂಬುದನ್ನು ಈಗ ತಿಳಿದು ನಿಶ್ಚಿಂತನಾದೆ. ಈಗ ಹಳ್ಳಿಗಳಲ್ಲಿಯೂ ಅರ್ಧಕ್ಕರ್ಧ ಅಥವಾ ಮುಕ್ಕಾಲು ಮೂರು ವೀಸ ಪಾಲು ಇಂಥ ಪದ್ಧತಿಗಳು ಮಾಯವಾಗಿವೆ. ಪವಾಡಗಿವಾಡಗಳಿಗೆ ಬೆಲೆ ಕೊಡುವ ಕಾಲ ಮಾಯವಾಗಿದೆ. ಅಂಥ ಮುಖಂಡರೂ ಹಳ್ಳಿಯಲ್ಲಿಲ್ಲ.

### *ಸಿದ್ಧರಾಯನ ಸಂಚಾರ - ಡೊಳ್ಳು ಹಾಕಿಸುವುದು*

ದ್ಯಾಮವ್ವನಂತೆ ಜನರಲ್ಲಿ ಭಾವೈಕ್ಯ ಸಾಧಿಸುತ್ತಿದ್ದ ಸಿದ್ಧರಾಯ ಎಂಬ ದೇವತೆಯೊಂದು ನಮ್ಮ ಊರಿಗೆ ಬರುತ್ತಿತ್ತು. ಈ ಸಿದ್ಧರಾಯನನ್ನು ತರುತ್ತಿದ್ದವರೂ, ಅದನ್ನು ಪೂಜಿಸುವವರೂ ಕುರುಬರು. ದೇವರು ಬಂದು ಬಿಡಾರ ಮಾಡುತ್ತಿದ್ದುದು ನಮ್ಮೂರ್‍ರ ವೀರಶೈವರಾದ ಕೋಟೆಯವರ ಮನೆಯಲ್ಲಿ. ಈ ದೇವರು ಹೇಳದೆ ಕೇಳದೆ ಬರುವ ದೇವರು. ಮೂರು ವರ್ಷಕ್ಕೆ, ನಾಲ್ಕು ವರುಷಕ್ಕೆ ಒಮ್ಮೆ ಈ ದೇವರನ್ನು ಹೊತ್ತುಕೊಂಡು ಉತ್ತರಕರ್ನಾಟಕದ ಕೋಣನೂರು ಎಂಬ

ಊರಿಂದ ಐದಾರು ಜನ ಒಳ್ಳೇ ದೈವಭಕ್ತರಾದ ಕುರುಬರು ಹಳ್ಳಿಗಳ ಮೇಲೆ ಬರುತ್ತಿದ್ದರು. ಇಂಥ ಹನ್ನೊಂದು ದೇವರುಗಳು ಊರ ಮೇಲೆ ತಿರುಗುತ್ತಿದ್ದವಂತೆ. ಆ ದೇವರು ಬಂದು ಕೋಟಿಯವರ ಮನೆಯಲ್ಲಿ ತಳ ಊರಿದ ಮೇಲೆ ದಿನದಲ್ಲಿ ಮೂರು ಹೊತ್ತು ಪೂಜೆ, ರಾತ್ರಿ ಕುರುಬರ ಹಾಡುಗಳು. ಡೊಳ್ಳಿನವರನ್ನು ಕರೆಸಿ ಡೊಳ್ಳಿನ ಪೂಜೆ ಮಾಡಿಸಿ. ಬಂದ ಕುರುಬರಿಗೆಲ್ಲ ಹೋಳಿಗೆ ಊಟ ಮಾಡಿಸುವುದು ಮೊದಲಾದ ಕಾರ್ಯಗಳು ಜರುಗುತ್ತಿದ್ದವು. ಹೀಗೆ ಐದಾರು ದಿನ ಈ ದೇವರು ಇದ್ದು ಕಾಣಿಕೆ ವಗೈರೆ ಪಡೆದು ತೆರಳಬೇಕಾಗಿತ್ತು. ದ್ಯಾಮವ್ವನಂತೆ ಪಲ್ಲಕ್ಕಿಯಿಲ್ಲ. ಈ ದೇವರೂ ಕೂಡ ಹಿಂದಕ್ಕೆ ಹೋಗುವುದು, ಮುಂದಕ್ಕೆ ಓಡುವುದು, ಗಿರಿಗಿರಿ ತಿರುಗುವುದು ಇತ್ಯಾದಿ ಕಾರ್ಯ ಮಾಡುತ್ತಿತ್ತು. ಬೆಳ್ಳಿಯ ಮುಖ, ಮುಖದ ಮೇಲೆ ಬೆಳ್ಳಿಯ ರುಮಾಲು, ಕೆಳಭಾಗದಲ್ಲಿ ಅಂಗಿ ಪಂಜೆ ಉಡಿಸಿ ಸೆಲ್ಲೆ ಹೊದ್ದಿಸಿ ಮನುಷ್ಯನಂತೆ ಮಾಡಿದ ವಿಗ್ರಹ ಇದು. ಪಲ್ಲಕ್ಕಿಯಲ್ಲಿ ಈ ವಿಗ್ರಹ ಕುಳಿತಾಗ ನೋಟಕ್ಕೆ ಚಂದವಾಗಿರುತ್ತಿತ್ತು. ಆದರೆ ಈ ದೇವರು ದ್ಯಾಮವ್ವನಷ್ಟು ಹಟಮಾರಿಯಲ್ಲ. ಎಷ್ಟೇ ಆಗಲಿ ದ್ಯಾಮವ್ವ ಚಾಮುಂಡಿಯಲ್ಲವೆ? ಇಲ್ಲಿ ನಾನು ಹೇಳ ಹೊರಟಿರುವುದು ಮುಖ್ಯವಾಗಿ ಈ ವರ್ಣನೆ ಮಾಡಲಿಕ್ಕಲ್ಲ. ಈ ದೇವರು ಬಂದಾಗ ನನ್ನ ಮನಸ್ಸಿನ ಮೇಲೆ ಏನೇನು ಪರಿಣಾಮಗಳಾಗುತ್ತಿದ್ದವು ಎನ್ನುವುದು.

ಕೋಟಿಯವರ ಎರಡು ಮೂರು ಮನೆತನಗಳು ನಮ್ಮೂರಿನಲ್ಲಿವೆ. ಅವರ ಮನೆಗಳಲ್ಲಿ ಸಿದ್ಧರಾಯ ಬೀಡುಬಿಟ್ಟಾಗ ಪ್ರತಿದಿನ ರಾತ್ರಿ ಏನಾದರೂ ಕಾರ್ಯಕ್ರಮಗಳು ಸಿದ್ಧರಾಯನ ಮಂದೆ ನಡೆಯಲೇಬೇಕು. ಕುಂದೂರು, ಚನ್ನಾಪುರ, ದೇವಗಿರಿ ಡೊಳ್ಳಿನ ಮೇಳದವರು ಬರುವ ದಿನ ಊರ ಮತ್ತು ಪರಊರ ಜನ ಕಿಕ್ಕಿರಿದು ನೆರೆಯುತ್ತಿದ್ದರು. ಡೊಳ್ಳಿನ ಮೇಳದವರು ಕುಣಿ ಕುಣಿದಾಡಿ ಊರೆಲ್ಲ ಗದ್ದರಿಸುವಂತೆ ಜಿದ್ದಿನಿಂದ ಡೊಳ್ಳುಬಡಿದ ಮೇಲೆ ಜನರು ಊರಿನ ದೆವ್ವಗಳೆಲ್ಲ ಓಡಿ ಹೋಗಿ ಬಿಟ್ಟವು ಎನ್ನುತ್ತಿದ್ದರು. ಈ ಮನರಂಜನೆ ಕಾರ್ಯ ಮುಗಿದ ಮೇಲೆ ವೀರಗಾರರ ಪದಗಳ ಮೇಳ ಮೇಲೆದ್ದು ಹಾಡುವುದಕ್ಕೆ ಪ್ರಾರಂಭ ಮಾಡಿದರೆ ಬೆಳಗಾದುದೇ ಗೊತ್ತಾಗುತ್ತಿರಲಿಲ್ಲ. ಮುಮ್ಮೇಳದಲ್ಲಿ ಇಬ್ಬರು, ಹಿಮ್ಮೇಳದಲ್ಲಿ ಒಬ್ಬ ಕಿರಿಡೊಳ್ಳು ಬಡಿಯುವವನೂ ಸೇರಿ ಮೂರು ನಾಲ್ಕು ಜನರು ಇರುತ್ತಿದ್ದರು. ಮುಮ್ಮೇಳದವರು ಕೈಮಾಡಿ ಅನೇಕ ಪದಗಳನ್ನು ಹಳೆಯ ಕಥೆಗಳನ್ನು ಆಧರಿಸಿ ಹೇಳುತ್ತಿದ್ದುದು ಬಹಳ ಸೊಗಸಾಗಿರುತ್ತಿತ್ತು. ಅವುಗಳಲ್ಲಿ ರೇವಣಸಿದ್ಧೇಶ್ವರನ ಕಥೆ, ಚಂದ್ರಗುತ್ತಿ ಅರಸನು ತನ್ನ ಮಗಳ ಮೇಲೆ ಮೋಹಗೊಂಡು ಕೆಟ್ಟ ಕೇಡಿನ ಕಥೆ ಇವು ಜನಗಳನ್ನು ಬಹಳ ಆಕರ್ಷಿಸುತ್ತಿದ್ದವು.

ಚಂದ್ರಗುತ್ತಿ ಅರಸು ತಾನು ಕಾತರ ಹುಟ್ಟಿ ಕಾಮದಿಂದ
ಮಗಳ ಮೇಲೆ ಮನಸಿಟ್ಟು ಕೆಟ್ಟ ಪೂರ
ಚಂದದಿಂದ ಕಥೆ ಮಾಡಿ ಹೇಳುತೇನಿ ಜನರೆಲ್ಲ
ಅಂದವಾಗಿ ಕೇಳಿರಿ ಮನವಿಡುತ

- ಹೀಗೆ ಪ್ರಾರಂಭಮಾಡಿ ಕುಂದೂರಿನವರು ಒಂದೆರಡು ಗಂಟೆ ಪದ್ಯವನ್ನು ಹೇಳಿದ ಮೇಲೆ ಚನ್ನಾಪುರದ ಮೇಳ ರೇವಣಸಿದ್ಧನ ಕಥೆಯನ್ನು ಹೇಳುತ್ತಿದ್ದಂತೆ ಬೆಳಗಾಗಿ ಬಿಡುತ್ತಿತ್ತು. ನನಗಂತೂ ಈ ಮೇಳದವರ ಹಾಡುಗಳು ರಸದೌತಣವಾಗಿರುತ್ತಿದ್ದವು. ಕುಂದೂರಿನ ಜೇಡರ ಗುಡ್ಡಪ್ಪ ಮತ್ತು ಕನ್ನಯ (ಬಹುಶಃ ಕನಕ ಎಂಬ ಹೆಸರು ಕನ್ನಯ ಆಗಿರಬೇಕು) ಇವರು ಬಹಳ

ಗತ್ತುಗಾರಿಕೆಯಿಂದ ಹೇಳುತ್ತಿದ್ದುದು ನನ್ನ ಮನಸ್ಸನ್ನು ಸೆರೆ ಹಿಡಿಯುತ್ತಿತ್ತು. ಇನ್ನೊಂದಿನ ನಮ್ಮೂರಿನ ಹೆಣ್ಣುಮಕ್ಕಳಿಗೆ ಮೀಸಲಾಗಿರುತ್ತಿತ್ತು. ನಮ್ಮೂರಲ್ಲಿ ದೇವಗಿರಿ ನೀಲವ್ವ ನಿರಕ್ಷರಕುಕ್ಷಿ ವ್ಯವಸಾಯಗಾರ್ತಿ, ಒಳ್ಳೆಯ ಶಕ್ತಿಶಾಲಿನಿಯಾದ ಈಕೆಯು ಇನ್ನೊಬ್ಬಳನ್ನು ಜೊತೆಮಾಡಿಕೊಂಡು ಬೆಳ್ಳಂಬೆಳತನಕ ಹಾಡುವ ಹಾಡು ಕೇಳಿದವರು ಬೆಕ್ಕಸಬೆರಗಾಗುತ್ತಿದ್ದರು. ಸೋಬಾನೆಹಾಡು, ವೀರಭದ್ರನ ಹಾಡು, ಒಂದೇ ಎರಡೇ! ಅವಳ ಜ್ಞಾಪಕ ಶಕ್ತಿಯ ಬಗ್ಗೆ ನನಗೆ ಆಶ್ಚರ್ಯ ಮೂಡುತ್ತಿತ್ತು. ಇಷ್ಟೊಂದು ಹಾಡು ಹೇಗೆ ಕಲಿತಳು? ಯಾರು ಕಲಿಸಿದರು? ಸಮಸ್ಯೆಯಲ್ಲಿ ಮುಳುಗುತ್ತಿದ್ದೆ. ಇವಳು ಹಾಡಿನ ದೊಡ್ಡ ಕಣಜವೇ ಆಗಿದ್ದಳೆಂದು ಬೇಕಾದರೆ ಹೇಳಬಹುದು. ಮಧುರ ಮೋಹದ ಉಚ್ಚಕಂಠದಿಂದ ಆಕೆ ಹಾಡುತ್ತಿದ್ದ ಹಾಡುಗಳೆಲ್ಲ ಜ್ಞಾಪಕವಿಲ್ಲದಿದ್ದರೂ ವೀರಭದ್ರನ ಹುಟ್ಟು, ಅವನು ದಕ್ಷಯಜ್ಞ ಧ್ವಂಸ ಮಾಡಿದ್ದು ಅದ್ಭುತವಾಗಿರುತ್ತಿತ್ತು.

ಕಡಗ ಕಂಠಮಾಲೇ ಏನ ಬಿರುದಿನ ಪೆಂಡೆ ಜಂಗಮಾಲ<br>
ಗಡಗಡ ಗದ್ಲಿಸುತ ಸಡಗರಗೊಳ್ಳುತ<br>
ಸ್ವಾಮಿ ಬಂದ ನಮ್ಮ ವೀರಭದ್ರ ಬಂದ ನಮ್ಮ

- ಈ ಹಾಡಿನಲ್ಲಿ ನನ್ನ ಮನಸ್ಸು ಹೋಗುತ್ತಿತ್ತು. ವೀರಭದ್ರನ ಶೌರ್ಯ ಪ್ರಕಟಣೆ ಮಾಡುವಾಗ ಅತ್ಯಂತ ಉತ್ಸಾಹಗೊಂಡು ಧ್ವನಿ ಬದಲಿಸಿ ಹೇಳುತ್ತಿದ್ದ ನೀಲಮ್ಮನ ಗತ್ತುಗಾರಿಕೆಗೆ ನೆರೆದ ಹೆಂಗಸರೂ ಗಂಡಸರೂ ಪ್ರಭಾವಿತರಾಗಿ ಹೋಗುತ್ತಿದ್ದರು. ಹೀಗೆ ಮೂರು ನಾಲ್ಕು ದಿನ ಸಿದ್ಧರಾಯ ನಮ್ಮೂರಲ್ಲಿ ಕ್ಯಾಂಪು ಮಾಡಿ ಸಿಕ್ಕಷ್ಟು ಕಾಣಿಕೆ ವಸೂಲು ಮಾಡಿಕೊಂಡು ಮತ್ತೆ ಬೇರೆ ಬೇರೆ ಊರುಗಳಿಗೆ ತೆರಳುತ್ತಿದ್ದ. ಹೋಗುವಾಗ ಅತನೂ ಪಲ್ಲಕ್ಕಿಯಲ್ಲಿ ಕುಳಿತು ಪವಾಡಮಾಡುತ್ತಲೇ ಇದ್ದ. ಭಯಭಕ್ತಿಯಿಂದ ಜನ ಅವನಿಗೆ ಬುದ್ಧಿ ಹೇಳಿ ಕಳಿಸುತ್ತಿದ್ದರು.

ಆಗ ಹಳ್ಳಿಯ ಜನವೆಲ್ಲ ತಮ್ಮ ಪ್ರತಿನಿತ್ಯದ ವ್ಯವಸಾಯದ ಬದುಕಿನಲ್ಲಿ ಬಿಡುವು ಮಾಡಿಕೊಂಡು ಭಾವೈಕ್ಯದಿಂದ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಆನಂದದಿಂದ ಜೀವಿಸುತ್ತಿದ್ದ ಮಧುರಜೀವನವನ್ನು ಕಂಡು ಇಂದಿನ ಭಾವೈಕ್ಯ ರಹಿತ ಬರಡು ಜೀವನದ ವಿಷಯದಲ್ಲಿ ಹೇಸಿಕೆಯಾಗುತ್ತಿದೆ. ಈಗ ಹಿಂದೂಗಳು ಒಬ್ಬರೊಡನೊಬ್ಬರು ಬೆರೆಯುವುದು ಕಠಿಣವಾಗಿದೆ. ಒಬ್ಬರೊಡನೊಬ್ಬರು ಬೆರೆತರೂ ಮನದಲ್ಲಿ ಕ್ರೋಧ, ವಚನದಲ್ಲಿ ಕಾಠಿಣ್ಯ, ಕಂಕುಳಲ್ಲಿ ದೊಣ್ಣೆಯಿಟ್ಟುಕೊಂಡು ಬದುಕುತ್ತಿದ್ದಾರೆ. ಇದೆಂಥ ಹೊಲಸುಜೀವನ ಅನ್ನಿಸುತ್ತದೆ. ಇವರು ಮುಂದೆ ಸಮರಸದಿಂದ ಬದುಕುವರೇ? ಹಾಗೆ ಬದುಕದಿದ್ರೆ ನಾಗಾಲೋಟದಿಂದ ಓಡುತ್ತಿರುವ ವೈಜ್ಞಾನಿಕ ಜಗತ್ತಿನಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಸಾಧ್ಯವೇ? ತಮ್ಮ ತಮ್ಮಲ್ಲೇ ಬೀದಿಕಾಳಗಮಾಡಿಕೊಂಡು ರಾಷ್ಟ್ರದ ಅವನತಿಗೆ ಕಾರಣರಾಗಲಿಕ್ಕಿಲ್ಲವೆ? ಎಂಬ ಅನುಮಾನ ಹುಟ್ಟುತ್ತದೆ.

***ದೊಡ್ಡಾಟ - ಸಣ್ಣಾಟಗಳು*** : ಬಾಲ್ಯದ ದಿನಗಳಲ್ಲಿ ನನ್ನ ನಾಟಕದ ಗೀಳಿನಂತೆ ಇನ್ನೊಂದು ಗೀಳೆಂದರೆ ದೊಡ್ಡಾಟ-ಸಣ್ಣಾಟಗಳು ಸುತ್ತಮುತ್ತಣ ಊರುಗಳಲ್ಲಿ ಎಲ್ಲಿ ನಡೆದರೂ ಗುಂಪುಗೂಡಿಕೊಂಡು ಹೋಗಿ ನೋಡಿಬರುವುದು. ಸ್ವತಃ ನಮ್ಮೂರಿನಲ್ಲಿ ಕೆಂಚಪ್ಪನ ಕಟ್ಟೆಯ ಮೇಲೆ ಹಳೆಗಾಲದ ಒಂದು ಹಾರ್ಮೋನಿಯಂ ಬಾರಿಸುತ್ತ ನೀಲಂಕಂಠನ ಆಟ ಕಲಿಯುತ್ತಿದ್ದುದನ್ನು ನಾನು ಬಾಲ್ಯದಿಂದಲೂ ನೋಡುತ್ತಿದ್ದೆ. ನೀಲಕಂಠನ ಆಟ, ಮಾದೇವಿಕಥೆ, ಹರಿಶ್ಚಂದ್ರ, ಮೊದಲಾದ

ಸಣ್ಣಾಟಗಳನ್ನೂ ನಮ್ಮೂರಿನಲ್ಲಿ ನನ್ನ ಬಾಲ್ಯದಲ್ಲಿ ಆಡುತ್ತಿದ್ದರು. ಸಣ್ಣಾಟದ ರೀತಿ ನೀತಿ ಬಟ್ಟೆ ಬರೆ, ಒಡವೆ ವಸ್ತ್ರ ಬೇರೆ, ದೊಡ್ಡಾಟದ ರೀತಿ ನೀತಿಗಳೇ ಬೇರೆ. ದೊಡ್ಡಾಟ ಗಂಡುಆಟ. ಇದೇ ನನಗೆ ಹಿಡಿಸುತ್ತಿದ್ದು, ನಾನು ಬಹಳ ಚಿಕ್ಕಹುಡುಗನಿರುವಾಗ ನಮ್ಮೂರ್‍ನಲ್ಲಿ ಕರ್ಣಪರ್ವವನ್ನು ಬಹಳ ಯಶಸ್ವಿಯಾಗಿ ಆಡುತ್ತಿದ್ದರು. ಕರ್ಣಪರ್ವವನ್ನು ಹರವಿಯಲ್ಲೇ ನೋಡಬೇಕು ಎಂದು ಜನ ಅಂದುಕೊಳ್ಳುವಂತೆ ಬಹುರಮ್ಯವಾಗಿ ಆಡುತ್ತಿದ್ದರು. ಈ ಆಟಕ್ಕೆ ನಮ್ಮ ದೊಡ್ಡಪ್ಪನ ಕುಮ್ಮಕ್ಕು ಬಹಳ. ಆಟದ ತಾಲೀಮು ನಮ್ಮ ಕೀಲಿಮನೆಯಲ್ಲಿಯೇ ಆಗುತ್ತಿತ್ತು. ನಮ್ಮ ಇನ್ನೊಬ್ಬ ದೊಡ್ಡಪ್ಪ ನಿಂಗಪ್ಪನ ಮಗ ಸಂಗಪ್ಪನದೇ ಅರ್ಜುನನ ಪಾತ್ರ. ಪ್ರಧಾನ ವ್ಯವಸ್ಥಾಪಕನೂ ನಮ್ಮ ಅಣ್ಣನೇ. ಆಗಾಗ ನಾನು ಸೋರೆಬುರುಡೆಯಲ್ಲಿ ಮಾಡಿದ್ದ ಶ್ರುತಿಯನ್ನು ಊದುತ್ತಿದ್ದೆ. ಆಗ ಹಾರ್ಮೋನಿಯಂ ಮೊದಲಾದ ಶ್ರುತಿಗಳನ್ನು ಬಳಸುತ್ತಿದ್ದಿಲ್ಲ. ಶ್ರುತಿ ಮತ್ತು ಮದ್ದಳೆ ನಮ್ಮ ಮನೆಯಲ್ಲೆ ಇರುತ್ತಿದ್ದವು. ಆದ್ದರಿಂದ ನನಗೆ ಆಟವೆಲ್ಲ ನಮ್ಮ ಮನೆತನದ ಪ್ರತಿಷ್ಠೆಯದೇ ಎನ್ನುವ ಹುಮ್ಮಸ್ಸು ಬರುತ್ತಿತ್ತು. ಆಟದ ದಿನ ಊರಿನಲ್ಲಿ ಸಂಭ್ರಮವೋ ಸಂಭ್ರಮ. ಎಲ್ಲ ಹಬ್ಬದ ವಾತಾವರಣ. ನಾಲ್ಕೈದು ಜನ ಬಂಕಾಪುರಕ್ಕೆ ಗ್ಯಾಸ್‌ಲೈಟ್ ತರಲು ಹೋಗಬೇಕು. ಒಂದು ಗಾಡಿ ಹೂಡಿಕೊಂಡು ನಾಲ್ಕೈದು ಜನ ನರೇಗಲ್ಲಿಗೆ ಬಾಳೆಮರ, ಅಡಿಕೆಮರ, ಮಾವಿನ ಸೊಪ್ಪು ಮೊದಲಾದವನ್ನು ತರಲು ಹೋಗಬೇಕು. ಸಂಗೂರಿಗೆ ಆಟದ ಪೋಷಾಕು, ಬಣ್ಣ ಬಳಿಯುವವರನ್ನು ಕರೆತರಲು ಗಾಡಿ ಕಳಿಸಬೇಕು. ಎಲ್ಲ ಊರವರಿಗೆ ಆಮಂತ್ರಣ ಕೊಟ್ಟು ಬರಲು ನಮ್ಮ ದೊಡ್ಡಪ್ಪನೇ ಹೋಗಿಬರಬೇಕು. ಏಕೆಂದರೆ ಇವನು ಪಂಚಪ್ರಮುಖನಾದ್ದರಿಂದ ಬೇರೆ ಬೇರೆ ಊರುಗಳ ಗೌಡ-ಶಾನುಭೋಗ ಪಂಚರನ್ನು ಕಂಡು ನಮ್ಮೂರ ಆಟಕ್ಕೆ ಬರಬೇಕೆಂದು ಆಮಂತ್ರಣ ಕೊಟ್ಟು ಬರದಿದ್ದರೆ, ಅವರು ಕರೆಯದವರ ಊರಿಗೆ ಏಕೆ ಹೋಗಬೇಕೆಂದು ಬಂದಾರೆಯೆ? ಸುತ್ತಮುತ್ತಣ ಊರವರು ಬಂದು ಆಟನೋಡಿ 'ಸೈ' ಎಂದರೆ ತಾನೇ ನಮಗೆ ಗೌರವ. ಪರಸ್ಥಳದ ಸಾಮಾನ್ಯ ಜನಗಳೂ ಬರುತ್ತಿದ್ದರು. ಸಾಮಾನ್ಯರಷ್ಟೇ ಬಂದರೆ ಆಗದು. ಊರ ಪ್ರಮುಖರು ಬರಲೇಬೇಕು. ಅವರು ಊರಿಗೆ ಬಂದ ಮೇಲೆ ಮಾನ ಮರ್ಯಾದೆಯಿಂದ ನೋಡಿಕೊಂಡು ಮುಂಭಾಗದಲ್ಲಿ ಗುಡಾರ ಹಾಕಿ ಕೂಡಿಸಿ ಬೆಳಕನಕ ಆಗುವಷ್ಟು ಎಲೆಅಡಿಕೆ, ತಂಬಾಕು ತಂದು ಇಡಬೇಕು. ಇವು ಆಗಿನ ಗ್ರಾಮೀಣ ಜನಗಳ ಪದ್ಧತಿ, ತಾಲೂಕಿಗೆ ಮಾಮಲೇದಾರರಿಂದ ಹುಕ್ಕುಂ ತಂದೇ ಆಡಬೇಕು. ಒಬ್ಬ ಕಾನ್‌ಸ್ಟೇಬಲ್ಲನೋ, ಹವಾಲ್ದಾರನೋ ಪೋಲಿಸ್ ಠಾಣೆಯಿಂದ ಬರುತ್ತಿದ್ದ, ಅವನೊಬ್ಬನೇ ಗಲಾಟೆಗದ್ದಲಗಳಾಗದಂತೆ ನೋಡಿಕೊಳ್ಳುವ ರಕ್ಷಣಾಭಾರ ನಿರ್ವಾಹಕ. ಅವನ ದರ್ಪವೋ ಹೇಳತೀರದು. ಯಾರೂ ಅವನೆದುರು ಕಮಕ್ ಕಿಮಕ್ ಅನ್ನುತ್ತಿರಲಿಲ್ಲ. ಹಾಗಿತ್ತು ಬ್ರಿಟಿಷ್ ಅರಸರ ಬಿಕ್ಕಟ್ಟು. ಒಮ್ಮೊಮ್ಮೆ ತಿಳಿದೋ ತಿಳಿಯದೆಯೋ ಪರಸ್ಥಳದವರಿಗೆ ಅವಮಾನವಾಗುವ ಹಾಗೆ ನಡೆದುಕೊಂಡರೆ ಅವರು ಹೋಗುವಾಗ ಕಂಡ ಕಂಡವರ ಬಣವೆಗೆ ಬೆಂಕಿಹಚ್ಚಿ ಓಡುತ್ತಿದ್ದ ಪ್ರಸಂಗವೂ ಇಲ್ಲದಿಲ್ಲ. ಇದಕ್ಕಾಗಿ ಊರ ಓಲೆ ಕಾರರೇ ಮೊದಲಾದವರು ಗಸ್ತು ತಿರುಗುತ್ತಿದ್ದರು. ಆಟದಲ್ಲಿ ಅರ್ಜುನನ ಪಾತ್ರ ವಹಿಸಿದ ನಮ್ಮ ಅಣ್ಣ ಸಂಗಪ್ಪ (ಈ ಸಂಗಪ್ಪ ನಮ್ಮಜ್ಜನ ಹಿರೇಮಗ ನಿಂಗಪ್ಪನ ಮಗ) ಬಣ್ಣ ಬಳಿದುಕೊಂಡು ಬೇರೆ ದಾರಿಯಂದ ಆಟದ ಮುಂಭಾಗಕ್ಕೆ ಮೈ ಮೇಲೆ ಮುಸುಕು ಹಾಕಿಕೊಂಡುಹೋಗಿ ತೊಗರಿ ಪುಂಡಿಕಡ್ಡಿಗಳ ಪಂಜಿನ ಬೆಳಕಿನಲ್ಲಿ ಲಾಲಿ ಕುಣಿತದಿಂದ ಬರಬೇಕು. ಕೂಡಿದ ಜನಗಳ ಮಧ್ಯದಲ್ಲಿ ದಾರಿಮಾಡಿಕೊಂಡು ಭಾಗವತ್ತಣ್ಣ ಹಾಡುವ

ಹಾಡಿಗೆ ತಕ್ಕ ಹಾಗೆ ಕುಣಿಯುತ್ತ ಬಂದರೆ ಸಭೆಯೆಲ್ಲ 'ಅರ್ಜುನ ಅರ್ಜುನ' ಎಂದುಕೊಂಡು ಉತ್ಸಾಹಭರಿತವಾಗುತ್ತಿತ್ತು. ಸಭೆ ದಾಟಿ ಅಟ್ಟವನ್ನು ಟಣ್ಣನೆ ಹಾರಿ ಹತ್ತುವ ಗತ್ತುಗಾರಿಕೆಯಲ್ಲಿಯೇ ಅರ್ಜುನನ ಶೌರ್ಯ ಎಲ್ಲರ ಗಮನಕ್ಕೆ ಬಂದು ಬಿಡಬೇಕು. ದೊಡ್ಡಾಟದ ದಿನ ನಾನು ಅಟ್ಟದ ಮೇಲೆಯೇ ಇದ್ದು ಪರದೆ ಹಿಡಿಯುವುದು, ಪಾತ್ರಧಾರಿಗಳು ನೀರಡಿಸಿದರೆ ನೀರು ತರುವುದು. ಆಗ ಚಹಾದ ಗಲಾಟೆಯಿರಲಿಲ್ಲ. ನೀರಡಿಸಿದರೆ ಎಲ್ಲರೂ ನೀರು ಕುಡಿಯುತ್ತಿದ್ದರು. ಚಹಾ ಕುಡಿಯುವ ಚಟ ಇನ್ನೂ ಹಳ್ಳಿಗರಲ್ಲಿ ಬಂದಿರಲಿಲ್ಲ. ಚಹಾ ಕುಡಿಯುವವನ್ನು ಆಗ ತಿರಸ್ಕಾರದಿಂದ ನೋಡುತ್ತಿದ್ದರು. ನಾನು ಆಗಾಗ ಹಣಕಿಸಿ ನೋಡುತ್ತ ಮುಂದೆ ಕುಳಿತ ಜನಕ್ಕೆ ತೋರಿಸಿಕೊಳ್ಳುವುದು ಪ್ರಸಂಗ ಬಿಟ್ಟರೆ ಹಿಮ್ಮೇಳದಲ್ಲಿ ದನಿಗೂಡಿಸುವುದು ಮಾಡುತ್ತಿದ್ದೆ. ಇವೆಲ್ಲ ನನ್ನ ಉತ್ಸಾಹಪೂರ್ಣ ಕಾರ್ಯಗಳಾಗಿದ್ದವು. ಒಂದು ಹಾಡು ನನ್ನನ್ನು ಬಹಳ ಪ್ರಭಾವಿತನನ್ನಾಗಿ ಮಾಡುತ್ತಿತ್ತು. ಅರ್ಜುನನು ನಾಳಿನ ಸಮರದಲ್ಲಿ ಕರ್ಣನನ್ನು ಕೊಲ್ಲುವ ಪ್ರತಿಜ್ಞೆ ಮಾಡುವಾಗ ಒಮ್ಮೆಲೆ ಮೂರನೇ ಕಾಲದಲ್ಲಿ ಭಾಗವತರು ಹಾಡುತ್ತಿದ್ದ -

ಕೇಳುತ ಅರ್ಜುನ ತಾಳುತ ಕೋಪವ
ನಾಳಿನ ಸಮರದಲೆ ಭಾವಯ್ಯ ನಾಳಿನ ಯುದ್ಧದಲೆ

ಎಂಬ ಪದ್ಯ ಬಂದಾಗ ನಮ್ಮಣ್ಣ ನಡುಗುವಂತೆ ಹಲಲಲ ಎನ್ನುತ್ತ ಕುಣಿದು ಕುಪ್ಪಳಿಸಿ ವೀರಾವೇಶವನ್ನು ಅಭಿನಯಿಸುವುದನ್ನು ಕಂಡು ಪುಳುಕಿತಗೊಂಡು ನಾನೂ ಕುಣಿದಾಡುತ್ತಿದ್ದೆ. ಆಗ ಮದ್ದಲೆಯಂತೂ ದುಮುಗುಟ್ಟಿ ಬಿಡುತ್ತಿತ್ತು. ಕರ್ಣ ಅರ್ಜುನ ಕೈಗೆ ಕೈ ಮಿಗಿಲಿಸಿ ಯುದ್ಧ ಮಾಡುವಾಗ ಅವರಿಬ್ಬರ ಅಬ್ಬರ - ಆರ್ಭಟ ಕುಣಿತವಂತೂ ನನ್ನ ಮೈಗೆ ರೋಮಾಂಚನವುಂಟುಮಾಡುತ್ತಿತ್ತು. ಕರ್ಣನ ಪಾರ್ಟು ಮಾಡುವವನೂ ನನ್ನ ಸೋದರತ್ತೆಯ ಮಗನೇ ಆದ ಮಹಾದೇವಪ್ಪ. ಈ ಕರ್ಣಪರ್ವ ಕಥೆಯನ್ನು ನಮ್ಮೂರಿನಲ್ಲಿ ಮೂರು ನಾಲ್ಕು ಸಲ ಆಡಿದ್ದು ಜ್ಞಾಪಕ. ಈ ಆಟಕ್ಕೆಲ್ಲ ಹಿನ್ನೆಲೆಯ ಶಕ್ತಿ ನಮ್ಮ ದೊಡ್ಡ ಅಜ್ಜನ ಮಗ ನಿಂಗಪ್ಪ ಎಂಬುವವನದೇ. ಎಷ್ಟಾದರೂ ಖರ್ಚಾಗಲಿ ಆಟ ಆಡಿರಿ ಎಂದು ಮಗ ಸಂಗಪ್ಪನಿಗೆ ಹೇಳಿ ಆಟ ಆಡಿಸುತ್ತಿದ್ದ. ಈ ಆಟ ನನಗೆ ಬಾಲ್ಯಜೀವನದಲ್ಲಿ ಬಹಳಷ್ಟು ಬುದ್ಧಿಯ ವಿಸ್ತಾರಕ್ಕೆ ಕಾರಣವಾಗಿತ್ತು. ಇವನ್ನೆಲ್ಲ ಕೈ ಬಿಟ್ಟರೆ ಹಳ್ಳಿಯ ಶ್ರಮದ ಬದುಕಿನ ಬೇಸರ ಕಳೆಯಲು ನಡೆ ನುಡಿಗಳ ಸಾಮಾನ್ಯ ಜ್ಞಾನವರ್ಧನೆ ಮಾಡಿಕೊಳ್ಳಲು ಬೇರೆ ಏನಿದೆ ಹೇಳಿ? ಅಂತು ಹಳ್ಳಿಯ ಜನ ತಮ್ಮ ಮಟ್ಟದಲ್ಲಿ ಅನೇಕ ಸಾಮೂಹಿಕ ಕಾರ್ಯಕ್ರಮಗಳನ್ನು ಹಮಿಕ್ಕೊಂಡು 60-70 ವರ್ಷಗಳ ಹಿಂದೆ ಒಂದು ರೀತಿಯಲ್ಲಿ ಸುಖವಾಗಿಯೇ ಇರುತ್ತಿದ್ದರು. ಈಗ ಅಂಥ ಸುಖ, ಅಂಥ ಜನ, ಅಂಥ ಮನ ಹಳ್ಳಿಯಲ್ಲೂ ಮಾಯವಾಗಿ ಅಲ್ಲಿ ಒಣರಾಜಕೀಯ ತಾಂಡವವಾಡುತ್ತಾ ಶತಛಿದ್ರಗೊಂಡು ಒಬ್ಬರನ್ನೊಬ್ಬರು ನಂಬದೆ ಕಳವು, ಸುಲಿಗೆ, ಅವಿಧೇಯತೆ, ಎಲ್ಲಕ್ಕೂ ಹೆಚ್ಚಾಗಿ ಕುಡುಕರ ಕೊಂಪೆಗಳಾಗುತ್ತಿರುವುದನ್ನು ನೆನೆದರೆ ಮೈ ನಡುಕ ಬರುತ್ತದೆ. ಅನ್ನವನ್ನು ಸೃಷ್ಟಿಸುವ ಆ ಜನಕ್ಕೇ ಹೊಟ್ಟೆ ತುಂಬುವಷ್ಟು ಅನ್ನ ಸಿಗುತ್ತಿಲ್ಲ, ಬಿದ್ದ ಗೋಡೆ ಕಟ್ಟಿಸಿಕೊಳ್ಳುವ ಸಾಮರ್ಥ್ಯ ಕಳೆದುಕೊಂಡಿದ್ದಾರೆ. ಬಹಳಷ್ಟು ಜನ ಸರಕಾರದಿಂದ ದುಡ್ಡು ಕಿತ್ತು ಬದುಕುವ ಉಪಾಯ ಹುಡುಕುತ್ತಿದ್ದಾರೆ. ಅವರಿಗೆ ದುರವಸ್ಥೆ ಬಂದುದು ನನ್ನ ದೃಷ್ಟಿಯಲ್ಲಿ ಅವರ ಸ್ವಯಂಕೃತಾಪರಾಧವೇ ಎನ್ನಿಸುತ್ತದೆ. ಶ್ರದ್ಧೆಯಿಂದ ದುಡಿಯುವವ ಹಳ್ಳಿಯಲ್ಲಿ ಸುಖವಾಗಿಯೇ ಇದ್ದಾನೆ. ದುಡಿದು ಸಂಪಾದಿಸಿ ಸುಖವಾಗಿರುವವರನ್ನು ಕಂಡು ಕರುಬುವವನೇ ದರಿದ್ರನಾಗಿದ್ದಾನೆ ಎಂದು ನನ್ನ

ತೀರ್ಮಾನ. ಅವರು ಹೀಗಾಗಲು ಹಳ್ಳಿಗಳಲ್ಲಿ ವರ್ಗಕಲಹಕ್ಕೆ ದಾರಿಮಾಡಿಕೊಟ್ಟ ಹಸಿ ಬಿಸಿ ರಾಜಕಾರಣಿಗಳೇ ಕಾರಣವಾಗಿದ್ದಾರೆ ಎನ್ನಬಹುದು.

ನನ್ನ ದೊಡ್ಡಾಟವನ್ನು ನೋಡಬೇಕೆನ್ನುವ ಚಟ ನಮ್ಮ ಹಳ್ಳಿಗೇ ಮೀಸಲಾಗಿರಲಿಲ್ಲ. ನಮ್ಮ ಊರ ಸುತ್ತಮುತ್ತ ಇರುವ ಕೂಡಲ, ಅಲ್ಲಾಪುರ, ಕುಂದೂರು, ತೆವರಮೆಳ್ಳಹಳ್ಳಿಗಳಲ್ಲಿ ಆಟವಾದರೆ ಗುಂಪು ಮಾಡಿಕೊಂಡು ಹೋಗಿಯೇ ತೀರಬೇಕು. ಕೂಡಲ ಸಂಪೂರ್ಣ ರಾಮಾಯಣ ಆಡುವುದಕ್ಕೆ ಪ್ರಸಿದ್ಧ, ಅಲ್ಲಾಪುರ ದ್ರೋಣಪರ್ವವನ್ನಾಡುವುದಕ್ಕೆ, ಕುಂದೂರು ಹನುಮಂತನ ಲಿಂಗಧಾರಣೆ ಆಟಕ್ಕೆ ಪ್ರಸಿದ್ಧಿ ಪಡೆದಿದ್ದವು. ತೆವರಮೆಳ್ಳಳ್ಳಿಯ ಜನ ನಮ್ಮೆಲ್ಲ ಊರುಗಳಿಗಿಂತ ಸ್ವಲ್ಪ ಸುಧಾರಿಸಿದ ಜನ ಅವರು ಆಗಲೆ ಸೂರ್ಯಪ್ರಭೆ ಎಂಬ ನಾಟಕ ಆಡುವಷ್ಟು ಎತ್ತರ ಮಟ್ಟಕ್ಕೆ ಹೋಗಿದ್ದರೂ ದೊಡ್ಡಾಟದ ಗತ್ತು ಅದಕ್ಕೆಲ್ಲಿಂದ ಬರಬೇಕು? ಹೆಸರಿಗೆ ನಾಟಕ ಅಷ್ಟೆ. ಒಬ್ಬರಿಗೂ ಸರಿಯಾಗಿ ಹಾಡಲು ಬರುತ್ತಿರಲಿಲ್ಲ. ಪರದೆ ಸೀನರಿಗಳಿಲ್ಲ. ನಾಟಕದ ಮಾಸ್ತರ ಒಂದು ಪರದೆ ಬರೆದಿದ್ದ. ಹಾಡಲು ಏನೂ ಬರುತ್ತಿರಲಿಲ್ಲ 'ನಾಟಕ ಕಲಿಸುವ ಮಾಸ್ತರನೊಡನೆ ಕಳ್ಳದನಿಯಲ್ಲಿ ಪಾತ್ರಗಳು ಹಾಡಬೇಕಾಗಿತ್ತು. ಅದು ನನಗೆ ಅಷ್ಟೊಂದು ಹಿಡಿಸುತ್ತಿರಲಿಲ್ಲ. ನಾನು ಇಷ್ಟು ಹೊತ್ತಿಗೆ ಪ್ರಸಿದ್ಧ ನಾಟಕಗಳನ್ನು ನೋಡಿದವನಲ್ಲವೆ! ಆದರೂ ನೋಡದೆ ಬಿಡುತ್ತಿರಲಿಲ್ಲ.

### ಕೂಡಲದ ರಾಮಾಯಣ ದೊಡ್ಡಾಟ

ಕೂಡಲದವರು ರಾಮಾಯಣವನ್ನು ಬಹಳ ಅಟ್ಟಹಾಸದಿಂದ ಆಡುತ್ತಿದ್ದರು. ಹಂದರವನ್ನಂತೂ ತುಂಬಾ ಆಕರ್ಷಕವಾಗಿ ಹಾಕುತ್ತಿದ್ದರು. ಅಶೋಕವನದಲ್ಲಿ ಸೀತಾದೇವಿ ಇರುವುದನ್ನು ಅಟ್ಟದಿಂದ ನಾಲ್ವತ್ತು ಐವತ್ತು ಅಡಿ ಅಂತರದಲ್ಲಿ ಬಾಳೆಕಂಬ ಅಡಕೆ ತೆಂಗುಗಳ ಗರಿಗಳಿಂದ ಅಲಂಕರಿಸಿದ್ದು ಎತ್ತರವಾಗಿ ಕಟ್ಟಿದ ಒಂದು ಅಟ್ಟಣೆಯಲ್ಲಿ ಕೂಡಿಸಿ ತೋರಿಸುತ್ತಿದ್ದರು. ಅದಕ್ಕೆ ಪ್ರತ್ಯೇಕವಾಗಿ ಒಂದು ಗ್ಯಾಸಲೈಟ್ ಹಚ್ಚಿರುತ್ತಿದ್ದರು. ಅಲ್ಲಿಗೆ ಹನುಮಂತ ಅಟ್ಟದಿಂದ ಮೇಲೊಂದು ಕೆಳಗೊಂದು ಕಟ್ಟಿದ ಸೆಳ್ಳುಗಳ ಆಧಾರದಿಂದ ಕುಣಿಯುತ್ತ ಲಾಗ ಹೊಡೆಯುತ್ತ ಎರಡಾಳು ಎತ್ತರದಲ್ಲಿ ಸೆಳ್ಳುಗಳ ಮೇಲೆಯೇ ಟರ್ -ಟರ್ ಎಂದು ಧ್ವನಿ ಮಾಡುತ್ತ ಹೋಗಬೇಕು. ಆ ಅಶೋಕ ವನದಲ್ಲಿ ಸೀತಾದೇವಿಯನ್ನು ಕಂಡು ಮಾತಾಡಿಸಿ ಮುದ್ರೆ ಉಂಗುರ ಕೊಟ್ಟು ಬರುತ್ತಿದ್ದ - ಈ ದೃಶ್ಯ ಆ ಕಾಲದಲ್ಲಿ ಬಹಳ ಜನಗಳನ್ನು ಸಂತೋಷಗೊಳಿಸುತ್ತಿತ್ತು. ಹನುಮಂತನ ಪಾತ್ರಕ್ಕೆಂದೇ ಹೇಳಿಮಾಡಿಸಿದ ಒರ್ವವ್ಯಕ್ತಿ ಆ ಊರಿನಲ್ಲಿದ್ದ. ಅವನ ಹೆಸರು ಪರಿಸೆಟ್ಟಿ ಅಡಿವೆಪ್ಪ ಎಂದು ಜ್ಞಾಪಕ. ಅವನು ಮುದುಕನಾಗುವರೆಗೆ ಹನುಮಂತನ ಪಾತ್ರ ಮಾಡಿದ. ಅವನ ಮುಖ ಹನುಮಂತನ ಪಾತ್ರಕ್ಕೆ ಹೇಳಿ ಮಾಡಿಸಿದಂತೆಯೇ ಇತ್ತು. ಬುದ್ಧಿ ಹೇಗಿತ್ತೊ ಗೊತ್ತಿಲ್ಲ. ನಾನು ರಾಮಾಯಣವನ್ನು ಕೂಡಲಲ್ಲಿ ಮೂರು ನಾಲ್ಕು ಸಲ ನೋಡಿದ್ದು ಜ್ಞಾಪಕ. ಒಂದೊಂದು ಸಲ ಕೂಡಲದವರು ಹತ್ತಿಮತ್ತೂರಿನ ಪ್ರಖ್ಯಾತ ಮದ್ದಳೆ ಬಾರಿಸುವ ವ್ಯಕ್ತಿಯೊಬ್ಬನನ್ನು ಕರೆಸುತ್ತಿದ್ದರು. ಅವನು ಏಳುಮದ್ದಲೆಗಳನ್ನು ಒಂದರ ಮೇಲೊಂದರಂತೆ ಕಟ್ಟಿ ಬಾರಿಸುವ ರೀತಿ ಎಲ್ಲರನ್ನು ಆಶ್ಚರ್ಯಗೊಳಿಸುವಂತಹುದು. ಅವನ ಮದ್ದಳೆ ಬಾರಿಸುವ ಗತ್ತುಗಾರಿಕೆ ನೋಡಲೆಂದೇ ತಂಡ ತಂಡವಾಗಿ ಜನ ಬರುತ್ತಿದ್ದುದೂ ಉಂಟು. ದೊಡ್ಡಾಟದಲ್ಲಿ ಏಳು ಮದ್ದಳೆ ಬಾರಿಸುವ ಈ ಕಾರ್ಯಕ್ರಮ ಹಳ್ಳಿಯ ಆಟಗಳಲ್ಲೊಂದು ಮೈಲುಗಲ್ಲು. ಒಮ್ಮೊಮ್ಮೆ ಜೇಕಿನಕಟ್ಟೆ ಶಿವಯ್ಯ

ಎಂಬುವವನ್ನು ಮದ್ದಳೆ ಬಾರಿಸಲು ಕರೆಸುತ್ತಿದ್ದುದುಂಟು. ಇವನು 12 ವರ್ಷ ಪಂಚಾಕ್ಷರಿ ಗವಾಯಿಗಳಲ್ಲಿ ತಬಲಾ ಬಾರಿಸುವುದನ್ನು ಕಲಿತು ಬಂದವನೆಂಬ ಮೇಲಟ್ಟದ ಪ್ರಖ್ಯಾತಿಯಿತ್ತು. ಮತ್ತೊಮ್ಮೊಮ್ಮೆ ಹಾಳುಗಲ್ಲಾಪುರದ ಕರಿಸಿಂಗಪ್ಪನೂ ಮದ್ದಳೆ ಬಾರಿಸಲು ಬರುತ್ತಿದ್ದ. ಇವನ ಚರ್ಮವಾದ್ಯ ವಾದನವಂತೂ ನಮ್ಮ ಭಾಗದಲ್ಲೆಲ್ಲ ಪ್ರಸಿದ್ಧ. ಕೂಡಲದವರು ಕರಿನಿಂಗಪ್ಪನನ್ನು ಸಂಗಮೇಶ್ವರ ರಥೋತ್ಸವದ ದಿನ ಕರಡಿವಾದ್ಯದಲ್ಲಿ ಹಲಗೆ ಬಾರಿಸಲು ಪ್ರತಿವರ್ಷವೂ ಕರೆಸೇ ಕರೆಸುತ್ತಿದ್ದರು. ಕೂಡಲ ಗ್ರಾಮಕ್ಕೆ ಬಹಳ ಹೊಂದಿಕೊಂಡವನೆಂದರೆ ಈ ಕರಿನಿಂಗಪ್ಪನೇ. ಹಲಗೆ ಬಡಿಯುವ ಕಲೆಯೂ ಇವನಲ್ಲಿ ಅದ್ಭುತವಾಗಿತ್ತು. ಚೆನ್ನಾಗಿ ಗಾಂಜಾ ಮಿದ್ದಿ ಸೇದಿ ಹಲಗೆ - ಮದ್ದಲೆ ಮೊದಲಾದ ಚರ್ಮವಾದ್ಯ ಬಾರಿಸಲು ಪ್ರಾರಂಭಿಸಿದರೆ ಜನರೆಲ್ಲ ಮಂತ್ರ ಮುಗ್ಧರಾಗುತ್ತಿದ್ದರು. ಆಗ ಅವನಿಗೆ ಮೈ ಮೇಲೆ ಎಚ್ಚರವೇ ಇರುತ್ತಿದ್ದಿಲ್ಲ. ರಾಮಾಯಣ ಆಟದಲ್ಲಿ ಹಾಳುಗಲ್ಲಾಪುರದ ಕರಿನಿಂಗಪ್ಪ ಮದ್ದಳೆ ಬಾರಿಸಲು ಬರುತ್ತಾನೆಂದರೆ ಜನ ಅಧಿಕ ಸಂಖ್ಯೆಯಲ್ಲಿ ಸೇರುತ್ತಿದ್ದರು. ಕೆಲವರು ಅವನು ಮದ್ದಳೆ ಬಾರಿಸುವುದನ್ನು ನೋಡಲಿಕ್ಕೆಂದೇ ಸುತ್ತಮುತ್ತಣ ಊರಿಂದ ಬರುತ್ತಿದ್ದರು. ಅಂತೂ ರಾಮಾಯಣ ಆಟವನ್ನು ಕೂಡಲದವರು ಬಹಳ ಯಶಸ್ವಿಯಾಗಿ ಆಡಿ ಪ್ರಖ್ಯಾತಿ ಪಡೆದಿದ್ದರು. ಕೂಡಲದಲ್ಲಿ ಬಾಲ್ಯದಲ್ಲಿ ನೋಡಿದ ರಾಮಾಯಣ ದೊಡ್ಡಾಟದ ಪ್ರಭಾವ ನನ್ನ ಮೇಲೆ ತನ್ನ ಅಧಿಕಾರ ಮುದ್ರೆಯೊತ್ತಿದ ಕಾರಣವೇ ಮುಂದೆ ನಾನು ದೊಡ್ಡವನಾಗಿ ಹಿರೇಕಾಂಶಿಯಲ್ಲಿ ಗಾವಠಿಶಾಲೆಯ (ಗ್ರಾಂಟ್ ಇನ್ಏಡ್‌ಸ್ಕೂಲ್) ಮಾಸ್ತರನಾಗಿ ಕೆಲಸ ಮಾಡುವ ಕಾಲದಲ್ಲಿ ಸಂಪೂರ್ಣ ರಾಮಾಯಣ ಯಕ್ಷಗಾನ ಆಟವನ್ನು ಬರೆದು ಮಲೆನಾಡಿನಲ್ಲೆಲ್ಲ ಪ್ರಖ್ಯಾತಿಪಡೆದ ದೊಡ್ಡ ಚರಿತ್ರೆಯೇ ಇದೆ. ಅದನ್ನು ಮುಂದೆ ಹೇಳುತ್ತೇನೆ.

### *ಅಲ್ಲಾಪುರದ ದ್ರೋಣಪರ್ವ ಆಟ*

ಅಲ್ಲಾಪುರ ನಮ್ಮೂರಿಂದ ಪಶ್ಚಿಮಕ್ಕೆ ಮೂರುಮೈಲುಗಳ ಅಳತೆಯಲ್ಲಿ ಇದ್ದ ಒಂದು ಪ್ರಾಚೀನ ಅವಶೇಷಗಳುಳ್ಳ ಊರು. ಉತ್ತಮ ವ್ಯವಸಾಯಗಾರರಿಂದ ತುಂಬಿದ್ದ ಈ ಊರಿನಲ್ಲಿ ದಡೂತಿ ಕುಳಗಳೂ ಬಹಳ. ಇಲ್ಲಿ ಮಹಮ್ಮದೀಯರೂ ಹಿಂದೂಗಳೂ ಸಮಸಮ; ಪರಸ್ಪರ ಪೂರಕವಾಗಿ ಬಾಳುತ್ತಿದ್ದರು. ಇಲ್ಲಿ ಇವರು ಆ ಕಾಲದಲ್ಲಿ ವರ್ಷಕ್ಕೊಂದಾದರೂ ಆಟ ಆಡೇ ಆಡುತ್ತಿದ್ದರು. ಇವರು ಆಡುವ ಆಟಗಳಲ್ಲಿ ದ್ರೋಣಪರ್ವ ಬಹಳ ಪ್ರಖ್ಯಾತವಾಗಿತ್ತು. ಊರ ಮುಂದಿನ ಧರ್ಮಾನದೀ ತೀರದ ದಿಬ್ಬದ ಮೇಲೆ ಬಹುಪ್ರಶಸ್ತವಾದ ಹಂದರ ಹಾಕುತ್ತಿದ್ದರು. ಇವರಿಗೆ ಸಂಗೂರಿನ ದಾಗೀನದವರೇ ಆಗಬೇಕು. ಸಂಗೂರಿನವರು ದೊಡ್ಡಾಟದ ಒಳ್ಳೇ ದಾಗೀನು ಇಟ್ಟಿದ್ದರು. ಬಣ್ಣ ಬಳಿಯುವವರೂ ಕುಶಲರು. ಯಾವಯಾವ ವೇಷಕ್ಕೆ ಏನೇನು ಬಣ್ಣ ಬಳಿಯಬೇಕೆಂಬುದರಲ್ಲಿ ಪಳಗಿದ ಕೈ ಅವರದು. ನರೇಗಲ್ ತೋಟ ಈ ಊರಿಗೆ ಸಮೀಪವಾದ್ದರಿಂದಲೂ, ಈ ಊರಿನವರೇ ಅನೇಕರ ತೋಟದ ಒಡೆಯರೂ ಆಗಿದ್ದರಿಂದ ಹಂದರ ಹಸಿರುವಾಣಿಯಿಂದ ಝಗಝಗಿಸುತ್ತಿತ್ತು ಅಡಕೆ ಹೂವುಗಳ ಸಾಲನ್ನೇ ಹಂದರದ ಮುಂಭಾಗಕ್ಕೆ ಬಿಗಿದು ಅಂದದ ಜೊತೆಗೆ ಸುಗಂಧಮಯವಾಗಿಯೂ ಮಾಡುತ್ತಿದ್ದರು. ಇಲ್ಲಿನ ದೊಡ್ಡಾಟದ ವೈಶಿಷ್ಟ್ಯಗಳಲ್ಲಿ ಮುಖ್ಯವಾದುದು ಕುಣಿತ. ಹೆಣ್ಣುಪಾತ್ರಗಳ ಕುಣಿತ ಬಹಳ ಆಶ್ಚರ್ಯಜನಕವೆನಿಸುತ್ತಿತ್ತು. ಹೆಣ್ಣು ಪಾತ್ರಗಳನ್ನು ಗಂಡುಹುಡುಗರೇ ಮಾಡುತ್ತಿದ್ದರು.

ಹೆಣ್ಣು ಪಾತ್ರಗಳು ಪ್ರವೇಶ ಮಾಡುವ ಪೂರ್ವದಲ್ಲಿ ಒಂದು ಶಾಲಿನ ಪರದೆಯನ್ನು ಇಬ್ಬರು ಹಿಡಿದು ನಿಲ್ಲುತ್ತಿದ್ದಂತೆ ಭಾಗವತಣ್ಣ 'ತಾತಯ್ಯಾ ಆ ಆ ಆ ತಾತಯ್ಯ ತಯ್ಯ' ಎಂದು ಹಾಡುತ್ತಿದ್ದ ಪಾತ್ರಗಳು ಶಾಲಿನ ಪರದೆಯ ಮೇಲೆ ಕೇವಲ ಕೈಗಳ ವಿನ್ಯಾಸದ ಪ್ರದರ್ಶನ ಮಾಡುತ್ತಿದ್ದರು. ಆಮೇಲೆ ಮುಖಭಂಗಿಯ ಪ್ರದರ್ಶನ ಮಾಡುತ್ತಿದ್ದರು. ಹೀಗೆ ಕೈ ಮುಖಗಳ ಪ್ರದರ್ಶನದ ನಂತರ ಶಾಲಿನ ತೆರೆ ಸರಿಯುತ್ತಿತ್ತು. ಸರಿ, ಭವ್ಯವಾದ ನಾನಾ ಭಾವಭಂಗಿಯ ಕುಣಿತ ಪ್ರಾರಂಭಿಸುತ್ತಿದ್ದರು. ಆಗಿನ ಆ ಕುಣಿತ ನೋಡಿದ ನನಗೆ ಈಗ ಪ್ರಸಿದ್ಧ ನರ್ತನಮಾಡುವ ಹೆಂಗಸರ ನರ್ತನಕ್ಕಿಂತ ಇವರ ನರ್ತನ ಯಾವುದರಲ್ಲಿ ಕಡಿಮೆಯಿತ್ತು ಎನ್ನಿಸುತ್ತದೆ. ಆದರೆ ಇವರೆಲ್ಲ 12ರಿಂದ 16 ವರ್ಷದೊಳಗಿನ ಗಂಡುಹುಡುಗರು. ಈ ನರ್ತನ ಮಾಡುವವರಲ್ಲಿ ನನ್ನ ಭಾವ ಯಮುನಪ್ಪಣ್ಣ ಒಬ್ಬನು. ನಮ್ಮೂರಿನಿಂದ ಅಲ್ಲಿ ಹೋಗಿ ಪಾತ್ರ ಮಾಡುತ್ತಿದ್ದ ಈತ. ಅಲ್ಲಾಪುರದ ಆಟದ ವೈಶಿಷ್ಟ್ಯವೆಂದರೆ ಇದೇ ಎನ್ನಬಹುದು. ದೊಡ್ಡಾಟದ ಗ್ರಾಮೀಣ ಜನಗಳ ಈ ಕುಣಿತದ ಪದ್ಧತಿಯ ತಳಹದಿಯ ಮೇಲೆಯೇ ಭಾರತೀಯ ಲಾಸ್ಯ, ನೃತ್ಯದ ಉಗಮವಾಗಿದೆ ಎನ್ನಲು ಯಾವ ಅಡ್ಡಿಯೂ ಇಲ್ಲ. ಗಂಡುಪಾತ್ರಗಳ ಕುಣಿತವೂ ಅಷ್ಟೆ. ಲಾಲಿಯ ಕುಣಿತ. ಆಟ್ಟಗಾಳದ ಕುಣಿತ, ಥೈಯ್ ಥೈಯ್ ಕುಣಿತ - ಒಂದೊಂದು ಬಹಳ ಅಚ್ಚರಿ ಹುಟ್ಟಿಸುವಂತಹ ಕುಣಿತಗಳೇ. ಗ್ರಾಮೀಣ ಪ್ರಾಂತ್ಯದವರು ಈ ಗತ್ತುಗಾರಿಕೆಯನ್ನು ಹಿಂದಿನಿಂದ ಉಳಿಸಿಕೊಂಡು ಬೆಳೆಸಿಕೊಂಡು ಬಂದಿದ್ದರು. ಈಗ ಇಂಥ ಕಲಾವಂತರನ್ನು ಹಳ್ಳಿಯ ಬದುಕಿನಲ್ಲೂ ಕಾಣದಂತಾದುದೊಂದು ಖೇದಕರ ಸಂಗತಿ. ಅಲ್ಲಿ ಇಂದು ಹಿಂದಿನವರ ರಸಿಕತೆ, ಜಾನಪದ ಕಲಾವೈಭವ ಪ್ರದರ್ಶನ ಪ್ರಸಂಗ, ಉತ್ಸಾಹ ಮೊದಲಾದವು ಮಾಯವಾಗಿ ಒಂದು ರೀತಿಯಲ್ಲಿ ಹಳ್ಳಿಗಳು ಬರಡಾಗಿವೆ; ಜಗಳಗಳ ಕೊಂಪೆಗಳಾಗಿವೆ. ಇದಕ್ಕೆ ಇವರ ಆರ್ಥಿಕ ದುಸ್ಥಿತಿಯೇ ಕಾರಣವಾಗಿರಬಹುದು. ಚುನಾವಣೆಯ ವಿರೋಧವೂ ಆಗಿರಬಹುದು. ನಿಸ್ತೇಜಮುಖಮಂಡಲದ ಬೀಕಲು ಬೆಳೆಯ ಜನಾಂಗ ನಿರ್ಮಾಣಗೊಳ್ಳುತ್ತಿದೆಯೆಂದು ಆಗಾಗ ನಮ್ಮ ಹಳ್ಳಿಗಳ ಕಡೆ ಹೋಗಿ ನೋಡಿದ ನನಗೆ ಅನ್ನಿಸುತ್ತದೆ. ಹಳ್ಳಿಗಳಲ್ಲಿ ಸ್ವಾತಂತ್ರ್ಯಾನಂತರ ಪಕ್ಷಪಂಗಡಗಳ, ಜಾತೀಯತೆಯ, ರಾಜಕೀಯ ಕೊಳೆ ಹರಡಿಹೋಗಿದೆ. ವರ್ಗಕಲಹಕ್ಕೆ ಎಲ್ಲರೂ ಕಾಲ್ಕೆರೆಂದು ಹತ್ತಿದ್ದಾರೆ. ಸಕಾಲದಲ್ಲಿ ಹಳ್ಳಿಗರು ಎಚ್ಚರಗೊಳ್ಳದಿದ್ದರೆ ಹಳ್ಳಿಗಳ ಸುಖ ನಿರ್ನಾಮವಾಗುವುದರಲ್ಲಿ ಆಶ್ಚರ್ಯವೇನಿಲ್ಲವೆನ್ನಿಸುತ್ತದೆ.

### *ಸಂದೂರಿನ ಮಾರುತಿ ಲಿಂಗಧಾರಣೆ ದೊಡ್ಡಾಟ*

ಸಂಡೂರು ನಮ್ಮೂರಿನ ವಾಯವ್ಯಕ್ಕೆ ಸುಮಾರು ನಾಲ್ಕು ಮೈಲು ದೂರದ ಊರು. ಅದೊಂದು ಗಂಡುಮೆಟ್ಟಿನ ಊರೆಂದೇ ಪ್ರಖ್ಯಾತಿ. ನಮ್ಮ ಸುತ್ತಮುತ್ತಣ ಹಳ್ಳಿಗಳಲೆಲ್ಲ ಕುಂದೂರೇ ಆರ್ಥಿಕವಾಗಿ ಮುಂದಿದ್ದ ಊರೆಂದು ಹೇಳಬಹುದು. ಇಲ್ಲಿ ದೊಡ್ಡ ದೊಡ್ಡ ವ್ಯವಸಾಯಗಾರರು ಬಹಳ ಜನ ಇದ್ದಾರೆ. ಇದಕ್ಕೆ ಚಾರಿತ್ರಿಕ ಪ್ರಖ್ಯಾತಿಯೂ ಉಂಟು. ಹಿಂದೆ ಇದೊಂದು ಪಾಳೇಪಟ್ಟಿನ ಊರು. ಇಲ್ಲಿನ ಗೌಡರುಗಳು ಹತ್ತುವಂಥ ಕುದುರೆಯನ್ನು ಯಾರೂ ಹತ್ತುತ್ತಿದ್ದಿಲ್ಲ. ಆಗ ಆ ಊರಿನಲ್ಲಿದ್ದ ಟಾಕನಗೌಡ, ಗುಡ್ಡನಗೌಡರೆಂಬುವರು ಜಾತ್ಯಶ್ವವನ್ನೇ ಕಟ್ಟಿದ್ದರು. ಅವರ ಮನೆತನದಲ್ಲಿ ಬೆಲೆಬಾಳುವ ಎರಡು ಮೂರು ಕುದುರೆಗಳು ಯಾವಾಗಲೂ ಇರುತ್ತವೆ. ನಾವು ನಮ್ಮ ಬಾಲ್ಯದಲ್ಲಿ ಕುಂದೂರಿನಿಂದ ಕೂಡಲಜಾತ್ರೆಗೆ ಕುದುರೆಯ ಮೇಲೆ ವೇಗವಾಗಿ ಬರುತ್ತಿದ್ದ

ಟಾನಕಗೌಡನನ್ನು ಆಗಾಗ ಆಶ್ಚರ್ಯಗೊಂಡು ನೋಡಿ ಬಾಯ ಮೇಲೆ ಕೈ ಮಾಡುತ್ತಿದ್ದುದುಂಟು. ಕುದುರೆಯು ಓಡುವುದಕ್ಕೆ ಪ್ರಾರಂಭಿಸಿದರೆ ಧೂಳೊಂದೇ ಕಾಣುತ್ತಿತ್ತು; ಕುದುರೆ ಕಾಣುತ್ತಿರಲಿಲ್ಲ. ಸಣ್ಣಪುಟ್ಟ ಹಳ್ಳತಿಟ್ಟುಗಳನ್ನು ಅನಾಮತ್ತಾಗಿ ಹಾರಿ ಕುದುರೆ ಓಡುತ್ತಿತ್ತು. ಇಂಥ ಕುದುರೆಗಳನ್ನು ಹತ್ತುವವರು ಸಮರ್ಥರೂ ಆಗಿರಬೇಕಾಗಿತ್ತು. ಬಹುದಿವ್ಯವಾದ ಕುದುರೆಗಳು. ಕುಂದೂರು ಅನೇಕ ರೀತಿಯಲ್ಲಿ ಒಂದು ವೈಶಿಷ್ಟ್ಯಪೂರ್ಣ ಊರೇ. ಜೋಳ ಹತ್ತಿ ತೊಗರಿ ಬೆಳೆಯುವುದರಲ್ಲಿ ಈ ಊರಿನ ರೈತರ ಆಢ್ಯತೆ ಸುತ್ತುಮುತ್ತೆಲ್ಲ ಪ್ರಸಿದ್ಧವಾದದ್ದು. ಮುತ್ತಿನಂತಹ ಜೋಳದ ರಾಶಿ ಈ ಊರಿನ ಕಣಗಳಲ್ಲಿ ಸುಗ್ಗಿಯ ಕಾಲದಲ್ಲಿ ಕಣ್ಮನ ತಣಿಸುತ್ತದೆ. ಈ ಊರ ಸುತ್ತಮುತ್ತ ಒಟ್ಟಿರುವ ಸೊಪ್ಪೆ (ಜೋಳದ ಸೊಪ್ಪು), ಹೊಟ್ಟು, ಹತ್ತಿಕಟ್ಟಿಗೆ - ಬಣವೆಗಳನ್ನು ನೋಡಿಯೇ ಈ ಊರ ರೈತರ ಉತ್ಪಾದನಾ ಮಟ್ಟವನ್ನು ಅಳೆಯಬಹುದು. ನಮ್ಮೂರ್ರ ದ್ಯಾಮವ್ವ ದೇವತೆ ಈ ಊರಿನದೇ. ಆದ್ದರಿಂದ ನಮಗೂ ಈ ಊರಿಗೂ ಸಾಂಸ್ಕೃತಿಕ ನಂಟು ಇದ್ದೇ ಇದ್ದುದರಿಂದ ಊರಿನ ಬಗ್ಗೆ ನಮಗೆ ಅಭಿಮಾನವೂ ಬಹಳ. ಆದ್ದರಿಂದ ಇಲ್ಲಿ ಯಾವ ಆಟಗಳಾದರೂ ನೋಡಲಿಕ್ಕೆ ಹೋಗಲೇಬೇಕಲ್ಲವೆ? ನಾನು ಚಿಕ್ಕವನಿರುವಾಗ ದ್ಯಾಮವ್ವನನ್ನು ಕರೆಯಲು ಹೋದುದು ಒಂದು ಸಲ, ಅಲ್ಲಿ ನಡೆದ ಮಾರುತಿ ಲಿಂಗಧಾರಣೆ ದೊಡ್ಡಾಟ ನೋಡಲು ಹೋದುದು ಇನ್ನೊಂದು ಸಲ. ಉಳಿದಂತೆ ನಮ್ಮೂರ್ರಿಂದ ಎತ್ತಿನ ಗಾಡಿಯಲ್ಲಿ ಕುಳಿತು ನಮ್ಮ ಬೀಗರ ಊರುಗಳಾದ ಕಲ್ಯಾಣ, ಖುರುಸಾಪುರಕ್ಕೆ ಹೋಗುವಾಗ ಬೆರಗುಗಣ್ಣುಗಳಿಂದ ಈ ಊರನ್ನು ನೋಡುತ್ತ ಹೋಗಿ ಬಂದುದ್ದುಂಟು ದೊಡ್ಡಾಟ ನೋಡಲು ಏಳೆಂಟು ಹುಡುಗರ ಗುಂಪಿನಲ್ಲಿ ಹೋಗಿಬಂದುದಂತೂ ಎಂದೂ ಮರೆಯದ ಅನುಭವ.

ಇಲ್ಲಿ ಮಾರುತಿಲಿಂಗಧಾರಣ ಆಟವಿದ್ದ ದಿನ ಸುತ್ತಮುತ್ತಣ ಬಂಕಾಪುರ, ಬಾಡ ಹುಟ್ಟೂರು, ಕಲ್ಯಾಣ, ಖುರಸಾಪುರ, ಚನ್ನಾಪುರ, ಮಾನಬೀಡು, ಹರವಿ, ಕೂಡಲ, ತೆವರಮೆಳ್ಳಹಳ್ಳಿ, ಹೊಸಪೇಟೆ, ನಾರಾಯಣಪುರ, ಮುಳ್ಳಳ್ಳಿಗಳ ಜನಜಂಗುಳಿ ಹತ್ತಿಕೊಂಡು ಬಂದ ನೂರಾರು ಚಕ್ಕಡಿಗಳನ್ನು ಊರ ಹೊರಗೆ, ಊರಮಧ್ಯದಲ್ಲಿ ನೋಡಬಹುದಾಗಿತ್ತು. ಅಷ್ಟುಜನ ಸೇರುತ್ತಿತ್ತು ಈ ಆಟ ನೋಡಲು. ಉದ್ದಾನವೀರಭದ್ರನೇ ಮಾರುತಿಗೆ ಲಿಂಗಧಾರಣೆ ಮಾಡುವವನು. ಅವನ ವೇಷಭೂಷಣ,ಗರ್ಜನೆ, ಅಟ್ಟಹಾಸಗಳೂ ಹನುಮಂತನ ಕೈಂಕರ್ಯ ದೈವಭಕ್ತಿ, ಲಿಂಗಪೂಜಾನಿಷ್ಠೆಗಳು ಈ ಆಟದ ತಿರುಳು. ಇಲ್ಲಿನ ಹನುಮಂತ ರಾಮಾಯಣದ ಹನುಮಂತನಲ್ಲ. ರಾಮಾಯಣ ಮುಗಿದ ಮೇಲಿನ ಹನುಮಂತ. ಅವನು ಪೂಜೆಮಾಡುವಾಗ ಬೇಕೆಂದೇ ಈಶ್ವರ ಇವನ ಲಿಂಗವನ್ನು ಮಾಯಮಾಡುವನು. ಆಗ ಹನುಮಂತ ಉದ್ದಾನ ವೀರಭದ್ರನ ಬೆನ್ನು ಬೀಳುವನು. ಉದ್ಧಾನ ವೀರಭದ್ರ ಒಂದುವರೆ ಗಳಿಗೆಯಲ್ಲಿ ಇವನ ಲಿಂಗವನ್ನು ಇದ್ದಲ್ಲಿಂದ ಬರುವಂತೆ ಮಾಡುವನು. ಈ ಸನ್ನಿವೇಶ ಬಹಳ ಪರಿಣಾಮಕಾರಿಯಾಗಿ ಆಟದಲ್ಲಿ ಮೂಡಿ ಬರುತ್ತಿತ್ತು. ಜೋಡು ಪಂಜಿನ ಬೆಳಕಿನಲ್ಲಿ ಪ್ರಥಮತಃ ಅಟ್ಟಕ್ಕೆ ಕುಣಿಯುತ್ತ ಬರುತ್ತಿದ್ದ ವೀರಭದ್ರನ ಪಾತ್ರದ ವೈಶಿಷ್ಟ್ಯ ನನ್ನ ಮನಸ್ಸಿನಾಳದಲ್ಲಿ ಇಳಿದುಹೋಗಿದೆ. ಅಂತು ಕುಂದೂರಿನವರ ಈ ದೊಡ್ಡಾಟ ನಮ್ಮ ನಾಡಿನಲ್ಲೆಲ್ಲ ಪ್ರಸಿದ್ಧ. ಈ ವೀರಭದ್ರಮೂರ್ತಿ ಅಟ್ಟ ಹತ್ತಿದ ಮೇಲೆ ಹತ್ತಾರು ತೆಂಗಿನಕಾಯಿಗಳನ್ನು ಇಳಿದೆಗೆದು ದೂರಕ್ಕೆ ಎಸೆಯುತ್ತಿದ್ದರು. ಕೆಲವರು ಕುಳಿತಲ್ಲಿಂದಲೇ ಕೈಮುಗಿಯುತ್ತಿದ್ದರು. ಅಷ್ಟೊಂದು ತನ್ಮಯತೆ ಜನರಲ್ಲಿ.

## ಹದಗೊಂಡ ನನ್ನ ಭಾವಭೂಮಿ

ಚಿಕ್ಕಂದಿನಲ್ಲಿ ನನ್ನ ಭಾವಭೂಮಿಯಲ್ಲಿ ಹದಗೊಳಿಸಿದ ಅನೇಕ ಪ್ರಸಂಗಗಳು ನಮ್ಮ ಊರಿನ ಪರಿಸರದಲ್ಲಿ ಪದೇ ಪದೇ ಜರುಗುತ್ತಿದ್ದವು. ಅವುಗಳಲ್ಲಿ ಮುಖ್ಯವಾಗಿ ಗುಳ್ಳವ್ವನ ಹಬ್ಬ, ಅಲ್ಲಿಕೇರಿ ಹಬ್ಬ, ಮಣ್ಣೆತ್ತಿನ ಅಮಾವಾಸ್ಯೆ, ಗಜಗೌರಿ ಹಬ್ಬ, ಸೀಗೆಹುಣ್ಣಿಮೆ, ಮಹಾನವಮಿ, ಕೂಡಲತೇರು, ಹೆಡಿಗೆ ಪರ್ವಗಳನ್ನು ಹೆಸರಿಸಬಹುದು. ಈ ಹಬ್ಬಗಳಲ್ಲಿ ಮನೆಯಲ್ಲಿ ಏನಾದರೂ ವಿಶೇಷ ಅಡಿಗೆ ಮಾಡುತ್ತಿದ್ದರು. ಆಗ ವಿಶೇಷ ಅಡಿಗೆಯೆಂದರೆ ನಮಗೆಲ್ಲ ಬಹಳ ಇಷ್ಟವಾಗಿರುತ್ತಿತ್ತು. ಈಗಿನಂತೆ ಹೋಟೆಲು ಮೊದಲಾದವುಗಳ ಸಂಬಂಧ ಹಳ್ಳಿಯ ಬದುಕಿನಲ್ಲಿ ಸುಳಿದಿರಲೇ ಇಲ್ಲ. ಹೀಗಾಗಿ ಏನು ತಿನ್ನಬೇಕಾದರೂ ಉಣ್ಣಬೇಕಾದರೂ ಮನೆಯಲ್ಲಿಯೇ ಆಗಬೇಕು. ಹತ್ತಿಸುಗ್ಗಿ, ಬಟಗಡಲೆಸುಗ್ಗಿಗಳಲ್ಲಿ ಊರಿನ ಅಂಗಡಿಗಳಲ್ಲಿ ವಿಶೇಷ ತಿಂಡಿಮಾಡಿ ಮಸೀದಿ ಬೈಲಿನಲ್ಲಿ ಬಹಿರಂಗವಾಗಿ ಪ್ರದರ್ಶನ ಮಾಡುತ್ತಿದ್ದರು. ಆಗ ಹತ್ತಿಯನ್ನು ಒಯ್ದು ಬಟಗಡಲೆಗಳನ್ನು ತುಂಬಿಕೊಂಡು ಹೋಗಿ ಹಾಕಿ, ಸಿಹಿತಿಂಡಿ, ಕಾರಮಂಡಕ್ಕಿ, ಕರಿದ ಅವಲಕ್ಕಿ ತಿನ್ನಬೇಕು. ಮುಂದೆ ಇದರ ಬಗ್ಗೆ ಹೇಳುತ್ತೇನೆ. ಗೊಂದಲಿಗರ ಕಥೆ, ಜೋಗೇರ ಕಥೆ, ಕಿಳ್ಳಕೇತರ ಆಟ ವೇಷಗಾರರ ಆಟಗಳು ಆಗಾಗ ನಮ್ಮೂರಿನಲ್ಲಿ ನಮಗೆ ಬಹಳ ಖುಷಿಕೊಡುವ ಆಟಗಳಾಗಿದ್ದವು. ಇವೆಲ್ಲ ನಮ್ಮ ಹಳ್ಳಿಬದುಕಿನ ಮಧ್ಯದಲ್ಲಿ ಆನಂದದಾಯಕವಾದ ಸನ್ನಿವೇಶಗಳಾಗಿದ್ದವು.

## ಗುಳ್ಳವ್ವನ ಹಬ್ಬ

ಗುಳ್ಳವ್ವನ ಹಬ್ಬ ಗುಳಕವ್ವನ ಹಬ್ಬದಲ್ಲಿ ದೊಡ್ಡವರಾರೂ ತಲೆಹಾಕುತ್ತಿರಲಿಲ್ಲ. ಇದೇನಿದ್ದರೂ ಚಿಕ್ಕ ಚಿಕ್ಕ ಹೆಣ್ಣು ಹುಡಿಗೆಯರದು. ಒಂದೊಂದು ವಟಾರದಲ್ಲಿ ಒಂದು ಗುಳಕಪ್ಪನನ್ನು ಇಟ್ಟು ಪೂಜಿಸುವುದು, ಹಾಡುವುದು, ನಲಿಯುವುದು. ಶಾವಿಗೆ, ಗುಳಿಗೇ ಪಾಯಸಗಳೇ ಮೊದಲು ವಿವಿಧ ಭಕ್ಷ್ಯ ಭೋಜ್ಯಗಳನ್ನು ಮಾಡಿಸಿಕೊಂಡು ಬಂದು ಎಲ್ಲ ಹುಡುಗರೂ ಒಟ್ಟಾಗಿ ಸೇರಿ ಊಟ ಮಾಡುವುದು ಈ ಪಬ್ಬದ ಮುಖ್ಯ ವೈಶಿಷ್ಟ್ಯ.

ನಮ್ಮ ಕಟ್ಟೆಯ ಮೇಲೆ ಏಳೆಂಟು ಮನೆಯ ಹುಡಿಗಿಯರು ಸೇರಿ ಗುಳ್ಳವ್ವನನ್ನು ಇಡುತ್ತಿದ್ದರು. ಗುಳ್ಳವ್ವ ಬರುವುದು ಆಷಾಢಮಾಸದ ಮೊದಲ ಸೋಮವಾರದಿಂದ. ಮೊದಲ ಸೋಮವಾರ ಒಳ್ಳೆಯ ಜಿಗುಟುಮಣ್ಣನ್ನು ಹೊಲವಾರಿಯ ಹುತ್ತದಿಂದ ತರುವವನು ನಾನೇ. ಹುತ್ತದ ಮಣ್ಣು ಇಂಥ ಮಣ್ಣುಗೆಲಸದಲ್ಲೆಲ್ಲ ಬೇಕಾದ ಸಾಧನ ವಸ್ತು. ಈ ಮಣ್ಣಿನಲ್ಲಿ ಕಲ್ಲುಸುಣ್ಣಬುರ್ಲಿಹಳ್ಳುಗಳು ಇರುತ್ತಿರಲಿಲ್ಲವಾಗಿ ಈ ಮಣ್ಣೇ ಇಂಥ ಕೆಲಸಕ್ಕೆ ಹಳ್ಳಿಗಳಲ್ಲಿ ಪ್ರಾಶಸ್ತ್ಯ ಪಡೆದಿತ್ತು. ಮಣ್ಣೆತ್ತಿನ ಅಮವಾಸ್ಯೆಯಂದು ಮಣ್ಣಿನ ಎತ್ತು ಮಾಡಿ ಪೂಜಿಸಲು ಈ ಹುತ್ತದ ಮಣ್ಣೇಬೇಕು. ನಾನು ಹುತ್ತದ ಮಣ್ಣನ್ನು ತಂದು ಕೊಟ್ಟ ಮೇಲೆ ಸಾಯಂಕಾಲ ನಾಲ್ಕು ಘಂಟೆ ಸುಮಾರಿನಿಂದ ಗುಳ್ಳವ್ವನನ್ನು ಮಾಡಲು ಪ್ರಾರಂಭ. ಎಲ್ಲರೂ ತಮ್ಮ ತಮ್ಮ ಮನೆಯಲ್ಲಿ ಹಿಂದಿನಿಂದ ಸಂಗ್ರಹಿಸಿಟ್ಟ ಗುಲಗಂಜಿ, ಬಳೆಚೂರು, ಚಿಕ್ಕ ಚಿಕ್ಕ ಕನ್ನಡಿ ಚೂರು ಮೊದಲಾದವನ್ನು ತಂದು ಕೊಡಬೇಕು. ನಮ್ಮ ಮನೆಯ ಮುಂದೆ ಇಡುವ ಗುಳ್ಳವ್ವನನ್ನು ಮಾಡುವ ಶಿಲ್ಪಿಯೆಂದರೆ ಚುಳಜವ್ವ ಎಂಬ ನಮ್ಮೆಲ್ಲರಿಗಿಂತ ಸ್ವಲ್ಪ ಹಿರಿಯಳಾಗಿದ್ದವಳು. ಗುಳ್ಳವ್ವ ಎಂದರೆ ಮತ್ತೇನೂ ಅಲ್ಲ, ಮೊದಲ ಸೋಮವಾರ ನಾಲ್ಕು ಕಂಬಗಳ ಒಂದು ಕೆಸರು ಮಣ್ಣಿನ ಮನೆ. ಅದಕ್ಕೆ ಒಂದು ಅಲಂಕೃತ ಬಾಗಿಲು, ಎಲ್ಲ ಕೆಸರಿನಿಂದ ಮಾಡಿದ್ದೇ. ನಾಲ್ಕು ಕಂಬಗಳು ಎತ್ತರವಾಗಿ ಸುಮಾರು ಒಂದೂವರೆ

ಅಡಿಯಷ್ಟು ಇರುತ್ತಿದ್ದವು. ಆ ಕಂಬಗಳಿಗೆಲ್ಲ ಗುಲಗಂಜಿ, ಬಳೆಚೂರು, ಕನ್ನಡಿಗಳ ಅಲಂಕಾರವಾಗುತ್ತಿತ್ತು. ಬಾಗಿಲುವಾಡ ಬಹಳ ಅಂದವಾಗಿರುತ್ತಿತ್ತು. ಮಣ್ಣಿನಲ್ಲಿ ಇದನ್ನೆಲ್ಲ ನೀಟಾಗಿ ಮಾಡಿ ಜಾಲಿಹೂವು, ಮದ್ದಾನಮಲ್ಲಿಗೆ (ಮಧ್ಯಾಹ್ನದಲ್ಲಿ ಅರಳುವ ಮಧ್ಯಾಹ್ನ ಮಲ್ಲಿಗೆ) ಲಭ್ಯವಿರುವ ಇನ್ನಿತರ ಹೂವುಗಳಿಂದ ಈ ಕೆಸರು ಮನೆ ಮುಚ್ಚಿ ಹೋಗುತ್ತಿತ್ತು. ಒಂದು ಹೊಸ ಪಣತಿಯಲ್ಲಿ ದೀಪ ಹಚ್ಚಿ ಇಟ್ಟರೆ ಆಯಿತು ಗುಳ್ಳವ್ವ.

ಆ ದಿನ ಎಲ್ಲರೂ ಅಲ್ಲಿ ಸೇರಿ ಊಟ ಮಾಡಲು ಮನೆಯಲ್ಲಿ ವಿವಿಧ ಭಕ್ಷ್ಯ ಭೋಜ್ಯಗಳನ್ನು ಮಾಡಿಸಿತಂದು ಗುಳ್ಳವ್ವನಿಗೆ ಎಡೆಮಾಡಿ ಅಲ್ಲಿಯೇ ಸುತ್ತಮುತ್ತ ಕುಳಿತು ಊಟ ಮಾಡಬೇಕು. ಊಟ ಮಾಡಿದ ಮೇಲೆ ಹಾಡುವುದು. ಇದೆಲ್ಲ ಕೇವಲ ಮಕ್ಕಳಿಗೇ ಮೀಸಲಾಗಿದ್ದ ಹಬ್ಬ. ದೊಡ್ಡವರು ಕೇವಲ ಕುಳಿತು ನೋಡುವರು ಮಾತ್ರ. ಒಂದೆರಡು ಗಂಟೆಗಳ ಕಾಲ ತಮತಮಗೆ ಬಂದ ಹಾಡುಗಳನ್ನು ಎಲ್ಲ ಮಕ್ಕಳೂ ಓಮ್ಮೇಳ ಮುಮ್ಮೇಳಗಳಲ್ಲಿ ಉತ್ಸಾಹದಿಂದ ಹಾಡುತ್ತಿದ್ದರು. ಹಾಡು ವೈವಿಧ್ಯಮಯವಾಗಿರುತ್ತಿದ್ದವು. ಗುಳ್ಳವ್ವ ಮರುದಿನ ಹೊಳೆ ಸೇರಿ ಬಿಡುತ್ತಿದ್ದಳು. ಮತ್ತೆ ಮುಂದೆ ಬರುವ 2ನೆಯ ಸೋಮವಾರ ಇದೇ ರೀತಿಯಲ್ಲಿ ಒಂದು ಅಂತಸ್ತಿನ ಗುಳ್ಳವ್ವನನ್ನು ಇಡಬೇಕು. ಆಗಲೂ ಯಥಾ ಪ್ರಕಾರ ಅಲಂಕಾರ, ಪೂಜೆ, ಊಟ, ಹಾಡು ಆಗಬೇಕು. ಹೀಗೆ ಒಟ್ಟು ಎಷ್ಟು ಸೋಮವಾರಗಳು ಆ ವರ್ಷದ ಆಷಾಢ ಮಾಸದಲ್ಲಿ ಬರುವುವೋ ಅಷ್ಟು ಅಂತಸ್ತುಗಳ ಗುಳ್ಳವ್ವನನ್ನು ಇಟ್ಟು ಒಂದು ತಿಂಗಳು ಮೋಜಿನಿಂದ ಕಾಲ ಕಳೆಯುವುದು ಗುಳ್ಳವ್ವನ ಹಬ್ಬಗಳ ಐಸಿರಿ. ಬಹುಶಃ ಚಿಕ್ಕಚಿಕ್ಕ ಹುಡಿಗಿಯರು ದೊಡ್ಡವರಿಂದ ಕೇಳಿ ಕಲಿತ ಹಾಡುಗಳನ್ನು ತಮ್ಮವನ್ನಾಗಿ ಮಾಡಿಕೊಳ್ಳಲು ಈ ಪ್ರಸಂಗಗಳು ಸಹಕಾರಿಯಾಗಿದ್ದವೆನ್ನಬಹುದು.

### *ಹಾದಿ ಬಸಪ್ಪ*

ಗಣೇಶನ ಹಬ್ಬವನ್ನು ನಮ್ಮ ಮನೆಯಲ್ಲಿ ಮಾಡುತ್ತಿರಲಿಲ್ಲವಾಗಿ ಆ ಬಗ್ಗೆ ನನಗೆ ಆಸಕ್ತಿ ಇರಲಿಲ್ಲ. ಗಣೇಶ ಚತುರ್ಥಿಯ ಮೊದಲು ಒಮ್ಮೊಮ್ಮೆ ಮಳೆ ಹೋಗುತ್ತಿತ್ತು. ಅದನ್ನು ನಮ್ಮ ಊರವರು ಗಣೇಶ ಚೌತಿ ಬಿರುಗು ಎಂದು ಹೇಳುತ್ತಿದ್ದರು. ಆಗ ಒಂದು ಒಳ್ಳೆ ಉತ್ಸವ ನಡೆಯುತ್ತಿತ್ತು. ಅದೇ ಹಾದಿ ಬಸಪ್ಪನಿಗೆ ಹೆಡಿಗೆ ಪರ್ವ ಹಬ್ಬ. ಅದರಲ್ಲಿ ನಾನು ಬಹು ಉತ್ಸಾಹದಿಂದ ಭಾಗವಹಿಸುತ್ತಿದ್ದೆ. ಊರಿನಲ್ಲಿ ಹಿರಿಯರು ಹಾದಿಬಸಪ್ಪನಿಗೆ ಇಂಥ ದಿನ ಹೆಡಿಗೆ ಪರ್ವ ಮಾಡಿಕೊಂಡು ಹೋಗಿ ಪೂಜಿಸಿಬರಬೇಕು ಎಂದು ಡಂಗುರ ಹೊಡಿಸುತ್ತಿದ್ದರು. ಅದರಂತೆ ಪರ್ವ ನಡೀತಿತ್ತು.

### *ಸೀಗಿ ಹುಣ್ಣಿಮೆ*

ಸೀಗಿ ಹುಣ್ಣಿಮೆ ಅಂದರೆ ಆಶ್ವೀಜ ಶುದ್ಧದಲ್ಲಿ ಬರುವ ಹುಣ್ಣಿಮೆ. ಆ ದಿನ ಗುಳ್ಳವ್ವನನ್ನು ಇಟ್ಟ ಹಾಗೆ ಒಂದೊಂದು ವರ್ಷದಲ್ಲಿ ಒಂದೊಂದು ಸೀಗವ್ವನನ್ನು ಇಟ್ಟು ಪೂಜೆ ಮಾಡುವುದೇ ಸೀಗಿ ಹುಣ್ಣಿಮೆಯ ಆಚರಣೆ. ಆ ರಾತ್ರಿಯೆಲ್ಲ ಸೋಬಾನೆ ಇತ್ಯಾದಿ ಹಾಡುವ ಕಾರ್ಯ ನಡೆಯಬೇಕು. ಸೀಗವ್ವನನ್ನು ನಾವು ಮಾಡುತ್ತಿರಲಿಲ್ಲ. ಇದೇನಿದ್ದರೂ ಜೋಳ ಕೊಟ್ಟು ಕುಂಬಾರ ಮನೆಯಿಂದಲೇ ಮಣ್ಣಿನಿಂದ ಮಾಡಿದ ಒಂದು ತರಹದ ವಿಗ್ರಹವನ್ನು ತರಬೇಕು. ನಮ್ಮೂರ ಕುಂಬಾರ ಸಿದ್ಧಮ್ಮ ಎಂಬ ವೃದ್ಧಮಹಿಳೆ ನಮ್ಮೂರಿಗೆ ಎಷ್ಟು ಬೇಕಾಗಬಹುದೆಂಬ ಒಂದು ಅಂದಾಜಿನಲ್ಲಿ ಮಾಡಿ

ಇಟ್ಟಿರುತ್ತಿದ್ದಳು. ಕುಂಬಾರ ಸಿದ್ಧಮ್ಮ ದೊಡ್ಡದು ಚಿಕ್ಕದು ಮಾಡಿ ಇಡುತ್ತಿದ್ದಳು. ದೊಡ್ಡದಕ್ಕೆ ಒಂದು ಸೇರು ಜೋಳ, ಸಣ್ಣದಕ್ಕೆ ಒಂದು ಕೊಳಿವೆ ಜೋಳ (ಕೊಳಿವೆ = ಅರ್ಧ ಸೇರು). ಇನ್ನು ಚಿಕ್ಕದ್ದಕ್ಕೆ ಒಂದು ಚಟಾಕು ಜೋಳ (ಚಟಾಕು = ಕಾಲುಸೇರು) ಅಷ್ಟೆ. ಅಲ್ಲಿಂದ ತಂದ ಮೇಲೆ ಕಟ್ಟೆಯನ್ನು ಸುಣ್ಣ ಬಣ್ಣಗಳಿಂದ ಅಲಂಕರಿಸಿ ಒಂದು ತೂಗುಮಣೆಯ ಮೇಲೆ ಸೀಗವ್ವನನ್ನು ಕುಳ್ಳಿರಿಸಿ ಹೂವುಗಳಿಂದ ಅಲಂಕರಿಸಿ ದೀಪ ಮುಡಿಸಿ ತೂಗುಮಣೆಯ ಮೇಲೆ ಇಟ್ಟರೆ ಆಯಿತು ಅದರ ಪ್ರತಿಷ್ಠಾಪನಾ ಮಹೋತ್ಸವ. ಆ ದೇವರ ಮುಂಭಾಗದಲ್ಲಿ ಬಿದಿರಿನಲ್ಲಿ ಮಾಡಿದ ಒಂದು ಚಟ್ಟಿಗೆ ಕೋಡಬಳೆ, ಕರಜೀಕಾಯಿ, ಕರಿಗಡಬು, ವಡೆ ಮೊದಲಾದವನ್ನು ಕಟ್ಟುವ ಪದ್ಧತಿ. ಅವು ನೇತಾಡುತ್ತಿರಬೇಕು. ಮರುದಿನವೋ ಅಥವಾ ಅದರ ಮರುದಿನವೋ ಯಾರಾದರೂ ಅವನ್ನು ಬೇಕಾದರೆ ಕಿತ್ತುಕೊಂಡು ತಿನ್ನಬಹುದು. ಪೂಜೆಯ ದಿನ ಚಟ್ಟು ತುಂಬಾ ಈ ತಿಂಡಿಪದಾರ್ಥಗಳು ನೇತಾಡುತ್ತಿರಬೇಕು. ಇದೆಲ್ಲ ಹುಣ್ಣಿಮೆಯ ರಾತ್ರಿ ಆಚರಿಸುವ ವಿಧಾನ. ಆದರೆ ಸೀಗಿ ಹುಣ್ಣಿಮೆಯ ದಿನ ಬೆಳಗಿನಿಂದಲೇ ಎಲ್ಲರ ಮನೆಯಲ್ಲಿ ವಿಶೇಷ ಸಡಗರ. ಆ ದಿನ ಬೆಳಿಗ್ಗೆ ಹೋಗಿ ಭೂಮಿತಾಯಿಗೆ ಅನ್ನ ತನಿಮೊಸರು ತಕ್ಕೊಂಡು ಹೋಗಿ ಚರಗ ಚಲ್ಲಿಬರಬೇಕು. ಮಧ್ಯಾಹ್ನ ಹೊಲಕ್ಕೆ ಹೋಗಿ ಹೊಲದಲ್ಲಿ ಭೂಮಿತಾಯಿಯನ್ನು ಪೂಜೆ ಮಾಡಿ, ಐವರು ಪಾಂಡವರನ್ನು ಐದು ಕಲ್ಲುಗಳಲ್ಲಿ ಸಂಕಲ್ಪಿಸಿ ಪೂಜಿಸಬೇಕು. ಐವರು ಪಾಂಡವರ ಹಿಂದೆ ಒಬ್ಬ ಕಳ್ಳನನ್ನು ಪೂಜಿಸಿ ಈ ಕಳ್ಳ ಯಾರು ಎಂದು ಕೇಳಬೇಡಿ. ಅದೇಕೋ ಹಳ್ಳಿಯವರ ದೃಷ್ಟಿಯಲ್ಲಿ ಕರ್ಣ ಕಳ್ಳನಾಗಿ ಬಿಟ್ಟಿದ್ದಾನೆ! ಈ ಕರ್ಣನನ್ನು ಐವರು ಪಾಂಡವರ ಹಿಂದೆ ಇಟ್ಟು ಪೂಜಿಸಿ ಒಂದು ಎಡೆಯನ್ನು ಅವರ ಕೆಳಗಡೆ ಮಣ್ಣಿನಲ್ಲಿ ತಗ್ಗು ತೆಗೆದು ಹಾಕಿಮುಚ್ಚಿ ಬಿಡಬೇಕು. ಇನ್ನೊಂದು ಎಡೆಯನ್ನು ಹೊಲದಲ್ಲಿ ಹೊಲಿಗ್ಯಾ ಹೊಲಿಗ್ಯಾ ಎಂದು ಅನ್ನುತ್ತ ಚರಗ ಚಲ್ಲಿಬಿಡಬೇಕು. ಅಂದಿನ ಮುಖ್ಯ ಊಟದ ಸಾಮಗ್ರಿಗಳೆಂದರೆ ಉಂಡಿಗಡಬು, ಪುಂಡಿ ಸೊಪ್ಪಿನ ಪಲ್ಯ, ಕರಚಿಕಾಯಿ, ಕೋಡಬಳೆ, ಒಡೆ, ಹೂರಣಗಡಬುಗಳು. ಇವೆಲ್ಲ ಭೂಮಿತಾಯಿಯ ಬಯಕೆಗಳಂತೆ. ಅವಳ ಬಯಕೆಯನ್ನು ಪೂರೈಸಲು ಹೊಲದಲ್ಲಿಯೇ ಹೋಗಿ ಪೂಜಿಸಿ ಎಲ್ಲರೂ ಆನಂದದಿಂದ ಜೋಳದ ನಿಲುವಿನ ಮಧ್ಯದಲ್ಲಿಯೋ ಭತ್ತದ ಗದ್ದೆಗಳಲ್ಲೋ ಊಟಮಾಡಿಬರಬೇಕು. ರಾತ್ರಿ ಮನೆಯ ಕಟ್ಟೆಯ ಮೇಲಿಟ್ಟ ಸೀಗವ್ವನನ್ನು ಪೂಜಿಸಿ ಊಟ ಮಾಡಿ, ಹಾಡಿ, ನಕ್ಕು ನಲಿದರೆ ಸೀಗೆಹುಣ್ಣಿಮೆ ಆಯಿತು. ರಾತ್ರಿ ಬಹಳ ಹೊತ್ತಿನವರೆಗೆ ಸೀಗವ್ವನ ಮುಂದೆ ಸಂಪ್ರದಾಯದ ಹಾಡುಗಳು, ಸೋಬಾನೆಗಳು, ಇನ್ನಿತರ ಹಾಡುಗಳು ಸುರಿದುಹೋಗಬೇಕು. ರಾತ್ರಿಯ ಹಾಡುಗಳಲ್ಲಿ ನನ್ನನ್ನು ಬಹಳ ಆಕರ್ಷಿಸಿದ ಹಾಡೆಂದರೆ -

"ತುತ್ತು ಮಾಡಿ ಉಣಿಸಿದ್ರೆ ಬಿಕ್ಕಿ ಬಿಕ್ಕಿ ಅಳುತಾನ್ರಿ ಜೋ ಜೋ

- ಎಂಬ ಬಸವಣ್ಣನ ಮೇಲಿನ ಪದ. ಬಸವಣ್ಣ ಸೀಗೆಹುಣ್ಣಿಮೆಯ ದಿನ ಜೋಳದ ಹೊರೆಯ ಮಧ್ಯದಿಂದ ಮೂಡಿಬಂದನೆಂಬ ಏನೇನೋ ಕಲ್ಪನೆಗಳ ಕಥೆಯೇ ಬಸವಣ್ಣನ ವಿಷಯಕವಾದ ಮೇಲಿನ ಹಾಡಿನ ಪಲ್ಲವಿಯೊಡನೆ ದೀರ್ಘವೂ ಸುಂದರವೂ ಆದ ಹಾಡನ್ನು ಹಾಡುತ್ತಿದ್ದರು. ಆ ಹಾಡಿನಲ್ಲಿ ನನಗೆ ಇಂದು ಉಳಿದಿರುವ ಆಸ್ತಿ ಒಂದು ಸಾಲು ಮಾತ್ರ. ಈ ಹಾಡನ್ನು ಬಹು ಸುಂದರವಾಗಿ ಒಳ್ಳೆಯ ರಾಗದಿಂದ ಹಾಡುತ್ತಿದ್ದುದು ಇಂದೂ ನನ್ನ ಭಾವನೆಯಲ್ಲಿ ಕರಗಿದೆ.

## ಮಹಾನವಮಿ

ಹಳ್ಳಿಗಳಲ್ಲಿ ಮಹಾನವಮಿ ನಮ್ಮ ಚಿಕ್ಕಂದಿನಲ್ಲಿ ಬಹು ಭಾವನಾ ಪ್ರಧಾನವಾಗಿ ನಡೆದುಹೋಗುತ್ತಿತ್ತು. ಆ ಹಬ್ಬ ಯಾವಾಗ ಬರುತ್ತೋ ಎಂದು ನಾವು ಚಡಪಡಿಸುತ್ತಿದ್ದೆವು. ಅದೊಂದು ಸರ್ವರೂ ಭಾವೈಕ್ಯದಿಂದ ಬಾಳಲು ಬಹು ಸಹಕಾರಿಯಾದ ಹಬ್ಬವಾಗಿ ಹಳ್ಳಿಗಳಲ್ಲಿ ಆಚರಿಸುತ್ತಿದ್ದುದನ್ನು ಇಂದೂ ನಾನು ಜ್ಞಾಪಿಸಿಕೊಳ್ಳುತ್ತಿದ್ದೇನೆ. ಭಾದ್ರಪದ ಬಹುಳ ಅಮಾವಾಸ್ಯೆಯ ದಿನ ನಮ್ಮ ಮನೆಯಲ್ಲಿ ಬಹು ಸಡಗರ. ಮನೆಗೆ ಸುಣ್ಣ ಹೊಡೆದು ನೆಲ ಸಾರಿಸಿ ಅಂದು ರಾತ್ರಿ ನಮ್ಮ ದೇವರ ಜಗಲಿಯ ಮೇಲೆ ಘಟ ಸ್ಥಾಪಿಸುತ್ತಿದ್ದರು. ಅಂದಿನಿಂದ 10 ದಿನಗಳು ನಮ್ಮ ತಾಯಿಯೇ ಒಂದು ಹೊತ್ತು ಊಟದ ವ್ರತಕೈಕೊಳ್ಳಬೇಕು. ಅಮಾವಾಸ್ಯೆಯ ದಿನವೇ ಒಂದೊತ್ತು (ಒಂದು ಹೊತ್ತು ಮಾತ್ರ ಊಟ ಮಾಡಿ ಹಗಲೆಲ್ಲ ನೀರನ್ನು ಕುಡಿಯದಂತೆ ಇರುವ ವ್ರತ) ಪ್ರಾರಂಭ. ಘಟಸ್ಥಾಪನೆಯೆಂದರೆ ಬಾಳೆಯೆಲೆಯ ಮೇಲೆ ನವಧಾನ್ಯ ಬೆರೆಸಿದ ಹುತ್ತದ ಮಣ್ಣಿನ ಚಿಕ್ಕರಾಶಿಯ ಮೇಲೆ ಹೊಸಮಡಿಕೆಯನ್ನು ಇಡುವುದು, ಅದರ ಮೇಲೆ ಒಂದು ತೆಂಗಿನ ಕಾಯನ್ನು ಜುಟ್ಟು ಮೇಲೆ ಮಾಡಿ ಇಟ್ಟು ದೇವರ ಮುಂದೆ ನಂದಾ ದೀವಿಗೆ (ನಂದದೆ 10 ದಿನಗಳ ಸತತವಾಗಿ ಉರಿಯುವ ದೀಪ) ಮುಡಿಸಿ, ಉಪವಾಸವಿದ್ದ ನಮ್ಮ ತಾಯಿ ಪೂಜಿಸಿ ಊಟಮಾಡುತ್ತಿದ್ದಳು. ಅಲ್ಲಿಂದ ವಿಜಯ ದಶಮಿಯವರೆಗೆ ಎರಡೂ ಹೊತ್ತು ಪೂಜೆ. ರಾತ್ರಿ ಪೂಜೆ ಮಾಡಿ ಊಟ ಮುಗಿಸುವುದು - ಇದು ಹತ್ತು ದಿನ ಘಟಪೂಜೆಯ ವಿಷಯ. ಇಷ್ಟು ಹೊತ್ತಿಗಾಗಲೆ ನವಧಾನ್ಯದ ಸಸಿಗಳು ಘಟಮುಚ್ಚುವಷ್ಟರ ಮಟ್ಟಿಗೆ ಬೆಳೆದು ಬಿಟ್ಟಿರುತ್ತವೆ.

ವಿಜಯದಶಮಿಯ ದಿನ ಬೆಳಿಗ್ಗೆ ಪೂಜೆ ಮಾಡಿ ಘಟವನ್ನು ಎತ್ತಿ ಬಿಡುತ್ತಿದ್ದರು. ನವಧಾನ್ಯದ ಸಸಿಗಳನ್ನು ಎಲ್ಲ ದೇವರಿಗೂ ಏರಿಸುತ್ತಾರೆ; ಸ್ತ್ರೀಯರು ಮುಡಿದುಕೊಳ್ಳುತ್ತಾರೆ. ಈ ಸಸಿಗಳು ಬೆಳೆದ ರೀತಿಯನ್ನು ನೋಡಿ ಮುಂದಿನ ವರ್ಷ ನಮ್ಮ ಬೆಳೆಯ ನಿರ್ಣಯಮಾಡುವುದು ಇವರ ಒಂದು ಕುತೂಹಲಕಾರಕ ವಿಷಯ. ಸಸಿ ಚೆನ್ನಾಗಿ ಬೆಳೆದು ಘಟ ಮುಚ್ಚಿ ಬಿಟ್ಟರೆ ಬೆಳೆ ಚೆನ್ನಾಗಿ ಬರುತ್ತದೆಂದು ಭಾವನೆ ಮಾಡಿಕೊಂಡು ಆಶಾವಾದಿಗಳಾಗುವುದು ಇದರ ಮುಖ್ಯ ಉದ್ದೇಶವಿರಬೇಕು. ಮಹಾನವಮಿಯ ದಿನ ನಾವೆಲ್ಲ ಉತ್ಸಾಹಗೊಳ್ಳುತ್ತಿದ್ದೆವು. ಬೆಳಿಗ್ಗೆ ಎದ್ದು ಹೊಳೆಯಲ್ಲಿ ಸ್ನಾನ ಮುಗಿಸಿಕೊಂಡು ಬರುವುದರೊಳಗೆ ನಮ್ಮ ತಾಯಿ ಬಿಸಿ ಮೀಸಲು ಅನ್ನಮಾಡಿ ಮೊಸರು ಕಲಸಿ ಚರಗವನ್ನು ಸಿದ್ಧಪಡಿಸುತ್ತಿದ್ದರು. ನಾನು ಚರಗರ ಅನ್ನವನ್ನು ತೆಗೆದುಕೊಂಡು ನಾಲ್ಕೈದು ಜನ ಮಿತ್ರರೊಡನೆ ನಗುತ್ತ ಉತ್ಸಾಹದಿಂದ ಕೂಡಿ ಎಲ್ಲ ಹೊಲಗಳಿಗೂ ಚರ ಚಲ್ಲಲು ಹೋಗುತ್ತಿದ್ದೆ. ಮಿತ್ರರ ಹೊಲ, ನಮ್ಮ ಹೊಲಗಳನ್ನು ಸುತ್ತುವುದರೊಳಗೆ ಮಧ್ಯಾಹ್ನ 12 ಘಂಟೆಯಾಗುತ್ತಿತ್ತು. ಎಕ್ಕೆ ಹೂ, ಚಂಡು ಹೂ, ಲಿಂಗದ ಹೂ, ಬನ್ನಿ, ಬಿಲ್ವ ಬೇವುಗಳ ಎಲೆದಳ ಮೊದಲಾದವನ್ನು ತಂಗಡಿ ಹೂವಿನ ಗೊಂಚಲುಗಳನ್ನು ಗಂಟು ಕಟ್ಟಿಕೊಂಡು ಮನೆಯ ಚಿಕ್ಕ ಚಿಕ್ಕ ಕರುಗಳಿಗೆ ಎಳೆಯ ಹುಲ್ಲಿನ ಚಿಕ್ಕ ಒಂದು ಹೊರೆಯನ್ನು ಹೊತ್ತುಕೊಂಡು ಮನೆಗೆ ಬರುತ್ತಿದ್ದೆವು.

ವಿಜಯದಶಮಿಯ ಸಮಯದಲ್ಲಿ ನಮ್ಮ ಹೊಲವಾರಿಯ ಐಸಿರಿಯನ್ನು ಶಬ್ದಗಳಿಂದ ವರ್ಣಿಸಲು ಸಾಧ್ಯವೇ ಇಲ್ಲ. ತನೆಯುಗುಳಿ ಕಬ್ಬಿನಂತೆ ಬೆಳೆದು ನಿಂತ ಜೋಳದ ಸೊಬಗನ್ನು ವರ್ಣಿಸಲು ಆದಿಶೇಷನೇ ಬರಬೇಕು. ಆರು ಸಾಲಿಗೊಂದರಂತೆ ಜೋಳದಲ್ಲಿ ತೊಗರಿ ಮತ್ತು

ಹೆಸರು ಬಳ್ಳಿಗಳು, ಅಲ್ಲೊಂದು ಇಲ್ಲೊಂದು ಬೆಳೆದು ನಿಂತ ಪುಂಡಿಗಿಡಗಳು, ಆಗ ತಾನೆ ಜೋಟುದ್ದ ಗೇಣುದ್ದ ಮೇಲೆದ್ದು ಹಸುರ್ಗರೆವ ಹತ್ತಿಯ ಹೊಲ, ಅದರಲ್ಲಿ ಅಲ್ಲೊಂದು ಇಲ್ಲೊಂದು ಹುಟ್ಟಿನಿಂತ ಹುಚ್ಚೆಳ್ಳು. ಬೆಂಡೆ, ಚವಳಿಗಿಡಗಳು, ಮತ್ತೊಂದೆಡೆಯಲ್ಲಿ ಗೊಂಚಲು ಗೊಂಚಲಾಗಿ ಕಾಯಿ ಬಿಟ್ಟು ಬಳುಕುತ್ತಿರುವ ಮೆಣಸಿನಗಿಡಗಳ ಹೊಲಗಳು, ಕೀಳುವುದಕ್ಕೆ ಬಂದ ಬಟಗಡಲೆ ಹೊಲಗಳು, ಇವುಗಳ ಮಧ್ಯೆ ಗೋದಿ ಮತ್ತು ಬಿಳಿಜೋಳ ಬಿತ್ತುವುದಕ್ಕೆಂದು ಹಸನುಮಾಡಿ ಬಿತ್ತು ತತುಗಾಗಿ (ಹಂಗಾಮಿಗಾಗಿ) ಕಾದಿರುವ ಕಪ್ಪುಮಣ್ಣಿನ ಹೊಲದ ಚೌಕಗಳು, ಬದುಗಳಲ್ಲಿ ಮಲಮಲ ಎಂದು ಬೆಳೆದು ನಿಂತ ಮಾರವಾಳಿ, ನಟ್ಟು, ಮಾನಿಚಾರಿ ಹುಲ್ಲಿನ ಸೊಬಗು, ಬಣ್ಣದಿಂದ ಅಲ್ಲೊಂದು ಇಲ್ಲೊಂದು ಕಣ್ಣಿಗೆ ಬೀಳುವ ಬಿಳೀ ಉಳ್ಳಾಗಡ್ಡಿಯ ಹೊಲಗಳ ಮನೋಹರ ದೃಶ್ಯ ಮೊದಲಾದವನ್ನು ನೋಡಿ ಆನಂದಿಸುವ ಪುಣ್ಯ ಯಾರಿಗುಂಟು ಯಾರಿಗಿಲ್ಲ. ಹಲವಾರು ಬಗೆಯ, ಹಲವಾರು ಧ್ವನಿವಿಶೇಷಗಳ ಪಕ್ಷಿಗಳ ಹಾರಾಟ, ಚೆಯ್ ಎಂದು ಚೀರುವ ಜೀರುದುಂಬಿಗಳ ಚೀತ್ಕಾರ. ಮನುಷ್ಯರನ್ನು ಕಂಡೊಡನೆ ಒಮ್ಮೆಲೆ ಆಕಾಶಕ್ಕೆ ಜಿಗಿದು ಶರವೇಗದಲ್ಲಿ ಹಾರಿ ಹೋಗುವ ಜಂಕೆಗಳ ಹಿಂಡನ್ನು ಸಮೀಪದಿಂದಲೇ ನೋಡುವುದು ಇನ್ನೆಲ್ಲಿ ಎಂದು ಉಸುರ್ಗರೆಯುವಂತಾಗಿದೆ. ನಗರಜೀವನದಲ್ಲಿ ಸಿಕ್ಕು ಒದ್ದಾಡುವ ನನಗೆ ಸದಾ ಮಹಾನವಮಿ ಬಂದಾಗ ಕಣ್ಣಿಗೆ ಕಾಣುವುದು ನಮ್ಮ ಹೊಲವಾರಿಯ ಮನೋಹರ ದೃಶ್ಯವೇ! ಆರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ, ಎಂದು ಪಂಪ ಹೇಳುವಂತೆಯೇ ನಮ್ಮ ಪಾಡು. ಇಂದಿನ ನಮ್ಮ ನಗರಜೀವನ ಆ ಸೊಬಗಿನ ಸೀಮೆಯಿಂದ ದೂರ ಎಸೆಯಲ್ಪಟ್ಟದ್ದು. ನಮ್ಮ ಜೀವನದ ಎದುರಿಗೆ ಈಗ ಸದಾ ಕಾಣುವುದು ಸಿಮೆಂಟಿನ ಕಾಡೆನಿಸಿರುವ ಅಪರಂಪಾರ ನಗರ. ಅದರ ಮಧ್ಯದಲ್ಲಿ ಕೂಗಾಡಿ ಚೀರಾಡಿ ಕಂಡಕಂಡವರ ಮೇಲೆ ಹೊಗೆಯುಗುಳುತ್ತ, ಕಾಲಿಗೆ ಸಿಕ್ಕವನ್ನು ತುಳಿದು ಯಮಪುರಿಗೆ ಕಳಿಸುತ್ತ ನಡೆದಿರುವ ವಿವಿಧ ವಾಹನಗಳು ಮೊದಲಾದವುಗಳು ನಿಸರ್ಗದ ಸಹಜ ಸುಂದರ ಸೌಂದರ್ಯವೇ ಇಲ್ಲ. ಇದ್ದರೂ ಅನೇಕ ನಿರ್ಬಂಧಗಳ ಕೃತಕ ಉದ್ಯಾನಗಳು.

ಮಧ್ಯಾಹ್ನ ಊಟ ಮಾಡಿದ ಮೇಲೆ ಎಲ್ಲರೂ ಸಾಯಂಕಾಲ ಬನ್ನಿ ಮುಡಿಯಲು ಹೋಗುವ ಸಡಗರವನ್ನು ಎದುರು ನೋಡುತ್ತಿರುತ್ತೇವೆ. ಸಾಯಂಕಾಲ 2 ಗಂಟೆ ಸುಮಾರಿಗೆ ಜನವೆಲ್ಲ ಊರದೇವರನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ನಂದೀಧ್ವಜದ ಮುಂದಾಳುತನದಲ್ಲಿ ನಿಯಮಿತವಾದ ಶಮೀವೃಕ್ಷದತ್ತ ಹೋಗುತ್ತಿದ್ದೆವು. ಬನ್ನಿ ಮುಡಿಯುವುದು ನಮ್ಮೂರಲ್ಲಿ ಒಂದು ವಿಶಿಷ್ಟ ಪದ್ಧತಿ. ನಮ್ಮೂರ ಗೌಡ ಮುಂಭಾಗದಲ್ಲಿ ಹಿರಿದ ಖಡ್ಗ ಹಿಡಿದು ಸಾಗಬೇಕು. ಅವರ ಹಿಂದೆ ತಳವಾರ, ಓಲೆಕಾರ, ತೋಟಿ, ಬಡಿಗ, ಕಮ್ಮಾರ, ಅಗಸ, ಚಲವಾದಿ, ಎಲ್ಲರೂ ಇರಬೇಕು. ನಮ್ಮೂರ ಗೌಡ ಮಹಮ್ಮದೀಯ ಆದರೂ ಅವನು ಖಡ್ಗ ಹಿರಿದು ಮುಂದೆ ಹೊರಟು ಎಲ್ಲರೊಡನೆ ಬನ್ನಿ ಮುಡಿಯಲು ಬರಬೇಕು. ಇಷ್ಟೇ ಅಲ್ಲ, ನಮ್ಮೂರ ಅಧಿಕ ಸಂಖ್ಯೆಯ ಮುಸ್ಲಿಮರು ಬನ್ನಿಮರದ ಪೂಜೆಗೆ ಬಂದು ಎಲ್ಲರಂತೆ ಅವರು ಬನ್ನಿಯನ್ನು ಪಡೆದು ಪರಸ್ಪರ ನಮಸ್ಕಾರಗಳನ್ನು ಮಾಡುತ್ತಿದ್ದರು. ಶಮೀವೃಕ್ಷದ ಪೂಜೆಯಾದ ಮೇಲೆ ನಾವಂತೂ ಬನ್ನಿಯ ಪತ್ರೆಯನ್ನು ಪಂಚೆಯ ಮಡಿಲಲ್ಲಿ ತುಂಬಿಕೊಳ್ಳುತ್ತಿದ್ದೆವು. ಸುತ್ತಮುತ್ತಣ ಜೋಳದ ಹೊಲದಲ್ಲಿ ಜೋಳದ ಗರಿಗಳನ್ನು ತೆಕ್ಕೆಯಲ್ಲಿ ಹಿಡಿದುಕೊಂಡು ಊರಲ್ಲಿ ಎಷ್ಟು ದೇವಾಲಯಗಳಿವೆಯೋ ಅಲ್ಲೆಲ್ಲಾ ಹೋಗಿ ಒಂದೊಂದು ಗರಿ, ಸ್ವಲ್ಪ ಬನ್ನಿಯನ್ನಿಟ್ಟು ನಮಸ್ಕರಿಸಿ

ಮಠದ ಸ್ವಾಮಿಗಳಿಗೆ ಬನ್ನಿ ಕೊಟ್ಟು ನಮಸ್ಕರಿಸಿ ಆಮೇಲೆ ಊರಲ್ಲಿ ಒಂದು ಮನೆಯನ್ನು ಬಿಡದಂತೆ ಎಲ್ಲರ ಮನೆಗೂ ಹೋಗಿ ಬನ್ನಿಕೊಟ್ಟು ನಮಸ್ಕರಿಸಿ ಬರುತ್ತಿದ್ದೆವು. ಹಿಂದೂ ಸಮಾಜದ ಭಾವೈಕ್ಯದ ಬಹುಪಾಲು ಕಾರ್ಯವನ್ನು ಈ ಹಬ್ಬ ಮಾಡುತ್ತಿತ್ತು. ವಿಜಯದಶಮಿ ಹಬ್ಬ ಭಾರತೀಯರ ಆರ್ಷೇಯ ಹಬ್ಬ. ಹಿಂದಿನ ದಿನಗಳಲ್ಲಿ ದಿಗ್ವಿಜಯಕ್ಕೆ ಈ ಹಬ್ಬದ ದಿನವೇ ಹೊರಡುತ್ತಿದ್ದರು. ಚಕ್ರವರ್ತಿಗಳು, ಸಾಮಂತರು ಪಾಳೆಪಟ್ಟುಗಳವರಿಂದ ಈ ಹಬ್ಬದ ದಿನವೇ ಕಾಣಿಕೆಯನ್ನು ಸ್ವೀಕರಿಸುವ ಪದ್ಧತಿ. ಕ್ಷಾತ್ರತೇಜವನ್ನು ಮೆರೆಯುವ ಹಬ್ಬವಾದ್ದರಿಂದ ಈ ಹಬ್ಬ ಹಿಂದೂ ಸಮಾಜದಲ್ಲಿ ಬಹಳ ಉತ್ಸಾಹದಿಂದ ಕೂಡಿದ ಹಬ್ಬವಾಗಿರುತ್ತಿತ್ತು. ಬನ್ನಿ ಮುಡಿದು ಬರುವುದು ಹಿಂದೂಗಳ ಅನಿವಾರ್ಯ ಕ್ರಿಯೆ. ಇದು ಗಂಡುಮಕ್ಕಳ ಪ್ರಾಶಸ್ತ್ಯದ ಹಬ್ಬ. ಧಾರವಾಡ ಸೀಮೆಯಲ್ಲಿ ಈ ಹಬ್ಬದ ಬಗೆಗೆ ಅನೇಕ ಹಾಡುಗಳು ಪ್ರಚಲಿತವಿವೆ. ಬೀಸುವಾಗ ಕುಟ್ಟುವಾಗ ಈ ಹಬ್ಬದ ಹೆಸರೆತ್ತಿ ಹಾಡುವುದುಂಟು. ನಮ್ಮ ಮನೆಯಲ್ಲಿ ದಿನವೂ ರಾತ್ರಿ ನಾನು ಸೀಮೆಎಣ್ಣೆ ಬುಡ್ಡಿಯ ಬೆಳಕಿನಲ್ಲಿ ಓದುತ್ತಿದ್ದೆ. ಆಗ ಎರಡು ಬೀಸುಕಲ್ಲುಗಳಲ್ಲಿ ಜೋಳ ಬೀಸುವುದಕ್ಕೆ ನಮ್ಮ ತಾಯಿ, ದೊಡ್ಡಮ್ಮ ಮೊದಲಾದ ನಾಲ್ಕು ಜನ ಕೂಡುತ್ತಿದ್ದರು. ಅವರು ಪದೇ ಪದೇ ಕೆಳಗಿನ ಹಾಡುಗಳನ್ನು ಹಾಡುತ್ತಿದ್ದರು. ಹಾಡಿನಲ್ಲಿ ನನ್ನ ಹೆಸರನ್ನೂ ತೆಗೆದುಕೊಂಡೇ ಅನೇಕ ಹಾಡು ಹಾಡುತ್ತಿದ್ದರು. ಆಗ ನನಗೆ ಬಹಳ ಹೆಮ್ಮೆ ಎನ್ನಿಸುತ್ತಿತ್ತು. ನಮ್ಮ ಪಕ್ಕದ ಮನೆಯಲ್ಲಿ ನಮ್ಮ ದೊಡ್ಡಪ್ಪನ ಮಗಳು ಒಬ್ಬಳಿದ್ದಳು. ಅವಳಂತೂ ನನ್ನ ಹೆಸರು ಊರಿಗೆಲ್ಲ ಕೇಳುವಂತೆ ಬೀಸುವಾಗ ಹಾಡುತ್ತಿದ್ದುದುಂಟು. ಆಗಂತೂ ನಾನು ಹಿಗ್ಗಿ ಹಾಡಿನಲ್ಲಿ ಸಮಾವೇಶವಾಗಿಟ್ಟಿದ್ದೇನಲ್ಲಾ ಎಂದು ಬಹಳ ಹೆಮ್ಮೆಯಿಂದ ತಿರುಗಾಡುವಂತಾಗುತ್ತಿತ್ತು.

ಬಂಜಿ ಬಾಗಿಲು ಮುಂದೆ ಬಂಗಾರದೊಳಕಲ್ಲು.
ಬಂದು ಕುಟ್ಟಾಕ ಸೊಸೆಯಿಲ್ಲ ಮಾನವಮಿ
ಬನ್ನಿ ಮುಡಿಯಾಕ ಮಗನಿಲ್ಲ

ಮಾನವಮಿ ಬಂತೆಂದು ತುಂಬೆನೆರಡಾರುತಿಯ
ಜಾಬ ತುಂಬೇನೇ ಜಗುಲಿಗೆ ಅಣ್ಣಯ್ಯನ
ತೇಜಿಗಾರುತಿಯ ಬೆಳಗೇನೆ
ಸೀಗಿ ಹುಣ್ಣಿಮೆ ಹಬ್ಬಸಿರಿ ನನ್ನ ಮಗಳಿಗೆ
ಮಾನಮಿಹಬ್ಬ ಮಗನ್ಹಬ್ಬ ಮುಂದಿರುವ
ದೀವಳಿಗಿ ಹಬ್ಬ ಮಗನ್ಹಬ್ಬ

ಈ ಹಾಡುಗಳ ಹಿನ್ನೆಲೆಯಿಂದ ಇದು ಗಂಡು ಮಕ್ಕಳ ಶಕ್ತಿ ಪ್ರದರ್ಶನ ಪ್ರಧಾನವಾದ ಹಬ್ಬವೆಂದು ಗೊತ್ತಾಗುತ್ತದೆ. ಈ ಬಹು ದೊಡ್ಡಹಬ್ಬ ಮುಗಿದ ಮೇಲೆ ಐದೇ ದಿನಕ್ಕೆ ಬರುವ ಹಬ್ಬವೇ ಭೂಮಿಹುಣ್ಣಿಮೆ ಅಥವಾ ಸೀಗಿಹುಣ್ಣಿಮೆ ಹಬ್ಬ. ಸೀಗಿಹುಣ್ಣಿಮೆಯ ಹಬ್ಬದ ಆಚರಣೆಯನ್ನು, ಆ ಕಾಲದ ನಮ್ಮ ಕ್ರಿಯಾಕಲಾಪಗಳನ್ನೂ ಹಿಂದೆ ವಿವರಿಸಿದ್ದೇನೆ. ಅದೊಂದು ಪ್ರಕೃತಿ ಮಧ್ಯದಲ್ಲಿ. ಅದೂ ತಾವು ಬಿತ್ತಿ ಬೆಳೆದ ಸಿರಿಯ ಬೆಳೆಯ ಮಧ್ಯದಲ್ಲಿ ಊಟ ಮಾಡಲು ಕಲ್ಪಿಸಿಕೊಂಡ ಹಬ್ಬವೆಂದು ಈಗ ಯೋಚಿಸುತ್ತಿದ್ದೇನೆ.

## ಹಟ್ಟಿಹಬ್ಬ ಅಥವಾ ದೀಪಾವಳಿ ಹಬ್ಬ

ಬಾಲ್ಯದಲ್ಲಿ ನಾವು ದೀಪಾವಳಿ ಹಬ್ಬವನ್ನು ಕಾತುರದಿಂದ ಎದುರು ನೋಡುತ್ತಿದ್ದೆವು. ಈ ಹಬ್ಬದಲ್ಲಿ ನಮಗೆ ಸ್ವಲ್ಪ ಪುಡಿಗಾಸು ಸಿಗುತ್ತಿತ್ತು. 'ಹಾಂಡಗೋಲು' ಎಂಬ ಒಂದು ಕಾಚಿಕಡ್ಡಿ, ಮಾನಿಚಾರಿ ಹುಲ್ಲಿನ ಕಡ್ಡಿ ಅಥವಾ ಇನ್ನಿತರ ಹುಲ್ಲುಗಳ ಕಡ್ಡಿಗಳಿಂದ ಒಂದು ಹಾಂಡಗೋಲು ಕಟ್ಟಿ ಅದರಲ್ಲಿ ದೀಪ ಮುಡಿಸಿಟ್ಟುಕೊಂಡು ನಮ್ಮ ಬಂಧುಬಳಗದವರು ಮತ್ತು ನಮ್ಮ ಮನೆಯ ಆಪ್ತಮಿತ್ರರ ಮನೆಯ ಮುಂಭಾಗಕ್ಕೆ ರಾತ್ರಿಹೊತ್ತು ಹೋಗಿ 'ಹಾಂಡಗೋಲು - ಹಿಂಡಗೋಲು ಹಟ್ಟೀಹಬ್ಬೋ ಹಟ್ಟೀಹಬ್ಬ' ಎಂದು ಕೂಗಿಡುತ್ತ ನಿಲ್ಲುತ್ತಿದ್ದೆವು. ಈ ಹಾಂಡುಗೋಲುಗಳನ್ನು ಬಹಳ ವಿಚಿತ್ರ ವಿಚಿತ್ರವಾಗಿ ಕಟ್ಟಿರುತ್ತಿದ್ದೆವು. ನಮಗೆ ಒಂದೊಂದು ದಮ್ಮಡಿ ಅಂದರೆ ಪೈಗಳನ್ನು ಕೊಡುತ್ತಿದ್ದರು. (ಇವುಗಳ ಬೆಲೆ ಈಗಿನ ಲೆಕ್ಕದಂತೆ ಆರು ನಯೇ ಪೈಸೆಗಳಿಗೆ ಸುಮಾರು ಹನ್ನೆರಡು ಪೈಗಳು) ಈ ಪೈಗಳಿಗೂ ಆಗ ಬಹಳ ಬೆಲೆಯಿತ್ತು. ಇದೊಂದು ತಾಮ್ರದ ನಾಣ್ಯ. ನಾವು ಮುಂದೆ ಹೋಗಿ ಮೇಲೆ ಹೇಳಿದಂತೆ ಕೂಗಾಡಿ ವಸೂಲು ಮಾಡಿಕೊಂಡೇ ಬರುತ್ತಿದ್ದೆವು. ಕೆಲವರು ಒಂದು ಬಿಲ್ಲೆ (ಮೂರು ಪೈ) ಗಳನ್ನೇ ಹಾಕುತ್ತಿದ್ದುದುಂಟು. ನಮ್ಮ ಬೀಗರೋ ಅಥವಾ ಸೋದರಮಾವನೋ ಖುಷಿಯಿಂದ ಒಂದೊಂದು ಆಣೆ / ಆರು ನಯಾಪೈಸೆ)ಯನ್ನು ಕೊಡುತ್ತಿದ್ದುದೂ ಉಂಟು. ಒಂದಾಣೆ ಕೊಟ್ಟಾಗ ನಮಗಾಗುವ ಆನಂದ ಅಷ್ಟಿಷ್ಟಲ್ಲ. ಏಕೆಂದರೆ ಇನ್ನೊಂದಾಣೆ ಸಿಕ್ಕರೆ ಆಯಿತು; ಒಂದು ದಿನ ನಾಟಕ ನೋಡುವಷ್ಟು ದುಡ್ಡಾಗುತ್ತಿತ್ತು. ಈ ದುಡ್ಡೆನ್ನೆಲ್ಲ ನಾವು ಸಂಗ್ರಹಿಸುತ್ತಿದ್ದುದು ಉಗಾದಿ (ಯುಗಾದಿ) ಹಬ್ಬದಂದು. ಕೂಡಲ ಜಾತ್ರೆಯಲ್ಲಿ ಖರ್ಚುಮಾಡಲು. ಆರೆಂಟು ಆಣೆಗಳನ್ನಾದರೂ ಕಾಡಿಬೇಡಿ ಸಂಗ್ರಹಿ ಸುತ್ತಿದ್ದೆವು. ಅಲ್ಲಿಯವರೆಗೆ ಒಂದು ಪೈಯನ್ನು ನಾವು ಖರ್ಚು ಮಾಡುತ್ತಿರಲಿಲ್ಲ. ಈ ಕಾರಣದಿಂದ ಹಟ್ಟೀಹಬ್ಬ ಯಾವಾಗ ಬಂದೀತೆಂದು ಚಡಪಡಿಸುತ್ತಿದ್ದೆವು.

ಇದು ಮೂರು ದಿನಗಳ ಹಬ್ಬ - ನರಕ ಚತುರ್ದಶಿ, ಅಮಾವಾಸ್ಯೆ, ಬಲಿಪಾಡ್ಯಮಿಯೆಂದು. ನಮ್ಮಹಳ್ಳಿಯಲ್ಲಿ ಇದಕ್ಕೆ ನಾವು ಕರೆಯುತ್ತಿದ್ದು ಕ್ರಮವಾಗಿ - ಶಾವಿಗೆ ಉಣ್ಣುವ ಹಬ್ಬ, ಬೋರೇದ ಅಮಾಸಿ, ಹಟ್ಟಿಹಬ್ಬ ಎಂದು. ನರಕಚತುರ್ದಶಿ ಬಲಿಪಾಡ್ಯಮಿ ಎಂಬ ಹೆಸರು ಪಂಚಾಂಗದಲ್ಲಿ ಇತ್ತೊ ಏನೋ. ನಮಗಂತೂ ಈ ಹೆಸರಿನ ಪರಿಚಯವೇ ಇರಲಿಲ್ಲ. ಹಿಂದಿನ ದಿನ ಅಂದರೆ ತ್ರಯೋದಶಿಯ ದಿನ (ನರಕ ಚತುರ್ದಶಿಯ ಹಿಂದಿನ ದಿನ) ನೀರು ತುಂಬುವ ಹಬ್ಬವೆಂದು ಕರೆಯುವುದು ವಾಡಿಕೆ. ಈ ದಿನ ಹರವಿ ಹಂಡೆಗಳನ್ನು ತೊಳೆದು ಪೂಜಿಸಿ ಸುಣ್ಣದಿಂದ ಅದರ ಮೇಲೆ ಚಿತ್ರಗಳನ್ನು ಬರೆಯುತ್ತಿದ್ದರು. ನಾನು ನಾಲ್ಕು ಐದನೇ ತರಗತಿಯಲ್ಲಿ ಓದುವಾಗ ನಾನೇ ಹರವಿಯ ಮೇಲೆ ಚಿತ್ರ ಬರೆಯುತ್ತಿದ್ದೆ. ಮೊದಲು ಸರಸ್ವತಿ ಲಕ್ಷ್ಮಿಯರನ್ನೂ, ಐದು ಜನ ಮುತ್ತೈದೆಯರನ್ನು ಕಂಠದ, ಸುತ್ತಲೂ ಬಳ್ಳಿಯನ್ನೊ ಅಥವಾ ಹೂ ಸರದ ಚಿತ್ರವನ್ನು ಬರೆಯುತ್ತಿದ್ದೆ. ಸೂರ್ಯ ಚಂದ್ರರಂತೂ ಇರಲೇ ಬೇಕಲ್ಲ. ಇಷ್ಟು ಮಾಡಿದ ಮೇಲೆ ಮಹಾಲಿಂಗನ ಬಳ್ಳಿ ತರುತ್ತಿದ್ದೆವು. ನಮ್ಮೂರ ಬೇಲಿಯ ಮೇಲೆ ಎಲ್ಲೆಡೆ ಅದು ಬೆಳೆಯುತ್ತಿತ್ತು. ಈ ಬಳ್ಳಿಯಿಂದ ಹರವಿಯನ್ನು ಅಲಂಕರಿಸುವುದಷ್ಟೇ ಅಲ್ಲ, ನೀರಿನಲ್ಲೂ ಇದನ್ನು ಹಾಕುತ್ತಿದ್ದರು. ಹೀಗೆ ಅಲಂಕೃತ ಹರವಿ ಒಲೆಯ ಮೇಲೆ ಕೂಡುತ್ತಿತ್ತು. ನಾನು ಬಹಳ ಶ್ರದ್ಧೆಯಿಂದ ಚಿತ್ರ ಬರೆಯುತ್ತಿದ್ದೆ. ಮನೆಗೆ ಬಂದವರಿಗೆಲ್ಲ ನಮ್ಮ ತಾಯಿ ಬಹು ಅಭಿಮಾನದಿಂದ 'ನನ್ನ ಮಗ, ಎಷ್ಟು ಚೆಂದ ಬರದಾನ ಗೊಂಬಿನ ನೋಡಬಾರವ್ವ, ಎನ್ನುತ್ತ ನಾನು ಬರೆದ ಚಿತ್ರಗಳನ್ನು ತೋರಿಸುತ್ತ ಹೆಮ್ಮೆ ಪಡುತ್ತಿದ್ದುದು

ಜ್ಞಾಪಕದಿಂದ ಜಾರಿಲ್ಲ. ನಮ್ಮ ಮನೆಯಲ್ಲಿ ನೀರು ತುಂಬಲು ಆಗ ಇದ್ದುದು ಮಣ್ಣಿನ ಹರವಿ - ಕೊಡ-ಗಡಿಗೆಗಳೇ. ಸಾಮಾನ್ಯವಾಗಿ ತಾಮ್ರ ಹಿತ್ತಾಳೆಯ ಪಾತ್ರೆಗಳು ತೀರಾ ಕಡಿಮೆ. ಇಷ್ಟೇ ಅಲ್ಲ, ಜೋಳ ತುಂಬಲೂ ಇದ್ದ ರಂಜಣಿಗೆ ಮಣ್ಣಿನವೇ.

ನೀರು ತುಂಬುವ ಹಬ್ಬದ ಈ ದಿನ ಅಲಂಕೃತವಾದ ಮಣ್ಣಿನ ಹರವೆಗಳಲ್ಲಿ ನೀರು ತುಂಬಿ ರಾತ್ರಿ ಕಾಯಿಸಿ ಬೆಳಗಿನ 4 ಘಂಟೆಯ ಸುಮಾರಿನಿಂದ ಅಭ್ಯಂಜನ ಸ್ನಾನ ನಮ್ಮ ಮನೆಯಲ್ಲಿ ಪ್ರಾರಂಭವಾಗುತ್ತಿತ್ತು. ಯುಗಾದಿಯಂದು ಒಂದು ಅಭ್ಯಂಜನ ಸ್ನಾನ, ದೀಪಾವಳಿಯಲ್ಲಿ ಇನ್ನೊಂದು ಅಭ್ಯಂಜನಸ್ನಾನವಾದರೆ ಅಂದಿನ ಹಳ್ಳಿಯಜನಕ್ಕೆ ಸಾಕಾಗುತ್ತಿತ್ತೆಂದು ತೋರುತ್ತದೆ. ಸ್ನಾನವಾಗುತ್ತಿದ್ದಂತೆಯೇ ಶಾವಿಗೆ ಬಸಿದು ಬಿಡುತ್ತಿದ್ದರು. ನಮ್ಮ ಊಟಕ್ಕಲ್ಲ ಇದು. ಭೂಮಿತಾಯಿಗೆ ಉಣ್ಣಿಸಲು. ಒಂದು ಹೊಸ ಮಣ್ಣಿನ ಕುಡಿಕೆಯಲ್ಲಿ ಶಾವಿಗೆ-ಸಕ್ಕರೆ ಅಥವಾ ಬೆಲ್ಲ, ತುಪ್ಪಗಳನ್ನು ಹಾಕಿ ಹೊಲಕ್ಕೆ ಚಡಗ ಚಲ್ಲಿ ಬರಲು ನಮಗೆ ಕೊಡುತ್ತಿದ್ದರು. ನಾವು ಉತ್ಸಾಹದಿಂದ ಎಲ್ಲ ಹೊಲಗಳನ್ನು ತಿರುಗಾಡಿ ಚರಗ ಚೆಲ್ಲುತ್ತಿದ್ದೆವು. ಸಾಮಾನ್ಯವಾಗಿ ಹೀಗೆ ನಾವು ಹೊಲಕ್ಕೆ ಯಾರೇ ಹೋಗಲಿ ನಮ್ಮ ಹೊಲಗಳಲ್ಲಿ ಬೆಳೆದಿದ್ದ ಅನೇಕ ಬಗೆಯ ಕಾಯಿಪಲ್ಲೆ (ತರಕಾರಿ) ತರಬೇಕಾಗುತ್ತಿತ್ತು. ಆಗ ನಮ್ಮ ಹೊಲಗಳ ತಲೆಸಾಲುಗಳಲ್ಲಿ ಒಡ್ಡುಗಳ ಮೇಲೆ ಮರ ಗಿಡಗಳಿದ್ದರೆ ಅವಕ್ಕೆ ಹಬ್ಬುವಂತೆ ಹೀರೆ, ಕುಂಬಳ, ಸವತೆ, ಕೆಕ್ಕರಲ ಮೊದಲಾದ ಬಳ್ಳಿಗಳನ್ನು ಹಾಕುತ್ತಿದ್ದೆವು. ತರಕಾರಿ ಮತ್ತು ಬೆಂಡೆ. ಬದನೆ ಗಿಡಗಳು ಅಲ್ಲಲ್ಲಿ ಇದ್ದೇ ಇರುತ್ತಿದ್ದವು. ಅವುಗಳನ್ನು ತಡಕಿ ಕಾಯಿಪಲ್ಲೆಯನ್ನೆಲ್ಲ ಒಂದು ಗಂಟು ಮಾಡಿಕೊಳ್ಳುತ್ತಿದ್ದೆವು. ಅನಂತರ ಅನೇಕ ಬಗೆಯ ಹೂವುಗಳನ್ನು ಪತ್ರಿಗಳನ್ನು ಕಿತ್ತುಕೊಂಡು ಅದನ್ನೂ ಒಂದು ಗಂಟು ಮಾಡಿಕೊಳ್ಳುತ್ತಿದ್ದೆವು. ಕರುಗಳಿಗೆ ಸ್ವಲ್ಪ ಹುಲ್ಲು ಮೊದಲಾದುವನ್ನು ಸಂಗ್ರಹಿಸಿಕೊಂಡು ಎಲ್ಲವನ್ನು ಹೊತ್ತುಕೊಂಡು 12 ಘಂಟೆ ಸುಮಾರಿಗೆ ಹಸಿದು ಹಣ್ಣಾಗಿ ಮನೆಗೆ ಬರುತ್ತಿದ್ದೆವು. ಅಷ್ಟು ಹೊತ್ತಿಗಾಗಲೆ ಮನೆಯಲ್ಲಿ ಪೂಜೆ ಮೊದಲಾದುವು ಮುಗಿದಿರುತ್ತಿತ್ತು. ಬಂದು ನಾವು ಮುಖತೊಳೆದು ಕಂಠಪೂರ್ತಿ ಶಾವಿಗೆ, ಬೆಲ್ಲ, ಹಾಲು-ತುಪ್ಪ ಹಾಕಿಕೊಂಡು ಊಟ ಮಾಡುತ್ತಿದ್ದೆವು. ಶಾವಿಗೆ ಅಂದರೆ ಅಂಗಡಿಯ ಶಾವಿಗೆಯಲ್ಲ. ಮನೆಯಲ್ಲಿಯೇ ಬೀಸಿದ ಹಿಟ್ಟು, ಮನೆಯಲ್ಲೆ ಹೊಸೆದ ಸೇವಗೆ. ಅಂಗಡಿಯ ಶಾವಿಗೆ ಹಪ್ಪಳ, ಸಂಡಿಗೆಗಳನ್ನು ಸಾಮಾನ್ಯವಾಗಿ ಆಗ ನಮ್ಮ ಮನೆತನಗಳಲ್ಲಿ ಯಾರೂ ತಿನ್ನುತ್ತಿರಲಿಲ್ಲ ಅಥವಾ ಆಗ ಅಂಗಡಿಗಳಲ್ಲಿ ಯಾರೂ ಸೇವಿಗೆ ಮಾಡುತ್ತಲೂ ಇರಲಿಲ್ಲವೇನೋ! ಈಚಲುಗಿಡ, ಗರಿ ಇಂಥವನ್ನು ಮುಟ್ಟಿ ಕೈತೊಳೆದು ಕೊಳ್ಳುತ್ತಿದ್ದ ಈ ಜನ ಯಾರೋ ಮಾಡಿದ ಶಾವಿಗೆ, ಹಪ್ಪಳ, ಸಂಡಿಗೆ, ಉಪ್ಪಿನಕಾಯಿ, ಸಾಂಬಾರು ಪುಡಿಗಳನ್ನು ತಿಂದಾರೆಯೇ? ಒಂದು ಮಾತನ್ನು ತಿಳಿದುಕೊಳ್ಳಬೇಕು. ಆಗಿನ ಹೆಣ್ಣುಮಕ್ಕಳು ಬಹಳ ಸ್ವಾವಲಂಬಿಗಳು, ಶ್ರಮಸಹಿಷ್ಣುಗಳು. ಪರಾವಲಂಬನೆ ಅವರ ಜೀವನದಲ್ಲಿ ಎಂದೂ ಇರಲಿಲ್ಲ. ವರ್ಷವಿಡೀ ದಿನವೂ ಬೀಸುವುದು, ಕುಟ್ಟುವುದು, ಗವಲಿ, ಶಾವಿಗೆ, ಹಪ್ಪಳ, ಸಂಡಿಗೆ, ಕಾರಕುಟ್ಟುವಿಕೆ ಸಂಬಾರಪುಡಿ ತಯಾರಿಸುವಿಕೆ ಏನೆಲ್ಲವನ್ನು ತಾವೇ ಸ್ವತಃ ಕುಟ್ಟಿ, ಬೀಸಿ ಮಾಡಿಕೊಳ್ಳುತ್ತಿದ್ದರು. ನಮ್ಮ ಕಾಲಕ್ಕಾಗಲೆ ನೂಲುವುದು, ಗಾಣದಲ್ಲಿ ಎಣ್ಣೆ ಆಡಿಕೊಳ್ಳುವುದು ಮಾಯವಾಗಿದ್ದವು. ನಮ್ಮ ಹಿಂದಿನ ತಲೆಮಾರಿನವರು ಎಣ್ಣೆಯಲ್ಲೂ ಸ್ವಾವಲಂಬಿಗಳು, ಬಟ್ಟೆಯಲ್ಲಿಯೂ ಅರ್ಧಸ್ವಾವಲಂಬಿಗಳು. ಅಲ್ಲದೆ ಅವರಿಗೆ ನಮ್ಮಷ್ಟು ಬಟ್ಟೆಯ ಅವಶ್ಯಕತೆಯೂ ಇರಲಿಲ್ಲ. ಉಡಲು ಒಂದು ಪಂಚೆ, ಹೊದೆಯಲು ಒಂದು ದಪ್ಪನೆಯ ದುಪ್ಪಟ ಇದ್ದರೆ ಆಯಿತು.

ಊರು, ಸಂತೆ, ಪೇಟೆ ಹೀಗೆ ಹೊರಗೆ ಹೋಗುವಾಗ ಮಾತ್ರ ಒಂದು ರುಮಾಲು ಬೇಕಾಗುತ್ತಿತ್ತು. ಇಲ್ಲದಿದ್ದರೆ ಇಲ್ಲ. ವಿಶೇಷವಾದ ಆಧ್ಯತೆಯ ಅಂಗಿಯೆಂದರೆ ಆಗ ಒಂದು ಬಗಲಗಸಿ ಅಂಗಿ. ಈ ಅಂಗಿ ಮಾಯವಾಗಿ ಕೇವಲ 40-50 ವರ್ಷವಾಯಿತು ಅಷ್ಟೆ. ಅದಕ್ಕೂ ಪೂರ್ವದಲ್ಲಿ ಮದುವೆಯ ಗಂಡಿಗೂ ಕೂಡ ಹೊಲಿಸುತ್ತಿದ್ದುದು ಬಗಲಗಸಿ ಅಂಗಿಯನ್ನೇ. ಆದ್ದರಿಂದಲೇ ಗಾಂಧಿ ಭಾರತೀಯರ ಸಾಮಾನ್ಯ ಉಡುಪಾದ ಒಂದು ಪಂಚೆ ಒಂದು ದುಪ್ಪಟ್ಟಿಯನ್ನು ಸಾಯುವವರೆಗೆ ಧರಿಸಿದ್ದನ್ನು ಎಲ್ಲರೂ ಕಂಡಿದ್ದಾರೆ. ಇದು ಸಾಮಾನ್ಯ ಭಾರತೀಯನ ಉಡುಪೆಂದೇ ತಿಳಿದು ಅವರು ಅದನ್ನು ಆರಿಸಿಕೊಂಡಿದ್ದರು. ಒಂದು ಶತಮಾನದ ಹಿಂದಿನ ಭಾರತೀಯ ಹಿ ಂದೂಗಳ ಉಡುಪು ಸಾಮಾನ್ಯವಾಗಿ ಒಂದೇ ರೀತಿಯದಾಗಿರುತ್ತಿತ್ತು. ರುಮಾಲು ಎಲ್ಲರೂ ಧರಿಸಬೇಕಾದ ಒಂದು ಗೌರವ ಸಂಕೇತದ ಉಡುಪು. ಏನಿಲ್ಲದಿದ್ದರೂ ತಲೆಗೆ ರುಮಾಲು, ಉಡಲು ಪಂಚೆ ಈ ಎರಡು ಮಾತ್ರ ಬೇಕೇಬೇಕಾಗುತ್ತಿತ್ತು. ರುಮಾಲು ಇಲ್ಲದಿದ್ದರೆ ಶುಭಶೋಭನಗಳಲ್ಲಿ ಕಣಕಟ್ಟೆಗಳಲ್ಲಿ ಯಾರೂ ಪ್ರವೇಶಮಾಡಬಾರದೆಂಬ ನಿರ್ಬಂಧವಿತ್ತು. ಉಳಿದಂತೆ ರುಮಾಲು ಇಲ್ಲದೆ ಗಾಂಧಿಯಂತೆ ಬರಿತಲೆಯಲ್ಲಿ ಕೆಲಸಕಾರ್ಯ ಮಾಡುತ್ತಿದ್ದರು. ಇತ್ತೀಚೆಗೆ ಬೊಂಬಾಯಿ ಕಡೆಯಿಂದ ಅಲ್ಪಸ್ವಲ್ಪ ಓದಿದವರೆಲ್ಲ ತಲೆಗೆ ಟೋಪಿ ಹಾಕತೊಡಗಿದರು. ರುಮಾಲು ಮಾಯವಾಗುತ್ತ ಬಂದು ಗಾಂಧಿ ಚಳುವಳಿಯ ಕಾಲದಲ್ಲಿ ಖಾದಿಟೋಪಿ ಎಲ್ಲೆಂದರಲ್ಲಿ ಕಾಣತೊಡಗಿತು. ಅಂತೂ ತಲೆಯ ಮೇಲೆ ಏನಾದರೂ ಒಂದು ಇರಲೇಬೇಕೆಂಬುದಂತೂ ಅಂದಿನ ಜನಜೀವನದ ಅಭಿಪ್ರಾಯವಾಗಿತ್ತು. ಕ್ರಾಪ್‌ಕಟಿಂಗ್ ಅಂತೂ ಆಗ ತೀರಾ ಕಡಿಮೆ. ಪಟ್ಟಣವಲ್ಲದ್ದವರ ತಲೆ ಮಾತ್ರ ಕ್ರಾಪ್‌ನಿಂದ ಕೂಡಿತ್ತು. ದೀಪಾವಳಿಯ ಬಗ್ಗೆ ಹೇಳುತ್ತ ಹೊರಟು ನಾನು ಭಾರತೀಯ ಉಡುಪಿನತ್ತ ಹಾರಿಬಿಟ್ಟೆ. ಹೀಗೆಯೇ ನಮ್ಮ ವ್ಯವಹಾರ, ಇರಲಿ.

ಶಾವಿಗೆ ಉಣ್ಣುವ ಹಬ್ಬದ ದಿನ ಸಡಗರ ಹೆಚ್ಚು ಇಲ್ಲ. ರಾತ್ರಿ ಊರಲ್ಲಿ ಭಜನೆ ಮೊದಲಾದವು ಜರುಗುತ್ತಿದ್ದವು. ಇನ್ನೊಂದು ವಿಶೇಷವೆಂದರೆ ಊರಿನಲ್ಲಿ ಇಂಥ ಹಬ್ಬ ಹುಣ್ಣಿಮೆಗಳಲ್ಲಿ ಕೆಲವು ಸ್ಪರ್ಧೆಗಳು ಆಟಪಾಟಗಳು ಜರುಗುತ್ತಿದ್ದವು. ತುಂಬಿದ ಕೊಡ ನೆಗುಹುವುದು, ದೊಡ್ಡದೊಡ್ಡ ದುಂಡಿಗಳನ್ನು ಯಾರ ಸಹಾಯವಿಲ್ಲದೆ ಎತ್ತಿ ಹೆಗಲ ಮೇಲಿಟ್ಟು ಕೊಳ್ಳುವುದು, ಒಬ್ಬನೇ ಹಳಿಬಂಡಿಗೆ ಚಕ್ಕಡಿಗೆ ಗಾಲಿ ತೊಡಿಸುವುದು. ಕಣ್ಣು ಕಟ್ಟಿ ದೂರದ ಹೊಲದಲ್ಲಿರುವ ಒಂದು ಗಿಡವನ್ನೋ ಹುತ್ತವನ್ನೋ ಮುಟ್ಟಿ ಬರುವುದು ಮೊದಲಾದವು ಅವರ ಸ್ಪರ್ಧೆಗಳಾಗಿರುತ್ತಿದ್ದವು. ಇದೂ ತಪ್ಪಿದರೆ ಚಿನ್ನಿ ಕೋಲಾಟ ಸಣ್ಣವರಿಗಾಗಿ ಇದ್ದೇ ಇರುತ್ತಿತ್ತು. ಬೆಳದಿಂಗಳು ಇದಕ್ಕೆ ಬೇರೆ ದಿನಗಳಲ್ಲಿ ತುಳ್ಳೆಗೆರೆ ಆಟವಂತೂ ಇದ್ದದ್ದೇ. ಇದು ಬಹು ಬುದ್ಧಿವಂತಿಕೆಯ ಆಟ. ದೇಹಶ್ರಮವೂ ಅತ್ಯಧಿಕ.

**ಅಮಾವಾಸ್ಯೆಯ ಲಕ್ಷ್ಮೀಪೂಜೆ**

ಎರಡನೆಯ ದಿನ, ಅಂದರೆ ಅಮಾವಾಸ್ಯೆಯ ದಿನ ಲಕ್ಷ್ಮೀಪೂಜೆ ಜರುಗುತ್ತಿತ್ತು. ಲಕ್ಷ್ಮೀಪೂಜೆಯೆಂದರೆ ಕಮಲವೊಂದರಲ್ಲಿ ನಿಂತ ಸ್ತ್ರೀಯೊಬ್ಬಳ ಪುರಾಣ ಕಲ್ಪನೆಯ ಹೆಣ್ಣನ್ನಲ್ಲ. ಅದೇನಿದ್ದರೂ ವ್ಯಾಪಾರಸ್ಥರ ಮಾತಾಯಿತು. ನಮ್ಮ ವ್ಯವಸಾಯಗಾರರ ಲಕ್ಷ್ಮಿ ಹಳಿಬಂಡಿಯ ಗಾಲಿಗಳು. ಹಳಿಬಂಡಿಯ ಎರಡೂ ಗಾಲಿಯ ಮೇಲೆ ಮಡಿನೀರು ತುಂಬಿದ ಚಂಬನ್ನು ಕಟ್ಟಿ

ನಿಲ್ಲಿಸಿ ಅವಕ್ಕೆ ಹೊಸ ಸೀರೆಕುಪ್ಪಸಗಳನ್ನು ಏರಿಸಿ, ಆಭರಣಾದಿಗಳನ್ನು ಹಾಕಿ ಅಲಂಕರಿಸಿ ಪೂಜಿಸುತ್ತಿದ್ದರು. ನಮ್ಮ ಮನೆಯಲ್ಲಿ ಆ ಬಂಡಿಯ ಮುಂದೆ ಬಾಳೆಕಂಬಗಳ ಮಂಟಪವನ್ನು ಬಹು ಅಂದವಾಗಿ ಕಟ್ಟುತ್ತಿದ್ದುದುಂಟು. ಅದೇ ವ್ಯವಸಾಯಗಾರರ ಲಕ್ಷ್ಮಿ. ಈ ಲಕ್ಷ್ಮಿಯ ಮುಂದೆಯೇ ಬಲಿಪಾಡ್ಯಮಿಯಂದು ಕೊಟ್ಟಿಗೆಯ ಸಗಣಿಯನ್ನೆಲ್ಲ ಸಂಗ್ರಹಿಸಿ ಹಟ್ಟಿಯನ್ನಿಕ್ಕಬೇಕು. ಇದಲ್ಲದೆ ನಮ್ಮ ಮನೆಯ ಮಟ್ಟಿಗೆ ಕೊಟ್ಟಿಗೆಯಲ್ಲಿನ ಒಂದು ಕಂಬಕ್ಕೆ ಸುಣ್ಣ ಬಣ್ಣ ಹಚ್ಚಿ ಅದನ್ನು ಕರಿಯವ್ವ ಎಂದು ಕರೆಯುತ್ತಿದ್ದರು. ಈ ಕರಿಯವ್ವ ಯಾವ ದೇವತೆಯೋ ಗೊತ್ತಿಲ್ಲ. ಅಮಾವಾಸ್ಯೆಯ ಒಂದು ದಿನ ಮಾತ್ರ ಆ ಕಂಬಕ್ಕೆ ವಿಶೇಷ ಪೂಜೆ ಮಾಡಿ ಅದಕ್ಕೊಂದು ಹೊಸ ಕುಪ್ಪಸದ ಬಟ್ಟೆ ಕಟ್ಟುತ್ತಿದ್ದರು. ವರ್ಷಕ್ಕೊಂದೇ ಸಲ ಮಾತ್ರ ಆ ಕರಿಯವ್ವನ ಉಪಚಾರ ನಡೆಯುತ್ತಿತ್ತು. ಬಹುಶಃ ಇಂದು ಕಾಳಿಕಾಂಬೆಯಿರಬೇಕು. ಅದೇ ಕರಿಯವ್ವ ಆಗಿರಬಹುದು. ಕರಿಯವ್ವ ಎಂದರೇನೆಂದು ನಮ್ಮ ಮನೆಯವರಿಗೂ ಗೊತ್ತಿರಲಿಲ್ಲ. ಕರಿಯವ್ವ ಎಂದರೆ ಕರಿಯವ್ವ ಅಷ್ಟೆ ಅವರು ತಿಳಿದದ್ದು.

ಲಕ್ಷ್ಮಿಯನ್ನು ಹೀಗೆ ರಾತ್ರಿ ಎಲ್ಲರೂ ಭಯಭಕ್ತಿಯಿಂದ ಪೂಜಿಸುವಲ್ಲಿ ನಮ್ಮವರ ವ್ಯಾವಸಾಯಕ ಶ್ರದ್ಧೆ ಅವರ್ಣನೀಯವಾಗಿರುತ್ತಿತ್ತು. ಆ ದಿನ ಬೆಳಗಿನಿಂದ ನಮ್ಮ ತಾಯಿ ಉಪವಾಸ ಮಾಡುತ್ತಿದ್ದಳು. ರಾತ್ರಿ ಲಕ್ಷ್ಮೀಪೂಜೆ ಮುಗಿದ ಮೇಲೆ ಒಂದೊತ್ತನ್ನು ಬಿಟ್ಟು ಊಟ ಮಾಡುತ್ತಿದ್ದರು. ಹಾಡುವವರು ಹಾಡುತ್ತಿದ್ದರು. ಏನೇನೋ ಹಾಡುಗಳು ನನಗೆ ಅವು ನೆನಪಿಲ್ಲ. ಸೋಬಾನೆ ತರಹ ಹಾಡುಗಳು. ಅಂಥ ಅಮೂಲ್ಯಸಾಹಿತ್ಯ ಸಂಪತ್ತನ್ನು ಸಂಗ್ರಹಿ ಸಲಿಲ್ಲವಲ್ಲಾ ಎಂಬ ಕೊರಗು ಈಗ. ಹಾಡುವವರು ಈಗ ಯಾರೂ ಇಲ್ಲ. ಇಷ್ಟೇ ಅಲ್ಲ, ಅಂಥ ಶ್ರದ್ಧಾವಂತರೂ ಈಗ ಇಲ್ಲ. ಈಗ ಏನಿದ್ದಾರೂ ವೈಜ್ಞಾನಿಕ ಯುಗವಲ್ಲವೆ? ಬುದ್ಧಿಯಿಂದ ಬದುಕುತ್ತೇವೆಂದು ಹೊರಟಿರುವರಲ್ಲವೆ? ಜಾನಪದ ಸಾಹಿತ್ಯವೇನೋ ಈಗ ಪ್ರಚಾರವಾದರೂ ಈಗಿನವರಿಗೆಂದು ಕೇವಲ ಬೇಸರ ಕಳೆಯುವ ಸಾಧನ, ಕಲಿಯಲು ಅಲ್ಲ.

### ಬಲಿಪಾಡ್ಯಮಿ

ಈ ಪೂರ್ವದಲ್ಲಿ ಹೇಳಿದಂತೆ ಬಲಿಪಾಡ್ಯಮಿ ಮೊದಲಾದ ಹೆಸರನ್ನು ನಮ್ಮವರು ಕರೆಯುತ್ತಿರಲಿಲ್ಲ. ಬಹುಶಃ ಅದು ಅವರಿಗೆ ಗೊತ್ತೂ ಇರಲಿಲ್ಲವೆಂದರೂ ನಡೆದೀತು. ಈ ದಿನವೇ ಹಟ್ಟಿಯ ಹಬ್ಬ. ಹಟ್ಟಿಯಿಡುವ ಹಬ್ಬ; ಕೊಟ್ಟಗೆ ಪೂಜೆಯ ಹಬ್ಬ. ಇದರ ಐಸಿರಿ ವರ್ಣಿಸಲಸದಳ.

ಹಟ್ಟಿಯ ಹಬ್ಬದ ದಿನವೂ ಹೊಲಕ್ಕೆ ಚರಗ ಚಲ್ಲಬೇಕು. ಬೆಳಿಗ್ಗೆ ಬೇಗನೆ ನಮ್ಮನ್ನು ಎಬ್ಬಿಸಿ ಎಲ್ಲ ಹೊಲಕ್ಕೆ ಚರಗ ಚಲ್ಲಿಬರಲು ಬಿಸಿ ಅನ್ನ-ಕೆನೆಮೊಸರು ಹಾಕಿ ಕಲಸಿ ಕೊಡುತ್ತಿದ್ದರು. ಬರುವಾಗ ಹೂವು, ಜೋಳದ ಹೊಡೆಗಳು, ಬನ್ನಿಪತ್ರಿ ಮೊದಲಾದವನ್ನು ಸಾಕಷ್ಟು ತರಲು ನಮ್ಮ ತಾಯಿ ಹೇಳುತ್ತಿದ್ದರು. ನಾವು ನಾಲ್ಕೈದು ಜನ ಮಿತ್ರರೊಡನೆ ಹೊರಟು ಅವರ ಹೊಲಗಳು ನಮ್ಮ ಹೊಲಗಳನ್ನೆಲ್ಲ ತಿರುಗಿ ಚರಗ ಚಲ್ಲಿ ತಂಗಡಿ, ಹುಚ್ಚೆಳ್ಳು, ಚಂಡು, ಉತ್ತರಾಣಿಕಡ್ಡಿ, ಗರಿಕೆಪತ್ರೆ ಮೊದಲಾದವುಗಳನ್ನು, ಜೋಳದ ಹೊಡೆಗಳನ್ನು ಕಿತ್ತುಕೊಂಡು ನವಣೆತೆನೆ, ಜೋಳದ ತೆನೆ ಮೊದಲಾದ ಇನ್ನಿತರ ತೆನೆಗಳ ದೊಡ್ಡದೊಂದು ಗಂಟನ್ನು, ತರಕಾರಿ ಮೊದಲಾದವನ್ನು ಹೊತ್ತುಕೊಂಡು ಮನೆಗೆ ಬರುವಷ್ಟರಲ್ಲಿ ಕೊಟ್ಟಿಗೆಯಲ್ಲಿ ಸೆಗಣಿಯಿಂದ ಹಟ್ಟಿ ಎಂಬ ಹೆಸರಿನ ಕೋಟೆಯನ್ನು ನಮ್ಮ ತಾಯಿ ಸಿದ್ಧಪಡಿಸಿರುತ್ತಿದ್ದಳು. ಆ ಹೊತ್ತಿಗಾಗಲೆ ನಾವು ತಂದ ಹೂವುಗಳನ್ನೆಲ್ಲ

ಆಸಗೆಯ ಹಟ್ಟಿಯ ತುಂಬ ನಮ್ಮ ತಾಯಿ ಏರಿಸಿ ಸೆಗಣಿಯೇ ಕಾಣದಂತೆ ಮಾಡುತ್ತಿದ್ದಳು. ತೆನೆಜೋಳದ ದಂಟು, ಸವಣೆ, ಬತ್ತದ ದಂಟುಗಳನ್ನು ಹಟ್ಟಿಯ ಮೇಲೆ ತೆನೆ ಸೇರಿಸಿ ಕಟ್ಟಿಸುತ್ತ ಸುತ್ತಲೂ ಅಗಲ ಮಾಡಿ ಅಲಂಕಾರ ಮಾಡುತ್ತಿದ್ದಳು. ಬಾಗಿಲು ಮೊದಲಾದ ಕಡೆ ಈ ದಂಟುಗಳನ್ನು ಎರಡೂ ಕಡೆ ಇಡುತ್ತಿದ್ದುದುಂಟು. ಮನೆಯೆಲ್ಲಾ ಹಸಿರಿನಿಂದ ಕಂಗೊಳಿಸುವಂತೆ ಮಾಡಿಬಿಡಲಾಗುತ್ತಿತ್ತು. ಹೂವುಗಳಂತೂ ಲೆಕ್ಕವಿಲ್ಲದಂತೆ ಎತ್ತೆತ್ತಲೂ ಏರಿಸಿ ಗಮಗಮಿಸುವಂತೆ ಮಾಡಲಾಗುತ್ತಿತ್ತು. ಜೋಳದ ಹೊಡೆಗಳನ್ನು ಹಟ್ಟಿಯ ತುಂಬ ಚುಚ್ಚಿ ಒಂದು ಬಗೆಯ ಅಲಂಕಾರ ಮಾಡಿ ಅಲ್ಲಿ ಒಂದು ಹರಳೆಣ್ಣೆಯ ದೀಪವನ್ನು ಮುಡಿಸಿ ಪೂಜೆಗೆ ಸಿದ್ಧಮಾಡುತ್ತಿದ್ದಳು. ಇಷ್ಟಾದ ಮೇಲೆ ಈ ಹಟ್ಟಿಯಿಂದ ಮನೆಯ ಮುಂಬಾಗಿಲ ಹೊಸತಿಲ ದಾಟುವವರೆಗೆ ಎತ್ತಿನ ಪಾದಗಳನ್ನು ಬರೆದು ಕೊನೆಯಲ್ಲಿ ಒಂದು ಸೆಗಣಿಯ ಕುಪ್ಪೆಯನಿಟ್ಟು ಅದನ್ನು ಹೂವು-ಹೊಡೆ-ತೆನೆಗಳೇ ಮೊದಲಾದುವನ್ನು ಏರಿಸಿ ಅಲಂಕಾರ ಮಾಡುತ್ತಿದ್ದಳು. ನಾವು ನಮ್ಮ ಕುಂಟೆ, ಕೂರಿಗೆ, ಕೊರಡು, ಏಡೆಕುಂಟೆ ಮೊದಲಾದ ಒಕ್ಕಲುತನದ ಸಾಧನೆಗಳನ್ನೆಲ್ಲ ಜೋಡಿಸಿಟ್ಟು ಅವನ್ನು ಪೂಜಿಸಿ,ಅವುಗಳ ಮೇಲೊಂದು ಸೆಗಣಿಯ ಕುಪ್ಪೆಯನ್ನಿಟ್ಟು ಹೂ ಪತ್ರಿಗಳಿಂದ ಅಲಂಕರಿಸುತ್ತಿದ್ದೆವು. ನಮ್ಮ ತಂದೆ, ದೊಡ್ಡಪ್ಪ ತಿಪ್ಪೆಯನ್ನು ಅಂದು ಸರಿಪಡಿಸುತ್ತಿದ್ದರು. ಕಸಕಡ್ಡಿ ದುಂಡಗೆ ಮಾಡಿ ತಿಪ್ಪೆಗೆ ಹಾಕುತ್ತಿದ್ದರು.

### ಮಧ್ಯದಲ್ಲಿ ಬನ್ನಿಯ ಮೇಟಿ

ಇಷ್ಟಾದರೆ ಹಟ್ಟಿಯ ಪೂಜೆ ಮುಗಿಯುವುದಿಲ್ಲ. ಇಲ್ಲಿ ಮುಖ್ಯವಾದ ಇನ್ನೊಂದು ಅಂಶವೆಂದರೆ ಮೇಟಿಯ ಪೂಜೆ. ನಮ್ಮ ಹಳ್ಳಿಗಳಲ್ಲಿ ಒಂದು ಗಾದೆಯುಂಟು. ಹಬ್ಬಗಳನ್ನು ಕಾರಹುಣ್ಣಿವೆ ಕರೆದುಕೊಂಡು ಬಂತು, ಹಟ್ಟಿಹಬ್ಬ ಬಿಟ್ಟು ಹೋಯಿತು. ಇದರ ಅರ್ಥ ಕಾರಹುಣ್ಣಿಮೆಯ ನಂತರ ದೀಪಾವಳಿಯವರೆಗೆ 10-15 ದಿನಕ್ಕೊಂದು ಹಬ್ಬಗಳು ಬಂದು ಮುಗಿದ ಮೇಲೆ ಇನ್ನು ಹೊಟ್ಟೆಯ ಹಬ್ಬ, ಅಂದರೆ ಯುಗಾದಿಯಿಂದ ಬೆವರು ಸುರಿಸಿ ದುಡಿದು ಮಾಡಿದ ತಮ್ಮ ತಮ್ಮ ಹೊಲಗಳ ಬೆಳೆಗಳನ್ನು ಸಂಗ್ರಹಿಸಿ ಒಕ್ಕಲುಮಾಡುವ ಕಾರ್ಯ ಭರದಿಂದ ನಡೆಯುತ್ತದೆ. ಅಂತೆಯೇ ಹಟ್ಟಿಹಬ್ಬ ಮುಗಿದ ಮೇಲೆ ಹೊಟ್ಟೆಹಬ್ಬ ಎಂಬ ಗಾದೆಯನ್ನು ಹೇಳುವುದುಂಟು. ಆದರೂ ಇನ್ನು ಒಂದೆರಡು ಹೆಂಗಸರು ಮಕ್ಕಳುಗಳ ಹಬ್ಬಗಳು ಇಲ್ಲದಿಲ್ಲ. ಇವನ್ನು ಹಬ್ಬಗಳೆನ್ನುವುದಕ್ಕಿಂತ ಲಘುಹಬ್ಬಗಳೆನ್ನಬಹುದು. ಅವುಗಳಲ್ಲಿ ಅಲ್ಲೀಕೇರಿ, ಗಜಗೌರಿಹುಣ್ಣಿಮೆ, ಕಡೇಕಾರ್ತೀಕ ಅಮಾವಾಸ್ಯೆ, ಹತ್ತಿಹೊಲದ ಹಬ್ಬಗಳ ಹೆಸರು ಹೇಳಬಹುದು. ಹತ್ತಿಹೊಲದ ಹಬ್ಬ ಎಂದರೆ ದೋಸೆ ಮಾಡಿಕೊಂಡು ಹೋಗಿ ಹೊಲದಲ್ಲಿ ಪೂಜೆ ಮಾಡಿ ನೈವೇದ್ಯ ಮಾಡಿ ಪ್ರಕೃತಿಯ ಮಧ್ಯದಲ್ಲಿ ಊಟ ಮಾಡಿ ಬರುವುದು ಅಷ್ಟೆ.

ಕಣ ಮಾಡಿ ಒಕ್ಕಲು ಪ್ರಾರಂಭಿಸಿದಾಗ ಕಣದ ಮಧ್ಯದಲ್ಲಿ ನೆಡುವ ಮೇಟಿ ಇವರಿಗೆ ಅತ್ಯಂತ ಪೂಜ್ಯವಸ್ತು. ಅದು ಬನ್ನಿಯ ಮರದ್ದೇ ಆಗ ಬೇಕೆಂದು ಸಂಪ್ರದಾಯಬದ್ಧರಾದ ವ್ಯವಸಾಯಗಾರರ ಅಭಿಮತ. ಆದರೆ ಎಲ್ಲರಿಗೂ ಬನ್ನಿಮರದ ಮೇಟಿಗಳು ಸಿಗುವುದೆಲ್ಲಿ ಸಾಧ್ಯ. ಆದ್ದರಿಂದ ಒಂದೆರಡು ಅಡಿಗಳುದ್ದದ ಬನ್ನಿಯ ಹರಿಯನ್ನು ಕತ್ತರಿಸಿ ತಂದು ಅದಕ್ಕೆ ಕಣ್ಣೆಯನ್ನು ಬಿಗಿದು ಈ ಹಟ್ಟಿಯ ಮಧ್ಯದಲ್ಲಿಟ್ಟು ಅಲಂಕರಿಸಿ ಪೂಜೆಮಾಡಬೇಕು. ಕಣ ಮಾಡಿದಾಗ ಅಲ್ಲಿ ನೆಡುವ ಮೇಟಿಯ ಗುದ್ದಿನಲ್ಲಿ ಈ ಬನ್ನಿ ಮೇಟಿಯನ್ನಿಟ್ಟು ಯಾವುದೂ

ಮರದ ತುಂಡನ್ನು ಮೇಟಿಯಾಗಿ ಹುಗಿದು ಅದು ಬನ್ನಿಯ ಮೇಟಿ ಎಂಬ ಭಾವನೆ ಹೊಂದುತ್ತಿದ್ದರು. ಹೀಗೆ ಲಕ್ಷ್ಮಿಯಾದ ಬಂಡಿಯ ಗಾಲಿಗಳು, ಗಾಲಿಗಳ ಮುಂದೆ ಹಟ್ಟಿ, ಹಟ್ಟಿಯಲ್ಲಿ ಬನ್ನಿಯ ಮೇಟಿ. ಈ ಪೂಜಾ ಸಂಭ್ರಮದಲ್ಲಿ ಮನೆಯ ಸರ್ವಸದಸ್ಯರ ಮನಸ್ಸು ಕೇಂದ್ರೀಕೃತವಾಗಿರುತ್ತದೆ. ಇದರ ಪೂಜೆ ಮುಗಿಸಿ ಎಲ್ಲ ದನಕರುಗಳನ್ನು ಪೂಜಿಸಿದ ನಂತರವೇ ಎಲ್ಲರೂ ಮುಖ್ಯವಾಗಿ ಹೋಳಿಗೆ ಊಟ ಮಾಡುವುದುಂಟು. ಜೊತೆಗೆ ಒಡೆ, ಅಕ್ಕಿಹುಗ್ಗಿ ಇದ್ದೇ ಇರಬೇಕು. ಅಕ್ಕಿಹುಗ್ಗಿ ಎಂದರೆ ಬೆಲ್ಲ, ಸಕ್ಕರೆ ಹಾಕಿದ್ದಲ್ಲ. ಅಕ್ಕಿಯನ್ನು ಚೆನ್ನಾಗಿ ಕುದಿಸಿ ಅದಕ್ಕೆ ಕುಸುಬೆಯ ಹಾಲನ್ನು ಹಿಂಡಿ, ಸ್ವಲ್ಪ ಹಸುವಿನ ಹಾಲು, ಅರಿಸಿಣ ಎಲೆಗಳನ್ನು ಹಾಕಿ ಬೇಯಿಸಿದ ಹುಗ್ಗಿ. ಇದಂತೂ ಇದ್ದೇ ಇರಬೇಕು. ಎಲ್ಲಕ್ಕೂ ಮೊದಲು ಈ ಅಕ್ಕಿ ಹುಗ್ಗಿಯನ್ನು ಸ್ವಲ್ಪ ತುಪ್ಪದೊಡನೆ ಊಟಮಾಡಿದ ಮೇಲೆಯೇ ಉಳಿದ ಹೋಳಿಗೆ, ವಡೆ ಮೊದಲಾದವನ್ನು ತಿನ್ನಬೇಕು ಎನ್ನುವುದು ಹಟ್ಟಿಹಬ್ಬದ ಮುಖ್ಯ ಊಟದ ವಿಧಾನ. ಕೆಲವರು ಗೋದಿಹುಗ್ಗಿ, ಗುಳಿಗೆ ಗವಲ ಹುಗ್ಗಿ ಮೊದಲಾದ ಸಿಹಿಹುಗ್ಗಿಗಳನ್ನು ಮಾಡುವುದುಂಟು. ಉತ್ತರ ಕರ್ನಾಟಕದಲ್ಲಿ ಸಿಹಿ ಊಟವೆಂದರೆ ಮೇಲೆ ಹೇಳಿದ ಸಿಹಿಹುಗ್ಗಿಗಳಲ್ಲದೆ ಹೂರಣಗಡಬು (ಕರಿಗಡಬು), ಹೋಳಿಗೆ (ಒಬ್ಬಟ್ಟು), ಕರಚಿಕಾಯಿ, ಸುರಂಗದ ಹೋಳಿಗೆ, ಸಜ್ಜಕದ ಹೋಳಿಗೆ, ಗೆಣಸಿನ ಹೋಳಿಗೆ, ಸಜ್ಜಕದ ಹುಗ್ಗಿ, ಮಾಲದಿ ಮೊದಲಾದುವೂ ಉಂಟು. ಮಾಲದಿ, ಸುರುಳಿಹೋಳಿಗೆ, ಕರಚಿಕಾಯಿಗಳು ಜಾತ್ರೆ, ದೂರದ ಪ್ರವಾಸ, ಮದುವೆ ಮೊದಲಾದ ಪ್ರಸಂಗಗಳಲ್ಲಿ ಮಾಡುತ್ತಿದ್ದುದುಂಟು. ಏಕೆಂದರೆ ಇವು ಕೆಲವಾರು ದಿನಗಳವರೆಗೆ ಕೆಡದಂತೆ ಇರುತ್ತಿದ್ದವು. ಬುಂದೆ, ಬೇಸಿನ್ ಇತ್ಯಾದಿಗಳು ಆಗಿನ ಕಾಲದಲ್ಲಿ ನಾವು ಕಾಣೆವು. ಶ್ರೀಮಂತರ ಮನೆಮದುವೆಗಳಲ್ಲಿ ಕಾಣುತ್ತಿದ್ದುದುಂಟು ಸಾಮಾನ್ಯವಾಗಿ ಇಂಥ ಭಕ್ಷ್ಯಗಳು ಅಪರೂಪ.

ಸಂಜೆಯಾಗುತ್ತ ನಾವು ನಮ್ಮ ಎತ್ತು ದನಕರುಗಳನ್ನು ಹೊಳೆಗೆ ನೀರು ಕುಡಿಯಲು ಹೊಡೆದುಕೊಂಡು ಹೋಗಿ ಹಿಂತಿರುಗಿ ಬರುವ ಹೊತ್ತಿಗೆ ಆರತಿ ಮೊದಲಾದವನ್ನು ಸಿದ್ಧಪಡಿಸಿ ಬಾಗಿಲಲ್ಲಿ ದೀಪದ ಸಾಲುಗಳನ್ನು ಏರ್ಪಡಿಸಲಾಗುತ್ತಿತ್ತು. ಎಲ್ಲ ದನಗಳಿಗೆ ಆರತಿ ಬೆಳಗಿ, ಜೋಳದ ತೆನೆಯಿಂದ ಎತ್ತುಗಳ ಮೇಲೆ ನೀರು ಸಿಂಪಡಿಸಿ ಒಳಗೆ ಕೊಟ್ಟಿಗೆಗೆ ಬರಬೇಕು. ಈ ಕೆಲಸವನ್ನು ಮನೆಯಲ್ಲಿ ಹುಟ್ಟಿದ ಮಗಳಿಗೆ ಒಪ್ಪಿಸಲಾಗುತ್ತಿತ್ತು. ಗಂಡನ ಮನೆಯಿಂದ ತವರು ಮನೆಗೆ ಬಂದ ಅವಳು ತವರಿನವರು ಕೊಟ್ಟ ಅರಿಸಿಣ ಬಣ್ಣದ ಹೊಸ ಸೀರೆಯುಟ್ಟು ನನ್ನ ತವರುಮನೆಯ ಸಂಪತ್ತು ಅಧಿಕಗೊಳ್ಳಲೆಂದು ಹಾರೈಸಿ ಆರತಿ ಬೆಳಗಬೇಕು. ಈ ಕೆಲಸವನ್ನು ನಮ್ಮ ಮನೆಯ ಪಕ್ಕದಲ್ಲಿಯೇ ಇದ್ದ ನಮ್ಮ ದೊಡ್ಡಪ್ಪನ ಮಗಳು ಬಸವ್ವ ಎನ್ನುವವಳು ಮಾಡುತ್ತಿದ್ದಳು. ಆಗ ಅವಳು ತನ್ನ ಉಚ್ಚಕಂಠದಿಂದ ಹಾಡುತ್ತಿದ್ದುದು ಬಹಳ ಅರ್ಥಗರ್ಭಿತವಾಗಿರುತ್ತಿತ್ತು.

ಬಲ್ಲಾಳ ಬಲವಿಂದ್ರರ ಕಾಲಕ್ಕೆಲ್ಲರು ಸಿರಿವಂತರ
ಬಲ್ಲಾಳ ಬಂದು ಬಾಗಿಲದಿ ನಿಂತರ
ಹುಲ್ಲಕಡ್ಡೆಲ್ಲ ದವನವ ಬಲ್ಲಾಳ.... ॥ ಪಲ್ಲವಿ ॥

ಹಿತ್ತಲದಾಗೊಂದು ಹಿಟ್ಟುಗುಂಬಳಕಾಯಿ।
ಹಿಟ್ಹಾಕಿ ಅದಕ ಮೆಣಸ್ಹಾಕಿ।

ಹಿಟ್ಟುಹಾಕಿ ಅದಕ ಮೆಣಸ್ಹಾಕಿ । ಪಾಂಡವರ ।
ತಾಯಿ ಸವೆದಾಳೊಂದಡಿಗ್ಯಾಗ ॥1॥

ಹಿತ್ತಲದಾಗೊಂದು ಹಾಲುಗುಂಬಳಕಾಯಿ।
ಹಾಲ್ಹಾಕಿ ಅದಕ ಮೆಣಸ್ಹಾಕಿ।
ಹಾಲುಹಾಕಿ ಅದಕ ಮೆಣಸ್ಹಾಕಿ । ಪಾಂಡವರ ।
ತಾಯಿ ಸವೆದಾಳೊಂದಡಿಗ್ಯಾಗ ॥2॥

ಅಪ್ಪನೆತ್ತು ಬರುವಾಗ ಉಪ್ಪರಿಗೆ ಮೇಲಿದ್ದೆ।
ಮುತ್ತಿನಾರುತಿಯ ಹಿಡಿದಿದ್ದೆ।
ಮುತ್ತಿನಾರುತಿಯ ಹಿಡಿದಿದ್ದೆ। ಅಪ್ಪನ ।
ಎತ್ತು ಬಂದು ಹಟ್ಟಿಯ ಹೊಗುವಾಗ ॥3॥

ಅಣ್ಣನೆತ್ತು ಬರುವಾಗ ಕಟ್ಟೆಯ ಮೇಲಿದ್ದೆ
ಹೂವಿನಾರುತಿಯ ಹಿಡಿದಿದ್ದೆ।
ಹೂವಿನಾರುತಿಯ ಹಿಡಿದಿದ್ದೆ । ಅಣ್ಣಯ್ಯನ ।
ಎತ್ತು ಬಂದು ಹಟ್ಟೀ ಹೊಗುವಾಗ ॥4॥

ವರುಷಕ್ಕೆ ಬರುವುದು ಅರಿಸಿಣ ದೀವಳಿಗೆ।
ಅರಿಸಿಣ ಸೆರಗು ಮರೆಮಾಡಿ।
ಅರಿಶಿಣ ಸೆರಗು ಮರೆಮಾಡಿ। ತಂಗೆವ್ವ।
ಅರಸಗಾರುತಿಯ ಬೆಳಗ್ಯಾಳೊ ॥5॥

ಈ ಐದು ನುಡಿಗಳ ಪದ್ಯ ಬಾಲ್ಯದಲ್ಲಿ ನನ್ನನ್ನು ಬಹಳ ಮೆಚ್ಚಿಸಿತ್ತು. ನಮಕ್ಕ ಹಾಡುತ್ತಿದ್ದರೆ ನಮ್ಮ ಮನೆಯ ಇನ್ನಿತರ ತಾಯಿ, ದೊಡ್ಡಮ್ಮ ಇತ್ಯಾದಿ ಎಲ್ಲರೂ ಹಿಮ್ಮೇಳ ಹಾಡುತ್ತಿದ್ದುದು ಜ್ಞಾಪಕ. ಸಾಮಾನ್ಯವಾಗಿ ಈ ಹಾಡನ್ನು ನಮ್ಮೂರ್ನಲ್ಲಿ ಎಲ್ಲರ ಮನೆಗಳಲ್ಲೂ ಹಾಡುತ್ತಿದ್ದರು.

ನಮ್ಮ ವಂಶಸ್ಥರೇ ಆದ ಮೇಗಡಿ ರವಳಪ್ಪಜ್ಜನ ಮನೆಯಲ್ಲಿ ಒಂದು ಮುತ್ತೈದೆ ಮುದುಕಿ ಇತ್ತು. ಅವಳು ಬಹಳ ಶ್ರದ್ಧಾಭಕ್ತಿಗಳಿಂದ ಹಾಡುವುದನ್ನು ಕೇಳುತ್ತಿದ್ದೆ. ಎಲ್ಲರು ಹಾಡಿಗಿಂತ ಈ ಮುದುಕಿ ಹಾಡುತ್ತಿದ್ದ ರೀತಿ, ಅವಳ ಭಕ್ತಿಭಾವ ನನಗೆ ಎಲ್ಲಿಲ್ಲದ ಆನಂದವನ್ನುಂಟು ಮಾಡುತ್ತಿತ್ತು. ಅನೇಕ ವರ್ಷ ಆ ಮುದುಕಿ ಹಾಡುವುದಕ್ಕೆ ಪ್ರಾರಂಭಿಸಿದ ಕೂಡಲೇ ಅಲ್ಲಿಗೆ ಹೋಗಿ ಕುಳಿತುಕೊಂಡು ಬರುವುದನ್ನು ತಪ್ಪಿಸುತ್ತಿರಲಿಲ್ಲ. ಇಷ್ಟೆಲ್ಲ ಮುಗಿದ ಮೇಲೆ ನಾನು ನಮ್ಮ ಆಪ್ತಮಿತ್ರರೊಬ್ಬಿಬ್ಬರ ಸಂಗಡ ಈ ಪೂರ್ವದಲ್ಲಿ ಹೇಳಿದಂತೆ 'ಹಾಂಡುಗೋಲು' ಹಿಡಿದು ಹತ್ತಿಪ್ಪತ್ತು ಮನೆಗಳ ಮುಂದೆ "ಹಾಂಡಗೋಲು ಹಿಂಡುಗೋಲು ಹಟ್ಟೀಹಬ್ಬೋ ಹಟ್ಟಿಹಬ್ಬ" ಎಂದು ಹೇಳಿ ಕಾಡಿ ಬೇಡಿ, ನಗಿಸಿ, ಚೇಷ್ಟೆಮಾಡಿ, ಮಾಡಿಸಿಕೊಂಡು ಸ್ವಲ್ಪ ಪುಡಿಗಾಸು ಸಂಪಾದಿಸಿಕೊಂಡು ಬರುತ್ತಿದ್ದೆ. ಈ ವಿಷಯವನ್ನು ಈ ಹಿಂದೆ ವಿವರಿಸಿದ್ದೇನೆ. ಹೀಗೆ ಹಟ್ಟಿಯ ಹಬ್ಬ ಮುಗಿಯುತ್ತಿತ್ತು.

ಹಬ್ಬದ ಮರುದಿನ ಹಟ್ಟಿಯ ಸಗಣಿಯನ್ನು ಪ್ರತ್ಯೇಕವಾಗಿ ಉಂಡೆಕಟ್ಟಿ ಮಾಳಿಗೆಯ ಕುಂಬಿಯ ಮೇಲೆ ಸಾಲಾಗಿ ಇಡುತ್ತಿದ್ದೆವು. ಮುಂದೆ ಕಣ ಮಾಡಿದಾಗ ಈ ಸೆಗಣಿಯ ಕುಪ್ಪೆಗಳನ್ನೆಲ್ಲ ಪ್ರತ್ಯೇಕವಾಗಿ ಸುಟ್ಟು ಬೂದಿಮಾಡಿ ಸಗಣಿಯನ್ನು ಇದರೊಡನೆ ಸೇರಿಸಿ, ನೀರಿನಲ್ಲಿ ಹಾಕಿ ಆ ನೀರಿನಿಂದ ಕಣದ ಸುತ್ತಲೂ ಮಂಡಲ ಹಾಕಿ, ಸ್ವಲ್ಪ ಬೂದಿಯನ್ನು ಮೇಟಿಯ ತಲೆಗೆ ಒಂದು ಬಟ್ಟೆಯಲ್ಲಿ ಗಂಟುಹಾಕಿ ಕಟ್ಟುತ್ತಿದ್ದರು. ಮೇಟಿಯ ತಲೆಗೆ ಒಂದು ಕಂಬಳಿಯ ಕೋರಿಯನ್ನು ಬಿಗಿಯುತ್ತಿದ್ದರು. ಏಕೆಂದರೆ ಮೇಟಿ ಬರಿನೆತ್ತಿಯಲ್ಲಿರಬಾರದಂತೆ. ಮನುಷ್ಯರೂ ಅಷ್ಟೆ. ತಲೆಯ ಮೇಲೆ ರುಮಾಲಾಗಲೀ, ವಸ್ತ್ರವಾಗಲಿ ಇಲ್ಲದೆ ಕಣವನ್ನು ಪ್ರವೇಶ ಮಾಡಗೊಡುತ್ತಿರಲಿಲ್ಲ. ಇದೆಲ್ಲ ಸಂಪ್ರದಾಯಸ್ಥರಾದ ವ್ಯವಸಾಯಗಾರರ ವಿಧಿ ವಿಧಾನಗಳು.

ಹಟ್ಟಿಹಬ್ಬ ಅಳಿಯ ಪ್ರಧಾನವಂತೆ, ಮಾರಮ್ಮ ಹಬ್ಬ ಮಗನ ಪ್ರಾಧಾನ್ಯತೆಯ ಹಬ್ಬವಂತೆ. ಸೀಗೀ ಹುಣ್ಣಿಮೆ ಮನೆಯ ಮಗಳ ಪ್ರಾಧಾನ್ಯತೆಯ ಹಬ್ಬವೆಂದು ನಮ್ಮ ಮನೆಯವರ ತೀರ್ಮಾನ. ಅವರು ತಮ್ಮ ಈ ಅಭಿಪ್ರಾಯವನ್ನು ಬೀಸುವಾಗ ಹಾಡುವ ಹಾಡಿನ ಮೂಲಕ ಪ್ರಕಟಿಸುತ್ತಿದ್ದುದು ಹೀಗೆ :

ಸೀಗಿ ಹುಣ್ಣಿವೆ ಹಬ್ಬ ಸಿರಿ ನನ್ನ ಮಗಳಿಗೆ ।<br>
ಮಾನಮ್ಮಿ ಹಬ್ಬ ಮಗನ್ಹಬ್ಬ ।<br>
ಮಾನಮ್ಮಿ ಹಬ್ಬ ಮಗನ್ಹಬ್ಬ । ಮುಂದಿರುವ<br>
ದೀವಳಿಗೆ ಹಬ್ಬ ಅಳಿಯನದು ॥

### *ಹಟ್ಟಿಹಬ್ಬದ ಕಿರಿ ಹಬ್ಬಗಳು*

'ಹಟ್ಟಿ ಹಬ್ಬವಾದ ಮೇಲೆ ಹೊಟ್ಟೆಹಬ್ಬ' ಎಂಬ ಗಾದೆ ಹೇಳುತ್ತಿದ್ದರೂ ಕೂಡ ಮಕರ ಸಂಕ್ರಮಣದವರೆಗೆ ಎರಡು ಮೂರು ಕಿರಿಹಬ್ಬಗಳೂ, ಆ ಹಬ್ಬಗಳಲ್ಲಿನ ಸಾಂಸ್ಕೃತಿಕ, ಸಾಂಘಿಕ ಕಾರ್ಯಕ್ರಮಗಳು, ಹೊರವಲಯದ ಊಟಗಳು ನಮ್ಮ ಹಳ್ಳಿಯಲ್ಲಿ ಇದ್ದೇ ಇರುತ್ತಿದ್ದವು. ಅವುಗಳಲ್ಲಿ ನಾನು ಉತ್ಸಾಹದಿಂದ ಭಾಗವಹಿಸುತ್ತಿದ್ದೆ. ಅಷ್ಟೇ ಅಲ್ಲ, ಯಾವ ಕೆಲಸಕ್ಕಾದರೂ ಮುಂದಾಳಾಗಿರುತ್ತಿದ್ದೆ. ಅವುಗಳಲ್ಲಿ ಕಾರ್ತೀಕ ಮಾಸದ ಬೆಳುದಿಂಗಳಲ್ಲಿ ಹಿತ್ತಿಲಲ್ಲಿ ನಿರ್ಮಿಸುತ್ತಿದ್ದ ಅಲ್ಲೀಕೇರಿ, ಕಡೇ ಕಾರ್ತೀಕೋತ್ಸವ, ಗಜಗೌರೀ ಉತ್ಸವ, ಹತ್ತಿಹೊಲದ ಹಬ್ಬ ಮುಖ್ಯವಾಗಿದ್ದವು. ಕಡೇ ಕಾರ್ತೀಕದ ದಿನ ಊರ ದೇವಾಲಯಗಳಲ್ಲಿ ಕಂಡಕಂಡವರ ಹಿತ್ತಿಲು ಹೊಲಗಳಲ್ಲಿದ್ದ ಚಂಡುಹೂ ಗಿಡ, ಹುಚ್ಚೆಳ್ಳುಹೂ ಗಿಡ ಮೊದಲಾದವನ್ನು ಬುಡಸಹಿತ ಕಿತ್ತು ಹೊರೆಕಟ್ಟಿ ತಂದು ಅಲಂಕರಿಸುವುದರಲ್ಲಿ ಉತ್ಸಾಹ ತೋರಿಸುತ್ತಿದ್ದೆ. ದೀಪೋತ್ಸವದಲ್ಲಿ ಕುಣಿದಾಡುತ್ತಿದ್ದೆ.

### *ಅಲ್ಲಿಕೇರಿ*

ಇದೊಂದು ಬೆಳದಿಂಗಳೂಟದ ಪ್ರಸಂಗವೆನ್ನಬಹುದು. ಅಲ್ಲದೆ ತಲೆತಲಾಂತರಗಳಿಂದ ಬಂದ ಜಾನಪದ ಸಂಸ್ಕೃತಿಯ ರಕ್ಷಣೆಯೂ ಹೌದು. ಜಾನಪದ ಕ್ರೀಡೆಗಳು ಈ ಅಲ್ಲಿಕೇರಿ ಸಂಭ್ರಮದ ಕಾರ್ಯಗಳಾಗಿರುತ್ತಿದ್ದವು. ಜನಗಳಲ್ಲಿ ಸಾಮರಸ್ಯ ಕಾಪಾಡಲು ಇಂಥ ಹಬ್ಬಗಳು ಅಮೂಲ್ಯ ಮಾಧ್ಯಮಗಳು. ನಮ್ಮ ಮನೆಯ ಸುತ್ತಮುತ್ತಣದ ಹತ್ತಾರು ಮನೆಯ ಹೆಣ್ಣು ಹುಡಿಗೆಯರು ವಿಶಾಲವಾದ ಒಂದು ಹಿತ್ತಿಲಲ್ಲಿ ನೆಲವನ್ನು ಚೊಕ್ಕಟಗೊಳಿಸಿ ಸುಮಾರು ಹತ್ತು

ಹನ್ನೆರಡಡಿ ಚದರದಲ್ಲಿ ಕೆಸರು ಮಣ್ಣಿನಿಂದ ಅರ್ಧಅಡಿ ಎತ್ತರದ ದಿಂಡು ಕಟ್ಟುವರು. ಅದಕ್ಕೊಂದು ಹೆಬ್ಬಾಗಿಲು ಮೂಡಮುಖವಾಗಿರುತ್ತಿತ್ತು. ಹಿಂಭಾಗದ ದಿಂಡಿನಲ್ಲಿ ಹೆಬ್ಬಾಗಿಲಿಗೆ ನೇರವಾಗಿ ಕೆಸರಿನಿಂದ ಮಾಡಿದ ಒಂದು ಚಿಕ್ಕಗುಡಿ. ಅದರಲ್ಲೊಂದು ನಂದಿ (ಬಸವನ) ವಿಗ್ರಹವಿರುತ್ತಿತ್ತು. ನಾಲ್ಕು ಮೂಲೆಯಲ್ಲಿ ನಾಲ್ಕು ಬುರುಜುಗಳು ಮತ್ತೂ ಹೆಬ್ಬಾಗಿಲಿನ ಅಕ್ಕಪಕ್ಕ ಎರಡು ಬುರುಜುಗಳು ಇರುತ್ತಿದ್ದವು. ಅವಕ್ಕೆಲ್ಲ ಸುಣ್ಣ ಮತ್ತು ಕೆಮ್ಮಣ್ಣಿನ ಪಟ್ಟೆಗಳನ್ನೆಳೆಯಲಾಗುತ್ತಿತ್ತು. ಇದೇ ಅಲ್ಲೀಕೇರಿ. ಇದರಲ್ಲಿರುವ ಬಸವನನ್ನು ಪೂಜಿಸಿ, ಎಲ್ಲ ಹುಡುಗಿಯರು ಚಿಕ್ಕಚಿಕ್ಕ ಗಂಡುಹುಡುಗರು ತಮ್ಮ ತಮ್ಮ ಮನೆಯಿಂದ ತಂದ ವಿವಿಧ ಭಕ್ಷ್ಯ ಭೋಜ್ಯಗಳನ್ನು ದೇವರಿಗೆ ಎಡೆಮಾಡಿ ಅಲ್ಲಿಯೇ ಊಟ ಮಾಡುತ್ತಿದ್ದರು. ಈ ಸಂತೋಷಕೂಟ ಬಹುಶಃ ಕಾರ್ತೀಕ ಮಾರ್ಗಶಿರ ಮಾಸಗಳ ಹುಣ್ಣಿಮೆಯ ಬೆಳಕಿನಲ್ಲಿ ನೆರವೇರುತ್ತಿತ್ತು. ಊಟ ಮುಗಿದ ಮೇಲೆ ಹಾಡುಗಳನ್ನು ಬಹಳ ಹೊತ್ತಿನವರೆಗೆ ಹಾಡಲಾಗುತ್ತಿತ್ತು. ಈ ಸಂತೋಷಕೂಟ ನನ್ನ ಮೇಲೆ ಬಹಳ ಪರಿಣಾಮ ಬೀರುತ್ತಿತ್ತು. ನಮ್ಮ ಊರಿನಲ್ಲಿ ಇಂಥ ಅಲ್ಲಿಕೇರಿಯ ಪ್ರಸಂಗಗಳು ಹತ್ತಾರು ಕಡೆಗಳಲ್ಲಿ ವಿಜೃಂಭಿಸುತ್ತಿದ್ದವು. ಸುಮಾರು 8-10 ವರ್ಷದವನಾಗುವರೆಗೆ ನಾನು ಅಲ್ಲಿಕೇರಿ ಉತ್ಸವದಲ್ಲಿ ಸೇರಿ ಊಟ ಮಾಡುತ್ತಿದ್ದೆ. ಮುಂದೆ ನಾನು ಅದರಲ್ಲಿ ಭಾಗವಹಿಸಲಿಲ್ಲ. ಹೆಣ್ಣು ಹುಡುಗೆಯರೂ ನನ್ನನ್ನು ಸೇರಿಸುತ್ತಿರಲಿಲ್ಲ. ಈ ಹಬ್ಬ ಮುಖ್ಯವಾಗಿ ಜನತೆಯಲ್ಲಿ ಸಂಘಟನೆ, ಸ್ನೇಹಸಂವರ್ಧನೆಗೆ. ಹಾಡು, ಕೋಲಾಟ, ಸಂಭಾಷಣೆ, ಒಗಟು ಇತ್ಯಾದಿ ನಡೆದು ತಲೆತಲಾಂತರಗಳಿಂದ ಬಂದ ಜಾನಪದ ಸಂಸ್ಕೃತಿಯ ರಕ್ಷಣೆ ಮಾಡುವ ಸಾಧನವಾಗಿದ್ದವು.

### *ಗಜಗೌರೀ ಹಬ್ಬ*

ಹೆಣ್ಣುಮಕ್ಕಳು ಭವ್ಯವಾಗಿ ಹಾಡುತ್ತಿದ್ದ ಇನ್ನೊಂದು ಸಾರ್ವಜನಿಕ ಸಂತೋಷಕೂಟವೆಂದರೆ ಕಾರ್ತೀಕಮಾಸ ಪೌರ್ಣಮಿಯದು. ಆಗ ಗೌರಿಯನ್ನು ಕೂಡಿಸಿ, ಮಂಟಪಾದಿಗಳಿಂದ ಅಲಂಕಾರ ಮಾಡಿ ಪೂಜೆ, ಪ್ರಸಾದವಿನಿಯೋಗ ನಡೆಯುತ್ತಿತ್ತು. ಆಗ ಸ್ತ್ರೀಯರು ಹಾಡುತ್ತಿದ್ದ ಹಾಡುಗಳು ವೈವಿಧ್ಯಮಯವಾಗಿರುತ್ತಿದ್ದವು. ನಮ್ಮೂರ ದೇವಗಿರಿ ನೀಲಮ್ಮನ ಹಾಡು ಕೇಳಲು ಊರ ಸ್ತ್ರೀಪುರುಷರೆಲ್ಲ ಸೇರುವುದುಂಟು. ಅವಳ ಕಂಠಶ್ರೀ, ವೈವಿಧ್ಯಮಯ ಹಾಡುಗಳು, ಹಾಡಿನಲ್ಲಿ ವ್ಯಕ್ತವಾಗುತ್ತಿದ್ದ ಭಾವಗಳು ಬಹುಜನರ ಮೆಚ್ಚುಗೆಗಳಿಸುತ್ತಿದ್ದವು. ಈ ಹಾಡುಗಳಲ್ಲಿ ಗೌರೀದೇವಿ ತವರು ಮನೆಗೆ ಹೋಗಿ ಬರುತ್ತೇನೆಂದು ಶಿವನಿಗೆ ಹೇಳುವ ಹಾಡು ಪ್ರಖ್ಯಾತ. ಇಂದಿಗೂ ಈ ಹಾಡಿನ ಭಾವ ನನ್ನ ಮನಸ್ಸಿನಲ್ಲಿ ಸುಳಿದಾಡುತ್ತಿದೆ. ಶಿವ-ಗೌರಿಯರ ಸಂಭಾಷಣೆ ಗ್ರಾಮೀಣ ಜನ ಜೀವನದ ಪ್ರತಿಬಿಂಬವೇ ಆಗಿರುತ್ತಿತ್ತು. ಆದ್ದರಿಂದ ಅದು ಬಹುಜನರ ಮೆಚ್ಚುಗೆಗೆ ಪಾತ್ರವಾಗುತ್ತಿತ್ತು. ಈ ಹಾಡನ್ನು ನೀಲಮ್ಮನ ಬಾಯಿಂದಲೇ ಕೇಳಬೇಕು.

ಈ ಸಮಾರಂಭದ ಮುಖ್ಯಸ್ಥ ನಮ್ಮೂರ ಮೇಗಡಿಯ ಬಸಪ್ಪ ಎಂಬುವನು. ಮನೆಮನೆಗೆ ಹೋಗಿ ಚಂದಾ ವಸೂಲು ಮಾಡಿ ಅಚ್ಚುಕಟ್ಟಾಗಿ ಸಮಾರಂಭಮಾಡಿ ಮುಗಿಸುತ್ತಿದ್ದ. ಈತನ ಅವಸಾನದೊಡನೆ ನಮ್ಮೂರಿನ ಗೌರೀಹಬ್ಬದ ವೈಭವವೂ ಅವಸಾನ ಹೊಂದುತ್ತಾ ನಡೆಯಿತೆನ್ನ ಬೇಕು.

### ವೇಷಗಾರರು ಮುಂತಾದ ಮನರಂಜನೆಕಾರರು

ಸುಮಾರು ಐವತ್ತು-ಅರವತ್ತು ವರ್ಷಗಳ ಹಿಂದೆ ಹಳ್ಳಿಯ ಜನರ ಮನರಂಜನೆಗೆ ವೇಷಗಾರರು, ಕಿಳ್ಳಿಕೇತರು, ಗೊಂದಳಿಗರು, ಜೋಗಿಯರು ಬಹುಮುಖ್ಯಪಾತ್ರ ವಹಿಸುತ್ತಿದ್ದವರಾಗಿದ್ದರು. ವೇಷಗಾರರು ಒಂದೂರಿನಲ್ಲಿ ತಮ್ಮ ದನಕರು, ಹೆಂಗಸರು ಮಕ್ಕಳು ಸಮೇತರಾಗಿ ಬಂದು ಏಳೆಂಟು ದಿನಗಳಿದ್ದು ದಿನವೂ ಒಂದೊಂದು ವೇಷ ಧರಿಸಿ ಊರಿನವರನ್ನೆಲ್ಲ ನಕ್ಕುನಗಿಸುತ್ತಿದ್ದರು. ಇವರೇ ಬಹುರೂಪಿಗಳೆಂದು ಕರೆಯಿಸಿಕೊಳ್ಳಲ್ಪಡುವವರು. ಊರಿನ ಜನರಿಗೆ ಇವರು ಒದಗಿಸುತ್ತಿದ್ದ ಮನರಂಜನೆ ಅಷ್ಟಿಷ್ಟಲ್ಲ. ಅರ್ಧನಾರೀಶ್ವರನ ವೇಷ, ಗೊಲಕೊಂಡವೇಷಗಳು ನನ್ನ ಜ್ಞಾಪಕದಲ್ಲಿ ಇಂದಿಗೂ ಇವೆ. ಅರ್ಧನಾರೀಶ್ವರ ವೇಷದಲ್ಲಿ ಇವರು ಹಾಡುತ್ತ ಬರುತ್ತಿದ್ದ -

ಸಾಂಬನೋ ಮಾದೇವನೊ, ಶಂಕರನೊ ಶಿವಶಂಕರನೊ
ಮಾಳಿಗೆಮನೆಯನು ಸುಟ್ಟಿಹನೊ ಸೂಳೆಗೆ ಕಂಕಣ ಕಟ್ಟಿಹನೊ ॥

ಎಂಬ ಹಾಡು ಇಂದಿಗೂ ನನ್ನ ಜ್ಞಾಪಕದಲ್ಲಿ ಉಳಿದಿದೆ. ಸರ್ವಜ್ಞನ ವಚನಗಳ ದಾಟಿಯನ್ನು ಇವರ ಕಾರಣವಾಗಿಯೆ ನಾನು ಬಾಲ್ಯದಿಂದ ಅಭ್ಯಾಸಮಾಡಿಕೊಂಡು ಬಂದೆ. ಮೂರುನಾಲ್ಕು ದಾಟಿಯಲ್ಲಿ ಇವರು ಹಾಡುತ್ತಿದ್ದ ಆ ಹಾಡಿನ ಸೊಗಸು ನಮ್ಮ ಮೈಮನಗಳನ್ನು ತುಂಬಿತುಳುಕಿಸುತ್ತಿತ್ತು.

ತಮ್ಮ ವೇಷಗಳೆಲ್ಲ ಮುಗಿದ ಮೇಲೆ ವೇಷ ಸಮೇತರಾಗಿಯೇ ಊರಿನಲ್ಲಿ ತಮ್ಮ ಮುಗಿವಳಿ, ಅಂದರೆ ಸಂಭಾವನೆಗಾಗಿ ಬರುತ್ತಿದ್ದುದುಂಟು. ಜೋಳ, ತೊಗರಿ, ಹೆಸರು, ರಾಗಿ ಎಲ್ಲವನ್ನು ಬೇಡಿ, ಕಾಡಿ ಪಡೆಯುವುದು ಇವರ ಸ್ವಭಾವವಾಗಿತ್ತು. ಒಂದೂರು ಮುಗಿದ ಮೇಲೆ ಮತ್ತೆ ಬೇರೊಂದೂರಿಗೆ ಇವರ ತಂಡ ಸಾಗುತ್ತಿತ್ತು.

### ಕಿಳ್ಳಿಕೇತರು

ರಾತ್ರಿಯ ಹೊತ್ತು ಚಿಕ್ಕಮಂಟಪವೊಂದನ್ನು ತಾವೇ ನಿರ್ಮಿಸಿಕೊಂಡು ಬಿಳಿಯ ಪರದೆಯನ್ನು ಮುಂಭಾಗದಲ್ಲಿ ಕಟ್ಟಿ ಕಕ್ಕಡ ದೀಪದ ಬೆಳಕಿನಲ್ಲಿ ವಿವಿಧ ಬಣ್ಣಗಳ ತೊಗಲುಗೊಂಬೆಗಳನ್ನು ಕುಣಿಸುವವರೇ ಕಿಳ್ಳಿಕೇತರು. ಮಹಾಭಾರತ, ರಾಮಾಯಣಗಳನ್ನಾಧರಿಸಿ ಅನೇಕ ಕಥೆಗಳನ್ನು ತೊಗಲುಗೊಂಬೆಗಳ ಕುಣಿತಕ್ಕೆ ಹೊಂದಿಸಿಕೊಂಡು ಹೇಳುತ್ತಿದ್ದ ಇವರ ಆಟಗಳು ಮೂಡಲಪಾಯ ಯಕ್ಷಗಾನದ ದೊಡ್ಡಾಟಗಳನ್ನು ಹೋಲುತ್ತಿದ್ದವು. ಮದ್ದಳೆ ತಾಳಗಳೊಡನೆ ಸೊಗಸಾಗಿ ಹಾಡಿ ಹೇಳುತ್ತಿದ್ದ ಇವರ ಕಥನಕೌಶಲ ಮೆಚ್ಚುವಂತಹುದೇ ಆಗಿತ್ತು. ಮಧ್ಯಮಧ್ಯದಲ್ಲಿ ಕೆಲವು ಅಶ್ಲೀಲವಾದ ದೃಶ್ಯಗಳನ್ನು, ಮಾತುಗಳನ್ನು ಇವರು ಆಡುತ್ತಿದ್ದರು. ಇವರ ಆಟಗಳಲ್ಲಿ ಅಂಥ ಮಾತುಗಳು ದೃಶ್ಯಗಳು, ಅನಿವಾರ್ಯವಂತೆ. ಇಂಥ ಕೆಲವು ದೃಶ್ಯಗಳು ಆಗ ಕೆಲವರಿಗೆ ಇರಿಸುಮುರಿಸಾಗುತ್ತಿದ್ದುದೂ ಉಂಟು

ಒಂದೊಂದು ಊರಿಗೂ ಇವರು ಬಂದು ಊರಗೌಡರು, ಪಂಚರು ಮೊದಲಾದವರನ್ನು ಕಂಡು ಒಪ್ಪಿಗೆ ಪಡೆದು ಆಟ ಆಡಿ ಮರುದಿನ ತಾವು ಮಾಡಿಕೊಂಡ ಕರಾರಿನಂತೆ ಸಂಭಾವನೆ

ಪಡೆದು ಮುಂದಣೂರಿಗೆ ಹೋಗುತ್ತಿದ್ದರು. ಹೀಗೆ ಇವರು ಊರೂರು ತಿರುಗುತ್ತ ತಮ್ಮ ಆಟವನ್ನಾಡುತ್ತ ಹೋಗುವ ಆಗಿನ ಕಾಲದ ಮನರಂಜನಕಾರರು.

### *ಗೊಂದಳಿಗರು*

ಮಹಾರಾಷ್ಟ್ರ ರಾಜ್ಯದಲ್ಲಿ 'ಗೋಂದಳ' ಎಂದು ಹೇಳಿಸಿಕೊಂಡು ಮರಾಠಿಯಲ್ಲಿ ಕಥೆಮಾಡುತ್ತ ಜನಮನವನ್ನು ತಣಿಸುವ ಈ ಜನರೇ ಕರ್ನಾಟಕದಲ್ಲಿಯೂ ಕನ್ನಡ ಭಾಷೆಯಲ್ಲಿಯೇ ಕಥೆಗಳನ್ನು ಮಾಡುತ್ತಿದ್ದ ಇವರನ್ನು ಕನ್ನಡಿಗೊಂದಲಿಗರು ಎನ್ನುತ್ತಾರೆ. ಚೌಡಿಕೆ, ಸಮಾಳದಂತಿರುವ ಚರ್ಮವಾದ್ಯಗಳೊಡನೆ ತಾಳಹಾಕುತ್ತ ಹೇಳುವ ಇವರ ಕಥೆಯ ಸೊಗಸೇ ಸೊಗಸು. ಕರ್ನಾಟಕದಲ್ಲಿ ಇವರು ಎಲ್ಲಮ್ಮ (ರೇಣುಕಾದೇವಿ) ಮತ್ತು ಆದಿಶಕ್ತಿಗಳ ಬಗೆಗೆ ಹೇಳುತ್ತಿದ್ದ ಕಥೆಗಳೇ ಪ್ರಧಾನವಾಗಿರುತ್ತಿದ್ದವು. ಈ ಕಥೆಮಾಡುವ ಮನುಷ್ಯನ ವೇಷಭೂಷಣಗಳು ವಿಚಿತ್ರ. ಕಯ್ಯಲ್ಲಿ ಬಟ್ಟೆಯಿಂದ ಮಾಡಿದ ಮಂದಾಗ್ನಿಯ ಕಕ್ಕಡವಿರುತ್ತಿತ್ತು. ಎಣ್ಣೆ ಮತ್ತು ಮಸಿ ಮೆತ್ತಿದ್ದ ಇವರ ಉದ್ದನೆಯ ಅಂಗಿ ಕಾಲವರೆಗೂ ಇಳಿದಿರುತ್ತಿತ್ತು. ಕೊರಳಲ್ಲಿ ಕವಡೆಸರ, ಅಂಗಿಗೆ ಮೆತ್ತಿಸಿದ ಕವಡೆಗಳ ಸಮೂಹ, ತೋಳುಗಳಿಗೆ ಬಿಗಿದ ಕವಡೆಯ ಸರ - ಇವು ಇವರ ವೈಶಿಷ್ಟ್ಯಗಳಾಗಿದ್ದವು. ಬಗಲಿನಲ್ಲಿ ಇಳಿಬಿದ್ದ ಒಂದು ಕಪ್ಪು ಬಣ್ಣದ ಚೀಲದಲ್ಲಿ ಭಾಂಡಾರ (ಅರಿಶಿನಪುಡಿ) ಇರುತ್ತಿತ್ತು. ಈ ಭಾಂಡಾರವನ್ನು ಎಲ್ಲಮ್ಮನ ಹೆಸರಿನಲ್ಲಿ ಗಂಡಸರು ಹೆಂಗಸರಿಗೆಲ್ಲ ಹಚ್ಚುತ್ತಿದ್ದರು. ಇದೇ ಇವರ ಆಶೀರ್ವಾದ. ತಲೆಯ ಮೇಲೆ ಜರಿಯ ಇಲ್ಲವೆ ಸಾದಾ ರುಮಾಲು ಬಿಗಿದುಕೊಂಡಿರುತ್ತಿದ್ದರು. ಯಾರಾದರೂ ಅರ್ಧ ಆಣೆಯೋ ಕಾಲಾಣೆಯೋ ಕಾಣಿಕೆ ಕೊಟ್ಟರೆ, ಕಯ್ಯ ಕಕ್ಕಡದ ಮಸಿಯನ್ನು ಅವರ ಹಣೆಗೆ ಇವರೇ ಹಚ್ಚಿ ಭಾಂಡಾರವನ್ನು ಕೊರಳಿಗೆ ಸವರಿ ಆಶೀರ್ವದಿಸುತ್ತಿದ್ದರು. ಅರಿಸಿನ ಪುಡಿಗೆ ಭಾಂಡಾರ (ಬಂಡಾರ) ಎಂಬ ಹೆಸರು ಏಕೆ ಬಂತೋ ದೇವರೆ ಬಲ್ಲ. ಎಲ್ಲಮ್ಮನ ಭಕ್ತರು ಇವರನ್ನು ಬಹುಗೌರವದಿಂದ ಕಾಣುತ್ತಿದ್ದರು. ನಮ್ಮೂರ ಮಸೀದಿ ಬೈಲಿನಲ್ಲಿ ಇವರ ಎರಡು ಮೂರು ಕಥೆಗಳನ್ನು ನಾನು ಬಾಲ್ಯದಲ್ಲಿ ಕೇಳಿದ್ದು ಮಸಮಸಕು ಜ್ಞಾಪಕ. ನಮ್ಮೂರಿನ ಕೆಲವು ಎಲ್ಲಮ್ಮನ ಭಕ್ತರು ಗೊಂದಲಿಗರನ್ನು ಕರೆಸಿ ಗೊಂದಳಹಾಕಿಸುವುದು ಎಂಬ ಒಂದು ಹರಕೆಯನ್ನು ಆಗಾಗ ತೀರಿಸುತ್ತಿದ್ದುದುಂಟು ಆ ದಿನ ಅವರ ಮನೆ ಮುಂಭಾಗದಲ್ಲಿ ಬೆಳಗಾಗುವವರೆಗೆ ಗೊಂದಲಿಗರ ಹಾಡುಕಥೆಗಳು ನಡೆಯುತ್ತಿದ್ದವು. ಹೀಗೆ ಈ ಗೊಂದಲಿಗರಿಗೂ ನನಗೂ ಬಾಲ್ಯದಿಂದಲೂ ಒಂದು ಬಗೆಯ ನಂಟು ಎನ್ನಬಹುದು. ಆದರೆ ಇಂದು ಇವರು ಕಾಣಸಿಗುತ್ತಿಲ್ಲ. ಇವರ ಆಟಗಳಂತೂ ಇಂದಿನ ಜನಕ್ಕೆ ಬೇಕಾಗಿಯೂ ಇಲ್ಲ!

### *ಜೋಗಿ ಕಥೆಗಾರರು*

ಗೊಂದಳಿಗರಂತೆಯೇ ಇನ್ನೊಂದು ರೀತಿಯ ಗತ್ತುಗಾರಿಕೆಯಲ್ಲಿ ಹಿಮ್ಮೇಳಮುಮ್ಮೇಳ ಸಹಿತ ಕಥೆ ಮಾಡಿ. ಹಳ್ಳಿಗರ ಮನರಂಜನೆಗೆ ಕಾರಣರಾದವರು ಜೋಗಿಗಳು. ಇವರು ಆಗಾಗ ಮನೆಮನೆಗೆ ಭಿಕ್ಷೆಬೇಡಲು ಬಂದಾಗ ಗೌಡ ಶಾನಭೋಗರನ್ನೊ, ಪಂಚರನ್ನೊ ಕಂಡು ಊರಿನಲ್ಲಿ ವರ್ಷಕ್ಕೆ ಒಂದೆರಡಾದರೂ ನಮ್ಮ ಕಥೆ ಮಾಡಿಸಬಾರದೇ? ನಮ್ಮಂಥ ಬಡವರು ಇನ್ನಾವ ರಾಜ್ಯಕ್ಕೆ ಹೋಗೋಣ? ನಮ್ಮ ಹೊಟ್ಟೆತುಂಬುವುದು ಹೇಗೆ? ಎಂದು ಗೋಗರೆದು ಆಗಾಗ ಒಂದೊಂದು ಕಥೆಗೆ ಅಪ್ಪಣೆ ಪಡೆದು ಬೆಳತನಕ ಕಥೆಮಾಡಿ ಜನರನ್ನು ನಗೆಗಡಲಲ್ಲಿ ಮುಳುಗಿಸುತ್ತಿದ್ದರು. ಕಥೆಮಾಡುವನು ಭರ್ಜರಿ ರುಮಾಲು ಸುತ್ತಿ ಕೋಟು ಷರ್ಟ್ ಧರಿಸಿ

ಕಚ್ಚೆಪಂಚೆಯುಟ್ಟು ಮುಮ್ಮೇಳದಲ್ಲಿ ಕಯ್ಯ ಕಿನ್ನರಿ ನುಡಿಸುತ್ತ ಹಾಡಿ ಕುಣಿದಾಡಿ ಕಥೆಮಾಡುತ್ತಿದ್ದರೆ, ಇವನ ಹಾಡಿಗೆ ದನಿಗೂಡಿಸುವ ಮತ್ತು ಇವನ ಮಾತುಗಾರಿಕೆಯಲ್ಲಿ ನೆರವಾಗುವ ಹಿಮ್ಮೇಳದ ಎರಡು-ಮೂರು ಜನದ ಒಟ್ಟು ಸಮೂಹದ ಕಥೆಗಳು, ಮುಖ್ಯವಾಗಿ ಜಾನಪದ ಕಥೆಗಳು. ಕಥೆಯ ಮಧ್ಯಮಧ್ಯದಲ್ಲಿ ನಿದ್ರೆಬಂದ ಜನಗಳನ್ನು ಎಚ್ಚರಿಸಲು ಹಾಸ್ಯದ ಪ್ರಸಂಗಗಳನ್ನು ಎತ್ತಿಕೊಂಡು ಸೊಗಸಾಗಿ ಹಾಸ್ಯಮಾಡುತ್ತಿದ್ದರು. ಇವರ ಹಾಸ್ಯಕ್ಕೆ ಜನ ಬಿದ್ದು ಬಿದ್ದು ನಗುತ್ತಿದ್ದರು. ಜೋಗಿಗಳ ಈ ಕಥೆಯನ್ನು ನಾನು ಬೆಳಕು ಹರಿಯುವವರೆಗೆ ಕೇಳುತ್ತಿದ್ದೆ. ನನಗೆ ಇವೆಲ್ಲ ಬಹಳ ಅಚ್ಚುಮೆಚ್ಚಿನ ಮನರಂಜನೆಗಳೇ ಆಗಿರುತ್ತಿದ್ದವು.

ಮೇಲೆ ತಿಳಿಸಿದ ಹಳ್ಳಿಯ ಮನರಂಜನೆಯ ಆಟ ಆಡಿಸುವುದರಲ್ಲಿ ಮೇಗಡಿ ಬಸಪ್ಪನ ಪಾತ್ರ ಬಹಳ. ಅವನು ಮಹಾಉತ್ಸಾಹಿ. ವಿದ್ಯಾವಂತನಲ್ಲ, ಶುದ್ಧ ಒಕ್ಕಲುತನದ ಮನುಷ್ಯ, ಸಾತ್ವಿಕ, ಬಡವ. ಆದರೆ ಅವನ ಕಲಾಭಿರುಚಿ ವರ್ಣನಾತೀತ. ಆಟಕ್ಕೆ ಆಟ, ಕಥೆ, ಇತ್ಯಾದಿಗಳಿಗೆಲ್ಲ ಚಂದಾ ಎತ್ತಿ ವ್ಯವಸ್ಥೆ ಮಾಡಿ ಬಂದ ಜನಗಳನ್ನೆಲ್ಲ ಅಣ್ಣ-ಅಕ್ಕ-ಅವ್ವ-ಕಕ್ಕ-ಚಿಕ್ಕಪ್ಪ-ಮಾವ-ಇತ್ಯಾದಿ ಮಮತೆಯ ನುಡಿಗಳಿಂದ ಸಂಬೋಧಿಸುತ್ತ ಕುಳ್ಳಿರಿಸುವುದು. ಕಥೆಗಾರರಿಗೆ ಅವರು ಕೊಟ್ಟ ಕಥೆಗಳ ಪಟ್ಟಿಯಲ್ಲಿ ಇಂಥದೇ ಕಥೆ ಆಗಬೇಕೆಂದು ಹೇಳುವುದು ಎಲ್ಲ ಬಸಪ್ಪನದೇ. ಕಥೆ ಪ್ರಾರಂಭವಾದ ಮೇಲೆ ಮುಂಭಾಗದಲ್ಲಿ ಪಕ್ಕದಲ್ಲಿ ಒಂದು ಕಡೆ ತನ್ನ ಹೆಗಲ ಕಂಬಳಿಹಾಸಿ ಅಡಿಕೆ ಎಲೆ ಜಗಿಯುತ್ತ ಬೆಳಗಾಗುವವರೆಗೆ ನಗುತ್ತ ಕೂಡುತ್ತಿದ್ದ. ಮಧ್ಯಮಧ್ಯದಲ್ಲಿ ಕಥೆಗಾರರ ಅಗತ್ಯಗಳಾದ ನೀರು ಮತ್ತು ತಲಬುಗಳಿಗಾಗಿ ತಂಬಾಕು, ಅದಕ್ಕೆ ಬೆಂಕಿ - ಇವನ್ನೆಲ್ಲ ಹೊಂದಿಸುವವನೂ ಇವನೇ. ಆಗ ಚಹಾಕಾಫಿಗಳ ಹಾವಳಿ ಇರಲಿಲ್ಲ. ಅಲ್ಲಿ ಇಲ್ಲಿ ಚಹಾ ಕಾಫಿ ಮಾತು ಕೇಳಿಸುತ್ತಿದ್ದರೂ, ಇಂಥ ಆಟದವರಿಗೆ ಚಹಾ ಕಾಫಿ ತರಿಸಿಕೊಡುವ ಪದ್ಧತಿ ರೂಢಿಯಲ್ಲಿರಲಿಲ್ಲ. ಆಟಗಾರರೂ ಕೇಳುತ್ತಿರಲಿಲ್ಲ. ನಾನು ಹೇಳುತ್ತಿರುವ ಈ ಕಥೆಯೆಲ್ಲ 1928ರಿಂದ 1934ನೆಯ ಇಸ್ವಿಯವರೆಗಿನದು.

ಆಗ ಸಿನಿಮಾಗಳು ಬಂದಿರಲಿಲ್ಲ. ಬಂದಿದ್ದರೂ ಮೂಕ ಸಿನಿಮಾಗಳು. ಅಷ್ಟುಹೊತ್ತಿಗೆ ಮಾತಾಡುವ ಸಿನಿಮಾ ಬಂದಿದ್ದರೂ ಹಳ್ಳಿಗರಿಗೆ ಅವು ಎಟುಕಿರಲಿಲ್ಲ. ನಾಟಕಗಳೂ ಜನರ ಕೈಗೆ ನಿಲುಕುತ್ತಿರಲಿಲ್ಲ. ಹೀಗಾಗಿ ಮನರಂಜನೆಗೆ ಇಂಥ ಜಾನಪದ ಹಾಡುಗಾರರು, ಕಥೆಗಾರರು ಮೊದಲಾದವರನ್ನು ಆಶ್ರಯಿಸಬೇಕಾಗಿತ್ತು. ಬಾಲ್ಯದಲ್ಲಿ ನಾನು ಈ ಎಲ್ಲ ಮನರಂಜನಾ ಮಾಧ್ಯಮಗಳ ಪ್ರಯೋಜನ ಪಡೆದು ಆಗಾಗ ನನಗೆ ನಾನೇ ಹಾಡಿಕೊಳ್ಳುತ್ತಿದ್ದೆ.

### *ನನ್ನ ಮೇಲೆ ಪ್ರಭಾವ ಬೀರಿದ ಇನ್ನೊಂದು ದೊಡ್ಡ ಸಮಾರಂಭ : ಹೆಡಿಗೆ ಪರ್ವ*

ಮಳೆ ಸಕಾಲದಲ್ಲಿ ಬರದಿದ್ದರೆ ಹಳ್ಳಿಗರ ದುಃಖ, ಸಂಕಟ ಹೇಳತೀರದು. ವೈಜ್ಞಾನಿಕ ಕಾರಣ ಏನೇ ಇರಲಿ, ಹಳ್ಳಿಯವರು ಮಳೆ ಹೋದರೆ ದೇವರ ಮುನಿಸೇ ಮುಖ್ಯಕಾರಣವೆಂಬ ತೀರ್ಮಾನಮಾಡುವರು. ಹಾಗೆ ಮಳೆ ಹೋದಾಗ ಹಾದಿಬಸಪ್ಪ ಎಂಬ ಒಂದು ಚಿಕ್ಕಬಸವೇಶ್ವರನಲ್ಲಿಗೆ ಹೆಡಿಗೆಪರ್ವಮಾಡಿಕೊಂಡು ಹೋಗಿ ಪೂಜಿಸಿ, ತಾವು ಮಡಿಹುಡಿಯಿಂದ ಮಾಡಿಕೊಂಡು ಹೋದ ವಿವಿಧ ಭಕ್ಷ್ಯಭೋಜ್ಯಗಳನ್ನು ಸಾಲಾಗಿ ದೇವರ ಮುಂದಿಟ್ಟು ನೈವೇದ್ಯಮಾಡಿ ಎಲ್ಲರೂ ಕೂಡಿ ಊಟ ಮಾಡಿಬರುತ್ತಿದ್ದುದನ್ನು ಬಾಲ್ಯದಲ್ಲಿ ಎರಡುಮೂರು ಸಲ ನಾನು ಅನುಭವಿಸಿ ಬಹುಪ್ರಭಾವಿತನಾಗಿದ್ದೇನೆ.

### ಹೆಡಿಗೆ ಪರ್ವದ ಉತ್ಸವ

ಊರಹಿರಿಯರೆಲ್ಲ ಒಂದೆಡೆ ಕಲೆತು ಹೆಡಿಗೆ ಪರ್ವೋತ್ಸವ ಮಾಡುವ ದಿನಾಂಕವನ್ನು ಗೊತ್ತುಮಾಡಿ ಊರಿನಲ್ಲಿ ಡಂಗುರ ಸಾರಿಸುತ್ತಿದ್ದರು. ಗೊತ್ತಾದ ದಿನ ಪ್ರತಿಮನೆಯಿಂದ ದೊಡ್ಡದೊಂದು ಬಿದಿರು ಬುಟ್ಟಿಯಲ್ಲಿ ಅನ್ನ ಸಾರು ರೊಟ್ಟಿ ಪಲ್ಯಚಟ್ನಿ ಬುತ್ತಿ, ಪಾಯಸ ಇತ್ಯಾದಿ ವಿವಿಧ ಭಕ್ಷ್ಯಭೋಜ್ಯಗಳನ್ನು ತುಂಬಿಕೊಂಡು ಮೇಲೆ ಮಡಿಯ ವಸ್ತ್ರವೊಂದನ್ನು ಮುಚ್ಚಿಕೊಂಡು ಪ್ರತಿಮನೆಯವರು ಹೊರಡುತ್ತಿದ್ದರು. ನಮ್ಮೂರವರು ಹೋಗುತ್ತಿದ್ದುದು ಬಂಕಾಪುರಕ್ಕೆ ಮಧ್ಯದಲ್ಲಿರುವ ಹಾದಿಬಸಪ್ಪ ಎಂದು ಕರೆಯುತ್ತಿದ್ದ ದೇವಾಲಯಕ್ಕೆ. ಆ ದೇವಾಲಯ ಸುಮಾರು ಮೂರು-ಮೂರುವರೆ ಮೈಲು ದೂರದಲ್ಲಿತ್ತು. ಊರಿನಿಂದ ಪಲ್ಲಕ್ಕಿಯಲ್ಲಿ ಬಸವಣ್ಣನ (ನಂದಿಯ)ನ್ನಿರಿಸಿ ಹೊರುತ್ತಿದ್ದರು. ಮುಂದೆ ನಂದೀಧ್ವಜಗಳು, ಓಲಗಮೇಳದವರು, ಹಲಗೆಯವರು. ದೊಳ್ಳಿನವರು ತಮ್ಮ ತಮ್ಮ ವಾದ್ಯ ನುಡಿಸುತ್ತ ಹೊರಡುತ್ತಿದ್ದರು. ಅವರ ಹಿಂದೆ ಭಜನೆಯ ಮೇಳದವರು ತಾಳ ತಪ್ಪಡಿಗಳೊಡನೆ ಭಜನೆ ಮಾಡುತ್ತ ನಡೆಯುತ್ತಿದ್ದರು. ಇವರ ಹಿಂದೆ ಸಾಲುಗಟ್ಟಿ ಹೆಡಿಗೆ ಹೊತ್ತ ನೂರಾರು ಜನರ ತಂಡ ಹೆಜ್ಜೆ ಹಾಕುತ್ತಿತ್ತು.

ಹಾದಿಬಸಪ್ಪನ ಗುಡಿ ಬರುತ್ತಲೆ ಎಲ್ಲರೂ 'ಹರಹರಮಹಾದೇವ, ಮಹಾಂತ ಮಲ್ಲಯ್ಯ, ಮಳೆಮಲ್ಲಪ್ಪ ಬಹುಪರಾಕ್' ಇತ್ಯಾದಿ ಉದ್ಘೋಷಿಸುತ್ತ ಹೆಡಿಗೆಗಳನ್ನೆಲ್ಲ ಮೊದಲೇ ಚೊಕ್ಕಟಗೊಳಿಸಿದ್ದ ಗುಡಿಯ ಮುಂದೆ ಇಳುಹುತ್ತಿದ್ದರು. ಅನಂತರ ಪೂಜೆ-ಭಜನೆ-ವಾದ್ಯ ಬಜಾವಣೆಗಳು ಜರುಗುತ್ತಲೆ ದೇವರ ಪೂಜೆ, ಗಂಟೆ-ಜಾಗಟೆಗಳ ನಿನಾದ ಮೊಳಗುತ್ತಿತ್ತು. ಒಬ್ಬಿಬ್ಬರು ಪ್ರಮುಖರು ಹಾದಿಬಸಪ್ಪ ದೇವರ ಮುಂದಿದ್ದ ಸುಮಾರು ನಾಲ್ಕೈದು ಕೆ.ಜಿ. ತೂಕದ ಗುಂಡುಕಲ್ಲಿಗೆ ನಮಸ್ಕರಿಸಿ "ಏನಪಾ ನಮ್ಮಪ್ಪ, ಇನ್ನೂ ಒಂದು ವಾರದೊಳಗ ಮಳೆ ಬರ್ತೈತೆ ಅಂದ್ರ ಹೂವಿನಂಗ ಹಗುರಾಗಿ ಬಾ. ಇಲ್ಲದಿದ್ದರ ನೆಲಕಚ್ಚಿ ಕುಳಿತುಕೋ" ಎಂದು ಹೇಳಿ ಆ ದುಂಡಿಯನ್ನು ಎತ್ತಿತೋರಿಸುತ್ತಿದ್ದರು. ಅದು ಹಗುರಾಗಿಯೇ ಬರುತ್ತಿತ್ತೋ, ಭಾರವಾಗಿಯೇ ಇರುತ್ತಿತ್ತೋ ದೇವರೆ ಬಲ್ಲ. ಆದರೆ ದುಂಡಿಯನ್ನೆತ್ತುವವನು "ಇನ್ನು ಒಂದ್ವಾರದಲ್ಲಿ ಮಳಿ ಬರ್ತದೆಂತಾ ದೇವರ ಅಪ್ಪಣೆಮಾಡ್ತೈತಿ. ಜೈ ನಮಃ ಪಾರ್ವತೀಪತೇ ಹರಹರಮಹಾದೇವ" ಎಂದು ಕೂಗಿ ಹೇಳುತ್ತಿದ್ದಂತೆ ಎಲ್ಲರೂ ಚಪ್ಪಾಳೆತಟ್ಟಿ ಉದ್ಘೋಷಣೆ ಮಾಡುತ್ತಿದ್ದರು. ಇಲ್ಲಿಗೆ ದೇವರ ಸೇವೆ ಮುಗಿಯಿತು. ಇದೇ ಹೆಡಿಗೆಪರ್ವದ ಉತ್ಸವ ಅಥವಾ ಜಾತ್ರೆ.

### ಸಾಮೂಹಿಕ ಊಟ

ಆಮೇಲೆ ಎಲ್ಲರ ಹೆಡಿಗೆಗಳಲ್ಲಿರುವ ಭಕ್ಷ್ಯಭೋಜ್ಯಗಳನ್ನು ವರ್ಗೀಕರಿಸುತ್ತಿದ್ದರು. ಎಲ್ಲರನ್ನು ಸಾಲಾಗಿ ಕುಳ್ಳಿರಿಸಿ ಎಲ್ಲ ಭಕ್ಷ್ಯಭೋಜ್ಯಗಳನ್ನು ಎಲ್ಲರಿಗೂ ನೀಡಿ ಊಟ ಮುಗಿಸುತ್ತಿದ್ದರು. ಊಟದ ಹೆಡಿಗೆಗಳನ್ನು ವೀರಶೈವರಲ್ಲದೆ ಉಳಿದವರು ತರುತ್ತಿದ್ದಿಲ್ಲ. ಈ ಹೆಡಿಗೆಪರ್ವದಲ್ಲಿ ಊರಿನ ಎಲ್ಲ ವರ್ಗದ ಜನರೂ ಇರುತ್ತಿದ್ದರು. ಮುಸ್ಲಿಮರೂ ಭಾಗವಹಿಸುತ್ತಿದ್ದರು. ಅವರೂ ಕೂಡ ಎಲ್ಲರ ಮಧ್ಯದಲ್ಲಿ ಕುಳಿತು ಭಯಭಕ್ತಿ ಪ್ರಕಟಿಸುತ್ತ ಊಟ ಮುಗಿಸುತ್ತಿದ್ದರು. ನಮ್ಮ ಹಳ್ಳಿಯಲ್ಲಿ ಹಿಂದೂ ಮುಸ್ಲಿಂ ಎಂಬ ಭೇದವೇ ನಮಗೆ ಗೊತ್ತಿಲ್ಲ.

ಒಂದು ವಾರದಲ್ಲಿ ಮಳೆ ಬರುತ್ತದೆಂಬ ಸುದ್ದಿ ಸುತ್ತ ಹತ್ತಾರು ಹಳ್ಳಿಗಳಲ್ಲಿ ಪ್ರಚಾರವಾಗುತ್ತಿತ್ತು. ಹಾದಿಬಸಪ್ಪನ ಸತ್ಯವನ್ನು ಒರೆಗೆ ಹಚ್ಚಿ ನೋಡುತ್ತ ಕೆಲವರು ಮಳೆ

ಬರುವ ಕಾಲ ನಿರೀಕ್ಷಿಸುತ್ತಿದ್ದರು. ಮಳೆ ಬಂದದ್ದೂ ಉಂಟು, ಬಾರದೆ ಇದ್ದದ್ದೂ ಉಂಟು. ನಿಗದಿತ ವೇಳೆಗೆ ಮಳೆ ಬಾರದಿದ್ದರೆ ಹಾದಿಬಸಪ್ಪನನ್ನು ಮಾತ್ರ ದೂಷಿಸುತ್ತಿದ್ದಿಲ್ಲ. ತಮ್ಮ ತಮ್ಮ ಆತ್ಮನಿರೀಕ್ಷೆಯಲ್ಲಿ ತೊಡಗಿ, ಗೊಣಗಾಡುತ್ತ ಸುಖದುಃಖ ಅನುಭವಿಸುತ್ತ ತಮ್ಮ ದುರ್ವಿಧಿಗಾಗಿ ಶಪಿಸಿಕೊಂಡು ಕಾಲ ನೂಕುವುದು ಅವರ ಪದ್ಧತಿಯಾಗಿತ್ತು. ಅಂತು ಹಾದಿಬಸಪ್ಪ ಮಾತ್ರ ಬದುಕಿಕೊಳ್ಳುತ್ತಿದ್ದ ಎನ್ನಿ. ಈ ಹೆಡಿಗೆ ಪರ್ವದ ಉತ್ಸವ ನನಗೆ ತುಂಬಾ ಹಿಡಿಸಿತ್ತು. ಪದೇ ಪದೇ ಇಂಥ ಉತ್ಸವಗಳು ನಡೆಯುವುದನ್ನು ನಿರೀಕ್ಷಿಸುತ್ತಿದ್ದೆ. ಹೆಡಿಗೆ ಪರ್ವದ ದಿನ ಪಲ್ಲಕ್ಕಿಯ ಮುಂದೆ ಜಾಗಟೆ ಬಾರಿಸುತ್ತ ಹೋಗುವ ಕಾಯಕವನ್ನು ನಾನು ಕೈಗೊಂಡು ತುಂಬಾ ಪ್ರಭಾವಿತನಾಗಿ ಹೋಗುತ್ತಿದ್ದುದು ಈಗಲೂ ಜ್ಞಾಪಕಕ್ಕೆ ಬರುತ್ತದೆ.

### ನಮ್ಮೂರ ಪ್ರತಿಷ್ಠೆಯ ಕುರುಹು ಓಕಳಿಬಂಡಿಯ ಉತ್ಸವ

ಸುಗ್ಗಿಯ ಸಮಯದಲ್ಲಿ ನಮ್ಮೂರ್‍ನಲ್ಲಿ ಹಳಿಬಂಡಿಯನ್ನು ಬಿಗಿಯುವುದು ಒಂದು ಪ್ರತಿಷ್ಠೆಯ ಕುರುಹಾಗಿರುತ್ತಿತ್ತು. ಅದು ವ್ಯವಸಾಯಗಾರರ ಲಕ್ಷ್ಮಿದೇವಿ. ದಿನವೂ ಅದಕ್ಕೆ ಪೂಜೆಮಾಡಿಯೇ ಎತ್ತು ಕಟ್ಟುವುದು ವಾಡಿಕೆ. ಆದರೆ ಹಳಿಬಂಡಿಯನ್ನು ಎಲ್ಲ ವ್ಯವಸಾಯಗಾರರು ಬಿಗಿಯುತ್ತಿರಲಿಲ್ಲ. ಏಕೆಂದರೆ ಅದಕ್ಕೆ ಪ್ರಬಲವಾದ ಎತ್ತು ಬೇಕು. ನಾಲ್ಕು ಎತ್ತು ಕಟ್ಟಿಯೇ ಹೊಗಳಿಂದ ಸೊಪ್ಪೆ, ಹೆಸರು, ತೊಗರಿ ಕಡ್ಡಿಗಳನ್ನು ಹೇರಿ ಕಣಕ್ಕೆ ತಂದು ಒಕ್ಕಲು ಮಾಡಬೇಕಾಗಿತ್ತು. ನಮ್ಮ ಊರಲ್ಲಿ ಹಳಿಬಂಡಿ ಬಿಗಿಯುವವರು ಕೇವಲ ಏಳೆಂಟು ಮನೆತನದವರು ಮಾತ್ರ. ಅವರಲ್ಲಿ ನಮ್ಮ ಮನೆತನದವರೂ ಒಬ್ಬರು. ಈ ಹಳ್ಳಿಬಂಡಿ ಬಿಗಿಯಲು ಚರ್ಮದ ಮಿಣಿ ಕಣ್ಣಿಗಳೇ ಆಗಬೇಕಾಗಿತ್ತು. ನಮ್ಮನೆಯಲ್ಲಿ ನಮ್ಮಜ್ಜನ ಕಾಲದಲ್ಲಿಯೇ ಮಾಡಿಸಿದ್ದ ಸೆಳ್ಳಾ ಮಿಣಿ ಮೊದಲಾದವು ಬೇಕಾದಷ್ಟಿದ್ದವು.

ನನ್ನ ಚಿಕ್ಕಂದಿನಲ್ಲಿ ಆನೆಯಂಥ ನಾಲ್ಕು ಎತ್ತುಗಳು ನಮ್ಮ ಮನೆಯಲ್ಲಿ ಇದ್ದವು. ಮುಕ್ಕಣ್ಣ, ಮಾದೇವ, ಗುರುಪಾದ, ಗದ್ದಿಗೆ - ಎಂದು ಅವಕ್ಕೆ ಹೆಸರು. ಪ್ರಬಲ ಸಾಮರ್ಥ್ಯದ ಎತ್ತುಗಳು. ಮಹಾದೇವ ಎಂಬ ಎತ್ತಿನ ಸಾಮರ್ಥ್ಯ ಅತ್ಯದ್ಭುತ. ಗುರುಪಾದ ಮನೆಯಲ್ಲಿ ಹುಟ್ಟಿದ್ದೆಂದು ಎಲ್ಲರ ವಾತ್ಸಲ್ಯಕ್ಕೆ ಪಾತ್ರವಾಗಿತ್ತು. ನಾವು ರೊಟ್ಟಿ ತಿನ್ನುತ್ತ ತಿನ್ನುತ್ತ ಕೊನೆಕೊನೆಯಲ್ಲಿ ಅರ್ಧಮರ್ಧ ರೊಟ್ಟಿಯನ್ನು ಅದರ ಬಾಯಲ್ಲಿ ತುರುಕಿ ಬರುತ್ತಿದ್ದುದುಂಟು. ಕಾರಹುಣ್ಣಿಮೆ, ಬಸವ ಜಯಂತಿಯಂದು ಮನೆಯ ಒಳಗೆ ಪೂಜೆಗೆ ಪಡಸಾಲೆಯನ್ನು ಹತ್ತಿಸಿಕೊಂಡು ಬರುತ್ತಿದ್ದ ಎತ್ತು ಅದೇ. ಏಕೆಂದರೆ ಮನೆಯಲ್ಲಿ ಹುಟ್ಟಿದ ಮಗನೆಂಬ ಭಾವ. ಅಂದು ಅದರ ಗಂಭೀರತೆಯೇ ಗಂಭೀರತೆ. ಪೂಜೆ ಮಾಡಿಸಿಕೊಂಡು ಎದುರಿಗಿಟ್ಟ ಎಡೆ ತಿಂದು ತಿರುಗಿ ಕೊಟ್ಟಿಗೆಗೆ ಬರುವವರೆಗೆ ಗಂಭೀರವಾಗಿ ಗುರುಪಾದ ವರ್ತಿಸುತ್ತಿತ್ತೆಂದು ಈಗಲೂ ಜ್ಞಾಪಿಸಿಕೊಳ್ಳುತ್ತಿದ್ದೇನೆ. ಒಳ್ಳೆ ಬುದ್ಧಿವಂತ ಮಗನಂತೆ ಗುರುಪಾದ ನಮ್ಮ ಮನೆಯ ಐಶ್ವರ್ಯ ಇದ್ದ ಹಾಗೆ ಇತ್ತು; ಸಾಮರ್ಥ್ಯದಲ್ಲಿ ಕಳಪೆಯಲ್ಲ.

ಮೇಲೆ ಹೇಳಿದ ಶಕ್ತಿಶಾಲಿ ಎತ್ತುಗಳು ನಮ್ಮ ಮನೆಯಲ್ಲಿದ್ದು ವ್ಯವಸಾಯ ಊರ್ಜಿತಾವಸ್ಥೆಯಲ್ಲಿದ್ದ ಕಾರಣ ನಾವೂ ಹಳಿಬಂಡಿ ಬಿಗಿದು ನಮ್ಮ ಮನೆತನದ ಪ್ರತಿಷ್ಠೆ ಉಳಿಸಿಕೊಂಡ ಕಾಲ ಇತ್ತು. ಈ ಹಳಿಬಂಡಿಯನ್ನು ಯುಗಾದಿಯ ಓಕುಳಿಯಾಟ ಮುಗಿಸಿಯೇ ಪುನಃ ಬಿಚ್ಚಿ ಇಡುತ್ತಿದ್ದೆವು.

## ಉಗಾದಿ (ಯುಗಾದಿ) ಹಬ್ಬದ ಓಕಳಿಬಂಡಿ

ಉಗಾದಿ ಇನ್ನೂ ಎರಡು ಮೂರು ದಿನ ಮುಂದೆ ಇದ್ದಂತೆಯೇ ಓಕಳಿಬಂಡಿಯ ಸಡಗರಕ್ಕೆ ಜೋಡಣೆ ಮಾಡಿಕೊಳ್ಳುತ್ತಿದ್ದೆವು. ಎತ್ತುಗಳ ಕೋಡುಗಳನ್ನು ಹೆರೆಸಿ ಬಣ್ಣಹಚ್ಚುವುದು, ಜೂಲುಗಳನ್ನು ಒಗೆಸಿ ಶುಭ್ರಗೊಳಿಸುವುದು. ಎತ್ತುಗಳ ಕೋಡುಗಳನ್ನು ಹುಳಿ ಹಚ್ಚಿ ತಿಕ್ಕಿ ಮಿಂಚುವಂತೆ ಮಾಡುವುದು. ಕೊರಳ ಹುರುಗೆಜ್ಜೆಸರ, ಕೊರಳಲ್ಲಿ ಇಳಿಬಿಡಲು ಚಿಕ್ಕ ಚಿಕ್ಕ ಚಾಮರ ಸರಿಪಡಿಸುವುದು ಇತ್ಯಾದಿ ಕಾರ್ಯಗಳು ನಡೆಯುತ್ತಿದ್ದವು. ಯುಗಾದಿಯ ದಿನ ಸ್ನಾನಾದಿಗಳನ್ನು ಮುಗಿಸಿ ನರೇಗಲ್ಲು ತೋಟಕ್ಕೆ ಹೋಗಿ ಗೊನೆಬಿಟ್ಟ ಬಾಳೆಮರ, ಅಡಿಕೆ ಹಿಂಗಾರ (ಹೊಂಬಾಳೆ), ತೆಂಗಿನ ಗರಿ ಮೊದಲಾದವನ್ನು ತಂದು ಮಧ್ಯಾಹ್ನ ಅವನ್ನೆಲ್ಲ ಬಂಡಿಗೆ ಕಟ್ಟಿ ಬಂಡಿಯನ್ನು ಶೃಂಗರಿಸುತ್ತಿದ್ದೆವು; ವಿವಿಧ ಹೂವುಗಳ ಕುಚ್ಚನ್ನು ಕಟ್ಟುತ್ತಿದ್ದೆವು. ಓಲಗ ಭಜಂತ್ರಿ ಹಲಗೆಮೇಳದವರನ್ನು ಕರೆಸಿ ಸಾಯಂಕಾಲ ನಾಲ್ಕು ಘಂಟೆ ಸುಮಾರಿಗೆ ಬಂಡಿಗೆ ನಮ್ಮ ಅಲಂಕೃತ ನಾಲ್ಕು ಎತ್ತು ಕಟ್ಟಿ ಬಾಣ ಬಿರುಸುಗಳೊಡನೆ ಮೆರವಣಿಗೆ ಸಾಗುತ್ತಿದ್ದವು. ನಾನು ನಮ್ಮ ಮನೆಯ ಹಿರಿಯ ಮಗನಾದ್ದರಿಂದ ನನ್ನನ್ನೂ ಬಂಡಿಯ ಮೂಕಿಯ ಮೇಲೆ ಶುಭ್ರವಸ್ತ್ರಾದಿಗಳನ್ನುಡಿಸಿ ಕುಳ್ಳಿರಿಸುತ್ತಿದ್ದರು. ಪಕ್ಕದಲ್ಲಿ ನಮ್ಮ ಮಾವ ಗುರುಪಾದಪ್ಪ ಎತ್ತುಗಳ ಹಗ್ಗ ಹಿಡಿದು ಕುಳಿರುತ್ತಿದ್ದ. ಗಿಲಕ್‌ಗಿಲಕ್ ಹುರಿಗೆಜ್ಜೆ ಸಪ್ಪಳ ಮಾಡುತ್ತ ನಿಧಾನವಾಗಿ ಬಂಡಿ ಸಾಗುತ್ತಿತ್ತು. ನೋಡಲೂ ಊರ ಜನವೆಲ್ಲ ನೆರೆಯುತ್ತಿತ್ತು. ನನಗಂತೂ ಅಂದು ಬಲು ಹೆಮ್ಮೆ ಎನ್ನಿಸುತ್ತಿತ್ತು.

ಆ ಹೊತ್ತಿಗೆ ಎಲ್ಲರೂ ಬಂಡಿ ಕಟ್ಟುತ್ತಿದ್ದರು ಏಳೆಂಟು ಬಂಡಿಗಳು ಸಾಲುಸಾಲಾಗಿ ಊರ ಹೊರಗಿರುವ ಶಾನುವಾಡ ಬಸವಣ್ಣನ ದೇವಾಲಯದ ಸುತ್ತ ಸಾಲಾಗಿ ನಿಲ್ಲುತ್ತಿದ್ದವು. ಎಲ್ಲಕ್ಕೂ ಮುಂದೆ ಊರಿನ ಹಿರಿಯ ಮನೆತನದವರ ಬಂಡಿ ಇರುತ್ತಿತ್ತು. ಅದರ ಹಿಂದೆಯೇ ಉಳಿದವರ ಬಂಡಿ ಇರಬೇಕು. ಬಂಡಿಯಲ್ಲಿ ದೊಡ್ಡಹಂಡೆ ಇಟ್ಟು, ಅದರಲ್ಲಿ ಹಲಿಗೆ ಬೆಲ್ಲವನ್ನು ಪುಡಿ ಮಾಡಿ ಹಾಕಿ ನೀರು ಸುರಿದು ಪಾನಕವನ್ನು ಕುಡಿಯುವವರಿಗೆಲ್ಲ ಎರೆಯುತ್ತಿದ್ದೆವು. ಬಸವಣ್ಣನ ಪೂಜೆ ಮಾಡಿ ಒಂದು ಸಲ ಗುಡಿಯನ್ನು ಎಲ್ಲ ಬಂಡಿಗಳೂ ಪ್ರದಕ್ಷಿಣೆ ಹಾಕಿ ಆಮೇಲೆ ಮಬ್ಬುಗತ್ತಲಾಗುವವರೆಗೆ ಜಿದ್ದಿನಿಂದ ಬಂಡಿಯ ಓಟ ನಡೆಯುತ್ತಿತ್ತು. ಇದೊಂದು ವೀರರು ಮಾಡುವ ಕೆಲಸ. ಊರ ಜನವೆಲ್ಲ ಈ ನೋಟ ನೋಡಲು ಹೆಣ್ಣು ಗಂಡೆನ್ನದೆ ನೆರೆದಿರುತ್ತಿತ್ತು. ಎರಡೆತ್ತುಗಳನ್ನು ಕಟ್ಟಿ ಬಂಡಿಯನ್ನು ಹೊಲವಾರಿಯ ದಾರಿಯಲ್ಲಿ ಓಡಿಸುವ ಮೇಲಾಟ ರೋಮಾಂಚನಕಾರಿ. ಇದು ಎತ್ತುಗಳ ಸಾಮರ್ಥ್ಯ ನಿಷ್ಕರ್ಷೆ ಮಾಡುವ ಕಾಲವಾಗಿರುತ್ತಿತ್ತು. ಕೊನೆಯಲ್ಲಿ ಊರ ಗೌಡ, ಶಾನುಭೋಗ, ಪಂಚರೇ ಮೊದಲಾದವರು ಇಂಥಿಂಥವರ ಎತ್ತು ಬಹು ಚೆನ್ನಾಗಿ ಓಡಿತೆಂದು ಹೇಳುವವರು. ನಾಲ್ಕು ದಿನ ಊರಿನಲ್ಲಿ ಗೆದ್ದ ಎತ್ತಿನ ಮಾತೇ ಮಾತಾಗಿರುತ್ತಿತ್ತು.

ನಾನು ಐದನೇ ಇಯತ್ತೆ ಓದುವವರೆಗೆ ಸಕ್ರಿಯವಾಗಿ ನಮ್ಮ ಊರಿನ ಮೇಲೆ ಹೇಳಿದ ಎಲ್ಲ ಸಾಂಸ್ಕೃತಿಕ ಧಾರ್ಮಿಕ ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತ ಬಹಳ ಪ್ರಭಾವಿತನಾಗುತ್ತಿದ್ದೆ. ಆ ಸಂಸ್ಕಾರ ನನ್ನ ಭಾವಕೋಶದಲ್ಲಿ ಸುಪ್ತವಾಗಿ ಸುರುಳಿಸುತ್ತಿ ಕುಳಿತಿದೆ. ಸುರುಳಿಯನ್ನು ಬಿಚ್ಚುವುದೇ ತಡ, ಆ ಎಲ್ಲ ಘಟನಾವಳಿಗಳು ನಾ ಮುಂದು ತಾ ಮುಂದಾಗಿ

ಬರುತ್ತವೆ. ಇಂದು ಹಳ್ಳಿಗಳು ಕಲಹದ ಕಾಡಾಗಿವೆ. ವಿಚಿತ್ರ ಸಂಸ್ಕೃತಿ - ಸಂಸ್ಕಾರಗಳು ಬೆಳೆದು ಒಗ್ಗಟ್ಟಿಲ್ಲದೆ, ಹೊಟ್ಟೆಗೂ ಸಮೃದ್ಧ ಊಟ ಉಪಚಾರಗಳಿಲ್ಲದೆ ಹಳ್ಳಿಗರ ಆರೋಗ್ಯ ಬಹು ಬಡವಾಗಿ ಹೋಗಿದೆ. ಸೊಗಸು-ಸಹೃದಯತೆ, ಶಕ್ತಿ - ಶೌರ್ಯ - ವೀರ್ಯ ಪ್ರತಾಪಾದಿಗಳಿಂದ ದೂರ ಎಸೆಯಲ್ಪಟ್ಟಿದ್ದಾರೆ. ನಾಲ್ಕೈದು ಶ್ರೀಮಂತರ ಮನೆಗಳ ಪಕ್ಕದಲ್ಲಿ ಅನೇಕ ಬಡವರ ಮನೆಗಳಾಗಿವೆ. ಒಬ್ಬೊಬ್ಬ ಶ್ರೀಮಂತ ಹಲಕೆಲವರನ್ನು ತನ್ನ ಕಡೆಗೆ ಮಾಡಿಕೊಂಡು ಗುಂಪುಗುಂಪಾಗಿ ಒಡೆದು ಹಳ್ಳಿಯ ಬದುಕಿನಲ್ಲಿ ದ್ವೇಷಾಸೂಯೆ, ಮತೀಯ ಕಲಹಗಳು ಸದಾ ನಡೆಯುತ್ತಿರುವಂತಾಗಿದೆ. ಇದಲ್ಲದೆ ಸಹೃದಯತೆಯಿಂದ ಕೂಡಿದ ಹಳ್ಳಿಗಳು ಎಷ್ಟಿವೆಯೋ ಹೇಳಲಾಗದು. ಹಳ್ಳಿಯಲ್ಲಿ ಜನ ಇಂದು ಹೊಟ್ಟೆಗಿಲ್ಲದೆ ಸಾಯುತ್ತಿಲ್ಲ; ಹೊಟ್ಟೆಕಿಚ್ಚಿನಿಂದ ಸಾಯುತ್ತಿದ್ದಾರೆ. ಈ ಕಾರಣವೋ ಏನೊ ಅಲ್ಲಿ ಜೀವನ ನಿರ್ವಹಿಸಲು ಶಕ್ಯವಿಲ್ಲವಾದವರೆಲ್ಲ ಈಗ ಪಟ್ಟಣಗಳತ್ತ ವಲಸೆ ಹೋಗುವ ಕ್ರಿಯೆ ಬಹಳ ಸಾಗಿದೆ. ಓದಿದವರಂತೂ ಹಳ್ಳಿಯಲ್ಲಿ ನಾಲ್ಕು ದಿನ ಬಾಳುವೆ ಮಾಡಲಾರರು. ಇದೇನೇ ಇರಲಿ, ಇದನ್ನೆಲ್ಲ ಹೇಳುವುದು ನನ್ನ ಕೆಲಸವಲ್ಲ. ಆದರೂ ನಾಲ್ಕಾರು ಅಂದಿನ ಸ್ಥಿತಿಗಳನ್ನು ಹೇಳುವ ಚಪಲ ಅಷ್ಟೆ.

**ಕುಸ್ತಿ ಮತ್ತು ಕುಸ್ತಿಅಖಾಡಗಳು**

ಮುಖ್ಯವಾದ ಒಂದು ವಿಷಯ ಹೇಳುವುದನ್ನೇ ಮರೆತುಬಿಟ್ಟೆ. ಅದೇ ಕುಸ್ತಿಯ ಅಖಾಡಗಳಿಗೆ ತಪ್ಪದೆ ಭೇಟಿಕೊಡುತ್ತಿದ್ದ ನನ್ನ ಒಂದು ದೊಡ್ಡ ಗೀಳು. ನಮ್ಮೂರ್ರಲ್ಲಿ ಒಂದು ಗರಡಿಮನೆ ಇತ್ತು. ಅದನ್ನು ನಮ್ಮ ದೊಡ್ಡಪ್ಪ ನಿಂತು ಕಟ್ಟಿಸಿದ್ದು ಜ್ಞಾಪಕ. ಆಗ ನಾವೆಲ್ಲ ಗರಡೀಮನೆಗೆ [illegible]ತ್ತಿದ್ದೆವು. ನಮ್ಮೂರ್ರಲ್ಲಿ ಏನಿಲ್ಲೆಂದರೂ ಹತ್ತುಹನ್ನೆರಡು ಜನ ಕುಸ್ತೀ ಪಟುಗಳಿದ್ದರು. ಅವರುಗಳಿಗೆಲ್ಲ ನಮ್ಮ ದೊಡ್ಡಪ್ಪ ಕುಸ್ತೀ ಪಟ್ಟು ಕಲಿಸುತ್ತಿದ್ದುದುಂಟು. ನಮ್ಮಜ್ಜ [illegible]ಮ್ಮ ದೊಡ್ಡಪ್ಪ ಮತ್ತು ನಮ್ಮ ಅಪ್ಪ - ಇವರಿಬ್ಬರಿಗೂ ಗರಡೀ ಮನೆಯಲ್ಲಿ ಸಾಧನೆಮಾಡುವುದು, ಕುಸ್ತಿ ಆಡುವುದು - ಇದೇ ಕೆಲಸಕ್ಕೆ ನೇಮಿಸಿದ್ದನಂತೆ. ಕಾರಣ ಹೊಲಕ್ಕೆ ಬಂಕಾಪುರದ ಅನೇಕ ಕಳ್ಳರು ಕಳವು ಮಾಡಲು ಬರುತ್ತಿದ್ದರಂತೆ. ಆ ಅಯೋಗ್ಯರನ್ನು ಹೊಡೆಯುವ ನಿಮಿತ್ತವಂತೆ. ನಮ ದೊಡಪ ಅಪ್ಪ ಇಬ್ಬರಿಗೂ ಹಾಲು ಕುಡಿಯಲು ಎರಡು ದೊಡ್ಡ ಮೇಕೆಗಳನ್ನೇ ಮನೆಯಲ್ಲಿ ಕೊಂಡು ತಂದು ಕಟ್ಟಿದ್ದನಂತೆ. ಅವು ಒಂದೊಂದು ತಂಬಿಗೆ ಹಾಲು ಕೊಡುತ್ತಿದ್ದವಂತೆ. ನಸುಕಿನಲ್ಲಿ ಹಾಲು ಕರೆದು ಆ ಹಾಲಿನಲ್ಲಿ ಬಿಸಿ ಬಿಸಿ ಎರಡು ಮೂರು ಜೋಳದ ರೊಟ್ಟಿಗಳನ್ನು ಕಲಸಿ ತಿಂದು ಹೊಲದ ಕರಿಕೆ ಕಡಿಯಲು ಇಬ್ಬರನ್ನು ನಮ್ಮಜ್ಜ ಕಳಿಸುತ್ತಿದ್ದನಂತೆ. ಹತ್ತು ಘಂಟೆಗೆ ಜೋಳದ ಅಂಬಲಿ - ಮಜ್ಜಿಗೆ ಊಟ ಹೊಲಕ್ಕೇ. ಊಟಮಾಡಿ ಕರಿಕೆ ಕಡಿದು ಒಂದು ಗಂಟೆ ಹೊತ್ತಿಗೆ ಅವರು ಮನೆಗೆ ಬರಬೇಕು. ಹೀಗೆ ಬೆಳೆಸಿದ್ದನಂತೆ ಇವರನ್ನು. ನಮ್ಮ ದೊಡ್ಡಪ್ಪ ಒಳ್ಳೆ ಪ್ರಖ್ಯಾತ 'ಪೈಲ್‌ವಾನ್' ಎಂಬ ಬಿರುದು ಗಳಿಸಿದ್ದನಂತೆ. ನಾನು ದೊಡ್ಡವನಾಗುವ ಹೊತ್ತಿಗೆ ದೊಡ್ಡಪ್ಪ ಮತ್ತು ಅಪ್ಪ ಇವ[illegible]ಬ್ಬರೂ ಕುಸ್ತಿ ಬಿಟ್ಟಿದ್ದರು. ಇನ್ನೊಬ್ಬ ನಮ್ಮ ದೊಡ್ಡಪ್ಪನ ಮಗ ಸರಸಪ್ಪ ಎಂಬುವನು ಪ್ರಖ್ಯಾತ ಕುಸ್ತಿಪಟುವಾಗಿದ್ದ ಇವನಿಗೆ ಕುಸ್ತಿ ಕಲಿಸಿದವ ನಮ್ಮ ದೊಡ್ಡಪ್ಪನೇ.

ಸಾಮಾನ್ಯವಾಗಿ ಆಗ ಎಲ್ಲ ಊರುಗಳಲ್ಲೂ ಗರಡೀ ಸಾಧನೆ, ಕುಸ್ತಿ ಪಟುಗಳ ತಯಾರಿ ಇರುತ್ತಿತ್ತು. ಹೀಗಾಗಿ ಸಾಮಾನ್ಯವಾಗಿ ಆಗ ಸೇರುತ್ತಿದ್ದ ಎಲ್ಲ ಜಾತ್ರೆಗಳಲ್ಲೂ ಕುಸ್ತಿ ಅಖಾಡಗಳು ಇದ್ದೇ ಇರುತ್ತಿದ್ದವು. ಅವುಗಳಲ್ಲಿ ಪ್ರತಿವರ್ಷ ನರೇಗಲ್ಲು ಮತ್ತು ಬಂಕಾಪುರಗಳಲ್ಲಿ ನಡೆಯುವ

ಕುಸ್ತಿ ಆಖಾಡಗಳು ಬಹಳ ಪ್ರಸಿದ್ಧವಾದವು. ಅವು ಮಹಮ್ಮದೀಯರ ಉರುಸುಗಳ ಕಾಲದಲ್ಲಿ ನಡೆಯುತ್ತಿದ್ದವು. ಧಾರವಾಡ ಜಿಲ್ಲೆಯ ಪ್ರಸಿದ್ಧ ಕುಸ್ತಿಪಟುಗಳ ಕುಸ್ತಿ ಈ ಆಖಾಡಗಳಲ್ಲಿ ವಿಶೇಷ ರೀತಿಯಿಂದ ಜರುಗುತ್ತಿದ್ದವು. ನಾನು ಆರೇಳು ವರ್ಷದ ಹುಡುಗನಿದ್ದಾಗಿನಿಂದಲೂ ನಮ್ಮ ದೊಡ್ಡಪ್ಪನ ಸಂಗಡವಾಗಲಿ, ಅಪ್ಪನ ಸಂಗಡವಾಗಲಿ ಕುಸ್ತಿ ನೋಡಲು ಚೈತ್ರ ವೈಶಾಖಗಳ ಉರಿಯುತ್ತಿರುವ ಬಿಸಿಲಲ್ಲಿ ಸಾಮಾನ್ಯವಾಗಿ ಮಧ್ಯಾಹ್ನ ಎರಡು ಘಂಟೆಯಿಂದ ಸಾಯಂಕಾಲ ಆರು ಘಂಟೆಯವರೆಗೆ ನಡೆಯುವ ವೈವಿಧ್ಯಮಯ ಕುಸ್ತಿಗಳು ನನ್ನಲ್ಲಿ ಒಳ್ಳೆಯ ಹುಮ್ಮಸ್ಸನ್ನೇ ಉಂಟುಮಾಡುತ್ತಿದ್ದವು.

ನಮ್ಮೂರಿನ ಗರಡೀ ಮನೆಯಲ್ಲಿ ದಿನವೂ ಥಾಲಿಮ್ (ಅಭ್ಯಾಸ), ಸಾಮು, ಬಸಿಗಿ, ಲೋಡು ತಿರುವುವುದು, ಕುಸ್ತಿ ಪಟ್ಟು ಕಲಿಯುವುದು - ಏನೆಲ್ಲ ನಡೆಯುತ್ತಿತ್ತು. ನಾನೂ ನನ್ನ ಎರಡು ಮೂರುಜನ ಮಿತ್ರರೊಡನೆ ಗರಡಿ ಮನೆಗೆ ಆಗಾಗ ಹೋಗುತ್ತಿದ್ದುದುಂಟು. ಹೋಗಿ ಮೈಗೆಲ್ಲ ಕಾವಿಹುಡಿ ಹಚ್ಚಿಕೊಂಡು ಸಾಮು, ಬಸಗಿ ಏನೇನೋ ಮಾಡಿ ಮೈ ತಿಕ್ಕಿಕೊಂಡು ಬರುತ್ತಿದ್ದೆ. ಅಂಗಿ ಪಂಜೆಗಳೂ ಕಾವಿಯ ಧೂಳಿನಿಂದ ಕೂಡಿರುತ್ತಿದ್ದವು. ಬೇಕೆಂದೇ ನಮ್ಮ ಪಂಚೆ ಅಂಗಿಗಳಿಗೆ ಕಾವಿ ಧೂಳು ಹಚ್ಚಿಕೊಳ್ಳುತ್ತಿದ್ದೆವು. ಗರಡಿ ಮನೆಗೆ ಹೋಗಿ ಬಂದವರು ಅಥವಾ ಬರುವವರು ಎಂಬುದಕ್ಕೆ ಇದೇ ಯೂನಿಫಾರ್ಮ್. ಬಣ್ಣದ ಕಾವಿ ಪಂಚೆ-ಅಂಗಿ ತೊಟ್ಟವರೆಲ್ಲ ಗರಡಿ ಮನೆ ಹುಡುಗರೆಂದೇ ಎಲ್ಲರ ಭಾವನೆಯಾಗಿತ್ತು. ಗರಡಿಮನೆಗೆ ಆಗಾಗ ನಮ್ಮದೊಡ್ಡಪ್ಪನನ್ನು ಹೊಸ ಹೊಸ ಕುಸ್ತಿ ಹುಡುಗರು ಹಿಡಿತ (ಪಟ್ಟು) ಕಲಿಸಲು ಕರೆದುಕೊಂಡು ಬಂದು ಕಲಿಯುತ್ತಿದ್ದರು. ಆ ಸಾಮು, ಬಸಿಗಿ, ಲೋಡು ತಿರುವುವುದು ಇತ್ಯಾದಿ ಸಾಧನೆ ನಡೆಯುವಾಗ ಗರಡಿಮನೆ ಹಾಡುಗಳೆಂದೇ ಪ್ರಸಿದ್ಧವಾದ ಕೆಲವು ಹಾಡು ಹಾಡುತ್ತಿದ್ದರು. ಆ ಹಾಡುಗಳು ನಾಟಕದ ಅಥವಾ ದೊಡ್ಡಾಟ, ಸಣ್ಣಾಟಗಳ ಹಾಡಿಗಿಂತ ಭಿನ್ನ. ಇವಕ್ಕೆ ಇವುಗಳದೇ ಆದ ರಾಗವಿರುತ್ತಿತ್ತು. ನಮಗೆ ಆ ಹಾಡು ವಿಚಿತ್ರವೆನ್ನಿಸುತ್ತಿತ್ತು. ಅವುಗಳ ಪೂರ್ಣಪಾಠ ನನಗೆ ಈಗ ಮರೆತು ಹೋಗಿದೆ. ಆದರೂ ಮೊದಲ ಚುಟಿಗಿ ಹೀಗಿರುತ್ತಿತ್ತು :-

1) ಬಸಿಗಿ ತೆಗೆಯುವಾಗ - ಹೈಸ್‌ಬಾನ್ - ವಂದಿರೇ, ತಮ್ಮ ಬಂದ ಗರುಡಿಗೆ - ಹೈಸ್‌ಬಾನ್ ................

2) ಸಾಲಾಗಿ ನಿಂತುಕೊಂಡು - ಹೊಯ್‌ಪಾದೇsss ಒಂದಣ್ಣ sss ಹಾಯ್ ಒಂದಕ್ಕೆ ಬಂದಾ ತಮ್ಮ..........

-ಹೀಗೆ ಉದ್ಧುದ್ದನಾಗಿ ಹಾಡಿ ವ್ಯಾಯಾಮ ಮಾಡಿ, ಮೈಯೆಲ್ಲ ಬೆವೆತ ಮೇಲೆ ಕಾಲಲ್ಲಿರುವ ಕಾವಿಯ ಹುಡಿಯನ್ನು ಮೈಗೆಲ್ಲ ಉಗ್ಗಿಕೊಂಡು ಬೆವರನ್ನು ಕಳೆದು ಮೈಯನ್ನು ಚನ್ನಾಗಿ ತಿಕ್ಕಿಕೊಂಡು ಬಟ್ಟೆ ತೊಟ್ಟುಕೊಂಡು ಮನೆಗೆ ಹೋಗುತ್ತಿದ್ದರು. ಮೈಯ ಕಾವಿಯ ಕೊಳೆ ಹೋಗಬೇಕಾದರೆ ಬೆಳಿಗ್ಗೆ ಹೊಳೆಯಲ್ಲಿ ಈಸಿ ಮೈ ತಿಕ್ಕಿಕೊಂಡಾಗಲೇ. ನಾವೂ ಮೋಜಿಗಾಗಿ ಹೀಗೆ ಮಾಡುತ್ತಿದ್ದೂ ಉಂಟು. ಆಗ ಕುಸ್ತಿಪಟುಗಳೆಲ್ಲ ಸಾಮಾನ್ಯವಾಗಿ ಕಾವಿಬಣ್ಣದ ಉಡಿಗೆತೊಡಿಗೆಯವರೇ ಆಗಿರುತ್ತಿದ್ದರು. ಅವರ ಬಣ್ಣ ನೋಡಿ "ಓಹೋ! ಕುಸ್ತಿ ಆಳು ಇದು" ಎಂದು ಜನ ಹುಬ್ಬೇರಿಸಿ ಅಂಥವರನ್ನು ನೋಡಿ ಅನ್ನುತ್ತ ಚೇಷ್ಟೆಯ ನಗೆಯನ್ನೋ, ಸಂತೋಷದ ಮೆಚ್ಚುಗೆಯನ್ನೊ ಸೂಚಿಸುತ್ತಿದ್ದುದುಂಟು. ಕೆಲವರು ನರಪೇತಲರೂ ಕಾವಿಧೂಳು ಮೆತ್ತಿದ

ಉಡಿಗೆ ತೊಟ್ಟುಕೊಂಡು ತಿರುಗಾಡುತ್ತಿದ್ದರಷ್ಟೆ. ಅವರನ್ನು ಕಂಡು ಚೇಷ್ಟೆಯಿಂದ ಓಹೋ! ಕುಸ್ತಿ ಆಳು ಬಂತ್ರೆಪೊ ಸರೀರಿ! ದಾರಿ ಬಿಡ್ರಿ!! ಎಂದು ಚೇಷ್ಟೆ ಮಾಡಿದ್ದೂ ಕಂಡಿದ್ದೇನೆ. ಇನ್ನು ಕೆಲವರು ಒಳ್ಳೆ ಮೈಕಟ್ಟಿನಿಂದ ಮುಖದ ತೇಜಸ್ಸಿನಿಂದ ಪ್ರಸಿದ್ಧ ಕುಸ್ತಿಪಟುವೆಂದು ಖ್ಯಾತನಾಮರಾಗಿದ್ದವರನ್ನು ಕಂಡು ಗೌರವದಿಂದ ಕಂಡು ಮಾತನಾಡಿಸಿದ್ದನ್ನು ನೋಡಿದ್ದೇನೆ. ನಮ್ಮೂರ್ರ ಕುಸ್ತಿಪಟು ಕುರುವತ್ತೆಪ್ಪನವರ 'ಗದಿಗ್ಯಾ' ಪ್ರಖ್ಯಾತ ಕುಸ್ತಿಪಟು. ಅವನಿಗೆ ನಮ್ಮೂರ್ರು ಮತ್ತು ಪರಸ್ಥಳಗಳೆರಡರಲ್ಲೂ ಜನ ಗೌರವಿಸುತ್ತಿದ್ದುದುಂಟು ಅವನು ತನಗಿಂತ ಎರಡು ಪಟ್ಟು ಮೈಕಟ್ಟುಳ್ಳ ಕುಸ್ತಿಪಟುಗಳನ್ನು ಗೆದ್ದುಬಂದ ಎಷ್ಟೋ ಉದಾಹರಣೆಗಳುಂಟು. ಹೀಗಾಗಿ ಇವನೊಡನೆ ಕುಸ್ತಿಗೆ ಬೀಳಲು ಹೆದರುತ್ತಿದ್ದರು. ಸಣ್ಣಸಣ್ಣ ಅಖಾಡಗಳಲ್ಲಿ ಇವನೊಡನೆ ಕುಸ್ತಿ ಆಡಲು ಜನಗಳೇ ಇರುತ್ತಿರಲಿಲ್ಲವಾಗಿ 'ಕಡೆ' ಇವನ ಪಾಲಾಗಿಯೇ ಇರುತ್ತಿತ್ತು.

ನಮ್ಮ ಭಾಗದಲ್ಲಿ ಪ್ರಖ್ಯಾತ ಕುಸ್ತಿಪಟುವೆಂದರೆ ಸವಣೂರು ತೋಪ್ಯಾ, ಬಂಕಾಪುರದ ಬಲ್ಯಾನ ಮಗ (ಹೆಸರು ಮರೆತಿದೆ), ನಮ್ಮೂರ್ರ ಗದಿಗ್ಯಾ - ಹೀಗೆ ಅನೇಕರ ಹೆಸರು ಹೇಳಲಾಗುತ್ತಿತ್ತು. ಸವಣೂರು ತೋಪ್ಯಾ ಚಿಕ್ಕಚಿಕ್ಕ ಆಖಾಡಗಳಿಗೆ ಬರುತ್ತಿದ್ದಿಲ್ಲ. ಅವನು ದೊಡ್ಡದರ್ಜೆಗೆ ಏರಿಬಿಟ್ಟಿದ್ದ. ಬಂಕಾಪುರ ಆಖಾಡಕ್ಕೆ ಮಾತ್ರ ಆಗಾಗ ಬರುತ್ತಿದ್ದ. ಅವನು ಬರುತ್ತಾನೆಂದು ಸುದ್ದಿಯಾದರೆ ಸಾಕು, ಜನ ಜಂಗುಳಿಯೋ ಜಂಗುಳಿ. ಅವನು ತನಗೆ ಜೊತೆ ಹೊಂದಿಸಲು ಆಖಾಡದ ಸುತ್ತ ಒಂದು ಸುತ್ತು ಬಂದರೆ ಅವನೊಡನೆ ಕುಸ್ತಿ ಆಡಲು ಯಾರೂ ಏಳುತ್ತಲೇ ಇರಲಿಲ್ಲ. ಆದ್ದರಿಂದಲೇ ಅವನು ಯಾವ ಆಖಾಡಕ್ಕೆ ಹೋಗಲಿ ಬೆಳ್ಳಿಯ ಕಡೆಯಾಗಲಿ, ಬಂಗಾರದ ಕಡೆಯಾಗಲಿ ಅವನ ಪಾಲಾಗುತ್ತಿತ್ತು. ಕಡೆಯ ಜೊತೆಗೆ ಅವನಿಗೆ ಕೊಡಬೇಕಾದ ಗೌರವ ಸಂಭಾವನೆ ಅವನು ಕುಸ್ತಿ ಆಡದಿದ್ದರೂ ಕೊಡಲೇಬೇಕು. ಅದು ಆಖಾಡ ಮರ್ಯಾದೆ. ತನ್ನ ಜೊತೆಗೆ ಆಡಲು ಯಾರೂ ಏಳದಿದ್ದಾಗ ಅವನು ಅಂಗಿ ಬಿಚ್ಚಿ, ಚೆಡ್ಡಿಯಲ್ಲಿ ಒಂದೆರಡು ಉಟಾಬಸಿಗಿ, ಸಾಮು ತೋರಿಸಿ ಸೆಡ್ಡು ಹೊಡೆದು ಅಂಗಿ ಹಾಕಿಕೊಳ್ಳಬೇಕಾಗಿತ್ತು. ಇದಕ್ಕೆ ಮೈ ತೋರಿಸುವುದು ಎನ್ನುತ್ತಿದ್ದರು. ನಮ್ಮೂರ್ರ ಯಾವುದೇ ಆಖಾಡದಿಂದ ಕುಸ್ತಿಯಲ್ಲಿ ಗೆದ್ದು ಬರಲಿ, ಅವರನ್ನು ಅಗಸಿಬಾಗಿಲಲ್ಲಿ ಊರಿನ ಜನವೆಲ್ಲ ಎದುರ್ಗೊಂಡು ಹಲಗೆಗಳ ಬಡಿತದೊಂದಿಗೆ ಊರಿನಲ್ಲಿ ಎಲ್ಲ ದೇವಾಲಯಗಳಿಗೂ ಕರೆದುಕೊಂಡು ಬಂದು ಸನ್ಮಾನ ಮಾಡುತ್ತಿದ್ದರು. ನಮ್ಮೂರ್ರ ಕುರುವತ್ತೆಣ್ಣನವರ ಗದಿಗ್ಯಾ, ನಮ್ಮಣ್ಣ ಪರಿಶ್ಯಾ ಇವರಿಗೆಲ್ಲ ಸನ್ಮಾನವಾದದ್ದನ್ನು ನಾನು ಕಣ್ಣಿಟ್ಟು ನೋಡಿದ್ದೇನೆ. ನಮ್ಮ ಮನೆಯವರಿಗೆಲ್ಲ ಬಹಳ ಚಿಂತೆಗೊಳಗು ಮಾಡಿದ ವಿಷಯವೆಂದರೆ ನಮ್ಮ ಅಣ್ಣ ಪರಸಪ್ಪ (ಪರಿಶ್ಯಾ) ಕೂಡಲ ಜಾತ್ರೆಯಲ್ಲಿ 1931ರಲ್ಲಿ ನಡೆದ ಟಿಕೆಟ್ ಕುಸ್ತಿಯ ಆಖಾಡದಲ್ಲಿ ಮಾತ್ರ ನಂದ್ಯಾಲದ ಓರ್ವ ಸಾಮಾನ್ಯ ಹುಡುಗನಿಂದ ಸೋಲು ಅನುಭವಿಸಿದ್ದು. ನಮ್ಮ ದೊಡ್ಡಪ್ಪನಿಗೆ ಆ ಸಮಯದಲ್ಲಿ ಮೂರು ನಾಲ್ಕು ದಿನ ಕೂಳು ಸವಿಹತ್ತಲಿಲ್ಲವಂತೆ. ಈ ಮಾತನ್ನು ಅವನು ಅನ್ನುತ್ತಿದ್ದುದು ಜ್ಞಾಪಕ. ಟಿಕೇಟಿನ ಕುಸ್ತಿ ಎಂದರೆ ಕುಸ್ತಿ ಜೊತೆ ಇಂದು ನಿಷ್ಕರ್ಷೆ. ಆದರೆ ಒಂದು ತಿಂಗಳವರೆಗೆ ಅವರಿಗೆ ಸಾಧನೆ ಮಾಡಲು ಖುರಾಕು ತಿನ್ನಲು (ಕೊಬರಿ,ಉತ್ತತ್ತಿ, ಬಾದಾಮಿ ಮೊದಲಾದ ಪೌಷ್ಟಿಕ ವಸ್ತುಗಳನ್ನು ತಿನ್ನಲು) ಮುಂಗಡವಾಗಿ ಸಾಕಾಗುವಷ್ಟು ಹಣಕೊಟ್ಟು ತಿಂಗಳ ನಂತರ ಕುಸ್ತಿಯ ಅಖಾಡವನ್ನು ನಿರ್ಮಿಸುತ್ತಿದ್ದರು. ಭವ್ಯವಾದ ಅಖಾಡಗಳು ಅವು. ಹಣಕೊಟ್ಟು ಕುಸ್ತಿ ನೋಡಲು ಹೋಗಬೇಕಾದ ಅಖಾಡಗಳು. ಉಳಿದ ಅಖಾಡಗಳಂತೆ ಬೈಲು ಅಖಾಡಗಳು ಇವು ಅಲ್ಲ. ಅಂಥ ಮಹತ್ವದ ಆಖಾಡದಲ್ಲಿ

ಪರಿಶ್ಯಾ ಸೋತು ಬಂದರೆ ಅದು ಇಡೀ ಊರಿಗಾದ ಸೋಲೇ ಎಂದು ಊರಿನ ಎಲ್ಲ ಜನ ಭಾವಿಸುತ್ತಿದ್ದರು. ಪರಿಶ್ಯಾ ನಮ್ಮ ಇನ್ನೊಬ್ಬ ದೊಡ್ಡಪ್ಪನ ಮಗ. ಅದು ನಮ್ಮ ಮನೆತನಕ್ಕೇ ಅಪಮಾನವಾಯಿತಲ್ಲ ಎಂಬ ಕೊರಗು ನಮ್ಮ ದೊಡ್ಡಪ್ಪನಿಗೆ. ಕೂಡಲ ಜಾತ್ರೆಯಲ್ಲಿ 1931ರಲ್ಲಿ ನಡೆದ ಬಹುದೊಡ್ಡ ಪ್ರಮಾಣದ ಈ ಟಿಕೇಟ್ ತಕ್ಕೊಂಡು ಹೋಗಿ ನೋಡಬೇಕಾದ ಕುಸ್ತಿ ಅಖಾಡದಲ್ಲಿ ಈತನನ್ನು ಗೆಲ್ಲಿಸಿಯೇ ತೀರಬೇಕೆಂದು ನಮ್ಮ ದೊಡ್ಡಪ್ಪ ಒಂದು ತಿಂಗಳಿಂದಲೂ ತಾಲಿಮ್ ಮಾಡಿಸಿದ್ದ; ಪಟ್ಟುಗಳನ್ನು ಕಲಿಸಿದ್ದ. ದಿನಾಲು ಹಳಿಬಂಡಿಗಾಲಿ ಓಡಿಸುವುದು ಚಕ್ಕಡಿಯ ಎರಡು ಗಾಲಿಗಳನ್ನು ಏಕಕಾಲದಲ್ಲಿ ಓಡಿಸುವುದು ಮೊದಲಾದ ಅಭ್ಯಾಸ ಮಾಡಿಸಿದ್ದ. ದಿನಾಲು ಕೊಬ್ರಿ, ಉತ್ತತ್ತಿ, ಚಿನ್ನಿಸಕ್ರಿ, ತುಪ್ಪ ಇತ್ಯಾದಿ ಖುರಾಕು ತಿನ್ನಿಸುತ್ತ ಇದ್ದರೂ ಸೋತು ಬಂದನಲ್ಲಾ ಎಂಬ ಕೊರಗು.

ಹೀಗೆ ನನಗೆ ಬಾಲ್ಯದಿಂದ ಬೆಳೆದುಬಂದ ಕುಸ್ತಿ ಅಖಾಡಗಳ ಸಂದರ್ಶನ, ಆ ನೋಟದಿಂದ ಅನುಭವಿಸುತ್ತಿದ್ದ ಸಂತೋಷಗಳು ನಾನು ನಮ್ಮೂರು ಬಿಟ್ಟು ಉಪಾಧ್ಯಾಯ ವೃತ್ತಿಗೆ ಪರಸ್ಥಳಕ್ಕೆ ಹೋಗುವವರೆಗೂ ಇತ್ತು. ಅನಂತರ ನನ್ನ ಅಭಿರುಚಿಗಳು ಏನಿದ್ದರೂ ಸಂಗೀತ, ನಾಟಕ, ದೊಡ್ಡಾಟ-ಸಣ್ಣಾಟ ಇವುಗಳತ್ತ ತಿರುಗಿಹೋಯಿತು. ಆ ಕಾಲಕ್ಕಾಗಲೆ ಕುಸ್ತಿಯ ಅಖಾಡಗಳು ಸೇರುವುದು ಕಡಿಮೆಯಾಗುತ್ತ ಬಂದಿತ್ತು. ಈಗಂತೂ ಈ ಅಖಾಡಗಳು ಸೇರುವುದೇ ನಿಂತಿದೆ. ಕುಸ್ತಿಪಟುಗಳು ಹಳ್ಳಿಗಳಲ್ಲಿ ಕಡಿಮೆ ಆಗುತ್ತಿರುವುದೂ ಕಾರಣವಿರಬೇಕು. ವಿವಿಧ ದುಶ್ಚಟಗಳ ಕಾರಣವಾಗಿ ಹಳ್ಳಿಹುಡುಗರು ಈಗ ನರಪೇತಲರಾಗುತ್ತಿರುವುದು ವಿಷಾದದ ಸಂಗತಿ.

**ಕೂಡಲ ಜಾತ್ರೆಯ ಸೊಗಸು**

ಮುಖ್ಯವಾಗಿ ನಾನು ಇಲ್ಲಿಯೇ ಇನ್ನೊಂದು ವಿಷಯ ಪ್ರಸ್ತಾಪಿಸಲೇಬೇಕು. ಅದೇ ಕೂಡಲಜಾತ್ರೆಯ ಪ್ರಸ್ತಾಪ. ಈ ಜಾತ್ರೆಯ ಬಗೆಗೆ ಹಿಂದೆ ಅಷ್ಟು ಇಷ್ಟು ಹೇಳಿದ್ದೇನೆ. ಕೂಡಲಜಾತ್ರೆ ಬಗ್ಗೆ ಇಷ್ಟೇಕೆ ಹೇಳುತ್ತಿರಿ ಎಂದು ನೀವು ಕೇಳಬಹುದು. ನನ್ನ ಎಲ್ಲ ವಿಶೇಷ ಜ್ಞಾನಕ್ಕೆ ಅಂಕುರಾರ್ಪಣೆ ಮಾಡಿದ್ದು ಈ ಕೂಡಲ ಜಾತ್ರೆಯೇ. ಅದರ ನೆನಪುಗಳು ಅನಂತ. ಹೇಳುವುದು ಬಹಳ, ಹೇಳಿದ್ದು ಕಡಿಮೆ, ಹೇಳುವುದು ಇನ್ನು ಇದೆ. ಬೇಸರಪಟ್ಟುಕೊಳ್ಳದೆ ಕೇಳಿ : ನಮ್ಮೂರಿಂದ ನಾಲ್ಕೈದು ಫರ್ಲಾಂಗಿನಲ್ಲಿಯೇ ಕೂಡಲ ಸಂಗಮೇಶ್ವರ ದೇವಾಲಯ. ದೇವಾಲಯದಿಂದ ಅರ್ಧಫರ್ಲಾಂಗು ದೂರದಲ್ಲಿ ಕೂಡಲ ಊರು. ಸಂಗಮೇಶ್ವರ ದೇವಾಲಯದಿಂದ ಅರ್ಧಫರ್ಲಾಂಗ್ ದೂರದಲ್ಲಿ ಧರ್ಮಾ ಮತ್ತು ವರದಾ ಎಂಬ ನದಿಗಳು ಕೂಡಿವೆ. ಧರ್ಮಾನದಿ ದೊಡ್ಡದೇನೂ ಅಲ್ಲ ಆದರೂ ವಿಜಯನಗರ ಅರಸರ ಕಾಲದಿಂದಲೂ ಇದರ ಇತಿಹಾಸ ಇದೆ. ಈ ಚಿಕ್ಕನದಿ ಶಿರ್ಶಿಯ ಹತ್ತಿರದ ಇಸಳೂರು ಕೆರೆಯಿಂದ ಹುಟ್ಟಿ ಹಾನಗಲ್ಲು ಪಕ್ಕದಲ್ಲಿಯೇ ಹರಿದು ಸುಮಾರು ಮೂವತ್ತು-ಮೂವತ್ತೈದು ಮೈಲು ಹರಿದು ಬರುವ ಮಾರ್ಗದಲ್ಲಿ ಮಂತಿಗೆ ಎಂಬ ಊರ ಹತ್ತಿರ ಒಂದು ಒಡ್ಡನ್ನು ವಿಜಯ ನಗರದ ಅರಸರ ಕಾಲದಲ್ಲಿಯೇ ಕಟ್ಟಿಸಿಕೊಂಡಿದೆ. ಮುಂದೆ ಕಂಚೀನೆಗಳೂರು ಎಂಬ ಊರ ಹತ್ತಿರ ಬ್ರಿಟಿಷರ ಕಾಲದಲ್ಲಿ ಒಂದು ಚಿಕ್ಕ ಒಡ್ಡನ್ನು ಕಟ್ಟಿಸಿಕೊಂಡಿದೆ. ಆದ್ದರಿಂದಲೇ ಈ ನದಿಗೆ ಧರ್ಮಾ ಎಂಬ ಹೆಸರಂತೆ. ವರದಾ ಹೊಳೆ ಯಾವ ಒಡ್ಡನ್ನೂ ಕಟ್ಟಿಸಿಕೊಂಡಿಲ್ಲ. ವ್ಯರ್ಥವಾಗಿ ಹರಿದುಹೋಗಿ ಗಳಗನಾಥ ಹತ್ತಿರ ತುಂಗಭದ್ರಾ

ನದಿಯನ್ನು ಸೇರುವ ಒಂದು ಚಿಕ್ಕ ಹೊಳೆ. ಆದರೂ ಧರ್ಮಾಕ್ಕಿಂತ ದೊಡ್ಡದು. ವರದಾ ಹುಟ್ಟುವುದು ಸಾಗರ (ಶಿವಮೊಗ್ಗ ಜಿಲ್ಲೆ) ದಿಂದ ನಾಲ್ಕುಮೈಲು ದೂರದಲ್ಲಿರುವ ಪಾರ್ವತಿ ದೇವಾಲಯದ ಹತ್ತಿರದಲ್ಲಿ. ಪ್ರಸಿದ್ಧ ಬನವಾಸಿ ಇರುವುದು ಇದರ ದಂಡೆಯ ಮೇಲೆಯೇ.

ಧರ್ಮಾ-ವರದಾ ಸಂಗಮ ಸ್ಥಳದಲ್ಲಿ ನಮ್ಮ ಬಾಲ್ಯದ ಕಾಲದಲ್ಲಿ ಸೇರುತ್ತಿದ್ದ ಜಾತ್ರೆ ಮಾತ್ರ ತುಂಬಾ ಪ್ರಸಿದ್ಧ. ಧಾರವಾಡ ಜಿಲ್ಲೆಯಲ್ಲೇ ಇಂಥ ದೊಡ್ಡ ಜಾತ್ರೆ ಇನ್ನೆಲ್ಲೂ ಸೇರುತ್ತಿರಲಿಲ್ಲ. ಧಾರವಾಡ, ಶಿವಮೊಗ್ಗ, ಕಾರವಾರ ಜಿಲ್ಲೆಯ ಜನಗಳು ಇಲ್ಲಿ ಸೇರುತ್ತಿದ್ದರು. ಎತ್ತಿನ ಪರಿಷೆಯಂತೂ ಪ್ರಖ್ಯಾತ. ಇಲ್ಲಿ ಎತ್ತು ಕೊಳ್ಳಲು ಆಗ ಬಹುದೂರ ದೂರದಿಂದ ಜನಗಳು ಬರುತ್ತಿದ್ದರು. ಒಳ್ಳೆಯ ಜಾತಿಯ ಆನೆಗಳಂಥ ಎತ್ತುಗಳು ಇಲ್ಲಿ ನೆರೆಯುತ್ತಿದ್ದವೆನ್ನುವುದು ಉತ್ಪ್ರೇಕ್ಷೆಯಲ್ಲ. ಮೈಸೂರು ದೇಶದಿಂದ ಸಾವಿರಾರು ಹಿಂಡು ಎತ್ತುಗಳು ಈ ಜಾತ್ರೆಗೆ ಬಂದು ಸೇರುತ್ತಿದ್ದವು.

ಜಾತ್ರೆ ಸೇರುತ್ತಿದ್ದುದು ಯುಗಾದಿಹಬ್ಬದ ಮರುದಿನದಿಂದ. ಯುಗಾದಿ ದಿನ ಸಂಗಮೇಶ್ವರ ದೇವರ ಹೂವಿನ ತೇರು ಎಳೆಯಲ್ಪಡುತ್ತಿತ್ತು. ಯುಗಾದಿಯ ಮರುದಿನವೇ ನಮ್ಮ ಜಿಲ್ಲೆಯಲ್ಲೆಲ್ಲ ಪ್ರಖ್ಯಾತವಾದ ದೊಡ್ಡತೇರು ಎಳೆಯುತ್ತಿತ್ತು. ತೇರು ಎಳೆಯುತ್ತಿದ್ದುದು ಬೆಳಗಿನ 4 ಘಂಟೆಯ ಉಷಃಕಾಲದಲ್ಲಿ. ಆ ತೇರು ನೋಡಲು ನಾವು ನಸುಕಿನಲ್ಲಿ ಎದ್ದು ತೊಗರಿಕಡ್ಡಿ ಅಥವಾ ಪುಂಡಿಕಡ್ಡಿ ಸಿವುಡುಗಳನ್ನು ಉರಿಸಿಕೊಂಡು ಆ ಬೆಳಕಿನಲ್ಲಿ ಕೇಕೆ ಹಾಕುತ್ತ ಹಿಂಡುಹಿಂಡಾಗಿ ಹೋಗುತ್ತಿದ್ದೆವು. ಸುತ್ತಮತ್ತಣ ಹತ್ತಿಪ್ಪತ್ತು ಊರುಗಳವರು ನಸುಕಿನಲ್ಲಿ ಎದ್ದು ನಮ್ಮ ಹಾಗೆ ಸಿವುಡುಗಳನ್ನು ಉರಿಸಿಕೊಂಡು ಕೇಕೆಹಾಕುತ್ತ ಬರುತ್ತಿದ್ದರು. ಎತ್ತೆತ್ತ ನೋಡಿದರೂ ಆ ನಸುಕಿನಲ್ಲಿ ಸಾಲು ಸಾಲು ಸಿವುಡು ಉರಿಯ ಬೆಳಕೇ ಬೆಳಕಾಗಿರುತ್ತಿತ್ತು. ಇದೇ ನಮಗೆ ಬಹು ಮೋಜಿನ ನೋಟವಾಗಿರುತ್ತಿತ್ತು. ಇಪ್ಪತ್ತು ಮೂವತ್ತು ಊರುಗಳ ನಂದೀ ಕೋಲುಗಳು ಸಾಲಾಗಿ ತೇರಿನ ಮುಂದೆ ನಿಲ್ಲಿಸಲ್ಪಡುತ್ತಿದ್ದವು. ತೆವರಮೆಳ್ಳಿಳ್ಳಿ, ನಾಗನೂರು ಮತ್ತು ನಮ್ಮೂರು ದೇವರುಗಳು ಪಲ್ಲಕ್ಕಿಯಲ್ಲಿ ಬಂದು ಕೂಡಲ ಸಂಗಮೇಶ್ವರನ ತೇರಿನ ಉತ್ಸವದಲ್ಲಿ ಭಾಗಿಗಳಾಗುತ್ತಿದ್ದವು. ಇದು ದೇವರ ನಂಟು. ಈ ದೇವರುಗಳು ಬರದೆ ಸಂಗಮೇಶ್ವರ ತೇರನ್ನು ಹೇಗೆ ಎಳೆಸಿಕೊಂಡಾನು? ನಮ್ಮೂರ ನಂದಿಕೋಲು ಬಹುದೊಡ್ಡದು. ಅದನ್ನು ಹೊರುವವನು ನಮ್ಮ ಮಾವನೇ ಆಗಿದ್ದ ಮುಸೆಂಗಪ್ಪ (ಮುದಿಸಂಗಪ್ಪ ಎಂಬುದರ ಸವೆದ ವಿಕಾರ ರೂಪ) ಎಂಬುವನು. ಇದೊಂದು ನನ್ನ ಅತ್ಯಂತ ಹೆಮ್ಮೆಯ ಅಂಶ. ಮುಸೆಂಗಪ್ಪ ಮಾವ ನನ್ನನ್ನು ನೋಡಿದರಾಯಿತು ಕೈ ಹಿಡಿದು ಕರೆದುಕೊಂಡು ಹೋಗಿ ತೇರಿನ ಮುಂದೆಯೇ ತನ್ನ ಹತ್ತಿರ ಕುಳ್ಳಿರಿಸಿಕೊಳ್ಳುತ್ತಿದ್ದುದು ನನ್ನ ಅಭಿಮಾನಕ್ಕೆ, ಹೆಮ್ಮೆಗೆ ಎರಡು ಕೋಡುಗಳು ಮೂಡಿದಂತಾಗುತ್ತಿತ್ತು. ತೇರಿನ ಮುಂದೆ ಹಾಳುಗಲ್ಲಾಪುರದ ಕರಿನಿಂಗಪ್ಪನ ಹಲಗೆ ಬಡಿತ, ಎರಡು ಮೂರು ಓಲಗದ ಮೇಳಗಳ ಸ್ಪರ್ಧೆಯ ಊದಾಟ, ಲಾವಣಿ, ಭರ್ಜನೆ ಏನೆಲ್ಲ ನಡುರಾತ್ರಿಯಿಂದಲೇ ನಡೆಯುತ್ತಿದ್ದವು. ಒಂದು ಮಾತು : ಕರಿನಿಂಗಪ್ಪನ ಹಲಗೆಯ ಬಡಿತ ಓಲಗದ ಜತೆ ಪ್ರಾರಂಭವಾದೊಡನೆ ಸಭೆಯಲ್ಲಿ ಹೋ ಹೋ ಎಂದು ಹರ್ಷೋದ್ಗಾರ ಮಾಡಿಬಿಡುತ್ತಿತ್ತು. ಕರಿನಿಂಗಪ್ಪ ಬಂಗಿಸೊಪ್ಪು ಸೇದಿ ಆವೇಶಗೊಂಡು ಹಲಗೆ ಬಡಿಯಲು ಪ್ರಾರಂಭಿಸಿದರೆ ಮೈ ಮೇಲೆ ಎಚ್ಚರವೇ ಇರುತ್ತಿರಲಿಲ್ಲ. ಅವನು ಹಲಗೆಯನ್ನು ಬಡಿಯುತ್ತಿರಲಿಲ್ಲ, ಮಾತನಾಡಿಸುತ್ತಿದ್ದ ಎನ್ನುವುದೇ ಸಮಂಜಸ.

ಹಲಗೆಯನ್ನಷ್ಟೇ ಅಲ್ಲ, ಇನ್ನೊಬ್ಬ ಇಂಥ ಕಲಾವಿದ ಹುಟ್ಟಲಿಕ್ಕಿಲ್ಲ ಎನ್ನುವಂತೆ ಇದ್ದ. ಈಗ ಅವನ ಹೆಸರೂ ಇಲ್ಲದಂತೆ ಅಳಿಸಿ ಹೋದುದು ವ್ಯಥೆಯನ್ನುಂಟುಮಾಡುವ ಅಂಶ. ಅಂದು ಅವನನ್ನು ಗೌರವಿಸುವ ಸರಕಾರವಾಗಲಿ, ಸಾರ್ವಜನಿಕರಾಗಲಿ ಯಾರೂ ಹುಟ್ಟಲೇ ಇಲ್ಲ. ಇನ್ನೊಬ್ಬ ಕರಿನಿಂಗಪ್ಪನನ್ನಂತೂ ತರುವುದಕ್ಕೆ ಸಾಧ್ಯವೇ ಇಲ್ಲವೆಂದು ಈಗ ನನಗೆ ಅನ್ನಿಸುತ್ತಿದೆ.

ತೇರಿನ ಮುಂದೆ ಈ ಎಲ್ಲ ಗ್ರಾಮೀಣ ಕಲಾವಿದರ ಕಲಾ ಪ್ರದರ್ಶನ ಮುಗಿದ ಮೇಲೆ ತೇರನ್ನು ಭವ್ಯವಾದ ನಾಲ್ಕು ಹೊರಜಿ ಹಚ್ಚಿ ಎಳೆಯುತ್ತಿದ್ದರೆ ಒಂದು ಹೃದಯಸ್ಪರ್ಶೀ ಅಂಶ. ನಮ್ಮ ಮಾವ ನನ್ನನ್ನು ತುಳಿತಕ್ಕೆ ಸಿಕ್ಕಾನೆಂದು ನಮ್ಮ ಮನೆಯವರ ಕಡೆ ಕಳುಹಿಸಿ ಹರಹರ ಮಹಾದೇವ ಎಂದು ಕೂಗಿ ತನ್ನ ನಂದೀಕೋಲನ್ನು ಹೊತ್ತು ತೇರಿನ ಮುಂದೆ ಮುಂದೆ ಓಡುತ್ತಿದ್ದುದನ್ನು ನೋಡಿ ಜನ ಬೆಕ್ಕಸ ಬೆರಗಾಗುತ್ತಿತ್ತು. ನಂದೀಕೋಲುಗಳು ಇಪ್ಪತ್ತು ಮೂವತ್ತು. ಅವುಗಳನ್ನು ಹಿಡಿದು ಓಡುತ್ತಿದ್ದವರ ಮುಂದೆ ನಮ್ಮ ಮಾವ ಹೋಗಬೇಕು. ಕುಸ್ತಿಯ ಪಟುವೂ ಆಗಿದ್ದ ನಮ್ಮ ಮಾವ ತನ್ನ ಮನೆತನದ ಘನತೆ ಶಕ್ತಿಯ ಆಢ್ಯತೆಯನ್ನು ಉಳಿಸಿಕೊಳ್ಳಬೇಕಲ್ಲವೆ? ಅವರದು ಹೇಳಿ ಕೇಳಿ ಬಣ್ಣದವರ ಮನೆ (ಬಣಕಾರರ) ಮನೆತನ. ಬಹುದೊಡ್ಡ ನಂದೀಕೋಲನ್ನು ಜನಗಳ ಮಧ್ಯದಲ್ಲಿ ಹೊತ್ತು ದಾರಿಮಾಡಿಕೊಂಡು ಓಡುವುದನ್ನು ನೋಡಿದರೇ ಜನರ ಜಂಘಾಬಲವುಡುಗುತ್ತಿತ್ತು. ಅಂಥ ಆಜಾನುಬಾಹು ನಮ್ಮ ಮಾವ. ಬೆಳಿಗ್ಗೆ ಆರು ಘಂಟೆಗೆ ತೇರು ನೆಲೆಗೆ ನಿಲ್ಲುತ್ತಿತ್ತು. ಆಮೇಲೆ ಸಂಗಮೇಶ್ವರ ದೇವರನ್ನು ಉಳಿದ ಊರುಗಳ ದೇವರನ್ನು ಪಲ್ಲಕ್ಕಿಯ ಮೆರವಣಿಗೆಯಲ್ಲಿ ತಂದು ಸಂಗಮೇಶ್ವರ ಗುಡಿಯಲ್ಲಿ ಪ್ರತಿಷ್ಠಾಪಿಸುತ್ತಿದ್ದರು. ಮುಂದೆ ಒಂದೇ ಒಂದು ದಿನ ಆಯಾಯ ಊರಿನವರು ತಮ್ಮ ದೇವರನ್ನು ತಮ್ಮ ತಮ್ಮ ಊರಿಗೆ ಒಯ್ಯುತ್ತಿದ್ದರು.

ತೇರು ಎಳೆಯುವ ದಿವಸವೇ ಹತ್ತಾರು ಮಿಠಾಯಿ ಅಂಗಡಿಗಳು, ಬಾಳೆಹಣ್ಣು, ತೆಂಗಿನ ಕಾಯಿ ಅಂಗಡಿಗಳು, ಒಂದೆರಡು ಚಹಾ ಕಾಫಿ ಅಂಗಡಿಗಳು ಬಂದಿರುತ್ತಿದ್ದವು. ಆ ಕಾಲದಲ್ಲಿ ಚಹಾ ಅಂಗಡಿಗಳವರು ಈಗಿನಷ್ಟು ಇರುತ್ತಿರಲಿಲ್ಲ. ಚಹಾ ಪ್ರಚಾರ ಆಗ ತಾನೇ ಆರಂಭವಾಗಿತ್ತು. ನಾವು ಮಾತ್ರ ಚಹಾ ಅಂಗಡಿಗಳಲ್ಲಿ ಚಹಾ ಕುಡಿಯುವವರನ್ನು ಕಂಡು ಅಸಹ್ಯಪಟ್ಟು ವಾಂತಿ ಮಾಡಿಕೊಳ್ಳುವವರಂತೆ ವರ್ತಿಸುತ್ತಿದ್ದೆವು. ಚಹಾ ಕುಡಿಯುವವರು ಜಾತಿಗೆಟ್ಟವರೆಂದೇ ನಮ್ಮ ತೀರ್ಮಾನವಾಗಿತ್ತು. ನಮಗೆ ಮಿಠಾಯಿ ಪುರಿ ಅಂಗಡಿಗಳು ಇದ್ದೇ ಇದ್ದವಲ್ಲಾ, ಅಲ್ಲಿ ಹೋಗಿ ಕಾಲಾಣೆ ಪುರಿ, ಸೇವು, ಕಾಲಾಣೆ ಮಿಠಾಯಿಕೊಂಡು ಹೊಳೆದಂಡೆಗೆ ಹೋಗಿ ತಿಂದು ನೀರು ಕುಡಿದು ನಮ್ಮೂರ ಉಸುಳಿ ಕೆಂಚಪ್ಪನ ಉಸುಳಿಯ ರುಚಿ ನೋಡಿಕೊಂಡು ಜಾತ್ರೆಯಲ್ಲೆಲ್ಲ ಅಲೆದಾಡಿ ಯಾವ ಯಾವ ನಾಟಕ ಕಂಪನಿಯವರು ಎಲ್ಲೆಲ್ಲಿ ಥೇಟರ್ ಕಟ್ಟುತ್ತಾರೆ ಎನ್ನುವುದರ ಸರ್ವೆಮಾಡಿಕೊಂಡು ಬಂದ ಹಲವಾರು ಎತ್ತಿನ ಜೋಡಿಗಳನ್ನು ನೋಡಿ, ಅಲ್ಲಿದ್ದ ಮಾವಿನ ತೋಪು ಹೊಕ್ಕು ಕಲ್ಲು ಬೀಸಿ ಮಾವಿನ ಕಾಯಿ ಉದುರಿಸಿಕೊಂಡು ಉಟ್ಟ ಪಂಚೆಯ ಉಡಿಯಲ್ಲಿ ಹಾಕಿಕೊಂಡು ಮಾವಿನ ತೋಪಿನವರಿಂದ ಬೈಸಿಕೊಂಡು, ಹಿಡಿ ಹಿ ಡಿ ಎಂದು ಬೆನ್ನಟ್ಟಿ ಬರುವಷ್ಟರಲ್ಲಿ ಓಡಿ ಹೊಳೆ ದಾಟಿ ನಮ್ಮ ಗಡಿಯಲ್ಲಿ ಮಾವಿನ ಕಾಯಿಗಳನ್ನು ಮುಖ ಕೆಡಿಸಿಕೊಂಡು ತಿನ್ನುವಷ್ಟು ತಿಂದು ಸೊನೆಯಿಂದ ಪಂಚೆಯನ್ನೆಲ್ಲ ಕಲೆಮಾಡಿಕೊಂಡು ಒಂಭತ್ತು ಹತ್ತುಗಂಟೆಗೆ ಮನೆ ಸೇರಿ ತಾಯಿ ತಂಗಿಯರಿಂದ ಬೈಸಿಕೊಳ್ಳುತ್ತಿದ್ದೆವು. ಉಸುಳಿ

ಕೆಂಚಪ್ಪ ಎಂದು ಹೇಳಿದೆ. ಅವನ ಬಗ್ಗೆ ನಾಲ್ಕು ಮಾತು ಹೇಳಲೇಬೇಕು ಎನ್ನಿಸುತ್ತದೆ. ಅವನೊಬ್ಬ ಕರ್ಮಯೋಗಿ. ಶ್ರಮಜೀವಿ, ಸ್ವಾಭಿಮಾನಿ.

***ಉಸುಳಿ ಕೆಂಚಪ್ಪ***

ನಮ್ಮೂರ ಕೆಂಚಪ್ಪ ಸಹಿಮಾಡುವಷ್ಟು ಅಕ್ಕರಿಗ. ಕೂಡಲ ಜಾತ್ರೆಯ ಪ್ರಾರಂಭದಿಂದ ಮೊದಲ್ಗೊಂಡು ಇವನು ಬಹುಸ್ವಾದಿಷ್ಟವಾದ ಕಡಲೆ ಉಸುಳಿಯನ್ನು ಹೆಡಿಗೆಯಲ್ಲಿ ಹೊತ್ತು ಜಾತ್ರೆಯ ತುಂಬ ತಿರುಗಾಡಿ ಮಾರಾಟ ಮಾಡುತ್ತಿದ್ದ. ಅವನ ಉಸುಳಿ ಬಹಳ ಪ್ರಸಿದ್ಧ. ಒಂದುತಿಂಗಳ ಜಾತ್ರೆ ಮುಗಿಯುವ ಹೊತ್ತಿಗೆ ನಾಲ್ಕೈದು ಚೀಲ ಕಡಲೇಕಾಳು ಬೆಂದು ಉಸುಳಿಯಾಗಿ ಮಾರಾಟಗೊಂಡು ಅಷ್ಟು ಇಷ್ಟು ಲಾಭ ಮಾಡಿಕೊಡುತ್ತಿದ್ದವು. ಹತ್ತು ಜನರು ಗುಂಪು ಸೇರಿದ ಕಡೆಗಳಲ್ಲಿ ತಲೆಯ ಮೇಲೆ ಉಸುಳಿ ಹೆಡಿಗೆ ಹೊತ್ತು ಇಳಿದನೆಂದರೆ ನಾಲ್ಕೈದು ಆಣೆ ವ್ಯಾಪಾರ ಮಾಡುತ್ತಿದ್ದ. ಕಾಲಾಣೆಗೆ ಒಂದು ಜೊನ್ನೆ ತುಂಬ ಉಸುಳಿಕೊಟ್ಟು ಮೇಲೆ ಮೂರು ನಾಲ್ಕುಹನಿ ಲಿಂಬೆಹುಳಿ ಹಿಂಡಿಕೊಡುತ್ತಿದ್ದ. ಎತ್ತಿನ ಪರಿಷೆ, ಸಂಗಮೇಶ್ವರ ಪೌಳಿ, ನಾಟಕ ಮಂದಿರಗಳು ಹೊಳೆದಡ ಎಲ್ಲ ಕಡೆಗೂ ಉಸುಳೆ ಉಸುಳೆ ಎಂದು ಕೂಗಿಕೊಂಡು ವ್ಯಾಪಾರ ಮಾಡುತ್ತಿದ್ದ. ಇದೇ ಕಾರಣವೇ ಇವನು ಉಸುಳಿ ಕೆಂಚಪ್ಪನಾಗಿದ್ದ. ಜಾತ್ರೆಗೆಲ್ಲ ಇವನು ಪರಿಚಿತ. ಹಾಸ್ಯದಿಂದ ಜನರನ್ನು ನಗಿಸುವುದರಲ್ಲೂ ನಿಪುಣ. ನಮ್ಮೂರ ಆಟಗಳಲ್ಲಿ ಅಡ್ಡಪಾರ್ಟು ಮಾಡುವವನು, ಅಲಾವಿ ಹಬ್ಬ (ಮೊಹಕ ಹಬ್ಬ) ದಲ್ಲಿ ವೇಷ ಹಾಕುವವನು ಆಟಗಳಲ್ಲಿ ಹಿಮ್ಮೇಳದವನೂ ಕೆಂಚಪ್ಪನೇ. ನಗೆಗಾರನಂದರೆ ನಗೆಗಾರ. ತಾನು ಮಾತ್ರ ಬಾಯಿ ಬಿಟ್ಟು ನಗುತ್ತಿದ್ದಿಲ್ಲ. ಮುಖಭಂಗಿಯಿಂದಲೇ ಜನ ನಗುತ್ತಿದ್ದರು.

ಇವನ ಮನೆ ಕಟ್ಟೆಯ ಮೇಲೆ ದಿನಾಲು ಅಂಗಡಿ ಬಸವಣ್ಣೆಪ್ಪನ ಹಳೇಕಾಲದ ಹರಕುಮುರುಕು ಹಾರ್ಮೋನಿಯಂನಲ್ಲಿ ಕೆಂಚಪ್ಪ, ನೀಲಕಂಠ, ಮಾದೇವಿ, ಕರಿಬಂಟ, ಹರಿಶ್ಚಂದ್ರ ಮುಂತಾದ ಸಣ್ಣಾಟಗಳ ಹಾಡನ್ನು ಹಾಡದೆ ಇದ್ದ ದಿನಗಳೇ ಇಲ್ಲ. ನಾವೆಲ್ಲ ಗುಂಪಾಗಿ ಹೋಗಿ ಅಲ್ಲಿ ಸೇರುತ್ತಿದ್ದುದೂ ಉಂಟು. ನಾವು ಹತ್ತು ಹನ್ನೊಂದು ಘಂಟೆಯವರೆಗೆ ಹಾಡಿ ಹತ್ತಾರು ಜನಗಳ ಕಿವಿಗೆ ಹಬ್ಬ ಮಾಡಿಯೇ ಮಲಗಬೇಕು. ಈ ನಮ್ಮ ಊರು ಜೀವಂತವಾಗಿದೆ ಎಂದು ಹೇಳುವುದಕ್ಕೆ ಕೆಂಚಪ್ಪನ ಈ ಆಟದ ಹಾಡುಗಳು ದೃಷ್ಟಾಂತವಾಗಿದ್ದವು. ಅವನ ಕಟ್ಟೆಯ ಮೇಲೆ ನಮ್ಮಂಥ ಏಳೆಂಟು ಹುಡುಗರಲ್ಲದೆ ಅಡಕೆ ಎಲೆ ಜಗಿಯುತ್ತ ಎಂಟು ಹತ್ತು ಜನ ದೊಡ್ಡವರೂ ಸೇರುತ್ತಿದ್ದರು. ಅಕ್ಕಪಕ್ಕದ ಮನೆಯವರು ತಮ್ಮ ತಮ್ಮ ಕಟ್ಟೆಯ ಮೇಲೆ ಕುಳಿತೇ ಈತನ ಹಾಡಿನ ಮೋಜು ಕೇಳುತ್ತ ಕುಳಿತಿರುತ್ತಿದ್ದರು. ಕೆಂಚಪ್ಪನ ಈ ಹಾಡಿನ ಪ್ರಸಂಗವೇ ನಮ್ಮೂರಿನ ಅನೇಕರಿಗೆ ಗಡಿಯಾರ. ಏಕೆಂದರೆ ಕೆಂಚಪ್ಪ ಹಾಡು ನಿಲ್ಲಿಸಿದ, ರಾತ್ರಿ ಬಹಳ ಆಯ್ತು, ಮಲಗೋಣ ನಡಿಯಿರೋ ಎಂದು ತಮ್ಮ ತಮ್ಮ ಕಟ್ಟೆಗಳ ಮೇಲೆ ಕುಳಿತು ಹಾಡು ಕೇಳುವ ಜನ ಅಂದುಕೊಳ್ಳುತ್ತ ಮಲಗಲು ಒಳಗೆ ತೆರಳುತ್ತಿದ್ದರು.

ಕೆಂಚಪ್ಪನಿಗೆ ಹೊಲ ಇರಲಿಲ್ಲ, ಮನೆ ಮಾತ್ರ ಇತ್ತು. ತಾನು, ತನ್ನ ಹೆಂಡತಿ, ಒಬ್ಬಳು ಮಗಳು. ಹೀಗೆ ಪುಟ್ಟ ಸಂಸಾರ ನಿಭಾಯಿಸಲು ಆತ ನಮ್ಮ ಧರ್ಮಾನದಿಯ ದಂಡೆಯಲ್ಲಿ ಪ್ರತಿವರ್ಷ ಯಾರು ಯಾರದೋ ಹೊಲವನ್ನು ನಾಲ್ಕು ತಿಂಗಳ ಕಾಲದವರೆಗೆ ತೋಟ ಮಾಡಲೂ ಗುತ್ತಿಗೆ ಹಿಡಿದು ಸೊಪ್ಪು, ತರಕಾರಿ, ಬದನೆ, ಗಜ್ಜರಿ ಬೀಜ, ಉಳ್ಳೇಗಡ್ಡಿ ಬೀಜ

ಮೊದಲಾದವನ್ನು ಮಾಡಿ ಇಡೀ ವರ್ಷಕ್ಕೆ ತನ್ನ ಜೀವನಕ್ಕೆ ಬೇಕಾಗುವಷ್ಟನ್ನು ಸಂಪಾದಿಸಿಕೊಂಡು ನೆಮ್ಮದಿಯಿಂದ ಇದ್ದ. ಉಳಿದ ಕಾಲದಲ್ಲಿ ಉಸುಳಿ, ಹಚ್ಚಿದ ಮಂಡಕ್ಕಿ, ಕೊಬ್ರಿಚಟ್ನಿ ಮೊದಲಾದವನ್ನು ಮಾಡಿ ಕಾಳು ಎಂದರೆ ಕಾಳಿಗೆ, ದುಡ್ಡು ಎಂದರೆ ದುಡ್ಡಿಗೆ ಮಾರಾಟಮಾಡಿ ಸುಖವಾಗಿದ್ದ. ಇವನಂಥ ಶ್ರದ್ಧಾವಂತ ತೋಟಗಾರನನ್ನು ನಾನು ಇಂದೂ ಎಲ್ಲೂ ಕಂಡಿಲ್ಲ. ಇವನದು ತೋಟವಲ್ಲ, ಉದ್ಯಾನವನ ಎಂದರೂ ನಡೆದೀತು. ದೇವೇಂದ್ರನ ನಂದನವನ ಹಿ ೀಗೆ ಇತ್ತೋ ಇಲ್ಲವೋ!

ಕಾರ್ತೀಕಮಾಸದಿಂದ ಇವನ ತೋಟದ ಕೆಲಸ ಪ್ರಾರಂಭವಾಗಿ ಜೇಷ್ಠಮಾಸಕ್ಕೆ ಕೊನೆಗೊಳ್ಳುತ್ತಿತ್ತು. ಹೊಳೆಗೆ ಹಚ್ಚಿದ ಏತದಿಂದ ನೀರೆತ್ತಿ ಒಂದು ಎಕರೆಯಷ್ಟು ಭೂಮಿಗೆ ತಾನೇ ನೀರುಣ್ಣಿಸಿ ಮೆಂತ್ಯ ಮಡಿ, ಸೊಪ್ಪಿನ ಮಡಿ, ಉಳ್ಳೀಗಡ್ಡಿ, ಕೊತಂಬ್ರಿ ಸೊಪ್ಪು, ಬದನೆಗಿಡಗಳು, ನಾನಾ ರೀತಿಯ ಚಂಡು ಹೂಗಿಡ ಎಲ್ಲ ಇವನ ತೋಟದಲ್ಲಿರುತ್ತಿದ್ದವು. ಮಡಿಯ ಹುದಿಗಳಲ್ಲಿ ಮೂಲಂಗಿ ಹಚ್ಚಹಸುರಿನಿಂದ ಮುಲು ಮುಲು ಎನ್ನುತ್ತಿತ್ತು. ನೀರಿನ ಕಾಲುವೆಯನ್ನು ಸ್ವಲ್ಪ ಅಗಲವಾಗಿಯೇ ಮಾಡಿ ಎರಡೂ ಹುದಿಗಳಲ್ಲಿ ಬೀಜಕ್ಕಾಗಿ ಗಜ್ಜರಿ ಕೊರೆದು ಊರುತ್ತಿದ್ದ. ಬೀಜದ ಗಜ್ಜರೆಯ ಆ ಗಿಡಗಳು ಎದೆಮಟ್ಟಕ್ಕೆ ಬೆಳೆದು ಹೂದುಂಬಿ ನಿಂತಾಗ ನೋಡಬೇಕು ಅವನ ತೋಟದ ಐಸಿರಿಯನ್ನು. ಇನ್ನೊಂದು ಕಡೆ ಬೀಜಕ್ಕಾಗಿ ಬಿಳೀ ಉಳ್ಳೀಗಡ್ಡಿಯನ್ನು ಕೊರೆದು ತೋಟದ ಸುತ್ತಲೂ ಸಾಲುಮಡಿಗಳಲ್ಲಿ ಊರುತ್ತಿದ್ದ. ಹೂವು ಬಿಟ್ಟು ಮುಲು ಮುಲು ಬೆಳೆದು ನಿಂತ ಆ ಈರುಳ್ಳಿಯ ಹಸಿರು ಆ ಹಸಿರಿನ ಮೇಲೆ ಬಿಳಿಯ ಹೂವಿನ ಕುಚ್ಚು, ಆ ಸೌಂದರ್ಯವನ್ನು ನೋಡಲು ಕಣ್ಣು ಪುಣ್ಯ ಮಾಡಿರಬೇಕು: ಹೂವಿನ ಮಕರಂದಕ್ಕೆ ಜೇನುದುಂಬಿಗಳು ಸದಾ ಮಂಜುಳ ಗಾನ ಮಾಡುತ್ತಿದ್ದವು. ತೋಟಕ್ಕೆ ಸುತ್ತಲೂ ಹಾಕಿದ ಬೇಲಿಯ ಮೇಲೆ ಹೀರೆ, ಸವತೆ, ಕುಂಬಳ ಬಳ್ಳಿಗಳು ಫಲಭಾರದಿಂದ ಬಳಕುತ್ತಿರುವ ನೋಟ ನನಗೆ ಇಂದಿಗೂ ಕಣ್ಣಿಗೆ ಕಟ್ಟಿದಂತೆ ಇದೆ.

ಹೊಳೆಗೆ ಏತ ಹಚ್ಚಿ ನಸುಕಿನಲ್ಲಿ ನಾಲ್ಕೈದು ಘಂಟೆ ಸುಮಾರಿಗೆ ಏತ ಹೊಡೆಯಲು ಪ್ರಾರಂಭಿಸಿದಾಗ ಜಿರಕ್‌ಜಿರಕ್ ಎಂಬ ಧ್ವನಿ ಆ ನಸುಕಿನ ಪ್ರಶಾಂತ ಸಮಯದಲ್ಲಿ ಊರಿನ ನಮ್ಮ ಮನೆಗಳಿಗೆಲ್ಲ ಕೇಳುತ್ತಿತ್ತು. ಊರಿನಿಂದ ಅವನ ತೋಟ ಕೇವಲ ಕಾಲು ಫರ್ಲಾಂಗ್ ದೂರ ಅಷ್ಟೆ. ಆ ನಸುಕಿನಲ್ಲಿಯೇ ಅವನ ಹೆಂಡತಿ ನೀರು ಕಟ್ಟುತ್ತಿದ್ದಳು. ಪುಟ್ಟಪುಟ್ಟ ಮೆಂತೆ, ಕೋತಂಬ್ರಿ, ಸೊಪ್ಪುಗಳ ಮಡಿಗಳಲ್ಲಿ ಬೆಳೆದು ನಿಂತ ಹಚ್ಚ ಹಸುರಿನ ಸೊಪ್ಪಿನ ಕಂಪು ತೋಟದ ಸುತ್ತಮುತ್ತೆಲ್ಲ ಪಸರಿಸಿ ಘ್ರಾಣದ ಹಸಿವ ಅಡಗಿಸುತ್ತಿತ್ತು. ಬೆಳಕಾದ ಮೇಲೆ ಕೆಂಚಪ್ಪ ವಿವಿಧ ತರದ ತರಕಾರಿಸೊಪ್ಪನ್ನು ಊರಿನಲ್ಲಿ ಮಾರಲು ತರುತ್ತಿದ್ದ. ನಾಲ್ಕಾರು ಊರುಗಳನ್ನು ಗಂಡ ಹೆಂಡತಿ ಇಬ್ಬರೂ ತಿರುಗಿ ಹತ್ತಿಪ್ಪತ್ತು ಸೇರು ಕಾಳು ತರುತ್ತಿದ್ದರು. ಎಲ್ಲವೂ ಕಾಳಿನ ತೂಕ. ಬತ್ತ ಬಂದರೆ ಬತ್ತ, ನವಣಿ ಬಂದರೆ ನವಣೆ - ಹೀಗೆ ಹೆಸರು, ತೊಗರಿ - ಎಲ್ಲ ಕಾಳಿಗೂ ತೂಕ ಹಚ್ಚಿಕೊಡುತ್ತಿದ್ದ. ದುಡ್ಡಿಗೆ ಯಾರಾದರೂ ಕೇಳಿದರೆ 'ದುಡ್ಡೇನು ಕಡಕೊಂಡು ತಿನ್ನಕ ಬರ್ತತೇನ್ರೀ. ದುಡ್ಡಿಗೆ ಕೊಡೊದಿಲ್ಲ. ಕಾಳಿಗ ತೂಕಬೇಕಾದ್ರೆ ತೊಗೊಳ್ಳಿ' ಎನ್ನುತ್ತಿದ್ದ. ಆತನಿಗೆ ದುಡ್ಡು ಬೇಡೆಂದಲ್ಲ. ದುಡ್ಡಿಗಾಗಿ ಆಗಾಗ ಹಾವೇರಿ, ನರೇಗಲ್ಲು, ಬಂಕಾಪುರ ಸಂತೆಗಳಿಗೆ ಸೊಪ್ಪು ತರಕಾರಿ ಒಯ್ದು ಮಾರಿ ದುಡ್ಡುಮಾಡಿಕೊಳ್ಳುತ್ತಿದ್ದ. ಇದಲ್ಲದೆ ಗಜ್ಜರಿ ಬೀಜ, ಉಳ್ಳೀಗಡ್ಡಿ ಬೀಜ ಮಾರಾಟದಿಂದ

ಅವನ ಜೀವನಕ್ಕೆ ಆಗುವಷ್ಟು ದುಡ್ಡು ಬಂದೇ ಬರುತ್ತಿತ್ತು. ಹಳ್ಳಿಗಳಲ್ಲಿ ಮಾತ್ರ ಕಾಳಿನ ತೂಕವೇ ತರಕಾರಿ ಸೊಪ್ಪುಗಳನ್ನು ಅವನು ಕೊಡುತ್ತಿದ್ದುದು. ಹೀಗೆ ಕಾಳಿನ ತೂಕ ಕೊಟ್ಟು ವರ್ಷಕ್ಕಾಗುವಷ್ಟು ಜೋಳ-ನವಣೆ, ಬತ್ತ, ತೊಗರಿ, ಹೆಸರು ಕಾಳು ಮೊದಲಾದವನ್ನು ದುಂಡಗೆ ಮಾಡಿಕೊಂಡು ನಿಶ್ಚಿಂತೆಯಿಂದ ಸಮೃದ್ಧ ಜೀವನ ಸಾಗಿಸುತ್ತಿದ್ದ. ಅವನು ಹೇಳುತ್ತಿದ್ದುದು ಹೀಗೆ : "ಭೂಮಿತಾಯಿ ಬಡವಿ ಅಲ್ರೀ. ಅವಳು ಬೆವರು ಸುರಿಸಿ ಕಾಯಕಷ್ಟ ಮಾಡಿದ್ರೆ ಮಕ್ಕಳ ಹೊಟ್ಟೆ ತುಂಬೋ ಶ್ರೀಮಂತಿಕೆಯವಳ್ರೀ. ದುಡಿಯದೇ ಇರುವ ಸೋಮಾರಿಯೇ ಬಡವ, ಬಡವ ಅಷ್ಟೇ ಅಲ್ಲ ಭಡವ!" ಎನ್ನುತ್ತಿದ್ದ (ಭಡವ ಎಂದರೆ ಅಯೋಗ್ಯ ಎಂಬರ್ಥದಲ್ಲಿ ನಮ್ಮ ಕಡೆಯ ಹಳ್ಳಿಗಳ ಒಂದು ತಿರಸ್ಕಾರದ ಮಾತು.)

ಕೆಂಚಪ್ಪ ತನ್ನ ತೋಟದಲ್ಲಿ ಕೆಲಸ ಮಾಡುವಾಗ ಬಿಸಿಲು ಮಳೆ ಚಳಿಗಳಿಗೆ ಲೆಕ್ಕಿಸದೆ ಬರಿ ಮೈಯಲ್ಲೇ ಕೆಲಸ ಮಾಡುತ್ತಿದ್ದುದನ್ನು ನಾವು ಕಂಡಿದ್ದೇವೆ. ಉಟ್ಟ ಒಂದು ಪಂಚೆಯನ್ನು ಚಡ್ಡಿಯಂತೆ ಮೇಲಕ್ಕೇರಿಸಿ ಕಟ್ಟಿಕೊಂಡು ಕೆಲಸ ಮಾಡುತ್ತಲೇ ಇರುತ್ತಿದ್ದ. ಹೊಳೆಗೆ ಸ್ನಾನಕ್ಕೆ ಬಂದ ಬೇರೆಯವರು ಯಾರೇ ಆಗಲಿ ಸ್ನಾನ ಮಾಡಿಕೊಂಡು ಅವನ ತೋಟ ಹೊಕ್ಕರೆ ಅವರಿಗೆ ನಾಲ್ಕು ಕಡ್ಡಿ ಮೆಂತೆ, ಒಂದೆರಡು ಕಡ್ಡಿ ಕೋತಂಬ್ರಿ, ಒಂದು ತೊಪ್ಪಲ ಉಳ್ಳೇಗಡ್ಡಿ, ಒಂದು ಮೂಲಂಗಿ ಕಿತ್ತು ಕೈಗೆ ಕೊಡುತ್ತಿದ್ದ. ಅದನ್ನು ತಂದು ಅವರು ರೊಟ್ಟಿಯ ಸಂಗಡ ತೊಪ್ಪಲು ಸಹಿತ ತಿಂದು ಬಿಡುತ್ತಿದ್ದರು. ತೋಟದ ಕೆಲಸ ಮುಗಿದ ಮೇಲೆ ಊರಲ್ಲೇ ಆಗಲಿ ಇತರ ಸಂದರ್ಭಗಳಲ್ಲೇ ಆಗಲಿ ಕೆಂಚಪ್ಪನ ಉಡಿಗೆತೊಡಿಗೆ ಶ್ರೀಮಂತವಾಗಿರುತ್ತಿತ್ತು. ಬೀಗರ ಊರಿಗೆ ಹೋಗುವಾಗ, ಜಾತ್ರೆ ಮೊದಲಾದವುಗಳಿಗೆ ಹೋಗುವಾಗ ಬಿಳಿಮಲ್‌ಪಂಜೆ, ಉಲ್ಲನ್ ಕೋಟು, ಷರ್ಟ್ ಹಾಕಿ ಜರಿಯ ರುಮಾಲು ಸುತ್ತಿ ಹೊರಟರೆ ದೊಡ್ಡ ಶ್ರೀಮಂತನಂತೆ ಕಾಣುತ್ತಿದ್ದ. ನಮ್ಮೂರ್ನಲ್ಲಿ ಯಾವುದೇ ಆಟ ಆದರೂ ಇವನು ಭರ್ಜರಿ ಉಡುಪಿನಿಂದ ಆಟ್ಟದ ಮೇಲೆ ಕಾಣಿಸಿಕೊಳ್ಳುತ್ತಿದ್ದ. ಹಿಮ್ಮೇಳದಲ್ಲಿ ಇವನಿಲ್ಲದೆ ನಮ್ಮೂರ್ನ ಯಾವ ಆಟಗಳೂ ಆಗುತ್ತಿರಲೇ ಇಲ್ಲ. ಹಿಮ್ಮೇಳ ಮಾಡುತ್ತಲೆ ಆ ಕ್ಷಣದಲ್ಲಿ ಒಳಗೆ ಹೋಗಿ ಬಟ್ಟೆ ಬಿಚ್ಚಿ ಏನೇನೋ ವೇಷಹಾಕಿ ಅಡ್ಡ ಪಾರ್ಟು ಮಾಡಿಕೊಂಡು ಬಂದು ಜನಗಳನ್ನು ನಕ್ಕುನಗಿಸುತ್ತಿದ್ದ.

ಕೆಂಚಪ್ಪನ ಚರಿತ್ರೆ ಇಷ್ಟೆ ಅಲ್ಲ. ಅವನಿಗೆ ಯಾರಾದರೂ ವಿರೋಧಿಗಳಾದರೆ ಆಯಿತು. ಆ ವರ್ಷ ಅವರ ಬಣವೆಗಳು ಉಳಿಯುತ್ತಿರಲಿಲ್ಲ. ಬಣವೆಗೆ ಬೆಂಕಿ ಹಚ್ಚುವ ಗುಟ್ಟು ಅವನಿಗೆ ಗೊತ್ತು. ಅವನು ಬಣವೆಗಳು ಹೊಲದಲ್ಲಿರಲಿ ಕಣದಲ್ಲಿರಲಿ ಅವುಗಳಿಗೆ ಬೆಂಕಿ ಇಟ್ಟು ಮನೆಗೆ ಬಂದು ಮಲಗಿದ ಮೇಲೆಯೇ ಅವು ಹೊತ್ತಿಕೊಂಡು ಉರಿಯುತ್ತಿದ್ದುದು. ಉರಿ ಹತ್ತಿದ ಮೇಲೆ ಪುನಃ ಇವನೇ ಆರಿಸಲು ಮುಂದಾಳಾಗಿ ಬರುತ್ತಿದ್ದುದೂ ಉಂಟಂತೆ. ಹೀಗಾಗಿ ಕೆಂಚಪ್ಪನೊಡನೆ ಯಾರೂ ವಿರೋಧ ಕಟ್ಟಿಕೊಳ್ಳುತ್ತಿರಲಿಲ್ಲ. ಒಂದು ಸಲ ನಮ್ಮ ಮನೆಯ ಪಕ್ಕದಲ್ಲಿಯೇ ಒಂದು ದೊಡ್ಡ ಹೊಟ್ಟಿನ ಬಣವಿಗೆ ಮಧ್ಯರಾತ್ರಿ ಬೆಂಕಿ ಬಿತ್ತು. ನಾನು ನಮ್ಮ ದೊಡ್ಡಪ್ಪ ಹಿತ್ತಲಲ್ಲಿ ಮಲಗಿದ್ದೆವು. ಬೆಂಕಿ ಹೊತ್ತಿದ್ದನ್ನು ನೋಡಿದವನು ನಾನೇ. ದೊಡ್ಡಪ್ಪನನ್ನು ಎಚ್ಚರಿಸಿದೆ. ದೊಡ್ಡಪ್ಪ ಹೊರಟು ಜನರನ್ನು ಸೇರಿಸಿಬಿಟ್ಟ. ಆಗ ನಮ್ಮ ದೊಡ್ಡಪ್ಪ ಅಂದದ್ದು ಹೀಗೆ : 'ಥೂ ಅಯೋಗ್ಯ! ಕೆಂಚ ಬಣವಿಗೆ ಬೆಂಕಿ ಇಟ್ಟು ಬಿಟ್ಟ' ಎಂದು ನಮ್ಮ ಮನೆಯ ರಕ್ಷಣೆಗೆ ಸಿದ್ಧನಾದ. ಈ ನೋಟ ಒಂದು ನನ್ನ ಜ್ಞಾಪಕದಿಂದ ಹಾರಿಲ್ಲ. ಇವನ ಈ ಹೆದರಿಕೆಯ

ಕಾರಣ ಇವನ ತೋಟದೊಳಗೆ ಒಂದು ಕಡಿ ಕಳ್ಳತನ ಕೂಡ ಆಗುತ್ತಿರಲಿಲ್ಲ. ತನ್ನ ತೋಟವಲ್ಲಿ ಇಂಥವರು ಕಳವು ಮಾಡಿದ್ದಾರೆ ಎಂದು ಗೊತ್ತಾದರೆ ಆಯಿತು. ಆ ವರ್ಷವೋ ಅದರ ಮುಂದಿನ ವರ್ಷವೋ ಕಾಯ್ದು ಅವರ ಬಣವೆಗಳಿಗೆಲ್ಲ ಬೆಂಕಿ ಹಚ್ಚಿ ಸುಟ್ಟು ಹಾಕುವುದೇ ಇವನ ಕಸುಬಾಗಿತ್ತು. ಬಣವಿಗೆ ಬೆಂಕಿ ಹಚ್ಚಿದವನು ಇವನೇ ಎಂದು ಗೊತ್ತಾದರೂ ಯಾರೂ ಇವನ ವಿರೋಧವಾಗಿ ಕಂಪ್ಲೆಂಟ್ ಕೊಡಲು ಹೋಗುತ್ತಿರಲಿಲ್ಲ. ಹಾಗೆ ಕಂಪ್ಲೆಂಟ್ ಕೊಟ್ಟರಾಯಿತು ಅವರ ಸರ್ವನಾಶ. ಈ ಒಂದು ಹೀನಸುಳಿಯನ್ನು ಬಿಟ್ಟರೆ ಉಳಿದಂತೆಲ್ಲ ಕೆಂಚಪ್ಪ ಸಹೃದಯ, ಶ್ರಮಜೀವಿ, ಸ್ನೇಹಿ, ಹಳ್ಳಿಯ ಮಟ್ಟದ ಕಲೆಗಾರ, ಪೋಕಿದಾರ -ಏನೆಲ್ಲ ಹೇಳಬಹುದಿತ್ತು. ಇವನಿಗೆ ಮೂರು ಜನ ಹೆಂಡರು. ಮೊದಲ ಹೆಂಡತಿ ಬಹಳ ದೊಡ್ಡ ಮನುಷ್ಯಳು. ಅವಳೊಡನೆ ಅವನ ಸಂಸಾರ ಸುಖಮಯವಾಗಿತ್ತು. ಅವಳು ಸತ್ತ ಮೇಲೆ ಮೊಸತ್ತಿಯ ಕಡೆ ಹೋಗಿ ಒಬ್ಬಳನ್ನು ಲಗ್ನ ಮಾಡಿಕೊಂಡು ಬಂದ. ಅವಳೂ ಸತ್ತಳು. ಮತ್ತೊಬ್ಬ ಉಡಿಕಿ (ಸೇರೆಉಡುಕಿ) ಮಾಡಿಕೊಂಡು ಬಂದ. ಅಂತೂ ಅವನಿಗೆ ಜೊತೆ ಬೇಕೇ ಬೇಕು. ಕಚ್ಚೆ ಹರುಕನೆಂಬ ಅಪಖ್ಯಾತಿಗೆ ಕೆಂಚಪ್ಪ ಎಂದೂ ಗುರಿಯಾಗಲಿಲ್ಲ. ಅವನ ಉಳಿವಿಗೆ ಓರ್ವ ಹೆಣ್ಣಿನ ಅವಶ್ಯಕತೆ ಇದ್ದೇ ಇತ್ತಾಗಿ, ಸೀರೆ ಉಡಕಿಯೂ ಏನೋ ಎಂತೊ ಅನೇಕ ಹೆಂಗಸರ ಜೊತೆಯಲ್ಲಿ ಬಾಳುವೆ ಮಾಡಿದ. ಇತ್ತೀಚೆಗೆ ಕೆಂಚಪ್ಪ ಸತ್ತ. ಅವನ ಜೊತೆಗೆ ಅವನ ತೋಟಗಾರಿಕೆಯೂ ನಮ್ಮೂರಲ್ಲಿ ಸತ್ತು ಹೋಯಿತು. ಇನ್ನೊಬ್ಬ ಕೆಂಚಪ್ಪ ಇಂದಿಗೂ ನಮ್ಮೂರಲ್ಲಿ ಹುಟ್ಟಿಲ್ಲ. ತೋಟಮಾಡಿ ಕೆಂಚಪ್ಪನಂತೆ ದುಡಿದು ಸಮೃದ್ಧಜೀವನ ಸಾಗಿಸಿದ ಇನ್ನೊಬ್ಬ ಶ್ರೇಷ್ಠ ಕಾಯಕಜೀವಿ ಕಣ್ಣಿಗೆ ಬೀಳಲೇ ಒಲ್ಲದು. ಕಾಲಾಯ ತಸ್ಮೈನಮಃ. ಕೆಂಚಪ್ಪನ ಸಾವಿನೊಡನೆ ನಮ್ಮೂರ ಹಸಿರುವಾಣಿ ತೋಟದ ತರಕಾರಿ ತಿನ್ನುವ ಭಾಗ್ಯವೂ ನಮ್ಮಿಂದ ದೂರವಾಯಿತು. ಹೀಗೆ ಕೆಂಚಪ್ಪನ ವ್ಯಕ್ತಿತ್ವದ ಪ್ರಭಾವ ನಮಗೆ ಬಾಲ್ಯದಲ್ಲಿ ಹೆಚ್ಚಾಗಿ ಆಗಿದೆ. ಅವನು ಸಣ್ಣವರಾದ ನಮ್ಮನ್ನು ಬಹುಪ್ರೀತಿಯಿಂದಲೇ ಕಂಡು ಮಾತನಾಡಿಸುತ್ತಿದ್ದ. ನಾನು ಐದನೇ ತರಗತಿ ಓದುವವರೆಗೆ ಅವನ ಸಂಪರ್ಕ ಹೊಂದಿದ್ದೆ. ರಾತ್ರಿ ಊಟಮಾಡಿ ಅವನ ಕಟ್ಟೆಗೆ ಹೋಗಿ ಬಹಳ ಹೊತ್ತು ಕೂತು ಅವರ ಹಾಡು ಮೊದಲಾದವನ್ನು ಕೇಳಿ ಬರುತ್ತಿದ್ದೆ. ನಕ್ಕು ನಲಿದೂ ಬರುತ್ತಿದ್ದೆ. ಅವನ ಹಾಡುಗಳಲ್ಲಿ ಬಹಳಷ್ಟು ಇಂದಿಗೂ ಜ್ಞಾಪಕದಲ್ಲಿ ಇವೆ. ಹರಿಶ್ಚಂದ್ರನ ಆಟದಲ್ಲಿನ -

ಪಟ್ಟಾದಾನೆಯ ಮೇಲೆ ಮಾನವನು ಕವಡಿ।
ಎಷ್ಟು ಮೇಲಕ್ಕೆ ತಾನು ತೂರುವನೋ॥
ಅಷ್ಟುದ್ದ ದ್ರವ್ಯದ ರಾಶಿ ಕೊಡೆ ನೀ ಬೇಗ
ಕೊಡದಿದ್ದರೆ ಕೊಡುವೆನು ಶಾಪವನು ॥

ಈ ಪದ್ಯ ಮತ್ತು ವೇಗದ ಗತಿಯ ವಿಶ್ವಾಮಿತ್ರನ ಸಿಟ್ಟಿನ ಹಾಡು :

ಆತನ ರಾಜ್ಯದಲ್ಲಿ ಕ್ರೂರಮೃಗಗಳನು
ಹಿಂಡುಗಟ್ಟಿ ತಿರುಗುವಂತೆ ಮಾಡುವನೋ॥ ಆ ಆ ಆ ಹಾ ಯಾ॥
ಮಾಡುವೆನವನನ್ನು ಸತ್ಯಭ್ರಷ್ಟನನ್ನು....... ॥

ನೀಲಕಂಠನ ಆಟದಲ್ಲಿ ಸೂಳೆಪಾತ್ರದವಳು ಹೇಳುವ ಈ ಕೆಳಗಿನ ಹಾಡನ್ನು ಕೆಂಚಪ್ಪ ಬಹು ಅಂದವಾಗಿ ಹೇಳುತ್ತಿದ್ದ. ಬಸವಣ್ಣೆಪ್ಪನ ಹಾರ್ಮೋನಿಯಂ ಮಾತ್ರ ಎತ್ತೆತ್ತಲೋ ಹರಿದಾಡುತ್ತಿತ್ತು. ಅವನ ಹಾರ್ಮೋನಿಯಂ ನುಡಿಸುವಿಕೆಗಿಂತ ತಲೆಹಾಕುವ ದಿಮಾಕೇ ನೋಡುವಂತಿರುತ್ತಿತ್ತು. ಕೆಂಚಪ್ಪನ ಹಾಡಲ್ಲದೆ ಬೇರೆ ಏನೂ ಅವನಿಗೆ ಬರುತ್ತಿದ್ದಿಲ್ಲ. ತಲೆಯಲ್ಲಾಟ, ಭುಜದ ಕುಣಿಸಾಡುವಿಕೆಯೇ ಒಳ್ಳೆಯ ವಿನೋದಕಾರಕವಾಗಿರುತ್ತಿತ್ತು.

ಗಂಡಸು ಜಾತಿಗೆ ಮಿಂಡಳು ನಾನು । ಹಿಂಡುವೆನೆಲ್ಲರನು
ಭಂಡರ ತಂಡವನು.............॥

ತಿರುನೀಲಕಂಠ ಶಿವಾಲಯದಿಂದ ಮಾರ್ಗಮಧ್ಯದಲ್ಲಿ ಬರುವಾಗ ಸೂಳೆಯೊಬ್ಬಳು ಮಹಡಿಯಿಂದ ಎಂಜಲು ತಟ್ಟೆ ತೊಳೆದ ನೀರನ್ನು ಚಲ್ಲಿದಳೆಂದು ಹರಿಹರಕವಿ ಹೇಳಿದರೆ ಇವರ ನೀಲಕುಂಠನ ಆಟದಲ್ಲಿ ಇನ್ನೂ ಮುಂದೆ ಹೋಗಿ ಸೂಳೆ ತಾನು ಹಾಕಿಕೊಂಡ ತಾಂಬೂಲದ ಉಗುಳನ್ನು ಉಗುಳಿದಳಂತೆ, ಉಗುಳಿದ ಉಗುಳು ತಿರುನೀಲಕಂಠನ ಮೇಲೆ ಬಿದ್ದಿತೆಂದು ಗೊತ್ತಾದಾಗ ಆಕೆ -

ನಿಮ್ಮನ್ನು ನೋಡದೆ ನಿಮ್ಮ ಮೇಲೆ ಉಗುಳಿದೆ
ಸನ್ನುತ ನಿಮ್ಮ ಪಾದ । ಬಿಡಲಾರೆ ನಾನು ದೇವ ॥

ಎಂದು ಪಾದ ಹಿಡಿದುಕೊಂಡುಬಿಟ್ಟಳಂತೆ. ಗಂಡಸುಜಾತಿಗೆ ಮಿಂಡಳು ನಾನು ಎಂದು ಗರ್ವದಿಂದ ನುಡಿಯುತ್ತಿದ್ದ ಈಕೆಯು ಅರೆಕ್ಷಣದಲ್ಲಿ ತಿರುನೀಲಕಂಠನ ಪಾದದ ಮೇಲೆ ಬಿದ್ದು ಬೇಡಿಕೊಳ್ಳುವ ದೃಶ್ಯ - ಹೀಗೆ ಅನೇಕ ಮಟ್ಟಿನ ರಾಗದ ತಾಳದ ಹಾಡುಗಳನ್ನು ಹಾಡುತ್ತಿದ್ದ ಕೆಂಚಪ್ಪನೇ ನಮಗೂ ಅಷ್ಟು ಇಷ್ಟು ಬಾಯಿ ಬಿಟ್ಟು ಹೊಲದಲ್ಲಿ ದನ ಮೇಯಿಸುವಾಗ ಹಾಡುವುದಕ್ಕೆ ಕಲಿಸಿದ ಗುರುವೆಂದರೂ ನಡೆದೀತು. ಅವನು ಹಾಡುತ್ತಿದ್ದ ಹಾಡೆಲ್ಲ ನಮಗೂ ಬರುತ್ತಿದ್ದವು. ಮೊದಮೊದಲು ನಮ್ಮ ಹಾಡುಗಳು ಇದೇ ದರ್ಜೆಯವೇ. ಎಲ್ಲೆಂದರಲ್ಲಿ ಗುನು ಗುನು ಜಿನುಗುತ್ತಿದ್ದೆವು. ಹಾಡುತ್ತ ಹಾಡುತ್ತ ರಾಗ, ಉಗುಳುತ್ತ ಉಗುಳುತ್ತ ರೋಗ - ಎಂಬಂತೆ ಹಾಡುವ ಈ ಚಟವೇ ಮುಂದೆ ಅನೇಕ ನಾಟಕಗಳ ಹಾಡು ಕೇಳಿಕೇಳಿ ನಾವೂ ಅಲ್ಲಿ ಇಲ್ಲಿ ಹಾಡಲು ಪ್ರಾರಂಭಿಸಿದೆವು. ಶಾಸ್ತ್ರೀಯವಾಗಿ ಹಾಡಲು ಬರದಿದ್ದರೂ ಹಾಡು ಕೇಳುವ ಚಟವಾದರೂ ಅಂಟಿತು.

ನಮ್ಮೂರಿನವರಿಗೆ ಚಹಾಮಾಡುವ ಕ್ರಮ, ಅದರ ಕುಡಿತದ ರೀತಿ ಮೊದಲಾದವು ಗೊತ್ತಾದದ್ದೇ ನಾನು ಬಹಳ ಚಿಕ್ಕವನಿದ್ದ ಕಾಲದಲ್ಲಿ; ಬಹುಶಃ 1927-28ನೇ ಇಸ್ವಿ ಸುಮಾರು. ಆಗ ನಾನು ಎರಡನೇ ತರಗತಿಯಲ್ಲಿ ಓದುತ್ತಿದ್ದೆನೆಂದು ತೋರುತ್ತದೆ. ಬಂಕಾಪುರದಿಂದ ಚಹಾಸೊಪ್ಪು, ಚಹಾಕ್ಕೆ ಹಾಕಲೇಬೇಕಾದ ಹಳಕುಸಕ್ಕರೆ (ಈಗಿನ ಸಕ್ಕರೆ ಇದಕ್ಕೆ ಆಗ ಜಾನಸೀಸಕ್ಕರೆ ಅನ್ನುತ್ತಿದ್ದರು) ತರಿಸಿ ಆಡಿನ ಹಾಲು ಹಾಕಿ ಕಾಸಿ. ಹತ್ತು ಹದಿನೈದು ಜನ ಸೇರಿ ಕಾರಮಂಡಕ್ಕಿ ತಿನ್ನುತ್ತಿದ್ದರು. ಇದೆಲ್ಲ ನಡೆಯುತ್ತಿದ್ದುದು ಬರಮಪ್ಪಜ್ಜ ಎಂಬ ಓರ್ವ ಮುದುಕನ ಮನೆಯಲ್ಲಿ. ಈ ಮನೆಯೇ ಚಹಾ ಗಂಗೆಯ ಗಂಗೋತ್ರಿ ನಮ್ಮೂರಿಗೆ. ಈ ಮನೆ ಇದೊಂದಕ್ಕೇ ಪ್ರಖ್ಯಾತಿಯಲ್ಲ. ಗಾಂಜಾ ಸೇದುವಿಕೆ. ಅಫೀಮು ತಿನ್ನುವಿಕೆ, ಅಫೀಮಿನಿಂದ ಗುಡುಗುಡಿ ಸೇದುವಿಕೆ ಮೊದಲಾದ

ದುಶ್ಚಟಗಳ ಉಗಮಕ್ಕೂ ಮಾತೃಭೂಮಿ. ಈ ಮನೆಯಲ್ಲಿ ಸೇರುತ್ತಿದ್ದ ಮಹಾಮಹಿಮರ ಸಮಿತಿಯ ಸದಸ್ಯ ನಮ್ಮ ತಂದೆ. ಈ ಕಾರಣವಾಗಿ ನಮ್ಮ ಮನೆಯಲ್ಲಿ ನಮ್ಮ ದೊಡ್ಡಪ್ಪನಿಗೂ ನಮ್ಮಪ್ಪನಿಗೂ ಆಗಾಗ ಜಗಳಗಳೂ ಆಗುತ್ತಿದ್ದವು. ಒಮ್ಮೆ ಹೊಡೆದಾಡಿದ್ದೂ ಉಂಟು. ಇವರಿಬ್ಬರ ಈ ಹೊಡೆದಾಟ, ಜಗಳದಿಂದಾದ ಜಿಗುಪ್ಸೆ ನಮ್ಮ ಮನೆಯಲ್ಲಿ ನನಗೆ ಇನ್ನಾವುದರಿಂದಲೂ ಆಗುತ್ತಿರಲಿಲ್ಲ. ಇದೇ ಕಾರಣದಿಂದ ನಮ್ಮ ತಾಯಿ, ದೊಡ್ಡಮ್ಮಗ್ಳೂ ಜಗಳ ಮಾಡುತ್ತಿದ್ದರೂ ಇದು ಅಷ್ಟೊಂದು ತೀವ್ರವಾಗಿರಲಿಲ್ಲ. ಹಂಗಣಿಯ ಮಾತಿನಲ್ಲಿ ಪರ್ಯವಸಾನವಾಗಿ ವೃಥಾ ಮನಸ್ತಾಪಕ್ಕೆ ಕಾರಣನಾದರೂ ಅವರು ಪುನಃ ಮಾತುಕತೆ ಆರಂಭಿಸಿ ಬೀಸುವ ಕಲ್ಲಿಗೆ ಕುಳಿತು ಬೀಸಲು ಪ್ರಾರಂಭಿಸಿಬಿಡುತ್ತಿದ್ದರು. ಕೆಲಸದಲ್ಲಿ ದ್ವೇಷ ಮರೆಯುತ್ತಿದ್ದರು.

ಭರಮಜ್ಜನ ಮನೆ ಸೇರಿ ಸಕಾಲಕ್ಕೆ ನಮ್ಮ ಮನೆಗೆ ಬರದಿದ್ದರೆ, ಹೊತ್ತಿಗೆ ಸರಿಯಾಗಿ ಹೊಲಕ್ಕೆ ಗಳೇ ಹೂಡಿಕೊಂಡು ಹೋಗದಿದ್ದರೆ ನಮ್ಮ ದೊಡ್ಡಪ್ಪನ ಸಿಟ್ಟು ನೆತ್ತಿಗೇರುತ್ತಿತ್ತು. ಆಗ ನನ್ನನ್ನು ಕರೆದು "ಹೋಗು, ಆ ಭರಮಪ್ಪನ ಮನ್ಯಾಗ ಕುಂತಾನೇನೊ ಕರ್ಕೊಂಡು ಬಾ. ಮಂದೆಲ್ಲ ಹೊಲ್ದಾಗ ಗಳೇ ಹೂಡಿ ಹತ್ತು ತಿರುವು ಹೊತ್ತುಬಿಟ್ರು. ಅಂವಾ ಇನ್ನಾ ಅಲ್ಲೇ ಕುಂತಾನೇನೋ ನೋಡು" ಎಂದು ಹೇಳಿ ಕಳಿಸುತ್ತಿದ್ದನಾಗಿ ಬರಮಪ್ಪನ ಮನೆ ನನಗೆ ಬಾಲ್ಯದಿಂದಲೂ ಪರಿಚಿತವಾಗಿತ್ತು. ನಾನು ಅಲ್ಲಿಗೆ ಕರೆಯಲು ಹೋದೊಡನೆ ನನ್ನನ್ನು ಎಲ್ಲರೂ ಪ್ರೀತಿಸುವವರೇ. ಆಗ ನಮ್ಮಪ್ಪ ನನ್ನನ್ನು ನೋಡಿ ತಾನೇ ಹೊರಗೆ ಬಂದು "ಈಗ ಬಂದುಬಿಟ್ಟೆ. ನಡಿ" ಎಂದು ಹೇಳಿ ಕಳಿಸಿ ಬಿಡುತ್ತಿದ್ದನಾಗಲಿ ನನ್ನನ್ನು ಎಂದೂ ಒಳಗೆ ಕರೆಯುತ್ತಿರಲಿಲ್ಲ. ನಮ್ಮ ದುಶ್ಚಟಗಳ ಸ್ವರೂಪ ಈ ಚಿಕ್ಕವರಿಗೇಕೆ ತಿಳಿಯಬೇಕು ಎಂದೋ ಏನೋ, ಅಂತೂ ಹೊರಗಿಂದ ಹೊರಗೇ ಕಳಿಸಿಬಿಡುತ್ತಿದ್ದ. 28ನೇ ಇಸ್ವಿಯಿರಬೇಕು. ಒಮ್ಮೆ ನಾನು ಕರೆಯ ಹೋದಾಗ ಚಹಾ ಮಾಡುವ ಸಡಗರ ನಡೆದಿತ್ತು. ಒಂದುದೊಡ್ಡ ಪಾತ್ರೆಯಲ್ಲಿ ಹಚ್ಚಿದ ಮಂಡಕ್ಕಿ (ಕಾರಮಂಡಕ್ಕಿ) ಸಿದ್ಧವಾಗಿತ್ತು. ಚಹಾ ಮಾಡುವ ವಿಜ್ಞಾನವನ್ನು ಬಲ್ಲ ಆಗಿನ ಆ ಗುಂಪಿನಲ್ಲೇ ತರುಣನು ನೂರಾರು ಚಟಗಳ ಗಣಿಯೂ ಆದ ಕಸನಹಳ್ಳಿ ಬಸಪ್ಪ 'ಹಾ!' ನೀರು ತಳಮಳ ಕಾಯಿತು, ಕೊಡ್ರಿಕೊಡ್ರಿ! ಚಹಾಪುಡಿ ಕೊಡ್ರಿ ಚಹಾಪುಡೀನ ಈಗಲೇ ಹಾಕಬೇಕು. ಹತ್ನಿಮಿಷ ಆದು ತಳಮಳ ಕುದೀಬೇಕು. ಆಮೇಲೆ ಸಕ್ರಿಹಾಕಿ ಸ್ವಲ್ಪ ಹೊತ್ತು ಬಿಟ್ಟು ಇಳಿಸಿ ಆಮೇಲೆ ಹಾಲ್ಹಾಕಬೇಕು. ಅದು ಕೊಡಿ ಇದು ಕೊಡ್ರಿ ಹೀಗೆ ಅನ್ನುತ್ತಾ ಗಡಿಬಿಡಿ ಮಾಡುತ್ತಿರುವ ಹೊತ್ತಿಗೇ ನಾನು ಹೋದೆ. ನನ್ನನ್ನು ಕಂಡು ನಮ್ಮಪ್ಪ "ಯಾಕೋ ತಮ್ಮ, ಬರ್ತಿನಿ, ನಡಿ" ಅಂದೇ ಬಿಟ್ಟ. ನಾನು ಹೋಗಲೇ ಇಲ್ಲ, ಹಾಗೇ ನಿಂತೆ ಈ ಜನಗಳನ್ನ ನೋಡುತ್ತ. ಚಹಾ ಹಾಕಿ ಒಬ್ಬೊಬ್ರಿಗೆ ಕೊಟ್ಟರು. ಎಲ್ಲರೂ ಹುಬ್ಬೇರಿಸಿ "ಬರಮಣ್ಣ ನೋಡೋ ಎಷ್ಟು ಮಜಾ ಐತೀ ಚಹಾ ಅಬ್ಬಾ! ಅಷ್ಟಲ್ದೆ ಆ ಇಂಗ್ಲೀಷ್ನೋರು ಇದ್ನ ಕುಡಿತೀದ್ರೇನಪಾ!" ಹೀಗೆ ಚಹಾದ ವರ್ಣನೆ ನಡೆದೇ ನಡೆಯಿತು. ಜೊತೆಗೆ ಪುರಿ ಮುಕ್ಕುವುದೂ ನಡಿಯಿತು. ಇವರ ಈ ಸಂಭಾಷಣೆಯನ್ನು, ಸಂಭಾಷಣೆಯಲ್ಲಿ ಉಕ್ಕುತ್ತಿದ್ದ ಚಹಾದ ವರ್ಣನೆಯ ವಿವಿಧ ಮಧುರೋಕ್ತ ವಿನ್ಯಾಸಗಳನ್ನು ಮರೆಯಲ್ಲಿ ನಿಂತುಕೇಳಿ ಮನೆಗೆ ಬಂದು ನಮ್ಮ ದೊಡ್ಡಪ್ಪನಿಗೆ ನಡೆದದ್ದನ್ನೆಲ್ಲ ಹೇಳಿ ಬಿಟ್ಟೆ. ನಮ್ಮ ದೊಡ್ಡಪ್ಪ ಕಿಡಿಕಿಡಿಯಾಗಿ "ಮನಿ ಹಾಳಾಗಿ ಹೋತು" ಎಂದು ಹಾರಾಡಿ ಕುಣಿದಾಡಿ "ಯಾವಾಗಾದ್ರೂ ಬರ್ಲಿ, ಗುರುಪಾದಾ ಎತ್ತು ಬಿಡು" ಎಂದು ನಮ್ಮ ಮಾವನಿಗೆ ಹೇಳಿ

ಅವನೊಡನೆ ಕುಂಟಿ ರಂಟಿ ಹೇರಿಕೊಂಡು ಹೊಲಕ್ಕೆ ನಡೆದೇ ಬಿಟ್ಟ. ಸ್ವಲ್ಪ ಹೊತ್ತಿನ ಮೇಲೆ ಏದುತ್ತ ನಮ್ಮಪ್ಪ ಬಂದು ದೊಡ್ಡಪ್ಪ ಹೋದದ್ದನ್ನು ಕೇಳಿ ಊಟ ಪಾಟಾ ಎಲ್ಲಾ ಬಿಟ್ಟು ಹೊಲಕ್ಕೆ ರೊಟ್ಟಿ ತಗೊಂಬರ್‍ರಿ ಎಂದು ಮನೆಯಲ್ಲಿ ನಮ್ಮ ತಾಯಿಗೆ ಹೇಳಿ ಹೋಗಿಬಿಟ್ಟ. ಹೊಲದಲ್ಲಿ ಅಣ್ಣ ತಮ್ಮರಿಬ್ಬರಿಗೂ ಕುಸ್ತಿಯೇ ಆಯಿತಂತೆ. ಎಂಟು ಹತ್ತುದಿನ ಅಣ್ಣತಮ್ಮಂದಿರಿಬ್ಬರೂ ಮಾತೇ ಆಡಿದ್ದಿಲ್ಲ. ಮಾತಾಡದಿದ್ದರೆ ಮನೆ ನಡೆಯುತ್ತದೆಯೇ. ನಮ್ಮಪ್ಪನೇ ತಮ್ಮ ಅಣ್ಣನನ್ನು ಮಾತನಾಡಿಸಿ ಬೈಸಿಕೊಂಡು ಪುನಃ ಎಂದಿನಂತಾದರು.

ನಮ್ಮಪ್ಪ, ದೊಡ್ಡಪ್ಪ ಇಬ್ಬರೂ ಪದೇ ಪದೇ ಜಗಳ ಮಾಡುತ್ತಿದ್ದುದು ಬಾಲ್ಯದಲ್ಲಿ ನನಗೆ ಬಹಳ ಬೇಸರ ತರುವ ವಿಷಯವಾಗಿತ್ತು. ಒಬ್ಬರ ಮಾತಿಗೆ ಒಬ್ಬರು ಸಹಿಸುತ್ತಲೇ ಇರಲಿಲ್ಲ. ಬರಮಜ್ಜನ ಮನೆಗೆ ಹೆಜ್ಜೆ ಇಟ್ಟಿಗಿಟ್ಟೀಯೆ ಎಂದು ನಮ್ಮ ದೊಡ್ಡಪ್ಪ ತಾಕೀತ್ ಮಾಡಿದ್ದನ್ನು ನಮ್ಮಪ್ಪ ಪಾಲಿಸುತ್ತಿರಲಿಲ್ಲ. ಕದ್ದು ಕದ್ದು ಹೋಗಿ ಆ ಕೂಟದಲ್ಲಿ ಸೇರಿಬಿಡುತ್ತಿದ್ದ. ಆ ಮನೆ ನಮ್ಮೂರನ್ನೇ ಹಾಳುಮಾಡಿ ಬಿಟ್ಟಿತು. ಬರಮಜ್ಜ ತನ್ನ ಮನೆಗೆ ಬರುವ ಎಲ್ಲ ಪ್ರತಿನಿಧಿಗಳಿಗೂ ಅಫೀಮಿನ ಚಟ ಹಚ್ಚಿ ಬಿಟ್ಟ. ಅಫೀಮನ್ನು ನುಂಗುವುದಲ್ಲ. ಜಾಲಿಯ ಸೊಪ್ಪನ್ನು ಹುರಿದು ಅಫೀಮನ್ನು ಕಾಸಿ ಹುರಿದ ಸೊಪ್ಪಿಗೆ ಸೇರಿಸಿ, ಉಂಡೆ ಕಟ್ಟಿಟ್ಟುಕೊಂಡು ಸ್ವಲ್ಪಸ್ವಲ್ಪವೇ ಗುಡುಗುಡಿಯ ತುದಿಗಿಟ್ಟು ಹುಣಸೀಚಕ್ಕೆಯ ಬೆಂಕಿಯಿಂದ ಹೊತ್ತಿಸಿ ಗುಡುಗುಡು ಎಂದು ಧ್ವನಿ ಬರುವಂತೆ ಅದನ್ನು ಸೇದುತ್ತಿದ್ದರು. ಇದರ ಜೊತೆಗೆ ಬಂಗೀಸೊಪ್ಪು ಸೇದುವುದಂತೂ ಸಾಮಾನ್ಯ ವಿಷಯ. ಹಳ್ಳಿಗಳಲ್ಲಿ ಆಗ ಗಾಂಜಾ, ಹೊಗೆಸೊಪ್ಪುಗಳನ್ನು ಸೇದುವುದು ಅಷ್ಟೊಂದು ಮಹಾಪರಾಧಗಳೇ ಆಗಿರಲಿಲ್ಲ. ಈಗಿನಂತೆ ಡಾಕ್ಟರರು ಪದೇ ಪದೇ ಕ್ಯಾನ್ಸರ್, ಗೀನ್ಸರ್ ಎಂದು ಹೇಳುವವರೂ ಇದ್ದಿಲ್ಲ. ಅದೊಂದು ದೊಡ್ಡಸ್ತಿಕೆಯ ಚಟವೇ ಆಗಿತ್ತು. ಈ ಚಟಕ್ಕೆ ಬಲಿಯಾದ ಅನೇಕರು ನಮ್ಮೂರಿನಲ್ಲಿ ಮನೆ ಮಠ ಕಳೆದುಕೊಂಡು ಆರೋಗ್ಯವನ್ನು ಕೆಡಿಸಿಕೊಂಡರು. ದೇಸಾಯಿ ಮಹಾಲಿಂಗಪ್ಪ ತನ್ನ ದೊಡ್ಡ ಆಸ್ತಿಯನ್ನೇ ಈ ಚಟಕ್ಕಾಗಿ ನೀಗಿದ್ದು ನಮ್ಮೂರಿನ ಇತಿಹಾಸದಲ್ಲೇ ಪ್ರಸಿದ್ಧ. ಇದರಂತೆ ಮೂಲಿಮನಿ ಸರಸಪ್ಪ, ಯಮುನಪ್ಪ, ಕುಂಬಾರ ಬಸವಣ್ಣೆಪ್ಪ, ಒಬ್ಬರೇ ಇಬ್ಬರೇ! ನಮ್ಮೂರಿನ ಸತ್ವವೆಲ್ಲ ಅಫೀಮಿನ ಚಟದವರಿಂದ ನಿಸ್ತೇಜಗೊಂಡಿತೆಂದು ಒಂದೇ ಮಾತಿನಲ್ಲಿ ಹೇಳಿಬಿಡಬಹುದು. ಚಹಾದ ಚಟವನ್ನು ನಮ್ಮೂರಿನ ಅನೇಕರಿಗೆ ಹಚ್ಚಿದವನೂ ಆ ಬರಮಜ್ಜನೇ. ಆದರೆ ಯಾರೂ ಅದನ್ನು ತಮ್ಮ ತಮ್ಮ ಮನೆಗಳಲ್ಲಿ ಕಾಸುವ ಗೋಜಿಗೆ ಹೋಗಲಿಲ್ಲ. ಹೆಂಗಸರೇ ಒಲೆ ಮೇಲೆ ಚಹಾದ ಪಾತ್ರೆಯನ್ನಿಡಲು ಬಿಡುತ್ತಿರಲಿಲ್ಲ. "ಎಲ್ಲಿ ಯಾರೇ ಕುಡಕೊಳ್ಳಿ ನಿಮಗ ಹೇಳದರ ಯಾರು? ನಮ್ಮ ವಲೀಮ್ಯಾಲೆ ಅದನ್ನಿಡಗೊಡವ್ವಲ್ಲ" ಎಂದು ಬಿಡುತ್ತಿದ್ದರು. ಹೀಗಾಗಿ ಆಗ ಚಹಾದ ಬಗ್ಗೆ ಬಹು ತಿರಸ್ಕಾರ ಎಲ್ಲರಲ್ಲೂ ಇತ್ತು. ಅದನ್ನು ಕುಡಿದವನ ಮುಖ ಕಪ್ಪಾಗಿ ಕೈಕಾಲು ಸಣ್ಣಗಾಗುತ್ತವೆ; ಪಚನ ಶಕ್ತಿ ಉಡುಗಿ ಮನುಷ್ಯನಿಗೆ ಕ್ಷಯರೋಗ ಬರುತ್ತೆ ಇತ್ಯಾದಿ ಇತ್ಯಾದಿ ಪ್ರಚಾರ ಮಾಡುತ್ತಿದ್ದರು. ಕೆಲವರಂತೂ ಪದ್ಯಕಟ್ಟಿ ಹಾಡುತ್ತಿದ್ದುದೂ ಉಂಟು. ಮರೋಳದ ಸದಾಶಿವಯ್ಯ ಎಂಬ ಪಿಟೀಲಿನವನೊಬ್ಬ ಹಾವೇರಿಯಲ್ಲಿದ್ದ ಆತ ತನ್ನ ಪಿಟೀಲು ನುಡಿಸಿಕೊಂಡು-

ಶರಣೆಂಬೆ ಬಾ ಚಹಾ ಮರಿಗೆ
ಭೆಟ್ಟಿಯಾದೆ ಎಲ್ಲರಿಗೆ॥

ಎಂದು ಒಂದು ದೀರ್ಘಪದವನ್ನೇ ಹಾಡುತ್ತ ಚಹಾ ಕುಡಿತದ ಬಗ್ಗೆ ತಿರಸ್ಕಾರ ಬರುವ ರೀತಿಯಲ್ಲಿ ಪ್ರಚಾರ ಮಾಡುತ್ತಿದ್ದ. ಅದನ್ನು ಕೇಳಿ ಜನ ನಕ್ಕು ನಕ್ಕು ಚಹಾ ಕುಡಿಯುತ್ತಿದ್ದರು. ಅನೇಕರು ಚಹಾ ಕುಡಿಯ ಬಾರದೆಂದು ಹೇಳುತ್ತಲೇ ಚಹಾ ಕುಡಿಯುತ್ತಿದ್ದರು. ತಲೆಯ ಮೇಲೆ ಕ್ರಾಪ್ ಬಿಟ್ಟು ಚಹಾ ಕುಡಿಯುವವರನ್ನು ಕಂಡರಂತೂ ಹಳ್ಳಿಯ ಜನ ಕಿಡಿಕಡಿಯಾಗುತ್ತಿದ್ದರು. ಅಂಥವನನ್ನು ಪ್ರಾಣಿಸಂಗ್ರಹಾಲಯದ........ ಯಂತೆ ಕಂಡು ಇವನೊಬ್ಬ ಮಸಿ ಹಾಳುಗ ಹುಟ್ಟಿದ ನಮ್ಮೂರಲ್ಲಿ. ತಲೆ ಮೇಲೆ ಕ್ರಾಪು, ಕಯ್ಯಲ್ಲಿ ಕಪ್ಪು ಬಸಿ. ಮೇಲೆ ಕಪ್ಪು ಕೆಳಗೆ ಬಸಿ. ಆಯಿತು ಇವ ಮನಿಮಠವನ್ನು ಉಳಸೋದಿಲ್ಲ ಎನ್ನುತ್ತಿದ್ದರು ಮೇಲೆ ಕಪ್ಪು ಕೆಳಗೆ ಬಸಿ ಅಂದರೆ ಇವರ ಅರ್ಥದಲ್ಲಿ ಚಹಾಕುಡಿಯುವವನಿಗೆ ಮೂರ್ಖಪ್ರಾಣಿ ಕೆಳಗೆ ಬಸಿಯುತ್ತದೆ ಎಂದು ಆಗ ಚಹಾವನ್ನು ಕಪ್ಪು ಸಾಸರ್‌ನಲ್ಲಿ ಕೊಡುತ್ತಿದ್ದರು. ಸಾಸರ್‌ಗೆ ಬಸಿ ಎಂದು ಕರೆಯುತ್ತಿದ್ದರು.

ಹಾವೇರಿ, ಬಂಕಾಪುರ, ಹುಬ್ಬಳ್ಳಿಗಳಿಗೆ ಹೋದರೂ ಕೆಲವರು ಚಹಾದಂಗಡಿ ಕಂಡರೆ ಜನರನ್ನು ಜಾತಿಗೆಡಿಸುವ ಅಂಗಡಿ ಎಂದು ಹೊರಳಿ ನೋಡುತ್ತಿರಲಿಲ್ಲ. ಇನ್ನು ಕೆಲವರು ಕದ್ದು ಮುಚ್ಚಿ ಚಹಾದಂಗಡಿ ಹೊಕ್ಕೇ ಬರುತ್ತಿದ್ದರು. ಕಾಲಾಣೆಗೆ ಕಪ್ಪು ಚಹಾ, ಕಾಲಾಣೆಗೆ ಒಂದು ಚೌ ಚೌ ಪ್ಲೇಟ್ ಕೊಡುತ್ತಿದ್ದರು. ದೋಸೆ ಇಡ್ಲಿಗಳನ್ನು ಒಟ್ಟಿನಲ್ಲಿ ತಿನ್ನುತ್ತಿರಲಿಲ್ಲ. ಅವನ್ನು ತಿಂದಿರೆ ಉಂಡಂತೆ ಆಗಿ ಜಾತಿ ಕೆಡುತ್ತದೆ ಎಂದು ಭಾವನೆ. ಸಾಮಾನ್ಯವಾಗಿ ದೊಡ್ಡ ದೊಡ್ಡ ಊರುಗಳಲ್ಲಿ ಉಡುಪಿ, ಕುಂದಾಪುರ ಕಡೆಯ ಜನ ಬಂದು ಎಲ್ಲೆಂದರಲ್ಲಿ ಚಹಾದ ಅಂಗಡಿ ತೆರೆಯತೊಡಗಿದರು. ಜನ ಹೌಹಾರಿ ಹೋದರು. ಈಗ ಬ್ರಾಂದಿ ಷಾಪ್‌ಗಳನ್ನು ಕಂಡು ಮೂಗುಮುರಿಯುವಂತೆ ಹಳ್ಳಿಯ ಜನ ಆಗ ಚಹಾದ ಅಂಗಡಿ ಕಂಡು ಮೂಗುಮುರಿಯುತ್ತಿದ್ದರು. ಏನೇ ಆದರೂ 1938-39ನೆಯ ಇಸವಿ ಹೊತ್ತಿಗೆ ಚಹಾದ ಅಂಗಡಿ ಹಳ್ಳಿ ಹಳ್ಳಿಗಳಲ್ಲೂ ಪ್ರಾರಂಭವಾಗೇ ಬಿಟ್ಟವು. ಹೆಂಗಸರನ್ನುಳಿದು ಬಹಳ ಜನ ಗಂಡಸರು ಚಹಾದ ಚಟಕ್ಕೆ ಬಲಿಯಾಗೇ ಹೋದರು. ಹೋಟೆಲ್ ತಿಂಡಿಗಳು ಬರುವ ಪೂರ್ವದಲ್ಲಿ ಹಳ್ಳಿಗಳಲ್ಲಿ ತಿಂಡಿ ಇರಲಿಲ್ಲವೆಂದಲ್ಲ. ಹತ್ತಿಸುಗ್ಗಿ ಬಂದಾಗ ನಮ್ಮೂರಲ್ಲಿ ತಿಂಡಿಯ ಸುಗ್ಗಿಯೇ ನಡೆಯುತ್ತಿತ್ತು. ಹತ್ತಿಸುಗ್ಗಿ ನಮ್ಮಲ್ಲಿ ಬಹಳ ದೊಡ್ಡಸುಗ್ಗಿ. ನಮ್ಮೂರ ಮಸೀದಿ ಬಯಲಿನಲ್ಲಿ ಐದಾರಂಗಡಿಗಳು ಆ ಸುಗ್ಗಿಯಲ್ಲಿ ಹುಟ್ಟಿಕೊಳ್ಳುತ್ತಿದ್ದವು. ಹತ್ತಿ ವ್ಯಾಪಾರ ಇವರಿಗೆ ಮುಖ್ಯ. ಕೊಬರಿ ಚಟ್ನಿ, ಅತ್ತಿ ಕಾಯಿ (ಬಜ್ಜಿ ಅಥವಾ ಪುಗ್ಗೆ) ಕಾರಮಂಡಕ್ಕಿ, ಬಟಗಡಲೆಉಂಡಿ, ಕಡ್ಲಿ ಉಂಡಿ, ಸಕ್ಕರೆ ಹಲಪಿ, ಕಾರದಾಣಿ ಇವೆಲ್ಲ ಇರುತ್ತಿದ್ದವು. ಇವನ್ನು ಹತ್ತಿಯ ತೂಕಕ್ಕೆ ಕೆಲವು, ಕೆಲವನ್ನು ಎರಡರಲ್ಲಿ ಒಂದು ಪಾಲಿನ ಕೆಲವನ್ನು ಮೂರು ಪಾಲು ಹೀಗೆ ಸಮೃದ್ಧವಾಗಿ ತಿಂಡಿ ಮಾಡುತ್ತಿದ್ದರು. ಇವನ್ನೆಲ್ಲ ತಿಂದ ಮೇಲೆ ಭರ್ತಿಯಾಗಿ ನೀರು ಕುಡಿಯುತ್ತಿದ್ದರು. ಈ ಶನಿ ಚಹಾ ಮಾತ್ರ ಇರಲಿಲ್ಲ, ಅಷ್ಟೆ. ಹೋಟೆಲ್ ಪ್ರಭಾವ ಹೆಚ್ಚಿದ್ದ ಮೇಲೆ ಇಂಥ ಅಂಗಡಿ ಮಾಯವಾದವು. ಏನೇ ಆದರೂ ನಮ್ಮಲ್ಲಿಯ ಹೆಂಗಸರು ಬಹು ವರ್ಷ ಚಹಾ ಚಟಕ್ಕೆ ಬೀಳಲಿಲ್ಲ.

ನಮ್ಮೂರಲ್ಲಿ ಬಹಳ ದಿನಗಳವರೆಗೆ ಸಾರ್ವಜನಿಕ ಹೋಟೆಲ್‌ಗೆ ಪುರಸ್ಕಾರ ಸಿಗದಿದ್ದರೂ ಚಹಾ ಮನೆ ಮನೆಗಳಲ್ಲಿ ಪ್ರಾರಂಭವಾಗಿಯೇ ಬಿಟ್ಟಿತು. ನಮ್ಮ ದೊಡ್ಡಪ್ಪ ಚಹಾ ಕುಡಿಯುವವರನ್ನು ಕಂಡು ಕಿಡಿಕಿಡಿಯಾಗುತ್ತಿದ್ದವನು ತಾನೂ ಈ ಚಟಕ್ಕೆ ಬಲಿಯಾಗಿ ಬಿಟ್ಟ. ಅಷ್ಟೇ ಅಲ್ಲ! ಚಹಾ ಮಾಡಲಿಕ್ಕಾಗಿಯೇ ಮನೆಯಲ್ಲಿ ತಂಬಿಗೆ ಹಾಲುಕರೆಯುವ ದೊಡ್ಡ ಮೇಕೆಯನ್ನೇ ಕಟ್ಟಿ ಬಿಟ್ಟ. ದಿನಕ್ಕೆ ಎರಡು ಮೂರು ಹೊತ್ತು ತಾನೇ ಚಹಾ ಕಾಸಿಕೊಂಡು ದೊಡ್ಡ ತಟ್ಟೆಯಲ್ಲಿ ಹಾಕಿಕೊಂಡು

ಎರಡು ಮೂರು ಕಪ್ಪಿನಷ್ಟು ಹೀರಿ ಬಿಡಲು ಪ್ರಾರಂಭಿಸಿದ. ನಮ್ಮ ದೊಡ್ಡಪ್ಪನೇ ಕುಡಿಯ ಹತ್ತಿದನೆಂದರೆ ನಮ್ಮಪ್ಪ ಸುಮ್ಮನಿರುವನೇ, ಭರಮಜ್ಜನ ಮನೆ ಬಿಟ್ಟು ಅವನೂ ಮನೆಯಲ್ಲಿಯೇ ಚಹಾ ಕಾಸುವ ನೂತನ ಮನ್ವಂತರ ಪ್ರಾರಂಭಿಸಿಬಿಟ್ಟ. ಈ ಮಧ್ಯಂತರ 1938ರಿಂದಲೇ ಪ್ರಾರಂಭವಾಗಿ ಬಿಟ್ಟಿತು. ಆದರೆ ಮಕ್ಕಳಾಗಲಿ ಹೆಂಗಸರಾಗಲಿ ಯಾರೂ ಚಹಾ ಮುಟ್ಟುತ್ತಿರಲಿಲ್ಲ. ಯಾರಾದರೂ ಆಸೆಯಾಗಿ ಹೋದರೆ "ಬಾ, ಚಿಕ್ಕವರು ಕುಡಿಬಾರ್ದು. ದೂರ ನಡೀರಿ, ಹೂ ಏಳ್ರಿ ಮ್ಯಾಲ್ಕ" ಎಂದು ಗದರಿಸಿ ಕಳಿಸಿ ಬಿಡುತ್ತಿದ್ದರು.

ಚಹಾದ ಅವಾಂತರ ಹಳ್ಳಿಯಲ್ಲಿ ಪ್ರಾರಂಭಗೊಂಡ ಮೇಲೆ ಹಾಲು-ಮೊಸರು-ಮಜ್ಜಿಗೆ-ಬೆಣ್ಣೆಯ ಸಂಪತ್ತೆಲ್ಲ ದಿನೇ ದಿನೇ ಕ್ಷೀಣಿಸುತ್ತ ಬಂದು ಹಳ್ಳಿಗಳಲ್ಲಿ ಮಜ್ಜಿಗೆ ಸಿಗುವುದೂ ಕೂಡ ದುರ್ಲಭ್ಯವಾಯಿತು. ಒಂದು ಕಾಲಾಣೆ - ಒಂದೂವರೆ ಆಣೆಗೆ ಒಂದು ದೊಡ್ಡ ತಂಬಿಗೆ ಸಿಗುತ್ತಿದ್ದ ಹಾಲು ಹಾವೇರಿ ಹುಬ್ಬಳ್ಳಿ ಕಡೆ ರವಾನೆಯಾಗಹತ್ತಿತು. ನಮ್ಮ ಹಾಲು ಹಾಕಹತ್ತಿದ್ದರು. ಮೂರಾಣೆ ಮೂರೂವರೆ ಆಣೆಗಳಿಗೆ ಆಗುತ್ತಿದ್ದ ಮೊಸರು ಗಡಿಗೆಗಳು ಮಂಗಮಾಯವಾದವು. ನಾವು ಹತ್ತು ಹನ್ನೆರಡು ವರ್ಷದವರಾಗಿರುವಾಗ ಸಾಮಾನ್ಯವಾಗಿ ವಾರಕ್ಕೋ ಹದಿನೈದು ದಿನಕ್ಕೋ ಒಮ್ಮೆ ನಾಲ್ಕೈದು ಜನ ಪ್ರಳಯಾಂತಕರು ಸೇರಿ ಪಟ್ಟಿಹಾಕಿ ನಾಲ್ಕಾಣೆ ಜೊತೆಮಾಡಿಕೊಂಡು ಮೊಸರ ಗಡಿಗೆ ಕೊಂಡು ಅದರಲ್ಲಿ ಕಾಲಾಣೆ ಅಥವಾ ಅರ್ಧ ಆಣೆಯ ಅವಲಕ್ಕಿ, ಸ್ವಲ್ಪ ಉಳ್ಳೇಗಡ್ಡಿಯ ಚೂರು, ಕಡ್ಲಿ ಕೊಬ್ರಿ ಚಟ್ನಿ ಕಟ್ಟಿಕೊಂಡು ಹೊಳೆಯ ದಂಡೆಗೆ ಹೋಗಿ ಅವಲಕ್ಕಿ ಮೊಸರು ತಿಂದು ತೇಗಿ ಬರುತ್ತಿದ್ದೆವು. ನಮಗೆ ಮೊಸರು ಗಡಿಗೆ ಪೂರೈಸುತ್ತಿದ್ದವಳು ನಮ್ಮೂರ್ರಿನ ಪ್ರಸಿದ್ಧ ಹಾಡುಗಾರಳಾದ ದೇವಗಿರಿ ನೀಲವ್ವ. ಅವಳು ಮೂರು ನಾಲ್ಕು ಒಳ್ಳೆ ಎಮ್ಮೆ ಕಟ್ಟಿ. ಒಂದೊಂದು ಎಮ್ಮೆ ಹಾಲನ್ನು ಪ್ರತ್ಯೇಕ ಪ್ರತ್ಯೇಕ ಹೆಪ್ಪು ಹಾಕಿ ಮೊಸರು ಮಾಡಿಡುತ್ತಿದ್ದಳು. ಮೊಸರು ಗಡಿಗೆ ಖರ್ಚಾಗದಿದ್ದರೆ ಮಜ್ಜಿಗೆ ಮಾಡಿ ಬೆಣ್ಣೆ ತೆಗೆದು ಮಾರುತ್ತಿದ್ದಳು. ನೀರು ಹಾಕುತ್ತಿರಲಿಲ್ಲ. ಅದರಲ್ಲಿ ಬಹಳ ಪ್ರಾಮಾಣಿಕ ಹೆಂಗಸು ನೀಲಮ್ಮ ಮೊಸರು ಗಡಿಗೆ ಕೊಡುವಾಗ ತಮ್ಮ ಗಡಿಗೆ ಒಡಕಂಡು ಬರಬ್ಯಾಡ್ರೀಯಪ್ಪ ಎಂದು ಹಲ್ಗಿರಿದು ಹೇಳಿ ಗಡಿಗೆ ಕೊಡುತ್ತಿದ್ದಳು. ನಾವು ಕಾಡಿಬೇಡಿ ಕಾಲಾಣೆ ಅರ್ಧಆಣೆ ರಿಯಾಯಿತಿಯ ಮೇಲೆ ಗಡಿಗೆ ಒಯ್ದು ಅವಲಕ್ಕಿ ಮೊಸರು ತಿಂದು, ಗಡಿಗೆ ತೊಳೆದುಕೊಂಡು ಬಂದು ಕೊಡುತ್ತಿದ್ದೆವು. ಈ ದೃಷ್ಟಿಯಿಂದ ನಮ್ಮ ಪ್ರಾಮಾಣಿಕತೆಯನ್ನು ಒಪ್ಪಿದ್ದ ನೀಲವ್ವ ನಾಳೆ ಬಾಗಿಲಿಗೆ ಹೋದರಾಯಿತು. ಎರಡು ತಂಬಿಗೆ ಗಡಿಗೆ ಬೆಲ್ಲ ಬೇಕೋ, ಮೂರು ತಂಬಿಗೆ ಹಾಲಿನ ಗಡಿಗೆ ಬೇಕೊ ಎಂದು ಕೇಳಿ ನಾವು ಕೇಳಿದ್ದನ್ನು ಅವಳೂ ಪ್ರಾಮಾಣಿಕತೆಯಿಂದ ಕೊಡುತ್ತಿದ್ದಳು. ಕಾರಣ ಗಡಿಗೆ ಗ್ಯಾರಂಟಿ ಹಿಂದಿರುಗುತ್ತದೆ ಎಂದು. ಕೆಲವರು ಗಡಿಗೆಯನ್ನು ಜಖಂಮಾಡಿ ತರುತ್ತಿದ್ದರಂತೆ. ಅಂಥವರನ್ನು ಇನ್ನೊಮ್ಮೆ ಮನೆ ಹೊಸಲಿಗೆ ಸೇರಿಸುತ್ತಿರಲಿಲ್ಲ. ಅವರೇನಾದರೂ ಗಲಾಟೆ ಮಾಡಿದರೆ ಆಕೆಯ ಗಂಡ ರುದ್ರಪ್ಪ ವೀರಭದ್ರನಾಗಿ ಕಯ್ಯಲ್ಲಿ ಬಾರಿಕೋಲು ಹಿಡಿದೇ ಹೊರಗೆ ಬರುತ್ತಿದ್ದ. ನಮಗೆ ಅವನ ರೌದ್ರದ ಭಯವೂ ಇತ್ತು. ಆದರೆ ನಾವು ಪ್ರಾಮಾಣಿಕರಲ್ಲವೆ?

ನಮ್ಮೂರ್ರಿಗೆ ನಮ್ಮೂರ್ರ ಹೊಲಗಳ ಯಜಮಾನರಾದ ಹಾನಗಲ್ಲಿನ ಬ್ರಾಹ್ಮಣರೋ ಅಥವಾ ಬೇರೆ ಊರಿನ ಶಾನಭೋಗರೋ ಊರಿಗೆ ಬಂದರೆ, ನಮ್ಮೂರ್ರಲ್ಲಿ ಊಟ ಮಾಡಲು ಬ್ರಾಹ್ಮಣರ ಮನೆಗಳಿಲ್ಲವೆಂದು ಮೊಸರು ಅವಲಕ್ಕಿಯನ್ನು ಬಹುಪಟ್ಟಾಗಿ ಬಿಗಿಯುತ್ತಿದ್ದರು. ನಮಗೆ ಮೊಸರು ಅವಲಕ್ಕಿ ತಿನ್ನಲು ಕಲಿಸಿದವರು ಅವರೇ.

ಚಹಾಪಾನದ ಚಟ ಕಾಳ್ಗಿಚ್ಚಿನಂತೆ ಎಲ್ಲ ಕಡೆಗೂ ಹಬ್ಬಿ ಹೋದ ಮೇಲೆ ನಮ್ಮೂರಿನ ಹೈನಿನ ಸಂಪತ್ತೇ ಮಂಗಮಾಯವಾಯಿತು. ಬಡಬಗ್ಗರಿಗೂ ಎಮ್ಮೆ ಕಟ್ಟಿದವರ ಮನೆಯಿಂದ ಮಜ್ಜಿಗೆ ಸಿಗುತ್ತಿತ್ತು. ಮಜ್ಜಿಗೆಗೆ ಯಾರೂ ದುಡ್ಡು ತಕ್ಕೊಳ್ಳುತ್ತಿರಲಿಲ್ಲ. ಅದು ಶಿವದಾನ ಎಂದು ಬಂದವರಿಗೆ ಇಲ್ಲ ಎನ್ನದೆ ಇದ್ದದ್ದರಲ್ಲಿ ಸ್ವಲ್ಪ ಸ್ವಲ್ಪ ಕೊಡುತ್ತಿದ್ದರು. ನಾಲ್ಕೈದು ಮನೆ ಬಾಗಿಲಿಗೆ ಹೋದರೆ ಬಡವರ ಬಾಯಿಗೆ ಮಜ್ಜಿಗೆ ಬಿದ್ದು ತಂಪು ಕೊಡುತ್ತಿತ್ತು. ನಮ್ಮ ಮನೆಯಲ್ಲಿ ಕರೆಯುವ ಎಮ್ಮೆ ಹಸು ಇಲ್ಲದಾಗ ಏಳೆಂಟು ಚಂಬು ಮಜ್ಜಿಗೆ ನಮ್ಮ ಬಂಧು ಬಳಗದವರ ಮನೆಯಿಂದ ಬರುತ್ತಿತ್ತು. ಅಂಬಲಿ ಮಜ್ಜಿಗೆಯನ್ನು ಧಾರಾಳವಾಗಿ ಮನೆಮಂದಿಯೆಲ್ಲ ಕುಡಿಯುತ್ತಿದ್ದರು. ನಮ್ಮ ದೈನಂದಿನ ಊಟವೆಂದರೆ ರೊಟ್ಟಿ, ಬೇಳೆಯ ಹುಳಿಪಲ್ಯ, ಚಟ್ನಿ ಇತ್ಯಾದಿ. ಆಮೇಲೆ ಅಂಬಲಿ ಮಜ್ಜಿಗೆ ಅನ್ನ. ಎಂದೊ ಒಂದು ಸಲ ಅಥವಾ ಹಬ್ಬ ಹರಿದಿನಗಳಲ್ಲಿ ಉಳಿದಂತೆ ಅನ್ನವಿಲ್ಲ. ಕೆಲವರು ನವಣಿ ಅಕ್ಕಿ ಅನ್ನ ಊಟ ಮಾಡುತ್ತಿದ್ದರು. ಅದಕ್ಕೆ ಮಜ್ಜಿಗೆ ಮೊಸರು ಬಹಳ ಬೇಕು. ಇಲ್ಲದಿದ್ದರೆ ಉಷ್ಣವಂತೆ. ನಮ್ಮ ಮನೆಯಲ್ಲಿ ರೊಟ್ಟಿ ಅಂಬಲಿಯೇ ಅಧಿಕ. ನಮ್ಮಲ್ಲಿ ಮೊಸರೂ ಕೂಡ ಬಹಳ ಅಗ್ಗ. ನಾವು ಯಾವ ಪಾತ್ರೆಯ ತುಂಬ ಜೋಳ ಒಯ್ಯುವೆವೋ ಆ ಪಾತ್ರೆಯ ತುಂಬ ಮೊಸರು ಕೊಡುತ್ತಿದ್ದರು. ಜೋಳ ಎಷ್ಟೋ ಅಷ್ಟೇ ಮೊಸರು. ಆಗಿನ ನಮ್ಮ ಹಳ್ಳಿಗಳಲ್ಲಿ ದವಸವೇ ದುಡ್ಡಿನ ಕೆಲಸ ಮಾಡುತ್ತಿತ್ತು. ಕಾಳಿನ ತೂಕ ತರಕಾರಿ, ಕಾಳಿನ ಗಾತ್ರ ಮೊಸರು. ಹಾಲನ್ನು ಸಾಮಾನ್ಯವಾಗಿ ಯಾರೂ ಮಾರುತ್ತಿರಲಿಲ್ಲ. ಯಾರಾದರೂ ಹಾಲಿಗೆ ಬಂದರೆ 'ನಮ್ಮದು ಜೆನ್ನಿಗಿ ಎಮ್ಮೆ ಹಾಲು. ನಾವು ಮಾರುವುದಿಲ್ಲ. ಹಾಗೇ ಬೇಕಾದ್ರೆ ತುಸಾ ಒಯ್ಯಿರಿ' ಎಂದು ಸ್ವಲ್ಪ ಹಾಲು ಕೊಟ್ಟು ಕಳಿಸುತ್ತಿದ್ದರು. ಹಾಲು ಮಾರಾಟದಿಂದ ದುಡ್ಡು ಗಳಿಸುವ ವ್ಯಾಪಾರೀ ಭಾವ ಹೊಳೆದ ಮೇಲೆ ಜೆನ್ನಿಗಿ ಎಮ್ಮೆಯೂ ಇಲ್ಲ, ದೇವರಿಗೆ ಬಿಟ್ಟ ಆಕಳೂ ಇಲ್ಲ. ಕೆಲವರು ಚಹಾದಂಗಡಿಗೆ ಹಾಲು ಹಾಕಿ ಹೊಲಮನೆ ಮಾಡಿಕೊಂಡರು. ದೊಡ್ಡವರ ದುಡ್ಡಿನಾಸೆಗೆ ಬಲಿಯಾಗಿ ಮಕ್ಕಳು ಮರಿಗಳು ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪಗಳಿಂದ ವಂಚಿತರಾಗಿ ಹೋದರು. ದೊಡ್ಡವರು ಚಹಾ, ಕಾರುಸೇವಾಗೆ, ಕಾರಮಂಡಕ್ಕಿ ತಿಂದು ಬರಬರುತ್ತ ನರಪೇತಲರಾಗಿ ಕೋಪ - ಸಿಡುಕು - ಪಾಪಬುದ್ಧಿಯವರಾಗಿ ಹೋದರು. ಸಮೃದ್ಧ ಆರೋಗ್ಯ, ಆರೋಗ್ಯ ಸರಿಯಿದ್ದರೆ ಮನ - ಬುದ್ಧಿ ಸರಿಯಾಗುತ್ತವಲ್ಲವೆ? ಕೇಳಿಲ್ಲವೆ 'ಯಸ್ಯಾನ್ನಂ ತಿಷ್ಠತಿ ಕುಕ್ಷೌ ತಸ್ಯ ಬುದ್ಧಿ ಪ್ರಜಾಯತೇ' ಎಂಬ ಋಷಿವಾಕ್ಯವನ್ನು. ಇದೇನೆ ಇರಲಿ, ಈ ಪುರಾಣ. ಚಹಾ ಹಳ್ಳಿಹಳ್ಳಿಗಳಲ್ಲಿ ಹೊಕ್ಕು ಹಳ್ಳಿಯ ಜೀವನ ಸಮೃದ್ಧಿಯ ಹಾಲಿನ ಕೊಡದಲ್ಲಿ ಹಳಕು ಉಪ್ಪು ಬಿತ್ತು.

ನಾವಂತೂ ಚಹಾ ಕುಡಿಯುವುದು ಮಹಾಪಾಪವೆಂದು ತಿಳಿದಿದ್ದೆವು. ಕಂಡ ಕಂಡವರು ಕುಡಿದ ಕಪ್ಪಿನಲ್ಲಿ ನಾವು ಕುಡಿಯುವುದೇ! ಥೂ!! ಎನ್ನುತ್ತಿದ್ದೆವು. ನಿಜ. ಆದರೆ ನಾವೂ ಬಹುದಿನ ಈ ಶೀಲ ಉಳಿಸಿಕೊಳ್ಳಲಾಗಲಿಲ್ಲ. 1933-34ರಲ್ಲಿ ನಾವು ಧಾರವಾಡಕ್ಕೆ ಮುಲಕೀ ಪರೀಕ್ಷೆಗೆ ಹೋದಾಗ ಚಹಾ ಬಗ್ಗೆ ಕುತೂಹಲ ಕೆರಳಿ ಪ್ರಥಮ ಬಾರಿಗೆ ಧಾರವಾಡದ ಒಂದು ಹೋಟಲಿನಲ್ಲಿ ನಾಲ್ಕಾರು ಜನ ಚಹಾದ ರುಚಿ ನೋಡಿಬಿಟ್ಟೆವು. ಒಬ್ಬರಿಗೊಬ್ಬರು ಯಾರೆದುರಿಗೂ ಹೇಳಬಾರದೆಂದೂ ಹೇಳಿಕೊಂಡೆವು. ಕುಡಿದ ದಿನ ಹೊಟ್ಟೆಗೆ ಯಾವುದೋ ಎಂದೂ ಸ್ವೀಕಾರ ಮಾಡದ ಪದಾರ್ಥ ತುಂಬಿಬಿಟ್ಟೆವು ಎಂಬ ಜಿಗುಪ್ಸೆಯಾದರೂ ಅದನ್ನು ಕುಡಿದ ಮೇಲೆ ಆಗುವ ಒಂದು ರೀತಿಯ ಉತ್ಸಾಹ ಕಾರಣವಾಗಿ ಮುಂದೆ ಅನೇಕ ವರ್ಷಗಳು ನಾವು

ಗುಪ್ತವಾಗಿ ಚಹಾದಂಗಡಿ ಹೊಕ್ಕು ಯಾರಿಗೂ ಕಾಣದಂತೆ ಕುಡಿದು ಹೊರಡಲಾರಂಭಿಸಿದೆವು. ಏಕೆಂದರೆ ನಾವು ಆ ಕಾಲದಲ್ಲಿ ಮಠಮಾನ್ಯಗಳ ಆಶ್ರಯ ಪಡೆದು ಓದುತ್ತಿದ್ದವರು ಮತ್ತು ಓದಿದವರು. ಮಠದ ಗುರುಗಳಿಗೆ ನಾವು ಚಹಾ ಕುಡುಕರು, ಅದೂ ಅಲ್ಲದೆ ಕಂಡ ಕಂಡ ಹೋಟೆಲು ಹೊಕ್ಕು ಚಹಾ ಕುಡಿದ ಕುಲಗೇಡಿಗಳು ಎಂದು ಗೊತ್ತಾದರೆ ನಮ್ಮನ್ನು ಮಠದಲ್ಲಿ ಹೆಜ್ಜೆಯಿಕ್ಕಗೊಡುವುದಿಲ್ಲವೆಂಬ ಭಯ, ಆತಂಕ. ನಮ್ಮ ಆಗಿನ ಉಪಾಧ್ಯಾಯರುಗಳಿಗೆ ಗೊತ್ತಾದರೆ ಅವರು ನಮ್ಮನ್ನು ತಿರಸ್ಕರಿಸುತ್ತಾರೆಂಬ ಬೇರೊಂದು ಭಯ. ಆಗಿನ ಉಪಾಧ್ಯಾಯರು ಉತ್ತಮ ನೀತಿಸಂಹಿತೆಯುಳ್ಳವರು, ಸಾತ್ವಿಕರು. ಕೆಲವರು ಇದಲ್ಲದವರು ಇರಬಹುದು. ಅವರ ಸಂಖ್ಯೆ ವಿರಳ. ಉಪಾಧ್ಯಾಯರು ನೀತಿಗೆಟ್ಟವರೆಂದು ಊರವರಿಗೆ ಗೊತ್ತಾದರೆ ಅವರಿಗೆ ಯಾರೂ ಬೆಲೆ ಕೊಡುತ್ತಿರಲಿಲ್ಲ. ಆದ್ದರಿಂದ ನಾವು ಪ್ರಾಥಮಿಕ ಹಂತದಲ್ಲಿ ಓದುವಾಗ ಘನಮನರಾದ ಅನೇಕ ಶ್ರೇಷ್ಠದರ್ಜೆಯ ಶಿಕ್ಷಕರನ್ನು ಕಂಡಿದ್ದೇವೆ. ಅವರು ಈಗ ಇಲ್ಲ, ನಿಜ. ಅವರ ಪ್ರಭಾವ ಈಗಲೂ ನಮ್ಮಲ್ಲಿ ಸಂಸ್ಕಾರ ರೂಪವಾಗಿ ಉಳಿದಿದೆ.

### ತಾಯಿ, ದೊಡ್ಡಪ್ಪ ಅವರಿಂದ ಬಾಲ್ಯದಲ್ಲೆ ಭಯ

ಮುಂಗಾರಿನ ಮಳೆ ಪ್ರಾರಂಭವಾಗಿ ಭಯಂಕರ ಗಾಳಿ ಬೀಸಲು ಪ್ರಾರಂಭವಾದೊಡನೆ "ಅಯ್ಯೋ! ನನ್ನ ಮಗ - ನನ್ನ ಮಗ" ಎಂದು ಬೀದಿಗಿಳಿದು ಗಾಬರಿಗಣ್ಣುಗಳಿಂದ ಕಂಡ ಕಂಡವರನ್ನು ಕೇಳಿ ನನ್ನನ್ನು ಹುಡುಕಿಕೊಂಡು ಬಾಲ್ಯದಲ್ಲಿ ನನ್ನ ತಾಯಿ ಬರುತ್ತಿದ್ದ ದೃಶ್ಯ ನನಗೆ ಈಗಲೂ ಮುಂಗಾರು ಮಳೆಗಾಲದಲ್ಲಿ ನೆನಪಾಗುತ್ತದೆ. ನನ್ನನ್ನು ಕಂಡು ನಾನು ಬರುವುದಿಲ್ಲವೆಂದು ಹಟ ಮಾಡಿದರೂ ಬಿಡದೆ ಎಳೆದುಕೊಂಡು ಬಂದು ಮನೆ ಹೊಗಿಸಿ ಬಾಗಿಲು ಮುಚ್ಚಿ ಅಗುಳಿ ಜಡಿದು ಬಿಡುತ್ತಿದ್ದಳು. ಗುಡುಗು ಮಿಂಚು ಪ್ರಾರಂಭವಾದೊಡನೆ ಇಣಿಕಿ ನೋಡಲೂ ಅವಕಾಶ ಕೊಡುತ್ತಿರಲಿಲ್ಲ. ನನ್ನ ತಾಯಿಯ ಆತಂಕವೆಂದರೆ ನಾನು ಚೊಚ್ಚಲು ಮಗ. ಚೊಚ್ಚಲು ಮಕ್ಕಳನ್ನು ಕಂಡರೆ ಸಿಡಿಲಿಗೆ ಬಲು ಆಸೆಯಂತೆ. ಯಾರು ನನ್ನ ತಾಯಿಗೆ ಈ ವಿಜ್ಞಾನ ಹೇಳಿದ್ದಾರೋ ತಿಳಿಯದು. "ಗುಡುಗು ಮಿಂಚು ಪ್ರಾರಂಭವಾದೊಡನೆ ಮನೆ ಸೇರಿಕೋ ಎಂದರೆ ಕೇರಿಕೇರೆಲ್ಲ ಸುತ್ತಾಡಲಿಕ್ಕೆ ಹೋಗುತ್ತಾನೆ ಇವನೊಬ್ಬ" ಎಂದು ಗದ್ದರಿಸಿ ಒಮ್ಮೊಮ್ಮೆ ನನ್ನ ಹಟ ಹೆಚ್ಚಾದಾಗ ಕಪಾಳಕ್ಕೆ ಬಾರಿಸಿ ಹೊರಗೆ ಹೋಗಗೊಡದಂತೆ ತಡೆದದ್ದು ಉಂಟು. ಆಮೇಲೆ ಸಮಾಧಾನ ತಂದುಕೊಂಡು "ಅಪ್ಪಾ, ನೀನೇ ಹಿರೇಮಗ. ಚೊಚ್ಚಲು ಸಿಡ್ಲಿಗೆ ಚೊಚ್ಚಲುಮಕ್ಕು ನಾಗರ್‍ಹಾವು ಕಂಡ್ರೆ ಬಾಳಾ ಆಸೆ. ಹುತ್ತ ಕಂಡರೇ ಅದಕ್ಕ ಬಹಳ ಸಿಟ್ಟು. ಹೊಡೆದು ಸುಟ್ಟಾಕಿ ಬಿಡತೈವಪ್ಪ ತಿಳಿತಿಲ್ಲೊ ಇನ್ಮೇಲೆ ನೀನು ಎಲ್ಲೆ ಇರು, ಮುಂಗಾರಿ ಮಳೆಗೆ ಮಾತ್ರ ಸಿಗ್ಬೇಡ ತಿಳಿತಿಲ್ಲೊ" ಎಂದು ಮುದ್ದುಮಾಡಿ ಹೊಡೆತದ ನನ್ನ ನೋವನ್ನು ಪರಿಹಾರ ಮಾಡುತ್ತಿದ್ದಳು. ಬಾಲ್ಯದಲ್ಲಿ ಹಚ್ಚಿದ ಸಿಡಿಲಿನ ಹೆದರಿಕೆ ನನ್ನಲ್ಲಿ ಇಂದಿಗೂ ಗುಡುಗು ಸಿಡಿಲು ಪ್ರಾರಂಭವಾದರಾಯಿತು ಎದೆ ಧಸ್ ಎನ್ನುತ್ತದೆ. ಮುಂದೆ ದೊಡ್ಡವನಾದ ಮೇಲೆ ಗುಡುಗು ಸಿಡಿಲಿಗೆ ಸಿಕ್ಕ ಪ್ರಸಂಗಗಳೆಷ್ಟೋ. ಆದರೆ ಸಿಡಿಲು ಅಪ್ಪಳಿಸದೆ ಇಷ್ಟು ವರ್ಷ ನನ್ನನ್ನು ಪ್ರಕೃತಿ ಬದುಕಿಸಿದೆ. ಆದರೆ ಭಯ ಮಾತ್ರ ಲೆಕ್ಕವಿಲ್ಲದಷ್ಟು. ಭಯದಲ್ಲಿ ಧೈರ್ಯತಂದುಕೊಂಡು ಬದುಕಿದ್ದೇನೆ.

ಮಳೆಯೆಲ್ಲ ನಿಂತು ಅಥವಾ ಕಡಿಮೆಯಾಗಿ ಗುಡುಗು ಸಿಡಿಲಿನ ಅಬ್ಬರ ಇಲ್ಲದಾದಾಗ ಹೊರಗೆ ಹೋಗಲು ಅಪ್ಪಣೆ ದೊರೆಯುತ್ತಿತ್ತು. ಎಲ್ಲ ಹುಡುಗ ಹುಡುಗಿಯರು ಮಳೆ ಬರುವಾಗ

ನೀರಿನಲ್ಲಿ ಥೈ ಥೈ ಕುಣಿಯುವ ಪುಣ್ಯ ನನಗಿಲ್ಲವಲ್ಲ ಎಂದುಕೊಂಡು ಮಳೆ ನಿಂತ ಮೇಲೆ ಹರಿಯುತ್ತಿರುವ ಓಣಿಯ ನೀರಿಗೆ ಒಡ್ಡುಹಾಕಿ ಕೆರೆ ಕಟ್ಟುವ, ಕಾಲಿನ ಮೇಲೆ ಮಳಲನ್ನು ಎಳೆದು ತುಂಬಿ ಬಡಿದು ಗುಬ್ಬಿ ಮನೆ ಕಟ್ಟುವ, ಕಾಗದದ ಹಡಗು ತೇಲಿಬಿಡುವ ವಿವಿಧ ಆಟದಲ್ಲಿ ಮಗ್ನನಾಗಿ ಬಿಡುತ್ತಿದ್ದೆ. ಆಮೇಲೆ ಕಲ್ಲು ಚೂರುಗಳನ್ನು ಆರಿಸಿ ತಂದು ಸುತ್ತಮುತ್ತಲಿನ ಕೆಸರು ಬಳಿದು ಮನೆ ಕಟ್ಟುವ ಆಟವಂತೂ ನನ್ನನ್ನು ವಾಸ್ತವ ಪ್ರಪಂಚದಿಂದಲೇ ದೂರವಿಡುತ್ತಿತ್ತು. ಅಂತಸ್ತಿನ ಮನೆ ಕಟ್ಟುತ್ತಿದ್ದೆ. ಇಂಥ ಸಮಯದಲ್ಲಿ ಕಂಡ ಒಂದು ದೃಶ್ಯ ನನಗೆ ಇನ್ನು ಬಹು ದಿನ ಮನಸ್ಸಿನಲ್ಲೇ ನಗುವಂತೆ ಮಾಡುತ್ತಿದೆ. ತೆವರಮೆಳ್ಳಳ್ಳಿಯ ಓರ್ವ ಒಡ್ಡನನ್ನು ನಾನು ಬಾಲ್ಯದಿಂದ ಕಂಡವನೇ. ನಮ್ಮೂರಲ್ಲೂ ಆತ ಕಲ್ಲು ಒಡೆಯಲು, ಮನೆ ಕಟ್ಟಲು ಬರುತ್ತಿದ್ದ. ಆತ ನಮ್ಮೂರ ಪಕ್ಕದಲ್ಲಿಯೇ ಇರುವ ಸರೇಗಲ್ಲಿಗೆ ಹೆಂಡ ಕುಡಿಯಲು ಹೋಗುತ್ತಿದ್ದ. ಅವನು ಹೆಂಡ ಕುಡಿದು ತೆವರಮೆಳ್ಳಳ್ಳಿಗೆ ಹೋಗುವುದು ನಮ್ಮೂರ ಮೂಲಕವೇ. ನಮ್ಮೂರಿಗೆ ಬರುವ ವೇಳೆಗೆ ಅವನು ಮಳೆಗೆ ಸಿಕ್ಕು, ತೊಯ್ದು ತೊಪ್ಪೆಯಾದದ್ದಷ್ಟೇ ಅಲ್ಲ ಹೆಂಡವೂ ನೆತ್ತಿಗೇರಿ ಜೋಲಿಹೊಡೆಯುತ್ತಲೇ ಬಂದು ನಮ್ಮೂರಿನಲ್ಲಿ ಓಣಿಯ ನೀರಿನ ಪ್ರವಾಹದಲ್ಲಿ ಕಾಲುತಪ್ಪಿ ಬಿದ್ದುಬಿಟ್ಟ. ಸರಿ ಏಳಬೇಕಲ್ಲ! ಏಳಲೇ ಇಲ್ಲ. ಹೊರಳಾಡುತ್ತ ತಂತಾನೇ "ಬೀಳಗ್ಗ, ಬಾಳ್ಗೊಕ್ಕೂ ನಿನ್ಗ, ನಿನ್ಗ ಕೆರಾ ತೊಗೊಂಡು ಹೊಡೀಬೇಕು. ಕೆಟ್ಟ ಸೂ... ಮಗನ. ನಾನೇ ನಿನ್ಗ ಬೀಳಂದ್ನೇನು? ದೇವ್ರಾಣೆಗೂ ನಾನೇಳೊದಿಲ್ಲ. ಸತ್ರೂ ಸರಿಯೆ ನೀನೇ ಬಿದ್ದಿ, ನೀನೇ ಏಳು ಮಗನ" - ಹೀಗೆ ತಾನೇ ಎಲ್ಲವನ್ನು ಮಾತಾಡುವುದು ಕಂಡು ಜನವೆಲ್ಲ ಸುತ್ತಮುತ್ತ ಸೇರಿ ಎಬ್ಬಿಸ ಬಂದಾಗ "ಸೋಮಿ ನೀವ್ಯಾರೂ ಎಬ್ಬಬ್ಯಾಡ್ರಿ. ನಾನೇನವ್ಗ ಬೀಳಂದಿಲ್ಲ. ಏನಿಲ್ಲ ನೆತ್ಕೇರಂಗ ಕುಡ್ದ ಮ್ಯಾಲ ನೆಲಾ ನೋಡ್ಕೊಂಡು ನಡಿಬೇಕೋ ಬ್ಯಾಡೊ ಈ ಮಗ? ಬ್ಯಾಡ್ಲೇ ನೆತ್ತಿಗೇರಂಗ ಹೆಂಡಾ ಕುಡಿಬ್ಯಾಡ್ಲೇ ಅಂತಾ ಬಡಕೊಂಡೆ. ಸೂಳೆಮಗ ಕುಡುದಾ! ಈಗ ತಾನೇ ಬಿದ್ದಾನ. ತಾನೇ ಏಳ್ಲಿ ನಾನಂತೂ ಏಳೋದಿಲ್ಲ. ಕೈಮುಗಿತೇನಿ ಈ ಮಗನ್ನ ಎಬ್ಬಬ್ಯಾಡ್ರಿಯಪ್ಪ"

ತಾನೊಬ್ಬನೇ ತೊದಲು ತೊದಲಾಗಿ ಹೀಗೆ ಆಡುವ ಮಾತು ನಮಗೆ ಬಿದ್ದು ಬಿದ್ದು ನಗುವ ಹಾಗೆ ಮಾಡಿತು. ಇಂದಿಗೂ ಈ ಸನ್ನಿವೇಶ ನನ್ನ ಭಾವನಾಲೋಕದ ಮೂಲೆಯಲ್ಲಿ ಕುಳಿತು ಸನ್ನಿವೇಶ ಬಂದಾಗಲೆಲ್ಲ ಹೊರಗೆ ಬಂದು ನನಗೆ ನಾನೇ ನಗುವಂತೆ ಮಾಡುತ್ತಿದೆ.

ಇನ್ನು ದೆವ್ವನ ಕಥೆ ಪಿಚಾರ : ದೆವ್ವ, ಕೊಳ್ಳಿದೆವ್ವ, ಏಳು ಮಕ್ಕಳ ಚೌಡಿಗಳ ಕಥೆ ಹೇಳುವುದರಲ್ಲಿ ನಮ್ಮ ದೊಡ್ಡಪ್ಪ ಬಹು ನಿಪುಣ. ಕಣ್ಣಿಗೆ ಕಟ್ಟುವಂತೆ ಯಾವುಯಾವುದೋ ಕಥೆಗಳನ್ನು ಆಧರಿಸಿ ಹೇಳುತ್ತಿದ್ದ. ನಾನು ಏಳೆಂಟು ವರ್ಷದವನಿರುವಾಗ ನಮ್ಮಪ್ಪನಿಗಿಂತ ನಮ್ಮ ದೊಡ್ಡಪ್ಪನ ಜೊತೆಯಲ್ಲಿ ತಿರುಗುವುದೇ ಬಹಳ. ಸರೇಗಲ್ ಸಂತೆಗೆ ಹೋಗುವಾಗ, ದೇವಗಿರಿ ಗುಡ್ಡದ ಮೇಲಿನ ಮಲ್ಲಿಕಾರ್ಜುನ ದೇವರಿಗೆ ಹೋಗುವಾಗ, ಹೊಲದಲ್ಲಿ ಕುರಿ ತರುಬಿಸಿದಾಗ, ರಾತ್ರಿ ಕುರಿ ಕಾಯಲು ಹೋಗುವಾಗ ಅಂದರೆ ರಾತ್ರಿ ಕುರುಬರು ನಮ್ಮ ಹೊಲದಲ್ಲಿ ಕುರಿ ತರುಬಿದ ಮೇಲೆ ಊಟ ಮಾಡಿ ಸ್ವಸ್ಥವಾಗಿ ಮಲಗಿಬಿಡುತ್ತಿದ್ದರು. ಕುರಿ ಅಕ್ಕ ಪಕ್ಕದ ಹೊಲದಲ್ಲಿ ಹೋಗಿ ನಿಲ್ಲುವುದನ್ನು ತಪ್ಪಿಸಲು ನಾವೇ ಹೊಗಬೇಕು. ಆಗ ನಾನೂ ರಾತ್ರಿ ನಮ್ಮ ದೊಡ್ಡಪ್ಪನ ಸಂಗಡ ಹೋಗುತ್ತಿದ್ದೆ. ರಾತ್ರಿ ಹೊಲದಲ್ಲಿ ಕುರಿ ಹಾಲು ಹಾಕಿಕೊಂಡು ಅನ್ನವನ್ನೊ ಅಂಬಲಿಯನ್ನೊ ಊಟಮಾಡಿ ನಮ್ಮ ಹೊಲದ ಬನ್ನಿಗಿಡದ ಬುಡದಲ್ಲಿ ಮಲಗುತ್ತಿದ್ದೆ. ಆಗ ನಮ್ಮ ದೊಡ್ಡಪ್ಪ ಕಥೆ ಹೇಳುತ್ತಿದ್ದ.

"ತಮ್ಮ ಮುಂದೆ ನೀವು ದೊಡ್ಡವರಾದ ಮೇಲೆ ಹುಷಾರಾಗಿರ್ರಿ. ನಮ್ಮ ಹಳ್ಳದ ಹೊಲದಲ್ಲಿರುವ ಬನ್ನಿಗಿಡದ ಕೆಳಗ ಮಾತ್ರ ಎಂದೂ ಮಲಗಬೇಡ್ರಿ. ಅದು ಏಳು ಮಕ್ಕಳ ಚೌಡಿ ದಾರಿ. ಮೆಳ್ಳಳ್ಳಿ ಆಚೆ ಅಳ್ಳಿಮರದಿಂದ ತನ್ನ ಏಳು ಮಕ್ಕಳನ್ನು ಕಟ್ಟಿಕೊಂಡು ಚೌಡಿ ಹಳ್ಳಾ ಇಳದು ಬನ್ನಿಗಿಡದ ಹತ್ತಿರ ಬಂದು ಹಾಗೆ ಪಿಂಜಾರ ಹೊಲದ ಕಡೆ ಹೋಗ್ತಾಳ. ಹಿಂದೆ ನಮ್ಮಪ್ಪಗ ಎರಡು ಮೂರು ಸಲ ಭೇಟಿ ಆಗಿ ಬಹಳ ಕಾಡಿಸ್ಯಾಳ ತಿಳೀತಿಲ್ಲೊ. ಮೇಲಿನ ಅಸಮರದ ಹೊಲದ ಮೇಲೆ ಹಾದು ಒಂದು ದೆವ್ವ ಹಳ್ಳಾ ಇಳ್ದೂ ಹೋಗ್ತಾ ಇರತೈತೆ. ಅಲ್ಲಿ ಹಳ್ಳದಲ್ಲಿ ಹುಷಾರಿ. ನಾಲ್ಕೈದು ವರ್ಷದ ಮೊದಲು ಮುದ್ದಪ್ಪಮಾವನ್ನ ದಾರಿತಪ್ಪಿಸಿ ಮಾತಾಡಿಸಿಕೊಂಡು ಅಲ್ಲಾಪುರದವರೆಗೆ ಕರಕೊಂಡು ಹೋಗಿತ್ತು. ನಾವು ಬೆಳತನಕ ಏಳೆಂಟು ಜನ ಹುಡುಕಿ ಸತ್ತು ಸುಣ್ಣ ಆಗ್ಬಿಟ್ವಿ. ಅಲ್ಲಾಪುರದ ಹೊಳೆಗೆ ಹೋಗೊಹೊತ್ತಿಗೆ ಕೋಳಿ ಕೂಗಿ ಬೆಳಕು ಹರಿಯೋ ಹೊತ್ತಾಗಿತ್ತು. ಅಲ್ಲಾಪುರದವರು ಕರಕೊಂಡು ಬಂದು ಬಿಟ್ಟು ಹೋದ್ರು. "ಹಲಸೂರ ದಾರಿಯೊಳಗಿನ ಹುಣಸೀ ಮರದಲ್ಲಿ ಒಂದು ದೆವ್ವ ಐತಿ. ಜಾಲಿಕಟ್ಟಿ ಹೊಲದಲ್ಲಿ ಮಾತ್ರ ಬ್ರಹ್ಮರಾಕ್ಷಸ ಐತಿ. ಅದು ನಮ್ಮ ಹೊಲದಾಗ ಇಲ್ಲ. ಮೇಲಿನ ಹಳ್ಳದಲ್ಲಿ ಐತಿ. ಅಲ್ಲೆಲ್ಲ ತಿರಗತೈತಿ. ನಮ್ಮ ಎತ್ತು ಸತ್ತದ್ದು ಅದರ ಕಾಟದಿಂದ. ನನಗ ಒಂದಿವ್ಸ ಹೆದರಿಸಿ ಬಿಟ್ತು. ನಾನೇನು ಹೆದರಲಿಲ್ಲ. ಕ್ಯಾಕರಿಸಿ ಉಗುಳಿ ಬಿಟ್ಟೆ. ಕಾಲಿನ ಕೆರಾ ತೋರ್ಸಿಬಿಟ್ಟೆ. ಓಡಿ ಹೋತು. ಮಾದರ ಅಳ್ಳೀಮರದಲ್ಲಿ ಕೊಳ್ಳಿದೆವ್ವ ಐತಿ, ಅಮಾಸಿಗೆ ಹುಣ್ಣಿಮೆಗೆ ಕೊಳ್ಳಿ ಹಚ್ಚಿಕೊಂಡು ಗೌಡಗಟ್ಟಿ ಹೊಲದ ಮೇಲೆ ಹಾದು ಬಲಗಡೆ ಹೊರಳಿ ನೀರಲಿಗಿ ದಾರಿ ಹಿಡಿತೈತಿ. ಕೂಡಿದ ಹೊಳೆ ಮೂಲ್ಯಾಗ ಕೋಳೀರಪ್ಪನ ಹತ್ತಿರ ಒಂದು ದೊಡ್ಡದೆವ್ವ ಐತಿ. ಅದು ಹೊಳೆ ದಾಟಿ ಮಾತ್ರ ಹೋಗೋದಿಲ್ಲಾ. ಸಂಗಮೇಶ್ವರನ ಹೆದರಿಕೆ ಅದಕೆ. ಅಲ್ಲೆ ಸುತ್ತಮುತ್ತ ತಿರಗುತ್ತಾ ಐತಿ. ಬಹಳ ಜನ ನಕ್ಕು ಈ ದೆವ್ವ ಮಾತಾಡ್ಸಿ ಅಡಿಕೆ, ಎಲೆ ಕೇಳ್ತೈತಿ. ಅತ್ತಾ ನೀವು ಹೋದ್ರೆಗೀದ್ರೆ ಹುಷಾರಿ". ಹೀಗೆಲ್ಲ ಹೇಳುತ್ತಿದ್ದಂತೆ ನನ್ನ ಧೈರ್ಯವೆಲ್ಲ ಕುಗ್ಗಿ ಹೋಗುತ್ತಿತ್ತು. ರಾತ್ರಿ ಹೊತ್ತೂ ಕುರಿಕಾಯಲು ಹೋದಾಗ ನಾನು ಒಬ್ಬನೇ ಇರುತ್ತಿರಲೇ ಇಲ್ಲ. ಅವನ ಹಿಂದೆ ಹಿಂದೆಯೇ ಓಡಾಡುತ್ತಿದ್ದೆ. ಹೆದರ ಬೇಡ. ನನಗೆ ಎಲ್ಲೆಲ್ಲಿ ದೆವ್ವ ಭೂತ ಇದೇಂತಾ ಎಲ್ಲಾ ಗೊತ್ತು. ಅಲ್ಲೆಲ್ಲಾ ಹೋಗೋದೇ ಇಲ್ಲ. ಯಾಕೆ ಹೆದರ್ತೀಯಾ ಎನ್ನುತ್ತಿದ್ದ . ಹೆದರಿಸುವ ಕಥೆ ಹೇಳಿ ಏಕೆ ಹೆದರುತ್ತೀ ಎನ್ನುವ ಮಾತಿನಲ್ಲಿ ಅರ್ಥವುಂಟೆ?

ಆದರೆ ಮುಂದೆ ಬಹುದಿನಗಳವರೆಗೆ ನನಗೆ ನನ್ನ ದೊಡ್ಡಪ್ಪ ಹೇಳದ ಕಡೆಗಳಲ್ಲಿ ಹೋದಾಗಲೆಲ್ಲ ಎದೆ ಬಡಿದುಕೊಳ್ಳತೊಡಗುತ್ತಿತ್ತು. ರಾತ್ರಿ ಅತ್ತಕಡೆ ನಾಲ್ಕಾರು ಜನ ಇದ್ದರೇ ಹೋಗುತ್ತಿದ್ದುದು. ನಾಲ್ಕಾರು ಜನ ಇದ್ದಾಗ ದೆವ್ವ ಕಾಣಿಸಿಕೊಳ್ಳೋದಿಲ್ಲ ಎಂದು ನಮ್ಮ ದೊಡ್ಡಪ್ಪನೇ ಹೇಳಿದ್ದು. ನಾಲ್ಕಾರು ಜನ ಇದ್ದಾಗಲೂ ಆಯಾಸ್ಥಳಕ್ಕೆ ಹೋದಾಗ ಇಲಿಯೋ, ಓತಿಕ್ಯಾತವೋ ಏನೋ ಕಂಟಿಗಳಲ್ಲಿ ಸರ್sss ಎಂದರೆ ಆಯ್ತು, ನನ್ನ ರೋಮ ರೋಮಗಳೆಲ್ಲ ನಿಗುರಿ ನಿಲ್ಲುತ್ತಿದ್ದವು. ನಾನು ದೊಡ್ಡವನಾಗಿ ವ್ಯವಸಾಯಕ್ಕೆ ನಿಂತ ಮೇಲೆಯೂ ಈ ಹೆದರಿಕೆ ಹೋಗಿದ್ದಿಲ್ಲ. ಆದರೆ ಇವೆಲ್ಲ ಪೊಳ್ಳುಕಥೆಗಳೆಂದು ತಿಳಿದುಕೊಳ್ಳಲು ನನಗೆ ಬಹಳ ದಿನ ಏನೂ ಹಿಡಿಯಲಿಲ್ಲ. ಅದೂ ಅಲ್ಲದೆ ರಾತ್ರಿ ನಾನು ಹೊಲಕ್ಕೆ ಹೋಗುವಾಗ ನಮ್ಮ ಮನೆಯಲ್ಲಿ ನಮ್ಮ ಮುತ್ತಜ್ಜನ ಕಾಲದಿಂದಲೂ ಇರುವ ನೀಳವಾದ ಒಂದು ಖಡ್ಗವಿದೆ. ಅದನ್ನು ಕಂಬಳಿ ಕೊಪ್ಪಿಯಲ್ಲಿ ಊರು ದಾಟುವವರೆಗೆ ಬಚ್ಚಿಟ್ಟುಕೊಂಡು, ಆಮೇಲೆ ಕಯ್ಯ ಹಿಡಿದುಕೊಂಡು ಝಳಪಿಸುತ್ತಾ

ಹೋಗುತ್ತಿರುತ್ತೇನೆ. ನನಗೆ ದೆವ್ವಗಳಂತೂ ಒಂದೂ ದಿನ ಕಂಡಿದ್ದಿಲ್ಲ. ಅಂದರೆ ಭಯ ಪೂರ್ಣಹೋಗಿತ್ತೆಂದು ಹೇಳಲಾರೆ. ಮಕ್ಕಳಿಗೆ ಚಿಕ್ಕಂದಿನಲ್ಲಿ ಭಯದ ಕಥೆ ಹೇಳಬಾರದೆಂಬುದು ನನಗೆ ಗೊತ್ತಾದದ್ದೂ ನಾನು ಉಪಾಧ್ಯಾಯನಾದ ಮೇಲೆ. ಇಲ್ಲಿಯವರೆಗೆ ನನ್ನ ಬಾಲ್ಯಜೀವನದ ಅನೇಕ ಪ್ರಮುಖ ಪರಿಸರ ಪ್ರಭಾವಿತ ಘಟನೆಗಳಿಂದ ಒಂದು ಬಗೆಯ ಹಸಿಬಿಸಿ ಸಂಸ್ಕಾರ ಭಾವಕೋಶವನ್ನು ತುಂಬಿಸಿ ಬಿಟ್ಟಿತು. ಅದಮ್ಯ ಉತ್ಸಾಹ ದಿಗಂತದವರೆಗೆ ಚಾಚಿ ಆಚೆ ಆಚೆ ಬಹುದೂರ ಹೋಗತೊಡಗಿತು ಆದರೆ ಆ ಉತ್ಸಾಹಕ್ಕೆ ತಕ್ಕ ಪ್ರೋತ್ಸಾಹವಾಗಲಿ, ನನ್ನ ಉತ್ಸಾಹವನ್ನು ಅರ್ಥಮಾಡಿಕೊಳ್ಳುವಷ್ಟು ಪರಿಸರ ಸಂಸ್ಕಾರವಾಗಲಿ ಇರಲಿಲ್ಲ. ಹಳ್ಳಿಯ ಮುಕ್ಕರಾದ ನಮ್ಮನ್ನಾರು ಆಗ ಕೇಳಬೇಕು? ಜಮೀನುದಾರರ ಹಿಡಿತಕ್ಕೆ ಸಿಕ್ಕು ರೈತವರ್ಗ ಹಿಂಡಿ ಹಿಪ್ಪೆಯಾಗಿತ್ತು. ವ್ಯವಸಾಯಗಾರ ಕೆಟ್ಟರೆ ಏಕೆ ಕೆಟ್ಟನೆಂದು ಕೇಳುವ ಸರಕಾರ ಇರಲಿಲ್ಲ. ಎಲ್ಲ ಬ್ರಿಟಿಷರ ದಂದಾ ದುಂದಿ ದರ್ಬಾರು. ಜಮೀನುದಾರರನ್ನು ಹತೋಟಿಯಲ್ಲಿಟ್ಟುಕೊಂಡು ರೈತವರ್ಗವನ್ನು ಆಳುವವರು. ಅವರು ಸತ್ತರೆ ಏಕೆ ಸತ್ತ ಅನ್ನುವಂತಿಲ್ಲ. ಕೆಟ್ಟರೆ ಏಕೆ ಕೆಟ್ಟ ಅನ್ನುವಂತಿಲ್ಲ.

1932ನೇ ಇಸ್ವಿಯಿಂದ ಸುಮಾರು ಹತ್ತು ವರ್ಷ ದುಷ್ಕಾಲದ ವರ್ಷ. ನಮ್ಮ ಭಾಗದಲ್ಲಿ ಅತಿವೃಷ್ಟಿ, ಅನಾವೃಷ್ಟಿ, ಕೀಟಗಳ ಕಾಟದ ಕಾರಣವಾಗಿ ಪ್ರತಿವರ್ಷ ವ್ಯವಸಾಯಗಾರನಿಗೆ ಪೆಟ್ಟು ಬೀಳತೊಡಗಿತು. ಈ ಏಟು ನಮ್ಮ ಮನೆಗೂ ಬಿತ್ತು. ಅನೇಕ ವರ್ಷಗಳಿಂದ ಹುಂದಿಗನೂರು ದೇಸಾಯಿಯರ ರೈತರಾಗಿ ದುಡಿದು, ದುಡಿತದ ಬಹು ಪಾಲನ್ನು ಅವರಿಗೆ ಕೊಡುತ್ತ ಬಂದಿದ್ದೆವು. ಬೆಳೆಯಿಲ್ಲದಿದ್ದರೂ ಕೊಡಬೇಕು. ಜಿಟ್ಟಿ ಹತ್ತಿ ಒಡಕ ಕಾಳು ಬಾರದಿದ್ದರೂ ಅವರಿಗೆ ಕೊಡಬೇಕಾದ 200 ರೂ. ಕೊಡಬೇಕು. ಮೂರು ನೂರು ರೂಪಾಯಿ ಹೊಂದಿಸಲು ಆ ಕಾಲದಲ್ಲಿ 75 ಚೀಲ ಜೋಳ ಮಾರಬೇಕಾಗಿತ್ತು ಅಥವಾ 16 ಅಂಡಿಗೆ ಹತ್ತಿ ಮಾರಬೇಕಾಗಿತ್ತು. ಅವರ 16 ಎಕರೆ ಹೊಲದಲ್ಲಿ ನಾಲ್ಕು ಚೀಲ ಜೋಳ ಆಗುತ್ತಿರಲಿಲ್ಲ. ಹತ್ತಿಯೋ ಬೆನ್ನತ್ತಿಯಾಗಿತ್ತು. ಈ ಕೆಟ್ಟಕಾಲದ ಧರ್ಮವೋ ನಮ್ಮ ದುರದೃಷ್ಟವೋ ಆನೆಯಂಥ ಎತ್ತುಗಳು ಒಂದಾದ ಮೇಲೊಂದರಂತೆ ಯಾವು ಯಾವುದೋ ರೋಗದಿಂದ ಸತ್ತವು. ಪ್ರತಿವರ್ಷ ಮನೆಯ ಹೊಲದ ಉತ್ಪನ್ನ ಹಾಕಿ ಮನೆಯಲ್ಲಿನ ಬೆಳ್ಳಿ ಬಂಗಾರ ಮಾರಿ, ಒಂದೊತ್ತು ಎರಡೊತ್ತು ಉಪವಾಸ ಮಾಡಿ ಏನೇನೋ ಮಾಡಿ ಅನ್ಯರಲ್ಲಿ ಕೂಲಿಕುಂಬಳಿಮಾಡಿ ದೇಸಾಯಿಯರಿಗೆ ಸಲ್ಲಿಸಬೇಕಾದುದನ್ನು ಕಷ್ಟಪಟ್ಟು ನಮ್ಮ ತಂದೆ ದೊಡ್ಡಪ್ಪ ಮತ್ತು ಮಾವ ಸೇರಿ ಸಲ್ಲಿಸಲೇಬೇಕು; ಸಲ್ಲಿಸಿದ್ದಾಯಿತು. ಸ್ವಲ್ಪ ಸ್ವಲ್ಪ ಸೂಟುಬಿಟ್ಟು ತೆಗೆದುಕೊಳ್ಳತೊಡಗಿದರು. ಕೊನೆಗೊಮ್ಮೆ ಸೂಟುಬಿಟ್ಟ ಹಣ ಲಾವಣಿ ಹಣ ಎಲ್ಲಕ್ಕೂ ಸೇರಿ ಒಟ್ಟು 500 ರೂಪಾಯಿಗೆ ದೇಸಾಯಿ ದಾವಾ ಮಾಡಿ ನಮ್ಮ ಮನೆಯ ಹೊಲಗಳನ್ನು ಲಿಲಾವಿಗೆ (ಹರಾಜಿಗೆ) ತಂದುಬಿಟ್ಟ. ನಮ್ಮ ಮನೆಯವರೆಲ್ಲ ಗೊಳೋ ಅನ್ನ ತೊಡಗಿದರು. ಐದುನೂರು ರೂಪಾಯಿ ಎಲ್ಲಿಂದ ತರಬೇಕು. ಹುಬ್ಬಳ್ಳಿಗೆ ಹತ್ತಿ ಹೇರಿಕೊಂಡು ಹೋಗಿ ಕೊಟ್ಟರೂ 48 ಮಣಕ್ಕೆ 75 ರೂ. ಒಂದು ಗಾಡಿ ಭರ್ತಿ 8 ಚೀಲ ಒಯ್ದು ಹಾವೇರಿಯಲ್ಲಿ ಮಾರಾಟ ಮಾಡಿದರೆ ಖರ್ಚುವೆಚ್ಚ ಕಳೆದು ಸಿಗುತ್ತಿದ್ದುದು 30 ರೂ. ಇಂಥ ಪರಿಸ್ಥಿತಿಯಲ್ಲಿ ಇನ್ನು ದೇಸಾಯಿಯ ಸಹವಾಸ ಬೇಡ ಎಂದು ಕಷ್ಟಪಟ್ಟು ನಮ್ಮ 5 ಎಕರೆ ಹೊಲವನ್ನು ನಮ್ಮ ಸಂಬಂಧಿಕರೊಬ್ಬರಿಗೆ ಒತ್ತೆ ಇಟ್ಟು ಅವರ ಮನೆಯಲ್ಲಿನ ಬಂಗಾರವನ್ನೆಲ್ಲ ಮಾರಿ ನಮ್ಮ ಮನೆಯವರಿಗೆ ಊಟಕ್ಕಿಲ್ಲದಂತೆ ಜೋಳ, ತೊಗರಿ, ಹೆಸರು, ಹತ್ತಿ ಎಲ್ಲ ಮಾರಿ 500 ರೂಪಾಯಿ ಜೋಡಿಸುವುದರೊಳಗೆ ನಮ್ಮ ದೊಡ್ಡಪ್ಪ ಸತ್ತು ಸುಣ್ಣವಾಗಿ ಕೊನೆಗೆ ಹೊಂದಿಸಿಕೊಂಡು

ಹೋಗಿ ದೇಸಾಯಿಯ ಮುಂದಿಟ್ಟು, 'ತಕ್ಕೊಳ್ಳಿ ನಿಮ್ ಹಣ ತಂದಿದ್ದೇನೆ. ಕೊಡಿ ರಸೀದಿ' ಎಂದು ಹುಚ್ಚುಧೈರ್ಯದಿಂದ ಹೇಳಿ ರಸೀದಿ ಪಡೆದು "ಇಗೊಳ್ಳಿ ದೇಸಾಯರೇ, ಕಳೆದ ಮೂವತ್ತು ವರ್ಷಗಳಿಂದ ನಿಮ್ಮ ಹೊಲವನ್ನು ಮಾಡಿದ್ದೆವು. ನಿಷ್ಠೆಯಿಂದ ನಿಮ್ಮ ಸೇವಕರಂತೆ ಸೇವೆ ಮಾಡಿದ್ದೆವು. ಕರೆದಾಗ ಬಂದು ನಿಮ್ಮ ಚಾಕರಿ ಮಾಡಿದ್ದೆವು. ಒಂದು ವರ್ಷವೂ ಕೇಳಿಸಿ ಕೊಳ್ಳದಂತೆ ನಿಮ್ಮ ಲಾವಣಿ ಹಣವನ್ನು ಕೊಡುತ್ತ ಬಂದೆವು. ಈಗ ನಮ್ಮ ಮನೆಯ ಹೊಲವನ್ನೇ ಕಬಳಿಸುವ ತಂತ್ರ ಹೂಡಿಬಿಟ್ಟಿರಿ. ನಿಷ್ಠಾವಂತರಾದ ರೈತರನ್ನು ನಾಲ್ಕು ಕಾಸಿನ ಆಸೆಗೆ ಕಳೆದು ಕೊಂಡಿರಿ. ಮಾಡತಕ್ಕದ್ದೇನಿದೆ? ನಮ್ಮ ದುರ್ದೈವ ನಮ್ಮನ್ನು ಕಾಡತೊಡಗಿದೆ, ಆಯಿತು ದೇವರಿದ್ದಾನೆ. ನಾವು ಇನ್ನು ಗಟ್ಟಿ ಇದ್ದೇವೆ. ಸ್ವಲ್ಪ ಹೊಲವಿದೆ. ಕೂಲಿಕಂಬಳಮಾಡಿ ಜೀವಿಸುತ್ತೇವೆ. ಆದರೆ ಇಷ್ಟು ಮಾತ್ರ ನಿಜ. ಇನ್ನು ನಿಮ್ಮ ಮುಖ ನೋಡವುದಿಲ್ಲ" ಎಂದನಂತೆ. ಹಂದಿಗನೂರು ದೇಸಾಯಿಯರ ಎದುರಿಗೆ ಹೀಗೆ ಮಾತನಾಡುವುದು ಆಗಿನ ಕಾಲದಲ್ಲಿ ಸುಲಭವಾಗಿರಲಿಲ್ಲ. ನಮ್ಮ ದೊಡ್ಡಪ್ಪನ ಸಾತ್ವಿಕ ಕೋಪ ಆ ಸಮಯದಲ್ಲಿ ಅವನಿಗೆ ದಿಗ್ಗನೆದ್ದು ಮೈಮೇಲೆ ಎಚ್ಚರವಿಲ್ಲದಂತೆ ಮಾಡಿತ್ತಂತೆ. ಈ ವಿಷಯವನ್ನು ಬಂದ ಮೇಲೆ ಮನೆಯಲ್ಲಿ ಎಲ್ಲರೆದುರಿಗೆ ಹೇಳುತ್ತಿದ್ದುದು ನನಗೆ ಜ್ಞಾಪಕದಲ್ಲಿ ಇನ್ನೂ ಇದೆ. ಇನ್ನು ಮುಂದೆ ನಮ್ಮ ಮನೆತನದ ಪ್ರತಿಷ್ಠೆಯ ಕುರುಹಾಗಿದ್ದ ವ್ಯವಸಾಯಜೀವನಕ್ಕೆ ಮಂಕು ಮುಸುಕಿತು. ನಮ್ಮ ಮನೆಯ ಹೊಲ ಇರುವುದೇ 16 ಎಕರೆ ಎರೆ. ಅದರಲ್ಲೂ ಸರಿಯಾಗಿ ಬೆಳೆಯಲ್ಲ. ಮನೆಯಲ್ಲಿರುವವರು ಒಟ್ಟು ಇಪ್ಪತ್ತು-ಇಪ್ಪತ್ತು ನಾಲ್ಕು ಜನ. ದಿನಕ್ಕೆ 16 ಸೇರು ಜೋಳ ಬೇಕು ಜೀವನಕ್ಕೆ. ಹಗೇದಲ್ಲಿ ಒಡಕು ಕಾಳಿಲ್ಲ. ಎಲ್ಲವನ್ನು ಬಳಿದು ದೇಸಾಯಯರಿಗೆ ಕೊಟ್ಟಾಯಿತು. ಕೂಲಿ ಮಾಡಲಿಕ್ಕೆ ಹೋಗಲು ಒಂದು ತರದ ನಾಚಿಕೆ. ಒಮ್ಮೆಲೆ ನಮ್ಮ ಮನೆತನದ ಪ್ರತಿಷ್ಠೆಯ ಅನೇಕ ಕಾರ್ಯಕ್ರಮಗಳು ಕುಂಠಿತಗೊಂಡವು. ಓಕಳಿಬಂಡಿ ಮೂಲೆ ಸೇರಿತು. ದಿನದಿನದ ಬಂದು ಹೋಗುವ ಜನರ ಆತಿಥ್ಯ ಕುಂಠಿತಗೊಂಡಿತು. ಮದುವೆ ಮುಂಜಿಗಳು ನಿಂತು ಹೋದವು. ಆದರೂ ಕುಂದೂರು ಕುರುಬರು, ದೇವಗಿರಿಯ ಕುರುಬರು ಹೊಳೆಗೆ ನೀರು ಕುಡಿಯಲು ಕುರಿಮಂದೆ ತಂದಾಗ ಎಂದಿನಂತೆ ಊಟಕ್ಕೆ ಬಂದು ಬಿಡುತ್ತಿದ್ದರು. ಪೂಜಾರಿ ವೀರಯ್ಯನಂತೂ ಎಂಥ ಪರಿಸ್ಥಿತಿಯಲ್ಲೂ ಊಟಕ್ಕೆ ಬರುವುದನ್ನು ತಪ್ಪಿಸುತ್ತಿರಲಿಲ್ಲ. ಊರಿಗೆ ಯಾರೇ ಪ್ರತಿಷ್ಠಿತರು ಬಂದರೂ ಊಟಕ್ಕೆ ನಮ್ಮ ಮನೆಗೇ ಬರಬೇಕು. ಇದೆಲ್ಲವನ್ನು ಹೇಗೋ ಶಿವಕೃಪೆಯಿಂದ ನಡೆಸಿಕೊಂಡು ಬಂದುದಾಯಿತು. ನಮಗೆ ಕೊರತೆಯಾದರೂ ಅತಿಥಿ ಅಭ್ಯಾಗತರ ತೃಪ್ತಿಯನ್ನು ನಮ್ಮ ಮನೆ ಪೂರೈಸಿದ್ದೊಂದು ಪವಾಡವೇ, ಮಾಡುವುದೇನು? ಇದುವರೆಗೆ ದೊಡ್ಡರೈತರಾಗಿ ಅತಿಥ್ಯಕ್ಕೆ ಹೆಸರು ಪಡೆದವರಾಗಿ ಬಾಳಿ ಬದುಕಿ ಈಗ ಒಮ್ಮೆಲೆ ಕೂಲಿಜೀವನಕ್ಕೆ ಒಗ್ಗುವುದು ಸಾಧ್ಯವಾಗಲಿಲ್ಲವಾದರೂ ಪರಿಸ್ಥಿತಿ ಸಾಧ್ಯಮಾಡಿಸಿತು.

ಮೊದಲು ತೆವರುಮೆಳ್ಳಳ್ಳಿಯ ದಾನಣ್ಣನವರ ಹಾಲಪ್ಪ ಎಂಬುವರ ಹೊಲವನ್ನು ಎತ್ತಾಳು ಪಾಲಿಗೆ (ಎತ್ತಾಳುಪಾಲು ಎಂದರೆ ಜಮೀನಿನ ಯಜಮಾನನದೇ ಎತ್ತು ಚಕ್ಕಡಿಯಲ್ಲಿ ಪರಿಕರ ಹೇರಿಕೊಂಡು ಜಮೀನು ಉತ್ತು ಬಿತ್ತಿ ಬೆಳೆ ಬಂದ ಮೇಲೆ ಹೊಲದವರಿಗೆ ಎರಡು ಪಾಲು, ಉತ್ತವರಿಗೆ ಒಂದು ಪಾಲು. ಈ ಕರಾರಿನಂತೆ ಹೊಲ ಹೊಡೆಯುವುದು) ಹಿಡಿದು ಹೊಡೆಯ ಹೋದರು. ಆದೂ ಲಾಭದಾಯಕವಾಗಲಿಲ್ಲ. ಹೀಗಾಗಿ ನಮ್ಮ ಮನೆತನದ ಆರ್ಥಿಕ ಪರಿಸ್ಥಿತಿ ತುಂಬಾ ಹದಗೆಟ್ಟು ಹೋಯಿತು. ಎರಡು ಹೊತ್ತು ಅನ್ನ ಹೊಂದಿಸುವುದೇ ಸಮಸ್ಯೆಯಾಗಿ

ತಲೆ ಮೇಲೆ ಕೈ ಹೊತ್ತು ಕೂಡುವಂತಾಯಿತು. ಮಕ್ಕಳು ದೊಡ್ಡವರಾಗಿ ಈ ಬವಣೆಯನ್ನು ತಪ್ಪಿಸಬಹುದೆಂದು ಧೈರ್ಯದಿಂದ ಕೂಲಿ ಜೀವನಕ್ಕೆ ನಮ್ಮ ಮನೆಯವರೆಲ್ಲ ಇಳಿಯಲೇ ಬೇಕಾಯಿತು.

### ಕೆಟ್ಟ ಪರಿಸ್ಥಿತಿಯಲ್ಲಿ ನನ್ನ ವಿದ್ಯಾಭ್ಯಾಸದ ಹಂಬಲು

ಇಂಥ ಭೀಕರವಾದ ಗೃಹಕೃತ್ಯದ ನಿಟ್ಟುಸಿರ ಬೇಗೆಯಲ್ಲಿ ಬೇಯುತ್ತಿರುವ ಸಮಯದಲ್ಲಿ ನನ್ನ 5ನೆ ಇಯತ್ತೆ ಮೆಳ್ಳಳ್ಳಿಯ ಶಾಲೆಯಲ್ಲಿ ಮುಗಿದು ಇನ್ನು ಆರನೆಯ ತರಗತಿಗೆ ಎಲ್ಲಿಗೆ ಹೋಗಬೇಕೆಂಬ ಚಿಂತೆ ನನಗೆ ಉಂಟಾದರೆ ಹೊರಗೆ ಯಾವ ಊರಿಗೆ ನನ್ನನ್ನು ಕಳಿಸಬೇಕೆಂಬ ಸಂಕಟ ನಮ್ಮ ಮನೆಯವರಿಗೆ ಉಂಟಾಯಿತು. ಹೊರಗೆ ಕಳಿಸಿದರೆ ಅಷ್ಟು ಇಷ್ಟು ಖರ್ಚಿಗೆ ಕೊಡಬೇಕಲ್ಲವೆ? ಆ ಚಿಂತೆ ನಮ್ಮ ದೊಡ್ಡಪ್ಪನಿಗೆ. ತಿಂಗಳಿಗೆ ಎರಡೂವರೆ ಆಣೆ ಶಾಲಾಫೀಜನ್ನಾದರೂ ಕೊಡಲೇ ಬೇಕಲ್ಲವೆ? ಅದನ್ನು ಹೇಗೆ ಹೊಂದಿಸುವುದು ಎನ್ನುವಷ್ಟರಮಟ್ಟಿಗೆ ಯೋಚನೆ ನಮ್ಮ ಹಿರಿಯರಿಗೆ ಆಗಿರುವಾಗ ನಮ್ಮ ಮನೆತನದ ಆರ್ಥಿಕ ದುಃಸ್ಥಿತಿಯನ್ನು ಊಹಿಸಬಹುದು. ಶಾಲಾ ಶುಲ್ಕ ಮಾಫಿ ಆಗುವಂತಿರಲಿಲ್ಲ. ಆಗ ಐದನೇ ತರಗತಿಯವರೆಗೆ ಒಂದಾಣೆ, ಆರು ಮತ್ತು ಏಳನೇ ತರಗತಿಗಳಿಗೆ ಎರಡೂವರೆ ಆಣೆ ಶುಲ್ಕ ಕೊಡಬೇಕಾಗಿತ್ತು. ತೀರ ಬಡವರಿಗೆ ವಿನಾಯಿತಿ ಇತ್ತು. ಅದನ್ನು ಮಾಫಿ ಅನ್ನುತ್ತಿದ್ದರು. ಏಕೆಂದರೆ ಹೊಲ ಮನೆ ನಮಗೆ ಇದೆಯಲ್ಲಾ! ಅದಿಲ್ಲದಿದ್ದರೆ ತಿಂಗಳಿಗೆ ಎರಡೂವರೆ ಆಣೆಯಿಂದ ವಿನಾಯಿತಿ ಪಡೆಯ ಬಹುದಾಗಿತ್ತು. ನನಗೆ ನಮ್ಮ ಮನೆತನದ ಪರಿಸ್ಥಿತಿ, ಕಷ್ಟ ಕಾರ್ಪಣ್ಯಗಳ ಅರಿವು ಆಗುತ್ತಿತ್ತು. ತಲೆಯ ಮೇಲೆ ಕೈಹೊತ್ತು ಕಣ್ಣೀರು ಹಾಕುತ್ತ ನಮ್ಮ ದೊಡ್ಡಪ್ಪ ಅಪ್ಪ ಕುಳಿತುಕೊಳ್ಳುವುದನ್ನು ಕಣ್ಣಾರ ಕಂಡಿದ್ದೆ. ನಮ್ಮ ದೊಡ್ಡಪ್ಪನಾಗಲಿ ಅಪ್ಪನಾಗಲಿ ವಿದ್ಯೆ ಇಲ್ಲದವರು ಅಷ್ಟೆ! ಆದರೆ ಧೈರ್ಯಶಾಲಿಗಳು. ಅವರು ಕಣ್ಣೀರು ಹಾಕುವಷ್ಟು ದುರ್ಬಲರಲ್ಲ. ಪರಿಸ್ಥಿತಿಯನ್ನು ಎದುರಿಸುವ ಸಾಮರ್ಥ್ಯದವರು. ಅವರು ಕಣ್ಣೀರು ಹಾಕಿದುದನ್ನು ಇಂದೂ ನೆನೆಸಿಕೊಂಡು ಉಮ್ಮಳಿಸುತ್ತೇನೆ. ಒಮ್ಮೊಮ್ಮೆ ಊರಲ್ಲಿ ಬಂಧು ಬಳಗದವರಲ್ಲಿ ಎರಡು ಚೀಲ ಜೋಳವನ್ನು ಕಡವಾಗಿಯೂ ವಾತದಂತೆಯೋ ತರಲು ಹೋಗಿ ಬರಿಗೈಯಿಂದ ಬಂದುದನ್ನು ಕಂಡಿದ್ದೆ. ವಾತ ಎಂದರೆ ಕಾಳಿಗೆ ಬಡ್ಡಿ ಸೇರಿಸಿಕೊಡುವ ಪದ್ಧತಿ. ಅದರ ದರಗಳು ಸನ್ನಿವೇಶಕ್ಕೆ ತಕ್ಕಂತೆ ಹೆಚ್ಚು ಕಡಿಮೆ ಇರುತ್ತಿದ್ದವು. ನೂರು ಸೇರಿಗೆ ಸುಗ್ಗಿಯಲ್ಲಿ 10 ಸೇರು ಸೇರಿಸಿಕೊಡುವುದು ಧರ್ಮದ ವಾತ. ಕೆಲವರು ನೂರು ಸೇರಿಗೆ ಇಪ್ಪತ್ತು ಇಪ್ಪತ್ತೈದು ಐವತ್ತು ಸೇರು ಸೇರಿಸಿ ಕೊಡುವ ಕರಾರಿನಂತೆ ವಾತವನ್ನು ಹಳ್ಳಿಯಲ್ಲಿ ಕೊಟ್ಟು ವ್ಯವಹಾರ ಮಾಡುತ್ತಿದ್ದರು. ಒಂದು ದಿನ ಮುಂಗಾರು ಕಾಲದಲ್ಲಿ ರಾತ್ರಿ ಮನೆಯವರೆಲ್ಲ ನಮ್ಮ ಹೊಲದಲ್ಲಿ ಬೆಳೆದ ಸ್ವಲ್ಪ ಸವತೇಕಾಯಿ ತಿಂದು ಕಾಲ ಕಳೆದದ್ದನ್ನು ಕಂಡಿದ್ದೆ. ಮತ್ತೊಮ್ಮೆ ಒಂದೇ ಸೇರು ಅಕ್ಕಿನುಚ್ಚನ್ನು ಹೆಚ್ಚಾಗಿ ನೀರು ಹಾಕಿ ದೊಡ್ಡ ಗಡಿಗೆಯ ತುಂಬ ಮಾಡಿ ಎಲ್ಲರೂ ನೀರಿನಂಥ ಆ ಗಂಜಿಯಿಂದ ಹೊಟ್ಟೆ ತುಂಬಿಸಿಕೊಂಡ ಬವಣೆಯನ್ನು ಕಂಡಿದ್ದೆ. ಯಾವ ರೀತಿಯಿಂದ ಯೋಚಿಸಿದರೂ ಪರಿಸ್ಥಿತಿಗೆ ಪರಿಹಾರ ಕಂಡು ಹಿಡಿಯುವುದರಲ್ಲಿ ಅಸಮರ್ಥರಾಗಿದ್ದ, ಸಾತ್ವಿಕಬುದ್ಧಿಯೂ ಹೆಚ್ಚಾಗಿ ಏನೂ ತಿಳಿಯದ ನಮ್ಮ ಪಿತೃಗಳ ಕಷ್ಟಕಾರ್ಪಣ್ಯವನ್ನು ಕಂಡು ನನಗೆ ಒಮ್ಮೊಮ್ಮೆ ಕರುಳು ಕಿತ್ತುಬರುವಂತಾದರೂ ನಾನಿನ್ನು ಯಾವ ಕೆಲಸಕ್ಕೂ ಬಾರದ ಹಸುಳೆ, ಅಲ್ಲ ಅಲ್ಲ ಹುಡುಗನಾಗಿದ್ದೆ. ಸೂಜಿಯು ಮರವನ್ನು ಕೆಡವೀತೇ? ಇದೆಲ್ಲ ನಾನು 5ನೇ ತರಗತಿಯಲ್ಲಿ ಓದುವ ಕಾಲದ ಭವಣೆ. ಈ

ಕಾಲದಲ್ಲಿ ತೆವರಮೆಳ್ಳಿ ಶಾಲೆಗೆ ಹೋಗಿ ಬರುತ್ತಿದ್ದ ನನ್ನ ಅನುಭವದ ಕೆಲವು ನೆನಪುಗಳು ಹಿಂದಿನ ಪುಟಗಳಲ್ಲಿ ಬಂದಿವೆ. ಸಾಮಾನ್ಯವಾಗಿ ಪ್ರತಿ ವರ್ಷ ಮಲೆನಾಡಿಗೆ ಬತ್ತ ಕೊಯ್ಯಲು ನಮ್ಮ ಮನೆಯ ಐದಾರು ಜನ ಹೋಗುವಂತಾಯಿತು. ಅಲ್ಲಿ ಹೋಗಿ ಏಳೆಂಟು ಚೀಲ ಬತ್ತವನ್ನು ತರುತ್ತಿದ್ದರು. ಊರಲ್ಲಿ ಮತ್ತು ನರೇಗಲ್ಲು ಗದ್ದೆ ತೋಟಗಳಲ್ಲಿ ಅಭಿಮಾನವನ್ನು ಕಟ್ಟಿಟ್ಟು ಕೂಲಿ ಮಾಡಿ ನಮಗೆಲ್ಲ ತಂದು ಹಾಕಿದರು. ಹೆದರಲಿಲ್ಲ. ಬರಬರುತ್ತ ಊರಲ್ಲಿ ಬೇರೆ ಇನ್ನಷ್ಟು ಜಮೀನು ಕೋರು, ಕುಂಬಳಿಗೆ ಮಾಡತೊಡಗಿದರೂ ಅಷ್ಟೊಂದು ಲಾಭದಾಯಕವಾಗಲಿಲ್ಲ. ದಾರಿದ್ರ್ಯ ಬೆನ್ನು ಹತ್ತಿದರೆ ಹೀಗೆಯೇ ಅಲ್ಲವೆ? ಚಿನ್ನ ಮುಟ್ಟಿದರೂ ಮಣ್ಣು ಆಗುವ ಪರಿಸ್ಥಿತಿಗೆ ನಮ್ಮ ಮನೆ ಇಳಿದು ಹೋಗಿತ್ತು.

ನಮ್ಮ ಮನೆತನದ ಪರಿಸ್ಥಿತಿ ಇಷ್ಟೊಂದು ಕಡುಬಡತನದ ಬವಣೆಯ ಬೇಗೆಯಲ್ಲಿ ಬೇಯುತ್ತಿರುವಾಗ ಮನೆಯ ಸಮಸ್ತರೂ ಪರಿಸ್ಥಿತಿಯನ್ನು ಎರಿಸಿ ಧೈರ್ಯವಾಗಿ ವರ್ತಿಸಿದ್ದೊಂದು ದೊಡ್ಡ ಪವಾಡವೇ ಅನ್ನ ಬೇಕು. ಒಮ್ಮೆ ಜೋಳ ಸಿಕ್ಕದೆ ಬಹುತೊಂದರೆಯಾದಾಗ ನಮ್ಮ ದೊಡ್ಡಪ್ಪ ಯಾರದೋ ಮನೆಯಿಂದ ಸಾಯಂಕಾಲ ನಾಲ್ಕು ಚಿಟ್ಟಿ ಜೋಳ (ಚಿಟ್ಟಿ : ಎಂಟು ಸೇರು) ತಂದೊಡನೆ ಹಸನುಮಾಡುವುದಕ್ಕೆ ಇಬ್ಬರು ಕುಳಿತರು, ಹಸನುಮಾಡಿದ ಜೋಳವನ್ನು ಬೀಸಲು ನಾಲ್ಕು ಜನ ಕುಳಿತರು. ಆ ಕಾಲದಲ್ಲಿ ಬೀಸಲು ಕುಳಿತವರಲ್ಲಿ ನಾನೂ ಒಬ್ಬ. ಅತ್ತ ಹಿಟ್ಟು ಸುರಿದಂತೆಲ್ಲ ರೊಟ್ಟಿ ಮಾಡುವುದಕ್ಕೆ ಎರಡು ಒಲೆಗೆ ಉರಿಹಾಕಿದರು. ಕೂಡಿದ ಹೊಳೆ ಮೂಲೆಯಿಂದ ಹರಿದು ತಂದ ಹೊನಗನ್ನೆ, ಗೊಜಿಸೊಪ್ಪಿನ ಪಲ್ಲೆ ಇನ್ನೊಂದು ಒಲೆಯ ಮೇಲೆ ಸಿದ್ಧವಾಯಿತು. ಬಿಸಿ ಬಿಸಿ ರೊಟ್ಟಿಗಳನ್ನು ಹುಡುಗರೆಲ್ಲ ತಿನ್ನಲು ಕುಳಿತರು. ಕೇವಲ ಒಂದು ಘಂಟೆಯ ಅವಧಿಯಲ್ಲಿ 15 ಸೇರು ಜೋಳ ಬೀಸಿದ್ದು ನನಗೆ ಪೂರ್ಣ ಜ್ಞಾಪಕ. ಜೋಳ ಬೀಸಿ ಬೆವರಿದ ಮೈ ಒರೆಸಿಕೊಂಡು ಮುಖ ತೊಳೆದು ಊಟಕ್ಕೆ ಕುಳಿತು ನಾಲ್ಕು ರೊಟ್ಟಿ ತಿಂದೆನೆಂದು ಜ್ಞಾಪಕ.

ಇಂಥ ಈ ದುಷ್ಕಾಳದ ವರ್ಷದಲ್ಲಿ ನಾನು 12 ವರ್ಷದವನಾಗಿದ್ದೆನೆಂದು ಒಂದು ಅಂದಾಜು. ಆ ವರ್ಷ ನಾನು ಮಾಡಿದ ನನ್ನ ಮಟ್ಟದ ಒಂದು ಅದ್ಭುತ ಕೆಲಸವನ್ನು ಎಂದೂ ಮರೆಯುವಂತಿಲ್ಲ. ನನ್ನ ಆ ಕೆಲಸ ನನ್ನಲ್ಲಿ ಸ್ವಾಬಿಮಾನವನ್ನು ತುಂಬಿದಷ್ಟು ಯಾವುದೂ ತುಂಬಲಿಲ್ಲ. ಆ ಕೆಲಸದಲ್ಲಿ ಸಾಧಿಸಿದ ಯಶಸ್ಸಿನಿಂದ ಉತ್ತರೋತ್ತರ ಏನನ್ನಾದರೂ ಸಾಧಿಸಲು ಶಕ್ಯ. ಆದರೆ ಮನುಷ್ಯನಿಗೆ ಉತ್ಸಾಹ ಶಕ್ತಿ ಮಾತ್ರ ಬೇಕು ಎಂಬ ಪಾಠವನ್ನು ಅದು ನಮಗೆ ತಿಳಿಸಿಕೊಟ್ಟಿತು. ಆ ಕೆಲಸವೆಂದರೆ ನಮ್ಮ ಹಿತ್ತಲಲ್ಲಿ ನಾನು ತರಕಾರಿ ತೋಟ ಮಾಡಿದ್ದು.

ಶಾಲೆ ಬಿಟ್ಟ ಮೇಲೆ ಒಂದು ಚಿಕ್ಕಗುದ್ದಲಿಯಿಂದ ಕ್ರಮವಾಗಿ ನೆಲವನ್ನು ಅಗಿದೆ. ಈ ಹಿಂದೆ ಹೇಳಿದ ಹೆಸರಾಂತ ತೋಟಗಾರ ನಮ್ಮ ಕೆಂಚಪ್ಪ ಮಾಡುತ್ತಿದ್ದ ಮಡಿಗಳ ರೀತಿಯನ್ನು ಕಂಡ ನಾನು ಅಗೆತ ಮಾಡಿದ ನೆಲದಲ್ಲಿ ಅವನಂತೆಯೇ ಚಿಕ್ಕ ಚಿಕ್ಕ ಮಡಿ ಮಾಡಿದೆ. ಯಾರೋ ಕೊಟ್ಟ ಒಂದು ಪಡುವಲ ಬೀಜ ಮತ್ತು ಹೀರೆಬೀಜವನ್ನು ಪ್ರತ್ಯೇಕ ಪ್ರತ್ಯೇಕ ಎರಡು ಮಡಿಗಳಲ್ಲಿ ಊರಿದೆ. ಗೊಬ್ಬರ ಹಾಕಿದೆ. ಮತ್ತೊಂದು ಕಡೆ ಯಾರೋ ಕೊಟ್ಟ ಒಂದು ಹಿತ್ತಿಲ ಬದನೆ ಗಿಡವನ್ನು ತಂದು ಹಚ್ಚಿ ಗೊಬ್ಬರ ಹಾಕಿ ಅದಕ್ಕೆ ಪಾತಿ ಮಾಡಿದೆ. ಮಡಿಗಳಲ್ಲಿ ಒಂದರಲ್ಲಿ ಮೆಂತೆ ಮತ್ತೊಂದರಲ್ಲಿ ಕೋತಂಬ್ರಿ ಬೀಜ ಚಲ್ಲಿ ಗೊಬ್ಬರ ಹಾಕಿದೆ. ಸುತ್ತಲೂ ಬೇಲಿ ಕಟ್ಟಿ

ಬೇಲಿಯ ಮೇಲೆ ಹಬ್ಬಲು ಹೀರೇ ಬೀಜಗಳನ್ನು ಸುತ್ತಲೂ ಊರಿದೆ. ದಿನಾಲು ಶಾಲೆಯಿಂದ ಬಂದ ಮೇಲೆ ಆ ನನ್ನ ವಯಸ್ಸಿಗೆ ತಕ್ಕಂತೆ ಒಂದು ಮಣ್ಣಿನ ಬಿಂದಿಗೆಯನ್ನು ಕುಂಬಾರ ಸಿದ್ಧಮ್ಮನ ಮನೆಯಿಂದ ತಂದೆ. ನಮ್ಮ ಮನೆಯ ಆಯಗಾರರಾದ್ದರಿಂದ ಅವರು ನನ್ನಿಂದ ಏನೂ ಕೇಳಲಿಲ್ಲ. ಏಕೆಂದರೆ ವರ್ಷಕ್ಕೊಮ್ಮೆ ಅವರಿಗೆ ಕಾಳು ಸೊಪ್ಪೆ ಹೊಟ್ಟು ಕೊಡುತ್ತಿದ್ದೆವು. ಅವರಿಗೆ ಬೇಕಾದ ಮಣ್ಣನ್ನು ಹೇರಿತರಲು ನಮ್ಮ ಗಾಡಿ ಎತ್ತುಗಳೇ ಹೋಗಬೇಕಾಗಿತ್ತು. ವರ್ಷವಿಡೀ ನಮ್ಮ ಮನೆಗೆ ಬೇಕಾಗುವ ಗಡಿಗೆ ಮಡಿಕೆಗಳನ್ನು ಅವರು ಈ ಕಾರಣವಾಗಿ ಕೊಡುತ್ತಿದ್ದರು. ಸಾಮಾನ್ಯವಾಗಿ ಆಗ ನಾವು ಬಳಸುತ್ತಿದ್ದ ಶೇಕಡಾ ತೊಂಬತ್ತರಷ್ಟು ಪಾತ್ರೆಗಳು ಮಣ್ಣಿನವೇ. ಹೊಸ ಬಿಂದಿಗೆಯಿಂದ ದಿನವೂ ನಾನೇ ಎಲ್ಲದಕ್ಕೂ ನೀರೆರೆಯತೊಡಗಿದೆ. ನನ್ನ ಕಾರ್ಯ ಫಲಿಸಿತು. ದಿನಕ್ಕೊಂದು ಚಂದವಾಗಿ ನಾನು ಹಾಕಿದ ಎಲ್ಲ ಬೀಜಗಳೂ ಮೊಳೆತು ಮೇಲೆ ಮೂಡಿದವು. ಪಡುವಲ ಮತ್ತು ಗೊಂಚಲು ಹೀರೆಬಳ್ಳಿಗಳಿಗೆ ನಾನೇ ಚಪ್ಪರ ಹಾಕಿ ಅವನ್ನು ಹಬ್ಬಿಸಿದೆ. ಮುಂದೆ ಮಳೆಗಾಲ ಪ್ರಾರಂಭವಾಯಿತು. ನನ್ನ ತೋಟ ಹಚ್ಚನೆ ಹಸುರೇರಿ ಹೂ ಮಿಡಿಗಳಿಂದ ತುಂಬಿತು. ಬದನೆಗಿಡದಲ್ಲಿ ಮೊದಲು ಬಿಟ್ಟ ಕಾಯಿಯನ್ನು ದಿನವೂ ಬೆಳಿಗ್ಗೆ ಎದ್ದ ಕೂಡಲೆ ಎಷ್ಟು ದೊಡ್ಡವಾಗಿದೆ ಎಂದು ನೋಡಿ ಬರುತ್ತ ಆನಂದಿಸುತ್ತಿದ್ದೆ. ಬೇಗ ಬೇಗನೆ ದೊಡ್ಡದಾಗುತ್ತಿಲ್ಲವಲ್ಲ ಎಂದು ಚಡಪಡಿಸುತ್ತಿದ್ದೆ. ಆ ನನ್ನ ತೋಟದಿಂದ ಆ ವರ್ಷ ನಮ್ಮ ಮನೆಗೆ ಯಥೇಚ್ಛವಾಗಿ ಹಸಿರು ತರಕಾರಿ ಪೂರೈಸಲ್ಪಟ್ಟಿತು. ಗೊಂಚಲು ಹೀರೆಯಂತೂ ಮಾರಾಟ ಮಾಡುವಷ್ಟು ಬರತೊಡಗಿತ್ತು. ಬೇಲಿಗೆ ಹಬ್ಬಿಸಿದ ಹೀರೆಕಾಯಿಗಳಂತೂ ನನ್ನ ಕಣ್ಮನಗಳನ್ನು ತುಂಬಿಸಿತು. ನನ್ನ ತೋಟದಲ್ಲಿ ಯಾರಿಗೂ ಕೈಹಾಕಗೊಡುತ್ತಿರಲಿಲ್ಲ. ನಾನು ಬೆಳೆದ ಕಾಯಿ ಪಲ್ಯದ ಮೇಲೆ ನನಗೆ ಎಷ್ಟು ಅಭಿಮಾನವಿತ್ತೆಂಬುದನ್ನು ನಾನೀಗ ವರ್ಣಿಸಲಾರೆ. ಪ್ರತಿಯೊಂದು ನನ್ನ ಕೈಮುಟ್ಟಿ ಇನ್ನೊಬ್ಬರಿಗೆ ಹೋಗಬೇಕೆ ವಿನಾ ಯಾರೂ ನನ್ನ ಅಪ್ಪಣೆಯಿಲ್ಲದೆ ತೋಟದಲ್ಲಿ ಕೈಯಿಕ್ಕದಂತೆ ಮಾಡಿತ್ತು. ನನ್ನ ತಾಯಿ ಸ್ವಲ್ಪ ಕೋತಂಬ್ರಿ ಬೇಕು, ಹೀರೆಕಾಯಿ ಬೇಕು ಎಂದು ಕೇಳಿದಾಗ ಕಿತ್ತು ತಂದು ಕೊಡುವಾಗಿನ ನನ್ನ ಮನೋಭಾವ ತಪಸ್ಸು ಮಾಡಿದ ಭಕ್ತನಿಗೆ ದೇವರು ವರ ಕೊಡುವಂತೆ ಆಗಿತ್ತು. ನನಗೆ ಹೆಮ್ಮೆಯೋ ಹೆಮ್ಮೆ. ನಾನೊಂದು ಚಿಕ್ಕ ತೋಟದ ಯಜಮಾನನೆಂದು. ಕೋತಿಯೋ ಮೇಕೆಯೋ ತೋಟವನ್ನು ಹೊಕ್ಕು ಹಾಳುಮಾಡಿದ ದಿನ ನನಗಾದ ಸಂಕಟವನ್ನು ವಿವರಿಸಲಾರೆ. ಅಂದು ಕುಣಿದಾಡಿ ಅಳುವುದಕ್ಕೆ ನನಗೆ ಮನೆ ಹಿತ್ತಿಲುಗಳು ಸಾಲದಾಗುತ್ತಿದ್ದವು. ನನ್ನ ತೋಟದಲ್ಲಿ ಯಾವ ಯಾವ ಕಾಯಿ ಎಷ್ಟೆಷ್ಟೆಂಬುದರ ಲೆಕ್ಕವನ್ನು ಹಚ್ಚಿಟ್ಟಿದ್ದೆ.

ನಮ್ಮ ಸೋದರಮಾವ ಸರಸಪ್ಪ ನನಗೆ ಹೇಳದಂತೆ ಎರಡು ಹೀರೇಕಾಯಿ ಕಿತ್ತು ಕೊಂಡು ಹೋದಾಗ ಅವನ ಮನೆವರೆಗೆ ಹೋಗಿ ಅತ್ತು "ಯಾಕೆ ಕಿತ್ತೆ? ನನ್ನನ್ನು ಕೇಳಬೇಕಾಗಿತ್ತು. ಬೇಡವನ್ನುತ್ತಿದ್ದೆನೆ? ನಿನಗೆ ಇನ್ನು ದೊಡ್ಡ ಬಲಿತ ಕಾಯಿಕೊಡುತ್ತಿದ್ದೆನಲ್ಲಾ!?" ಎಂದು ಹೇಳಿದ್ದನ್ನು ನಾನು ಮರೆತಿಲ್ಲ. ಈ ತೋಟ ಮಾಡಿದ್ದು ನನಗೆ ಬಹಳ ಆತ್ಮಪ್ರತ್ಯಯ ತುಂಬಿತ್ತು. ನೋಡಿದವರೆಲ್ಲ ಊರಲ್ಲಿ ನನ್ನನ್ನು ಪ್ರಶಂಸೆ ಮಾಡುತ್ತಿದ್ದರು. ತೋಟ ಅಷ್ಟು ಚನ್ನಾಗಿತ್ತು ಮುಂದೆ ದೊಡ್ಡವನಾದ ಮೇಲೆ ಹದಿನೇಳನೇ ವಯಸ್ಸಿನಲ್ಲಿ ನಮ್ಮೂರ ಹೊಳೆದಂಡೆಯಲ್ಲಿ ಬದನೆತೋಟ ಮಾಡಲು ಈ ತೋಟವೇ ಹುಮ್ಮಸ್ಸು ನೀಡಿತೆಂದರೆ ತಪ್ಪಿಲ್ಲ. ಆ ವಿಷಯ ಮುಂದೆ ಹೇಳುತ್ತೇನೆ.

## ಬಾಲ್ಯದಲ್ಲಿ ನನ್ನ ತಲೆ ಕ್ಷೌರದ ಸಮಸ್ಯೆ

ಬಾಲ್ಯದಲ್ಲಿ ನನ್ನ ತಲೆಕ್ಷೌರ ಮಾಡಿಸುವುದು ನಮ್ಮ ಮನೆಯವರಿಗೆಲ್ಲ ತಲೆನೋವಿನ ಪ್ರಸಂಗವೇ ಆಗಿತ್ತು. ಕ್ಷೌರಮಾಡಿಸಿಕೊಳ್ಳಲು ನಾನು ಏಕೆ ಹೀಗೆ ಹಟಮಾಡುತ್ತೇನೆಂಬುದರ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ತಲೆ ಕೂದಲು ಬೆಳೆದು ಕಡಿತ ಶುರುವಾಗಿ ಒಮ್ಮೊಮ್ಮೆ ಅದರಲ್ಲಿ ಹೇನು, ಸೀರು ಆಗಿದ್ದರೂ ತಲೆಮಾಡಿಸಿ ಕೊಳ್ಳುತ್ತಿರಲಿಲ್ಲ. ಕ್ಷೌರಮಾಡುವ ಬಸವಣ್ಣೆಪ್ಪ ಊರಲ್ಲಿ ಕಂಡರಾಯಿತು ನಾನು ತಪ್ಪಿಸಿಕೊಂಡು ಎಲ್ಲೆಲ್ಲೊ ತಪ್ಪಿಸಿಕೊಂಡು ಬಿಡುತ್ತಿದ್ದೆ. ನಮ್ಮ ತಾಯಿಯಿಂದ ಹೊಡೆಸಿಕೊಂಡುದ್ದೂ ಉಂಟು. ಒಮ್ಮೊಮ್ಮೆ ನಮ್ಮ ತಾಯಿಗೆ ತಲೆಯು ಉರಿಯುತ್ತದೆ ನಾನು ಮಾಡಿಸಿಕೊಳ್ಳುವುದಿಲ್ಲ ಎಂದು ಬಿರುಸಿನ ಉತ್ತರ ಕೊಟ್ಟು ಸೆಡೆದು ನಿಂತುದೂ ಉಂಟು.

ಬಸವಣ್ಣೆಪ್ಪ ತೆವರಮೆಳ್ಳಹಳ್ಳಿಯ ವೀರಶೈವ ಕ್ಷೌರಿಕ. ಆಚಾರಶೀಲ; ಕರ್ತವ್ಯ ಪ್ರಜ್ಞೆಯುಳ್ಳವ. ಕಾಯಕವನ್ನು ತನ್ನ ಕಲಿತ ಶಕ್ತಿಗನುಗುಣವಾಗಿ ಶ್ರದ್ಧೆಯಿಂದ ಮಾಡುವ ಮನುಷ್ಯನೆ ಸರಿ. ಅವನ ಕತ್ತಿ ಬಹು ಮೊಂಡು. ಹಾಗೆಂದು ಯಾರಾದರೂ ಅಂದರೆ ಅವರ ಎದುರೇ ಕತ್ತಿ ಮಸೆದು ಕ್ಷೌರಮಾಡಿ ಮೊಂಡು ಎನ್ನುತ್ತೀರಲ್ಲ. ಹೇಗೆ ಚಡಚಡ ಕೂದಲನ್ನು ಬಳಿದು ಹಾಕುತ್ತದೆ' ಎಂದು ಅವರಿಗೇ ಸವಾಲು ಹಾಕಿ ಬಾಯಿ ಮುಚ್ಚಿಸಿ ಕ್ಷೌರಮಾಡಿಯೇ ಕಳಿಸುತ್ತಿದ್ದ. ಅವನ ಹತ್ತಿರ ಮಿಷನ್ ಕೊರಖಲ್ - ಇಂಥ ಉಪಕರಣಗಳೇ ಇರಲಿಲ್ಲ. ಎಂಟು ಹತ್ತು ದೇಶೀಯ ಸಾಣೆಹಿಡಿದ ಕತ್ತಿಗಳು, ಉಗುರು ತೆಗೆಯುವ ಒಂದು ಚಿಕ್ಕ ಸಾಧನ' ಒಂದು. ಸೋಪು ಎಂದವರಿಗೆ ಹಚ್ಚಲೋಸುಗ ಇಟ್ಟುಕೊಂಡ ಒಂದು ತುಂಡು ಬಟ್ಟೆ ತೊಳೆಯುವ ಸೋಪು, ನೀರಿಟ್ಟುಕೊಳ್ಳಲು ಒಂದು ಹಿತ್ತಾಳೆ ಬಟ್ಟಲು. ಒಂದು ದೇಶೀ ಕತ್ತರಿ. ಇಷ್ಟು ಬಿಟ್ಟರೆ ಅವನ ಹಡಪದಲ್ಲಿ ಇನ್ನಾವ ಕ್ಷೌರದ ಸಾಮಾನುಗಳೂ ಇರುತ್ತಿರಲಿಲ್ಲ. ಕತ್ತಿ ಮತ್ತು ಕತ್ತರಿಗಳು ಆಗ ಇದ್ದ ಬೈಲು ಗಮ್ಮಾರರೆಂಬುವರು ತಯಾರಿಸಿದವುಗಳು. ಅವು ಚೆನ್ನಾಗಿಯೂ ಇರುತ್ತಿದ್ದವೆನ್ನಬಹುದು. ಬೀಡಿ ಕಟ್ಟುವವರು ತುಮರೀ ಎಲೆ ಕತ್ತರಿಸಲು ಉಪಯೋಗಿಸುವಂತಹ ಮಾಟಗೀಟ ಇಲ್ಲದ ಕತ್ತರಿಗಳು.

ಬಸವಣ್ಣೆಪ್ಪ ನಮ್ಮೂರ್ರ ಅರ್ಧಕ್ಕೂ ಮೇಲ್ಪಟ್ಟು ಆಯಮಾಡುತ್ತಿದ್ದ. ಸುಗ್ಗಿಯಲ್ಲಿ ಮನೆಯಲ್ಲಿರುವ ದೊಡ್ಡವರಿಗೆಲ್ಲ ಒಂದೊಂದು ಚಿಟ್ಟೆಜೋಳ, ಒಂದು ಹೊರೆ ತೆನೆ ಸೊಪ್ಪಿ (ತೆನೆ ಸಮೇತವಾಗಿದ್ದ ಜೋಳದ ಸೊಪ್ಪೆ) ಜೋಳದ ದಂಟುಗಳು ಒಂದು ಕಟ್ಟು, ಸುಮಾರು ಆರು ಪೆಂಡಿಗಳು ಎಂದರೆ ಹನ್ನೆರಡು ಸಿವುಡು ಇರುವಂತಹುದು) ಒಂದು ಲಡಿ ಹತ್ತಿ ಕೊಡಬೇಕು. ಕಣಕಟ್ಟಿ ಒಕ್ಕಲು ನಡೆಯುವಾಗ ಒಕ್ಕಿದ ಹೆಸರು, ತೊಗರಿ, ಅಗಸೆ, ಗುರೆಳ್ಳುಗಳಲ್ಲಿ ಅಷ್ಟು ಇಷ್ಟು ತಿಳಿದಷ್ಟು ಕೊಡಬೇಕು. ಅದೂ ಕೂಡ ಅವನು ಕಣಕ್ಕೆ ಬಂದರೆ ಮಾತ್ರ ಬಾರದಿದ್ದರೆ ಇಲ್ಲವೇ ಇಲ್ಲ. ಇದು ಆಯಗಾರಿಗೂ ರೈತರಿಗೂ ಇದ್ದ ಕೊಡುಕೊಳ್ಳಿ. ಬಸವಣ್ಣೆಪ್ಪ ಸೋಮವಾರ ಬೆಳಕು ಹರಿಯುವುದರೊಳಗಾಗಿ ಊರಿಗೆ ಬಂದು ಅಲೆದಾಡಿ ಯಾವುದಾದರೂ ಒಂದು ಕಟ್ಟೆ ಹಿಡಿದು ಕುಳಿತನೆಂದರೆ ಘಂಟೆಗೆ ಹತ್ತು ಹನ್ನೆರಡು ಕ್ಷೌರಮಾಡಿ ಮುಗಿಸಿ ಬಿಡುತ್ತಿದ್ದ. ಆಮೇಲೆ ಇನ್ನೊಂದು ಕಟ್ಟೆಯ ಮೇಲೆ ಕೂಡುತ್ತಿದ್ದ. ಉಳಿದ ದಿನಗಳಲ್ಲಿ ಆಗಾಗ ಬರುತ್ತಿದ್ದ. ಅಂತು ವಾರದಲ್ಲಿ ಮೂರು ದಿನವಾದರೂ ನಮ್ಮೂರಿಗೆ ಬರುತ್ತಿದ್ದ. ಆಗ ಕ್ರಾಪು ಗೀಪು ಎಂದು

ಯಾರೂ ಕೇಳುತ್ತಿರಲಿಲ್ಲ ಬಸವಣ್ಣೆಪ್ಪ ಕ್ರಾಪು ಮಾಡುತ್ತಲೂ ಇರಲಿಲ್ಲ. ಕ್ರಾಪು ಎಂದು ಯಾರಾದರೂ ಹಟಹಿಡಿದರೆ ತನ್ನ ತುಮರಿ ಎಲೆಗಳನ್ನು ಕತ್ತರಿಸುವಂತಹ ದೊಡ್ಡ ಕತ್ತರಿಯಿಂದ ಚಮಚಮ ಚಮ ಎನ್ನಿಸುತ್ತ ಹಿಂಭಾಗದ ಕಿವಿಯ ಹತ್ತಿರದ ಕೂದಲುಗಳನ್ನು ಕತ್ತರಿಸಿ ಕ್ರಾಪು ಆಯಿತು ನಡಿಯಿರಿ ಎಂದು ಬಿಡುತ್ತಿದ್ದ. ಕೂದಲು ಕಂಡು ಕಂಡಾಗಿ ಮನೆಗೆ ಹೊದ್ದಿಸಿದ ಮೆರೆಹುಲ್ಲಿನ ಕಂಡುಗಳಂತೆ ಕಾಣುತ್ತಿದ್ದವು. ಅದೇ ಆಗಿನ ಹಳ್ಳಿಯ ಕ್ರಾಪು. ಇವನೇನಿದ್ದರೂ ತಲೆ ಬೋಳಿಸಿ ಸ್ವಚ್ಛ ಮಾಡುವುದರಲ್ಲಿ ನಿಪುಣ. ಎರಡು ಮೂರು ನಿಮಿಷದಲ್ಲಿ ಒಂದು ತಲೆ ಬೋಳಿಸಿ ರಕ್ತ ಅಲ್ಲಿ ಇಲ್ಲಿ ಏಳುವಂತೆ ಮಾಡಿ ಕಳಿಸುವುದರಲ್ಲಿ ಇವನ ಕೈ ಚಳಕವನ್ನು ಮಿಕ್ಕಿಸುವವರು ಇನ್ನೊಬ್ಬರನ್ನು ನಾನು ನೋಡೇ ಇಲ್ಲ. ರಕ್ತ ಸುರಿದರೆ ಅದೇನು ಮಾಡುತ್ತೆ, ತಣ್ಣೀರು ಜಳಕ ಮಾಡಿ ಚೆನ್ನಾಗಿ ತಲೆ ಒರೆಸಿ ಕೊಳ್ಳಿ ಎಂದು ಬಿಡುತ್ತಿದ್ದ. ಯಾರೂ ಕಮಕ್-ಕಿಮಕ್ ಅನ್ನುತ್ತಿರಲಿಲ್ಲ.

ನಮ್ಮೂರ‍್ರಲ್ಲಿ ಆಗ ಕ್ರಾಪ್‌ಕಟ್ ಮಾಡುವವರಾರೂ ಇದ್ದಿಲ್ಲನ್ನಬೇಡಿ. ಇನ್ನೊಬ್ಬ ಕ್ಷೌರಿಕ ಇದ್ದ. ಅವನ ಹೆಸರು ಬಸಪ್ಪ. ಅವನು ಹಿಂದೂ. ಆದರೆ ಎಂದೋ ಓರ್ವ ಮಹಮ್ಮದೀಯ ಹೆಂಗಸನ್ನು ಮದುವೆ ಮಾಡಿಕೊಂಡು ಅವಳ ಬಲತ್ಕಾರಕ್ಕೆ ಸಿಕ್ಕು ಮಹಮ್ಮದೀಯರ ಕೇರಿಯಲ್ಲೆ ಮನೆಮಾಡಿಕೊಂಡು ಮಹಮ್ಮದೀಯನೇ ಆಗಿದ್ದ. ಹೆಸರನ್ನು ಮಾತ್ರ ಬದಲಾಯಿಸಿಕೊಂಡಿರಲಿಲ್ಲ. ಹೆಂಡತಿಯ ಹೆಸರು ಪಾತವ್ವ. ಫಾತಿಮಾ ಹೋಗಿ ಪಾತವ್ವ ಆಗಿದ್ದಳು. ಅವನದು ಒಂದು ಕಣ್ಣು ಕುರುಡು. ಕಾಲಲ್ಲಿ ಆನೆ ಬೆಳೆದು ತುದಿಗಾಲಿಂದ ನಡೆಯುತ್ತಿದ್ದ. ಅವನೂ ಹುಟ್ಟು ಕ್ಷೌರಿಕನೇ. ಆಧುನಿಕತೆಯ ಗಾಳಿ, ಅವನಿಗೆ ಸವಣೂರು ಹುಬ್ಬಳ್ಳಿಗಳಿಗೆ ತಿರುಗಾಡಿ ಬಡಿದಿತ್ತು. ಅವನು ನಮ್ಮೂರ‍್ರಲ್ಲಿ ಹಿಂದುವೂ ಅಲ್ಲ, ಮಹಮ್ಮದೀಯನೂ ಅಲ್ಲ, ಆಯಗಾರನೂ ಅಲ್ಲ ಎನಿಸಿದ್ದ. ವಿಚಿತ್ರ ಸ್ವರೂಪದವನು. ಇಪ್ಪತ್ತು ಮೊಳ ಉದ್ದದ ಮಲ್ಲನ ಕೋಳೆಯಿಂದ ಕೂಡಿದ ಪಟಗಾ ಸುತ್ತುತ್ತಿದ್ದ ತಲೆಗಿಂತ ದೊಡ್ಡದಾಗಿ ಕಾಣಿಸುತ್ತಿತ್ತು. ಅವನು ಹುಬ್ಬಳ್ಳಿಯಲ್ಲಿದ್ದ ಪಠಾಣರನ್ನು ನೋಡಿ ಕಲಿತುಕೊಂಡು ಬಂದಿದ್ದನಂತೆ ಅವನು ಒಂದಾಣೆ ಸಂಪಾದಿಸುವ ಹೊತ್ತಿಗೆ ಅವನ ಹೆಂಡತಿ ಪಾತವ್ವ ಬಂದು ಆ ಆಣೆಯನ್ನು ತೆಗೆದುಕೊಂಡು ಕಾಲಾಣೆ ಚಹಾಪುಡಿ, ಕಾಲಾಣೆ ಬೆಲ್ಲ, ಕಾಲಾಣೆ ಹಾಲು. ಕಾಲಾಣೆ ಒಗ್ಗರಣೆ ಮಂಡಕ್ಕಿ ಕೊಂಡು ಇಬ್ಬರಿಗೂ ಚಹಾಮಾಡುತ್ತಿದ್ದಳು. ಇವನು ಕ್ಷೌರಬಿಟ್ಟು ಹೋಗಿ ಚಹಾ ಕುಡಿದು ಬರುತ್ತಿದ್ದ. ಅವನು ಆಯ ಗೀಯ ಎಂದು ಹಚ್ಚಿಕೊಂಡವನಲ್ಲ. ಅವನದು ದುಡ್ಡಿನ ಕ್ಷೌರ. ಮಸೀದಿಯ ಮುಂದಿನ ಮನೆಯ ಕಟ್ಟೆಯ ಮೇಲೆ ಬಂದು ಕುಳಿತುಬಿಟ್ಟರೆ ಕೆಲವರು ದುಡ್ಡುಕೊಟ್ಟು ಕ್ಷೌರ ಮಾಡಿಸಿಕೊಳ್ಳುವವರು ಅವನಲ್ಲಿಗೆ ಬರುತ್ತಿದ್ದರು. ಅವನ ಹತ್ತಿರ ಷೇವಿಂಗ್ ಸೋಪು, ಒಂದು ಹಳೆಕಾಲದ ಬ್ರಷ್ಷು, ಹುಬ್ಬಳ್ಳಿಯ ಮೊಂಡಕಾ ಬಜಾರಿನಲ್ಲಿ ಕೊಂಡು ತಂದ ಹಳೆಯ ಕಟಿಂಗ್ ಮಿಷನ್, ಒಂದೆರಡು ಮೊಂಡಕಾ ಬಜಾರಿನವೇ ರೇಜರ್ ವಗೈರೆ ಆಧುನಿಕ ಕ್ಷೌರದ ಸಾಮಗ್ರಿಗಳು ಹಡಪದಲ್ಲಿ ತುಂಬಿರುತ್ತಿದ್ದವು.ಆವನು ಮುಖಕ್ಷೌರಕ್ಕೆ ಕಾಲಾಣೆ, ತಲೆ ಬೋಳಿಸಿ ಮುಖ ಕ್ಷೌರ ಮಾಡಲು ಅರ್ಧ ಆಣೆ, ಕ್ರಾಪ್ ಕಟ್ ಮಾಡಲು ಒಂದಾಣೆ ರೇಟ್ ಫಿಕ್ಸ್ ಮಾಡಿಬಿಟ್ಟಿದ್ದ. ಕ್ರಾಪ್‌ಕಟ್‌ನವರು ಅವನ ಹತ್ತಿರ ಬಂದು ಒಂದಾಣೆ ಬಡಿದು ಕ್ರಾಪ್‌ಕಟ್ ಮಾಡಿಸುತ್ತಿದ್ದರು. ಕ್ರಾಪ್‌ಕಟ್ಟಿಗೆ ಬಂದವರನ್ನು ಕುಳ್ಳಿರಿಸಿ ನಮ್ಮೂರ‍್ರಿನವರಿಗೆ ಹೊಸ ಆಯುಧವೆನಿಸಿದ್ದ ಖರ್ಷತೆಗೆದು ಸುತ್ತಲೂ ತಿರುಗಾಡಿ ಚಮ್ ಚಮ್ ಎಂದು ಸಪ್ಪಳ ಮಾಡಿ, ಅನಂತರ ಕತ್ತರಿಯನ್ನು ಒಂದು ಅರ್ಧಮರ್ಧ ಹಲ್ಲುಮುರಿದ ಬಾಚಣಿಕೆಯಿಂದ ಕೂದಲನ್ನು ಕತ್ತರಿಸುವ ಶಾಸ್ತ್ರ ಮಾಡಿ ಮುಖಕ್ಷೌರಕ್ಕೆ ತನ್ನ

ಹಳೆಗಾಲದ ಬ್ರಷ್‌ನಿಂದ ಸೋಪು ಹಚ್ಚಿ ನೊರೆ ಸರಿಯಾಗಿ ಬಾರದಿದ್ದರೆ ಕೈ ಹಚ್ಚಿ ಗದ್ದ ಕಪೋಲಗಳನ್ನು ತಿಕ್ಕಿ ಕ್ಷೌರಮಾಡಿ ಒಂದಾಣೆ ಕಿತ್ತು ಕೊಡು ಕಳಿಸಿ ಬಿಡುತ್ತಿದ್ದ. ಕ್ಷೌರಮಾಡಿಸಿ ಕೊಂಡವರ ಮುಖ ಹುಣ್ಣಾಗದಿದ್ದರೆ ಅದು ಅವರ ಪುಣ್ಯ ಎನ್ನಬೇಕಾಗಿತ್ತು. ಕೆಲವರು ಮನೆಗೆ ಹೋಗಿ ತಿರುಗಿ ಬಂದು ಬಸಪ್ಪ ಕಿವಿಸಂದಿಯಲ್ಲಿನ ಕೂದಲು ಹೋಗೇ ಇಲ್ಲ ಎನ್ನುತ್ತ ಬಂದರೆ ಪುನಃ ಕಿವಿಸಂದಿಯಲ್ಲಿನ ಕೂದಲು ತೆಗೆಯುತ್ತ 'ನಾಲ್ಕು ಕೂದಲು ಉಳಿದರೆ ಏನು ಮಹಾ ಆಕ್ತಿತ್ತೋ ಮಾರಾಯಾ, ಅದಿಷ್ಟಕ್ಕೆ ಓಡಿ ಬಂದಿಯಲ್ಲ' ಎಂದು ವಟಗುಟ್ಟಿ ಅವನ್ನು ತೆಗೆದು ಕಳಿಸುತ್ತಿದ್ದ. ಹೀಗಿತ್ತು ಬಸಪ್ಪನ ಕ್ಷೌರದ ಮಾದರಿ.

ನಮ್ಮ ಬಸವಣ್ಣೆಪ್ಪ ಇವನ ಜಾತಿಯವನಲ್ಲ. ಅವನದೇನಿದ್ದರೂ ಕೈ ಚಮಕಿನಿಂದ ತಲೆ ಬೋಳಿಸಿ ಕಳಿಸುವುದೇ ಪ್ರಧಾನ ಕ್ಷೌರವಾಗಿತ್ತು. ಆಗ ಕ್ಷೌರ ಎಂದರೆ ತಲೆ ಬೋಳಿಸುವುದೇ ನೂರಕ್ಕೆ ತೊಂಬತ್ತೊಂಬತ್ತು ಆಗಿತ್ತು. ಈ ಬಸವಣ್ಣೆಪ್ಪ, ನಾನು ಐದಾರು ವರ್ಷದವನಿರಬಹುದು, ಆಗ ನನ್ನ ತಲೆ ಬೋಳಿಸಿದ. ಅಂದು ನಾನು ಅವನ ಕೈಯಲ್ಲಿ ಸಿಕ್ಕು ಒದ್ದಾಡಿ ನೋವು ಅನುಭವಿಸಿದ್ದೇ ಅವನು ಬಂದಾಗ ತಲೆ ತಪ್ಪಿಸಿಕೊಂಡು ತಿರುಗಾಡುತ್ತಿದ್ದೆ. ನನ್ನ ತಲೆಯಲ್ಲಿ ಸಣ್ಣ ಸಣ್ಣ ಗುಳ್ಳೆಗಳಾಗಿ ತಲೆ ಕಡಿಯುತ್ತಿತ್ತು. ಅಂಥ ತಲೆಗೆ ಗೇರು ಹಚ್ಚಿ ತಿಕ್ಕಿ ತಿಕ್ಕಿ ತನ್ನ ದೊಡ್ಡ ನಾಡುಕತ್ತಿ (ನಾಟಿಕತ್ತಿ)ಯಿಂದ ಚೆನ್ನಾಗಿ ತಲೆಬೋಳಿಸಿಬಿಟ್ಟಿದ್ದ. ಅವನ ತಲೆ ಬೋಳಿಸುವ ಅಬ್ಬರಕ್ಕೆ ತಲೆಯಲ್ಲಿನ ಗುಳ್ಳೆಗಳೆಲ್ಲ ನಾಶವಾಗಿ ಅಲ್ಲಲ್ಲಿ ರಕ್ತ ಬಂದು ಹೋಗಿತ್ತು. "ತಲೆಯನ್ನು ಹಾಗೆ ಬಿಟ್ಟಿದ್ದರೆ ಹುಣ್ಣು ಆಗಿಬಿಡುತ್ತಿತ್ತು. ರಕ್ತ ಬಂದರೂ ಚಿಂತೆಯಿಲ್ಲ, ತಲೆ ಸ್ವಚ್ಛವಾಯಿತು. ಮನೆಗೆ ಹೋಗಿ ಲಿಂಬೆ ಹಣ್ಣಿನ ರಸವನ್ನು ತಲೆಗೆ ಚೆನ್ನಾಗಿ ತಿಕ್ಕಿ ಬಿಸಿ ಬಿಸಿ ನೀರು ಹಾಕಿ ಬಿಡಿ. ಎಲ್ಲ ಸರಿಹೋಗುತ್ತೆ" ಎಂದು ವೈದ್ಯವನ್ನು ಬೇರೆ ಹೇಳಿ ಬಿಟ್ಟ. ನಮ್ಮ ದೊಡ್ಡಪ್ಪ ಎಲ್ಲಿಂದಲೋ ಒಂದು ಲಿಂಬೆ ಹಣ್ಣನ್ನು ಸಂಪಾದಿಸಿ ತಂದು ಕತ್ತರಿಸಿ ಬಸವಣ್ಣೆಪ್ಪ ಹೇಳಿದ ವೈದ್ಯ ಮಾಡಲು ನನ್ನನ್ನು ಕರೆದ. ನನಗೆ ಆಗಲೇ ತಲೆ ಉರಿಹತ್ತಿ ಅಳುತ್ತ ಸಿಂಬಳ ಸೋರಿಸುತ್ತ ನಿಂತಿದ್ದೆ. ಕೈ ಹಿಡಿದು ಎಳೆದು ನಿಲ್ಲಿಸಿ ತಲೆಗೆ ಲಿಂಬೆ ಹಣ್ಣಿನ ರಸ ಹಿಂಡಿದಾಗಲೆ ಗಾಯದ ಮೇಲೆ ಬರೆಎಳೆದಂತಾಗಿ ಬಾಯಿ ಬಡಿದುಕೊಳ್ಳತೊಡಗಿದೆ. ಈ ರಣವೈದ್ಯ ಮಾಡುವುದರಲ್ಲಿ ನಮ್ಮ ದೊಡ್ಡಪ್ಪ ನಿಷ್ಣಾತ. ಅನೇಕ ವೈದ್ಯಗಳನ್ನು ಮಾಡುತ್ತಿದ್ದ ಅವನು ಮಾಡುವ ವೈದ್ಯದಿಂದ ಜನ ಬದುಕಿ ಉಳಿದರೆ. ಅದೇ ಅವರ ಪುಣ್ಯ. ಅಂಥ ಕೆಲವು ವೈದ್ಯಗಳು ಅವನವು. ನನ್ನನ್ನು ಹತ್ತಿಕ್ಕಿ ಹಿಡಿದು, ಲಿಂಬೇರಸದಿಂದ ತಲೆ ತಿಕ್ಕುತ್ತಿದ್ದಾಗ ತಲೆಗೇ ಬೆಂಕಿ ಬಿದ್ದಹಾಗಾಯಿತು. 'ಸುಮ್ಮನಿರು, ತಲೆಯೆಲ್ಲ ಹುಣ್ಣು ಆಗುತ್ತಿದೆ. ಹುಣ್ಣೆಲ್ಲ ಮಾದು ತಲೆ ಸ್ವಚ್ಛವಾಗುತ್ತದೆ. ಸುಮ್ಮನಿರು, ಎಂದು ಹೇಳಿ ತಿಕ್ಕುತ್ತಲೇ ಇದ್ದಾನೆ. ನಾನು ಬಾಯಿ ಬಾಯಿ ಬಡಿದುಕೊಳ್ಳುತ್ತಲೇ ಇದ್ದೇನೆ. ಲಿಂಬೆರಸವನ್ನೆಲ್ಲ ತಲೆ ಕುಡಿದ ಮೇಲೆ ದುಡ್ಡು ಕೊಟ್ಟು ತಂದ ಲಿಂಬೇಹಣ್ಣಿಲ್ಲದೆ ಹಾಗೆ ಸಿಪ್ಪೆಯನ್ನು ಬಿಸಾಡಿದರೇನು ಬಂತು! ವೃಥಾ ದುಡ್ಡು ಹಾಳು ಎಂದು ಈ ಸಿಪ್ಪೆಯನ್ನು ಬಿಗಿಯಾಗಿ ಹಿಡಿದು ತಲೆಗೆ ತಿಕ್ಕತೊಡಗಿದ. ಕೇಳಬೇಕೇ, ಇನ್ನಷ್ಟು ಉರಿ ಪ್ರಾರಂಭವಾಯಿತು. ಹಾರಾಡಿ ಕುಣಿದಾಡಿ ಒದ್ದಾಡಿಬಿಟ್ಟೆ. ಸಿಪ್ಪೆಯೊಳಗಣ ರಸವೆಲ್ಲ ತಲೆಗೆ ಬಂದ ಮೇಲೆ ಕೈ ಬಿಟ್ಟ. ಅಳುತ್ತಲೇ ಬಚ್ಚಲಿಗೆ ಹೋದೆ. ನನ್ನ ತಾಯಿ ಮಗನ ತಲೆಯ ಹುಣ್ಣು ಹೋದರೆ ಸಾಕು, ಎಂದು ಮೇಲೆ ಸುಡುಸುಡುವ ನೀರು ಸುರುಯುವುದಕ್ಕೆ ಪ್ರಾರಂಭಿಸಿ ಬಿಟ್ಟಳು. ನಾನು ಬಚ್ಚಲಿನಿಂದ ಅನಾಮತ್ತಾಗಿ ಜಿಗಿದು ಹಾರಿ ಗೊಮ್ಮಟನ ವೇಷದಲ್ಲಿಯೇ ಓತ್ತಿಲಿಗೆ ಓಡಿಬಿಟ್ಟೆ. ಅರ್ಧ ಮೈ ತೊಯ್ದಿದೆ, ಅರ್ಧ ಇಲ್ಲ.

ವಿಚಿತ್ರವೇಷ! ದೇವರ ಅಭಿಷೇಕ ಮಾಡುವಾಗ ಮೊದಲ ಚಂಬಿನ ನೀರಿನಿಂದ ದೇವರ ವಿಗ್ರಹ ಅರ್ಧ ನೆನೆದು ಅರ್ಧಮೈ ಹಾಗೆ ಇರುವಂತೆ ಆಗಿತ್ತು ನನ್ನ ಸ್ಥಿತಿ. ಮೊದಲೇ ತಾಯಿಯಲ್ಲವೆ ಅವಳ ಕರುಳು ಚುರುಕ್ ಎಂದಿರಬೇಕು. ನನ್ನ ಈ ರಂಬಾಟ ಕಂಡು ಅವಳೇ ಸೋತು ಇನ್ನು ಬಿಸಿನೀರು ಹಾಕುವುದಿಲ್ಲ ಬಾ. ತಣ್ಣೀರಿನಿಂದ ಮೈಕೈ ತೊಳೆಯುತ್ತೇನೆಂದು ನಂಬಿಸಿ ಮುದ್ದು ಮಾಡಿ ಕರೆತಂದು ಉಗುರು ಬೆಚ್ಚಗಿನ ನೀರಿನಿಂದಲೇ ಮೈ ತೊಳೆದು ಒರೆಸಿ ಆಮೇಲೆ ಯಾರೋ ಹೇಳಿದ್ದನ್ನು ಕೇಳಿ ಗಂಧ ತೆಯ್ದು ತಲೆಗೆಲ್ಲ ಸವರಿಬಿಟ್ಟಳು.

ಬಸವಣ್ಣೆಪ್ಪ ಊರ ಕ್ಷೌರವನ್ನೆಲ್ಲ ಮುಗಿಸಿ ಹೊಳೆಗೆ ಹೋಗಿ ಸ್ನಾನಮಾಡಿ, ನಮ್ಮ ಮನೆಗೇ ಸೀದಾ ಊಟಕ್ಕೆ ಬರುವಂತೆ ಬಂದ. ಸಾಮಾನ್ಯವಾಗಿ ಆಯಗಾರರು ಊಟಕ್ಕೆ ನಮ್ಮ ಮನೆಗೇ ಬರುತ್ತಿದ್ದ ಪದ್ಧತಿ ಹಿಂದಿನಿಂದಲೂ ನಡೆದು ಬಂದಿತ್ತು. ಕುಂದೂರು ದೇವಾಗರಿ ಕುರುಬರು ಹಿಂಡು ತಕ್ಕೊಂಡು ಇತ್ತ ಕಡೆಗೆ ಬಂದರೆ ಊಟಕ್ಕೆ ನಮ್ಮ ಮನೆಗೇ ಬರುತ್ತಿದ್ದರು. ಎಂಥ ದುರ್ಭರ ಪರಿಸ್ಥಿತಿಗೆ ನಮ್ಮ ಮನೆತನ ಸಿಕ್ಕರೂ ಆಯಗಾರರಿಗೆ ಬಂದಾಗ ರೊಟ್ಟಿ ಪಲ್ಯ, ಅಂಬಲಿ ಮಜ್ಜಿಗೆಯನ್ನು ಹೊಟ್ಟೆತುಂಬುವಂತೆ ಊಟ ಮಾಡಿಸಿ ಕಳಿಸುತ್ತಿದ್ದುದೊಂದು ಸಂಪ್ರದಾಯವನ್ನು ಕಳೆದುಕೊಂಡಿರಲಿಲ್ಲ. ದೇವರ ಪೂಜಾರಿಯೂ ಮಧ್ಯಾಹ್ನದ ಊಟಕ್ಕೆ ನಮ್ಮ ಮನೆಗೇ ಬಂದು ಉಂಡು ಹೋಗುತ್ತಿದ್ದ. ಹಾಗೆಯೇ ಕ್ಷೌರದ ಆಯಗಾರ ಬಸವಣ್ಣೆಪ್ಪನೂ ಬಂದು "ಅಕ್ಕಾ ಚನ್ನಪ್ಪನ ತಲೆ ಹುಣ್ಣಾಗುತ್ತಿತ್ತು. ಇವತ್ತು ಹೊಲಸನ್ನೆಲ್ಲ ಚೆನ್ನಾಗಿ ಕೆರೆದು ಬಿಟ್ಟೆ. ಲಿಂಬಿಹುಳಿ ಹಚ್ಚಿರೆಂದು ಅಣ್ಣಾ ಅವರಿಗೆ ಹೇಳಿದ್ದೆ. ಹಚ್ಚಿದಿರೋ ಇಲ್ಲವೋ" ಎಂದ. ನನಗೆ ಆಗ ಅವನನ್ನು ಯಾವ ಕೋಲಿನಿಂದ ಹೊಡೆದು ಓಡಿಸಲಿ ಅನ್ನುವ ಸಿಟ್ಟು ಬಂದು ಕೆಟ್ಟಕಣ್ಣಿನಿಂದಲೇ ನೋಡುತ್ತ ನಿಂತಿದ್ದೆ. ನಮ್ಮ ತಾಯಿ ತಲೆ ಸ್ವಚ್ಛ ಆಯಿತು. ಲಿಂಬೆಹುಳಿ ತಿಕ್ಕಿ ಬಿಸಿನೀರು ಹಾಕಿದೆ. ಒಡಿದು ಕೊಳ್ಳತೊಡಗಿದ. ಗಂಧ ತೆಯ್ದು ಹಚ್ಚಿದ್ದೇನೆ ಎಂದಳು. ನನ್ನ ತಲೆಯ ಹುಣ್ಣೆಲ್ಲ ಹೋದವು. ನಿಜ. ಈ ಬಸವಣ್ಣೆಪ್ಪನ ಮೇಲಿನ ಸಿಟ್ಟು ಹೋಗಲಿಲ್ಲ. ಅದಕ್ಕಾಗಿ ನನ್ನ ತಲೆ ಬೆಳೆದಾಗ ಅವನು ಊರಿಗೆ ಬಂದರೆ ತಲೆತಪ್ಪಿಸಿಕೊಂಡು ಬಾಲ್ಯದಲ್ಲಿ ತಿರುಗಾಡುತ್ತಿದ್ದೆ. ಮುಂದೆ ದೊಡ್ಡವನಾಗುತ್ತಾ ಈ ದ್ವೇಷ ಕಣ್ಮರೆಯಾಗಿ ಅವನ ಕಾಯಕನಿಷ್ಠೆಗೆ ತಲೆ ತೂಗುತ್ತಿದ್ದೆ. ಅವನೊಬ್ಬ ಕರ್ಮಯೋಗಿ, ಹೃದಯಶ್ರೀಮಂತ ಎನ್ನಬಹುದು.

# ಅಧ್ಯಾಯ - 3

ನನ್ನ ಐದನೆ ಇಯತ್ತೆಯ ನಂತರ ಅವರಿವರ ಪರಿಚಯ ಮಾಡಿಕೊಂಡು ಹಾನಗಲ್ಲು ಶ್ರೀ ಕುಮಾರಸ್ವಾಮಿಗಳವರ ವಿರಕ್ತಮಠದಲ್ಲಿದ್ದು ಕೊಂಡು ಅಲ್ಲಿನ ಶಾಲೆಯಲ್ಲಿ 6ನೇ ತರಗತಿಗೆ ಸೇರುವುದೆಂದು ತೀರ್ಮಾನಿಸಿ ಗಂಟುಮೂಟೆ ಕಟ್ಟಿ 15-16 ಮೈಲುದೂರದ ಹಾನಗಲ್ಲಿಗೆ ಹೊರಟದ್ದೇ ಒಂದು ದೊಡ್ಡ ಸಂಭ್ರಮ. ಆಗ ಬಸ್ಸುಗಳೂ ಕಡಿಮೆ, ಬಸ್ಸು ಹತ್ತುವುದೂ ಕಡಿಮೆ. ಹದಿನೈದು ಮೈಲು ನಮಗೆ ದೂರವೇ ಅಲ್ಲ. ಕೇವಲ ಮೂರು ನಾಲ್ಕು ಮೈಲುಗಳ ವ್ಯಾಪ್ತಿಯಲ್ಲಿ ಮಾತ್ರ ತಿರುಗಾಡಿದವ ನಾನು ಹದಿನೈದು ಮೈಲು ದೂರದ ಊರೆಂದರೆ ಬಹು ದೂರದ ದೇಶವೊಂದಕ್ಕೆ ಹೊರಟ ಹಾಗೆಯೇ ಆಗಿತ್ತು. ಪುಸ್ತಕ ಹಾಸಿಗೆ ಹೊದಿಕೆ ಕಟ್ಟಿಕೊಂಡು ಮೇ ತಿಂಗಳ ಕೊನೆಯ ವಾರ ಹಗಲ ಮೇಲೆ ಮೊಟ್ಟೆ ಹೊತ್ತೆವು. ಮೊಟ್ಟೆಯಲ್ಲಿ ರೊಟ್ಟಿಯ ಬುತ್ತಿ ಗಂಟೂ ಇತ್ತು. ಹೊಂಬಳ, ಸಮ್ಮಸಗಿ ಮಾರ್ಗವಾಗಿ ಬಿಸಿಲು ಬೇಗೆ ಒಂದೂ ಗೊತ್ತಾಗದೆ ನೀರು ಸಿಕ್ಕ ಕಡೆ ಒಂದೆರಡು ಕಡೆಗಳಲ್ಲಿ ರೊಟ್ಟಿ ಬುತ್ತಿಯ ರುಚಿ ನೋಡುತ್ತ ನಡೆದೆವು. ಸಾಯಂಕಾಲದ ಹೊತ್ತಿಗೆ ದೂರದಲ್ಲಿ ಹಾನಗಲ್ಲು ಕಾಣಿಸತೊಡಗಿತು. ಹೋ! ಹೋ, ಯಾವುದೋ ಸ್ವರ್ಗಕ್ಕೆ ಬಂದುಬಿಟ್ಟೆನೆಂಬ ಸಂಭ್ರಮ ನನ್ನ ಮೈ ಮನಗಳನ್ನೆಲ್ಲ ವ್ಯಾಪಿಸಿ ಉತ್ಸಾಹದ ಪಕ್ಷಿ ಗರಿಗೆದರಿ ದಶದಿಕ್ಕುಗಳಿಗೆ ಹಾರಾಟ ಮಾಡತೊಡಗಿತು. ಅರಳಿದ ಛತ್ರಿಯಂತೆ ವಿಶಾಲವಾಗಿ ಹರಡಿ ನಿಂತ ದಟ್ಟನೆಳಲಿನ ಮಾವಿನ ಮರಗಳು, ಅರಳಿ, ಪಿಳಲೆ, ಹುಣಸೆ ಮರಗಳು, ಅತ್ತಿ, ಆಲ, ಕವಳಿ, ಕತ್ತಿ ಹಣ್ಣಿನ ಮೆಳೆಗಳು, ಗೇರು ಹಣ್ಣಿನ ಮರಗಳು ಎತ್ತೆತ್ತ ನೋಡಿದ್ದತ್ತ ಮುಂಗಾರು ಮಳೆಯಿಂದ ತುಂಬಿನಿಂತ ಕರೆಗಳು, ಹರಿಗಾಲುವೆಗಳು ಆಗ ತಾನೆ ಬಿತ್ತಿದ ಬತ್ತ ಮೊಳೆತು ಸಾಲುಗಟ್ಟಿ ಮನೋಹರವಾಗಿ ಕಾಣುವ ಗದ್ದೆಯ ಹಾಳೆಗಳು, ಕಬ್ಬನ್ನು ಅರೆದು ಬೆಲ್ಲ ಮಾಡುತ್ತಿದ್ದ ಆಲೆಮನೆಯ ಬಿಸಿಬೆಲ್ಲದ ಕಂಪು. ಮಾರುವುದಕ್ಕೆ ಕವಳೆ ಹಣ್ಣು ಹರಿದು ಬುಟ್ಟಿಗಳಲ್ಲಿ ತುಂಬಿಕೊಂಡು ಕಾನಿನಿಂದ ದಾರಿಗೆ ಸರಸದಿಂದ ನಗುತ್ತ ಕೆಲೆಯುತ್ತ ಬರುತ್ತಿದ್ದ ಲಂಬಾಣಿ ಹೆಂಗಸರುಗಳನ್ನು ಎದೆ ಝಲ್ ಎಂದಿತಾದರೂ ನಾಲ್ಕಾರು ಜನರಿದ್ದ ಕಾರಣ ಅವರನ್ನೇ ನೋಡುತ್ತ ಮುಂದುವರೆದಿದ್ದೆವು. ಒಂದೊಂದು ದೃಶ್ಯಗಳೂ ನನ್ನ ಕಣ್ಣಿಗೆ ಹಬ್ಬವನ್ನುಂಟುಮಾಡಿ ಬೇರೊಂದು ಲೋಕದಲ್ಲಿ ನಡೆಯುವವನಂತೆ ಮಾಡಿದವು. ಮೋಹಕವಾದ ನವಿಲಿನ ಅರಿಯೊಂದನ್ನು ಕಂಡು ಎಂದಿನಿಂದಲೂ ಈ ಪಕ್ಷಿ ಹೇಗಿದ್ದೀತೆಂದು ಚಿಂತಿಸುತ್ತಿದ್ದ ನನ್ನ ಕಣ್ಣಿಗೆ ಪ್ರತ್ಯಕ್ಷವಾಗಿ ಕಂಡ ನವಿಲಿನ ಪ್ರಥಮ ದೃಶ್ಯ ಬಹುದಿನ ಮರೆಯಲಾರದುದಾಗಿತ್ತು. ಬಹು ಹೊತ್ತು ನವಿಲನ್ನು ನೋಡುತ್ತ ನಿಂತೆ. ಅದರ ನೀಲವರ್ಣದ ಕುತ್ತಿಗೆಯ ಭಾಗವೋ, ಆ ಗರಿಗಳೋ, ಗಂಭೀರವಾದ ನಡೆಯೋ, ಕೇಕೆಯೋ ಒಂದೊಂದೂ ನನ್ನ ಭಾವಭೂಮಿಯ ಮೇಲೆ ವಿಚಿತ್ರಾನುಭವವನ್ನುಂಟು ಮಾಡಿದುವು. ಸುಂದರ ಗಂಡು ನವಿಲು ಹೆಣ್ಣಿನೊಡನೆ ಸರಸವಾಡುವುದನ್ನು ಕಂಡೆ. ಇದನ್ನು ಕಂಡದ್ದು ಸಮ್ಮಸಗಿ ದಾಟಿದ ಮೇಲೆ ಸಿಗುವ ಸಣ್ಣ ಹಳ್ಳವೊಂದರ ದಟ್ಟವಾದ ಅರಣ್ಯದಲ್ಲಿ. ಈಗಿನಂತೆ ನಾಲಿಗೆ ಚಪಲದ ಜನವಿಲ್ಲವೆಂದೇ ಅವು ನಿರ್ಭಯವಾಗಿ ಅರಣ್ಯದಲ್ಲಿ ಇದ್ದವು. ಎಂದೂ ಅರಣ್ಯವನ್ನೇ ನೋಡದ ನನಗೆ ಒಮ್ಮಿಂದೊಮ್ಮೆಗೆ ದಟ್ಟವಾದ ಗಿಡಮರಗಳಿಂದಲೂ ಅಗೋಚರ ಪುಷ್ಪಗಳ ಸುಗಂಧ ಹೊತ್ತು ಬೀಸುತ್ತಿದ್ದ ಮಂದಮಾರುತದ ಸೊಬಗಿನಿಂದಲೂ ತುಂಬಿ ಗುಳು ಗುಳು ಧ್ವನಿ ಮಾಡುತ್ತ ಹರಿಯುವ ತಿಳಿನೀರಿನ ಹಳ್ಳಗಳಿಂದಲೂ ಕಾಡುಕೋಳಿ, ಮೊಲ, ಕೋತಿ ಮೊದಲಾದವುಗಳಿಂದಲೂ ವ್ಯಾಪ್ತವಾದ ಆ ಚಿಕ್ಕಅರಣ್ಯವೇ ಅವರ್ಣನೀಯ

ಆನಂದವನ್ನುಂಟುಮಾಡಿತು. ನೆಲವನ್ನು ನೋಡುತ್ತಲೇ ಇರಲಿಲ್ಲ. ಅರಣ್ಯದ ವಿವಿಧ ಸೌಂದರ್ಯದಲ್ಲಿ ನಟ್ಟ ದೃಷ್ಟಿಯ ನನ್ನನ್ನು ನನ್ನ ಮಿತ್ರರು 'ನೆಲ ನೋಡಿ ನಡೆಯಲೇ. ಬಿದ್ದಿಗಿದ್ದೀಯೆ ಮಾರಾಯ' ಎನ್ನುವಂತೆ ಮಾಡುತ್ತಿತ್ತು.

ಇಂಥ ಒಂದು ಸ್ವರ್ಗಸಮಾನವಾದ ಹೊಸಲೋಕಕ್ಕೆ ಬಂದೆನಲ್ಲಾ ಎಂದು ಆ ಸಮಯದಲ್ಲಿ ಹೆಮ್ಮೆಯುಂಟಾದದ್ದಂತೂ ನಿಜ. ಆಗ ನನ್ನ ಭಾವನೆಗಳನ್ನು ವರ್ಣಿಸಲು ಶಬ್ದ ಸಾಲವು. ಅಷ್ಟೊಂದು ಭಾವ ನನ್ನನ್ನು ಆವರಿಸಿ ಮೂಕವಿಸ್ಮಿತವಾಗಿ ಹೋಗಿದ್ದೆ. ಅಂತು ಮಬ್ಬುಗತ್ತಲಾಗುವ ಹೊತ್ತಿಗೆ ಊರ ಹೊರಗಿರುವ ಪ್ರಸಿದ್ಧ ಶ್ರೀ ಕುಮಾರ ಸ್ವಾಮಿಗಳ ವಿರಕ್ತಮಠಕ್ಕೆ ಬಂದು ತಲುಪಿದೆವು. ಹೊರೆಗಳನ್ನು ಮಠದ ಮುಂಭಾಗದಲ್ಲಿ ಇಳುಹಿ ಮಠದವರ ಮಾರ್ಗದರ್ಶನದಂತೆ ಹಿತ್ತಿಲಬಾವಿಗೆ ಹೋಗಿ ಕೈಕಾಲು ಮುಖ ತೊಳೆದು ವಿಭೂತಿ ಧರಿಸಿ ಆಗಿನ ಮಠಾಧಿಪತಿಗಳಾಗಿದ್ದ ಶ್ರೀ ಶ್ರೀ ಮಹೇಶ್ವರ ಸ್ವಾಮಿಗಳವರ ದರ್ಶನ ಪಡೆದೆವು. ಅವರು ಒಬ್ಬೊಬ್ಬರನ್ನೂ ಮಾತನಾಡಿಸಿ ಹೆಸರು, ತರಗತಿ, ವಯಸ್ಸು ಇತ್ಯಾದಿಗಳನ್ನು ಕೇಳಿ ತಿಳಿದು ಮಠದ ಏಜೆಂಟರನ್ನು ಕರೆದು ನಮ್ಮ ಬಿಡಾರಸ್ಥಳವನ್ನು ಹೇಳಿ ಕಳಿಸಿದರು. ಅದರಂತೆ ಮಹಡಿಯ ಮೇಲಿನ ದೊಡ್ಡ ಪಡಸಾಲೆಯಲ್ಲಿ ಎಲ್ಲರೂ ನಮ್ಮನಮ್ಮ ಹೊರೆಗಳನ್ನಿಳುಹಿ ದಣಿವಾರಿಸಿಕೊಂಡು ಆ ದಿನ ರಾತ್ರಿ ಮಠದಲ್ಲಿಯೇ ಸೊಗಸಾದ ಭೋಜನಮಾಡಿದೆವು. ನಮಗೆ ಬೆಳಕು ಹರಿದದ್ದೇ ಗೊತ್ತಾಗಲಿಲ್ಲ. ಗಾಢನಿದ್ರೆ ಮಾಡಿ ಹೊಸ ಮನುಷ್ಯರೇ ಆದೆವು. ಬೆಳಗ್ಗೆ ಎದ್ದು ಸುತ್ತಮುತ್ತಣ ಪರಿಸರ ನೋಡಿ ಸಾರ್ಥಕವಾಯಿತು ನಮ್ಮ ಜೀವಿತ ಎನ್ನಿಸಿತು. ಮಠದ ಹಿತ್ತಿಲಲ್ಲಿ ದೊಡ್ಡ ಬಾಳೆ ತೋಟ. ಅಲ್ಲಿ ಹೂಗಿಡ. ಮರಗಳು. ಮಾಮರಗಳು, ತೂಗಾಡುವ ಬಾಳೆಗೊನೆಗಳು ಹೊರಭಾಗದ ವಿಶಾಲ ಹೊಲದಲ್ಲಿ ಚಿಗಿತುನಿಂತ ಮಾವಿನ ಸಸಿಗಳು. ಸ್ವಲ್ಪ ದೂರದಲ್ಲಿ ಸಮುದ್ರದಂತೆ ವಿಶಾಲವಾದ ಆನೆಕರೆ. ಕೆರೆ ಕೆಳಗಿನ ಅಡಿಕೆ ತೆಂಗಿನ ತೋಟ, ಎತ್ತೆತ್ತಲೂ ಕೋಟೆ, ಕೊತ್ತಳಗಳ ಅವಶೇಷಗಳು. ಎಲ್ಲೆಲ್ಲೂ ಸೊಂಪಾಗಿಸುವ ಮರ ವಿಶೇಷಗಳೇ! ಅವುಗಳ ಹೆಸರೇನೆಂಬುದೇ ಗೊತ್ತಿಲ್ಲ - ಈ ಎಲ್ಲ ಸನ್ನಿವೇಶದಿಂದ ಪ್ರಭಾವಿತನಾದ ನಾನು ಮಲೆನಾಡಿನ ಪ್ರಕೃತಿಸೊಬಗಿನ ಮಡಿಲಿಗೆ ಬಿದ್ದೆನೆಂಬ ಆನಂದದಲ್ಲಿ ವಿದ್ಯಾಭ್ಯಾಸವನ್ನು ಮುಂದುವರೆಸಿದೆ. ಸ್ವಾಮಿಗಳೇ ಆಗ ಅಲ್ಲಿನ ಶಾಲೆಯಲ್ಲಿದ್ದ ಮ. ಗು. ಹಿರೇಮಠ ಎಂಬುವರಿಗೆ ಚೀಟಿ ಬರೆದು ಕಳಿಸಿ ಶಾಲೆಗೆ ಸೇರಿಸಿದರು. ಹಿರೇಮಠ ಮಾಸ್ತರರೆಂದರೆ ಹಾನಗಲ್ಲಿನ ಶಿಕ್ಷಣಕ್ಷೇತ್ರದ ಒಂದು ಅಮೂಲ್ಯ ಸಂಪತ್ತೇ ಆಗಿದ್ದರು. ಆ ವಿಷಯ ಮುಂದೆ ವಿವರಿಸುತ್ತೇನೆ. ಒಂದೆರಡು ದಿನಗಳಲ್ಲಿನ ನಮಗೆಲ್ಲ ಊರಿನ ಬೇರೆ ಬೇರೆ ಭಕ್ತರ ಮನೆಗಳಿಗೆ ಹೇಳಿ ಕಳುಹಿಸಿ ಒಬ್ಬೊಬ್ಬರ ಮನೆಯಲ್ಲಿ ಒಬ್ಬೊಬ್ಬರಿಗೆ ಊಟಕ್ಕೆ ಗೊತ್ತು ಮಾಡಿದರು. ನಾನು ತೀರಾ ಚಿಕ್ಕವನೆಂದು ಕಂಡುಬಂದದ್ದರಿಂದ ಮಠಕ್ಕೆ ಸಮೀಪದಲ್ಲಿಯೇ ಇರುವ ಹೂಲಿಕಂತಿ ವೀರಯ್ಯನವರ ಮನೆಗೆ ಹೇಳಿ ಕಳಿಸಿ ಅಲ್ಲಿ ಊಟ ಮಾಡುವಂತೆ ಏರ್ಪಡಿಸಿದರು. ನಿರಾತಂಕವಾಗಿ ನಮ್ಮ 6ನೇ ತರಗತಿಯ ಪಾಠ ಪ್ರವಚನ ನಡೆದವು. ನಮ್ಮ ಶಾಲೆ ತಾರಕೇಶ್ವರದೇವಾಲಯದ ಪಕ್ಕದಲ್ಲೇ ಇದ್ದು, ಎಂದೂ ಕಾಣದ ಸೌಂದರ್ಯಭರಿತ ತಾರಕೇಶ್ವರ ದೇವಾಲಯವನ್ನು ಬಿಡುವಾದಾಗೆಲ್ಲ ನೋಡುವುದೇ ನಮ್ಮ ನಿತ್ಯದ ಕೆಲಸವಾಗಿತ್ತು.

ಶ್ರಾವಣಮಾಸ ಬಂತು. ಮಠದಲ್ಲಿ ರೇವಣ ಸಿದ್ಧೇಶ್ವರ ಪುರಾಣ ಪ್ರವಚನವೇರ್ಪಟ್ಟಿತ್ತು. ಮಣ್ಣೂರಿನ ಓರ್ವ ಗವಾಯಿಗಳಿಂದ ರಾಗರಸಭಾವಗಳಿಂದ ಓದುವಿಕೆಯೂ. ಗುರುಮೂರ್ತಿ ಶಾಸ್ತ್ರಿಗಳಿಂದ ವ್ಯಾಖ್ಯಾನವೂ ಪ್ರಾರಂಭವಾದದ್ದೊಂದು ದೊಡ್ಡ ರಸಿಕಗಿತನವೇ ಆಗಿತ್ತು. ಒಂದು

ತಿಂಗಳವರೆಗೆ ಅಖಂಡವಾಗಿ ನಡೆದ ಆ ಪುರಾಣದ ಕಾರ್ಯಕ್ರಮದಿಂದ ನನಗಾದ ಲಾಭ ಅಷ್ಟಿಷ್ಟಲ್ಲ. ಮುಂದೆ ನಾನು ಕೀರ್ತನಕಾರನಾಗಲು ಪುರಾಣ ಪ್ರವಚನಗಳೇ ಮೂಲಪ್ರೇರಣೆ ಯನ್ನೊದಗಿಸಿಕೊಟ್ಟವೆಂದರೆ ತಪ್ಪಲ್ಲ. ಅದರಿಂದ ನಾನೆಷ್ಟು ಪ್ರಭಾವಿತನಾದೆನೆಂದರೆ ಗವಾಯಿಗಳು ಹಾಡುತ್ತಿದ್ದ ರಾಗದ ಶೈಲಿಗಳು ಮನವನ್ನೆಲ್ಲ ತುಂಬಿನಿಂತವು. ನಮ್ಮ ಕನ್ನಡ ಪುಸ್ತಕದ ಪದ್ಯಗಳನ್ನೆಲ್ಲ ಅವರು ಹಾಡಿದಂತೆಯೇ ಹಾಡಲು ಪ್ರಯತ್ನಿಸುತ್ತಿದ್ದೆ. ಇದಕ್ಕೆ ಪೂರ್ವದಲ್ಲಿ ನೋಡಿದ ಅನೇಕ ನಾಟಕಗಳಿಂದ ಕಲಿತ ಅನೇಕ ರಾಗ ಭಾವಗಳು, ಪ್ರವಚನದ ಶೈಲಿ ಇವುಗಳಿಂದ ಪ್ರಚೋದನೆಗೊಂಡ ನನ್ನ ಹಾಡುವಿಕೆಯಲ್ಲಿ ತಾಳ ಮೇಳಗಳ ಜಮಾವಣೆ ನನ್ನಲ್ಲಿರಲಿಕ್ಕಿಲ್ಲ. ರಾಗದಲ್ಲಿ ಹೆಚ್ಚು ಕಡಿಮೆಯಿರಬಹುದು. ಹಾಡುವ ಚಟವಂತೂ ಅವ್ಯಾಹತವಾಗಿ ಸಾಗಿತು. ಹಾಡುತ್ತ ಹಾಡುತ್ತ ರಾಗ ತಾನೆ! ಆಗ ಶಿವಯೋಗಮಂದಿರದವರು ಕಜ್ಜರಿ ಗುರುಮೂರ್ತಿಗಳ ಶಾಸ್ತ್ರಿಗಳಿಂದಲೇ ಬರೆಯಲ್ಪಟ್ಟ ಪದ್ಯಗ್ರಂಥದ ಪದ್ಯಗಳನ್ನೆಲ್ಲ ಅವರಿವರು ಹಾಡುವುದನ್ನು ಕೇಳಿ ಅಚ್ಚುಕಟ್ಟಾಗಿ ಹಾಡತೊಡಗಿದೆ. ಆ ಹಾಡುಗಳೆಲ್ಲ ಮರಾಠಿ ನಾಟಕ ಕಂಪನಿಯಲ್ಲಿ ಬಾಲ ಗಂಧರ್ವರೇ ಮೊದಲಾದವರು ಹಾಡಿನ ದಾಟಿಯಲ್ಲಿ ಇರುತ್ತಿದ್ದವು. ಅಂತು ನಮ್ಮ ಬಳಗದವರಲ್ಲೆಲ್ಲ ಹಾಡುವುದರಲ್ಲಿ ನಾನೇ ನಿಪುಣನೆನಿಸಿ ಪುರಾಣ ಪ್ರವಚನದ ಕೊನೆಯಲ್ಲಿ ಒಮ್ಮೊಮ್ಮೆ ಪದ್ಯವನ್ನು ಹಾಡುವುದಕ್ಕೆ ಮಹೇಶ್ವರ ಸ್ವಾಮಿಗಳೇ ಅಪ್ಪಣೆ ಮಾಡುವಂತಾಯಿತು. ಆಗ ನಾನು ಬಹು ಹೆಮ್ಮೆಯಿಂದ ಹಾಡುತ್ತಿದ್ದೆ. ನನ್ನ ಹಾಡುಗಳಲ್ಲಿ 'ಹಾನಗಲ್ಲ ಶ್ರೀ ಕುಮಾರದೇವ.... ', 'ಮಾನಿನಿ ಪಾಡೆಲೆ ಮಂಗಳವ ಪಿಂಗದೆ....' ಎಂಬುದೂ 'ದೇವದೇವಾ....' ಹೀಗೆ ಹತ್ತಾರು ಹಾಡುಗಳನ್ನು ಚನ್ನಾಗಿ ಹಾಡುವುದರ ಅಭ್ಯಾಸ ಮಾಡಿ ಪುಟ್ಟ ಗವಾಯಿಯೇ ಆದನೆಂದು ಬೀಗಿದೆ.

ಶ್ರಾವಣಮಾಸದಲ್ಲಿ ಮಠದಲ್ಲಿ ಒಂದು ತಿಂಗಳವಿಶ್ರಾಂತವಾಗಿ ದಿನಾಲು ಭಕ್ತರೊಬ್ಬೊಬ್ಬರ ಪೂಜೆ ದಾಸೋಹಾದಿ ಸೇವಾಕಾರ್ಯ. ಒಮ್ಮೊಮ್ಮೆ ಬೈಲುಸೀಮೆಯ ಪ್ರಸಿದ್ಧ ಗೋದಿ ಹುಗ್ಗಿ.....ಮೊದಲಾದ ಅನೇಕ ಭಕ್ಷ್ಯಭೋಜ್ಯಗಳಾಗುತ್ತಿದ್ದವು. ಮಠ...ಕೆಲಸ ಕಾರ್ಯಗಳನ್ನೆಲ್ಲ ಮಾಡುವವರೇ ಆದ ನಮಗೆಲ್ಲ ಪುಷ್ಕಳ ಮೃಷ್ಟಾನ್ನ ಭೋಜನವಾಗುತ್ತಿತ್ತು. ಹಳ್ಳಿಯಲ್ಲಿ ಬಡ ವ್ಯವಸಾಯಗಾರರ ಮನೆಯ ಸಾಮಾನ್ಯ ದರ್ಜೆಯ ಊಟ ಮಾಡಿದ್ದ ನಮಗೆ ಈ ಸಮೃದ್ಧ ಊಟ ನಾಲಗೆಯ ಚಾಪಲ್ಯವನ್ನೇ ಅಧಿಕಗೊಳಿಸಿತು. ಹಾಲು, ಖೀರು, ಬಾಸುಂದಿ ಮೊದಲಾದವನ್ನು ಪ್ರಥಮತಃ ಊಟ ಮಾಡಿದ್ದೇ ಹಾನಗಲ್ಲು ಮಠದಲ್ಲಿ. ಹಳ್ಳಿಯವರ ಜೀವನ ಊಟ ಉಪಚಾರವಾದರೂ ಪಟ್ಟಣದವರ ಈ ಶ್ರೀಮಂತ ವ್ಯವಹಾರ-ಊಟ-ಉಪಚಾರ ಔದಾರ್ಯಾದಿ ಗುಣವಿಶೇಷಗಳು ವಯೋಮಾನಕ್ಕನುಗುಣವಾಗಿ ನನ್ನಲ್ಲಿ ಒಂದು ಬಗೆಯ ತೌಲನಿಕ ಮೌಲ್ಯಮಾಪನಕ್ಕೆ ತೊಡಗಿದ್ದೂ ಉಂಟು. ನಮಗೂ ಇವರಿಗೂ ಎಷ್ಟೊಂದು ಅಂತರ! ಇಷ್ಟೊಂದು ಶ್ರೀಮಂತಿಕೆ ಔದಾರ್ಯಾದಿ ವಿಶೇಷಗಳು ಇವರಿಗುಂಟಾಗಲು ಕಾರಣವಾವುದು? ಎಂದು ಮನದಲ್ಲಿಯೇ ಅಂದುಕೊಂಡು ಅಂದಂದಿಗೆ ಮರೆತು ಬಿಡುತ್ತಿದ್ದುದೂ ಉಂಟು. ಶ್ರಾವಣ ಮಾಸ ನಮಗೆ ಸುಖಭೋಜನ, ಸುಖೋಲ್ಲಾಸ, ಸಂಭ್ರಮಾದಿಗಳನ್ನುಂಟು ಮಾಡಿ ನಾವು ಊಹಿಸುವ ಮೊದಲೇ ಮುಗಿದುಹೋಗಿ ನಿರಾಸೆಗೊಳಿಸಿತು. ಹೀಗಾದದ್ದೂ ಒಳ್ಳೆಯದಕ್ಕೇ. ಅತಿ ಸರ್ವತ್ರ ವರ್ಜಯೇತ್ ಅಲ್ಲವೆ?

ಇದು ಮುಗಿದು ಹೋದರೂ ಆಗಾಗ ಶಿವಯೋಗಮಂದಿರದ ಪಂಚಾಕ್ಷರಿ ಗವಾಯಿಗಳ ಸಂಗೀತ ಪ್ರಪಂಚವೇ ಮಠಕ್ಕೆ ಇಳಿದು ನನ್ನ ಸಂಗೀತದ ಆಸೆ-ಆಕಾಂಕ್ಷೆಗಳ ಬರವನ್ನೇ

ಹಿಂಗಿಸಿಬಿಡುತ್ತಿತ್ತು. ಪಂಚಾಕ್ಷರಿ ಗವಾಯಿಗಳ ಊರಾದ ಕಾಡಸೆಟ್ಟಿಪಳ್ಳಿ ಹಾನಗಲ್ಲಿಗೆ ಸಮೀಪದಲ್ಲಿಯೇ ಇತ್ತು. ಇವರು ಹಾನಗಲ್ಲು ಕುಮಾರಸ್ವಾಮಿಗಳವರ ಆಶೀರ್ವಾದದಿಂದಲೇ ಸಂಗೀತ ಪ್ರಪಂಚದಲ್ಲಿ ಸಿದ್ಧಿ-ಸಾಧನೆಗಳ ಹಿಮಾಲಯದ ಉತ್ತುಂಗ ಶೃಂಗವನ್ನೇರಿ ನಿಂತ ನಾದಯೋಗಿಗಳಾಗಿದ್ದರು. ಅವರು ಮಠದ ಆವರಣದಲ್ಲಿ ದೇವಗಿರಿಯ ಇನ್ನೊಬ್ಬ ಕುರುಡ ಶಿಷ್ಯರಾದ ಪುಟ್ಟರಾಜರ ಭುಜದ ಮೇಲೆ ಎಡಗೈಯಿಟ್ಟು ಅತ್ತ ಇತ್ತ ನಿಧಾನವಾಗಿ ತಿರುಗುತ್ತ ಬಲಗೈಯಿಂದ ತಾಳಕ್ಕಾಗಿ ಚಿಟಿಕೆ ಹೊಡೆಯುತ್ತ ನಾದ ಮಾಧುರ್ಯದಲ್ಲಿಯೇ ಮುಳುಗಿರುತ್ತಿದ್ದರು. ಅವರ ಮನ -ಬುದ್ಧಿ-ಚಿತ್ತ-ಅಹಂಕಾರಗಳೆಂಬ ಚತುಷ್ಟಯದಲ್ಲೆಲ್ಲ ಸಂಗೀತದಲ್ಲಿ ಮುಳುಗಿದ್ದವೆಂಬುದಕ್ಕೆ ಯಾವಾಗಲೂ ರಾಗದ ಗುನುಗುನು ಧ್ವನಿಯನ್ನು ಮಕರಂದ ಪಾನಕ್ಕಾಗಮಿಸಿದ ಮರಿದುಂಬಿಯಂತೆ ಜನುಗಿಸುತ್ತಲೇ ಇರುತ್ತಿದ್ದರು. ಹಾಡುತ್ತ ತಮ್ಮಷ್ಟಕ್ಕೆ ತಾವೇ 'ಭಲೆ.....ವಾಹವ್ವಾ..ಶಾಭಾಶ್...ಹೌದಪ್ಪ' ಎನ್ನುತ್ತಿದ್ದುದನ್ನು ನಾನು ಕೇಳಿದ್ದೇನೆ. ಒಮ್ಮೊಮ್ಮೆ ತಬಲಾ ಗತ್ತುಗಳನ್ನು ತಾವೇ ತಾಳ ಹಾಕುತ್ತಾ "ತಿಟಿಕತ ಗಧಿನಧಾ..ಧಾಧಾಧಿಂತಾ...ಕಿಟಧಾಧಿಂತಾ ಕಿಟಿಕತ ಗಧಿಗನಧಾ..." ಇತ್ಯಾದಿ ಹೇಳುತ್ತ ತಾವೇ ತಲೆಯಲ್ಲಾಡಿಸಿ ಆತ್ಮತೃಪ್ತಿ ಪಡೆಯುತ್ತಿದ್ದುದು ನನಗೆ ಬಹಳ ಮೋಜೆನಿಸುವ ಚರ್ಯೆಯಾಗಿತ್ತು. ಕೆಲವು ಚೀಜುಗಳನ್ನು ರಾಗಾಲಾಪನೆ ಮಾಡುತ್ತ 'ಹೇಗಿದೆ ಪುಟ್ಟಯ್ಯಾ' ಎಂದು ಶಿಷ್ಯರನ್ನು ಕೇಳುತ್ತಿದ್ದರು. ಇವರ ಆಚಾರ-ವಿಚಾರ, ಪೂಜಾನುಷ್ಠಾನ ಮೊದಲಾದವು ಮೇಲ್ಪಟ್ಟದವಾಗಿದ್ದವು. ಕುರುಡು ಶಿಷ್ಯ ಪುಟ್ಟಯ್ಯನವರನ್ನು ಸದಾ ಕನವರಿಸುತ್ತಲೇ ಇರುತ್ತಿದ್ದರು. ಪ್ರತಿಯೊಂದಕ್ಕೂ ಪುಟ್ಟಯ್ಯಾ...ಪುಟ್ಟಯ್ಯಾ ಎಂದು ಕರೆದು ಆಜ್ಞಾಪಿಸುತ್ತಿದ್ದರು. ಪುಟ್ಟಯ್ಯನವರು ಉಳಿದ ಶಿಷ್ಯರ ಮೂಲಕ ಇವರ ಅವಶ್ಯಕತೆಗಳು, ಬೇಕು-ಬೇಡಗಳನ್ನು ಪೂರೈಸುತ್ತಿದ್ದರು. ಪಂಚಾಕ್ಷರಿ ಗವಾಯಿಗಳು ಸರ್ಕೀಟ್ ಹೊರಟರೆ ಅವರ ಹಿಂದೆ ಅವರ ಶಿಷ್ಯರ ದೊಡ್ಡ ಪರಿವಾರವೇ ಇರುತ್ತಿತ್ತು. ಅವರೆಲ್ಲರೂ ಸದಾ ಸಂಗೀತಾಭ್ಯಾಸ ಮಾಡುತ್ತಲೇ ಇದ್ದರು. ಇದೆಲ್ಲ ನಮಗೆ ಅಸಾಧಾರಣವೆನಿಸುತ್ತಿತ್ತು. ಹಾರ್ಮೋನಿಯಂ, ತಬಲಾ, ಪಿಟೀಲು, ದಿಲ್‌ರುಬಾ ಇತ್ಯಾದಿ ವಾದ್ಯ ವಿಶೇಷ ಧ್ವನಿ ಮಠವನ್ನೆಲ್ಲ ನಾದಮಯಗೊಳಿಸುತ್ತಿರುತ್ತಿತ್ತು. ಶ್ರೀ ಮಹೇಶ್ವರ ಸ್ವಾಮಿಗಳವರ ಆಜ್ಞೆಯಾಗಲಿ ಬಿಡಲಿ, ಸಾಯಂಕಾಲ 'ಬೈಠಕ್' ನಡೆದೇ ನಡೆಯುತ್ತಿತ್ತು. ಹಾನಗಲ್ಲಿನ ಜನ ಮಠದಲ್ಲಿ ಕಿಕ್ಕಿರಿದು ತುಂಬುತ್ತಿದ್ದರು. ನಾವು ಮಠಕ್ಕೆ ಬಂದ ಪಂಚಾಕ್ಷರಿ ಗವಾಯಿಗಳ ಪರಿವಾರದವರ ಸೇವೆಯನ್ನು ಒಂದಿಲ್ಲೊಂದು ರೀತಿಯಿಂದ ಮಾಡುತ್ತಿದ್ದೆವು. ಕೆಲವಾರು ದಿನ ಸಂಗೀತದ ರಸದೌತಣ ಉಣ್ಣಿಸಿ ಗವಾಯಿಗಳ ಪರಿವಾರ ನಿರ್ಗಮಿಸುತ್ತಿತ್ತು. ಆ ಸಮಯದಲ್ಲಿ ಸಂಗೀತದ ಶ್ರೇಷ್ಠ ವಿದ್ವಾಂಸರನೇಕರನ್ನು ನೋಡುವ ಭಾಗ್ಯ ದೊರೆಯುತ್ತಿತ್ತು.

## ಮ.ಗು. ಹಿರೇಮಠ ಮಾಸ್ತರರು

ನಮ್ಮ 6ನೇ ತರಗತಿ ಮತ್ತು 7ನೇ ತರಗತಿಗಳು ಒಂದೇ ಉದ್ದನಾದ ಮೆಟ್ಟಿಲು ಮೆಟ್ಟಿಲುಗಳುಳ್ಳ ಕೊಠಡಿಯಲ್ಲಿ ನಡೆಯುತ್ತಿದ್ದವು. ಇದು ಶಾಲೆಗೆಂದು ಕಟ್ಟಿಸಿದ ಇಮಾರತು ಅಲ್ಲ. ಹಿಂದೆ ಬ್ರಿಟಿಷರ ಕಾಲದಲ್ಲಿ ತಾಲೂಕು ಆಫೀಸಾಗಿದ್ದ ಕಟ್ಟಡವಂತೆ. ಊರ ಹೊರಗೆ ಬೇರೆ ತಾಲೂಕಾಫೀಸು ಕಟ್ಟಡವಾದ ಮೇಲೆ ಇದನ್ನು ಕನ್ನಡ ಶಾಲೆಗೆ ಕೊಟ್ಟರಂತೆ. ಆದ್ದರಿಂದ ಎಂಟು ತರಗತಿಗಳನ್ನು ಈ ಕಟ್ಟಡದಲ್ಲಿ ಸರಿಗೊಳಿಸಿಕೊಂಡು ಹೇಗೋ ತರಗತಿ ನಡೆಯುತ್ತಿದ್ದವು. ಆಗ ಮುಂಬಯಿ ಪ್ರಾಂತ್ಯದಲ್ಲಿ ಪ್ರಾಥಮಿಕ ಶಾಲೆ ಎಂಟು ವರ್ಷ ಅವಧಿಯದು. ಮೊದಲು ಬಾಲಬೋಧೆ ಎಂದು ಒಂದು ವರ್ಷ ಆದ ಮೇಲೆಯೇ 2ನೇ ವರ್ಷ ಒಂದನೆಯ ತರಗತಿಗೆ

ಸೇರಬೇಕಾಗಿತ್ತು. ಏಳನೇ ಇಯತ್ತೆಗೇ 'ಮುಲ್ಕಿ ಪರೀಕ್ಷೆ' ಎಂದು ಕರೆಯುವ ಪಬ್ಲಿಕ್ ಪರೀಕ್ಷೆಗೆ ಕುಳಿತು ತೇರ್ಗಡೆ ಹೊಂದಬೇಕಾಗಿತ್ತು. ಈ ಅವಧಿಯಲ್ಲಿ ಇಂಗ್ಲೀಷ್ ವಗೈರೆ ಏನೂ ಇರುತ್ತಿರಲಿಲ್ಲ. ಎಲ್ಲ ಕನ್ನಡದಲ್ಲಿಯೇ ಇತ್ತು. 6 ನೆಯ ತರಗತಿಯ ಉಪಾಧ್ಯಾಯರು ದೀಕ್ಷಿತ್ ಎಂದು; ಹೆಸರು ಮರೆತಿದೆ. 7ನೆಯ ತರಗತಿಯ ಉಪಾಧ್ಯಾಯರು ಮ.ಗು. ಹಿರೇಮಠ ಮಾಸ್ತರರು. ನನಗೆ ಗಣಿತ ಮತ್ತು ಭೂಮಿತಿ (ಜ್ಯಾಮೆಟ್ರಿ) ಎರಡು ವಿಷಯಗಳನ್ನು ಹಿರೇಮಠ ಮಾಸ್ತರರೇ ತಕ್ಕೊಳ್ಳುತ್ತಿದ್ದರು.

ಹಿರೇಮಠ ಮಾಸ್ತರರಂಥವರನ್ನು ಇನ್ನೂ ನಾನು ಶಿಕ್ಷಣಕ್ಷೇತ್ರದಲ್ಲಿ ಕಾಣಲಿಕ್ಕೇ ಆಗಿಲ್ಲ. ಅಂಥ ವ್ಯಕ್ತಿತ್ವ ಅವರದು. ಶೀಲದಲ್ಲಿ, ಕ್ರಿಯೆಯಲ್ಲಿ, ಸಂವಿಧಾನ ಚತುರತೆಯಲ್ಲಿ, ಪಾಠದಲ್ಲಿ ಎಲ್ಲದರಲ್ಲೂ ಅವರು ಶ್ರೇಷ್ಠವರ್ಗದ ಉಪಾಧ್ಯಾಯರೆನಿಸಿದ್ದರು. ಉಳಿದ ಉಪಾಧ್ಯಾಯರು ಅವರನ್ನು ಕಂಡು ಬಹುವಾಗಿ ಅಂಜಿ ಶಿಸ್ತು ಸಂಯಮ ಕಾಪಾಡಿಕೊಂಡು ಆ ಶಾಲೆಯನ್ನು ಆದರ್ಶಶಾಲೆಯ ಕೀರ್ತಿಗೇರಿಸಿದ್ದರು. ಶಾಲೆಯ ಶಿಸ್ತಿಗೆ ಭಂಗ ಬರುವುದನ್ನು ಹಿರೇಮಠರು ಸಹಿಸುತ್ತಿರಲಿಲ್ಲ. ಕೇವಲ ಕಣ್ಣೋಟದಿಂದಲೇ ಉಪಾಧ್ಯಾಯರು ಹೆದರಿ ತಮ್ಮ ತಪ್ಪನ್ನು ಸರಿಪಡಿಸಿಕೊಳ್ಳುತ್ತಿದ್ದರು. ತಪ್ಪು ಮಾಡಿದ ಉಪಾಧ್ಯಾಯರನ್ನು ವಿದ್ಯಾರ್ಥಿಗಳೆದುರು ಅಪಮಾನಗೊಳಿಸುತ್ತಿರಲಿಲ್ಲ. 'ಕಮಾಟಿ' ಮಾಸ್ತರ್ ಎಂಬುವವರೊಬ್ಬರಿದ್ದರು. ಅವರು ಹಾನಗಲ್ಲಿನವರೇ ಆದರೂ ಐದು ಮೈಲು ದೂರದಲ್ಲಿದ್ದ ಆಲೂರಿನಲ್ಲಿದ್ದ ಓರ್ವ ಸ್ತ್ರೀ ಲಂಪಟಕ್ಕೆ ಸಿಕ್ಕು ದಿನಾಲು ನಸುಕಿನಲ್ಲಿ ಐದು ಮೈಲು ನಡೆದೇ ಶಾಲೆಗೆ ಬರಬೇಕಾಗಿತ್ತು. ಒಮ್ಮೆ ಸ್ವಲ್ಪ ತಡವಾಗಿ ಬಂದು ಬಾಗಿಲಲ್ಲಿ ನಿಂತು ಬರಲೋ ಬೇಡವೋ ಎಂಬಂತೆ ನಾಲ್ಕಾರು ಸಲ ಹಿಂದೆ ಮುಂದೆ ಸರಿದಾಡಿ ಒಳಗೆ ಬಂದೇಬಿಟ್ಟರು. ನಾವು ಅದೇ ಕೊಠಡಿಯ ವಿದ್ಯಾರ್ಥಿಗಳು ತಾನೆ. ಅವರ ಈ ರೀತಿಯನ್ನು ಕಂಡು ನಗು ಬಂದರೂ ನಗುವನ್ನು ಹತ್ತಿಕ್ಕಿ ಈ ಆಟವನ್ನು ನೋಡುತ್ತಲೇ ಇದ್ದೆವು. ಅವರು ಒಳಗೆ ಬಂದು ಹಿರೇಮಠ ಮಾಸ್ತರರ ಎದುರುಗಿದ್ದ ಅಟೆಂಡೆನ್ಸ್ ಪುಸ್ತಕದ ಹತ್ತಿರ ಕೈಚಾಚಿದಾಗ ಹಿರೇಮಠ ಮಾಸ್ತರರು ಕಣ್ಣುಬಿಟ್ಟು ನೋಡಿದರು. ಕಮಾಟಿ ಮಾಸ್ತರರು ಅಟೆಂಡೆನ್ಸ್ ಕೈಬಿಟ್ಟರು. ಹಿರೇಮಠರು ಪುನಃ ಗಡಿಯಾರ ನೋಡಿ ಸಂಜ್ಞೆ ಮಾಡಿದರು. ಕಮಾಟಿಯವರು "..ಹಿಹಿಹಿ.....ಇವೊತ್ತು.....ಹಹಹ....ಸ್ವಲ್ಪ.." ಎಂದೊಡನೆ "ಹೌದು ಆಲೂರಿನಿಂದ ಬರುವುದು ಸ್ವಲ್ಪ ತಡವಾಗಿರಬೇಕು ಅಲ್ಲವೇನ್ರೀ ಕಮಾಟಿ. ಇವತ್ತು ಕಿರುಕುಳ ರಜಾ (ಕ್ಯಾಸುಯಲ್ ಲೀವ್) ತಕ್ಕೊಂಡು ಮನೆಗೆ ಹೋಗಿ ವಿರಾಮ ಪಡೆದು ನಾಳೆ ಸಕಾಲಕ್ಕೆ ಬನ್ನಿ" ಅಂದು ಕಳಿಸಿಯೇ ಬಿಟ್ಟರು. ಕಮಾಟಿಯವರು ಹೊರಗೆ ಹೋಗಿ ಜರಿ ರುಮಾಲನ್ನು ಕಿತ್ತು ಕೊಡವಿ ಮತ್ತೊಮ್ಮೆ ತಲೆಗೆ ಕಟ್ಟಿ ಕೈ ಕೈ ಹಿಚುಕುತ್ತ ನಿಂತುಕೊಂಡುಬಿಟ್ಟರು. ಇಂಥ ದೃಶ್ಯ ಕಂಡದ್ದು ನಾವು ಒಮ್ಮೆ. ಇವರು ಆಲೂರಿಗೆ ದಿನಾಲು ಹೋಗಿ ಬರುತ್ತಿದ್ದುದು ಇತ್ಯಾದಿ ವಿಷಯಗಳು ಆಮೇಲೆ ನಮಗೆ ಬೇರೆಯವರಿಂದ ತಿಳಿದು ಬಂದವು.

ಹಿರೇಮಠ ಮಾಸ್ತರರ ವಿಷಯ. ಬೋಧನಾ ಸಾಮರ್ಥ್ಯ ಶಿಕ್ಷಣ ತತ್ವಕ್ಕನುಗುಣವಾದದ್ದು. ಕುರ್ಚಿಯ ಮೇಲೆ ಕುಳಿತು ಗೌಡಿಕಿ ಮಾಡಿ ಹೋಗುವವರಲ್ಲ. ಬಹುಕಷ್ಟಪಟ್ಟು ಪಾಠ ಹೇಳುವುದು ಅವರ ಸ್ವಭಾವವಾಗಿತ್ತು. ಜಾಮಿಟ್ರಿ ಸಮಸ್ಯೆಯನ್ನು ಕಪ್ಪುಹಲಗೆಯ ಮೇಲೆ ಬರೆದು ವಿದ್ಯಾರ್ಥಿಗಳ ಆಲೋಚನೆಗೆ ಅವಕಾಶಕೊಟ್ಟು, ಪ್ರಶ್ನೆ ಹಾಕಿ ಅವರೇ ಸಮಸ್ಯೆಗೆ ಉತ್ತರ ಕಂಡುಹಿಡಿಯುವುದಕ್ಕೆ ಅವಕಾಶ ಮಾಡುತ್ತಿದ್ದರು. 1932ರಲ್ಲಿ ತರಗತಿ ಕೊಠಡಿಯಲ್ಲಿ ಅವರು ಮಾಡುತ್ತಿದ್ದ ಭೂಮಿತಿ

ಪಾಠದ ಚಟುವಟಿಕೆಯ ಚಿತ್ರ ನೆನೆದೊಡನೆ ಸಿನಿಮಾ ಚಿತ್ರಗಳು ಎದುರಿಗೆ ಹಾಯ್ದು ಹೋದ ಹಾಗೆ ಆಗುತ್ತದೆ. ಗಣಿತದ ಸಮಸ್ಯೆಯ ಬಗ್ಗೆಯೂ ಅಷ್ಟೆ. ವಿದ್ಯಾರ್ಥಿಯ ಯೋಚನೆಗೇ ಹೆಚ್ಚಿನ ಮಹತ್ವ ಕೊಡುತ್ತಿದ್ದುದರಿಂದ ಅವರ ಪಾಠ ನಮಗೆ ಮರೆಯುತ್ತಿರಲೇ ಇಲ್ಲ. ನಮ್ಮ ಆಲೋಚನಾ ಸಾಮರ್ಥ್ಯವೂ ಹೆಚ್ಚಿ ನಾವು ಆ ವಿಷಯಗಳಲ್ಲಿ ಮೇಲ್ಮೆ ಸಾಧಿಸಿದೆವೆಂದು ಹೇಳಬಹುದು.

ಬೆಳಿಗ್ಗೆ ತಬ್‌ಬಾತ್ ಸ್ನಾನಮಾಡಿ, ಪೂಜೆ ಮುಗಿಸಿ ಎರಡು ಕಚ್ಚೆ ಪಂಜೆ, ಷರಟು, ಕೋಟು ಧರಿಸಿ ಬಿಳಿಯ ಜರಿ ರುಮಾಲು ಸುತ್ತಿ, ಸಾದಾ ಪಾದರಕ್ಷೆ ಮೆಟ್ಟಿ, ಕೈಯಲ್ಲೊಂದು ಬೆತ್ತ ಹಿಡಿದು ಹಾನಗಲ್ಲು ಪೇಟೆಯಲ್ಲಿ ಬರುತ್ತಿದ್ದರೆ ಪೇಟೆಯ ಎಲ್ಲ ವರ್ಗದ ಜನರೂ ದೂರದೂರ ಸರಿದು ಹೋಗುತ್ತಿದ್ದರು. ಯಾರಾದರೂ 'ನಮಸ್ಕಾರ' ಎಂದು ಹೇಳಿದರೆ ಮೀಸೆಯಲ್ಲೇ ಕಿರುನಗೆ ಬೀರುತ್ತಾ ಬೆತ್ತ ಸಹಿತ ಬಲಗೈ ಮೇಲಕ್ಕೆತ್ತುತ್ತ ಹಿಂದೆ ಎಡ ಬಲ ಒಂದು ಕಡೆಗೂ ನೋಡದೆ ವೇಗವೇಗವಾಗಿ ಶಾಲೆಯ ಕಡೆ ಧಾವಿಸಿ ಬರುತ್ತಿದ್ದ ಅವರ ನಡಿಗೆಯ ರೀತಿ ನಮಗೆ ಇಂದೂ ಕಣ್ಮುಂದೆ ಕಟ್ಟಿದಂತಿದೆ. ಅದಕ್ಕಾಗಿಯೇ ನಾನು ಈ ಪೂರ್ವದಲ್ಲಿ ಹಿರೇಮಠ ಮಾಸ್ತರರಂಥ ಇನ್ನೊಬ್ಬ ಮಾಸ್ತರರನ್ನು ನಾನು ಕಂಡಿಲ್ಲವೆಂದು ಹೇಳಿದ್ದು.

### ಕಂತೀಭಿಕ್ಷದ ಅನುಭವ

ಏತನ್ಮಧ್ಯೆ ನಾನು ಊಟ ಮಾಡುತ್ತಿದ್ದ ಹೂಲಿಕಂತಿ ವೀರಯ್ಯನವರ ಮನೆಯಲ್ಲಿನ ಅನಾನುಕೂಲದ ಮೂಲಕ ನನಗೆ ಅಲ್ಲಿ ಊಟ ಮಾಡುವ ಅವಕಾಶ ತಪ್ಪಿ ಹೋಯಿತು. ಆಗ ಸ್ವಾಮಿಗಳವರಿಗೆ ಈ ವಿಷಯ ಅರಿಕೆ ಮಾಡಿಕೊಂಡೆ. ಅವರು "ಹೇಗೂ ಮಠದ ಕಂತೀಭಿಕ್ಷೆ ಮಾಡಿಕೊಂಡು ಬರುವವರು ಯಾರೂ ಇಲ್ಲ. ನೀನು ಲಕ್ಷಣವಾಗಿ ಕಂತೀಭಿಕ್ಷೆ ಮಾಡಿ ತಂದು ಗದ್ದಿಗೆಯ ಪೂಜೆ ಮಾಡಿ ನೈವೇದ್ಯ ಮಾಡಿ ಊಟ ಮಾಡಿಬಿಡು. ಅನೇಕ ಮನೆಗಳಿಂದ ಬಂದ ಒಳ್ಳೊಳ್ಳೆಯ ಭಕ್ಷ್ಯ ಭೋಜ್ಯಗಳೂ ಲಭ್ಯವಾಗುತ್ತವೆ" ಎಂದು ನಕ್ಕು ಹೇಳಿಬಿಟ್ಟರು. ಆಗಲೆಂದು ಸಮ್ಮತಿ ಸೂಚಿಸಿ, ಬೆಳಗಿನ ಶಾಲೆ ಮುಗಿಸಿ ಮಠಕ್ಕೆ ಬಂದು ಬಾವಿಕಟ್ಟೆಯ ಮೇಲೆ ನಾಲ್ಕಾರು ಕೊಡ ನೀರು ಸೇದಿ ಸ್ನಾನ ಮುಗಿಸಿ ಗದ್ದುಗೆಯ ಪೂಜೆ ಮುಗಿಸಿ ಗಂಟೆ ಅಲ್ಲಾಡಿಸಿ, ದೊಡ್ಡದೊಂದು ಹಿತ್ತಾಳೆಯ ಬುಟ್ಟಿಯನ್ನು ಹೊತ್ತು ವೇಗವೇಗವಾಗಿ ಊರೊಳಗೆ ಹೋಗಿ ಇಪ್ಪತ್ತು ಮೂವತ್ತು ಮನೆಗಳನ್ನು ಹೊಕ್ಕು ಕಂತಿಭಿಕ್ಷೆ ಮಾಡಿಕೊಂಡು ಬಂದು ಗದ್ದಿಗೆಗೆ ಎಡೆಮಾಡಿ ಊಟಕ್ಕೆ ಕೂಡುತ್ತಿದ್ದೆ. ಮಠಕ್ಕೆ ಬಂದ ಕೆಲವು ಅತಿಥಿಗಳನ್ನು ಕೂಡಿಕೊಂಡು ಅನೇಕ ಮನೆಗಳಿಂದ ಬಂದ ರೊಟ್ಟಿ, ಅನ್ನ, ಸಾರು, ಪಲ್ಲೆ, ಚಟ್ನಿಗಳಿಂದ ಊಟ ಮಾಡತೊಡಗಿದೆ. ಇದು ನನಗೆ ಹಿಡಿಸಿತು. ಕಾರಣ ಸ್ವಾಮಿಗಳು ಅಪ್ಪಣೆ ಕೊಡಿಸಿದಂತೆ ಅನೇಕ ಬಗೆಯ ಭಕ್ಷ್ಯಭೋಜ್ಯಗಳ ಸವಿಗೆ ನಾಲಿಗೆ ಮಾರು ಹೋಯಿತು. ಊಟ ಮಾಡಿದೊಡನೆ ಮಧ್ಯಾಹ್ನದ ಶಾಲೆಗೆ ಹೋಗಿ ಐದುಘಂಟೆಗೆ ಬಂದು ಪುನಃ ಉಳಿದ ರೊಟ್ಟಿ ಮೊದಲಾದವನ್ನು ತಿಂದು ತೃಪ್ತಿ ಪಡುತ್ತಿದ್ದೆ. ನನ್ನ ಸುಖ ಉಳಿದವರಿಗಾರಿಗೂ ಇರುತ್ತಿರಲಿಲ್ಲವೆನ್ನಬಹುದು. ಒಮ್ಮೆ ಕಂತಿಭಿಕ್ಷೆಗೆ ಹೋದಾಗ ಹಾವಣಿಗೆ ನೀಲವ್ವನೋ ಏನೋ ಹೆಸರು ಮರೆತಿದೆ. ದಿನಾಲು ಅವಳ ಮನೆಗೂ ಹೋಗುತ್ತಿದ್ದೆ. ಅವಳು ಒಂದು ಖಾನಾವಳಿ ನಡೆಸುತ್ತಿದ್ದಳು. ಆ ದಿನ ಅವಳ ಮನೆಗೆ ಹೋದಾಗ ಊಟಕ್ಕೆ ಬಹುಜನ ಬಂದಿದ್ದರೋ ಏನೋ ನನ್ನ ಕಂತಿಭಿಕ್ಷದ ಪಾತ್ರೆಯನ್ನು ಅವಳೇ ನೋಡಿ "ಏಯ್ ತಮ್ಮಾ ನಿನ್ನ ಕಂತೇಭಿಕ್ಷದ ಬುಟ್ಟಿಯಿಂದ ಆರೇಳು ರೊಟ್ಟಿ ತಕ್ಕೊತೇನಿ. ನಿನಗೆ ಅವುಗಳ ಬದಲಿಗೆ ಅನ್ನವನ್ನು

ಹೆಚ್ಚಾಗಿ ನೀಡುತ್ತೇನೆ" ಎಂದು ತಾನೇ ಬುಟ್ಟಿಯಲ್ಲಿ ಕೈಹಾಕಿ ರೊಟ್ಟಿ ತಕ್ಕೊಂಡು ಅನ್ನವನ್ನು ತಂದು ಬುಟ್ಟಿಗೆ ಹಾಕಿಬಿಟ್ಟಳು. ನಾನು ಅವಳೊಡನೆ ಜಗಳ ಮಾಡಲೇ? ಸುಮ್ಮನೆ ಅವಳು ಹಾಕಿದ ಅನ್ನದೊಡನೆ ಮಠಕ್ಕೆ ಬಂದೆ. ಮಠದಲ್ಲಿ ಸ್ವಾಮಿಗಳಿರಲಿಲ್ಲ. ಆಗ ಮಠವನ್ನು ದುಂಡಪ್ಪ ಎನ್ನುವ ಓರ್ವ ಕಾರ್ಯಕರ್ತ ನೋಡಿಕೊಳ್ಳುತ್ತಿದ್ದ. ನಾನು ಎಡೆ ಮಾಡಿ ಊಟಕ್ಕೆ ಕುಳಿತಾಗ ಅಲ್ಲಿಗೆ ಬಂದು ಏನು ರೊಟ್ಟಿ ಬಹಳ ಕಡಿಮೆ ಇವೆಯಲ್ಲ ಎಂದು ಗೊತ್ತು ಹಚ್ಚಿಯೇ ಬಿಟ್ಟ. ಆಗ ನಾನು ನಡೆದ ವಿಚಾರ ಹೇಳಿಬಿಟ್ಟೆ. ಅವನು ಹಿಂದೆಮುಂದೆ ನೋಡದೆ ಕೆನ್ನೆಗೆ ಫಟೀರನೆ ಬಾರಿಸಿಬಿಟ್ಟ. ಒಮ್ಮೆ ಅಲ್ಲ; ಎರಡು ಮೂರು ಬಾರಿ. ಅಂದಿನಿಂದ ಊರಿನ ಯಾರಿಗೂ ಕಂತೇಭಿಕ್ಷದ ಬುಟ್ಟಿಯಲ್ಲಿ ಕೈಹಾಕಗೊಡಲಿಲ್ಲ. ಆ ದಿನ ನಾನು ಊಟವನ್ನೇ ಮಾಡಲಿಲ್ಲ. ದುಂಡಪ್ಪನೇ ಬಂದು ಸಮಾಧಾನ ಮಾಡಿ ಊಟಮಾಡಿಸಿ ಹಾಗೆ ಜನರಿಗೆ ಈ ಬುಟ್ಟಿ ಮುಟ್ಟಲು ಕೊಡಬಾರದು ಎಂದು ಆ ಹೆಂಗಸನ್ನು ಚೆನ್ನಾಗಿ ಬೈದ.

ಕಂತಿಭಿಕ್ಷೆಯನ್ನು ಮಾಡತೊಡಗಿದ ಮೇಲೆ ಬಹುಶಃ ಬಹುಜನರ ಗಮನ ನನ್ನ ಕಡೆಗೆ ತಿರುಗಿತು. ನಾನು ಚಟುವಟಿಕೆಯಿಂದ ಕಂತಿಭಿಕ್ಷ ಮಾಡಿತಂದು ಅನೇಕ ಜನರಿಗೆ ಪ್ರಸಾದ ಕೊಡುತ್ತಿದ್ದುದೂ ಕಾರಣವಿರಬೇಕು. ಸ್ವಾಮಿಗಳೂ ನನ್ನ ಬಗೆಗೆ ವಿಶೇಷ ವಾತ್ಸಲ್ಯ ತೋರಿಸತೊಡಗಿದರು. ಇದು ಒಂದು ಬಗೆಯಲ್ಲಿ ನನ್ನಲ್ಲಿ ಆತ್ಮಪ್ರತ್ಯಯ ಬೆಳೆಯಲು ಸಹಕಾರವಾಯಿತು. ಆಕಾಲದಲ್ಲಿ ಕಿರಿಯನಾದರೂ ಬಹು ಚಟುವಟಿಕೆಯವನೆಂದೂ, ಶ್ರದ್ಧಾವಂತ ನೆಂದೂ ಎಲ್ಲರ ಪ್ರಶಂಸೆಗೆ ಪಾತ್ರನಾಗಿಬಿಟ್ಟೆ. ಹೀಗಾಗಿ ಮಠದ ಅನೇಕ ಜವಾಬ್ದಾರಿ ಕಾರ್ಯಗಳು ನನಗೆ ವಹಿಸಲ್ಪಟ್ಟವು.

ನನಗೆ ಹಾನಗಲ್ಲು ಮಠದಲ್ಲಿ ಯಾವ ಕೊರತೆಯಿಲ್ಲದೆ ನನ್ನ ವಿದ್ಯಾಭ್ಯಾಸ ಸಾಗಿತ್ತು. ಆದರೂ ಆ ಕಾಲದಲ್ಲಿ ಎಲ್ಲ ಕಡೆಗೂ ಮಲೆನಾಡಿನಲ್ಲಿ ವ್ಯಾಪಕವಾಗಿ ಹರಡಿದ್ದ ಮಲೇರಿಯಾದ ಕಾಟ ಅಧಿಕವಾಯಿತು. ಮಠದಲ್ಲಿಯೇ ಇದ್ದ ತಾಲ್ಲೂಕು ಬೋರ್ಡ್ ಆಫೀಸ್ ಕ್ಲಾರ್ಕ್ ಆಗಿದ್ದ ಗಡಾದ ಎಂಬುವವರು ತಮ್ಮ ಆಫೀಸಿನಿಂದ ಕ್ವಿನೈನ್ ಗುಳಿಗೆಗಳನ್ನು ತಂದು ಆಗಾಗ ಉಪಚರಿಸಿ ನನ್ನ ಮಲೇರಿಯಾ ಬೇನೆಯ ಉಪಶಮನ ಮಾಡುತ್ತಿದ್ದರು. ಆದರೂ ಮುಂದಿನ ವರ್ಷ ಇಲ್ಲಿರುವುದು ಬೇಡವೆನ್ನುವಷ್ಟು ಮಲೇರಿಯಾ ನನ್ನನ್ನು ಕಾಡಿಸತೊಡಗಿತು.

### ಹುಕ್ಕೇರಿ ಮಠದ ಶ್ರೀಗಳವರ ವಾತ್ಸಲ್ಯಕ್ಕೆ ಪಾತ್ರನಾದುದು

ಇಷ್ಟರಲ್ಲಿ ಹಾನಗಲ್ಲು ಮಠದಲ್ಲಿ ಒಂದು ದುಃಖದ ಸನ್ನಿವೇಶವೊದಗಿ ಬಂತು. ನನ್ನನ್ನು ಅತ್ಯಂತ ವಾತ್ಸಲ್ಯದಿಂದ ಕಾಣುತ್ತಿದ್ದ ಮಠದ ಶ್ರೀಗಳವರಾದ ಶ್ರೀ ಶ್ರೀ ಮಹೇಶ್ವರ ಸ್ವಾಮಿಗಳವರು ಲಿಂಗೈಕ್ಯರಾಗಿ ಅಪಾರ ಭಕ್ತಸ್ತೋಮವನ್ನು ದುಃಖಸಾಗರದಲ್ಲಿ ಮುಳುಗಿಸಿದರು. ಮಹಾಮಹಿಮರಾಗಿದ್ದ ಹಾನಗಲ್ಲು ಕುಮಾರ ಮಹಾಸ್ವಾಮಿಗಳವರ ಶಿಷ್ಯರೂ, ಆಚಾರನಿಷ್ಠರೂ, ಶಿವಪೂಜಾ ದುರಂಧರರೂ, ವಿನಯಶೀಲರೂ, ಸಾತ್ವಿಕರೂ ಆಗಿದ್ದ ಶ್ರೀಗಳವರು ತಮ್ಮ ಸಚ್ಚಾರಿತ್ರ್ಯ, ಪರಿಶುದ್ಧ ಆಚಾರ-ವಿಚಾರಗಳಿಂದ ಭಕ್ತರ ಮನಸ್ಸನ್ನೆಲ್ಲ ಗೆದ್ದವರಾಗಿದ್ದರು. ಇಂಥ ಶ್ರೇಷ್ಠ ಮೂರ್ತಿಯು ನಮ್ಮನ್ನು ಅತ್ಯಂತ ಮಮತೆಯಿಂದ ಏಳೆಂಟು ತಿಂಗಳು ನೋಡಿದವರೂ ಆದ ಮಹೇಶ್ವರ ಸ್ವಾಮಿಗಳು ಲಿಂಗೈಕ್ಯರಾದಾಗ ನಾವೆಲ್ಲ ಬಿದ್ದು ಬಿದ್ದು ಅತ್ತು ಬಿಟ್ಟೆವು.

ಆ ಸಮಯಕ್ಕೆ ಮಹಾತಪಸ್ವಿಗಳಾದ ಹಾನಗಲ್ಲು ಕುಮಾರಸ್ವಾಮಿಗಳವರ ಬಲಗೈಯಿದ್ದ ಹಾಗೆ ಇದ್ದವರೂ, ಶಿವಯೋಗಮಂದಿರ ಸಂಸ್ಥಾಪನೆಯ ಕಾಲದಲ್ಲಿ ಬಹಳವಾಗಿ ಶ್ರಮಿಸಿದವರೂ ಆದ ಹಾವೇರಿ-ಹುಕ್ಕೇರಿ ಮಠದ ಶ್ರೀ ನಿ. ಪ್ರ. ಶಿವಬಸವ ಮಹಾಸ್ವಾಮಿಗಳು ಹಾನಗಲ್ಲ ಮಠಕ್ಕೆ ಬಂದು ಮಠದಲ್ಲಿ ಹನ್ನೊಂದು ದಿನ ವಾಸ್ತವ್ಯ ಮಾಡಿದರು. ಅಷ್ಟು ಹೊತ್ತಿಗಾಗಲೇ ಶ್ರದ್ಧಾವಂತ ವಿದ್ಯಾರ್ಥಿಯೆಂದು ಹೆಸರು ಗಳಿಸಿದ್ದ ನನ್ನನ್ನು ಅವರ ಸೇವೆಗೆ ನೇಮಿಸಿದರು. ನಾನು ಅವರು ಮಲಗುವ ಮಂಚದ ಹತ್ತಿರವೇ ನೆಲದ ಮೇಲೆ ಒಂದು ಚಾಪೆಯ ಮೇಲೆ ಮಲಗುತ್ತಿದ್ದೆ. ರಾತ್ರಿ ಅವರನ್ನು ಮೂತ್ರ ವಿಸರ್ಜನೆಗೆ ಕರೆದೊಯ್ಯುವುದು, ಮೂತ್ರ ವಿಸರ್ಜನೆಯಾದ ಮೇಲೆ ಬಾವಿಕಟ್ಟೆಯಲ್ಲಿ ಕುಳ್ಳಿರಿಸಿ ಕೈಕಾಲಿಗೆ, ಬಾಯಿ ಮುಕ್ಕಳಿಸಲು ನೀರು ಸೇದಿ ಹಾಕುವುದು, ಅನಂತರ ಪಾದವನ್ನು ವಸ್ತ್ರದಿಂದ ಒರೆಸಿ, ಕರೆದುಕೊಂಡು ಬಂದು ಮಲಗಿಸಿ ಮೇಲೆ ಹೊದಿಸುವುದು ಇತ್ಯಾದಿ ಕೆಲಸಗಳನ್ನು ಮನಮುಟ್ಟಿ ಮಾಡುತ್ತಿದ್ದೆ. ಅವರದು ಬಹಳ ಕಟ್ಟುನಿಟ್ಟಿನ ಕ್ರಿಯಾಚಾರ. ಮಡಿಹುಡಿ, ಆಚಾರ-ವಿಚಾರ ಬಹಳ. ಇವರೆಲ್ಲ ಹಾನಗಲ್ಲು ಕುಮಾರಸ್ವಾಮಿಗಳ ಗರುಡಿಯಲ್ಲಿ ತಯಾರಾದವರು. ಹಾನಗಲ್ಲು ಶ್ರೀಗಳವರ ಮಡಿಹುಡಿ, ಶಿವಪೂಜಾಧುರಂಧರತೆ, ಆಚಾರ-ವಿಚಾರ ಸಂಪನ್ನತೆ, ಸ್ತ್ರೀ ವಿಚಾರದಲ್ಲಿ ಪೂಜ್ಯಭಾವ. ಸಮಾಜ-ಸಂಸ್ಕೃತಿಯ ಬಗೆಗೆ ಅನನ್ಯ ಸಾಧಾರಣ ಪ್ರೇಮಾತಿಶಯ, ಮಾತು ಮತ್ತು ಕ್ರಿಯೆಗಳಲ್ಲಿ ಸಮನ್ವಯ ಇವೆಲ್ಲ ಅಂದಿನ ಜನಜೀವನದಲ್ಲಿ ಬಹಳ ಪ್ರಚಾರವಾಗಿದ್ದರು. ನಾನು ಚಿಕ್ಕವನಾಗಿದ್ದರೂ ಆ ವರ್ಷ ಶ್ರಾವಣಮಾಸದಲ್ಲಿ ನಡೆಯುತ್ತಿದ್ದ ಪುರಾಣಕಾಲದಲ್ಲಿ ಕುಮಾರಸ್ವಾಮಿಗಳ ಬಗ್ಗೆ ಗುರುಮೂರ್ತಿ ಶಾಸ್ತ್ರಿಗಳು ಆಗಾಗ ಹೇಳುತ್ತಿದ್ದ ಪ್ರಸಂಗಗಳು, ಮಾತುಗಳು, ಪವಾಡಸದೃಶ ಕ್ರಿಯೆಗಳು ಮನದಲ್ಲಿ ಅಚ್ಚೊತ್ತಿದ್ದವು. ಕುಮಾರಸ್ವಾಮಿಗಳು ಕೇವಲ ಎರಡು ವರ್ಷಗಳ ಹಿಂದೆ ಲಿಂಗೈಕ್ಯರಾಗಿದ್ದರಿಂದ ಜನರಲ್ಲಿ ಅವರ ಚರಿತ್ರೆಯ ಬಗೆಗಿನ ಅನೇಕ ಪವಾಡಸದೃಶ ಕಥೆಗಳು ಹಚ್ಚಹಸುರಾಗಿದ್ದವು. ಅವುಗಳ ಪ್ರಭಾವ ನನ್ನ ಮೇಲೆ ಅಚ್ಚೊತ್ತಿದ್ದವಾಗಿ ಅವರು ಹೇಗಿದ್ದಿರಬಹುದೆಂದು ನಾನೇ ಊಹಿಸುತ್ತ ಲೆಕ್ಕಾಚಾರ ಹಾಕುತ್ತಿದ್ದೆ. ಅಂಥ ಮಹಾತ್ಮರ ಅನುಯಾಯಿಗಳಾದ ಶ್ರೀ ಶಿವಬಸವಮಹಾಸ್ವಾಮಿಗಳ ಕ್ರಿಯಾಚಾರ ಸಂಪನ್ನತೆಯನ್ನು ಕಂಡು ಕುಮಾರಸ್ವಾಮಿಗಳವರನ್ನು ನಾನು ಮನದಲ್ಲೇ ಊಹಿಸಿಕೊಳ್ಳುತ್ತಿದ್ದೆ. ಅಪ್ರತ್ಯಕ್ಷವಾಗಿ ಕುಮಾರಸ್ವಾಮಿಗಳ ಪ್ರಭಾವ ನನ್ನ ಮೇಲೆ ಅಧಿಕವಾಗಿತ್ತು. ಇದು ಸಹಜವೇ ಆಗಿತ್ತು. ಏಕೆಂದರೆ ನಾನಿದ್ದುದು ಅವರ ಮಠದಲ್ಲಿಯೇ ಅಲ್ಲವೇ? ಅಂಥ ಪುಣ್ಯಾತ್ಮ ಪುರುಷರು ಲಿಂಗಾನುಷ್ಠಾನಮಾಡಿದ ಪವಿತ್ರಮಠದಲ್ಲಿ ನಾನಿದ್ದು ವಿದ್ಯಾಭ್ಯಾಸ ಮಾಡುತ್ತಿದ್ದೇನಲ್ಲಾ ಅನ್ನುವ ಪವಿತ್ರ ಭಾವ ನನ್ನಲ್ಲಿ ನಿಜವಾಗಿಯೂ ಮನೆಮಾಡಿತ್ತು. ಒಂದು ರೀತಿಯಲ್ಲಿ ನನ್ನ ಭಾವವೇ ಉದಾತ್ತೀಕರಣಗೊಂಡಿತ್ತು ಎಂದು ಈಗ ಊಹಿಸುತ್ತೇನೆ. ನಾನು ಕಷ್ಟ-ಕಾರ್ಪಣ್ಯಗಳ ಕೊರತೆಯಿಂದ ಬಂದಿದ್ದರೂ ಹೃದಯ ಶ್ರೀಮಂತಿಕೆ ಬೀಜರೂಪದಲ್ಲಿದ್ದೇ ಇತ್ತು ಎಂಬುದನ್ನು ಮಾತ್ರ ಹೆಮ್ಮೆಯಿಂದ ಹೇಳಿಕೊಳ್ಳುವುದಕ್ಕೆ ಸಂತೋಷಪಡಬೇಕಾದುದೇ ಇಲ್ಲ. ಆ ಒಂದು ಭಾವನೆ ನನ್ನಲ್ಲಿಲ್ಲದಿದ್ದರೆ ಶಿವಬಸವಸ್ವಾಮಿಗಳಂಥ ಪೂಜ್ಯರ ಸಮೀಪಕ್ಕೆ ಮಠದವರೇ ನನ್ನನ್ನು ಕಳಿಸುತ್ತಿರಲಿಲ್ಲ.

ಶ್ರೀ ಶಿವಬಸವಸ್ವಾಮಿಗಳು ಕ್ರಮವಾಗಿ ಬೆಳಗು-ಸಂಜೆ ಎರಡೂ ಹೊತ್ತು ಹೊರಗೆ ತಿರುಗಾಡಲು ಹೋಗುತ್ತಿದ್ದರು. ಹಾಗೆ ಹೋಗುವಾಗ ಬೇರೆ ಯಾರನ್ನೂ ಸೇರಿಸುತ್ತಿರಲಿಲ್ಲ. ತಾವೊಬ್ಬರೇ ಲೀಲಾಮೂರ್ತಿಗಳಾಗಿ ಹೋಗಿ ತಿರುಗಾಡಿ, ಅಲ್ಲಲ್ಲಿ ನಿಂತು ಏನನ್ನೋ ನೋಡುತ್ತ,

ಏನನ್ನೋ ವಿಚಾರ ಮಾಡುತ್ತ ನಿಂತುಕೊಳ್ಳುತ್ತ ಸುತ್ತಮುತ್ತಿನ ವಿಶ್ವವನ್ನು ಆಗಾಗ ತದೇಕ ದೃಷ್ಟಿಯಿಂದ ನೋಡುತ್ತ ತಿರುಗಾಡಿ ಬರುತ್ತಿದ್ದರು. ಆಗ ಓರ್ವ ಮರಿ ಮಾತ್ರ ಅವರ ಹತ್ತಿರ ಇರಲೇಬೇಕು. ಆ ಮರಿಯೇ ನಾನಾಗಿದ್ದೆ.

ಬೆಳಿಗ್ಗೆ ಐದೂವರೆ ಸುಮಾರಿಗೆ ನನ್ನನ್ನು ಎಬ್ಬಿಸಿ ಬೆತ್ತ, ತಂಬಿಗೆ ತಕ್ಕೊಂಡು ಬರಹೇಳಿ ಹೊರಡಲು ಸಿದ್ಧರಾಗುತ್ತಿದ್ದರು. ನಾನು ....ಮುಗಿಸಿ ಮುಖಮಾರ್ಜನೆ ಮಾಡಿ, ಹಣೆಗೆ ಭಸ್ಮ ಧರಿಸಿಯೇ ಹೊರಡಬೇಕೆಂದು ಶ್ರೀಗಳವರ ಸೂಚನೆ. ಅದರಂತೆ ಎಲ್ಲ ಮುಗಿಸಿ ಅವರ ಬೆತ್ತ ಮತ್ತು ದೊಡ್ಡ ತಂಬಿಗೆಯನ್ನು ಹಿಡಿದುಕೊಂಡು ದಕ್ಷಿಣ ದಿಗ್ಭಾಗದಲ್ಲಿ ಹರಿಯುತ್ತಿದ್ದ ಧರ್ಮಾನದಿಯ ಕಡೆಗೆ ಕರೆದುಕೊಂಡು ನಿಧಾನವಾಗಿ ರಾಜಮಾರ್ಗದ ಒಂದು ಪಕ್ಕದಲ್ಲಿ ಹೋಗುತ್ತಿದ್ದೆ.

ಮೊದಲ ದಿನವೇ ದಾರಿಯಲ್ಲಿ ನನ್ನ ಊರು, ತಂದೆ, ತಾಯಿ, ಹೊಲಮನೆ - ಇತ್ಯಾದಿ ಎಲ್ಲ ವಿಷಯಗಳನ್ನು ಕೇಳಿ ತಿಳಿದುಕೊಂಡರು. ಇದಾದ ನಂತರ 'ನಿಮ್ಮ ಗುರುಗಳಾರು" ಎಂದು ಪ್ರಶ್ನಿಸಿದರು. ಆಗ ನಾನು 'ಹುಲುಗಬಾಳಿ ಹಿರೇಮಠದ ಪಟ್ಟದ ದೇವರು ಅದೃಶ್ಯಪ್ಪನವರು' ಎಂದು ತಡಬಡಿಸದೆ ಹೇಳಿಬಿಟ್ಟೆ. ಅದು ನನಗೆ ಗೊತ್ತಿತ್ತು. ಅವರು ಆಗಾಗ ನಮ್ಮೂರ್ರಿಗೆ ಬಂದು ಹೋಗುತ್ತಿದ್ದುದನ್ನು ಕಂಡಿದ್ದೆ. ಆಗ ಶಿವಬಸವಸ್ವಾಮಿಗಳು ತಟ್ಟನೆ ನಿಂತು 'ಏನೊ ಚನ್ನ (ನನ್ನನ್ನು ಕರೆಯುತ್ತಿದ್ದ ರೀತಿ. ಚನ್ನಪ್ಪ ಎಂಬುದರ ಸಂಕ್ಷೇಪರೂಪ) ನಮ್ಮ ಸಮೀಪಕ್ಕೇ ಬಂದೆಯಲ್ಲೋ, ನಮಗೆ ಬೀಗನಾಗಿಬಿಟ್ಟೆ' ಅಂದರು. ಅದರ ಅರ್ಥ ನನಗೆ ಹೊಳೆಯಲಿಲ್ಲ. 'ಹಾಗೆಂದರೇನು ಬುದ್ಧಿ' ಎಂದೆ. ಅವರು ಪುನಃ ಮಾತಾಡಲಿಲ್ಲ. 'ಬೇಗಬೇಗ ನಡೆ' ಎಂದುಬಿಟ್ಟರು. ಮುಂದೆ ಅನೇಕ ವರ್ಷಗಳ ಮೇಲೆ ನನಗೆ ಶ್ರೀಗಳು ಅಂದ ಈ ಮಾತಿನ ಅರ್ಥ ಆಯಿತು. ಅಥಣಿ ಹತ್ತಿರದ ಸಪ್ತಸಾಗರ ಎಂಬಲ್ಲಿ ಶ್ರೀ ಶಿವಬಸವಸ್ವಾಮಿಗಳು ಹುಟ್ಟಿದವರೆಂದೂ, ಹುಲಗಬಾಳಿಯ ಅದೃಶಪ್ಪನ ಮಠದವರೂ ಶ್ರೀಗಳವರ ಪೂರ್ವಾಶ್ರಮದ ಪಿತೃಗಳೂ ಬೀಗರಂತೆ. ಆ ಮಾತನ್ನು ನೆನೆದುಕೊಂಡು 'ನಮಗೆ ಬೀಗನೇ ಆಗಿಬಿಟ್ಟೆಯಲ್ಲೋ' ಎಂದು ಹೇಳಿದರೆಂದು ತಿಳಿದುಕೊಂಡೆ.

ಇಷ್ಟು ಮಾತುಕತೆಯನ್ನು ಮಾಡುತ್ತ ಬರುವಷ್ಟರಲ್ಲಿ ಧರ್ಮಾನದಿ ಬಂತು. ನದಿಯ ಸುತ್ತಲೂ ಸುಂದರವಾದ ಕುರುಚಲು ಗಿಡಗಳ ಅರ್ರ್ಯ. ಹಸುರ್ಗರೆವ ಗಿಡಮರಬಳ್ಳಿಗಳು. ಅಲ್ಲಿ ಚಿದಾರಣ್ಯಕ್ಕೆ ಹೋಗಿ ಬರುವುದನ್ನೇ ಕಾಯುತ್ತ ಕುಳಿತು ಬಂದೊಡನೆ ಕೈಯ ತಂಬಿಗೆಯನ್ನು, ಅದರಿಂದ ತೆಗೆದುಕೊಂಡು ಹೊಳೆಯ ಶುದ್ಧವಾದ ಒಂದು ಸ್ಥಳಕ್ಕೆ ಕರೆತಂದೆ. ಶ್ರೀಗಳವರು ಕೂಡಲೇ ಸೂಚಿಸಿದ್ದ ರೀತಿಯಲ್ಲಿ ಹೊಳೆಯ ಒಂದು ಮಣ್ಣ ಹೆಂಟೆ ತಂದು ಕಲ್ಲಮೇಲೆ ಜಜ್ಜಿ ಪುಡಿಮಾಡಿ ಇಟ್ಟಿದ್ದೆ. ಬೇವಿನ ಗಿಡ ಹುಡುಕಿ ಹತ್ತಿ ಯಾವ ಕಡ್ಡಿಯನ್ನಾದರೂ ಉಪಯೋಗಿಸಲೆಂದು ನಾಲ್ಕೈದು ತರಹದ ಕಡ್ಡಿಗಳನ್ನು ದಂತಧಾವನಕ್ಕೆ ಸಿದ್ಧಪಡಿಸಿ ಇಟ್ಟಿದ್ದೆ. ಬಂದು ಕಲ್ಲಮೇಲೆ ಕುಳಿತರು. ಮಣ್ಣನ್ನು ಅವರ ಪಕ್ಕಕ್ಕೆ ಹಾಕಿದೆ. ಅವರ ತಂಬಿಗೆಯನ್ನು ಒಳ ಹೊರಗೆ ಮೂರು ಸಲ ಅದೇ ಮಣ್ಣಿನಿಂದ ತಿಕ್ಕಿ ಶುಭ್ರಪಡಿಸಿ ಅದೇ ನೀರಿನಿಂದ ಅವರ ಕೈಗೆ ನೀರು ಹಾಕುತ್ತಿದ್ದೆ. ಅವರು ಮಣ್ಣನ್ನು ಮೊದಲು ಎಡಗೈಗೆ ಎಂಟುಹತ್ತುಸಲ ಹಾಕಿ ತೊಳೆದ ಮೇಲೆ ಎಂಟುಹತ್ತು ಸಲ ಎರಡೂ ಕೈಗಳನ್ನೂ ಮಣ್ಣುಹಚ್ಚಿ ತೊಳೆದು ಮೂರು ಮೂರು ಸಲ ಎರಡೂ ಪಾದಗಳಿಗೆ ಮಣ್ಣುಹಚ್ಚಿ ತೊಳೆದುಕೊಂಡು ಆಮೇಲೆ ಹತ್ತು ಹನ್ನೆರಡು ಸಲ ಬಾಯಿ

ಮುಕ್ಕಳಿಸಿ ಮುಖಮಾರ್ಜನ ಮಾಡುತ್ತಿದ್ದರು. ಇದಾದ ಮೇಲೆಯೇ ಅವರ ಮಾತುಕತೆ. ಅಲ್ಲಿಯವರೆಗೆ ಕೈಸನ್ನೆ ಕಣ್ಣುಸನ್ನೆ ಮಾತ್ರ. ಆಮೇಲೆ 'ಬೇವಿನಕಡ್ಡಿ ಎಲ್ಲಿ?' ಎಂದರು. ಐದಾರು ಬೇವಿನ ಕಡ್ಡಿಗಳನ್ನು ಎದುರಿಗೆ ಹಿಡಿದೆ. 'ಇಷ್ಟು ಕಡ್ಡಿ ಏಕೆ ಮುರಿದೆ?' ಎಂದರು. 'ತಮಗೆ ಯಾವುದು ಬೇಕೋ ಅದನ್ನು ಆರಿಸಿಕೊಳ್ಳಲೆಂದು ಮುರಿದೆ' ಎಂದೆ. ಆ ಮಾತಿಗೆ ನಸುನಕ್ಕು ಪರವಾಯಿಲ್ಲ ಎಂದು ದಂತಧಾವನ ಮುಗಿಸಿದರು. ಆಮೇಲೆ ಬಾಯಿ ಮುಕ್ಕಳಿಸಿ ಮತ್ತೊಮ್ಮೆ ಪಾದ ತೊಳೆದರು. ವಸ್ತ್ರದಿಂದ ಮುಖವನ್ನೊರಸಿಕೊಂಡರು. ನಾನು ಅದೇ ವಸ್ತ್ರದಿಂದ ಪಾದವನ್ನು ಒರೆಸಿ ಮೊದಲೇ ಶುಭ್ರವಾಗಿ ತಿಕ್ಕಿ ತೊಳೆದಿದ್ದ ಅವುಗಳನ್ನು ಎದುರಿಗಿಟ್ಟೆ. ಮೆಟ್ಟಿ ನಿಂತರು. ನಾನು ಬೇಗನೇ ಆ ವಸ್ತ್ರವನ್ನು ಪಟಪಟ ಒಗೆದು, ಹಿಂದಿ ಬೆತ್ತವನ್ನು ತೊಳೆದು ತಂಬಿಗೆ ತುಂಬ ನೀರನ್ನು ತುಂಬಿ ಎಡಗೈಯಲ್ಲಿ ಹೆಗಲ ಮೇಲಿಟ್ಟುಕೊಂಡು ನಡೆದೆ. ದಾರಿಯಲ್ಲಿ ಅವರ ಲೀಲೆಯೋ ಲೀಲೆ. ಗುಬ್ಬಿಗಳು ಚಿಲಿಪಿಲಿ ಎನ್ನುವಲ್ಲಿ ಅವುಗಳ ಧ್ವನಿಯನ್ನು ಆಲಿಸುತ್ತಾ ನಿಂತು ಬಿಡುತ್ತಿದ್ದರು. ದೂರದಲ್ಲಿ ನವಿಲು ಕೇಕೆ ಹಾಕುತ್ತಿದ್ದರೆ ನಿಂತು ಆ ಧ್ವನಿಯನ್ನು ಆಲಿಸುತ್ತ, ನವಿಲು ಕೂಗುತ್ತದೆ ನೋಡು ಎನ್ನುವರು. ಮರದ ಕೋತಿಗಳು ಹಾರಾಡುವಲ್ಲಿ ನಿಂತು ನೋಡುತ್ತಿದ್ದರು. ಮರಿಯನ್ನು ಅವಚಿಕೊಂಡು ಗಿಡದ ಮೇಲೆ ಓಡಾಡುವ ಕೋತಿಯನ್ನು ಕಂಡು ಬಹು ಸಂತಸಪಡುತ್ತ "ನೋಡು ಮರಿ ತಾಯಿಯನ್ನು ಹೇಗೆ ಗಟ್ಟಿಯಾಗಿ ಅವಚಿ ಹಿಡಿದುಕೊಂಡಿದೆ. ತಾಯಿ ಹರಿಯುವ ಹರಿಗೆ ಹಾರಿದರೂ ಕೈ ಬಿಡುವುದಿಲ್ಲ. 'ಮರ್ಕಟಕಿಶೋರನ್ಯಾಯ' ಎಂದರೆ ಇದೇ" ಎನ್ನುತ್ತಿದ್ದರು. ಆ ಮಾತಿನ ಅರ್ಥ ನನಗೆ ಆಗದಿದ್ದರೂ ಮಾತು ಮಾತ್ರ ಜ್ಞಾಪಕದಲ್ಲಿ ಉಳಿಯಿತು. ಆ ಮಾತಿನ ಅರ್ಥವೇನು ಬುದ್ಧಿ ಎಂಬ ಪ್ರಶ್ನೆ ಮಾಡಹೋಗಲಿಲ್ಲ. ಏಕೆಂದರೆ ಅದು ನನಗೆ ಬೇಕೇ ಆಗಿರಲಿಲ್ಲ. ಚಿಗಿತು ಅಂದವಾಗಿ ಶೋಭಿಸುವ ಮರಗಳಡಿಯಲ್ಲಿ ನಿಂತು ಬೊಡ್ಡೆಯಿಂದ ತುದಿಯವರೆಗೆ ವೀಕ್ಷಿಸಿ " ಬಹಳ ಚೆನ್ನಾಗಿದೆ ಅಲ್ಲವೇನೋ ಚನ್ನಾ" ಎಂದು ಮುಂದೆ ಮುಂದೆ ಸಾಗುತ್ತಿದ್ದರು. ಹೀಗೆ ಲೀಲಾಮಯವಾಗಿ ಹೊಳೆಗೆ ಹೋಗಿ ಬರುವುದಕ್ಕೆ ಸುಮಾರು ಎರಡು ತಾಸುಗಳಾದರೂ ಆಗುತ್ತಿತ್ತು. ಮಠಕ್ಕೆ ಬರುವ ಹೊತ್ತಿಗಾಗಲೇ ಅನೇಕ ಭಕ್ತಾದಿಗಳು ದರ್ಶನಕ್ಕಾಗಿ ಬಂದು ನಿಂತಿರುತ್ತಿದ್ದರು. ನಾನು ಅವರನ್ನು ಮಠಕ್ಕೆ ತಂದುಬಿಟ್ಟು ನನ್ನ ಕೆಲಸಕಾರ್ಯ, ಓದುವಿಕೆ, ಶಾಲೆಯ ಕೆಲಸ ಇತ್ಯಾದಿಯಲ್ಲಿ ತೊಡಗುತ್ತಿದ್ದೆ. ರಾತ್ರಿ ಅವರ ಶಿವಪೂಜಾ ಕಾರ್ಯ ಮುಗಿದು ಪ್ರಸಾದ ಸ್ವೀಕರಿಸಿ ಮಲಗುವ ಸಮಯದಲ್ಲಿ ಹಾಸಿಗೆ ಹಾಸಿ ಮಲಗಿಸಿ ಸ್ವಲ್ಪ ಸಮಯ ಪಾದ ಒತ್ತುತ್ತಿದ್ದೆ. ಈ ಕಾರ್ಯಕ್ಕೆ ನಾನೇ ಹೋಗಬೇಕಾಗಿತ್ತು. ಅವರಿರುವವರೆಗೆ ಬೆಳಗಿನ ಶಾಲೆಗೆ ನಾನೇ ತಪ್ಪಿಸಿ ಮಧ್ಯಾಹ್ನದ ಶಾಲೆಗೆ ಹೋಗುತ್ತಿದ್ದೆ. 'ಶಾಲೆ ಏಕೆ ತಪ್ಪಿಸಿದೆ' ಎಂದು ಉಪಾಧ್ಯಾಯರು ಕೇಳಿದರೆ ಉತ್ತರ ಸಿದ್ಧವಾಗಿಯೇ ಇರುತ್ತಿತ್ತು. ಆಕ್ಷೇಪ ಬರುತ್ತಿರಲಿಲ್ಲ. ಒಂದು ಮಾತ್ರ ಸತ್ಯ, ಶಿವಬಸವಸ್ವಾಮಿಗಳ ಸೇವಾವೃತ್ತಿಯಲ್ಲಿ ನಿರತನಾದ ಮೇಲೆ ನಾನು ಅನೇಕ ದೊಡ್ಡ ದೊಡ್ಡ ಸ್ವಾಮಿಗಳ ಕಣ್ಣಿಗೆ ಬಿದ್ದೆ, ಬಾಯಿಗೂ ಬಿದ್ದೆ.

### ನಾನು ಮುಂದಿನ ವರ್ಷ ನಿಮ್ಮ ಮಠಕ್ಕೆ ಬರುತ್ತೇನೆ

ಮಲೇರಿಯಾ ತೊಂದರೆಗೆ ಪದೇಪದೇ ಒಳಾಗಾಗುತ್ತಿದ್ದ ನನ್ನ ಮನಸ್ಸಿನಲ್ಲಿ ಮುಂದಿನ ವರ್ಷ ಹಾವೇರಿಗೆ ಏಕೆ ಹೋಗಬಾರದು? ಹಾವೇರಿ ಹಾನಗಲ್ಲಿಗಿಂತ ಹೇಗಿದ್ದರೂ ಆರೇಳು ಮೈಲಿ ಸಮೀಪ. ಅಲ್ಲದೆ ಸಂತೆಗೆಂದು, ಪೇಟೆಗೆಂದು ಬಂದ ಸಮ್ಮೂರವರು ಸಿಕ್ಕೇ ಸಿಗುತ್ತಾರೆ. ಆದ್ದರಿಂದ ಹಾನಗಲ್ಲಿಗಿಂತ ಹಾವೇರಿ ಮೇಲೆಂದು ಭಾವಿಸಿ ಮರುದಿನ ಶ್ರೀಗಳವರನ್ನು ಚಿದಾರಣ್ಯಕ್ಕೆ

ಕರೆತರುವಾಗ 'ಬುದ್ಧಿ, ಮುಂದಿನ ವರ್ಷ ನಾನು ತಮ್ಮ ಮಠದಲ್ಲಿಯೇ ಇದ್ದು ಏಳನೇ ತರಗತಿ ವಿದ್ಯಾಭ್ಯಾಸ ಮಾಡುತ್ತೇನೆ. ಬರಲೇ?' ಎಂದೆ. 'ಯಾಕೆ?' ಎಂದು ಇಷ್ಟೇ ಕೇಳಿದ ಶ್ರೀಗಳವರಿಗೆ 'ಇಲ್ಲ, ಮಲೇರಿಯಾದ ತೊಂದರೆಯಿಂದ ಬಹಳ ಅನಾನುಕೂಲವಾಗಿದೆ' ಎಂದೊಡನೆ 'ಹಾವೇರಿಯಲ್ಲೂ ಮಲೇರಿಯಾ ಇದ್ದೇ ಇದೆ' ಎಂದರು. 'ಅಲ್ಲಿ ಇದ್ದರೂ ತೀರಾ ಕಡಿಮೆ ಅಲ್ಲದೆ ನಮ್ಮೂರು ಹಾವೇರಿಗೆ ತೀರಾ ಹತ್ತಿರ, ಆದ್ದರಿಂದ ಮುಂದಿನ ವರ್ಷ ಏಳನೇ ತರಗತಿಗೆ ಅಲ್ಲಿಗೇ ಸೇರಿಬಿಡುತ್ತೇನೆ. ಬಂದುಬಿಡುತ್ತೇನೆ' ಎಂದುಬಿಟ್ಟೆ. ಶ್ರೀಗಳು ನಿಂತುಕೊಂಡು ನನ್ನ ಮುಖನೋಡಿ 'ಆಗಲಿ ಬಾ' ಎಂದು ಹೇಳಿ ಹೊರಟುಬಿಟ್ಟರು.

ಹಾವೇರಿ ಶ್ರೀಗಳು ಹಾನಗಲ್ಲಿನಲ್ಲಿ ಇರುವಷ್ಟು ಕಾಲ ನಾನು ಬಹು ಶ್ರದ್ಧೆಯಿಂದ ಅವರ ಸೇವಾದಿ ಕಾರ್ಯ ಮಾಡಿದೆನೆಂಬ ತೃಪ್ತಿ ನನಗೆ ಈಗಲೂ ಇದೆ. ಹಾನಗಲ್ಲಿನಲ್ಲಿ ನನ್ನ ಆರನೆಯ ತರಗತಿ ವಿದ್ಯಾಭ್ಯಾಸ ಮುಗಿಸಿಕೊಂಡು ಮರುವರ್ಷ ನೇರವಾಗಿ ಹಾವೇರಿ ಹುಕ್ಕೇರಿ ಮಠದಲ್ಲಿ ಇದ್ದುಕೊಂಡು ವಿದ್ಯಾಭ್ಯಾಸ ಮುಂದುವರಿಸಿದೆ. ಶ್ರೀ ಶಿವಬಸವಸ್ವಾಮಿಗಳು ಮಠದಲ್ಲಿ ಬಹುವಾತ್ಸಲ್ಯದಿಂದ ನನ್ನನ್ನಿಟ್ಟುಕೊಂಡು ಹೊಸಮನೆ ಚನ್ನಬಸಪ್ಪನವರ ಮನೆಯಲ್ಲಿ ಊಟಕ್ಕೆ ಏರ್ಪಾಟು ಮಾಡಿದರು. ಹಾವೇರಿಯ 2ನೇ ನಂಬರ್ ಶಾಲೆಗೆ ದಾಖಲಾಗಿ ಓದನ್ನು ಮುಂದುವರಿಸಿದೆ. ಹುಕ್ಕೇರಿಮಠದಲ್ಲಿ ಇದ್ದ ಕಾಲದಲ್ಲಿ ಶ್ರೀಗಳವರ ವಿಶೇಷ ಸೇವಾಕಾರ್ಯಗಳು ನನ್ನ ಪಾಲಿಗೆ ಉಂಟಾದುದೊಂದು ನನ್ನ ಘನತೆ ಹೆಚ್ಚಲು ಕಾರಣವಾಯಿತು. 'ಸದ್ಧರ್ಮದೀಪಿಕೆ' ಸಂಪಾದಕರಾದ ಶ್ರೀ ಚನ್ನಮಲ್ಲಿಕಾರ್ಜುನರ ನಿಕಟ ಪರಿಚಯಕ್ಕೂ ಇದೇ ಕಾರಣವಾಯಿತು. ಒಂದು ರೀತಿಯಲ್ಲಿ ಹುಕ್ಕೇರಿಮಠದ ಯಾಜಮಾನ್ಯದಲ್ಲಿ ನನಗೆ ಒಂದು ಚಿಕ್ಕಪಾಲು ದೊರಕಿತೆನ್ನಬೇಕು. ಅಷ್ಟು ಸಲಿಗೆ ಶ್ರೀಗಳವರಲ್ಲಿ ಬೆಳೆಯಿತು. ಇಲ್ಲಿಯೂ ಶ್ರೀಗಳವರನ್ನು ಬೆಳಿಗ್ಗೆ ಚಿದಾರಣ್ಯಕ್ಕೆ ಕರೆದುಕೊಂಡು ಹೋಗುವ ಕಾಯಕಕ್ಕೆ ನೇಮಕವಾದೆ. ಇನ್ನಿತರ ಅನೇಕ ಸೇವಾಕೈಂಕರ್ಯವನ್ನು ಮಾಡಿದೆ. ಇದನ್ನು ನನ್ನ ಪುಣ್ಯದ ಫಲವೆಂದೇ ನನ್ನ ಅಂದಿನ ಇಂದಿನ ಅನಿಸಿಕೆ.

### *ಹುಕ್ಕೇರಿಮಠದ ಶಿವಬಸವಸ್ವಾಮಿಗಳು ಸಂಗೀತಪ್ರಿಯರು*

ಹಾವೇರಿಗೆ ಯಾವ ಪ್ರಸಿದ್ಧ ಸಂಗೀತಗಾರರೇ ಬರಲಿ, ಅವರೆಲ್ಲ ಹುಕ್ಕೇರಿ ಮಠದ ಶಿವಬಸವಸ್ವಾಮಿಗಳ ಎದುರಿನಲ್ಲಿ ಒಂದುದಿನವೋ ಎರಡು ದಿನವೋ ಕಚೇರಿ ಮಾಡಿಯೇ ಹೋಗಬೇಕು. ಶ್ರೀಗಳವರಿಗೆ ಸಂಗೀತವೆಂದರೆ ಬಹು ಇಷ್ಟವಾದ ಕಾರ್ಯಕ್ರಮವಾಗಿತ್ತು. ದರ್ಬಾರಿ, ಜೀವನ್ಪುರಿ, ಬಿಲಹರಿ, ಮಲ್ಹಾರ, ಪಟದೀಪ್, ಭೀಮಪ್ಲಾಸ್, ಭೈರವಿ ಮೊದಲಾದ ರಾಗಗಳನ್ನು ಎತ್ತಿಕೊಂಡು ಯಾರೇ ಹಾಡಲಿ ಇಲ್ಲಿ ಸ್ವರವಿಸ್ತಾರ ಸರಿಯಾಗಲಿಲ್ಲ, ಇಲ್ಲಿ ಅವರೋಹವಾಗಿತ್ತು, ತಾಳ ಹೋಯಿತು ಆರೋಹಣಾವರೋಹಣದಲ್ಲಿ ಅಭ್ಯಾಸ ಸಾಲದು....ಅವುಗಳನ್ನು ಅವರೆದುರಿಗೆ ಹೇಳದೆ ಅನಂತರ ಅದರ ವಿಮರ್ಶೆ ಮಾಡಿಬಿಡುತ್ತಿದ್ದರು. ಯಾವ ಸಂಗೀತಗಾರನೇ ಆಗಲಿ ಬಹುಎಚ್ಚರ ಚೆಚ್ಚರಗಳಿಂದ ಹಾಡಿ ತಮ್ಮ ಸೇವೆಯನ್ನು ಮುಗಿಸುತ್ತಿದ್ದುದುಂಟು. ಯಾವ ಸಂಗೀತಗಾರರೂ ಇಲ್ಲದೆ ಸ್ವಾಮಿಗಳಿಗೆ ಬೇಸರವಾದಾಗ ಮಠದಲ್ಲೇ ಇದ್ದ ಮುಧೋಳದ ವೀರಯ್ಯ ಮತ್ತು ಅವರ ಅಣ್ಣನೋ ಚಿಕ್ಕಪ್ಪನೋ ಆಗಬೇಕಾಗಿದ್ದ ಪಿಟೀಲಿನ ಸದಾಶಿವಯ್ಯ ಇವರು ಸಂಗೀತ ಕೊರೆಯುತ್ತ ಕೊಡುತ್ತಿದ್ದುದೂ ಉಂಟು. ಇವರಿಬ್ಬರೂ

ಪಂಚಾಕ್ಷರಿ ಗವಾಯಿಗಳ ಶಿಷ್ಯರಂತೆ. ವೀರಯ್ಯ ಬ್ರಹ್ಮಚಾರಿ. ಲೋಕಸಂಚಾರಿ. ಹುಕ್ಕೇರಿ ಮಠಕ್ಕೆ ಬಂದರೆ ಕೆಲವಾರು ತಿಂಗಳು ಕ್ಯಾಂಪ್ ಹಾಕಿ ಬಿಡುತ್ತಿದ್ದ. ಸದಾಶಿವಯ್ಯನಂತೂ ಮಠದಲ್ಲಿಯೇ ಅನೇಕ ದಿನ ಬಿಡಾರ ಮಾಡಿ ಪಿಟೀಲಿನೊಡನೆ ತಾನೇ ಯಾವ ರಾಗ ಹಾಡಲೆಂದು ಕೇಳಿಯೇ ಸ್ವರಾಲಾಪ ಹೊತ್ತು ಹಾಡಿ ಮುಗಿಸುತ್ತಿದ್ದ. ಇವನು ಕೊನೆಯಲ್ಲಿ ಚಹಾಸಿಂದನೆಯ 'ಶರಣೆಂಬೆ ಬಾ ಚಹಾಮರಿಗೆ. ಭೆಟ್ಟಿಯಾದೆ ಸರ್ವರಿಗೆ....' ಎಂಬ ಹಾಡನ್ನಂತೂ ತಪ್ಪದೆ ಹಾಡಿ ಮುಗಿಸುತ್ತಿದ್ದ.

ಹಾವೇರಿಗೆ ಯಾವ ನಾಟಕ ಕಂಪೆನಿಯವರೇ ಬರಲಿ, ಹುಕ್ಕೇರಿ ಮಠದ ಶಿವಬಸವ ಸ್ವಾಮಿಗಳ ಆಶೀರ್ವಾದಕ್ಕೆ ಬಂದೇ ತೀರಬೇಕು. ನಾನು ನಾಟಕಪ್ರಿಯ ಎಂಬುದು ಸ್ವಾಮಿಗಳಿಗೆ ಹೇಗೋ ತಿಳಿದುಹೋಗಿತ್ತು. ಆಗಾಗ ರಾತ್ರಿ ಕದ್ದು ನಾಟಕ ನೋಡಲು ಹೋಗುತ್ತಿದ್ದೆ. ಅದನ್ನಾರೋ ಹೇಳಿದ್ದರೆಂದು ತೋರುತ್ತದೆ. ನನ್ನ ನಾಟಕದ ಹುಚ್ಚು ಅಸ್ನಿ ಅಥವಾ ಗೀಳು ಅಸ್ನಿ ಇದು ಹೇಗೆ ಬಡಿದುಕೊಂಡಿತ್ತೆಂಬುದರ ಸಂಕ್ಷೇಪ ವಿವರಣೆ ಹಿಂದೆಯೇ ಇದೆ. ನಾಟಕ ಕಂಪೆನಿಯ ಮ್ಯಾನೇಜರ ಮೊದಲಾದವರು ಬಂದರೆ ಅವರಿಗೆ ಸ್ವಾಮಿಗಳು 'ನಮ್ಮ ಮಠದಲ್ಲಿ ನಾಟಕದ ಹುಚ್ಚಿನ ಮರಿ ಇದೆ. ಅವನು ಬಂದರೆ ಒಳಗೆ ಬಿಟ್ಟುಬಿಡಿ' ಎಂದು ಹೇಳಿದ್ದುಂಟು. ಹಲಗೇರಿ ಜಟ್ಟೆಪ್ಪನಿಗೆ ಮತ್ತು ಗೋಕಾಕ ಕಂಪನಿ ಮ್ಯಾನೇಜರರಿಗೆ ನನ್ನನ್ನು ತೋರಿಸಿ ಹೇಳಿದ್ದುಂಟು. ಒಮ್ಮೆ ಬಸವರಾಜ ಮನಸೂರ ಅವರಿಗೂ ಹೇಳಿದ್ದ ಜ್ಞಾಪಕ. ಹೀಗಾಗಿ ಯಾವ ನಾಟಕ ಕಂಪನಿಯೇ ಬರಲಿ ಅವರ ಎಲ್ಲ ನಾಟಕಗಳನ್ನೂ ದುಡ್ಡಿಲ್ಲದೆ ಹಾವೇರಿಯಲ್ಲಿ ನೋಡಿ ನನ್ನ ನಾಟಕದ ಚಟವನ್ನು ತೀರಿಸಿಕೊಂಡಿದ್ದುಂಟು. ಹಲಗೇರಿ ಕಂಪನಿಯ ನಾಟಕ ಸಾಹಿತ್ಯವೆಲ್ಲ ನನಗೆ ಬಾಯಿಪಾಠವಾಗಿ ಹೋಗಿದ್ದವು. ಈ ಕಂಪನಿಯ ಸ್ತ್ರೀ, ಬಿ.ಎ, ಎಂಬೆರಡು ನಾಟಕಗಳು ಆಗ ಬಹು ಪ್ರಸಿದ್ಧವಾಗಿದ್ದವು. ಅವನ್ನು ನೋಡಿದ್ದು ಲೆಕ್ಕವೇ ಇಲ್ಲ. ದೊಡ್ಡ ಜಟ್ಟೆಪ್ಪ ನನ್ನನ್ನು ನೋಡಿದರಾಯಿತು. ತಾನೇ ಕರೆದುಕೊಂಡು ಹೋಗಿ ಮುಂದಿನ ಕುರ್ಚಿಯಲ್ಲಿ ಕುಳ್ಳಿರಿಸುತ್ತಿದ್ದ.

ಬರಬರುತ್ತ ನನ್ನನ್ನು ಬಹು ಬುದ್ಧಿವಂತ, ಶ್ರದ್ಧಾವಂತನೆಂದು ಶ್ರೀಗಳು ತಿಳಿದುಕೊಂಡ ಬಗ್ಗೆ ಒಂದೆರಡು ಉದಾಹರಣೆಗಳನ್ನು ಹೇಳಬಹುದು. ಅವರ ಸರ್ಕೀಟ್ ಕಾಟ್ ಅಂದರೆ ಪ್ರವಾಸಕ್ಕೆ ಹೋಗುವಾಗ ಒಯ್ಯುವ ಮಂಚದ ಕ್ಯಾನ್‌ವಾಸ್ ಅಲ್ಲಲ್ಲಿ ಹರಿದು ಮೂಲೆಗುಂಪಾಗಿತ್ತು. ಸರಿಯಾಗಿ ಅದನ್ನು ಹೊಲಿಸಿಕೊಂಡು ಬರಲು ನನಗೆ ತಿಳಿಸಿ ಎರಡು ರೂಪಾಯಿ ಕೈಯಲ್ಲಿ ಕೊಟ್ಟು ಕಳಿಸಿದರು. ಮಾಗಾವಿಯವರ ಜವಳಿ ಅಂಗಡಿ ಬಾಗಿಲಲ್ಲಿದ್ದ ಮರಾಠೆಯವನೊಬ್ಬನಲ್ಲಿಗೆ ಹೋದೆ. ಅವನು ನನಗೆ ಅಲ್ಪಸ್ವಲ್ಪ ಪರಿಚಯಸ್ಥನಾಗಿದ್ದನು. ಅವನ ಹೆಸರು 'ಬಾಬು' ಅಂತಲೋ ಏನೋ ಅದು ಮರೆತಿದೆ. ಅವನಿಗೆ "ಹುಕ್ಕೇರಿಮಠದ ಸ್ವಾಮಿಗಳು ಈ ಕ್ಯಾನವಾಸ್ ಕಾಟ್ ಬಟ್ಟೆ ವಗೈರೆ ಅಂಚಿನಲ್ಲೆಲ್ಲ ಹರಿದಿದೆ. ಇದನ್ನೆಲ್ಲ ಬೇಗನೆ ಹೊಲಿದು ಸರಿಪಡಿಸಿಕೊಡಿ" ಎಂದೆ. 'ಹೊಲೆಗೂಲಿ ತಂದಿದ್ದೀರಾ' ಎಂದ. 'ಅಂಥ ದೊಡ್ಡ ಶಿವಯೋಗಿಗಳಿಂದ ಹೊಲಿಗೂಲಿ ಪಡೆಯುವುದೇ? ಅವರ ಆಶೀರ್ವಾದವೊಂದು ಸಾಲದೆ' ಎಂದೆ. ಅವನು ನಗುತ್ತ ಹೊಲಿಯುವುದಕ್ಕೆ ಪ್ರಾರಂಭಿಸಿದ, ಎರಡು ಸೂಜಿ ಮುರಿದುಕೊಂಡ. ಆದರೂ ಪ್ರಯತ್ನಪಟ್ಟು ಹೊಲಿದು ಅಲ್ಲಲ್ಲಿ ತೇಪೆ ಹಚ್ಚಲು ತಾನೇ ತನ್ನಲ್ಲಿದ್ದ ಬಟ್ಟೆಯನ್ನು ಉಪಯೋಗಿಸಿ ಗಟ್ಟಿಗೊಳಿಸಿ, ಮಧ್ಯದಲ್ಲಿ ಹರಿದುದನ್ನೂ ಚೆನ್ನಾಗಿ ಹೊಲಿದು ಕೈಗೆ ಕೊಟ್ಟ. ನಾನು ಅವನಿಗೆ ಹೊಲಿಗೂಲಿಯನ್ನು ಕೊಡದೆ 'ನಿನಗೆ ದೇವರು ಒಳ್ಳೇದು ಮಾಡುತ್ತಾನೆ.

ದೊಡ್ಡವರ ಸೇವೆ ನಿನಗೆ ಈ ದಿನ ನಿನ್ನ ಪುಣ್ಯದಿಂದ ಲಭ್ಯವಾಯಿತು' ಎಂದು ಉಪಚಾರದ ಎರಡು ಮೂರು ಮಾತನಾಡಿ ಹೊರಟುಬಂದು ಶ್ರೀಗಳವರೆದುರು ಹೊಲಿದುದನ್ನೆಲ್ಲ ಬಿಚ್ಚಿ ತೋರಿಸಿ ಅದನ್ನು ಅದರ ಮರದ ಕಾಲುಗಳಿಗೆ ತೊಡಿಸಿ ಸಿದ್ಧಪಡಿಸಿ ತೋರಿಸಿ ಸ್ವಾಮಿಗಳ ಮುಂದೆ ಎರಡು ರೂಪಾಯಿ ಇಟ್ಟೆ. 'ಕೂಲಿ ಕೊಡಲಿಲ್ಲವೇ?' ಎಂದರು. 'ಮಠದ ಈ ಕೆಲಸಕ್ಕೆಲ್ಲ ಕೂಲಿ ಕೊಡುವುದೇ?' ಎಂದು ಹೇಳಿ 'ಕೂಲಿ ಕೊಡಲೇ ಇಲ್ಲ' ಎಂದೆ. ಶ್ರೀಗಳವರು ನಕ್ಕು 'ಸರಿಯಾಗಿದೆ ನಿನ್ನ ವ್ಯವಹಾರ! ಅವನು ಕೂಲಿ ಕೇಳಲೇ ಇಲ್ಲವೇ?' ಎಂದರು. 'ಕೇಳಿದ, ಆದರೆ ನಾನು ಅಯ್ಯಾ ನಿನ್ನ ಪುಣ್ಯದ ಕಾರಣವಾಗಿ ಶಿವಯೋಗಿಗಳ ಸೇವೆ ಲಭ್ಯವಾಗಿದೆ. ಉತ್ತರೋತ್ತರ ನಿನಗೆ ಕಲ್ಯಾಣವಾಗುತ್ತದೆ ಎಂದು ಹೇಳಿ ಎತ್ತಿಕೊಂಡು ಬಂದುಬಿಟ್ಟೆ' ಎಂದೆ. ಅದಕ್ಕೆ ಶ್ರೀಗಳು ನಕ್ಕು 'ನಮ್ಮ ಪರವಾಗಿ ನೀನೇ ಆಶೀರ್ವಾದ ಮಾಡಿ ಬಂದೆ ಅನ್ನು' ಎಂದರು. ನಾನೂ ನಕ್ಕು ನನ್ನ ಕೆಲಸಕ್ಕೆ ಹೋದೆ.

ಮತ್ತೊಮ್ಮೆ ಹಾವೇರಿಯಿಂದ ಎರಡು ಮೂರು ಮೈಲು ದೂರದ ಒಂದು ಹಳ್ಳಿ. ಆ ಹಳ್ಳಿಯ ಹೆಸರು ಮರೆತಿದೆ. ಮತ್ತಳಿಯೋ, ಕುರುಬಗೊಂಡವೋ ಮತ್ತೊಂದೋ ಸರಿಯಾಗಿ ಜ್ಞಾಪಕ ಬರುತ್ತಿಲ್ಲ. ಆ ಹಳ್ಳಿಯಲ್ಲಿ ಮಠದ ಸ್ವಲ್ಪ ಜಮೀನು ಇತ್ತು. ಆ ಜಮೀನಿನ ವ್ಯವಹಾರದಲ್ಲಿ ಆ ಊರ ಕುಲಕರ್ಣಿ ಬೇಕಾಗಿದ್ದವನು. ಯಾರು ಯಾರದೋ ಮೂಲಕ ಹೇಳಿಕಳಿಸಿದರೂ ಮಠಕ್ಕೆ ಬಂದಿರಲಿಲ್ಲ. ಸ್ವಾಮಿಗಳು 'ಏನಾದರೂ ಮಾಡಿ ಆ ಕುಲಕರ್ಣಿಯನ್ನು ಕರೆದುಕೊಂಡು ಬಾ. ಅವನೊಡನೆ ಮಾತನಾಡುವುದಿದೆ' ಎಂದು ಅಪ್ಪಣೆ ಮಾಡಿದರು. 'ಆಗಲಿ' ಎಂದು ಆ ಹಳ್ಳಿಗೆ ಹೋದೆ. ಕುಲಕರ್ಣಿ ಮನೆಯಲ್ಲೇ ಇದ್ದ. ಅವನನ್ನು ಕಂಡು 'ನಿಮ್ಮನ್ನು ಹಾವೇರಿ ಹುಕ್ಕೇರಿಮಠದ ಸ್ವಾಮಿಗಳು ತುರ್ತಾಗಿ ಮಾತನಾಡುವುದಿದೆಯಂತೆ, ಕರೆದುಕೊಂಡು ಬರಲು ತಿಳಿಸಿದ್ದಾರೆ. ಈ ಕೂಡಲೇ ಹೊರಟುಬರಬೇಕು' ಎಂದುಬಿಟ್ಟೆ. ನನ್ನ ಮಾತುಗಳು ಅವನಿಗೆ ಗಾಬರಿಯನ್ನೂ, ಕೋಪವನ್ನೂ ಉಂಟುಮಾಡಿರಬೇಕು. 'ಏನು ಈಗಲೇ ಹೊರಟು ಬರಬೇಕೆಂದು ಸಾಹೇಬರು ಹುಕ್ಕುಂ ಮಾಡಿದಂತೆ ಹೇಳುವೆಯಲ್ಲಾ! ನೀನಾರಪ್ಪಾ' ಎಂದರು. ಆಗ ನಾನೂ ಅವನ ಮಾತಿನಷ್ಟೇ ತೀವ್ರತೆಯಿಂದ 'ನಾನು ಯಾರಾದರೇನು ಶಾನುಭೋಗರೇ, ನೀವು ಈ ಕೂಡಲೇ ಹೊರಟುಬರದಿದ್ದರೆ ಅಮಲದಾರರ ಬುಲಾವಣೆಯೇ ನನ್ನ ಬೆನ್ನ ಹಿಂದೆ ಬಂದೀತು. ನೀವು ಈಗಲೇ ಹೊರಟು ಬರುವುದೊಳ್ಳೆಯದು' ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟು ಬಂದುಬಿಟ್ಟೆ. ಆಗ ಕುಲಕರ್ಣಿ ನಿಜವಾಗಿ ಗಾಬರಿಯಾಗಿರಲು ಸಾಕು. ನಾನು ಹುಕ್ಕೇರಿಮಠಕ್ಕೆ ಬಂದು ಸೇರಿ ಸ್ವಾಮಿಗಳಿಗೆ ವರದಿ ಸಲ್ಲಿಸುವಷ್ಟರಲ್ಲಿಯೇ ಐದು ಹತ್ತು ನಿಮಿಷಗಳಲ್ಲಿ ಅವನು ತನ್ನ ದಫ್ತರು ಸಹಿತ ಬಂದು ಬಿಟ್ಟ. ಈ ಘಟನೆ ಸ್ವಾಮಿಗಳಿಗೆ ಆಶ್ಚರ್ಯವನ್ನುಂಟುಮಾಡಿತು. ಅನೇಕರಿಂದ ಹೇಳಿ ಕಳಿಸಿದರೂ ಬರದ ಈತ ಈಗ ದಫ್ತರ್ ಸಹಿತ ಏದುತ್ತ ಬಂದಿರುವನಲ್ಲಾ ಎಂದು ಸಮಾಧಾನದಿಂದ ಕುಲಕರ್ಣಿಯನ್ನು ಮಾತನಾಡಿಸಿ ಅವನಿಂದ ಆಗಬೇಕಾದ ತಮ್ಮ ಮಠದ ಜಮೀನಿನ ಕೆಲಸ ಮಾಡಿಸಿ ಕಳಿಸಿಕೊಟ್ಟ ಮೇಲೆ 'ಎಲೋ ಚನ್ನಾ, ಬಾಯಿಲ್ಲಿ' ಎಂದು ಕರೆದು, 'ಕುಲಕರ್ಣಿ ಬಹು ಗಾಬರಿಯಿಂದ ಬಂದು ಹೋದನಲ್ಲಾ! ಈ ಪೂರ್ವದಲ್ಲಿ ಎಷ್ಟೇ ಹೇಳಿಕಳಿಸಿದರೂ ಬಂದವನಲ್ಲ. ಈಗ ಹೆದರಿಕೊಂಡು ಬರುವಂತೆ ಏನು ಮಾಡಿದೆ?' ಎಂದರು. ನಾನು ನಡೆದ ವರ್ತಮಾನವನ್ನೆಲ್ಲ ಹೇಳಿದೆ. ಶ್ರೀಗಳು ಬಾಯಿಗೆ ವಸ್ತ್ರ ಮುಚ್ಚಿಕೊಂಡು ನಕ್ಕು 'ಸರಿಯಾಗಿದ್ದೀಯೆ. ಇದ್ದರೆ ನಿನ್ನಂಥ ಮರಿಯಿರಬೇಕು. ಹೋಗಪ್ಪ ಹೋಗು' ಎಂದು ನಗುತ್ತಲೇ

ಕಳಿಸಿದರು. ನಾನು ನನ್ನ ಕೆಲಸಕ್ಕೆ ಹೋದೆ. ಇಂಥ ಅನೇಕ ಪ್ರಸಂಗಗಳು ನಾನು ಮಠದಲ್ಲಿ 7ನೆಯ ತರಗತಿಯ ವಿದ್ಯಾರ್ಥಿಯಾಗಿದ್ದಾಗ ನಡೆದುಹೋದುವು. ಇವೆಲ್ಲದರ ಫಲವಾಗಿ ಶ್ರೀಗಳವರು ನನ್ನಲ್ಲಿ ವಿಶೇಷ ವಾತ್ಸಲ್ಯ ತೋರುತ್ತಲೇ ಬಂದುದೊಂದು ನನ್ನ ಪುಣ್ಯಫಲವೆಂದುಕೊಳ್ಳುತ್ತಿದ್ದೇನೆ.

***ಪಿಟೀಲು ಸದಾಶಿವಯ್ಯ ನನ್ನನ್ನು ಹೊಡೆದದ್ದು***

ಈ ಪೂರ್ವದಲ್ಲಿ ಹೇಳಿದ ಮುಧೋಳದ ಸದಾಶಿವಯ್ಯನೆಂಬ ಗವಾಯಿ ಮೊದಮೊದಲು ಮಠದಲ್ಲಿಯೇ ಬಿಡಾರ ಹೂಡಿ ಸಂಗೀತ ಹಾಡಿಕೊಂಡು ಬಂದ ಪುಡಿಗಾಸಿನಲ್ಲಿ ಜೀವನ ನಿರ್ವಹಣೆ ಮಾಡುತ್ತ ಮಠದ ಕಂತೀಭಿಕ್ಷದ ಪ್ರಸಾದವನ್ನು ಪಟ್ಟಾಗಿ ಬಿಗಿದು ಜೀವಿಸುತ್ತಿದ್ದ. ಎಲ್ಲೆಲ್ಲಿಗೋ ಸರ್ಕೀಟ್‌ಗೂ ಹೋಗುತ್ತಿದ್ದ. ಸರ್ಕೀಟ್ ಮುಗಿದ ಮೇಲೆ ಮಠಕ್ಕೆ ಬಂದು ಇಳಿದುಬಿಡುತ್ತಿದ್ದ. ಶ್ರೀಗಳವರು ಸಂಗೀತಗಾರರಿಗೆ ಮಠದಲ್ಲಿ ಆಶ್ರಯ ಕೊಡುತ್ತಿದ್ದರು. ಶ್ರೀಗಳು ವಿರಾಮವಾಗಿ ಕುಳಿತಾಗ ತಾನಾಗಿಯೇ ಪಿಟೀಲು ಹಿಡಿದುಕೊಂಡೇ ಬಂದು 'ಬುದ್ಧಿ ಒಂದೆರಡು ಹಾಡು ಹಾಡುತ್ತೇನೆ' ಎಂದು ಹೇಳಿ ಒಪ್ಪಿಸಿ ಹಾಡುತ್ತಿದ್ದ. ಕಂಠಮಾಧುರ್ಯವಿಲ್ಲದಿದ್ದರೂ ಏನೋ ಒಂದು ಬಗೆಯಲ್ಲಿ ಶಾಸ್ತ್ರೀಯವಾಗಿಯೇ ಹಾಡುತ್ತಿದ್ದ ಅಂತಾ ಇಟ್ಟುಕೊಳ್ಳಿ. ಹಾಡು ಮುಗಿದ ಮೇಲೆ ಶ್ರೀಗಳು 'ಊಟಗೀಟ ಆಗಿದೆಯೋ' ಎಂದು ಕೇಳುತ್ತಿದ್ದರು. ಆಗಿಲ್ಲವೆಂದರೆ ಹೋಗು ಊಟ ಮಾಡು ಎಂದು ಹೇಳಿಕಳಿಸುತ್ತಿದ್ದರು. ಹೀಗೆ ತನ್ನ ಪಾಡಿನ ಸೇವೆ ಮುಗಿಸಿಕೊಂಡು ಬಹುದಿನ ಮಠದಲ್ಲಿದ್ದ ಆತ ಹೊಸದಾಗಿ ಲಗ್ನವಾಗಿ ಬಿಟ್ಟ. ಲಗ್ನವಾದಾಗ ನನ್ನ ಅಂದಾಜಿನ ಪ್ರಕಾರ ಮೂವತ್ತೆರಡರಿಂದ ಮೂವತ್ತೈದು ವರ್ಷಗಳ ವಯಸ್ಸಿರಬಹುದು.

ಲಗ್ನವಾದ ಮೇಲೆ ಮಠದಲ್ಲಿರಲು ಅವಕಾಶವಿಲ್ಲವಲ್ಲ! ಆಗ ಮಠದ ಮುಂದುಗಡೆಯಲ್ಲಿಯೇ ಇದ್ದ ಸ್ಥಳದಲ್ಲಿ ಒಂದು ಚಿಕ್ಕಮನೆಯಿತ್ತು. ಅದರಲ್ಲಿ ಠಿಕಾಣಿ ಹೂಡಿದ. ಆ ಮನೆ ಅಷ್ಟೊಂದು ಭದ್ರವಿರಲಿಲ್ಲ. ಕಳ್ಳಕಾಕರ ಭಯವಾಯಿತು. ಆಗ ಆತ ರಾತ್ರಿ ಹತ್ತು ಹನ್ನೊಂದು ಘಂಟೆ ಸುಮಾರಿಗೆ ಬೆಲೆಯುಳ್ಳ ತನ್ನ ಸಾಮಾನು, ಸರಂಜಾಮನ್ನು ಮಠದ ಒಂದು ಕೊಠಡಿಯಲ್ಲಿಟ್ಟು ಬೀಗ ಹಾಕಿ ತನ್ನ ಅಭದ್ರ ಮನೆಯಲ್ಲಿ ಮಲಗಿ ಬೆಳಗಿನ ಜಾವ ಪುನಃ ಸಾಮಾನನ್ನು ಒಯ್ದು ತನ್ನ ಮನೆಯಲ್ಲಿಟ್ಟುಕೊಳ್ಳುತ್ತಿದ್ದ. ಬಹುದಿನ ಹೀಗೆಯೇ ಜೀವಿಸುತ್ತಿದ್ದ. ಒಂದು ದಿನ ಹನ್ನೊಂದು ಘಂಟೆಯ ಸಮಯವಾಗಿತ್ತು. ನಾನು ಓದಿ ಒಂದು ಸಲ ಮಠದ ಸುತ್ತಲೂ ಕದ, ವಗೈರೆ ಹಾಕಿದೆಯೋ ಇಲ್ಲವೋ ಎಂಬುದನ್ನು ನೋಡಿ ಮಲಗಬೇಕಾದ ಕರ್ತವ್ಯಭಾರ ಹೊತ್ತವನು. ಬಂದು ನೋಡುವಲ್ಲಿ ಮಹಾದ್ವಾರ ಮುಚ್ಚಿರಲೇ ಇಲ್ಲ. ಕದ ಮುಚ್ಚಿ ಅಗುಳಿಯನ್ನು ಜಡಿದು ಬಂದು ಮಲಗಿಬಿಟ್ಟೆ. ಮಲಗಿದೊಡನೆ ನಿದ್ರೆಯೂ ಬಂತು. ಆ ದಿನ ಈ ಗವಾಯಿ ತನ್ನ ಸಾಮಾನು-ಸರಂಜಾಮನ್ನು ಇನ್ನೂ ಇಟ್ಟಿರಲಿಲ್ಲವಂತೆ. ಅದು ನನಗೆ ಗೊತ್ತಿಲ್ಲ. ಸಾಮಾನು ತೆಗೆದುಕೊಂಡು ಬಂದು ಕದ ಮುಚ್ಚಿ ಅಗುಳಿ ಹಾಕಿರುವುದನ್ನು ಕಂಡು ಹೊರಗೆ ರಾದ್ಧಾಂತ ಪ್ರಾರಂಭಿಸಿ, ಕದ ಬಡಿದು ಕೂಗಾಡಿದ. ನನಗೆ ಎಚ್ಚರವಾಗಿ ಎದ್ದು ಹೋಗಿ ಮಹಾದ್ವಾರ ತೆಗೆದೆ. ನನ್ನನ್ನು ಕಂಡು ಅವನ ಕೋಪ ನೆತ್ತಿಗೇರಿ ಹೋಯಿತು. ಅವನ ಹಿಂದೆ ಅವನ ಹೆಂಡತಿಯೂ ಒಂದು ಟ್ರಂಕು ಹಿಡಿದು ನಿಂತಿದ್ದಳು. ನನ್ನ ಸಮೀಪಕ್ಕೆ ಬಂದು 'ಅಯೋಗ್ಯ, ನಾನು ಇನ್ನೂ ಸಾಮಾನನ್ನೇ ಇಟ್ಟಿಲ್ಲ, ಈಗಾಗಲೇ ಕದ ಹಾಕಿ ಬಿಟ್ಟಿರುವೆಯಾ' ಎಂದು ಘಟೀರನೆ ಕಪೋಲಕ್ಕೆ ಬಿಗಿದುಬಿಟ್ಟ. ಆತನಿಂದ ಈ ಏಟನ್ನು ನಾನು ನಿರೀಕ್ಷಿಸಿಯೇ

ಇದ್ದಿಲ್ಲವಾಗಿ ಹೊಡೆತ ಗುರಿತಪ್ಪದೆ ಬಲವಾಗಿಯೇ ಬಿತ್ತು. ಕಣ್ಣಲ್ಲಿ ಕತ್ತಲು ಕವಿದಂತಾಗಿ ಕಿವಿ ಗುರ್ ಎನ್ನತೊಡಗಿತು. ನನ್ನ ಕೋಪದ ಪಿತ್ತ ಕೆದರಿ ಹೋಯಿತು. 'ರೀ ನಿಮ್ಮನ್ನು ಕೇಳಿ ಅಲ್ಲ ನಾನು ಕದ ಇಕ್ಕುವುದು. ಹುಷಾರ್ ನೀವು ಮೊದಲೇ ಇಟ್ಟುಕೊಳ್ಳಬೇಕಾಗಿತ್ತು. ಹೊತ್ತಾದ್ದರಿಂದ ಕದ ಇಕ್ಕಿ ಅಗುಳಿ ಹಾಕುವುದು ನನ್ನ ಕರ್ತವ್ಯ. ಇಷ್ಟಕ್ಕೆ ನನ್ನನ್ನು ಹೊಡೆದದ್ದೇಕೆ? ಇನ್ನೊಮ್ಮೆ ಹೊಡೀರಿ ನೋಡೋಣ' ಎಂದೆ. ಮತ್ತೊಮ್ಮೆ ಹೊಡೆದೇ ಬಿಟ್ಟ. ನಾನು ಅಳುತ್ತ ಕೊಠಡಿಗೆ ಹೋಗಿ ಮಲಗಿಬಿಟ್ಟೆ. ಬಹುಶಃ ಶ್ರೀಗಳವರಿಗೆ ಈ ಸಮಯದಲ್ಲಿ ನಿದ್ರೆ ಬಂದಿರಬಹುದು. ಬೆಳತನಕ ನಾನು ಕಣ್ಣಿಗೆ ಕಣ್ಣು ಹಚ್ಚಲಿಲ್ಲ. ನಸುಕಿನಲ್ಲಿ ಎಂದಿನಂತೆ ಶ್ರೀಗಳವರನ್ನು ಕನರಳ್ಳಿ ತೋಟದ ಕಡೆಗೆ ಸಂಚಾರಕ್ಕೆ ಕರೆದುಕೊಂಡು ಹೋದೆ. ಆ ದಿನವೆಲ್ಲ ನನಗೆ ಮಾನಸಿಕವಾಗಿ ಬಹಳ ಆಘಾತವಾಗಿ ಹೋಗಿತ್ತು. ರಾತ್ರಿ ನಿದ್ರೆ ಬೇರೆ ಇರಲಿಲ್ಲ. ಇದನ್ನು ಗಮನಿಸಿಯೇ ಏನೋ ಶ್ರೀಗಳು 'ಯಾಕಲೋ ಚೆನ್ನಾ, ಇವತ್ತು ಬಹಳ ಸಪ್ಪಗೆ ಇದ್ದೀಯಲ್ಲಾ! ಮುಖ ಬಹು ಚಿಕ್ಕದು ಮಾಡಿಕೊಂಡಿರಲು ಏನು ಕಾರಣ?' ಎಂದು ಪ್ರಶ್ನಿಸಿದರು. ನನಗೆ ಆದ ದುಃಖ ಉಮ್ಮಳಿಸಿ ಬಂದು ಅಳುವುದಕ್ಕೆ ಪ್ರಾರಂಭಿಸಿದೆ. 'ಏನಲೇ ಏನಾಯಿತು ಹೇಳೋ! ಯಾಕೆ ಅಳ್ತೀಯೆ ಸುಮ್ಮನಾಗು; ಹೇಳು ಏನಾಯಿತು' ಎಂದು ಅಂತಃಕರಣವೇ ತುಂಬಿಬಂದ ಸಾಂತ್ವನವಾಣಿಯಿಂದ ಕೇಳಿದರು. ಆಗ ನಡೆದ ವಿಚಾರವನ್ನೆಲ್ಲ ತಿಳಿಸಿಬಿಟ್ಟೆ. 'ಏನು ನಿನ್ನನ್ನು ಆ ಗವಾಯಿ ಹೊಡೆದುಬಿಟ್ಟನೇ? ಏಕಂತೆ! ಮಠ ಅವರಪ್ಪನ ಮನೆಯಂತೇನು? ಸಲಿಗೆ ಕೊಟ್ಟ....ತಲೆಗೆ ಏರಿತ್ತಂತೆ. ನಡಿ ನಡಿ ಸಮಾಧಾನ ಮಾಡಿಕೋ ಅಳಬೇಡ' ವೆಂದು ಹೇಳುವಾಗಿನ ಅವರ ಆ ವಾಣಿಯಲ್ಲಿ ಕಾರುಣ್ಯವೇ ಕೋಡಿ ಮೀರಿ ಹರಿದುಬರುವಂತೆ ನನಗೆ ಭಾಸವಾಯಿತು. ಚಿದಾರಣ್ಯಕಾರ್ಯ ಮುಗಿಸಿ ಮಠಕ್ಕೆ ಆ ದಿನ ಸ್ವಲ್ಪ ವೇಗವಾಗಿಯೇ ಬಂದು ತಮ್ಮ ಕೊಠಡಿಯಲ್ಲಿ ಮಂಚದ ಮೇಲೆ ಕುಳಿತು 'ಏ ಬಸಯ್ಯಾ, ಬಾಯಿಲ್ಲಿ, ಆ ಸದಾಶಿವಯ್ಯನನ್ನು ಕರೆ' ಎಂದು ಮಠದ ಸೆಕ್ರೆಟರಿಗೆ ಹೇಳಿದರು. ಅವರು ಸದಾಶಿವಯ್ಯನನ್ನು ಕರೆತಂದರು. ಅವನು ಬಂದು ಸ್ವಾಮಿಗಳಿಗೆ ನಮಸ್ಕರಿಸಿ ಪಕ್ಕದಲ್ಲಿಯೇ ನಿಂತದ್ದ ನನ್ನನ್ನು ಕಡೆ ನೋಡಿ, ನಾಲಿಗೆ ಒಣಗಿದಂತವನಾಗಿ ನಡುಗತೊಡಗಿದ. ಶ್ರೀಗಳು 'ಏ ಗವಾಯಿ, ರಾತ್ರಿ ಚೆನ್ನನನ್ನು ಏಕೆ ಹೊಡೆದೆ?' ಎಂದೇಬಿಟ್ಟರು. ಸದಾಶಿವಯ್ಯನಿಂದ ಮಾತು ಹೊರಡದೆ 'ಬುದ್ಧಿ....ನಾ.....ಸಾಮಾನು' ಹೀಗೆನ್ನುತ್ತಿದ್ದಂತೆಯೇ ಶ್ರೀಗಳು 'ನೀನು ಇಲ್ಲಿಂದ ಹೊರಡು. ಬೇರೆ ಎಲ್ಲಿಯಾದರೂ ಮನೆಗಿನೆ ನೋಡಿಕೊಂಡುಬಿಡು. ಮಠ ನಿಮ್ಮಪ್ಪನದೇನು? ರಾತ್ರಿ ಮಠದ ಸಾಮಾನು ಕಳುವಾದರೆ ಕೊಡುತ್ತೀಯಾ ಮಗನೇ. ನಿನ್ನ ಸಾಮಾನು ಕಾಯುವುದಕ್ಕೆ ಮಠ ಇದೆಯೋ? ಏನೋ ಹೋಗಲಿ ಕಲಾವಂತ ಎಂದು ಸುಮ್ಮನೆ ಇದ್ದುದನ್ನು ತಪ್ಪಾಗಿ ತಿಳಿದುಕೊಂಡು ಮಠದ ಸೇವೆ ಮಾಡುವ ಆ ಚಿಕ್ಕ ಹುಡುಗನ ಕೆನ್ನೆ ಉಬ್ಬುವಂತೆ ಹೊಡೆಯುವುದೇ? ನೀನು ಸಾಮಾನು ತಂದು ಇಡುವುದನ್ನು ಮಠದ ಸಿಬ್ಬಂದಿಯವರು ಕಾಯ್ದು ಕುಳಿತು ನೀನು ತಂದು ಇಟ್ಟ ಮೇಲೆ ಕದ ಇಕ್ಕಬೇಕೇನು? ಗೃಹಸ್ಥರ ವ್ಯವಹಾರಕ್ಕೂ ಮಠಕ್ಕೂ ಸಂಬಂಧವಿಲ್ಲ. ಇಲ್ಲಿ ಇನ್ನು ಮಾತಾಡಬೇಡ. ಈಗಲೇ ಗುಡಿಚಾಪೆ ಕಟ್ಟು' ಎಂದುಬಿಟ್ಟರು. ಸದಾಶಿವಯ್ಯ ಹೆದರಿ 'ಇಲ್ಲ ಬುದ್ಧಿ, ಇನ್ನು ಕೆಲವು ದಿನ ಇಲ್ಲಿರುತ್ತೇನೆ. ಊರಲ್ಲಿ ಮನೆಗಿನೆ ವ್ಯವಸ್ಥೆ ಮಾಡಿಕೊಂಡು ಅಲ್ಲಿಗೆ ಹೋಗುತ್ತೇನೆ' ಹಾಗೆ ಹೀಗೆ ದಮ್ಮಯ್ಯ ಗುಡ್ಡೆಹಾಕಿ ಕೆಲವು ಕಾಲ ಇದ್ದು ಅನಂತರ ತನ್ನ ಊರಿಗೆ ಹೊರಟುಹೋದ. ಶ್ರೀಗಳವರು ನನ್ನನ್ನು ಸಾಂತ್ವನಗೊಳಿಸಿದರು.

## ಅನಾಚಾರಿ ನೀರು ಸುರುವು, ಮತ್ತೆ ಸ್ನಾನಮಾಡಿ ನೀರು ತಾ

ಹಾವೇರಿ ಪಟ್ಟಣದಲ್ಲಿ ನೂರಾರು ಬಾವಿಗಳಿವೆ. ಆಗ ಬಾವಿಯ ನೀರೇ ಹಾವೇರಿಗೆ ಆಶ್ರಯ. ಆದರೆ ಊರಿನ ಎಲ್ಲ ಬಾವಿಗಳ ನೀರು ಅತ್ಯಂತ ಸೌಳು. ನಾನು ನಾನಾ ದೇಶದ ನಾನಾ ಬಗೆಯ ನೀರು ಕಂಡಿದ್ದೇನೆ. ಆದರೆ ಹಾವೇರಿಯಂಥ ಸೌಳು ನೀರನ್ನು ಎಲ್ಲಿಯೂ ಕಂಡಿಲ್ಲ. ಈ ಸೌಳುನೀರಿನ ಪ್ರಯೋಜನವಿಲ್ಲವೆನ್ನಬೇಡಿ. ಇದೊಂದು ಭಾರೀ ಉದ್ಯಮವೊಂದಕ್ಕೆ ಅವಶ್ಯವಾದ ಕಾರಣ ಅಂಥ ನೀರಿಗೂ ಹಾವೇರಿಯಲ್ಲಿ ಪುರಸ್ಕಾರ. ಆ ಉದ್ಯಮವೆಂದರೆ ಮಲೆನಾಡಿನಿಂದ ಯಾಲಕ್ಕಿಯನ್ನು ತರಿಸಿ, ಇಲ್ಲಿ ಈ ಸೌಳು ನೀರಿನಿಂದ ತೊಳೆದು ಗಂಧಕದ ಹೊಗೆಕೊಟ್ಟು ಒಣಗಿಸಿ ದೇಶವಿದೇಶಗಳಿಗೆ ಕಳಿಸುವ ಉದ್ಯಮ. ಹಾವೇರಿಯ ಯಾಲಕ್ಕಿ ವ್ಯಾಪಾರ ಭಾರತದಲ್ಲೇ ಹೆಸರುವಾಸಿ. ಈಗ ಈ ಉದ್ಯಮವು ಮೂಲೆಗುಂಪಾಗಿ ಹೋಗಿದೆ ಎನ್ನಿ. ಇದೇನೇ ಇರಲಿ. ಸೌಳುನೀರನ್ನೇ ಆ ಊರಿನವರು ಕುಡಿಯುತ್ತಿದ್ದರೇ? ಇಲ್ಲ ಇಲ್ಲ. ಎರಡು ಪ್ರಸಿದ್ಧ ಸಿಹಿನೀರಿನ ಬಾವಿಗಳಿದ್ದವು. ಒಂದು ಪುರದ ಬಾವಿ, ಇನ್ನೊಂದು ಹೊಂಡದ ಮಠದ ಬಾವಿ. ನಾ ಕಂಡಂತೆ ಹಾವೇರಿಯ ಜನವೆಲ್ಲ ಈ ಎರಡು ಬಾವಿಗಳಿಂದ ಕುಡಿಯುವ ನೀರನ್ನು ತಂದುಕೊಂಡು ಉಳಿದಂತೆಲ್ಲ ಸೌಳುನೀರನ್ನೇ ಉಪಯೋಗಿಸುತ್ತಿದ್ದರು. ಇನ್ನೊಂದು ಬಾವಿ ದೂರದಲ್ಲಿ ಅಥಣಿ ಸ್ವಾಮಿಗಳ ಗದ್ದುಗೆ ಇರುವಲ್ಲಿ ಇತ್ತು. ಅದು ಊರಿಗೆ ಬಹು ದೂರ. ಕೆಲವರು ಅಲ್ಲಿಂದಲೂ ತರುತ್ತಿದ್ದುದುಂಟು.

ನಮ್ಮ ಹುಕ್ಕೇರಿ ಮಠದ ಉಪಯೋಗಕ್ಕೆ, ಶ್ರೀಗಳವರ ಉಪಯೋಗಕ್ಕೆ ಪುರದ ಬಾವಿಯ ನೀರೇ ಗತಿ. ಒಮ್ಮೆ ಶ್ರೀಗಳವರ ಶಿವಪೂಜಾಮರಿಗಳು ಊರಿಗೆ ಹೋದ ಸಮಯದಲ್ಲಿ ತಾತ್ಪೂರ್ತಿಕವಾಗಿ ಶ್ರೀಗಳವರ ಉಪಯೋಗಕ್ಕೆ ಪುರದ ಬಾವಿಯಿಂದ ನೀರು ತರುವವರು ಯಾರೂ ಇದ್ದಿಲ್ಲವಾಗಿ ನಾನು ನೀರು ತರಲು ಹೋಗಲೇಬೇಕಾಗಿತ್ತು. ಸ್ನಾನ ಮಾಡಿ ಬರಿ ಮೈಮೇಲೆ ಒಂದು ವಸ್ತ್ರ ಹೊದ್ದು, ಕೊಡದ ಮೇಲೆ ವಸ್ತ್ರವೊಂದನ್ನು ಮುಚ್ಚಿಕೊಂಡು ನೀರು ಸೇದಿಕೊಂಡು ಹೊತ್ತು ತಂದೆ. ಶ್ರೀಗಳವರು ಮಠದ ಆವರಣದಲ್ಲಿದ್ದ ಬಿಲ್ವವೃಕ್ಷದ ಕಟ್ಟೆಯ ಮೇಲೆ ಕುಳಿತಿದ್ದರು. ಈಗ ಹುಕ್ಕೇರಿ ಮಠ ಆಧುನಿಕ ಕಟ್ಟಡಗಳಿಂದ ರೂಪಾಂತರಗೊಂಡಿದೆ. ಮೊದಲಿನ ಮೇಲುಮುದ್ದೆಯ ಹಳೆಯ ಮಠವಾಗಲಿ, ಅದರ ಮುಂದಿನ ಪ್ರಶಾಂತವಾದ ಬಿಲ್ವವೃಕ್ಷದ ಕಟ್ಟೆಯಾಗಲಿ, ಮೊದಲಿನ ಮಹಾದ್ವಾರವಾಗಲಿ ಇಲ್ಲ. 1932-33ರ ಸುಮಾರಿಗೆ ಶ್ರೀಗಳವರು ತಾವೇ ಕಟ್ಟಿಸಿದ ಹೊಸ ಕಲ್ಲುಕಟ್ಟಡಕ್ಕೆ ಬಂದುಬಿಟ್ಟರು. ಕೆಲವು ಕಾಲ ಹಳೆಮಠ ಇದ್ದೇ ಇತ್ತು. ಇತ್ತೀಚೆಗೆ ಹಳೆಮಠವನ್ನು ಕೆಡವಿ ಹೊಸ ಕಟ್ಟಡ ನಿರ್ಮಿಸಿದ್ದಾರೆ. ಶ್ರೀಗಳವರು ಮಡಿಹುಡಿ ವಿಚಾರದಲ್ಲಿ ತೀರಾ ಕಟ್ಟುನಿಟ್ಟು. ಅವರ ಪಕ್ಕಾಮಡಿ ವಿರಕ್ತ ಪ್ರಪಂಚದಲ್ಲೆಲ್ಲ ಪ್ರಸಿದ್ಧಿ. ನಾನು ನೀರು ತರುವಾಗ ನನ್ನ ಆಚಾರ ವಿಚಾರವನ್ನು ಪರಿಶೀಲಿಸುತ್ತಿದ್ದರು. ನಾನು ನೀರು ತರುವಾಗ ಮಠದ ಆವರಣದಲ್ಲಿದ್ದ ಒಂದು ಒಡಕುಹಂಚನ್ನು ತುಳಿದುದನ್ನು ಶ್ರೀಗಳವರು ಕಂಡು 'ಏಯ್ ಚನ್ನಾ, ಸುರುವು ನೀರನ್ನು; ಅನಾಚಾರಿ! ಹೋಗು ಇನ್ನೊಮ್ಮೆ ಸ್ನಾನ ಮಾಡಿ ಮಡಿಯುಟ್ಟು ನೀರು ತೆಗೆದುಕೊಂಡು ಬಾ. ನಿನ್ನವೇನು ಕಣ್ಣೋ ಅಥವಾ ಪರಟೆಯ ತೂತೋ. ಮಡಿಯಲ್ಲಿ ಹಂಚು ತುಳಿದುಬಿಟ್ಟೆ. ಹೋಗು, ನೀರು ಚಲ್ಲು ಮೊದಲು. ಕಣ್ಣಲ್ಲಿ ಕಣ್ಣಿಟ್ಟು ನೆಲ ನೋಡಿ ನೀರು ತರಬೇಕು. ಅನಾಚಾರಿ' ಎಂದೇಬಿಟ್ಟರು. ನನಗೆ ನಾಚಿಕೆಯಾಯಿತು. ನೀರು ಚಲ್ಲಿ, ಶ್ರೀಗಳವರ ಮನಸ್ಸನ್ನು ಉಳಿದ ವಿಚಾರಗಳಲ್ಲಿ ಗೆದ್ದಿದ್ದೆನಾದರೂ ಅವರ ಮಡಿಹುಡಿ

ವಿಚಾರದಲ್ಲಿ ಸಿಕ್ಕುಬಿದ್ದೆನಲ್ಲಾ! ಎಂದುಕೊಂಡು ಪುನಃ ಬಾವಿಕಟ್ಟೆಗೆ ಹೋಗಿ, ಸ್ನಾನ ಮಾಡಿ ಬೇರೆ ಮಡಿ ಉಟ್ಟುಕೊಂಡು ಹಸಿಯ ಟವೆಲ್‌ನ್ನು ಮೈಮೇಲೆ ಹೊದ್ದುಕೊಂಡು ಅವರು ಇನ್ನೂ ಬಿಲ್ವವೃಕ್ಷದ ತಳದಲ್ಲಿ ಕುಳಿತಿರುವಂತೆಯೇ ಅವರೆದುರಿಗೆ ತಲೆ ಬಗ್ಗಿಸಿ ನೆಲ ನೋಡಿಕೊಂಡು ಹೋದೆ. ನೀರು ತಂದೆ. ನಾನಲ್ಲದೆ ಇನ್ನಾರಾದರೂ ಆಗಿದ್ದರೆ ಬಹುಶಃ ಬೆತ್ತದ ಏಟು ಬೀಳುತ್ತಿದ್ದವೋ ಏನೋ ಎಂದು ನನಗೆ ನಾನೇ ಯೋಚಿಸಿಕೊಂಡೆ.

## ನನ್ನ ಮೇಲೆ ಪ್ರಭಾವ ಬೀರಿದ ಸನ್ನಿವೇಶ

ಹಾವೇರಿಯಲ್ಲಿದ್ದಾಗ ನನ್ನ ಮೇಲೆ ಪ್ರಭಾವ ಬೀರಿದ ನಾಟಕದ ಸನ್ನಿವೇಶಗಳ ಬಗ್ಗೆ ಈ ಪೂರ್ವದಲ್ಲಿಯೇ ಹೇಳಿದ್ದೇನೆ. ಅಲ್ಲಿ ಅತ್ಯಂತ ಪ್ರಭಾವ ಬೀರಿದ ನಾಟಕ ಕಂಪನಿಯೆಂದರೆ ಹಲಗೇರಿ ಜಟ್ಟೆಪ್ಪನ ಕಂಪನಿ ಮತ್ತು ಬಸವರಾಜ ಮನ್ಸೂರರ ಕಂಪನಿ. ಇನ್ನೊಂದು ಮಹತ್ವದ ಸನ್ನಿವೇಶವೆಂದರೆ ಬಿ. ಶಿವಮೂರ್ತಿ ಶಾಸ್ತ್ರಿಗಳ ಕೀರ್ತನ ಕಾರ್ಯಕ್ರಮ. 1933ರಲ್ಲಿ ಬಿ. ಶಿವ ಮೂರ್ತಿ ಶಾಸ್ತ್ರಿಗಳು ಕೀರ್ತನ ಮಾಡುತ್ತ ಮಾಡುತ್ತ ಹಾವೇರಿಗೂ ವಾದ್ಯಗಾರರ ಸಹಿತ ಬಂದುಬಿಟ್ಟರು. ದೇವೀ ಹೊಸೂರು ಸೆಟ್ಟರ ಪ್ರಸಿದ್ಧ ಕಟ್ಟಡದ ಎದುರಿಗೆ ಬೀದಿಯಲ್ಲೇ ಅವರ ಕೀರ್ತನದ ಕಾರ್ಯಕ್ರಮ ಏರ್ಪಟ್ಟಿತ್ತು. ಆಗ ಅವರ ವಾಚಾಳಿತನ, ಹೇಳುವ ರೀತಿ, ನಗಿಸುವ ಪ್ರಸಂಗಗಳು ಎಲ್ಲ ಕಡೆಗೂ ಪ್ರಸಿದ್ಧವಾಗಿದ್ದವು. ಅಲ್ಲಿ ಅವರು ರಾಜಶೇಖರ ವಿಳಾಸದ ಕಥೆ ಮಾಡಿದರು. ಕಥೆಯುದ್ದಕ್ಕೂ ಅವರು ಜನಗಳನ್ನು ನಗೆಗಡಲಲ್ಲಿ ಮುಳುಗಿಸಿಬಿಟ್ಟರು. ಆಗ ನಮ್ಮ ಪಠ್ಯಪುಸ್ತಕದಲ್ಲಿ ರಾಜಶೇಖರ ವಿಳಾಸದ ತಿರುಕೊಳವಿನಾಚಿ ಪ್ರಲಾಪ ಎಂಬ ಪದ್ಯಭಾಗವಿತ್ತು. ಆ ಪದ್ಯಗಳೆಲ್ಲ ನನಗೂ ಬಾಯಿಪಾಠಾಗಿದ್ದವು. ಶಾಸ್ತ್ರಿಗಳು ತಿರುಕೊಳವಿನಾಚಿಯ ದುಃಖ ಪ್ರಸಂಗವನ್ನು ಬಹು ಸ್ವಾರಸ್ಯವಾಗಿ ಹೆಂಗಸರೆಲ್ಲ ಅಳುವ ರೀತಿಯಲ್ಲಿ ಪ್ರತಿಪಾದಿಸುತ್ತಿದ್ದರು. ಆದರೆ ಅವರು ಹೇಳುವ ವಿಷಯಗಳು ನಮ್ಮ ಪುಸ್ತಕದೊಳಗಿನವೇ ಎನ್ನಿಸಿತು. ಅವರು ಆ ವಿಷಯಗಳನ್ನು ಹೇಳಿ ಅರ್ಥ ವಿವರಣೆ ಮಾಡುವುದನ್ನು ಕಂಡು ನಾನೂ ನಮ್ಮ ಪಠ್ಯಪುಸ್ತಕದೊಳಗಿನ ಆ ಪದ್ಯಗಳನ್ನು ಹೇಳಿ ಅವರ ಅನುಕರಣೆ ಮಾಡತೊಡಗಿದುದೇ ಮುಂದೆ ನಾನು 1942ನೇ ಇಸ್ವಿಯಿಂದ ಕಥೆ ಮಾಡಲು ಪ್ರಾರಂಭಿಸುವುದಕ್ಕೆ ಉದ್ಬೋದಕ ಸಾಮಗ್ರಿಯಾಯಿತೆಂದು ಹೇಳಲಡ್ಡಿಯಿಲ್ಲ. ಶಬರಶಂಕರ ವಿಳಾಸದೊಳಗಿನ ಇಪ್ಪತ್ತು ಮೂವತ್ತು ಪದ್ಯಗಳನ್ನು ಆರನೇ ತರಗತಿಯಲ್ಲಿ ಓದಿ ಬಾಯಿಪಾಠ ಮಾಡಿದ್ದೆ. ಆ ಪದ್ಯಗಳನ್ನೂ ಇದೇ ರೀತಿಯಲ್ಲಿ ಕೀರ್ತನ ಧಾಟಿಯಲ್ಲಿ ಅನುಕರಣ ಮಾಡಿ ನಮ್ಮ ಮಿತ್ರರನ್ನು ನಗಿಸುವ ಪ್ರಸಂಗಗಳಿಗೆ ಉಪಯೋಗಿಸತೊಡಗಿದೆ. ಎಲ್ಲರೂ ನಗುತ್ತಿದ್ದರು. ನನ್ನ ಉತ್ಸಾಹ ಅಧಿಕಗೊಂಡಿತು. ನನ್ನ ಈ ಕೀರ್ತನ ಧಾಟಿಯ ಅನುಕರಣ ಮೊದಮೊದಲು ಜನಗಳನ್ನು ನಗಿಸುವ ವಿನೋದ ಪ್ರಸಂಗಕ್ಕೆ ಸೀಮಿತವಾಗಿತ್ತು. ಮುಂದೆ ಈ ವಿನೋದದ ಪ್ರಸಂಗವೇ ವ್ಯವಸ್ಥಾಬದ್ಧ ಕೀರ್ತನ ಪ್ರಸಂಗವಾಗಿಬಿಟ್ಟಿತು. ನಾನೂ ಕೂಡ ದೊಡ್ಡ ಅಂಗಡಿಯೊಂದರ ಹಲ ಕೆಲವು ಕೀರ್ತನದ ಸರಕನ್ನು ಕೊಂಡುತಂದು ಮುಂದೆ ಒಂದು ಚಿಲ್ಲರೆ ಅಂಗಡಿಯಿಟ್ಟು ವ್ಯಾಪಾರ ಗಿಟ್ಟಿಸಿಯೇ ಬಿಟ್ಟೆ ಅನ್ನಿ. ಹೇಗೂ ನಾಟಕ ನೋಡಿ ನೋಡಿ ಉಂಟಾಗಿದ್ದ ಸಂಗೀತದ ಸಂಸ್ಕಾರದಿಂದ ಪಠ್ಯಪುಸ್ತಕದ ಈ ಪದ್ಯಗಳಿಗೇ ನಾಟಕದ ರಾಗಗಳನ್ನು ಹಾಕಿ ಹೇಳತೊಡಗಿದೆ. ತಾಳಗೀಳಗಳ ಪರಿವೆಯಿಲ್ಲದೆ ಬಾಯಿಗೆ ಬಂದಂತೆ ಹಾಡತೊಡಗಿದೆ. ಹೀಗೆ ಪ್ರಾರಂಭವಾದ ನನ್ನ ಕೀರ್ತನ ಕಲೆಯನ್ನು ಅಭಿವೃದ್ಧಿಪಡಿಸಿಕೊಂಡು ಮುಂದೆ ಪ್ರಖ್ಯಾತ ವಿದ್ವಾಂಸರ ಸಮೂಹದಲ್ಲಿಯೂ

ಮಾಡಿದ್ದೊಂದು ಬೇರೆ ಇತಿಹಾಸವೇ ಆಗಿದೆ. ಈ ವಿಷಯವನ್ನೂ ಮುಂದೆ ಆಯಾ ಪ್ರಸಂಗಗಳಲ್ಲಿ ವಿವರಿಸುತ್ತೇನೆ.

### *ನೆನಪಿನಲ್ಲುಳಿದ ಒಂದು ಕಹಿಪ್ರಸಂಗ*

ದಾರಿದ್ರ್ಯ ಮನುಷ್ಯನ ಪ್ರಗತಿಗೆ ಒಂದು ದಾಟಲಾಗದ ಕಣಿವೆ. ಆದರೂ ಸಾಹಸಿಗಳಾದ ಕೆಲವರು ಪ್ರಯತ್ನದಿಂದ ಕಣಿವೆಯನ್ನೇರಿ ಹೋಗಿ ಗುರಿ ತಲುಪಲು ಶಕ್ಯವಿದೆ. ದರಿದ್ರನೂ ಬುದ್ಧಿಹೀನನೂ ಆದವನ ಕಾರ್ಯಗಳು ಬೇಸಿಗೆಯ ಕಾಲುಹೊಳೆಗಳಂತೆ ಬತ್ತಿ ಹೋಗುತ್ತವೆಂಬುದು ಪಂಚತಂತ್ರದ ಒಂದು ಮಾತು. ನನಗೆ ಸ್ವಲ್ಪಮಟ್ಟಿಗೆ ಪ್ರತಿಭೆಯಿದ್ದರೂ ಪ್ರತಿಕೂಲ ಸನ್ನಿವೇಶಗಳು ನನ್ನ ದಾರಿದ್ರ್ಯದ ಕಾರಣವಾಗಿ ನನ್ನನ್ನು ಹಿಂದಕ್ಕೆಳೆಯುತ್ತಿದ್ದವು. ಹಾಗೆಂದು ನಾನೇನೂ ಕೈಕಟ್ಟಿ ಕೂಡುವವನೇನೂ ಆಗಿರಲಿಲ್ಲ. ಆದರೆ ಸಕಾಲದಲ್ಲಿ ಮುಂದುವರೆಯುವಲ್ಲಿ ದಾರಿಗಳು ಸಿಗಲಿಲ್ಲ. ನನಗೇ ಹಾವೇರಿಯಲ್ಲಿ ದೊಡ್ಡ ಶ್ರೀಮಂತರ ಮನೆಯಲ್ಲಿಯೇ ಸ್ವಾಮಿಗಳು ಊಟಮಾಡಿಕೊಂಡು ಬರಲು ಏರ್ಪಾಡು ಮಾಡಿದ್ದರು. ಆ ಶ್ರೀಮಂತರೂ ನನ್ನನ್ನೂ ಪ್ರೀತಿಯಿಂದ ಕಂಡು ಪ್ರಸಾದ ಕೊಟ್ಟು ಕಳಿಸುತ್ತಿದರು. ಅವರು ಬಹಳ ಆಚಾರನಿಷ್ಠರು, ಶಿವಾನುಭವಿಗಳು, ದೊಡ್ಡ ವ್ಯಾಪಾರಿಗಳು. ಪ್ರೀತಿಯಿಂದ ಪ್ರಸಾದ ಕೊಡುತ್ತಿದ್ದುದು ನನಗೂ ತೃಪ್ತಿ, ಒಂದು ದಿನ ಒಂದು ಅಚಾತುರ್ಯ ನಡೆದುಹೋಯಿತು. ಅನ್ನ ಸಾರು ನೀಡಿದರು. ಬಹುಶಃ ಸಾರು ರಾತ್ರಿಯದಾಗಿರಬಹುದು, ಆದರೂ ಆ ಬಗ್ಗೆ ನನಗೆ ಯಾವ ಬಾಧಕವೂ ಇರಲಿಲ್ಲ. ರಾತ್ರಿ ಸಾರನ್ನು ಊಟ ಮಾಡಿದ್ದುಂಟು. ಅದೆಲ್ಲ ಸರಿ. ಸಾರಿನಲ್ಲಿ ಒಂದು ಜೊಂಡಿಗಾ (ಜಿರಲೆ) ಇತ್ತು. ಅನ್ನದೊಡನೆ ಕಲಸುವಾಗ ಜೊಂಡಿಗಾ ಕಣ್ಣಿಗೆ ಬಿತ್ತು. ಈಗ ಮಾಡುವುದೇನು? ಅನ್ನವನ್ನು ಬಿಟ್ಟು ಎದ್ದುಬಿಡೋಣವೆಂದರೆ ಕೈ ತೊಳೆದ ತಟ್ಟೆಯನ್ನು ಅವರ ಬಚ್ಚಲಲ್ಲೇ ಚೆಲ್ಲಬೇಕಾಗಿತ್ತು. ಅವರ ಕಣ್ಣಿಗೆ ಬಿದ್ದೇ ಬೀಳುತ್ತದೆ. 'ಅನ್ನವನ್ನೇಕೆ ಚೆಲ್ಲಿದೆ?' ಎಂದರೆ ಹೇಳುವುದೇನು. ಜೊಂಡಿಗಾ ಬಿದ್ದಿದೆ ಎಂದು ಹೇಳುವುದು ಹೇಗೆ? ಅವರೆಷ್ಟು ನೊಂದುಕೊಳ್ಳುತ್ತಾರೆ. ಮನೆಯ ಶರಣರಾದ ಯಜಮಾನರಿಗೆ ಗೊತ್ತಾದರೆ ಸಂಪನ್ನ ಮಹಿಳೆ ಯಾದ ಹೆಂಡತಿಗೆ ಏನೆಂದಾರು? ಈಗ ಮಾಡುವುದೇನು? ಸಮಸ್ಯೆಯನ್ನು ತೂಗಿ ನೋಡಿ, ಅಳೆದು ಸುರುವಿ ಕೊನೆಗೆ ದೇವರು ಮಾಡಿದ್ದಾಗಲಿ ಕಣ್ಣುಮುಚ್ಚಿ ಊಟ ಮಾಡಿಬಿಡುವುದೇ ಲೇಸೆಂದು ಬಗೆದು ಆ ಹುಳವನ್ನು ತಟ್ಟೆಯ ಬುಡಕ್ಕೆ ಹಾಕಿ ಮುಟು ಮುಟು ಅನ್ನವನ್ನು ಯಾಂತ್ರಿಕವಾಗಿ ನುಂಗಿ ತಟ್ಟೆಯನ್ನು ತೊಳೆಯುವುದೇ ತಡ ಅಬ್ಬಳಿಕೆ ಬರತೊಡಗಿತು. ಹಾಗೇ ಹಿತ್ತಿಲಿಗೆ ಹೋದವನಂತೆ ನಟಿಸಿ, ಅಲ್ಲಿ ವಾಂತಿಮಾಡಿಕೊಂಡು ಅದರ ಮೇಲೆ ಮಣ್ಣು ಮುಚ್ಚಿಬಿಟ್ಟೆ. ತಾಯಿಗೆ ಸಂಶಯಬಂದು ಹಿತ್ತಿಲಿಗೆ ಬಂದು ನೋಡಿಯೇಬಿಟ್ಟರು. ಅವರು ಪಾಪ! ಗಾಬರಿಯಿಂದ 'ಏಕಪ್ಪಾ ವಾಂತಿ ಮಾಡಿಕೊಂಡೆ?' ಎಂದು ಪ್ರಶ್ನಿಸಿಬಿಟ್ಟರು. ನಾನು ಎಲ್ಲವನ್ನೂ ಮುಚ್ಚಿಹಾಕಿ ನಿನ್ನೆ ರಾತ್ರಿಯಿಂದ ಸ್ವಲ್ಪ ಜ್ವರ, ತಲೆನೋವೆಂದು ಸುಳ್ಳುಹೊಡೆದು ಮಠಕ್ಕೆ ಬಂದುಬಿಟ್ಟೆ. ಆದರೂ ಹೊಟ್ಟೆಯಲ್ಲಿ ಬೇಡವಾದ ಒಂದು ವಸ್ತುವನ್ನು ನುಂಗಿದಂತೆ ಮಾನಸಿಕ ಸಂಶಯ ತುಂಬಿ ಹೊಟ್ಟೆಯಲ್ಲಿನ ಅನ್ನವೆಲ್ಲ ಹೊರಗೆ ಬಂದರೂ ಏನೋ ಹೊಲಸು ವಸ್ತು ಹೊಟ್ಟೆಗೆ ಇಳಿದುಹೋಯಿತಲ್ಲಾ! ಎಂಬ ಜಿಗುಪ್ಸೆ ಕಾಡತೊಡಗಿ ಸ್ವಾಸ್ಥ್ಯವೆಲ್ಲ ಹಾಳಾಗಿ ನಮ್ಮ 7ನೆಯ ತರಗತಿ ಪುಸ್ತಕದಲ್ಲಿ ಬಂದ 'ದಮಕನೆಂಬ ನರಿಯ ನುಡಿಗಳು' ಎಂಬ ಪಾಠದಲ್ಲಿನ 'ಪರಾನ್ನವನ್ನು ಭುಂಜಿಸುವವನೂ, ಪರಗೃಹವಾಸ ಮಾಡುವವನೂ, ಸದಾ ದೇಶಸಂಚಾರದಲ್ಲಿಯೇ ಆಯುಷ್ಯ ನೂಕುವವನೂ ಬದುಕಿದ್ದರೂ ಸತ್ತವನಿಗೆ ಸಮಾನ' ಎಂಬ ಮಾತು ಪದೇಪದೇ

ಜ್ಞಾಪಕಕ್ಕೆ ಬರತೊಡಗಿತು. 'ದೇವರೇ ನನ್ನನ್ನು ಈ ದಾರಿದ್ರ್ಯದ ಬೇಗೆಯಿಂದ ಹೊರಗೆತ್ತಿ ಹಾಕಿ, ಸ್ವಯಾರ್ಜಿತದಿಂದ ಗೌರವವಾಗಿ ಎರಡು ಹೊತ್ತು ಊಟ ಮಾಡುವವನನ್ನಾಗಿ ಎಂದಿಗೆ ರೂಪಿಸುತ್ತೀಯಾ' ಎಂದು ಕಣ್ಣೀರು ತಂದುಕೊಂಡು, ಈ ವಿಷಯವನ್ನು ಯಾರಿಗೂ ಹೇಳದೆ ಮೈಯಲ್ಲಿ ಚೆನ್ನಾಗಿಲ್ಲವೆಂದು ಶಾಲೆಗೆ ಹೋಗದೆ, ಕೊತಡಿಯಲ್ಲಿ ಸುಮ್ಮನೆ ಮಲಗಿಬಿಟ್ಟೆ.

ನಾನು ಊಟ ಮಾಡುವ ಮನೆಯವರ ಬಗ್ಗೆ ನನಗೆ ಸ್ವಲ್ಪವೂ ಆಗ್ರಹವುಂಟಾಗಲಿಲ್ಲ. ಅವರು ಸಾತ್ವಿಕರು, ಪುಣ್ಯಶಾಲಿಗಳು. ಅಂಥವರು ನಮಗೆ ಸಕಾಲದಲ್ಲಿ ಊಟ ಉಪಚಾರ ಮಾಡಿಸಿ ಮುಂದುವರೆಯಲು ಮಾರ್ಗ ತೋರಿದವರು, ತೋರಿಸುವರು ಕೂಡ. ಇಂಥ ಅಚಾತುರ್ಯಗಳು ಎಲ್ಲರ ಮನೆಯಲ್ಲೂ ಆಗುವುದುಂಟು. ಅವರಿಗೆ ಆ ಹುಳು ಕಣ್ಣಿಗೆ ಕಂಡಿದ್ದರೆ ಖಂಡಿತ ಆ ಸಾರನ್ನು ಬಡಿಸುತ್ತಿರಲಿಲ್ಲ. ಕಣ್ಣುತಪ್ಪಿನಿಂದಾದ ಪ್ರಮಾದ ಏನು ಮಾಡುವು ದಕ್ಕಾಗುತ್ತದೆ? ಆದರೆ ನನ್ನ ಮನಸ್ಸಿನಲ್ಲಿ ಆ ಕ್ಷಣದಲ್ಲುಂಟಾದ ತೀವ್ರತರವಾದ ನೂರಾರು ಭಾವನೆಗಳ ತಾಕಲಾಟ ಮಾತ್ರ ಶಾಶ್ವತವಾಗಿ ನೆನಪಿನಲ್ಲಿ ಉಳಿದುಹೋಯಿತು. ಅವರ ಮನೆಯಲ್ಲಿ ಬೇಕಾದಷ್ಟು ಪಕ್ವಾನ್ನ ಉಂಡಿದ್ದೇನೆ, ತಂಗಳುಂಡಿದ್ದೇನೆ. ಎಲ್ಲವೂ ಅಮೃತಪ್ರಾಯವೇ. ಆ ಅನುಭವ ನೆನಪಿನಲ್ಲಿ ಉಳಿಯಲಿಲ್ಲ. ಈ ಒಂದು ಅನುಭವ ನೆನಪಿನಲ್ಲಿ ಉಳಿದುದಕ್ಕೆ ಸನ್ನಿವೇಶದ ತೀವ್ರತೆಯೇ ಕಾರಣವಾಯಿತು. ನನ್ನ ಮಾನಸಿಕ ತುಮುಲವನ್ನು ಹೇಳಹೊರಟಿರುವುದರಿಂದ ಅದರ ಪ್ರಸ್ತಾಪ ಮಾಡಬೇಕಾಯಿತು. ಅಷ್ಟೇ. ಕೊನೆಗೂ ನಾನು ಈ ವಿಷಯ ಅವರ ಮನೆಯ ಯಾರಿಗೂ ಗೊತ್ತಾಗಗೊಡದಂತೆ ಜಾಗ್ರತೆ ವಹಿಸಿದೆ. ಶ್ರೀಗಳವರಲ್ಲಿ ಸಲುಗೆಯಿಂದಿದ್ದರೂ ಅವರ ಗಮನಕ್ಕೂ ತರಲಿಲ್ಲ. ಇದು ನನ್ನ ಗುಪ್ತಬೋಧೆಯಲ್ಲಿ ಮಾತ್ರ ಸ್ಪಷ್ಟವಾಗಿ ಮನೆಮಾಡಿ ಕುಳಿತುಬಿಟ್ಟಿತು. ಈಗ ಸನ್ನಿವೇಶ ಬಂದುದರಿಂದ ನನ್ನ ಭಾವನೆಯನ್ನು ಬರೆಯುತ್ತಿದ್ದೇನೆ ಅಷ್ಟೆ. ಇದು ದೂಷಣೆ, ದೋಷಾರೋಪಣೆ ಅಲ್ಲ.

## ಅಮೂಲ್ಯ ವಸ್ತುವಿನ ಪರಿಚಯ

ಹಾವೇರಿಯಲ್ಲಿ ನಾನಿದ್ದ ವೇಳೆಯಲ್ಲಿ ಜೀವನದುದ್ದಕ್ಕೂ ನನ್ನ ಉತ್ಕರ್ಷವನ್ನು ಕಂಡು ಹಿರಿಹಿರಿ ಹಿಗ್ಗುತ್ತಿದ್ದ ಒಬ್ಬ ಅಮೂಲ್ಯ ವ್ಯಕ್ತಿಯ ಪರಿಚಯವಾದದ್ದು ನನ್ನ ಜೀವನದಲ್ಲಿ ಬಹುದೊಡ್ಡ ಲಾಭವೆಂದು ಭಾವಿಸಿದ್ದೇನೆ. ಶಿರಾಳಕೊಪ್ಪದಲ್ಲಿ ಮೂವತ್ತೈದು ವರ್ಷಗಳ ಕಾಲ ಶ್ರೇಷ್ಠ ಉಪಾಧ್ಯಾಯ, ಶಿವಾನುಭವಿ, ಜೀವನಾನುಭವದ ಗಣಿ ಎನಿಸಿದ್ದ ಚನ್ನಮಲ್ಲಪ್ಪ ನೂರೊಂದಪ್ಪ ಕೋರಿಸೆಟ್ಟಿ (ಇತ್ತೀಚೆಗೆ ಶ್ರೀ ಚನ್ನಮಲ್ಲಿಕಾರ್ಜುನ ಎಂದು ಹೆಸರು ಬದಲಿಸಿಕೊಂಡವರು. ಇವರ ಬಗ್ಗೆ ನಾನು ಮತ್ತು ದೇವೀರಪ್ಪ ಇಬ್ಬರೂ ಸೇರಿ ಸಂಪಾದಿಸಿ, ಹುಬ್ಬಳ್ಳಿ ಮೂರುಸಾವಿರ ಮಠದಿಂದ ಪ್ರಕಟಗೊಂಡ ಗ್ರಂಥದಲ್ಲಿ ನನ್ನ ಅವರ ಸಂಬಂಧದ ಬಗೆಗೆ ವಿಸ್ತೃತ ವಿವರಣೆ ಇದೆ. ಅಲ್ಲದೆ ಗದುಗಿನ ತೋಂಟದಾರ್ಯ ಮಠದವರಿಗಾಗಿ ಇವರ ಬಗೆಗೆ ಒಂದು ಚಿಕ್ಕ ಪುಸ್ತಕವನ್ನು ಬರೆದುಕೊಟ್ಟಿದ್ದೇನೆ. ಅದರಲ್ಲಿಯೂ ಸಾಕಷ್ಟು ನನ್ನ ಅವರ ಸಂಬಂಧಗಳ ವಿವರಣೆ ಇವೆ.) ಎಂಬುವರೇ ಆ ವ್ಯಕ್ತಿಗಳು. ಇವರು ಉಪಾಧ್ಯಾಯ ವೃತ್ತಿಯಲ್ಲಿರುವಾಗಲೇ ಹಾನಗಲ್ಲು ಶ್ರೀ ಕುಮಾರಸ್ವಾಮಿಗಳವರ ಅನುಗ್ರಹಕ್ಕೆ ಪಾತ್ರರಾಗಿ ಯಾವಜ್ಜೀವವೂ ಅವರ ಸ್ಮಾರಕವಾಗಿ ಧಾರ್ಮಿಕ ಗ್ರಂಥ ಪ್ರಕಟಣೆ ಮತ್ತೂ 'ಸದ್ಧರ್ಮದೀಪಿಕೆ' ಎಂಬ ಹೆಸರಿನ ಮಾಸಪತ್ರಿಕೆ ಪ್ರಕಟಣೆಯ ಸತ್ಸಂಕಲ್ಪ ಭರಿತರಾಗಿ ನಿವೃತ್ತರಾದ ಮೇಲೆ 1931ರಲ್ಲಿ ಹಾವೇರಿಗೆ ಬಂದು ವಾಲಿಸೆಟ್ಟರ

ಮಠದಲ್ಲಿ ಶಿವಯೋಗ ಮಂದಿರದ ಒಡೆತನದ ಒಂದು ಮುದ್ರಣಾಲಯವನ್ನು ಪಡೆದು ಅದಕ್ಕೆ ಶಿವಲಿಂಗ ವಿಜಯ ಮುದ್ರಣಾಲಯವೆಂದು ಹೆಸರಿಟ್ಟು ಕಾರ್ಯಪ್ರವೃತ್ತರಾಗಿದ್ದರು. ಇವರ ಈ ಕಾರ್ಯಕ್ಕೆ ಹಾವೇರಿ ಹುಕ್ಕೇರಿ ಮಠದ ಶ್ರೀ ಶಿವಬಸವಮಹಾಸ್ವಾಮಿಗಳು ಪೋಷಕರಾಗಿದ್ದರು.

ಶ್ರೀ ಶಿವಬಸವಸ್ವಾಮಿಗಳ ಸೇವಾವೃತ್ತಿಯಲ್ಲಿಯೇ ಇದ್ದ ನನಗೆ ಇವರ ಪರಿಚಯ ಗಾಢವಾಯಿತು. ಇವರ ಮೊದಲ ಪರಿಚಯ ಹಾನಗಲ್ಲು ಮಠದಲ್ಲಿ ನಾನು 6ನೇ ತರಗತಿ ವಿದ್ಯಾರ್ಥಿಯಾಗಿದ್ದಾಗಲೇ ಆಗಿತ್ತಾದರೂ ಹಾವೇರಿಗೆ ಬಂದ ಮೇಲೆ ವಿಸ್ತಾರವಾದ ಪರಿಚಯವಾಯಿತು. ಅವರ ಸಾತ್ವಿಕ ಪ್ರವೃತ್ತಿ, ವಿದ್ವತ್ತು, ಧಾರ್ಮಿಕ ವಿಧಿ-ವಿಧಾನಗಳ ಬಗೆಗಿರುವ ಆಳವಾದ ಜ್ಞಾನಾನುಭವಗಳಿಗೆ ಮಾರುಹೋಗಿ ಅವರು ಲಿಂಗೈಕ್ಯರಾಗುವವರೆಗೂ ಸಂಬಂಧವಿಟ್ಟುಕೊಂಡದ್ದೊಂದು ನನ್ನ ಜೀವನದ ಅಲಭ್ಯ ಲಾಭವೇ.

### *ಮುಲ್ಕೀ ಪರೀಕ್ಷೇಲಿ ಉತ್ತೀರ್ಣನಾಗಲಿಲ್ಲ*

ಹಾವೇರಿಯಲ್ಲಿ ನಾನು ಒಂದು ವರ್ಷ ವಿದ್ಯಾಭ್ಯಾಸ ಮಾಡುತ್ತಿದ್ದ ಕಾಲದಲ್ಲಿಯೂ ಹಾನಗಲ್ಲಿನಲ್ಲಿ ಅಂಟಿದ್ದ ಮಲೇರಿಯಾ ವ್ಯಾಧಿ ಪೂರ್ಣ ಗುಣವಾಗದೆ ಆಗಾಗ ತೊಂದರೆ ಕೊಟ್ಟ ಕಾರಣವಾಗಿಯೂ, ನನ್ನ ಮನೆಯ ದಟ್ಟದಾರಿದ್ರ್ಯದ ಕಾರಣವಾಗಿಯೂ, ಅರ್ಹರಾದ ಉಪಾಧ್ಯಾಯರುಗಳ ಅಭಾವದಿಂದಲೂ ಆ ವರ್ಷ ಮುಲ್ಕೀಪರೀಕ್ಷೆಯಲ್ಲಿ ಯಶಸ್ಸು ಸಾಧಿಸಲಾಗದೆ ಬಹಳ ವ್ಯಥೆಗೀಡು ಮಾಡಿತು. ನಮ್ಮಮನೆಯ ದಾರಿದ್ರ್ಯ ಪರಮಾವಧಿಗೇರಿತು. ಮುಲ್ಕೀ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಯಾವುದಾದರೂ ವೃತ್ತಿಗಿಳಿದು ನನ್ನ ಮನೆಯ ಆರ್ಥಿಕ ದುಃಸ್ಥಿತಿ ಸುಧಾರಿಸಲು ಸಹಾಯಕನಾಗಬೇಕೆಂಬ ಹಂಬಲ ಆ ವರ್ಷ ಈಡೇರಲಿಲ್ಲ.

ಆ ವರ್ಷ ಧಾರವಾಡಕ್ಕೆ ಪರೀಕ್ಷೆಗೆ ಹೋಗಲು ಮೂರು ರೂಪಾಯಿ ಹೊಂದಿಸಿಕೊಡುವಾಗ ನಮ್ಮ ತಂದೆ-ತಾಯಿಯವರು ಪಟ್ಟ ಕಷ್ಟವನ್ನು ನೆನೆದು ಕರುಳು ಹಿಚುಕಿದಂತಾಗಿ ದುಃಖವು ಉಮ್ಮಳಿಸಿ ಬರುವಂತಾಗುತ್ತಿತ್ತು. ಆ ಮೂರು ರೂಪಾಯಿನಲ್ಲಿ ಧಾರವಾಡಕ್ಕೆ ಹೋಗಿ ಬರುವ ಪ್ರವಾಸದ ಚಾರ್ಜು, ಅಲ್ಲಿ ಆರೇಳು ದಿನದ ಊಟ ಉಪಚಾರ ಇದೆಲ್ಲ ಆಗಬೇಕಾಗಿತ್ತು. ಧಾರವಾಡಕ್ಕೆ ಹೋದ ಮೇಲೆ ಹಾವೇರಿ ಪೇಟೆಯ (ಈಗಿನ ಮೃತ್ಯುಂಜಯ ನಗರ) ಮುರುಘಾಮಠದಲ್ಲಿ ಮೂರು ನಾಲ್ಕು ಜನ ಮಿತ್ರರೊಡನೆ ಇಳಿದುಕೊಂಡು, ಪುಕ್ಕಟೆಯಾದ ಊಟ-ವಸತಿಯನ್ನು ಗಿಟ್ಟಿಸಿಕೊಂಡು ಪರೀಕ್ಷೆ ಮುಗಿಸಿ ಬಿಟ್ಟೆ. ನನ್ನ ಜೊತೆಗೆ ಇದ್ದ ಮೂರು ನಾಲ್ಕು ಜನರೆಲ್ಲ ಒಟ್ಟಾಗಿ ಮಾತನಾಡಿ ನಡೆದೇ ಸುಮಾರು ಐವತ್ತು ಮೈಲು ದೂರದ ನಮ್ಮ ಊರುಗಳಿಗೆ ಹಿಂದಿರುಗಿ ಬಿಡಬೇಕೆಂದು ಸಂಕಲ್ಪ ಮಾಡಿದ್ದೆವು. ಧಾರವಾಡದಲ್ಲಿ ನಮ್ಮದೊಡ್ಡ ಖರ್ಚೆಂದರೆ ಆಗ ತಾನೆ ಬಂದಿದ್ದ ಧ್ರುವ ಎಂಬ ಮಾತಾಡುವ ಸಿನೆಮಾ ನೋಡಿದುದು ಮಾತ್ರ. ಅದೊಂದು ನಮ್ಮದೃಷ್ಟಿಯಿಂದ ಅತ್ಯಂತ ಅದ್ಭುತವಾದ ದೃಶ್ಯವೇ ಆಗಿತ್ತು. ಕರ್ಚು ಮಾಡಿದ್ದಕ್ಕೆ ಸಾರ್ಥಕವೆಂದುಕೊಂಡೆವು. ಪರೀಕ್ಷೆ ಮುಗಿಸಿ ನಾಲ್ಕು ಘಂಟೆಗೆ ಧಾರವಾಡವನ್ನು ಬಿಟ್ಟು ಹುಬ್ಬಳ್ಳಿಯವರೆಗೆ ನಡೆದುಬಂದು ಅಲ್ಲಿ ಬೀಡುಬಿಟ್ಟೆವು.

ಹುಬ್ಬಳ್ಳಿಯ ದುರ್ಗದ ಬೈಲಿನ ಒಂದು ಖಾನಾವಳಿಗೆ ಬಂದೆವು. ನಾಲ್ಕು ಜನಗಳೂ ಅಲ್ಲಿ ಎರಡು ಬಿಲ್ಲಿಗೊಂದೊಂದರಂತೆ ಎರಡೆರಡು ರೊಟ್ಟಿ ತಿಂದು 'ಈ ರಾತ್ರಿ ಇಲ್ಲಿ ಮಲಗಲು ಅವಕಾಶ ಕೊಡಿ' ಎಂದು ಕೇಳಿದೆವು. ಅವರು 'ಆಗಲಿ ಮಲಗಿಕೊಳ್ಳಿ' ಎಂದು ಅಟ್ಟದ ಮೇಲೆ

ಸ್ಥಳ ತೋರಿಸಿ ಎರಡು ಹಳೇ ಚಾಪೆಗಳನ್ನು ಕೊಟ್ಟರು. ಆ ಚಾಪೆಗಳ ಮೇಲೆ ನಮ್ಮ ಹಾಸಿಗೆ ಬಿಚ್ಚಿ ಹಾಸಿ ಮಲಗಿದೆವು. ಜೀವನದಲ್ಲಿ ಎಂದೂ ಕಾಣದ ಅನುಭವ ಎಷ್ಟು ದಿನಗಳಿಂದ ಉಪವಾಸವಿದ್ದವೋ ಏನೋ, ಸಂದಿಗೊಂದಿಗಳಿಂದ ಹರಿದು ಬಂದ ತಗಣಿಗಳು ನಮ್ಮನ್ನು ಮುತ್ತಿಬಿಟ್ಟವು. ಅಂಗಿ-ಪಂಚೆ-ರುಮಾಲು ನಮ್ಮ ಇನ್ನಿತರ ಸಾಮಗ್ರಿಗಳೆಲ್ಲ ಹರಿದಾಡುವ ತಗಣಿಗಳಿಂದ ತುಂಬಿಹೋದವು. ನಮ್ಮ ದೇಹರಸವನ್ನು ಹೀರಿದ ತಗಣಿಗಳು ಹುರುಳೀಕಾಳುಗಳಂತೆ ಮೈದುಂಬಿಬಿಟ್ಟವು. ಕೆಲವು ಪೂರ್ಣ ಆಹಾರ ಸಿಗದೆ ಹುಡುಕಾಡುವುದರಲ್ಲೆ ಕಾಲಕಳೆದ ಬಿಳಿವರ್ಣದ ತಗಣಿಗಳು ಕೆಲವು, ಮರಿಗಳು, ಮುದಿಗಳು, ಮಧ್ಯವಯಸ್ಸಿನವು ಎಲ್ಲವೂ ನಮ್ಮ ಮೈಮನಗಳಲ್ಲಿ ನವೆಯನ್ನುಂಟುಮಾಡಿಬಿಟ್ಟವು. ಎಲ್ಲರೂ ಎದ್ದು ಕುಳಿತು ಅಲ್ಲಿದ್ದ ಒಂದು ಕುರುಡು ಚಿಮಣಿ (ಸೀಮೆಎಣ್ಣೆಯಿಂದ ಉರಿಯುವ ಬುಡ್ಡಿ) ಯನ್ನು ಹಚ್ಚಿ ನೋಡಿದರೆ ಅಬ್ಬಾ! ಹಿಂಡು ಹಿಂಡಾಗಿ ತಗಣಿಗಳು ಗೋಡೆಯನ್ನೇರಿ ಹೋಗುವವು ಕೆಲವು, ಇಳಿಯುವವು, ಕೆಲವು ಇನ್ನು ಇಲ್ಲಿ ಕಾಲ ಕಳೆಯುವುದಕ್ಕೆ ಸಾಧ್ಯವೇ ಇಲ್ಲವೆಂದು ಖಾನಾವಳಿಯವರಿಗೆ ಹೇಳಿ, ಮಧ್ಯರಾತ್ರಿಯಲ್ಲೇ ಖಾನಾವಳಿ ಬಿಟ್ಟು ಬೆಳದಿಂಗಳ ಬೆಳಕಿನಲ್ಲಿ, ಬಿಕೋ ಎನ್ನುವ ಬೈಲಿನಲ್ಲಿ ಹುಬ್ಬಳ್ಳಿಯ ಉತ್ತರಕ್ಕೆ ಇರುವ ರೈಲುಹಳಿಯ ಹತ್ತಿರದ ಬೇಲಿಸಾಲಿಗೆ ಬಂದು ಬಟ್ಟೆಗಳನ್ನೆಲ್ಲ ಬಿಚ್ಚಿ ಕೊಡವುದರಲ್ಲಿ ಬಹಳಷ್ಟು ಕಾಲ ಕಳೆದು ಹೋಯಿತು. ಎದುರಿಗೆ ಇರುವ ಬೆಟ್ಟದ ಕಡೆಗೆ ನಡೆದೆವು. (ಈಗ ಇಲ್ಲೆಲ್ಲ ಹುಬ್ಬಳ್ಳಿ ನಗರ ಬೆಳೆದು ಹೋಗಿದೆ). ಅಲ್ಲಿಗೆ ಹೋಗಿ ನಮ್ಮ ನಮ್ಮ ಹಾಸಿಗೆಗಳನ್ನು ಪುನಃ ಪುನಃ ಕೊಡವಿ ಒಂದು ಬೇವಿನ ಮರದಡಿ ನಾಲ್ವರೂ ಮಲಗಿಬಿಟ್ಟೆವು. ಆಗ ನಮ್ಮ ನಿಶಾಚರ ರೂಪಕ್ಕೆ ಹೆದರಿ ಕಾಡಿನ ದೆವ್ವಗಳೂ ಓಡಿರಬೇಕು. ಅಖಂಡ ಧೈರ್ಯದಿಂದ ಮಲಗಿದ ನಮ್ಮ ಹತ್ತಿರ ದೆವ್ವ, ಭೂತ ಒಂದೂ ಸುಳಿಯಲಿಲ್ಲ. ಎಚ್ಚರವಾದಾಗ ಒಂದು ಮಾರು ಹೊತ್ತಾಗಿತ್ತು. ನಾಲ್ವರೂ ಮುಂದೆಲ್ಲಿಗೆ ಪಯಣವೆಂದು ಯೋಚಿಸಿ ಪುನಃ ಹುಬ್ಬಳ್ಳಿ ಹೊಕ್ಕೆವು.

ಒಂಬತ್ತು, ಹತ್ತು ಘಂಟೆ ಸುಮಾರಿಗೆ ಅಲ್ಲಿರುವ ಮೂರುಸಾವಿರ ಮಠದ ಕೀರ್ತಿ ವಾರ್ತೆಗಳನ್ನು ಕೇಳಿ ಅಲ್ಲಿಗೆ ಬಂದು ಮುಲ್ಕಿಪರೀಕ್ಷೆಗೆ ಧಾರವಾಡಕ್ಕೆ ಹೋಗಿ ಬಂದ ಹುಡುಗರೆಂದು ಹೇಳಿಕೊಂಡು ಬಾವಿಕಟ್ಟೆಯ ಮೇಲೆ ಸ್ನಾನ ಮಾಡಿ ಬಟ್ಟೆ ಬರೆಗಳನ್ನು ತೊಳೆದು ಹಾಕಿ, ಊಟ ಗಿಟ್ಟಿಸಿದೆವು. ಕಟಕಟ ರೊಟ್ಟಿ, ಬ್ಯಾಳಿ ಹುಳಿಪಲ್ಲೆ ಬಹು ರುಚಿ ಹತ್ತಿತು. ಕಂಠಪೂರ್ತಿ ಊಟ ಮಾಡಿ, ರಾತ್ರಿ ರಾದ್ಧಾಂತವನ್ನು ನೆನೆದು ನಕ್ಕು ಅಲ್ಲಿಯೇ ಮಠದ ಅಂಗಳದಲ್ಲಿ ಮಲಗಿ, ನಸುಕಿನಲ್ಲಿ ನಾಲ್ಕು ಘಂಟೆಯ ನಂತರ ಪ್ರಯಾಣ ಮುಂದುವರಿಸಿದೆವು. ಸಾಯಂಕಾಲದ ಹೊತ್ತಿಗೆ ಸುಮಾರು 28-30 ಮೈಲು ದೂರದ ಸಿಗ್ಗಾವಿ ಹತ್ತಿರದ ಖುರಸಾಪುರಕ್ಕೆ ಬಂದೆವು. ಅಲ್ಲಿ ನಮ್ಮ ಬಂಧುಗಳ ಮನೆಯಿತ್ತು. ನಮ್ಮ ಬಂಧುಗಳು ನಮಗಿಂತಲೂ ಕಡು ಬಡವರಾದರೂ ರಾತ್ರಿ ನವಣೆಅಕ್ಕಿ, ಅನ್ನ, ಮಜ್ಜಿಗೆ ಸಾರಿನ ಆತಿಥ್ಯ ನಡೆಯಿತು. ಹಸಿದ ಹೊಟ್ಟೆಗೆ ಅದೇ ಅಮೃತಪ್ರಾಯವಾಯಿತು. ಮಾವಿನಕಾಯಿಯ ಉಪ್ಪಿನಕಾಯಿ ನಂಚಿಕೆಗೆ ಇತ್ತು. ಊಟ ಮಾಡಿ ರಾತ್ರಿ ಅಲ್ಲಿ ಉಳಿದು ಪುನಃ ನಸುಕಿನಲ್ಲಿ ನಾಲ್ಕು ಘಂಟೆ ಸುಮಾರಿಗೆ ಹೊರಟು ದೇವಗಿರಿ ಗುಡ್ಡದ ಮೇಲೆ ಇರುವ ಮಲ್ಲಿಕಾರ್ಜುನ ದೇವರನ್ನು ಕಾಣುವ ನೆಪಮಾಡಿಕೊಂಡು ಅಲ್ಲಿಗೆ ಬಂದು ಅಲ್ಲಿ ದೇವರ ದರ್ಶನ ಪಡೆಯುವ ಪೂರ್ವದಲ್ಲಿ ಸಮೀಪದಲ್ಲಿ ಹರಿಯುವ ವರದಾ ನದಿಯಲ್ಲಿ ದಂಡೆಯ ಒಂದು ವಿಶಾಲ ಮಾವಿನ ಮರದಡಿಯಲ್ಲಿ ಅಡಿಗೆಮಾಡಿ ಊಟ

ಮಾಡಬೇಕೆಂಬ ಬಯಕೆಯಾಯಿತು. ದೇವಗಿರಿಗೆ ಹೋಗಿ ನಾಲ್ಕು ಜನಕ್ಕೆ ಒಂದೂವರೆ ಸೇರು ಅಕ್ಕಿ, ಬೇಳೆ, ಉಳ್ಳಾಗಡ್ಡಿ, ಉಪ್ಪು, ಕಾರ, ಹುಣಿಸೇಹಣ್ಣು ಮೊದಲಾದವನ್ನು ಸಾರಿಗೊಂದು ಅನ್ನಕ್ಕೊಂದು ಗಡಿಗೆ ಎರಡು ಮುಚ್ಚಳ ತಕ್ಕೊಂಡು ಬಂದು, ಸೌದೆ ಮುರಿದುಕೊಂಡು ಬಂದು ಒಲೆ ಹೂಡಿ ಹೊಳೆ ದಂಡೆಯ ಮಾಮರದ ಅಡಿ ಅಡಿಗೆಗೆ ಇಟ್ಟೆವು. ಇರುವವರು ನಾಲ್ಕು ಜನ. ಒಂದೂವರೆ ಸೇರು ಅಕ್ಕಿ ಅನ್ನವೆಂದರೆ ಒಂದು ದೊಡ್ಡ ಹೆಡಿಗೆಯ ತುಂಬ ಆಗಿ ಹೋಯಿತು. ಕಾಲುಸೇರು ಬೇಳೆಯ ಸಾರು ಒಂದು ಗಡಿಗೆಯ ತುಂಬ ಆಯಿತು. ಇಷ್ಟೆಲ್ಲಕ್ಕೂ ಖರ್ಚಾದ ಹಣ ಮೂರೂವರೆ ಆಣೆ. ಆಣೆಗೆ ಸೇರಿನ ದಪ್ಪಕ್ಕಿಯನ್ನೇ ತಂದಿದ್ದೆವು. ಮುಕ್ಕಾಲಾಣೆ ಬೇಳೆ ಅರ್ಧ ಸೇರು, ಮುಕ್ಕಾಲಾಣೆ ಗಡಿಗೆಗಳು. ಉಳಿದದ್ದಕ್ಕೆ ಹುಣಸೆಹಣ್ಣು, ಉಳ್ಳಾಗಡ್ಡಿ, ಕಾರ, ಉಪ್ಪು ಇತ್ಯಾದಿಗಳು. ಅಲ್ಲಿಯೇ ಅಕ್ಕಪಕ್ಕದಲ್ಲಿದ್ದ ಮುತ್ತುಗದ ಎಲೆಯ ಪತ್ರಾವಳಿ ಕಟ್ಟಿ ನಾಲ್ಕೂ ಜನ ಪ್ರಳಯಾಂತಕರು ಊಟಕ್ಕೆ ಕುಳಿತೆವು. ಅನ್ನವನ್ನು ಪೂರ್ಣ ಮುಗಿಸಿ ಬಿಡಬೇಕೆಂದು ಏನೇ ಪ್ರಯತ್ನ ಮಾಡಿದರೂ ಅನ್ನವನ್ನು ಮುಗಿಸಲಾಗಲಿಲ್ಲ. ಹಸಿದು ಬಳಲಿದ ಹೊಟ್ಟೆಗೆ ಅನ್ನ ಸಾರು ಅಮೃತಪ್ರಾಯವಾಗಿ ಹೋಯಿತು. ತೃಪ್ತಿ ಎಲ್ಲಕ್ಕೂ ಮಿಗಿಲಾದದ್ದಲ್ಲವೇ? ಸ್ವತಂತ್ರವಾದ ಯಾವ ಹಂಗಿಲ್ಲದ ಸ್ಥಳ, ಸ್ವಪಾಕ, ಅರಣ್ಯಭೋಜನ ಕೇಳುವುದೇನು? ವಿಲಕ್ಷಣಾನಂದದಿಂದ ಕೂಡಿದ ನಾವು ಅಲ್ಲಿಯೇ ಒಂದು ನಿದ್ರೆತೆಗೆದು, ದೇವಗಿರಿ ಗುಡ್ಡಕ್ಕೆ ಹೋಗಿ ಮಲ್ಲಿಕಾರ್ಜುನನ ದರ್ಶನ ಪಡೆದು. (ಮಲ್ಲಿಕಾರ್ಜುನ ನಮ್ಮ ಮನೆದೇವರಂತೆ. ಈ ಪೂರ್ವದಲ್ಲಿ ನಮ್ಮೂರಿಂದ ಗಾಡಿಕಟ್ಟಿಕೊಂಡು ಅಲ್ಲಿಗೆ ಎರಡು ಮೂರು ಸಲ ಬಂದು ಗಣಪರ್ವ ಮಾಡಿ ಉಂಡುತಿಂದು ಹೋಗಿದ್ದೆವು. ಈ ಅಭಿಮಾನದಿಂದ ಆ ದೇವರನ್ನು ಕಂಡು ನಮ್ಮನ್ನು ಪಾಸು ಮಾಡಿಸಪ್ಪ ಎಂದು ಕೇಳಿಕೊಳ್ಳಲು ಹೋಗಿದ್ದೆವು). ನೇರವಾಗಿ ರಾತ್ರಿ ಹೊತ್ತಿಗೆ ಹಾವೇರಿಗೆ ಬಂದು ಹುಕ್ಕೇರಿ ಮಠದಲ್ಲಿ ಈ ಪುಣ್ಯಪುರುಷರ ತಂಡ ಬೀಡುಬಿಟ್ಟಿತು. ಶ್ರೀ ಶ್ರೀಗಳವರಿಗೆ ನಾವು ಪರೀಕ್ಷೆ ಮುಗಿಸಿಬಂದ ರಿಪೋರ್ಟ್ ಒಪ್ಪಿಸಿದೆವು. ಶ್ರೀಗಳವರು ಕೂಲಂಕಷವಾಗಿ ಎಲ್ಲ ವಿಚಾರ ಕೇಳಿದರು. ಒಂದಕ್ಕೆರಡು ಹೇಳಿ ಮುಗಿಸಿದೆವು. ಮರುದಿನ ನಮ್ಮ ಊರಿಗೆ ನಡೆಯುತ್ತಲೆ ಕಾಲುದಾರಿಯಲ್ಲಿ ಹೊರಟು ಮಧ್ಯಾಹ್ನದ ಹೊತ್ತಿಗೆ ಕೂಡಲಕ್ಕೆ ಬಂದೆವು. ಅಲ್ಲಿ ಸಂಗಮಸ್ಥಾನದಲ್ಲಿ ಸ್ನಾನ ಮಾಡಿ ಬಟ್ಟೆ ಬರೆಗಳನ್ನೆಲ್ಲ ಶುಭ್ರವಾಗಿಸಿಕೊಂಡು ಕೇವಲ ಅರ್ಧ ಮೈಲು ದೂರವಿರುವ ನಮ್ಮ ಊರನ್ನು ಹೊಕ್ಕೆವು. ಮೊದಲು ನಾನು ಮಾಡಿದ್ದು ನಮ್ಮ ದೊಡ್ಡಪ್ಪನ ಕೈಗೆ ಉಳಿಸಿಕೊಂಡು ಬಂದ ಒಂದು ರೂಪಾಯಿ ವಾಪಸು ಮಾಡಿದ್ದು. ಮೂರು ರೂಪಾಯಿನಲ್ಲಿ ಹಾವೇರಿಯಿಂದ ಧಾರವಾಡಕ್ಕೆ ಹೋಗಿ ಐದಾರು ದಿನ ಪರೀಕ್ಷೆ ಮುಗಿಸಿ ಎರಡು ದಿನ ಪ್ರವಾಸ ಮಾಡಿಕೊಂಡು ಬಂದಿದ್ದರೂ ಒಟ್ಟು ಆದ ಖರ್ಚು ಎರಡು ರೂಪಾಯಿ ಮಾತ್ರ. ನಮ್ಮ ದೊಡ್ಡಪ್ಪನಿಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ಅವನಿಗೆ ಸಂತೋಷವಾಗಿ "ಬಿಡು ಮಹರಾಯ, ಇವತ್ತು ಶುಕ್ರವಾರದ ನರೇಗಲ್ಲಂತೆಗೆ ಹೋಗಲು ದುಡ್ಡಿರಲಿಲ್ಲ. ಒಳ್ಳೇ ಹೊತ್ತಿಗೆ ಒಂದು ರೂಪಾಯಿ ಕೊಟ್ಟುಬಿಟ್ಟೆ" ಎಂದನು. ನಾವು ಧಾರವಾಡಕ್ಕೆ ಹೋಗಿ ಮುಲ್ಕೀ ಪರೀಕ್ಷೆಗೆ ಬರೆದುಬಂದವರೆಂಬ ಹೆಮ್ಮೆಯಿಂದ ಊರಿನಲ್ಲಿ ಒಂದೆರಡು ಸುತ್ತು ಹೊಡೆದು ಬಸವಣ್ಣದೇವರ ಗುಡಿಯಲ್ಲಿ ಕುಳಿತು ನಮ್ಮನ್ನು ಸುತ್ತ ಬಳಸಿ ನಿಂತ ಊರಿನವರಿಗೆಲ್ಲ ಒಂದಕ್ಕೆ ಎರಡು ಸುಳ್ಳು ಸೊಟ್ಟು ಹೇಳಿ ಹೇಳಿ ಬಡುದೊಡ್ಡ ವಿದ್ಯಾವಂತಿಕೆಯ ಗಂಭೀರವನ್ನು ಮೆರೆದೆವು. ಆಗ ಹುಬ್ಬಳ್ಳಿ-ಧಾರವಾಡಕ್ಕೆ ಹೋಗಿಬಂದವರೆಂದರೆ ಅದೊಂದು ಲಂಡನ್ನಿಗೋ ನ್ಯೂಯಾರ್ಕಿಗೋ ಹೋಗಿ ಬಂದವರಂತೆ ಆಗಿ ಬಿಡುತ್ತಿದ್ದೆವು. ಹಳ್ಳಿಗಳಿಗೆ ಪಟ್ಟಣಗಳು ಅಷ್ಟು ದೂರವಾಗಿದ್ದವು.

ಆಗ ಮುಲ್ಕಿ ಪರೀಕ್ಷೆಯೆಂದರೆ ಹಳ್ಳಿಗಳ ಮಟ್ಟದಲ್ಲಿ ಬಹು ದೊಡ್ಡ ಪರೀಕ್ಷೆ ಎನಿಸಿತ್ತು. ಆ ಪರೀಕ್ಷೆ ಪಾಸಾದವರಿಗೆ ಉಪಾಧ್ಯಾಯ ವೃತ್ತಿ, ಅಂಗಡಿ ಗುಮಾಸ್ತೆ ಹುದ್ದೆಗಳು ಸಿಗುತ್ತಿದ್ದವು. ಮೋಜಣಿ ಇಲಾಖೆಯವರು ಸ್ವಲ್ಪ ಕಾಲ ಟ್ರೈನಿಂಗ್ ಕೊಟ್ಟು ಮೋಜಣಿದಾರರನ್ನಾಗಿ ಮಾಡುತ್ತಿದ್ದರು. ಇನ್ನೂ ಏನೇನೋ ಕೆಲಸ ಕಾರ್ಯಗಳು ಈ ಪರೀಕ್ಷೆ ಪಾಸಾದವರಿಗೆ ಸಿಗುತ್ತಿದ್ದವಾಗಿ ಗ್ರಾಮಾಂತರ ಪ್ರದೇಶದ ಅಂದಿನ ಪರಿಸ್ಥಿತಿಯಲ್ಲಿ ಈ ಪರೀಕ್ಷೆಗೆ ಮಹತ್ವವಿತ್ತು. ಬಹುದೊಡ್ಡ ಪರೀಕ್ಷೆಯೂ ಎನಿಸಿತ್ತು. ನಾವು ಅಂಥ ಒಂದು ಪರೀಕ್ಷೆ ಬರೆದು ಬಂದದ್ದರಿಂದ ನಾವು ಎರಡು ಕೋಡು ಮೂಡಿದವರಂತೆ ಆಗಿ ಹೋಗಿದ್ದೆವು. ಆದರೆ ನಮ್ಮ ನಿರೀಕ್ಷೆಯಂತೆ ನಾವು ಪರೀಕ್ಷೆಯಲ್ಲಿ ತೇರ್ಗಡೆ ಹೊಂದದೇ ಹೋದದ್ದು ಬಹುದುಃಖಕ್ಕೆ ಈಡು ಮಾಡಿದ್ದಿತಾದರೂ ಅದಕ್ಕೆ ಕಾರಣ ಹುಡುಕೇ ಇದ್ದೆವು. ಮಲೇರಿಯಾ, ಸರಿಯಾದ ಉಪಾಧ್ಯಾಯರಿದ್ದಿಲ್ಲ, ಇತ್ಯಾದಿ ಕಾರಣ ಹೇಳಿಕೊಂಡು ಮಾನ ಉಳಿಸಿಕೊಂಡೆವಾದರೂ ಮುಂದಿನ ವರ್ಷ ಎಲ್ಲಿಗೆ ಹೋಗಬೇಕೆಂಬ ಚಿಂತೆ ಬಾಧಿಸಿ, ಕೊನೆಗೆ ಸವಣೂರಿಗೆ ಹೋಗಬೇಕೆಂಬ ತೀರ್ಮಾನಕ್ಕೆ ಬಂದವನು ನಾನೊಬ್ಬನೇ. ಇನ್ನುಳಿದ ನನ್ನ ಮಿತ್ರರು ಕೆಲವರು ಶರಣು ಹೊಡೆದು ಬಿಟ್ಟರು. ಮಲ್ಲಪ್ಪನೆಂಬ ಒಬ್ಬ ಹಿರೇಮಠ ಮಾಸ್ತರರನ್ನು ನೆನೆಸಿಕೊಂಡು ಪುನಃ ಹಾನಗಲ್ಲಿಗೆ ಹೋಗಿಬಿಟ್ಟ. ನಾನು ಸವಣೂರಿಗೆ ಹೋದೆ.

### *ಸವಣೂರಿನಲ್ಲಿ ನನ್ನ ವಿದ್ಯಾಭ್ಯಾಸ*

ಸವಣೂರು ಇಪ್ಪತ್ತೈದು ಹಳ್ಳಿಗಳ ಒಂದು ಚಿಕ್ಕ ಸಂಸ್ಥಾನದ ರಾಜಧಾನಿ. ಅಲ್ಲಿಯ ನವಾಬನ ಶಿಸ್ತು ಇನ್ನೆಲ್ಲಿಯೂ ಇದ್ದಿಲ್ಲವೆಂದರೆ ತಪ್ಪಲ್ಲ. ನವಾಬ ಮದಾಂಧನಲ್ಲ; ಸತ್ಯವಂತ, ಸಮತಾಭಾವಿ, ಸಹೃದಯ, ಒಳ್ಳೆಯ ಸಂವಿಧಾನ ಚತುರ. ಅವನ ಇಪ್ಪತ್ತೈದು ಹಳ್ಳಿಗೆ ಇಪ್ಪತ್ತೈದು ಪ್ರಾಥಮಿಕ ಶಾಲೆಗಳು, ಇಪ್ಪತ್ತೈದು ಪೋಲಿಸ್ ಚೌಕಿಗಳು ಇರುತ್ತಿದ್ದವು. ರಕ್ಷಣಾ ಕಾರ್ಯದಲ್ಲಿ ಇನ್ನೆಲ್ಲಿಯೂ ಕಾಣದ ಶಿಸ್ತು ಸವಣೂರಿನಲ್ಲಿತ್ತು. ಅಲ್ಲಿ ಕನ್ನಡ-ಉರ್ದು ಹುಡುಗ ಹುಡಿಗೆಯರ ಶಾಲೆಗಳು ಪ್ರತ್ಯೇಕವಾಗಿದ್ದು ಒಂದು ಉತ್ತಮ ಮಟ್ಟದ ಹೈಸ್ಕೂಲು ಇತ್ತು. ತರಬೇತಿ ಪಡೆದ ಉಪಾಧ್ಯಾಯರುಗಳು ಶಾಲೆಗಳಲ್ಲಿ ಅಧಿಕವಾಗಿದ್ದರು. ಸಂಬಳ ಮಾತ್ರ ತೀರಾ ಕಡಿಮೆ. ಬ್ರಿಟಿಷ್ ಆಡಳಿತದಲ್ಲಿ ಕೊಡುವುದರ ಅರ್ಧ ಸಂಬಳ ಮಾತ್ರ.

ಅಲ್ಲಿ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರು ಅಡಿವೆಪ್ಪ ಕಾಲೇಬಾಗ್ (ಅಡಿವೆಪ್ಪ ಭೀಮಪ್ಪ ಕಟ್ಟಿಮನಿ : ಎ.ಬಿ. ಕಾಲೇಬಾಗ್ ಎಂದೂ ಅವರನ್ನು ಕರೆಯುತ್ತಿದ್ದರು. ಕುರುಬ ಸಮಾಜದ ಮುಖಂಡರಾದ ಅವರ ಮನೆತನಕ್ಕೆ 'ಕಟ್ಟಿಮನಿಯವರು' ಎಂಬ ಗೌರವ ಸ್ಥಾನವಿತ್ತು. ಜಮೀನುದಾರರಾಗಿ ವ್ಯವಸಾಯ ಜೀವನದಿಂದ ಬದುಕಿದ ಸಾತ್ವಿಕ ಪ್ರತಿಕ್ರಿಯೆಯ ಮನೆತನ. ಅವರಿಗೆ ಉಪಾಧ್ಯಾಯ ವೃತ್ತಿಯನ್ನು ಒಂದು ಗೌರವದ ಕಾರ್ಯವೆಂದು ಮಾಡುತ್ತಿದ್ದರು. ಅವರ ಅಣ್ಣ ತಮ್ಮಂದಿರು ವ್ಯವಸಾಯ ಮಾಡಿ ಯಾವ ಕೊರತೆಯೂ ಇಲ್ಲದಂತೆ ಇದ್ದರು.) ಎಂಬುವರು ಹಾನಗಲ್ಲಿನಲ್ಲಿ ಮ.ಗು. ಹಿರೇಮಠ ಮಾಸ್ತರರು ಹೇಗೆ ಪ್ರಸಿದ್ಧರೋ ಸವಣೂರು ಸಂಸ್ಥಾನದಲ್ಲಿ ಅಡಿವೆಪ್ಪ ಮಾಸ್ತರರು ಹೆಸರುವಾಸಿಗಳು; ಬಹುದೊಡ್ಡ ವ್ಯಕ್ತಿತ್ವ ಅವರದು. ಸವಣೂರಿನ ಹಿರಿಕಿರಿಯ ಹಿಂದೂ ಮುಸ್ಲಿಂ ಸಮಸ್ತ ಜನರಿಗೂ ಅಡಿವೆಪ್ಪ ಮಾಸ್ತರರೆಂದರೆ ಎಲ್ಲಿಲ್ಲದ ಗೌರವ, ಆದರ. ಅವರು ಅಲ್ಲಿನ ಪ್ರಾಥಮಿಕ ಶಾಲೆಯ ಹೆಡ್‌ಮಾಸ್ತರ್ ಅಷ್ಟೇ

ಅಲ್ಲ, ಇಪ್ಪತ್ತೈದು ಹಳ್ಳಿಗಳಲ್ಲಿರುವ ಪ್ರಾಥಮಿಕ ಶಾಲೆಗಳಿಗೆಲ್ಲ ಇನ್ಸ್‌ಪೆಕ್ಟರರೂ ಆಗಿದ್ದರು. ನಮ್ಮಂಥ 7ನೇ ತರಗತಿಯ ಬಡ ವಿದ್ಯಾರ್ಥಿಗಳು ಅಡಿವೆಪ್ಪ ಮಾಸ್ತರರಲ್ಲಿ ಹೋಗಿ ಹೇಳಿಕೊಂಡರೆ ಅವರಿಗೆ ಊರಲ್ಲಿ ಊಟಕ್ಕೆ ವಾರದ ಮನೆಗಳನ್ನು ಹಚ್ಚಿಕೊಟ್ಟು ತಮ್ಮ ಮನೆಯಲ್ಲಿ ಓದಲು, ಮಲಗಲು ವ್ಯವಸ್ಥೆ ಮಾಡುತ್ತಿದ್ದರು. ಅವರ ಎರಡು ಮನೆಗಳಲ್ಲಿ ಒಂದು ದೊಡ್ಡ ಮನೆಯಲ್ಲಿ ಅವರ ಇಬ್ಬರು ಅಣ್ಣಂದಿರು ಅವರ ಸಂಸಾರ ಇರುತ್ತಿತ್ತು. ಇನ್ನೊಂದು ದೊಡ್ಡಮನೆಯಲ್ಲಿ ದನಕರುಗಳು ಮತ್ತು ಅಡಿವೆಪ್ಪ ಮಾಸ್ತರರು ಅವರ ವಿದ್ಯಾರ್ಥಿಗಳಾದ ಆರೇಳು ಹುಡುಗರು ಇರುತ್ತಿದ್ದರು.

ನಾನು ಅಡಿವೆಪ್ಪ ಮಾಸ್ತರರನ್ನು ಹೋಗಿ ಕಂಡು ಇಲ್ಲಿ ವಿದ್ಯಾಭ್ಯಾಸ ಮಾಡಲು ಅವಕಾಶ ಮಾಡಿಕೊಡಬೇಕೆಂದು ಓರ್ವ ಪರಿಚಿತರ ಮುಖಾಂತರ ಕೇಳಿದಾಗ ಅದೇ ದಿನವೇ ಶುಕ್ರವಾರ ಪೇಟೆಯ ಪ್ರಸಿದ್ಧ ಮನೆತನವೊಂದರ ಮುದುಕಿಗೆ ಕಾಗದ ಬರೆದು ಈ ಬಡ ವಿದ್ಯಾರ್ಥಿಗೆ ವಾರದ ಮನೆ ಹಚ್ಚಿಕೊಡಿರೆಂದು ಹೇಳಿಬಿಟ್ಟರು. ಆ ಮುದುಕಿಯ ಹೆಸರು ಗೌರಮ್ಮ ಎಂದು. ಆ ಮುದುಕಿ ಹಾವೇರಿಯವರ ಮನೆತನವೆಂಬ ಪ್ರಸಿದ್ಧ ಮನೆತನದ ವಿಧವಾ ಸ್ತ್ರೀ. ಮಕ್ಕಳುಮರಿಗಳೆಲ್ಲ ಸತ್ತು ಕೆಟ್ಟು ಯಾವು ಯಾವುದೋ ಬಂಧುಬಳಗದವರ ಮಕ್ಕಳನ್ನು ಜೋಪಾನ ಮಾಡಿಕೊಂಡು ತನ್ನ ಹೊಲದ ಆದಾಯದಲ್ಲಿ ಸುಖವಾಗಿ ಜೀವನ ಮಾಡುತ್ತಿತ್ತು.

ಅಡಿವೆಪ್ಪ ಮಾಸ್ತರರು ಬರೆದು ಕಳಿಸಿದ ಪತ್ರವೆಂದರೆ ಕೇಳಬೇಕೆ. ಒಂದೇ ದಿನವೇ ಮುದುಕಿ ಐದು ಮನೆಗಳಲ್ಲಿ ಐದು ದಿನ ಊಟಮಾಡಿ, ಎರಡು ದಿನ ಗುರುವಾರ ಶುಕ್ರವಾರಗಳಲ್ಲಿ ತನ್ನ ಮನೆಯಲ್ಲಿ ಊಟಕ್ಕೆ ವ್ಯವಸ್ಥೆ ಮಾಡಿತ್ತು. ಗುರುವಾರ ಶುಕ್ರವಾರಗಳಲ್ಲಿ ತನ್ನ ಮನೆಯಲ್ಲಿ ಊಟ ಮಾಡೆಂದು ಹೇಳಿದುದಕ್ಕೆ ಕಾರಣವಿತ್ತು. ಶುಕ್ರವಾರ ಸವಣೂರ ಸಂತೆ. ಮಹಬೂಬ್ ಅಲ್ಲೀಖಾನ್ ಅವರ ವ್ಯವಸಾಯದ ಆಡಳಿತಕ್ಕೆ ಒಪ್ಪಿಸಿದ ಜಮೀನಿನ ಬಾಬತು ಅವರಿಂದ ಪ್ರತಿವಾರ 2 ರೂ. ಒಂಬತ್ತಾಣೆ ಒಂದು ಬಿಲ್ಲಿಯನ್ನು.......ಆ ದಿನ ಸಂತೆ ಮಾಡಿಕೊಂಡು ಬರಬೇಕಾಗಿತ್ತು. ಯಾರೂ ಮನೆಯಲ್ಲಿ ಇಲ್ಲದ್ದರಿಂದ ಈ ಕೆಲಸದ ತರಬೇತಿಯನ್ನು ಮುದುಕಿ ನನಗೆ ಕೊಟ್ಟಿತೆಂದು ಈಗ ಭಾವಿಸುತ್ತೇನೆ. ಈ ಮುದುಕಿ ಮಾಡಿದ ಉಪಕಾರವನ್ನು ನಾನು ಯಾವಜ್ಜೀವವೂ ನೆನೆಸಬೇಕು. ನನ್ನ ಯೋಗಕ್ಷೇಮವನ್ನು ಈ ಮುದುಕಿ ಹಲವು ವಿಧದಲ್ಲಿ ಮಾಡಿತು.

ಗೌರಮ್ಮನವರ ಮನೆಯಲ್ಲಿ ಊಟ ಮಾಡುವ ಗುರುವಾರ ಶಾಲೆ ಬಿಟ್ಟೊಡನೆ ಬಂದು ಎರಡು ಕೊಡ ಸಿಹಿನೀರನ್ನು ಬಂಕಾಪುರ ರಸ್ತೆಯಲ್ಲಿ ಮಹಬೂಬ್ ಅಲ್ಲೀಖಾನರ ಕಾಟನ್ ಮಿಲ್ ಕಾಂಪೌಂಡಿನ ಹತ್ತಿರವಿರುವ ಬಾವಿಯಿಂದ ಸೇದಿತಂದು ಹಾಕಿ, ಊಟಮಾಡಿ ಪುನಃ ನನ್ನ ಅಭ್ಯಾಸದ ಕೆಲಸ ಮಾಡಿಕೊಳ್ಳಬೇಕು. ಶುಕ್ರವಾರ ಮಧ್ಯಾಹ್ನ ಸಂತೆ ನಿಮಿತ್ತ ಶಾಲೆಗೆ ಸೂಟಿ ಇದ್ದರೂ ಆ ದಿನ ಸ್ವಲ್ಪ ಕೆಲಸ ಜಾಸ್ತಿ. ಬೆಳಗಿನ ಶಾಲೆ ಮುಗಿಸಿಕೊಂಡು ಬಂದೊಡನೆ ಎರಡು ಕೊಡ ಸಿಹಿನೀರು ತಂದುಹಾಕಿ ಊಟ ಮಾಡಬೇಕು. ಅನಂತರ ಮಹಬೂಬ್ ಅಲ್ಲೀಖಾನರ ಕಾಟನ್ ಮಿಲ್ಲಿನ ಕಛೇರಿಗೆ ಹೋಗಬೇಕು. ಆ ಮಿಲ್ಲಿನ ಆಡಳಿತವೆಲ್ಲ ಕೊಂಕಣಿ ಬ್ರಾಹ್ಮಣ ರಾಮಣ್ಣ (ದಾಮೋದರ) ಅನ್ನುವವರ ಕೈಯಲ್ಲಿತ್ತು. ರಾಮಣ್ಣ ಆ ಬೃಹತ್ ಮಿಲ್ಲಿನ ಸರ್ವಾಧಿಕಾರಿ. ಅಷ್ಟೇ ಪ್ರಾಮಾಣಿಕ. ನಾನು ಹೋಗಿ ಗೌರಮ್ಮನವರು ಕಳಿಸಿದ್ದಾರೆ ಎಂದು

ಹೇಳಿದೊಡನೆ ರಾಮಣ್ಣ ಗೌರಮ್ಮನವರ ಹಣ ಸಂದಾಯ ಮಾಡಲು ಅಪ್ಪಣೆ ಮಾಡಿಬಿಡುತ್ತಿದ್ದ. ಕೇವಲ ಐದು ನಿಮಿಷಗಳಲ್ಲಿ ಎರಡು ರೂಪಾಯಿ ಒಂಬತ್ತಾಣೆ ಒಂದು ಬಿಲ್ಲಿ (ಕಾಲಾಣೆ) ನನ್ನ ಕೈಗೆ ಬಂದುಬಿಡುತ್ತಿತ್ತು. ಈ ಹಣ ಗೌರಮ್ಮನವರಿಗೆ ಯಾಕೆ ಬರುತ್ತದೆ, ಎಂಬುದರ ಕಾರಣ ನನಗೆ ಆಮೇಲೆ ಗೊತ್ತಾಯಿತು.

ಈ ಹಣವನ್ನು ಕಂಡೊಡನೆ ಗೌರಮ್ಮ ನನ್ನ ಕೈಗೆ ಸಂತೆ ಸಾಮಾನು ಕಟ್ಟಿ ತರಲು ಬಟ್ಟೆ, ಗೋಣೀಚೀಲ ಕೊಡುತ್ತ ಒಂದು ಚೀಟಿಯನ್ನು ಕೈಗೆ ಕೊಡುತ್ತಿದ್ದಳು. ಆ ಚೀಟಿಯಂತೆ ಎಲ್ಲ ಸಾಮಾನು ತಂದು ಮನೆಗೆ ಹಾಕುತ್ತಿದ್ದೆ. ಸಂತೆಯಲ್ಲಿ ವ್ಯಾಪಾರ ಮಾಡುವುದನ್ನು ಕಲಿಸಿಕೊಟ್ಟ ಪ್ರಥಮ ಗುರುವೇ ಗೌರಮ್ಮ. ಗೌರಮ್ಮನ ಮನೆ ಸಂತೆ ಮುಗಿಸಿ ನಾನು ಅಡಿವೆಪ್ಪ ಮಾಸ್ತರರ ಮನೆಯ ಸಂತೆ ಮಾಡಲು ಬರಬೇಕಾಗಿತ್ತು. ಅಡಿವೆಪ್ಪ ಮಾಸ್ತರರು ಸಂತೆಗೆ ಹೋಗುತ್ತಿದ್ದುದು ಸಂತೆ ಹರಿಯುವ ಹೊತ್ತಿನ ಸುಮಾರಿಗೆ. ಆದ್ದರಿಂದ ನನಗೆ ಯಾವ ತೊಂದರೆಯೂ ಆಗುತ್ತಿರಲಿಲ್ಲ. ಅಡಿವೆಪ್ಪ ಮಾಸ್ತರರು ಶುಭ್ರ ಪಂಚೆಯುಟ್ಟು ಕೋಟು ಷರ್ಟ್ ಧರಿಸಿ ಬಿಳಿಯ ಜರಿಯ ರುಮಾಲು ಸುತ್ತಿ ಮುಂದೆ ಮುಂದೆ ಹೋಗುತ್ತಿದ್ದರೆ ಅವರ ಮನೆಯಲ್ಲಿ ಆಶ್ರಯ ಪಡೆದು ಓದುತ್ತಿದ್ದ ಐದು ಜನ ವಿದ್ಯಾರ್ಥಿಗಳಾದ ನಾವು ಕೈಯಲ್ಲಿ ಚೀಲಗಳು, ಬಟ್ಟೆಗಳು ಮೊದಲಾದವನ್ನು ಹಿಡಿದು ಹೋಗುತ್ತಿರುವುದೇ ಒಂದು ಸಂಭ್ರಮ. ಎರಡು ರೂಪಾಯಿ ಕೊಟ್ಟು ಇಪ್ಪತ್ತು ಸೇರು ಅಕ್ಕಿ, ಎಂಟಾಣೆ ಕೊಟ್ಟು ಒಬ್ಬರು ಹೊರುವಷ್ಟು ತರಕಾರಿ ಮನೆಗಾಗಿ ಕೊಳ್ಳಬೇಕಾಗಿತ್ತು. ಒಂದಾಣೆಗೆ ಎಂಟೊಂಬತ್ತು ಸೇರು ಬದನೆಕಾಯಿ, ಕೊನೆಕೊನೆಗೆ ಒಂದು ಧಡೆಯಾದರೂ ಸಿಕ್ಕೀತು. ಆಣೆಗೆ ಒಂದು ಧಡೆ ಉಳ್ಳಾಗಡ್ಡಿ, ಕಾಲಾಣೆಗೆ 100 ರಿಂದ 150 ಎಲೆ, ಒಂದಾಣೆಗೆ ಸೇರು ಅಡಿಕೆ, ಅರ್ಧ ಆಣೆಗೆ ಸೇರು ಮೆಣಸಿನಕಾಯಿ, ಕಾಲಾಣೆಗೆ ಒಂದು ಸೇರು ಹಸಿಮೆಣಸಿನಕಾಯಿ, ಇವನ್ನೆಲ್ಲ ಮನೆ ಉಪಯೋಗಕ್ಕೆ ಮಾಮೂಲಿಯಾಗಿ ಕೊಳ್ಳಲೇಬೇಕು. ಉಳಿದಂತೆ ಮೂಲಂಗಿ, ಮೆಂತೆಸೊಪ್ಪು ಇವೆಲ್ಲ ಒಂದಾಣೆಗೆ ಹೊರೆಹೊರೆಯಾಗಿ ಸಿಗುತ್ತಿತ್ತು. ಇವನ್ನೆಲ್ಲ ಮನೆಗೆ ಒಂದಾಣೆಯಲ್ಲಿ ಆರು ಸೇರು ಪುರಿ, ಕಾರದಾಣಿ ಹಾಕಿಸಿಕೊಂಡು ಕಟ್ಟಿ ತರುತ್ತಿದ್ದೆವು. ಪುರಿ ಮಾತ್ರ ಅಡಿವೆಪ್ಪ ಮಾಸ್ತರರು ಮತ್ತು ಅವರ ಶಿಷ್ಯರಾದ ನಮ್ಮ ಪಾಲು. ಉಳಿದದ್ದೆಲ್ಲಾ ಮನೆಗೆ ಹೋಗುತ್ತಿತ್ತು. ರಾತ್ರಿ ಲಾಟೀನು ಹಚ್ಚಿಕೊಂಡು ಮಧ್ಯದಲ್ಲಿಟ್ಟುಕೊಂಡು ಸುತ್ತಮುತ್ತ ಓದಲು ಕುಳಿತ ನಮ್ಮ ಮಧ್ಯದಲ್ಲಿ ಅಡಿವೆಪ್ಪ ಮಾಸ್ತರರು ಪುರಿಗಂಟು ಬಿಚ್ಚಿ ಎಲ್ಲರಿಗೂ ಒಂದೊಂದು ಬೊಗಸೆ ಪುರಿ, ಉಳ್ಳಾಗಡ್ಡಿ ಚೂರು, ಹಸಿಮೆಣಸಿಕಾಯಿ, ಕೋತಂಬ್ರಿ ಸೊಪ್ಪು ಕೊಡುತ್ತಿದ್ದರು. ಮಾಸ್ತರರೊಡನೆ ನಾವೆಲ್ಲ ಕುಳಿತು ತಿಂದು ಸ್ವಲ್ಪ ಹೊತ್ತು ಯಾವುದಾದರೂ ಅಭ್ಯಾಸದ ವಿಷಯ ಕುರಿತು ಚರ್ಚಿಸಿ ವಾರದ ಮನೆಯ ಊಟಕ್ಕೆ ಹೋಗಿಬಿಡುತ್ತಿದ್ದೆವು. ಊಟ ಮಾಡಿಕೊಂಡು ಬಂದು ಪಡಸಾಲೆಯಲ್ಲಿ ಉದ್ದಕ್ಕೆ ಐದಾರು ಜನವೂ ಮಲಗುತ್ತಿದ್ದೆವು. ಅಡಿವೆಪ್ಪನವರು ಒಳಗಿನ ಕೊಠಡಿಯಲ್ಲಿ ಮಲಗಿಬಿಡುತ್ತಿದ್ದರು.

ಬೆಳಿಗ್ಗೆ ಎದ್ದು ನಾವು ತೋಟದ ಬಾವಿಗೆ ಹೋಗಿ ಅಲ್ಲಿಯೇ ಪ್ರಾತರ್ವಿಧಿ ಮುಗಿಸಿ ಸ್ನಾನ ಮಾಡಿ ಬಂದು ಶಾಲೆಗೆ ಹೋಗಿಬಿಡುತ್ತಿದ್ದೆವು. ಸವಣೂರಿನಲ್ಲಿ ನನ್ನ ವಾರದ ಮನೆಯೂಟದ ಚರಿತ್ರೆಯಲ್ಲಿ ಹಾವೇರಿ ಸಾಹುಕಾರ ರುದ್ರಪ್ಪನವರ ಮನೆಯ ಊಟ ಎಂದೂ ಮರೆಯಲಾಗದಂತಹುದು. ಹಾವೇರಿ ರುದ್ರಪ್ಪನವರಿಗೆ ಈಗ ಅಂಥ ಸಾಹುಕಾರಿಕೆಯೇನೂ ಇಲ್ಲದಿದ್ದರೂ ಹೃದಯ ಸಾಹುಕಾರಿಕೆಯಂತೂ ಇತ್ತು. ಹಿಂದಿನ ಅವರ ಮನೆತನದ ಆಢ್ಯತೆಯ

ದಿನಗಳಲ್ಲಿ ಕರೆಯುತ್ತಿದ್ದ ಸಾಹುಕಾರರು ಎಂಬ ಅಡ್ಡಹೆಸರು ಮಾಯವಾಗಿದ್ದಿಲ್ಲ. ಅವರನ್ನು ಸವಣೂರಿನ ಜನವೆಲ್ಲ ಸಾಹುಕಾರ ರುದ್ರಪ್ಪನವರೆಂದೇ ಕರೆಯುತ್ತಿದ್ದರು. ಅವರ ಪೂರ್ಣ ವಿಳಾಸ 'ಹಾವೇರಿ ಸಾಹುಕಾರ ರುದ್ರಪ್ಪ' ಎಂದು. ಹಾವೇರಿ ಅನ್ನುವುದು ಅವರ ಮನೆತನದ ಅಡ್ಡ ಹೆಸರು. ಶನಿವಾರದಿನ ಇವರ ಮನೆಯ ಊಟಕ್ಕೆ ಹೋಗುತ್ತಿದ್ದ ನನ್ನನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡೇ ಊಟ ಮಾಡುತ್ತಿದ್ದರಿಂದ ನನಗೆ ಅವರ ಊಟದ ಐಭೋಗವೆಲ್ಲ ಲಭ್ಯ ವಾಗುತ್ತಿತ್ತಾಗಿ ಇವರ ಮನೆಯ ಊಟ ನನ್ನ ಪಾಲಿಗೆ ಸುಖೋಪಭೋಗ ಎಂದರೇನೆಂಬುದನ್ನು ಇಂದಿಗೂ ಜ್ಞಾಪಕ ಮಾಡಿಕೊಡುತ್ತಿದೆ.

ರುದ್ರಪ್ಪನವರು ರಸಿಕರು. ಅಷ್ಟೇ ಉದಾರಿಗಳು. ಅವರ ಭೋಜನದ ಸಡಗರ ಅಷ್ಟಿಷ್ಟಲ್ಲ. ಅವರು ಹನ್ನೊಂದು ಘಂಟೆಯ ಸುಮಾರಿಗೆ ಸ್ನಾನ ಮಾಡಿ ಊಟಕ್ಕೆ ಕುಳಿತರೆ ಹೆಣ್ಣುಮಕ್ಕಳು ಬಹಳ ಶ್ರದ್ಧೆಯಿಂದ ಮಾಡಿದ ಅನೇಕ ಪರಿಕರಗಳನ್ನು ಒದಗಿಸಬೇಕು. ರೊಟ್ಟಿಗೆ ಕಿರಕಸಾಲೆ ಅಥವಾ ಹರಿವೆ ಸೊಪ್ಪಿನಲ್ಲಿ ಒಂದಾದರೂ ಸೊಪ್ಪಿನ ಪಲ್ಯ, ಹೀರೆ, ಬದನೆ, ಚಳ್ಳವರೆ, ಚವಳಿಕಾಯಿ, ಹಾಗಲ, ಕುಂಬಳ, ಸವತೆಕಾಯಿಗಳಲ್ಲಿ ಯಾವುದಾದರೂ ಒಂದು ಅಥವಾ ಎರಡು ಪಲ್ಲೆ, ಗುರೆಳ್ಳು (ಹುಚ್ಚೆಳ್ಳು), ಅಗಸೆ ('ಅಗಸೆ' ಸಂಸ್ಕೃತದಲ್ಲಿ 'ಅಕಸಿ' ಎಂದು ಕರೆಯುವ ಧಾನ್ಯವಿಶೇಷ. ಈ ಧಾನ್ಯವನ್ನು ಹುರಿದು ಚಟ್ನಿ ಮಾಡುತ್ತಿದ್ದರು. 'ಕರಿಂಡಿ' ಎಂಬ ಹೆಸರಿನ ಹಸೀ ಮೆಣಸಿನಕಾಯಿ ಉಪ್ಪಿನಕಾಯಿಗೂ ಇದನ್ನೂ ಉಪಯೋಗಿಸುತ್ತಿದ್ದರು. ಆದಕ್ಕೆ ಅಗಸೀ ಚಟ್ನಿ ಎಂದೂ ಕರೆಯುತ್ತಿದ್ದರು. ರೊಟ್ಟಿಯೂಟಕ್ಕೆ ಇವೆಲ್ಲ ಉತ್ತಮ ಸಾಮಗ್ರಿಗಳು.) ಕಡ್ಲೆ, ಕೊಬ್ರಿ ಚಟ್ನಿಗಳು ಇರಲೇಬೇಕು. ಮೆಣಸಿನಕಾಯಿಯನ್ನು ಹುಣಸೆ ಹುಳಿಯಲ್ಲಿ ಒಂದು ದಿನ ನೆನೆ ಹಾಕಿ, ಬೆಲ್ಲ-ಬೆಳ್ಳುಳ್ಳಿ-ಜೀರಿಗೆ-ಸ್ವಲ್ಪ ಕಡಲೆಕಾಯಿ ತಿರುವಿದ ಕಾರದ ಚಟ್ನಿ ಬೇಕೇ ಬೇಕು. ಅನಂತರ ಕಾರಬ್ಯಾಳಿ ಆಗಲೇಬೇಕು. ಕಾರಬ್ಯಾಳಿ ಎಂದರೆ ಹೆಚ್ಚಾಗಿ ತೊಗರಿಬೇಳೆ ಉಪಯೋಗಿಸಿ ತರಕಾರಿ ವಗೈರೆ ಏನನ್ನೂ ಹಾಕದೆ ಮಾಡಿದ ಸ್ವಲ್ಪ ಗಟ್ಟಿಯಾದ ಸಾರು. ಹುಣಸೇ ಗಿಡ ಚಿಗಿತು ಹೂ ಬಿಟ್ಟಾದ ಒಂದೆರಡು ಸಲವಾದರೂ ಅದರ ಹೂಚಿಗುರಿನ ಹುಳಿಪಲ್ಯೆ ಆಗಬೇಕಾಗುತ್ತಿತ್ತು. ಅವರ ಹಿತ್ತಿಲಗಿಡದಿಂದ ನಾವೇ ಎರಡು ಸಲ ಚಿಗುರು ಹೂ ಹರಿದು ತಂದು ಕೊಟ್ಟದ್ದುಂಟು. ಈ ಎಲ್ಲ ಪಲ್ಯ ಸಾರೆಲ್ಲವೂ ಶುದ್ಧ ಕುಸುಬೆ ಎಣ್ಣೆ ಉಪಯೋಗಿಸಿ ಮಾಡಿದ್ದಾಗಿರಬೇಕು. ಅನಂತರ ಮೆಂತೆ, ಮೂಲಂಗಿ ಪಚಡಿ, (ಪಚಡಿ ಎಂದರೆ ಮೂಲಂಗಿಯನ್ನು ಸೊಪ್ಪುಗಡ್ಡೆ ಸಮೇತವಾಗಿ ಚೂರುಚೂರಾಗಿ ಕತ್ತರಿಸಿ, ಅದರಲ್ಲಿ ಮೆಂತೆಸೊಪ್ಪನ್ನು ಸೇರಿಸಿ, ಉಳ್ಳಾಗಡ್ಡಿಯ ಸಣ್ಣ ಚೂರು ಬೆರೆಸಿ, ಉಪ್ಪುಹಚ್ಚಿದ ಹಸಿಯ ಪದಾರ್ಥ.) ಉಳ್ಳಾಗಡ್ಡಿ ಚೂರುಗಳು, ದೊಡ್ಲಿ, ಕಂಚಿ, ಮಾವು, ಲಿಂಬೆ ಉಪ್ಪಿನಕಾಯಿಗಳಲ್ಲಿ ಒಂದೆರಡು ತರದ ಉಪ್ಪಿನಕಾಯಿ ಇರಬೇಕು. ಇಷ್ಟೆಲ್ಲ ಪರಿಕರದೊಡನೆ ದೊಡ್ಡ ಜೋಳವನ್ನು (ದೊಡ್ಡ ಜೋಳ ಎಂದರೆ ಜೋಳದ ಅನೇಕ ಜಾತಿಗಳಲ್ಲಿ ಒಂದು ಶ್ರೇಷ್ಠ ತಳಿಯ ಜೋಳ. ಇದಕ್ಕೆ 'ಫುಲ್ಗಾರ' ಎಂದೂ ಕರೆಯುತ್ತಿದ್ದರು. ಈ ಜೋಳದ ತಳಿ ಇತ್ತೀಚಿನ ದಿನಗಳಲ್ಲಿ ಮಾಯವಾಗಿದೆ. ಎಲ್ಲ ಜೋಳಗಳಿಗಿಂತ ಈ ಜೋಳಕ್ಕೆ ಅಂದಿನ ಮಾರ್ಕೆಟ್‌ನಲ್ಲಿ ಬೆಲೆ ಸ್ವಲ್ಪ ಹೆಚ್ಚು. ಇದರ ಇಳುವರಿ ಕಡಿಮೆ) ಬೀಸುಕಲ್ಲಿನಲ್ಲಿ ಬೀಸಿ ಸೋಸಿ ಮಾಡಿದ ರೊಟ್ಟಿಯ ಊಟ. ಗುರೆಳ್ಳು, ಅಗಸಿ ಚಟ್ನಿಗೆ ಮೊಸರೇ ಆಗಬೇಕು. ಕಾರದ ಚಟ್ನಿಗೆ ತುಪ್ಪವೇ ಆಗಬೇಕು. ಇದರಲ್ಲಿ ಎಳ್ಳಷ್ಟೂ ವ್ಯತ್ಯಾಸವಿಲ್ಲ. ಒಮ್ಮೊಮ್ಮೆ ಕುಸುಬೆಎಣ್ಣೆಯನ್ನು ಚಟ್ನಿಗೆ ಹಾಕಿಸಿಕೊಳ್ಳುವುದು ಇರುತ್ತಿತ್ತು. ವಿಶೇಷವಾಗಿ ಒಮ್ಮೊಮ್ಮೆ ಬೇಲಿಯ ಮೇಲೆ ಬೆಳೆದ

'ಮಂಗ್ರೋಳಿ' ಚಟ್ನಿ ಮಾಡಿಸುತ್ತಿದ್ದುದುಂಟು. ಇದು ಒಳ್ಳೆಯದೆಂದು ಅವರ ವ್ಯಾಖ್ಯಾನ. ತೋಟದಿಂದ ಅಪರೂಪಕ್ಕೊಮ್ಮೆ ಕೇಸಿನ ದಂಟು ತರಿಸಿ ಹುಳಿಪಲ್ಲೆ ಮಾಡಿಸುತ್ತಿದ್ದರು. ಇದು ಹೊಟ್ಟೆ ಹುಳುಗಳಿಗೆ ಒಳ್ಳೆಯದಂತೆ. ಹೀಗಿತ್ತು ಅವರ ಊಟದ ವೈಖರಿ. ಒಂದು ಘಂಟೆಯವರೆಗೆ ನಿಧಾನವಾಗಿ ಅವರ ಊಟ ನಡೆಯುತ್ತಿತ್ತು. ಆ ಊಟದ ರುಚಿಗೆ ಮಾರುಹೋದ ನನಗೆ ಶನಿವಾರ ಎಂದು ಬರುತ್ತದೋ ಎಂದು ಚಡಪಡಿಸುತ್ತಿದ್ದೆ. ಬಡ ವ್ಯವಸಾಯಗಾರರ ಮನೆತನದಲ್ಲಿ ಬೆಳೆದು ಬಂದಿದ್ದ ನಾನು, ಇಂಥ ವೈಭವದ ಊಟವನ್ನು ಕಂಡವನೇ ಅಲ್ಲ. ನಾಲಗೆಯ ಚಾಪಲ್ಯವನ್ನೇ ಅಧಿಕಗೊಳಿಸಿದ್ದ ಈ ಊಟದ ರುಚಿ ನನ್ನ ಜೀವನದಲ್ಲಿ ಎಂದೂ ಮರೆಯಲಾರದಂತಹುದು. ಎಲ್ಲ ಸಾಮಗ್ರಿಗಳೂ ಇರಬಹುದು. ರುಚಿಕಟ್ಟಾಗಿ ಮಾಡುವ ವಿಧಾನ ಗೊತ್ತಿದ್ದರೆ ತಾನೆ? ಸಾಹುಕಾರರು ರುಚಿಕಟ್ಟಾದ ಅಡಿಗೆ ಮಾಡುವ ದಾವಣಗೆರೆಯ ಓರ್ವ ಹೆಣ್ಣನ್ನೇ ದ್ವಿತೀಯ ಪತ್ನಿಯನ್ನಾಗಿ ಪಡೆದುತಂದು ಮನೆಯಲ್ಲಿಟ್ಟುಕೊಂಡಿದ್ದರು. ಅವರ ಹಸ್ತಗುಣವೇ ಇಂಥ ವೈಭವಪೂರ್ಣ ಅಡಿಗೆಯ ಗುಟ್ಟಾಗಿತ್ತು. ಶನಿವಾರ ದಿನ ಶಾಲೆ ಬಿಟ್ಟೊಡನೆ ಆ ಊಟಕ್ಕೆ ಆಕರ್ಷಿತನಾಗಿದ್ದ ನಾನು ಬೇಗ ಮನೆಗೆ ಬಂದುಬಿಡುತ್ತಿದ್ದೆ. ಬಂದೊಡನೆ ಎರಡು ಕೊಡ ಸಿಹಿನೀರನ್ನು ಊರಹೊರಗಿನ ಬಾವಿಯಿಂದ ತಂದುಹಾಕಿ, ಒಮ್ಮೊಮ್ಮೆ ಹಿತ್ತಿಲ ಬಾವಿಯಿಂದ ನಾಲ್ಕಾರು ಕೊಡ ಸೌಳುನೀರು ಸೇದಿ ಹಾಕುತ್ತಿದ್ದೆ. ನನ್ನ ಕೆಲಸವೆಲ್ಲ ಮುಗಿದ ಮೇಲೆ ಸಾಹುಕಾರರು ನನ್ನನ್ನು ಪಕ್ಕದಲ್ಲೇ ಕುಳ್ಳಿರಿಸಿಕೊಂಡು ತಾವು ಮಾಡುವ ಊಟದ ಪರಿಕರಗಳನ್ನೆಲ್ಲ ನನಗೂ ಹಾಕಿಸಿ, ಊಟ ಮಾಡು, ಅದನ್ನು ತಿನ್ನು, ಇದನ್ನು ತಿನ್ನು ಎಂದು ಹೇಳುತ್ತಿದ್ದ ವಾತ್ಸಲ್ಯಪೂರ್ಣ ಮಾತುಗಳನ್ನು ಮರೆಯಲಾರೆ. ನಾನೂ ಮೂರು ನಾಲ್ಕು ರೊಟ್ಟಿ ತಿನ್ನುತ್ತಿದ್ದೆ. ರೊಟ್ಟಿ ತಿಂದ ಮೇಲೆ ಸಣ್ಣಕ್ಕಿಯ ಅನ್ನವನ್ನು ಅನೇಕ ವ್ಯಂಜನಗಳೊಡನೆ ಊಟ ಮಾಡಿ, ಏದುತ್ತ ಮಾಸ್ತರರ ಮನೆಗೆ ಬರುತ್ತಿದ್ದೆ. ಎಷ್ಟೋ ಸಲ ನನಗೆ ವಾರದ ಮನೆಯಲ್ಲಿ ಆಗಾಗ ವ್ಯತ್ಯಾಸವಾಗುತ್ತಿತ್ತು. ಕೆಲವರು ಸಕಾಲದಲ್ಲಿ ಅಡಿಗೆ ಮಾಡಿ ನೀಡುವುದೇ ಇಲ್ಲ. ಬೇರೆ ಯಾವುದಾದರೂ ಮನೆ ನೋಡಿಕೋ ಎಂದು ಹೇಳುವವರೂ ಇದ್ದರು. ಆಗ ನನ್ನ ಈ ತೊಂದರೆಯನ್ನು ಯಾರಿಗೂ ಹೇಳದೆ ಪುರಿ ಕಡಲೆ ತಿಂದು ನೀರು ಕುಡಿದು ಇದ್ದು ಬಿಡುತ್ತಿದ್ದೆ. ಈ ಸಮಯದಲ್ಲಿ ನನ್ನ ಮಿತ್ರನೊಬ್ಬ ಒಂದು ಪ್ರಖ್ಯಾತ ಕಿರಾಣಿ ಅಂಗಡಿಯಲ್ಲಿ ಇದ್ದ. ಅವನ ಸಹಾಯ ಈಗ ಜ್ಞಾಪಕಕ್ಕೆ ಬರುತ್ತದೆ. ನಾನು ಕಾಲಾಣೆ ಕಡಲೆ ಕೊಡು ಎಂದು ಕೇಳಿದರೆ ಆತ ಕಡಲೆಯಲ್ಲಿ ಸಕ್ಕರೆ ಉತ್ತತ್ತಿ ಸೇರಿಸಿ ಮುಕ್ಕಾಲಾಣೆಯ ಪದಾರ್ಥ ಕಟ್ಟಿಕೊಟ್ಟು ಕಳಿಸಿಬಿಡುತ್ತಿದ್ದ. ಇದು ತಪ್ಪೇ ಹೌದು. ಆದರಲ್ಲಿ ಈಗ ಈ ವ್ಯವಹಾರದ ನೆನಪಾದಾಗಲೆಲ್ಲ ಅಹಿತವೆನಿಸುತ್ತದೆ.

### *ಧಾರವಾಡ ಜಿಲ್ಲೆಗೆ ನನ್ನನ್ನು ಪ್ರಥಮನನ್ನಾಗಿ ತರಲು ಪ್ರಯತ್ನ*

ಅಡಿವೆಪ್ಪ ಮಾಸ್ತರರಿಗೆ ನನ್ನನ್ನು ಧಾರವಾಡ ಜಿಲ್ಲೆಗೆ ಮೊದಲ ನಂಬರು ಪಟ್ಟಿ ಮುಲ್ಕೀ ಪರೀಕ್ಷೆಯಲ್ಲಿ ತೇರ್ಗಡೆ ಮಾಡಿಸಬೇಕೆಂಬ ಸಂಕಲ್ಪವಿತ್ತು. ಮಧ್ಯಾಹ್ನ 2 ಘಂಟೆಗೆ ಶಾಲೆಗೆ ಹೋಗುವವರೆಗೆ, ರಾತ್ರಿ ಊಟಕ್ಕೆ ಹೋಗುವ ಮೊದಲು ನನ್ನನ್ನು ಉಳಿದ ನನ್ನ ಹಾಗೆ, ಅವರ ಮನೆಯ ಆಶ್ರಯ ಪಡೆದು ಓದುತ್ತಿದ್ದ ನಾಲ್ಕೈದು ಜನ ಹುಡುಗರನ್ನು ಕುಳ್ಳಿರಿಸಿಕೊಂಡು, ಗಣಿತ, ಭೂಮಿತಿ, ದೇಶೀ ಜಮಾ ಖರ್ಚು ಮೊದಲಾದ ವಿಷಯಗಳನ್ನು ಪಾಠ ಹೇಳುತ್ತಿದ್ದರು. ಪರೀಕ್ಷೆ ಸಮೀಪಿಸಿದಂತೆ ಹೊರಗಿನಿಂದ ಹತ್ತು ಹನ್ನೆರಡು ವಿದ್ಯಾರ್ಥಿಗಳು ಬರುತ್ತಿದ್ದರು. ಅವರಿಗೆಲ್ಲಾ ಎರಡು ಲಾಟೀನು ಹಚ್ಚಿ ಪಾಠ ಹೇಳಿದ್ದೇ ಹೇಳಿದ್ದು. ಎಲ್ಲವೂ

ನಿಶ್ಶುಲ್ಕ. ಬಿಡಿಗಾಸು ಯಾರೂ ಬಿಚ್ಚುವಂತಿಲ್ಲ. ಇಂಥ ಹಿತಚಿಂತಕ ಉಪಾಧ್ಯಾಯರನ್ನು ಎಲ್ಲಿಂದ ತರೋಣ. ಆದರೆ ಮಾಸ್ತರರ ಆಸೆ ನಿರಾಸೆಯಾಯಿತು. ನಾನು ಜಿಲ್ಲೆಗೆ ಪ್ರಥಮನಾಗಿ ಬರದೆ ಇಪ್ಪತ್ತೊಂದನೆಯ ರ್‍ಯಾಂಕ್ ಬಂದುಬಿಟ್ಟೆ. ಸನ್ನಿವೇಶ ನನಗೆ ಮೋಸ ಮಾಡಿತು. ನಾನು ಮುಲ್ಕೀ ಪರೀಕ್ಷೆಗಾಗಿ ಧಾರವಾಡಕ್ಕೆ ಹೋಗುತ್ತಲೇ ಜ್ವರ ಪ್ರಾರಂಭವಾಗಿಬಿಟ್ಟಿತು. 104 ಡಿಗ್ರಿ ಜ್ವರದಲ್ಲಿಯೇ ಮೊದಲನೆಯ ದಿನದ ಪೇಪರಿಗೆ ಉತ್ತರಿಸಿದೆ. ಆಗ ನಮ್ಮ ಮಾಸ್ತರರ ಗಡಿಬಿಡಿ ಅಷ್ಟಿಷ್ಟಲ್ಲ. ಡಾಕ್ಟರರಿಗೆ ತೋರಿಸಿದರು, ಇಂಜೆಕ್ಷನ್ ಕೊಡಿಸಿದರು, ಗುಳಿಗೆ ನುಂಗಿಸಿದರು. ಮೊದಲ ಪೇಪರ್ ದಿನ ತಾವೇ ನಮ್ಮ ಪರೀಕ್ಷಾ ಹಾಲ್‌ನ ಹೊರಗಿದ್ದು ಎರಡು ಸಲ ಚಹಾ ತರಿಸಿಕೊಟ್ಟದ್ದು ಜ್ಞಾಪಕ. ಪರೀಕ್ಷೆ ಮುಗಿಸಿ ಹೊರಗೆ ಬಂದೊಡನೆ ಟಾಂಗಾದಲ್ಲಿ ಕುಳ್ಳಿರಿಸಿಕೊಂಡು ನಾವು ಉಳಿದುಕೊಂಡಿದ್ದ ಖಾನಾವಳಿಗೆ ಕರೆದುಕೊಂಡು ಬಂದು ಉಪಚರಿಸುತ್ತಿದ್ದರು.

ನಾವು ಉಳಿದುಕೊಂಡಿದ್ದ ಖಾನಾವಳಿಯ ಯಜಮಾನಿಯ ಹೆಸರು ಭೀಮರತೆವ್ವ ಎಂದು. ಅದೊಂದು ಪ್ರಸಿದ್ಧ ಖಾನಾವಳಿ. ಊಟ ಉಪಚಾರ ಒಳ್ಳೆಯ ಮಟ್ಟದ್ದು. ಕಾಯಿಲೆಯವನಾದ ನನಗೆ ಯಾವಯಾವ ಹೊತ್ತಿಗೆ ಏನೇನು ಬೇಕೋ ಅದನ್ನು ಮಾಡಿ ಕೊಡತಕ್ಕ ಸಹೃದಯದ ಹೆಣ್ಣುಮಗಳು ಆಕೆ. ಆ ವರ್ಷ ನಾನು ಹಿಂದಿನ ವರ್ಷದಂತೆ ಮೂರು ರೂಪಾಯಿಗಳಲ್ಲಿ ಧಾರವಾಡಕ್ಕೆ ಪರೀಕ್ಷೆಗೆ ಬಂದಿರಲಿಲ್ಲ. ಒಂಬತ್ತು ರೂಪಾಯಿಯ ದೊಡ್ಡ ಮೊತ್ತದೊಡನೆ ಬಂದಿದ್ದೆ. ಅದೆಲ್ಲ ಒಂದು ರೀತಿಯಿಂದ ನನ್ನ ಪೋಷಕಳೇ ಆಗಿದ್ದ ಹಾವೇರಿ ಗೌರಮ್ಮನ ಔದಾರ್ಯದ ಫಲ. ಆ ಮುದುಕಿ ಪರೀಕ್ಷೆಗೆ ಧಾರವಾಡಕ್ಕೆ ಹೊರಡಲು ಒಂದು ವಾರ ಮುಂದಿರುವಾಗಲೇ ಮಹಬೂಬ್ ಅಲ್ಲೀಖಾನ್‌ರವರ ಜಿನ್ನಿಂಗ್ ಫ್ಯಾಕ್ಟರಿಯ ಮ್ಯಾನೇಜರ್ ಆದ ರಾಮಣ್ಣನವರಿಗೆ ಒಂದು ಚೀಟಿ ಬರೆದು, ನಮ್ಮ ಈ ಹುಡುಗ ಬುದ್ಧಿವಂತ, ಮುಲ್ಕೀ ಪರೀಕ್ಷೆಗೆ ಧಾರವಾಡಕ್ಕೆ ಹೋಗಬೇಕು. ತುಂಬಾ ಬಡವ. ಇವನಿಗೆ ಸಹಾಯ ಮಾಡಬೇಕು ಎಂದು ಬರೆದು ಕಳಿಸಿಬಿಟ್ಟಳು. ನಾನೇ ಹೋದೆ. ನಾನು ಚೀಟಿ ಒಯ್ದು ಕೊಟ್ಟಾಗ ರಾಮಣ್ಣ ಎಂಟು ಹತ್ತು ಜನ ದಲಾಲರ ಮಧ್ಯದಲ್ಲಿ ಹತ್ತೀ ಖರೀದಿಯ ಬಗೆಗೆ ಸಮಾಲೋಚನೆಗೆ ತೊಡಗಿದ್ದರು. ಗೌರಮ್ಮ ಏನೋ ಹೇಳಿ ಕಳಿಸಿದ್ದಾರೆಂದು ತಿಳಿದುಕೊಂಡುಬಿಟ್ಟರು. ನನಗೂ ಅವರು ಒಂದು ವರ್ಷದಿಂದ ಪರಿಚಯದವರೇ ಆಗಿದ್ದರಲ್ಲವೆ? ನಾನು ಹೋದೊಡನೆ ತಲೆಯಿಂದಲೇ ಸಂಜ್ಞೆಯ ಮೂಲಕ 'ಏನು' ಎಂದರು. ನಾನು ಮಾತನಾಡದೆ ಚೀಟಿಕೊಟ್ಟೆ. ಚೀಟಿ ನೋಡಿಕೊಂಡು ಮಡಚಿ ಜೇಬಿನಲ್ಲಿಟ್ಟುಕೊಂಡು 'ಹೊರಗೆ ಇರು' ಎಂದು ಹೇಳಿದರು. ನಾನು ಹೊರಗೆ ಕುಳಿತೆ. ದಲಾಲರೊಡನೆ ಮಾತುಕತೆ ಮುಗಿದ ಮೇಲೆ ಎಲ್ಲರಿಗೂ ಗೌರಮ್ಮನವರ ಚೀಟಿ ತೋರಿಸಿ, ಈ ಹುಡುಗನಿಗೆ ಸಹಾಯ ಮಾಡಿ ಎಂದು ಹೇಳಿ ತಾವೇ ಮೊದಲು ಜಿನ್ನಿಂಗ್ ಫ್ಯಾಕ್ಟರಿ ಪರವಾಗಿ ಎರಡು ರೂಪಾಯಿ ಬರೆದು ನನ್ನನ್ನು ಕರೆದು ಆ ಕೂಡಲೇ ಎರಡು ರೂಪಾಯಿ ಕೈಗೆ ಕೊಟ್ಟರು. ಅವರು ಕೊಟ್ಟೊಡನೆ ಎಲ್ಲ ದಲಾಲರೂ ಒಂದೊಂದು ರೂಪಾಯಿ ಬರೆದು 'ಉದ್ರಿ (ಉದ್ರಿ = ಸಾಲ, ಕೈಮೇಲೆ ಕೊಡದೆ ಆಮೇಲೆ ಕೊಡುತ್ತೇನೆಂದು ಹೇಳುವಿಕೆ) ಗಿದ್ರಿ' ಏನೂ ಹೇಳದೆ ಮಾತನಾಡದೆ ಒಂದೊಂದು ರೂಪಾಯಿ ತೆಗೆದು ಕೊಟ್ಟರು. ಆ ಸಮಯದಲ್ಲಿ ನನ್ನ ಕೈಗೆ ಒಂಬತ್ತು ರೂಪಾಯಿ ಬಂದುಬಿಟ್ಟಿತು. ಆ ಸಮಯದಲ್ಲಿ ನಾನು ನನ್ನನ್ನು ಬಹು ದೊಡ್ಡ ಶ್ರೀಮಂತನೆಂದು ಭಾವಿಸಿಬಿಟ್ಟೆ. ಧಾರವಾಡದ ಪರೀಕ್ಷೆಗೆ ಈ ಹಣದಲ್ಲಿ ಮೂರು ಸಲ ಹೋಗಿಬರಬಹುದೆಂದುಕೊಂಡು ನನ್ನ ಭುಜವನ್ನು ನಾನೇ ತಟ್ಟಿಕೊಳ್ಳುತ್ತ ಬಂದಿದ್ದೆ.

ಆದ್ದರಿಂದ ಧಾರವಾಡದಲ್ಲಿ ಈ ವರ್ಷ ಯಾವ ತೊಂದರೆಯೂ ಆಗಲಿಲ್ಲ. ನಮ್ಮ ಮಾಸ್ತರರ ಸಂಗಡ ಹೋದ ನಮಗೆ ಒಬ್ಬೊಬ್ಬರಿಗೆ ದಿನವೂ ನಾಲ್ಕಾಣೆ ಹೋಟಲ್ ಬಾಡಿಗೆ ಅಷ್ಟೆ. ಊಟಕ್ಕೆ ಬೆಳಿಗ್ಗೆ ಒಂದೂವರೆ ಆಣೆ, ರಾತ್ರಿ ಒಂದೂವರೆ ಆಣೆ. ಜ್ವರ ಬಂದ ನನಗೆ ಹಾಲು, ಅನ್ನ ಅಷ್ಟೆ ಕೊಡುತ್ತಿದ್ದರು. ಕುಡಿಯಲು ಒಂದು ದೊಡ್ಡ ಲೋಟ ಹಾಲು ಕೊಡುತ್ತಿದ್ದರು. ಇನ್ನು ಟೀಯನ್ನು ನಮ್ಮ ಮಾಸ್ತರರೇ ತಂದುಕೊಡುತ್ತಿದ್ದರು. ನಾನು ಟೀ ಕುಡಿಯಲು ಪ್ರಾರಂಭಿಸಿದ್ದು ಇದೇ ಸಮಯವಾದರೂ ಜ್ವರದ ಕಾರಣ ತಾತ್ಕಾಲಿಕವಾಗಿ ಕುಡಿದೆ. ಮುಂದೆ ಟೀ ಕುಡಿಯುವ ಹವ್ಯಾಸಕ್ಕೆ ಇಳಿಯಲಿಲ್ಲ. ಅದೊಂದು ಕೆಟ್ಟ ಪೇಯವೆಂದೂ, ಜ್ವರ ಬಂದಾಗ ಮಾತ್ರ ಕುಡಿಯಬಹುದೆಂದೂ ನನ್ನ ಆಗಿನ ತಿಳುವಳಿಕೆ. ನಮ್ಮ ಉಪಾಧ್ಯಾಯರಾಗಲಿ ಇನ್ನುಳಿದ ಹುಡುಗರಾಗಲಿ ಟೀ-ಕಾಫಿ ಚಟದವರಾಗಲಿ ಆಗಿರಲಿಲ್ಲ. ನಮಗೆ ಹೊಟ್ಟೆ ತುಂಬಾ ಎರಡು ಹೊತ್ತು ಊಟ ಬಿದ್ದರೆ ಆಗಿಹೋಯಿತು. ಆಗಾಗ ಏನೇನನ್ನೋ ತಿನ್ನುವ ಚಟವಿರಲಿಲ್ಲ. ಹಾಗೇನಾದರೂ ತಿನ್ನಬೇಕೆನಿಸಿದರೆ ಮಂಡಕ್ಕಿ ಕಾರಸೇವೆ ಇದ್ದೇ ಇದೆ. ಒಂದು ಬಿಲ್ಲಿ (ಕಾಲಾಣೆ) ಕೊಟ್ಟರೆ ಎರಡು ಸೇರು ಪುರಿ, ಒಂದು ಬಿಲ್ಲಿ ಕಾರಸೇವೆ ಹಾಕಿಸಿಕೊಂಡು ಅರ್ಧ ಆಣೆಯಲ್ಲಿ ನಾಲ್ಕೈದು ಜನ ತಿಂಡಿ ತಿಂದುಬಿಡುತ್ತಿದ್ದೆವು. ವಿಶೇಷ ಸಂದರ್ಭದಲ್ಲಿ ಬೆಲ್ಲದ ಕರಿದಂಟು, ಪುಗ್ಗೆ ಕಾರಮಂಡಕ್ಕಿ ತಿನ್ನುತ್ತಿದ್ದೆವು.

ಅಂತು ಭೀಮರತೆವ್ವನ ಹೋಟಲಲ್ಲುಳಿದು 1935ನೇ ಇಸ್ವಿ ಏಪ್ರಿಲ್ ತಿಂಗಳಲ್ಲಿ ನಡೆದ ಮುಲ್ಕೀ ಪರೀಕ್ಷೆಯನ್ನು ಜ್ವರದಲ್ಲಿಯೇ ಬರೆದು 21ನೆಯ ರ್‍ಯಾಂಕ್ ಗಳಿಸಿದ್ದು ನಮ್ಮ ಅಡಿವೆಪ್ಪ ಮಾಸ್ತರರಿಗೆ ಸಮಾಧಾನದ ಉಸಿರು ಬಿಡುವಂತಾಯಿತು. ರಿಜಲ್ಟ್ ಬಂದ ದಿನ ಹೈಸ್ಕೂಲ್ ಹೆಡ್ಮಾಷ್ಟರರು ಮ್ಯಾಟ್ರಿಕ್ ಪರೀಕ್ಷೆಯ ಫಲಿತಾಂಶವನ್ನು, ಅಡಿವೆಪ್ಪ ಮಾಸ್ತರರು ಮುಲ್ಕೀ ಪರೀಕ್ಷೆಯ ಫಲಿತಾಂಶವನ್ನು ನವಾಬ ಸಾಹೇಬರ ಬಂಗಲೆಗೆ ಹೋಗಿ ಅರಿಕೆ ಮಾಡಿಕೊಂಡು ಬರಬೇಕಾಗಿತ್ತು. ಆ ದಿನ ಹೋದಾಗ ನವಾಬ ಸಾಹೇಬರಿಗೆ "ನಮ್ಮ ವಿದ್ಯಾರ್ಥಿಯೊಬ್ಬ ಈ ವರ್ಷ ಧಾರವಾಡ ಜಿಲ್ಲೆಗೇ ಪ್ರಥಮನಾಗಿ ಬರಬೇಕಾಗಿತ್ತು. ಧಾರವಾಡಕ್ಕೆ ಹೋದ ದಿನವೇ ಜ್ವರ ಬಂದು ಜ್ವರದಲ್ಲಿಯೇ ಪರೀಕ್ಷೆಯನ್ನೆಲ್ಲ ಬರೆದು 21ನೆಯ ರ್‍ಯಾಂಕ್ ಗಳಿಸಿದ್ದಾನೆ" ಎಂದು ಹೇಳಿದರಂತೆ. ನವಾಬರು ಮೆಚ್ಚುಗೆ ಸೂಚಿಸಿದರಂತೆ. ಇದನ್ನು ನಮ್ಮ ಅಡಿವೆಪ್ಪ ಮಾಸ್ತರರು ಆಗಾಗ ಹೆಮ್ಮೆಯಿಂದ ಹೇಳುತ್ತಿದ್ದುದುಂಟು. ಅಡಿವೆಪ್ಪ ಮಾಸ್ತರರು ಸಾಯುವವರೆಗೂ ನನ್ನೊಡನೆ ಪತ್ರ ವ್ಯವಹಾರವನ್ನಿಟ್ಟುಕೊಂಡಿದ್ದರು. ನಾನು ಬೆಂಗಳೂರಿನಲ್ಲಿ ಓರ್ವ ಪ್ರಸಿದ್ಧ ಶಿಕ್ಷಕ, ಲೇಖಕ ಇತ್ಯಾದಿ ಅಂಶಗಳನ್ನು ಅವರಿವರಿಂದ ತಿಳಿದು ಶ್ಲಾಘಿಸಿ ಪತ್ರ ಬರೆಯುತ್ತಿದ್ದರು. ಆಗಾಗ ಬರಲು ತಿಳಿಸುತ್ತಿದ್ದರು. ಒಂದು ಸಲ ಹೋಗಿದ್ದೆ. ಆ ದಿವಸ ಇಡೀ ಊರನ್ನು ಸುತ್ತಿಸಿ ಇವನು ನಮ್ಮ ಶಿಷ್ಯ ಹಾಗೆ ಹೀಗೆ ಎಂದು ಹೇಳಿ ಸಂತೋಷಿಸುತ್ತಿದ್ದರು. ಅಷ್ಟು ಹೊತ್ತಿಗಾಗಲೇ ನನ್ನ ನಚ್ಚಿನ ಗೌರಮ್ಮ, ಸಾಹುಕಾರ ರುದ್ರಪ್ಪ ಸತ್ತು ಹೋದದ್ದನ್ನು ತಿಳಿದು ಅವರವರ ಮನೆಗೆ ಹೋಗಿ ಅಭಿನಂದನೆ ಸಲ್ಲಿಸಿ ಬಂದೆ. ಅಡಿವೆಪ್ಪ ಮಾಸ್ತರರು ಮಾತ್ರ ತಾವು ಸಾಯುವುದಕ್ಕೆ 15 ದಿನ ಮುಂಚೆ ಒಂದು ಪತ್ರ ಬರೆದು 'ನನಗೀಗ ಎಂಬತ್ತು ವರ್ಷ. ಹೇಗಿದ್ದೇನೆಂದು ಭಾವಿಸಿಕೋ....ನಿನ್ನನ್ನು ನೋಡುವ ಆಸೆ. ಬೆಂಗಳೂರಿನಿಂದ ನನಗೆ ಒಂದು ಚಿತ್ತ ತೆಗೆದುಕೊಂಡು ಬಾ. ನೀನು ಬರೆದಿರುವ ಪುಸ್ತಕ ತೆಗೆದುಕೊಂಡು ಬಾ' ಎಂದೂ ತಿಳಿಸಿದ್ದರು. ನಾನು ಎಲ್ಲವನ್ನೂ ತೆಗೆದುಕೊಂಡು ಒಂದು ಜೊತೆ ಪಂಚೆ, ಅಂಗಿಯ ಬಟ್ಟೆ

ತೆಗೆದುಕೊಂಡು ಹೋದೆ. ಆ ದಿನ ಅವರು ನನಗೆ ಸಿಗಲೇ ಇಲ್ಲ. ಒಯ್ದ ಸಾಮಗ್ರಿಗಳನ್ನು ಅವರ ಮನೆಯಲ್ಲಿ ಕೊಟ್ಟು ಇನ್ನೊಮ್ಮೆ ಬರುತ್ತೇನೆಂದು ಧಾರವಾಡದಲ್ಲಿದ್ದ ನನ್ನ ಮಗಳ ಮನೆಗೆ ಹೋದೆ. ಧಾರವಾಡದಿಂದ ನೇರವಾಗಿ ಬೆಂಗಳೂರಿಗೆ ಬಂದೆ. ನಾನು ಬಂದ ಒಂದೇ ವಾರದಲ್ಲಿ ಅವರು ಸತ್ತರೆಂಬ ಕಾಗದ ಅವರ ಮಗ ಎಲ್ಲಪ್ಪನಿಂದ ಬಂದಿತು. ಆಗ ನನಗಾದ ಸಂಕಟವನ್ನು ವಿವರಿಸಲಾರೆ. 3 ದಿನ ನಿದ್ರೆ ಬರಲಿಲ್ಲ. ಎಂಥ ಅಪರಾಧ ನನ್ನಿಂದಾಯಿತಲ್ಲಾ! ಎಂದು ಮಮ್ಮಲ ಮರುಗಿದೆ.

ಮುಲ್ಕೀ ಪರೀಕ್ಷೆ ಮುಗಿಸಿಕೊಂಡು ಧಾರವಾಡದಿಂದ ಸವಣೂರಿಗೆ ಉಳಿದ ದುಡ್ಡಿನಲ್ಲಿ ಮೂರು ರೂಪಾಯಿ ಕೊಟ್ಟು, ರಾತ್ರಿ ಹೊದ್ದುಕೊಳ್ಳಲು ಒಂದು ಒಳ್ಳೆಯ ರಗ್ಗನ್ನು, ಆರಾಣೆಗೆ ಗಜದ ಕೋಟಿನ ಬಟ್ಟೆಯನ್ನು, ಒಂದೂ ಮುಕ್ಕಾಲು ರೂಪಾಯಿ ಕೊಟ್ಟು ಸಿರ್ಸಿಯ ಜಿರಕಿ ಕಾಲುಮರೆಯನ್ನು ಕೊಂಡುಕೊಂಡು ಬಂದೆ.

ಸವಣೂರಿನಿಂದ ಮರುದಿನ ನನ್ನ ಮಿತ್ರ ಹುರುಳಿಕುಪ್ಪೆ ಹನುಮಂತನ ಆಗ್ರಹದ ಮೇರೆಗೆ ಹುರಳಿಕುಪ್ಪೆಗೆ ಬಂದೆ. ಹನುಮಂತ ನನಗಿಂತಲೂ ಬಡವ. ಅವರ ತಂದೆ-ತಾಯಿಗಳು ಕೂಲಿ ಕುಂಬಳಿಯಿಂದ ಜೀವನ ಸಾಗಿಸುತ್ತಿದ್ದವರು. ಹನುಮಂತ ನನ್ನನ್ನು ಕರೆದುಕೊಂಡು ಬಂದ ದಿನ ಅವರ ತಂದೆ-ತಾಯಿಗಳಿಗೆ ಸಂಭ್ರಮವೋ ಸಂಭ್ರಮ. ಇವರು ಲಿಂಗಾಯತರು ಎಂದು ತಮ್ಮ ಮನೆಯಲ್ಲಿಯೇ ಸಾಕಿದ್ದ ಆಡಿನ ಹಾಲನ್ನು ಹಿಂಡಿ ಕುಡಿಯಲು ಕೊಟ್ಟ ಉಪಚಾರ ಎಂದೂ ಮರೆಯಲಾರದ್ದು. ಅವರ ಹಾಲಿಗಿಂತ ಅವರ ಉಪಚಾರ ತೀರಾ ಮಧುರ. ನನಗೆ ಇವರು ಇಷ್ಟು ವಿಶ್ವಾಸದಿಂದ ಕಂಡುದಕ್ಕೆ ಕಾರಣ ಇವರು ಅಡಿವೆಪ್ಪ ಮಾಸ್ತರರ ಪೂರ್ಣ ಆಶೀರ್ವಾದಕ್ಕೆ ಪಾತ್ರರಾದವರು ಎಂದು. ಆ ದಿನ ಹುರಳೀ ಕುಪ್ಪೆಯಲ್ಲಿ ಉಳಿದು, ಮರುದಿನ ಹನುಮಂತಪ್ಪನ ಸಮೇತ ಪಕ್ಕದ ಇನ್ನೊಂದು ಹಳ್ಳಿಯಲ್ಲಿದ್ದ ಓರ್ವ ಬ್ರಾಹ್ಮಣ ಮಿತ್ರ ಭೀಮಾಚಾರಿಯು ಅತ್ಯಂತ ವಿಶ್ವಾಸದಿಂದ ನೀಡಿದ ಆಹ್ವಾನದ ಮೇರೆಗೆ ಅವನ ಮನೆಗೆ ಹೋದೆ. (ಆ ಊರ ಹೆಸರು ಮರೆತಿದೆ) ಅವರ ಮನೆಯವರೆಲ್ಲ ಬಹಳ ವಿಶ್ವಾಸ ತೋರಿ ತಮ್ಮ ಮನೆಯಲ್ಲಿ ಈ ದಿನ ಊಟ ಮಾಡಲೇ ಬೇಕೆಂದು ಬಹು ಒತ್ತಾಯದ ಮೇರೆಗೆ ಊಟ ಮಾಡಿದೆ. ಊಟಕ್ಕೆ ಮೊದಲು ಎಲ್ಲರೂ ಸೇರಿ ತೋಟದ ಬಾವಿಗೆ ಹೋಗಿ ಈ ಸಾರಿ ಬಟ್ಟೆಬರೆ ತೊಳೆದುಕೊಂಡು ಶುಭ್ರವಾಗಿ ಬಂದೆವು. ಮಧ್ಯಾಹ್ನದ ಹೊತ್ತಿಗೆ ತುಂಬಾ ಹಸಿದು ಊಟಕ್ಕೆ ಕುಳಿತೆವು. ಬ್ರಾಹ್ಮಣರ ಮನೆಯಲ್ಲಿ ಊಟ ಮಾಡಿದ್ದು ಇದೇ ಮೊದಲು. ಇಲ್ಲಿನ ಊಟದ ಪದ್ಧತಿ ನನಗೆ ತೀರ ಹೊಸದು. ಮೊದಲು ಸ್ವಲ್ಪ ಬಿಸಿ ಅನ್ನ, ಅನ್ನದ ಮೇಲೆ ತುಪ್ಪ, ಪಕ್ಕಕ್ಕೆ ಚಟ್ನಿ, ಇಷ್ಟೇ ಬಡಿಸಿದ್ದು. ನಾನು ಸಾರು ತರುತ್ತಾರೆಂದು ಕಾದು ಕುಳಿತೆ. ಬ್ರಾಹ್ಮಣ ಮಿತ್ರ ಹೇಳಿದ 'ನಮ್ಮ ಪದ್ಧತಿಯಂತೆ ಈಗ ಊಟ ಪ್ರಾರಂಭಿಸಬಹುದು. ಮೊದಲು ಅನ್ನ ತುಪ್ಪ ಚಟ್ನಿ ಅಷ್ಟೆ. ಅನಂತರ ಅನ್ನ ಸಾರು ಪಲ್ಯ ಉಪ್ಪಿನಕಾಯಿ ಹಪ್ಪಳ ಬಡಿಸಲಾಗುವುದು, ಕೊನೆಯಲ್ಲಿ ಹಾಲು ಮೊಸರು ಅನ್ನ ಎಂದು ವಿಷಯ ತಿಳಿಸಿಬಿಟ್ಟ. ಅವನ ಮಾರ್ಗದರ್ಶನದ ಮೇರೆಗೆ ಹೊಟ್ಟೆ ತುಂಬ ಊಟ ಮಾಡಿದ್ದಾಯಿತು. ಊಟ ಮುಗಿದ ಮೇಲೆ ಒಂದು ಚಿಕ್ಕ ಬುಟ್ಟಿಯಲ್ಲಿ ಮಾವಿನಹಣ್ಣು ತಂದಿಟ್ಟರು. ಭೀಮಾಚಾರಿ ತಿನ್ನುವ ಕ್ರಮ ಹೇಗೆಂಬುದನ್ನು ತಿಂದು ತೋರಿಸಿದ ಮೇರೆಗೆ ನಾನೂ ನಾಲ್ಕಾರು ತಿಂದೆ. ಸಿಪ್ಪೆ-ಹೋಟೆಗಳನ್ನು ದೂರ ಎಸೆದು ಕೈ ತೊಳೆದುಕೊಂಡು ಸ್ವಲ್ಪ ಸಮಯ ವಿಶ್ರಾಂತಿ ಪಡೆದು ಅಲ್ಲಿಂದ ಸಾಯಂಕಾಲ ಆರೇಳು ಮೈಲು ದೂರದ ನನ್ನ

ಹಳ್ಳಿಯಾದ ಹರವಿಗೆ ತಲುಪಿದೆ. ನಮ್ಮ ಮನೆಯಲ್ಲಿ ನನ್ನ ಬರುವಿಕೆಯ ದಾರಿಯನ್ನೇ ಕಾಯುತ್ತಿದ್ದ ನಮ್ಮ ಮನೆಮಂದಿಗೆಲ್ಲ ಸಂಭ್ರಮವೋ ಸಂಭ್ರಮ. ನಾನು ಬಹು ದೊಡ್ಡಪರೀಕ್ಷೆಗೆ ಹೋಗಿ ಬಂದವನೆಂದೂ, ಮುಂದೆ ದೊಡ್ಡ ನೌಕರಿ ಮಾಡಿ ನಮಗೆಲ್ಲ ಆಶ್ರಯದಾತನಾಗುವವನೆಂದೂ ಎಲ್ಲರ ಆಶೋತ್ತರ.

### *ಹಾವೇರಿಯ ಶ್ರೀಗಳವರ ದರ್ಶನ*

ನನ್ನ ಪರೀಕ್ಷೆಯ ಫಲಿತಾಂಶ ಬರುವವರೆಗೆ ನಮ್ಮ ಊರಿನಲ್ಲಿಯೇ ನಮ್ಮ ಮನೆಯ ವ್ಯವಸಾಯದ ಕಾರ್ಯದಲ್ಲಿ ನಿರತನಾದೆ. ನನಗೆ ಸುಮ್ಮನೆ ಕುಳಿತುಕೊಳ್ಳುವ ಅಭ್ಯಾಸ ಮೊದಲಿನಿಂದಲೂ ಇರಲಿಲ್ಲವಾಗಿ ಬೆಳಿಗ್ಗೆ ಬೇಗ ಎದ್ದು ಸಗಣಿ ತೆಗೆದು ಕಸ ಹೊಡೆಯುವುದು, ತಿಪ್ಪೆಯನ್ನು ಸರಿಪಡಿಸುವುದು, ಹಿತ್ತಿಲು ಮುಂಚಿಗಳನ್ನು ಚೊಕ್ಕಟಗೊಳಿಸುವುದು, ಹಕ್ಕಿಯ ಗುದ್ದುಗಳಿಗೆ (ಹಕ್ಕಿಯ ಗುದ್ದು = ದನ ಕಟ್ಟುವ ಕೊಟ್ಟಿಗೆಯಲ್ಲಿ ಉಂಟಾದ ತಗ್ಗುಗಳು) ಕಟಗು (ಕಟಗು = ಇದು ಒಂದು ತರದ ಮಣ್ಣೂ ಅಲ್ಲದ, ಕಲ್ಲೂ ಅಲ್ಲದ ಸ್ಥಿತಿಯ ಗಟ್ಟಿ ಮಣ್ಣು. ಕೊಟ್ಟಿಗೆಯಲ್ಲಿ ದನಗಳು ನಿಂತು ಗುಂಡಿಗಳಾಗಿದ್ದರೆ ಈ ಮಣ್ಣನ್ನು ತಂದು ಗುದ್ದಿಗೆ ಹಾಕಿ ನೀರು ಸಿಂಪಡಿಸಿ ಬಡಿದು ಗಟ್ಟಿಮಾಡುತ್ತಿದ್ದರು.) ಕಡಿದುಕೊಂಡು ಬಂದು ಹಾಕಿ ಪಟ್ಟಲುಮಣೆ (ಪಟ್ಟಲುಮಣೆ = ನೆಲವನ್ನು ಬಡಿದು ಗಟ್ಟಿಗೊಳಿಸಲು ಮಾಡಿದ ಮರದ ಒಂದು ರೀತಿಯ ತುಂಡು) ಯಿಂದ ಬಡಿದು ಗಟ್ಟಿಗೊಳಿಸುವುದು. ಹೊಲದಲ್ಲಿ ಒಡ್ಡು ಹಾಕುವುದು, ಬದುಗಳನ್ನು ಕಡಿದು ಅಚ್ಚುಕಟ್ಟುಗೊಳಿಸುವುದು - ಈ ಕಾರ್ಯದಲ್ಲಿ ನಿರತನಾದೆ. ಹೊಲದ ಕೆಲಸಕ್ಕೆ ನಾನೇ ಮುಂದಾಗಿ ಹೋಗಲು ಪ್ರಾರಂಭಿಸಿದೆ. ವ್ಯವಸಾಯ ತೀರಾ ಕ್ಷೀಣಾವಸ್ಥೆಗೆ ಬಂದದ್ದರಿಂದ ಒಳ್ಳೆಯ ಎತ್ತಿನ ಬಲವಿಲ್ಲದೆ ಬಹು ನಿರಾಸೆಯಾಗುತ್ತಿತ್ತು. ದೊಡ್ಡದೊಡ್ಡ ಎತ್ತು ಕಟ್ಟಿ ಯಶಸ್ವಿಯಾಗಿ ವ್ಯವಸಾಯ ಕಾರ್ಯ ಮಾಡಿಕೊಂಡು ಹೆಸರು ಗಳಿಸಿದ ಮನೆಯಲ್ಲಿ ಚಿಕ್ಕಚಿಕ್ಕ ಎತ್ತಿನಿಂದ ಮಾಡುವ ವ್ಯವಸಾಯದ ದುಃಸ್ಥಿತಿ ಸಂಕಟಕ್ಕೀಡುಮಾಡುತ್ತಿತ್ತು. ಮಾಡುವುದೇನು? ಒಳ್ಳೆಯ ಕಾಲ ಬಂದೀತೆಂಬ ಭವಿಷ್ಯದ ಸುಂದರ ದಿನಗಳ ಆಸೆಯಿಂದ ಕಷ್ಟಪಟ್ಟು ಕೆಲಸ ಮಾಡುವುದು ನನ್ನ ಜಾಯಮಾನವಾಗಿತ್ತು. ಮುಂದೆ ನಾನು ಏನು ಮಾಡಬೇಕು, ಏನು ದುಡಿಮೆ ಮಾಡಿ ನಮ್ಮ ಮನೆಯ ಈಗಿನ ಸ್ಥಿತಿಯನ್ನು ಅಭಿವೃದ್ಧಿ ಸ್ಥಿತಿಗೆ ತರಬೇಕು? ಎಂಬುದರಲ್ಲಿ ನನ್ನ ಮೈಮನಗಳೆರಡೂ ಸದಾ ಕೆಲಸ ಮಾಡುತ್ತಿದ್ದವು.

ಫಲಿತಾಂಶ ಬಂತು. 21ನೆಯ ರ್‍ಯಾಂಕ್ ಗಳಿಸಿ ಪರೀಕ್ಷೆಯಲ್ಲಿ ಪಾಸು ಮಾಡಿದ್ದು ತಿಳಿದು ಎರಡು ದಿನ ಬಹು ಹೆಮ್ಮೆಯಿಂದ ಊರಲ್ಲಿ ತಿರುಗಾಡಿದೆ. ಅನೇಕರು ನಾನು ಈ ವರ್ಷವೂ ಪಾಸ್ ಆಗುವುದಿಲ್ಲವೆಂದು ಭಾವಿಸಿದ್ದರಂತೆ. ಏಕೆಂದರೆ ಜ್ವರ ಬಂದು ಜ್ವರದಲ್ಲಿಯೇ ಪರೀಕ್ಷೆ ಬರೆದರೆ ಎಷ್ಟರಮಟ್ಟಿಗೆ ಪಾಸಾದಾನೆಂಬ ಕಾರಣ ಎಲ್ಲರೂ ಹಾಗೆ ಮಾತನಾಡಿಕೊಳ್ಳುತ್ತಿದ್ದರಂತೆ. ಅಂತೂ ಪಾಸಾಯಿತು. ಎರಡು ಮೂರು ದಿನ ಬಿಟ್ಟು ನೇರವಾಗಿ ಹಾವೇರಿ ಹುಕ್ಕೇರಿ ಧಾರವಾಡಕ್ಕೆ ಹೋಗಿ ಶ್ರೀ ಶಿವಬಸವಸ್ವಾಮಿಗಳಿಗೆ ವಿಷಯ ತಿಳಿಸಿದೆ. ಅವರು 'ಜಾಣ ಜಾಣ' ಎಂದು ಇಷ್ಟೇ ಹೇಳಿ 'ಹೋಗು ಊಟ ಮಾಡು' ಎಂದರು. ಊಟ ಮಾಡಿದೆ ಮರುದಿನ ಶ್ರೀಗಳವರ ಸಂಚಾರದ ತಂಬಿಗೆ, ಬೆತ್ತ ಹಿಡಿದು ಕನವಳ್ಳಿ ತೋಟದ ಕಡೆಗೆ ನಡೆದೆ.

ಶ್ರೀಗಳವರಿಗೆ ನನ್ನಲ್ಲಿ ಸಹಜ ವಾತ್ಸಲ್ಯವಿತ್ತು. ಆ ದಿನ ಬಹು ಆನಂದದಿಂದ ಅನೇಕ ಮಾತುಕತೆ ಆಡುತ್ತ ಹೊರಟೆವು. ದಾರಿಯಲ್ಲಿ ರೈಲ್ವೆ ಸ್ಟೇಷನ್ನ್ ಸಮೀಪಕ್ಕೆ ಬಂದಂತೆ ಬೆಳಗಿನ ಆ ಪ್ರಶಾಂತ ಸಮಯದಲ್ಲಿ ಅಲೆಅಲೆಯಾಗಿ ತೇಲಿಬರುತ್ತಿದ್ದ ಒಳ್ಳೆಯ ಸಂಗೀತಗಾರರ ಗ್ರಾಮಾಫೋನ್ ರೆಕಾರ್ಡ್ ಸಂಗೀತ ಶ್ರೀಗಳವರನ್ನು ಸ್ವಲ್ಪಹೊತ್ತು ಒಂದು ಬೇವಿನ ಗಿಡದಡಿಯಲ್ಲಿ ಸ್ವಲ್ಪ ಹೊತ್ತು ನಿಲ್ಲುವಂತೆ ಮಾಡಿತು. ಪುರಂದರದಾಸರ 'ಆಡಿಸಿದಳೆಶೋದೆ ಬಾಲನ ಜಗದೋದ್ಧಾರನಾ....' ಈ ಹಾಡಿನ ಸ್ವರಮಾಧುರ್ಯ ಆರೋಹಣಾವರೋಹಣ ಕ್ರಮ, ರಾಗವಿಸ್ತಾರ ರೀತಿ ಮೊದಲಾದವು ಮನಂಬುಗುವಂತಹವು. ಅದನ್ನು ಕೇಳುತ್ತ ನಿಂತ ಶ್ರೀಗಳು 'ಯಾರೋ ಬಹಳ ಚೆನ್ನಾಗಿ ಹಾಡಿದ್ದಾರಲ್ಲವೇನೋ ಚನ್ನಾ' ಎಂದರು. ನಾನು 'ಹೌದು ಬುದ್ಧಿ' ಎಂದೆ. ಶ್ರೀ ಶಿವಬಸವಸ್ವಾಮಿಗಳು ಸಂಗೀತ ಮಾಧುರ್ಯಕ್ಕೆ ಬಹುಬೇಗ ಒಲಿಯುತ್ತಿದ್ದರು ಎಂಬುದನ್ನು ಹಿಂದೆ ವಿವರಿಸಿದ್ದೇನೆ.

ಸ್ವಲ್ಪ ದೂರ ನಡೆದುಕೊಂಡು ಹೋಗುತ್ತಿದ್ದಂತೆ ಮರದ ಮೇಲೆ ಎರಡು ಚಿಕ್ಕಚಿಕ್ಕ ಪಕ್ಷಿಗಳು ಕಿಚಗುಡುತ್ತ ಜಗಳ ಮಾಡುತ್ತಿದ್ದವು. ಜಗಳ ಮಾಡಿ ಪುನಃ ಒಟ್ಟಾಗಿ ಕುಳಿತು ಕಿಚಗುಡುತ್ತಿದ್ದವು. ಅಲ್ಲಿ ಸ್ವಲ್ಪ ಹೊತ್ತು ಆ ಪಕ್ಷಿಗಳನ್ನೇ ನೋಡುತ್ತ ನಿಂತು 'ಚನ್ನಾ ! ನೋಡು ಅವೂ ಮಾತನಾಡುತ್ತವೆ. ಏನು ಮಾತಾಡುತ್ತವೆ ಹೇಳುತ್ತೀಯಾ?' ಎಂದರು. 'ನನಗೆ ತಿಳಿಯದು' ಎಂದೆ. 'ಅವು ಚನ್ನ ಬಹುಕರ್ರಗೆ ಇದ್ದಾನೆ ಎನ್ನುತ್ತವೆ' ಎಂದು ನಸುನಗುತ್ತ ಮತ್ತೆ ಮುಂದಕ್ಕೆ ಹೋಗತೊಡಗಿದರು. ಅವರು ಬಹು ಲೀಲಾಮೂರ್ತಿಗಳು. ಒಮ್ಮೊಮ್ಮೆ ಸೊಬಗಿನಿಂದ ಕೂಡಿದ ಪ್ರಕೃತಿಯ ದೃಶ್ಯಕ್ಕೆ ಮನ ಸೇರಿಸುತ್ತ, ಮುಕ್ತ ಆಲಿಸುತ್ತ ಏನನ್ನೋ ನೋಡುತ್ತ ನಿಲ್ಲುತ್ತಿದ್ದರು. ಆ ಸಮಯದಲ್ಲಿ ಬಹು ಗಂಭೀರವಾಗಿ ಚಿಂತನೆ ಮಾಡುತ್ತಿರುವಂತೆ ನನಗೆ ಭಾಸವಾಗುತ್ತಿತ್ತು.

ಶ್ರೀಗಳವರು ಚಿದಾರಣ್ಯ ಮುಗಿಸಿ ಮಠಕ್ಕೆ ಮರಳುವಾಗ ನಾನು ನನ್ನ ಮನದಲ್ಲಿ ಹುದುಗಿದ್ದ ಮಾಸ್ತರರ ಕೆಲಸ ಕೊಡಿಸಿಕೊಡಬೇಕೆಂಬ ಬಯಕೆಯನ್ನು ಮುಂದಿಟ್ಟೆ. ಅದಕ್ಕೆ ಅವರು "ಆಗಲಿ, ಹುಬ್ಬಳ್ಳಿಯಲ್ಲಿ ಅಲ್ಲಮಪ್ಪ ಎಂಬುವವರೊಬ್ಬರಿದ್ದಾರೆ. ಅವರಿಗೆ ಹೇಳಿ ನಿನಗೆ ಎಲ್ಲಿಯಾದರೂ ಒಂದು ಮಾಸ್ತರ ಜಾಗೆಯನ್ನು ಕೊಡಿಸುವುದಕ್ಕೆ ಪ್ರಯತ್ನಿಸೋಣ. ಇನ್ನೆರಡು ದಿನ ಬಿಟ್ಟು ಹುಬ್ಬಳ್ಳಿಗೆ ಹೋಗಬೇಕು. ಆಗ ನೀನೂ ನಡೆ" ಎಂದು ಅಪ್ಪಣೆ ಮಾಡಿದರು. ನನಗೆ ಕೆಲಸ ಸಿಕ್ಕೇ ಹೋಯಿತು ಎನ್ನುವಷ್ಟರಮಟ್ಟಿಗೆ ಭರವಸೆ ಮೂಡಿಹೋಯಿತು. ಅದರ ಅಡ್ಡಿ ಆತಂಕಗಳು ಏನೆಂಬುದರ ಅರಿವೇ ಇಲ್ಲವಾಯಿತು.

ಶ್ರೀಗಳವರು ಹುಬ್ಬಳ್ಳಿ ರೈಲಿನಲ್ಲಿ ಹೊರಟರು. ನನ್ನನ್ನೂ ಕರೆದುಕೊಂಡು ಹೋದರು. ರೈಲ್ವೇ ಸ್ಟೇಷನ್ ಹತ್ತಿರವಿರುವ ಕಲಬುರ್ಗಿ ಮಠದಲ್ಲಿ ಮುಕ್ಕಾಂ ಮಾಡಿದರು. ಮರುದಿನವೇ ಹಾನಗಲ್ಲು ಕುಮಾರಸ್ವಾಮಿಗಳ ಪುಣ್ಯತಿಥಿ ಇತ್ತು. ಸಡಗರದಿಂದ ಆ ಸಮಾರಂಭ ಆಚರಿಸಲ್ಪಟ್ಟಿತು. ಆ ದಿನ ಅಲ್ಲಿ ಪಡಸಾಲೆಯಲ್ಲಿ ಹಾಕಿದ್ದ ಲಿಂಗೈಕ್ಯ ಹಾನಗಲ್ಲು ಕುಮಾರಸ್ವಾಮಿಗಳ ವರ್ಣಚಿತ್ರಕ್ಕೆ ಪೂಜೆ ಮಾಡಲ್ಪಟ್ಟಿತು. ನಾನೇ "ಜಯಮಂಗಲಮಯ ಶಿವಲಿಂಗ ಗುರುತರಯೋಗಾ ಗುರುರೂಪಾಂಚಿತ ಪರಶಿವಭಕ್ತಸುದೇಹಾ...." ಈ ಮಂಗಳ ಪದ್ಯ ಹಾಡಿದೆ. ಇದು ಹಾನಗಲ್ಲು ಕುಮಾರಸ್ವಾಮಿಗಳ ಮೇಲೆ ವಿರಚಿತವಾದ ಶಿವಯೋಗಮಂದಿರದ ಭಜನಾವಳಿಯೊಳಗಿನ ಪದ್ಯ. ಪಂಚಾಕ್ಷರಿ ಗವಾಯಿಗಳ ಶಿಷ್ಯರನೇಕರು ಹಾಡುವುದನ್ನು ಕೇಳಿಕೇಳಿ ನಾನು ರಾಗವಾಗಿ

ಚಂದವೆನಿಸುವಂತೆ ಹಾಡುವುದನ್ನು ಅಭ್ಯಾಸ ಮಾಡಿದ್ದೆ. ಆ ದಿನ ಈ ಹಾಡು ಬಹುಮಧುರವಾಗಿ ನನ್ನ ಕಂಠದಿಂದ ಬಂತು. ಶ್ರೀ ಶಿವಬಸವಸ್ವಾಮಿಗಳು ಈ ಹಾಡನ್ನು ಕೇಳಿದರು. ತಮ್ಮ ಪೂಜೆ ಪ್ರಸಾದವೆಲ್ಲ ಮುಗಿಸಿ ಹೊರಬಂದು, "ಎಲೋ ಚನ್ನಾ! ನೀನು ಬಹು ಚೆನ್ನಾಗಿ ಹಾಡುತ್ತೀಯಲ್ಲೋ. ನಿನಗೆ ಮಾಸ್ತರರ ಕೆಲಸವೂ ಬೇಡ ಏನೂ ಬೇಡ. ಚೆನ್ನಾಗಿ ಹಾಡುತ್ತೀಯ; ಪಂಚಾಕ್ಷರಿ ಗವಾಯಿಗಳ ಹತ್ತಿರ ಸೇರಿಸಿ ಬಿಡುತ್ತೇನೆ. ಅಲ್ಲಿಯೇ ಕೆಲವು ವರ್ಷ ಸಂಗೀತಾಭ್ಯಾಸ ಮಾಡಿ 'ಗವಾಯಿ' ಆಗಿಬಿಡು" ಎಂದರು. ನಾನು ಸಮ್ಮತಿಸಲಿಲ್ಲ. 'ನನಗೆ ಮಾಸ್ತರರ ಕೆಲಸವೇ ಬೇಕು' ಎಂದೆ. ನಮ್ಮ ಮನೆತನದ ಪರಿಸ್ಥಿತಿ ತೀರಾ ಹದಗೆಟ್ಟು ಹೋಗಿದ್ದೇ ಹೀಗೆ ಮೊಂಡು ಹಿಡಿಯಲು ಕಾರಣವಾಗಿತ್ತು. ಶಾಲಾ ಮಾಸ್ತರರ ಕೆಲಸ ಸಿಕ್ಕರೆ ಹದಿನೈದು ರೂ. ಸಂಬಳ ಸಿಗುತ್ತದೆ, ಅದರಿಂದ ಮನೆಯ ದಟ್ಟದಾರಿದ್ರ್ಯ ದೂರವಾಗಿ ನಾವೂ ಸರಿಸಮಾನರೆದುರಿನಲ್ಲಿ ತಲೆಯೆತ್ತಿ ಬಾಳಿಬದುಕಬಹುದು. ಮೂಲೆಗುಂಪಾಗಿದ್ದ ನಮ್ಮ ಮನೆಯ ವ್ಯವಸಾಯವನ್ನು ಊರ್ಜಿತಗೊಳಿಸಬಹುದು. ಕಳೆದುಹೋದ ಮನೆಯ ವೈಭವ ಜೀವನಕ್ಕೆ ಸಂಜೀವನ ಮಂತ್ರ ಹೇಳಬಹುದು ಇತ್ಯಾದಿ ಬಯಕೆ ತೀವ್ರವಾಗಿದ್ದವು. ಆದ ಕಾರಣವೇ ಶ್ರೀಗಳವರ ಸಲಹೆಯನ್ನು ಒಪ್ಪಲಿಲ್ಲ. ಶ್ರೀಗಳವರು ನಕ್ಕರು.

ಅದೇ ದಿನವೇ ಅವರು ಹುಬ್ಬಳ್ಳಿಯ ಪ್ರತಿಷ್ಠಿತ ಉಪಾಧ್ಯಾಯರಲ್ಲಿ ಒಬ್ಬರಾದ ಶ್ರೀ ಅಲ್ಲಮಪ್ಪ ಮಾಸ್ತರರನ್ನು ಕರೆಸಿದರು. ಅವರಿಗೆ ನನ್ನ ಪರಿಚಯ ಮಾಡಿ "ಇವನಿಗೆ ಒಂದು ಸರಕಾರಿ ಮಾಸ್ತರರ ಜಾಗೆಯನ್ನು ಕೊಡಿಸಿ ಕೊಡಿ" ಎಂದು ಅಪ್ಪಣೆ ಮಾಡಿದರು. ಅವರಿಗೆ ಆಗಿನ ಜಿಲ್ಲಾ ಬೋರ್ಡಿನಲ್ಲಿ ಅನೇಕರ ಪರಿಚಯವಿದ್ದು ಕೆಲಸ ಕೊಡಿಸುವಷ್ಟು ಸಾಮರ್ಥ್ಯವಿತ್ತಂತೆ. ಅಲ್ಲಮಪ್ಪನವರು ಮುಲ್ಕೀ ಪರೀಕ್ಷೆಯಲ್ಲಿ ನಾನು ಗಳಿಸಿದ ಅಂಕಗಳು, ಪಾಸಾದ ವರ್ಷ, ಜನ್ಮ ತಾಲೀಖು ಮೊದಲಾದವನ್ನು ಕೇಳಿದರು, ಹೇಳಿದೆ. ಆಗ ಸ್ವಾಮಿಗಳಿಗೆ "ಬುದ್ಧಿ, ಇವನಿಗೆ ಇನ್ನೂ ವಯಸ್ಸಾಗಿಲ್ಲ. ಹದಿನೆಂಟು ವರ್ಷ ತುಂಬಬೇಕು. ಇವನಿಗೆ ಈಗ ಹದಿನೈದೂವರೆ ವರ್ಷ ಮಾತ್ರ ಆಗಿದೆ. ಸಾಧ್ಯವಾಗುವುದಿಲ್ಲ" ವೆಂದು ತಿಳಿಸಿ ಹೊರಟುಹೋದರು. ಆಗ ನನಗಾದ ನಿರಾಸೆಯನ್ನು ವರ್ಣಿಸಲಾರೆ. ಸ್ವಾಮಿಗಳು "ಇನ್ನು ಸ್ವಲ್ಪ ದಿನ ಹೋಗಲಿ. ಯಾರಿಗಾದರೂ ಹೇಳಿ ಮುಂದೆ ಕೊಡಿಸಿಕೊಡೋಣ. ನಿನಗೆ ಬೇಕಾದರೆ ಸದ್ಯಕ್ಕೆ ಹಾವೇರಿಯ ಯಾವುದಾದರೂ ಯಾಲಕ್ಕಿ ಅಂಗಡಿಗೆ ಸೇರಿಸುತ್ತೇನೆ. ನಾವು ಶಿವಯೋಗ ಮಂದಿರಕ್ಕೆ ಹೋಗಿಬರುತ್ತೇವೆ. ಬರುವುದು ತಡವಾಗಬಹುದು. ನೀನು ಈಗ ಊರಿಗೆ ಹೋಗು. ನಾವು ಮಂದಿರದಿಂದ ಬಂದ ಮೇಲೆ ಮಠಕ್ಕೆ ಬಾ. ಆಗ ವಿಚಾರ ಮಾಡೋಣ" ಎಂದು ನನಗೆ ಚಾರ್ಜು ಕೊಟ್ಟು ಕಳಿಸಿದರು. ನಾನು ನಮ್ಮೂರಿಗೆ ಬಂದು ವ್ಯವಸಾಯದ ಕಾರ್ಯದಲ್ಲಿ ನಿರತನಾಗಿಬಿಟ್ಟೆ.

### *ನನಗೆ ಕೆಲಸ ಕೊಡಿಸಲು ಗೌರಮ್ಮನ ಪ್ರಯತ್ನ*

ಸವಣೂರಿನಲ್ಲಿ ಗಣನೀಯವಾಗಿ ನನಗೆ ಸಹಾಯ ಮಾಡಿದ ಗೌರಮ್ಮನವರು ನನಗೆ ಈ ವರ್ಷ ಕೂಡಲ ಜಾತ್ರೆಗೆ ಬರುತ್ತೇನೆ. ನಿಮ್ಮ ತಂದೆ-ತಾಯಿಗೆ ಹೇಳಿ ನಾನು ಬಂದಾಗಲ್ಲಿ ಉಳಿದುಕೊಳ್ಳಲು ಎಲ್ಲ ಏರ್ಪಾಡು ಮಾಡಬೇಕೆಂದು ಹೇಳಿ ಕಳಿಸಿದಳು. ಒಂದು ವರ್ಷಕಾಲ ವಾತ್ಸಲ್ಯದಿಂದ ಕಂಡು ನನಗೆ ಸಹಾಯ ಮಾಡಿದ ಆ ಮುದುಕಿಯ ಈ ಬರುವಿಕೆ ಮತ್ತು ಬಂದಾಗ ಮಾಡುವ ಉಪಚಾರಕ್ಕಾಗಿ ನಮ್ಮ ಮನೆಯ ಎಲ್ಲರೂ ಸಿದ್ಧವಾಗಿಬಿಟ್ಟರು. ನಮ್ಮ

ರಾಟಿಮನೆಯನ್ನು (ರಾಟಿಮನೆ : ಹಿಂದೆ ನಮ್ಮ ಅಜ್ಜ ಅಜ್ಜಿ ಕಾಲದಲ್ಲಿ ಹತ್ತಿ ಅರೆಯುವುದು, ಹಂಜಿ ಹೊಸೆಯುವುದು, ದಾರ ತೆಗೆಯುವುದು ಮತ್ತು ದಾರವನ್ನು ಪಟ್ಟೆಗೆ ಸುತ್ತುವುದು ಈ ಕೆಲಸದ ಅನೇಕ ಸಾಮಗ್ರಿಗಳಿಂದ ಕೂಡಿದ ಮನೆ. ಆ ಚಿಕ್ಕ ಮನೆಯಲ್ಲಿ ಎಷ್ಟೊಂದು ರಾಟಿಗಳು, ಪಟ್ಟೆಗಳು, ಮಣಿಗಳು, ಅರಗಳು ಏನೇನೋ ಬಹಳ ಇದ್ದವು. ನಮ್ಮ ಕಾಲಕ್ಕಾಗಲೆ ಈ ರೈತರ ಉಪಕಸುಬು ಮಾಯವಾಗಿತ್ತು. ಬ್ರಿಟಿಷರ ಆಡಳಿತದ ಪ್ರಭಾವ ಎಲ್ಲರ ಮೇಲೆ ಗಾಢವಾಗಿ ಬಿದ್ದ ಕಾಲದಲ್ಲಿಯೇ ದೊಡ್ಡದೊಡ್ಡ ಜಿನ್ನಿಂಗ್ ಫ್ಯಾಕ್ಟರಿಗಳು, ಬಟ್ಟೆ ಗಿರಣಿಗಳು ಬಂದು ಅತಿ ಅಗ್ಗವಾಗಿ ಬಟ್ಟೆ-ಬರೆಗಳು ಸಿಗತೊಡಗಿದ್ದರಿಂದ ಜನ ಗಿರಣಿಯ ಬಟ್ಟೆಗಳಿಗೆ ಮಾರುಹೋಗಿ ಕೈಯಿಂದ ತಯಾರಿಸುವ ನೂಲಿನ ಬಟ್ಟೆಗಳು ಮಾಯವಾದವು. ಒರಟುಬಟ್ಟೆಗಳಿಗಿಂತ ನಾಜೂಕಿನ ಬಟ್ಟೆಗಳೇ ಮೇಲೆಂಬ ಭಾವನೆ ಬೆಳೆಯಿತು. ಕೈಕಸುಬು ಮಾಯವಾಗಿ ಹೋಯಿತು. ಹಳ್ಳಿಯ ಬದುಕಿನಲ್ಲಿ ಆಲಸ್ಯ ಬೆಳೆದು ದಾರಿದ್ರ್ಯಕ್ಕೆ ಇದೂ ಒಂದು ಆಹ್ವಾನವೇ ಆಯಿತು. ಆದ್ದರಿಂದಲೇ ಗಾಂಧಿ 19ನೇ ಶತಮಾನದ ಆದಿಯಲ್ಲಿ, ಹಳ್ಳಿಗಳಲ್ಲಿ ಬಟ್ಟೆ ಕೈಗಾರಿಕೆಯು ಪುನರುಜ್ಜೀವನಕ್ಕೆ ದಾರ ತೆಗೆಯುವ ಕ್ರಾಂತಿ ಮಾಡಿದರು. ಆದರೂ ನಮ್ಮ ಜನರ ಮೈ ಆ ಕೆಲಸಕ್ಕೆ ಬಗ್ಗಲಿಲ್ಲ. ಒಳ್ಳೊಳ್ಳೆ ರಾಟಿ (ಚರಕಾ)ಗಳನ್ನು ಸೌದೆಯ ಅಭಾವವಾದಾಗ ಒಲೆಗೆ ಉರಿ ಹಚ್ಚಿಬಿಟ್ಟೆವು. ಆ ಮನೆಗೆ ಮಾತ್ರ ನಾವು ರಾಟಿಮನೆ ಅನ್ನುವುದು ತಪ್ಪಿರಲಿಲ್ಲ.) ಸ್ವಚ್ಛ ಮಾಡಿದೆವು. ಅಲ್ಲಿ ಆಕೆ ಒಂದೆರಡು ದಿನ ತಂಗಲು ಅಣಿ ಮಾಡಿದೆವು. ಗಾಡಿ ಕಟ್ಟಿಸಿಕೊಂಡು ಗೌರಮ್ಮ ತನ್ನ ಸಾಕುಮಗ-ಮಗಳು ಇತ್ಯಾದಿ ಮೂರು ನಾಲ್ಕು ಜನಗಳ ಚಿಕ್ಕ ಪರಿವಾರದೊಡನೆ ಬಂದಿಳಿದಳು.

ಸವಣೂರಿಂದ ಬರುವಾಗ ಆ ಮುದುಕಿ ದೊಡ್ಡದೊಂದು ಬೆತ್ತದ ಬುಟ್ಟಿಯ ತುಂಬ ಎಳ್ಳುಹಚ್ಚಿದ ರೊಟ್ಟಿ, ಚಟ್ನಿ, ಹಿಟ್ಟಿನ ಪಲ್ಯ, ತಂಬೂಳಿ ಹುಳಿ, ಬುತ್ತಿ, ಕಲಸನ್ನ (ಚಿತ್ರಾನ್ನ) ಏನೇನೋ ಪರಿಕರಗಳನ್ನು ಬೇಕಾದಷ್ಟು ಕಟ್ಟಿಕೊಂಡೇ ಬಂದಿದ್ದಳು. ಬಂದ ದಿನದ ರಾತ್ರಿಯೇ ಊಟ ಮಾಡಿ ಕೇವಲ ಎರಡು ಮೂರು ಫರ್ಲಾಂಗ್ ಅಂತರದಲ್ಲಿಯೇ ಇದ್ದ ಜಾತ್ರೆಗೆ ಕರೆದೊಯ್ದೆವು. ಅಲ್ಲಿ ರಾತ್ರಿ ಒಂದೆರಡು ಸುತ್ತು ಜಾತ್ರೆಯಲ್ಲಿ ಸುತ್ತಿದ ಮೇಲೆ ಸಿರಹಟ್ಟಿ ನಾಟಕದ ಕಂಪನಿಯವರ ರಾಮಾಯಣ ನಾಟಕವನ್ನು ನೋಡುವ ಇಚ್ಛೆ ವ್ಯಕ್ತಪಡಿಸಿದಳು. ಊರಿಂದ ಕರೆದುಕೊಂಡು ಹೋದ ಮೂರು ನಾಲ್ಕು ಜನ ನಮ್ಮ ಮನೆಯವರಿಗೂ ಅವಳೇ ಟಿಕೇಟ್ ತೆಗೆದುಕೊಟ್ಟಳು. ಎಲ್ಲರೂ ಆನಂದವಾಗಿ ನಾಟಕ ನೋಡಿದೆವು. ರಾಮಾಯಣ ಬೆಳಗಾಗುವವರೆಗೂ ನಡೆಯಿತು. ಆ ಕಾಲದಲ್ಲಿ ಅದೊಂದು ಅದ್ಭುತವಾದ ನಾಟಕವೇ ಆಗಿತ್ತು. ಬೆಳಗಾದ ಮೇಲೆ ಮುದುಕಿ ಸಂಗಮಸ್ಥಳದಲ್ಲಿ ಸ್ನಾನಾದಿಗಳನ್ನು ಮಾಡಿಕೊಂಡು ಮನೆಗೆ ಬಂದಿತು. ಹಿಂದಿನ ದಿನ ಊರಿಂದ ಕಟ್ಟಿಕೊಂಡು ಬಂದಿದ್ದ ಎಲ್ಲ ಪದಾರ್ಥಗಳನ್ನೂ ನಮ್ಮ ಮನೆಗೆ ಕೊಟ್ಟು ಸ್ವಲ್ಪ ಹಿಟ್ಟಿನ ಪಲ್ಯ (ಹಿಟ್ಟಿನ ಪಲ್ಯ = ಹೆಸರು ಹಿಟ್ಟಿನಲ್ಲಿ ಬಹುಗಟ್ಟಿಯಾಗಿ ಮಾಡಿ ಹಲಪೆಗಳನ್ನು ಕೊರೆದು ಇಟ್ಟುಕೊಂಡ ಪಲ್ಯ. ಇದನ್ನು ಪ್ರವಾಸ ಕಾಲದಲ್ಲಿ ಮಾಡುವುದು ರೂಢಿ. ಏಕೆಂದರೆ ಇದು ಐದಾರು ದಿನಗಳವರೆಗೂ ಕೆಡದಂತೆ ಇರುತ್ತಿತ್ತು. ಹೆಚ್ಚಾಗಿ ಎಣ್ಣೆಯನ್ನು ಬಳಸಿ ಮಾಡುವ ಈ ಪಲ್ಯ ರುಚಿಯಲ್ಲೂ ಕಳಪೆಯಲ್ಲ.) ಚಟ್ನಿ, ತಂಬೂಳಿ ಹುಳಿ (ತಂಬೂಳಿ ಹುಳಿ = ಇದೂ ಕೂಡ ಪ್ರವಾಸ ಕಾಲದಲ್ಲಿ ಸಾರಿಗಾಗಿ ಕುಟ್ಟಿದ ಹುಳಿ. ಸ್ವಚ್ಛವಾದ ಹುಣಸೇ ಹಣ್ಣು, ಬೆಲ್ಲ, ಬೆಳ್ಳುಳ್ಳಿ, ಜೀರಿಗೆ, ಕಾರ, ಉಪ್ಪು, ಕುಸುಬೆ ಎಣ್ಣೆ ಸೇರಿಸಿ ಚೆನ್ನಾಗಿ ಕುಟ್ಟಿದ ಹುಳಿ. ಇದಕ್ಕೆ "ಚಿಗಳಿ" ಎಂದೂ ಹೆಸರು. ನೀರಿನಲ್ಲಿ ಈ ಹುಳಿಯನ್ನು ಕಲಸಿಬಿಟ್ಟರೆ ಆಯಿತು. ಅದೇ

ತಣ್ಣನೆಯ ಹುಳಿ - ತಂಬೂಳಿ ಆಯಿತು) ಇಟ್ಟುಕೊಂಡಿತು. ಅನಂತರ ಕೀಲಿನ ಮನೆಯಲ್ಲಿ ತಾನೇ ತನ್ನದೇ ಆದ ಅಕ್ಕಿಯಿಂದ ಅನ್ನ ಮಾಡಿಕೊಂಡು ತಂಬೂಳಿ ಚಟ್ನಿಯೊಡನೆ ಊಟ ಮಾಡಿತು. ನಮಗೆ ಯಾವ ಭಾರವನ್ನೂ ಕೊಡಲಿಲ್ಲ. ಮೊಸರು ಹಾಲು ತರಿಸಿ ಕೊಟ್ಟದ್ದಷ್ಟೇ.

ಊಟವಾದ ಮೇಲೆ ಪುನಃ ಜಾತ್ರೆಗೆ ಹೋಗಿ ಬಟ್ಟೆ ಬರೆ ಇನ್ನಿತರ ಪದಾರ್ಥಗಳನ್ನು ಕೊಂಡು ಸಂಗಮೇಶ್ವರನಿಗೆ ಹಣ್ಣು ಕಾಯಿ ಮಾಡಿಸಿ ಊರಿಗೆ ಬಂದು ಗಾಡಿಕೊರಳು ಕಟ್ಟಿ ಹೊರಟಿತು. ಹೊರಡುವ ಮುನ್ನ ನನ್ನ ಸರಕಾರಿ ನೌಕರಿ ಬಗ್ಗೆ ಪ್ರಸ್ತಾಪಮಾಡಿ "ನಾನು ಇವನಿಗೆ ಕೆಲಸ ಕೊಡಿಸಿ ಕೊಡುತ್ತೇನೆ. ಮಹಬೂಬ ಅಲ್ಲಖಾನ್ ಸಾಹೇಬರು ಜಿಲ್ಲಾ ಬೋರ್ಡು ಅಧ್ಯಕ್ಷರಾಗಿದ್ದಾರೆ. ಅವರು ಮನಸ್ಸು ಮಾಡಿದರೆ ವಯಸ್ಸು ಗಿಯಸ್ಸು ಯಾವುದನ್ನು ಗಮನಿಸುವುದಿಲ್ಲ. ಅವರೇ ಕೆಲಸ ಕೊಡೋ ಸಾಹೇಬರು. ಇಂಥ ಮಾಸ್ತರ ಕೆಲಸ ಮಾಡಲಾರನೇನು?. ಅಡಿವೆಪ್ಪ ಮಾಸ್ತರರ ಶಿಷ್ಯ ಅಂದರ ಕೇಳೋದೇನೈತಿ ಎನ್ನುತ್ತ ಇವನು ಬಿಡುವು ಮಾಡಿಕೊಂಡು ಸವಣೂರಿಗೆ ಬರಲಿ. ಸ್ವತಃ ಕಾಗದ ಕೊಟ್ಟು ಹುಬ್ಬಳ್ಳಿಗೆ ಕಳಿಸಿ ಕೊಡುತ್ತೇನೆ" ಎಂದು ನಮ್ಮ ತಂದೆತಾಯಿಗಳಿಗೆ ಹೇಳಿದ್ದು ಆಪ್ಯಾಯಮಾನ ಭರವಸೆಯೆನಿಸಿತು. ಮನೆಯವರೆಲ್ಲ ತಮ್ಮ ದಾರಿದ್ರ್ಯ ಕಳೆದೇ ಹೋಯಿತೆಂಬ ಸಂತೋಷದಲ್ಲಿ ಮುಳುಗಿದರು. ನನಗೂ ಬಹಳ ಹರ್ಷವಾಯಿತು. ಆಕೆಯ ಮಾತೇನೂ ಸುಳ್ಳಲ್ಲ. ಆಗ ಪ್ರಾಥಮಿಕ ವಿದ್ಯಾಭ್ಯಾಸವನ್ನು ಜಿಲ್ಲಾ ಬೋರ್ಡಿನವರೇ ನಡೆಸುತ್ತಿದ್ದರು. ಸವಣೂರಿನ ಮಹಬೂಬ ಅಲ್ಲಖಾನರೇ ಅದರ ಅಧ್ಯಕ್ಷರಾಗಿದ್ದರು. ಗೌರಮ್ಮನವರು ಹೇಳಿಕಳಸಿದ ಯಾವ ಕಾರ್ಯವನ್ನು ಅವರು ಇಲ್ಲ ಎನ್ನದೇ ಮಾಡುತ್ತಿದ್ದರು. ಅಷ್ಟೊಂದು ವಿಶ್ವಾಸ ಇಬ್ಬರಿಗೂ ಇತ್ತು. ನಾನು ಇನ್ನೇನು ಕೆಲಸ ಸಿಕ್ಕೇಬಿಟ್ಟಿತೆಂದು ನನ್ನ ಭುಜವನ್ನು ನಾನೇ ತಟ್ಟಿಕೊಳ್ಳುತ್ತ ತಿರುಗಾಡತೊಡಗಿದೆ.

ನಾಲ್ಕಾರು ದಿನ ಬಿಟ್ಟು ಸವಣೂರಿಗೆ ಹೋದೆ. ಗೌರಮ್ಮ ಚೀಟಿಬರೆದು ಮಹಬೂಬ ಅಲ್ಲಖಾನರ ಹತ್ತಿರ ಕಳಿಸಿಕೊಟ್ಟರು. ಅವರ ಮನೆ ದುರ್ಗದ ಬೈಲಿನ ಸಮೀಪದಲ್ಲೇ ಇತ್ತು. ನಾನು ಸಾಯಂಕಾಲ ಏಳುಘಂಟೆ ಸುಮಾರಿಗೆ ಅಲ್ಲೀಖಾನರ ಮನೆ ಹತ್ತಿರ ಹೋದೆ. ಅರ್ಧ ಕದ ಮುಚ್ಚಿತ್ತು. ಒಳಗೆ ಲ್ಯಾಂಪ್ ದೀಪದ ಬೆಳಕು ಇತ್ತು. ಹೊರಗೆ ಯಾರೂ ಇರಲಿಲ್ಲ. ಸ್ವಲ್ಪ ಹೊತ್ತು ಬಾಗಿಲಲ್ಲಿ ನಿಂತುಕೊಂಡೆ. ಮೆಲ್ಲಗೆ ಕೆಮ್ಮಿದೆ. ಅತ್ತ ಇತ್ತ ತಿರುಗಾಡಿದೆ. ಐದಾರು ನಿಮಿಷಗಳಲ್ಲಿ ಓರ್ವವ್ಯಕ್ತಿ ಒಳಗಿನಿಂದ ಬಂದ. ಅವನಿಗೆ 'ಸವಣೂರಿನಿಂದ ಗೌರಮ್ಮ ಯಾರನ್ನೋ ಕಳುಹಿಸಿಕೊಟ್ಟಿದ್ದಾರೆಂದು ಸಾಹೇಬರಿಗೆ ಹೇಳುವಂತೆ ಕೇಳಿದೆ. ಅವನು ಹೋಗಿ ಹೇಳಿದ್ದೇ ತಡ' 'ಒಳಗೆ ಬನ್ನಿ ಕರೆಯುತ್ತಾರೆ' ಎಂದ. ಹೋಗಿ ಚೀಟಿಕೊಟ್ಟು ನಿಂತುಕೊಂಡೆ. ಎದೆ ಡವಡವ ಬಡಿದುಕೊಳ್ಳುತ್ತಿತ್ತು. ಅವರನ್ನು ನೋಡಿ ನನಗೆ ಸ್ವಲ್ಪ ಭಯವೂ ಆಯಿತು. ಗೌರಮ್ಮ ಕಳಿಸಿಕೊಟ್ಟಿದ್ದರಿಂದ ಸದರವೂ ಆಗಿತ್ತು. ನನ್ನ ಊರು, ಹುಟ್ಟಿದ ತಾರೀಖು, ಮನೆಯ ಕಸಬು ಇತ್ಯಾದಿಗಳನ್ನು ಕೇಳಿ - "ನನಗೆ ಈಗ ಇನ್ನು 15-16 ನೇ ವಯಸ್ಸು. ನಿನ್ನ ಎತ್ತರದ ಹುಡುಗರು ಆರು ಏಳನೇ ಇಯತ್ತೆಯಲ್ಲಿರುತ್ತಾರೆ. ಅವರು ನಿನಗೆ ಹೆದರುತಾರೇನು? ನಿನಗೆ ಇನ್ನು ಎರಡು ಮೂರು ವರ್ಷ ಕಳೆಯೋ ತನಕ ಕೆಲಸ ಸಿಗೋದಿಲ್ಲ. ಗೌರಮ್ಮಗೆ ಹೋಗಿ ಹೇಳು. ಆಮೇಲೆ ಕೊಡಸ್ತೆನಿ. ಈಗ ಆಗೋದಿಲ್ಲ ಹೋಗು" ಎಂದೇ ಬಿಟ್ಟರು. ನಾನು ಹೊರಟು ಬರೋ ಹೊತ್ತಿಗೆ 'ಏಯ್ ಹುಡುಗಾ ಬಾಯಿಲ್ಲಿ' ಅಂದರು. ಹೋದೆ 'ಎಲ್ಲಿಗೆ ಹೋಗ್ತೀಯಾ ಈಗ' ಎಂದರು. ನಾನು ಯಾವುದಾದರೂ ಖಾನಾವಳಿಗೆ ಹೋಗಿ ಊಟಮಾಡಿ ಮಲಗಿ ಬೆಳಿಗ್ಗೆ

ಸವಣೂರಿಗೆ ಹೋಗ್ತೀನಿ ಎಂದೆ. ಅವರು ಊಟ ಮಾಡಿ ಬಂದು ಇಲ್ಲೆ ಮಲಗಿದ್ದು ಬೆಳಿಗ್ಗೆ ಊರಿಗೆ ಹೋಗು ಎಂದು ಮನೆಯ ಜವಾನನಿಗೆ ಹೇಳಿದರು. ಜವಾನ 'ಊಟ ಮಾಡ್ಕಂಡು ಬಾ ಹೋಗು. ಇಲ್ಲೆ ಚಾಪಿಕೊಡ್ತೀನಿ. ಹಾಸ್ಕೊಂಡು ಮಲಗಿ ಮುಂಜಾನೆದ್ದು ಹೋಗೀಯಂತೆ' ಅಂದ. ನಾನು ಹೋಗಿ ಮಂಡಕ್ಕಿ, ದಾಣಿ ತಿಂದು ನೀರು ಕುಡಿದು ಅವರ ಮನೆಯಲ್ಲೆ ಮಲಗಿ ಬೆಳಿಗ್ಗೆ ಎದ್ದು ಹೊರಟು ಸವಣೂರಿಗೆ ಬಂದು ಬಿಟ್ಟೆ. ಗೌರಮ್ಮನವರಿಗೆ ಎಲ್ಲ ವಿಚಾರ ತಿಳಿಸಿದೆ. ಆಕೆ 'ಆಗಲಿ ಇನ್ನೆರಡು ವರ್ಷ ಕಾಯಿ. ನಾನು ನೌಕರಿ ಕೊಡ್ಸೇ ಕೊಡ್ಸತೀನಿ' ಎಂದಳು. ಎರಡು ದಿನ ಮನೆಯಲ್ಲೇ ಇಟ್ಟುಕೊಂಡು ಮನೆಗೆ ಬೇಕಾದ ಸಾಮಾನು ತರಸಿಕೊಂಡು ಎಮ್ಮೆ ಕಟ್ಟುವ ಹತ್ತಿಯ ತಡಿಕೆ ಮುರಿದು ಹೋಗಿತ್ತು ತೊಗರಿಕಡ್ಡಿಯಿಂದ ಅದನ್ನೆಲ್ಲ ಕಟ್ಟಿಕೊಡುವಂತೆ ಹೇಳಿದಳು. ನಾನು ತಟ್ಟಿಯನ್ನು ಕಟ್ಟಿ ಅದಕ್ಕೆ ಮಣ್ಣು ಮೆತ್ತಿ ಏನೇನೋ ಕೆಲಸ ಮಾಡಿಕೊಟ್ಟು ನಮ್ಮ ಊರಿಗೆ ಬಂದು ಬಿಟ್ಟೆ. ನಮ್ಮ ಮನೆಯವರು ನನ್ನ ದಾರಿಯನ್ನೇ ಕಾಯುತ್ತಿದ್ದರು. ಕೆಲಸ ಸಿಕ್ಕೇ ಹೋಯಿತೆಂದು ತಿಳಿದುಕೊಂಡಿದ್ದರು. ನಮ್ಮ ದೊಡ್ಡಪ್ಪ ಇಷ್ಟೊತ್ತಿಗಾಗಲೆ ನಾಲ್ಕಾರು ಊರುಗಳಲ್ಲಿ ನಮ್ಮ ಚನ್ನಪ್ಪನಿಗೆ ನೌಕರಿ ಸಿಕ್ಕೇ ಹೋಯಿತೆಂದು ಡಂಗುರ ಹೊಡೆದೇಬಿಟ್ಟಿದ್ದ. ನಾನು ಬಂದ ಮೇಲೆ ನಡೆದ ವೃತ್ತಾಂತ ಕೇಳಿ ನಿಟ್ಟುಸಿರು ಬಿಟ್ಟು ಕುಳಿತೆ. ಮುಂದೆ ನನ್ನ ಮಾರ್ಗವೇನೆಂಬುದನ್ನು ಕಂಡುಕೊಳ್ಳತೊಡಗಿದೆ. ಹಾವೇರಿಗೆ ಶ್ರೀ ಶಿವಬಸವ ಸ್ವಾಮಿಗಳ ದರ್ಶನಕ್ಕೆಂದು ಹೊರಟೆ.

### ಹಾವೇರಿಯಲ್ಲಿ ಕೆಲಸ ಹುಡುಕಿದ್ದು

ಹಾವೇರಿಗೆ ಬಂದು ಶ್ರೀ ಶಿವಬಸವಸ್ವಾಮಿಗಳೆದುರಿನಲ್ಲಿ ನನ್ನ ನೌಕರಿ ಸಂಬಂಧದಲ್ಲಿ ಯಾವ ಪ್ರಗತಿಯ ಮಾರ್ಗ ಕಾಣದೆ ತೊಳಲಾಡಿದುದನ್ನು ತಿಳಿಸಿ ಮುಖ ಜೋಲು ಬಿಟ್ಟು ನಿಂತುಕೊಂಡೆ. ಶ್ರೀಗಳವರು ಹಾವೇರಿಯ ಓರ್ವ ಪ್ರತಿಷ್ಠಿತ ಯಾಲಕ್ಕಿ ವ್ಯಾಪಾರಿಯನ್ನು ಕರೆಸಿ ಈ ನಮ್ಮ ಚನ್ನನನ್ನು ನಿಮ್ಮ ಅಂಗಡಿಯಲ್ಲಿ ಗುಮಾಸ್ತರರನ್ನಾಗಿ ಸೇರಿಸಿಕೊಳ್ಳಿ ಎಂದು ಅಪ್ಪಣೆ ಮಾಡಿದರು (ಅವರ ಹೆಸರನ್ನು ನಮೂದಿಸಿಲ್ಲ). ಅವರು ನಿನಗೆ ಹಿಂದೀ ಬರುತ್ತದೆಯೇ? ಎಂದು ಪ್ರಶ್ನಿಸಿದರು. ಇಲ್ಲ ಎಂದೆ. ನಮಗೆ ಹಿಂದೀ ಕಲಿತವರು, ಹಿಂದಿಯಲ್ಲಿ ಪತ್ರವ್ಯವಹಾರ ಮಾಡುವವರು ಬೇಕೆಂದರು. ಸ್ವಾಮಿಗಳು ಸರಿ ಅಂಗಡಿಯಲ್ಲಿ ಇರಲಿ. ನಾವು ಇವನಿಗೆ ಹಿಂದೀ ಪಾಠವನ್ನು ಮಠದಲ್ಲಿ ಪ್ರಾರಂಭಿಸುತ್ತೇವೆಂದು ತಿಳಿಸಿದರು. ನಾನು ಅವರ ಅಂಗಡಿಗೆ ಹೋಗತೊಡಗಿದೆ. ಓರ್ವ ಕಾಠೇವಾಡಿ ಯಾಲಕ್ಕಿ ಅಂಗಡಿ ಸಾಹುಕಾರ ದಿನಾಲು ಸ್ವಾಮಿಗಳ ದರ್ಶನಕ್ಕೆ ಬರುತ್ತಿದ್ದ. ಅವರು ದೊಡ್ಡ ಸಾಹುಕಾರರು ದೇವೀ ಹೊಸೂರು ಸೆಟ್ಟರ ಕಟ್ಟಡದಲ್ಲಿ ದೊಡ್ಡ ಯಾಲಕ್ಕಿ ಅಂಗಡಿ ವಹಿವಾಟು ನಡೆಸುತ್ತಿದ್ದ ಜೈನವ್ಯಕ್ತಿ. ಆಧ್ಯಾತ್ಮಿಕ ಜೀವಿ. ಶಿವಬಸವಸ್ವಾಮಿಗಳಲ್ಲಿ ಅಪಾರಭಕ್ತಿಯುಳ್ಳವರು. ಒಂದು ದಿನ ಮಠಕ್ಕೆ ಬಂದಾಗ ಅವನಿಗೆ ನಮ್ಮ ಈ ಮಠದ ಮರಿಗೆ ಹಿಂದೀ ಕಲಿಸಿ ಎಂದು ಬಿಟ್ಟರು. ಆ ಮಹನೀಯರು ದಿನವೂ ರಾತ್ರಿ ನನಗೆ ಹಿಂದಿ ಪಾಠ ಹೇಳಲಿಕ್ಕಾಗಿಯೇ ಮಠಕ್ಕೆ ಬರತೊಡಗಿದರು. ಅವರಿಂದ ಎರಡು ತಿಂಗಳಲ್ಲಿ ಓದಲು ಬರೆಯಲು ಬರುವಷ್ಟರ ಮಟ್ಟಿಗೆ ವ್ಯಾವಹಾರಿಕ ಹಿಂದಿಯನ್ನು ಕಲಿತುಕೊಂಡು ಅಂಗಡಿಯಲ್ಲಿ ಹಿಂದಿಯಲ್ಲಿ ಪತ್ರವ್ಯವಹಾರ ಮಾಡುವುದನ್ನು ಕಲಿತೆ. ಅಂಗಡಿಗೆ ಮೂರು ನಾಲ್ಕು ತಿಂಗಳು ಹೋಗಿ ಬಂದೆ. ಮಠದಲ್ಲಿಯೇ ಊಟ ವಸತಿ ಎಲ್ಲಾ ಆಗಿತ್ತು. ಒಂದು ದಿನ ಆ ವ್ಯಾಪಾರಿ ಒಂದು ಚಿಕ್ಕತಪ್ಪಿಗಾಗಿ ಕುರುಬ, ಕುಂಬಾರ ಇತ್ಯಾದಿ ಬೈದು ಹಾಕಿಬಿಟ್ಟ.

ಯಾರಿಂದಲೂ ಎಂದೂ ಬೈಸಿಕೊಂಡು ಭಂಡತನದಿಂದ ಬಾಳಿ ಗೊತ್ತಿಲ್ಲದ ನನಗೆ ಎರಡು ದಿನ ಅನ್ನದ ರುಚಿ ಸೇರದಂತಾಯಿತು. ಒಂದು ದಿನ ಶ್ರೀಗಳವರೇ "ಎಲೋ ಚನ್ನಾ, ಯಾಕೋ ಬಹಳ ಸಪ್ಪಗಿದ್ದೀಯಲ್ಲಾ! ಏನು ಕಾರಣ?" ಎಂದುಬಿಟ್ಟರು. ನಾನು ಅಂಗಡಿಯಲ್ಲಿ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದೆ. ಸ್ವಾಮಿಗಳಿಗೂ ಮನಸ್ಸಿಗೆ ಬೇಸರವಾಯಿತೆಂದು ತೋರುತ್ತದೆ. ಹಾಗಾದರೆ ನಾಳೆಯಿಂದ ಅವರ ಅಂಗಡಿಗೆ ಹೋಗಲೇಬೇಡವೆಂದು ಮತ್ತೊಂದು ಅಂಗಡಿಗೆ ಸೇರಿಸಿದರು. ಅಲ್ಲಿಯೂ ಸರಿಹೋಗಲಿಲ್ಲ. ಅದನ್ನು ಬಿಟ್ಟು ನಾಲ್ಕೈದು ದಿನ ಮಠದಲ್ಲಿಯೇ ಕೆಲಸ ಕಾರ್ಯಮಾಡಿಕೊಂಡು ಇದ್ದೆ.

ಒಂದು ದಿನ ಬ್ಯಾಡಿಗಿ ವ್ಯಾಪಾರಿಯೊಬ್ಬ ಶ್ರೀಗಳ ದರ್ಶನಕ್ಕೆ ಬಂದರು. ಅವರೆದುರಿಗೆ ನಮ್ಮ ಮಠದ ಮರಿಯೊಬ್ಬನಿದ್ದಾನೆ. ತುಂಬಾ ಜಾಣ, ಅವನಿಗೆ ಬ್ಯಾಡಿಗಿಯ ಯಾವುದಾದರೂ ಅಂಗಡಿಯಲ್ಲಿ ಸೇರಿಸಲು ಸಾಧ್ಯವೇ? ಎಂದು ನನ್ನನ್ನು ತೋರಿಸಿ ಕೇಳಿದರು. ಅವರು ನಮ್ಮ ಅಂಗಡಿಯಲ್ಲೇ ಇರಲಿ ಎಂದು ಬಿಟ್ಟರು. ಸರಿ. ಮರುದಿನ ನನ್ನನ್ನು ಕರೆದುಕೊಂಡು ಹೋದರು. ಅದೊಂದು ಕಿರಾಣಿ ಅಂಗಡಿ. ಅಲ್ಲಿ ತೂಕಮಾಡಿ ಪಟ್ಟಣ ಕಟ್ಟಿಕೊಡುವ ಕೆಲಸಕ್ಕೆ ನಿಂತೆ. ಜಮಾಖರ್ಚಿನ ಅಂಗಡಿ ಅದಲ್ಲ. ಅಲ್ಲದೆ ದಿವಾಳಿ ಅಂಚಿನಲ್ಲಿರುವ ಅಂಗಡಿ. ಅವರದೇ ತಾಪತ್ರಯಕ್ಕಿಟ್ಟುಕೊಂಡು ರೋಮಕ್ಕೊಂದೊಂದು ಸಾಲ, ಸೋಲ ಮಾಡಿ ಕೊನೆಯಂಚಿಗೆ ಬಂದವರು. ನನಗೆ ಇನ್ನೇನು ಸಂಬಳ ಕೊಡಲು ಅವರಿಗೆ ಸಾಧ್ಯ? ಮನೆಯಲ್ಲಿ ನೀರು ತರಬೇಕು. ಬಟ್ಟೆ ಮಡಿ ಮಾಡಿಕೊಂಡು ಬರಬೇಕು. ಹೀಗೆ ನಾಲ್ಕಾರು ದಿನಕಳೆದ ಮೇಲೆ ಹೆಂಗಸರು ತಮ್ಮ ಕುಪ್ಪಸ ಲಂಗಗಳನ್ನು ತೊಳೆದುಕೊಂಡು ಬರಲು ಹಚ್ಚಿದರು. ರಾತ್ರಿ ಹಾಸಿಗೆ ಹಾಸಿ ಕೊಡುವುದು, ಬೆಳಿಗ್ಗೆ ಹಾಸಿಗೆ ಸುತ್ತಿ ಮನೆ ಕಸ ಹೊಡೆಯುವುದೂ ನನ್ನ ಪಾಲಿನದೇ ಆಯಿತು. ಆಮೇಲೆ ಹೋಗಿ ಅಂಗಡಿಬಾಗಿಲು ತೆಗೆದು ಅಂಗಳ ಮುಂಭಾಗಗಳನ್ನು ಗುಡಿಸಿ, ನೀರು ತಳಿಹಾಕಿ ಏನೆಲ್ಲ ಕತ್ತೆ ಚಾಕರಿ ಮಾಡುವ ಕೆಲಸ ನನ್ನದಾಯಿತು. ಹಾವೇರಿ ಅಂಗಡಿಯಲ್ಲಿದ್ದದ್ದು ಶತಪಾಲು ಇದಕ್ಕಿಂತ ಉತ್ತಮವಾಗಿತ್ತಲ್ಲ! ಹಾವೇರಿ ಸಾಹುಕಾರರು ಇವರ ದೃಷ್ಟಿಯಿಂದ ಮನುಮಾಂಧಾತರಿಗೆ ಸಮಾನರಾಗಿದ್ದರಲ್ಲ! ಅಲ್ಲೆಲ್ಲಾ ಬಿಟ್ಟು ಇಲ್ಲಿ ಸಿಕ್ಕುಹಾಕಿಕೊಂಡು ಎಂತ ಮೂರ್ಖ ಕೆಲಸ ಮಾಡಿದ್ದಾಯಿತೆಂದು ನಾನೇ ನನ್ನನ್ನು ಹೀಯಾಳಿಸಿಕೊಳ್ಳುತ್ತ ದಿನದಿನ ದುಡಿದು ಸತ್ತು ಸುಣ್ಣವಾದೆ. ಒಂದು ದಿನ ಬೆಳಿಗ್ಗೆ ಕೆರೆಗೆ ಬಟ್ಟೆ ತೊಳೆದು ಕೊಂಡು ಬಹುಗಾಬರಿ ಗೊಂಡವನಂತೆ ನಟಿಸುತ್ತ ಮನೆಗೆ ಬಂದು "ಸಾಹುಕಾರರೇ, ನಾನೀಗ ಅರ್ಜೆಂಟ್ ಊರಿಗೆ ಹೋಗಬೇಕಾಗಿ ಬಂದಿದೆ. ನಮ್ಮೂರವರು ಸಂತೆಗೆ ಮೆಣಸಿನಕಾಯಿ ಹೇರಿಕೊಂಡು ಬಂದು ಪೇಟೆಯಲ್ಲಿ ಸಿಕ್ಕರು. ಅವರು ನಮ್ಮ ತಂದೆಗೆ ಬಹಳ ಕಾಯಿಲೆಯೆಂದೂ, ಉಳಿಯುವ ಭರವಸೆಯೂ ಇಲ್ಲವೆಂದೂ ತಿಳಿಸಿದರು. ಆದ್ದರಿಂದ ಬೇಗ ಇದೇ ದಿನವೇ ನಾನು ರೈಲಿಗೆ ಹಾವೇರಿಗೆ ಹೋಗಿ, ಅಲ್ಲಿಂದ ಬಸ್ಸಿನಲ್ಲಿ ನಮ್ಮೂರಿಗೆ ಹೋಗಿ ನೋಡಿಕೊಂಡು ಆದಷ್ಟು ಬೇಗ ಬಂದು ಬಿಡುತ್ತೇನೆ" ಎಂದು ಒಂದು ಹಸಿಸುಳ್ಳು ಹೊಡೆದು ಬಿಟ್ಟೆ. ಆ ನನ್ನ ಸುಳ್ಳು, ಮುಖಭಂಗಿ ಇವೆಲ್ಲ ಅವರು ನನ್ನನ್ನು ಕೈ ಬಿಡಲು ಸಹಕಾರ ಮಾಡಿದವು. ಕೈಯಲ್ಲಿ ಒಂದು ರೂಪಾಯಿ ಕೊಟ್ಟರು. ನಾನೂ ಅಂಗಡಿಯಲ್ಲಿ ಎಂಟಾಣೆ ಕದ್ದು ಇಟ್ಟುಕೊಂಡಿದ್ದೆ. ಆ ದುಡ್ಡಿನಲ್ಲಿ ಹಾವೇರಿಗೆ ಬಂದು ಸ್ವಾಮಿಗಳೆದುರು ಎಲ್ಲವನ್ನೂ ಹೇಳಿದೆ. ಸ್ವಾಮಿಗಳು "ಅಯೋಗ್ಯರು, ಹೋಗಲಿ ಬಿಡು. ಯಾವ ಕೆಲಸವೂ ಬೇಡ. ಶಿವಲಿಂಗ ವಿಜಯ ಮುದ್ರಣಾಲಯದಲ್ಲಿ

ಚೆನ್ನಮಲ್ಲಿಕಾರ್ಜುನರ ಹತ್ತಿರ ಇದ್ದು ಕೆಲಸ ಕಲಿತುಕೊಂಡು ಬಿಡು. ಮುಂದೆ ಅದರಿಂದ ಏನಾದರೂ ಪ್ರಯೋಜನ ಆದೀತು" ಅಂದರು.

ಮರುದಿನ ಕನವಳ್ಳಿ ತೋಟದ ಬಾರಿಯ ಕಡೆಗೆ ಚಿದಾರಣ್ಯಕ್ಕೆ ಹೋಗಿ ಬರುವಾಗ ನನ್ನನ್ನು ಕರೆದುಕೊಂಡೇ ಪ್ರೆಸ್ಸಿಗೆ ಹೋದರು. ಪ್ರೆಸ್ಸನ್ನೆಲ್ಲ ನೋಡಿಕೊಂಡು ಚೆನ್ನಮಲ್ಲಿಕಾರ್ಜುನರಿಗೆ "ನಮ್ಮ ಈ ಚೆನ್ನನಿಗೆ ಎಲ್ಲೂ ಕೆಲಸ ಸಿಗಲಿಲ್ಲ. ಅಂಗಡಿಗಳಲ್ಲೂ ಹೊಂದಿಕೆಯಾಗಲಿಲ್ಲಾ. ಇವನನ್ನು ನಿಮ್ಮ ಪ್ರೆಸ್ಸಿನಲ್ಲೇ ಇಟ್ಟುಕೊಂಡು ಕೆಲಸ ಕಲಿಸಿಬಿಡಿ" ಎಂದರು. ಚನ್ನಮಲ್ಲಿಕಾರ್ಜುನರು ನಗುತ್ತ ನನ್ನನ್ನು ನೋಡಿ "ಪ್ರೆಸ್ಸಿನಲ್ಲಿ ಕೆಲಸ ಕಾರ್ಯಮಾಡಿಕೊಂಡು ಇರುತ್ತೀಯೇನಪ್ಪ" ಎಂದರು. ನಾನು ಒಪ್ಪಿಗೆ ಸೂಚಿಸಿದೆ. ಚೆನ್ನಮಲ್ಲಿಕಾರ್ಜುನರ ಪರಿಚಯ ನನಗೆ ಹಾನಗಲ್ಲು ಮಠದಲ್ಲಿ ನಾನು ವಿದ್ಯಾಭ್ಯಾಸ ಮಾಡುವ ಕಾಲದಿಂದಲೂ ಇದ್ದದ್ದಲ್ಲವೇ! ಅಲ್ಲದೆ ಹಾವೇರಿಗೇ ಬಂದು ಹುಕ್ಕೇರಿ ಮಠದಲ್ಲಿದ್ದುಕೊಂಡು ಮುಲ್ಕೀ ಪರೀಕ್ಷೆಗಾಗಿ ಓದುವಾಗಲೂ ತುಂಬಾ ಪರಿಚಯವಾಗಿ ಹೋಗಿತ್ತು. ನಾನು ಹುಕ್ಕೇರಿ ಮಠದ ಶಿವಬಸವ ಸ್ವಾಮಿಗಳವರ ಕೃಪೆಗೆ ಪಾತ್ರನಾದವನೆಂದು ಅವರು ತಿಳಿದುಕೊಂಡಿದ್ದರು. ಬಹುಸಂಶಯ ಸ್ವಭಾವದರಾದ ಅವರು ಯಾರನ್ನೂ ನಂಬುತ್ತಿರಲಿಲ್ಲ. ಆದರೆ ನನ್ನ ವಿಷಯದಲ್ಲಿ ಅವರಿಗೆ ಆ ಭಾವನೆ ಇರಲಿಲ್ಲ. ಇವನೊಬ್ಬ ನಿಷ್ಠಾವಂತನೆಂಬ ಭಾವನೆಯಿತ್ತು. ಹೀಗಾಗಿ ಹಿಂದುಮುಂದು ನೋಡದೆ ನನ್ನನ್ನು ತಮ್ಮ ಪ್ರೆಸ್ಸಿನ ಐದಾರು ಜನಗಳಲ್ಲಿ ಇನ್ನೊಬ್ಬ ಹೆಚ್ಚಿನವನನ್ನಾಗಿ ಸೇರಿಸಿಕೊಂಡು ಬಿಟ್ಟರು.

ಶ್ರೀ ಚೆನ್ನಮಲ್ಲಿಕಾರ್ಜುನರ ಶಿವಲಿಂಗ ವಿಜಯ ಮುದ್ರಣಾಲಯದಲ್ಲಿ ಕೆಲಸ ಮಾಡಿಕೊಂಡು ಅವರ ಸೇವಾದಿಕಾರ್ಯಗಳನ್ನು ಮಾಡಿಕೊಂಡು ಮುಂದುವರಿದ ಬಗೆಗೆ ನಾನು ಮತ್ತು ದೇವೀರಪ್ಪ ಇಬ್ಬರೂ ಸೇರಿ ಸಂಪಾದಿಸಿ ಹುಬ್ಬಳ್ಳಿ ಮೂರು ಸಾವಿರ ಮಠದ ವತಿಯಿಂದ ಪ್ರಕಟಗೊಂಡ 'ಮಹಾನುಭಾವಿ ಚನ್ನಮಲ್ಲಿಕಾರ್ಜುನರು' ಎಂಬ ಗ್ರಂಥದಲ್ಲಿ ವಿಸ್ತಾರವಾಗಿ ವಿವರಿಸಿದ್ದೇನೆ. ಆದ್ದರಿಂದ ಇಲ್ಲಿ ಆ ವಿಷಯವನ್ನು ಹೆಚ್ಚಾಗಿ ಪ್ರಸ್ತಾಪಿಸಲು ಹೋಗುವುದಿಲ್ಲ. ಅಲ್ಲದೆ ಗದುಗಿನ ಮಠದವರು ಪ್ರಕಟಿಸಿದ ನನ್ನ 'ಶ್ರೀ ಚೆನ್ನಮಲ್ಲಿಕಾರ್ಜುನ' ಎಂಬ ಪುಸ್ತಕದಲ್ಲೂ ಸಾಕಷ್ಟು ವಿಷಯ ಬಂದಿದೆ.

ಶ್ರೀ ಚೆನ್ನಮಲ್ಲಿಕಾರ್ಜುನರ ಜೀವನ ತುಂಬಾ ಆದರ್ಶದಿಂದ ಕೂಡಿದ್ದು. ಅವರ ಹತ್ತಿರ ಇರುವರೂ ಕೂಡ ಅದೇ ಆದರ್ಶದಿಂದ ಇರಬೇಕೆಂಬುದು ಅವರ ಮನೀಷೆ. ಆದರೆ ಅವರ ಎಲ್ಲ ಆದರ್ಶಗಳನ್ನು ಪಾಲಿಸುವುದು ಆಗಿನ ನನ್ನ ವಯಸ್ಸು,ಸಂಸ್ಕಾರ, ಸಂಸ್ಕೃತಿಯ ದೃಷ್ಟಿಯಿಂದ ಸಾಧ್ಯವಿಲ್ಲದ ಮಾತಾಗಿತ್ತು. ಆದರೂ ಅವರು ನನ್ನಲ್ಲಿ ಅಪಾರ ವಾತ್ಸಲ್ಯವನ್ನಿಟ್ಟುಕೊಂಡಿದ್ದರು. ಶಿವಬಸವ ಸ್ವಾಮಿಗಳು ಇವನನ್ನು ನನ್ನ ಹತ್ತಿರ ಬಿಟ್ಟಿದ್ದಾರೆ ಎಂಬುದೇ ಇದಕ್ಕೆ ಕಾರಣವಾಗಿತ್ತು. ಬಹುಶಃ ಅವರು ನನ್ನನ್ನು ಅನೇಕ ದೃಷ್ಟಿಯಿಂದ ಮೇಲೇಳುವಂತೆ ಮಾಡಲು ಬಯಸಿರಬಹುದು. ಅದು ಆಗ ನನಗೆ ಹೊಳೆಯಲಿಲ್ಲ, ಅಷ್ಟೇ ಅಲ್ಲ, ಆಗಿನ ನನ್ನ ಮನದ ಏಕೈಕ ತೀವ್ರ ತುಡಿತವೆಂದರೆ ನನ್ನ ಜನ್ಮಕ್ಕೆ ಕಾರಣವಾದ ಮನೆಯ ಅಸಹ್ಯದಾರಿದ್ರ್ಯದ ಬೇಗೆಯನ್ನು ಯಾವ ಬಗೆಯಿಂದಾದರೂ ತುರ್ತಾಗಿ ಆರಿಸಬೇಕೆಂಬುದಾಗಿತ್ತು. ಚೆನ್ನಮಲ್ಲಿಕಾರ್ಜುನರಲ್ಲೂ ನಾನು ಕಾಲೂರಿ ನಿಲ್ಲಲಿಲ್ಲ. ಇದನ್ನರಿತ ಅವರು ನನ್ನನ್ನು ದತ್ತುಪುತ್ರನನ್ನಾಗಿ ಸ್ವೀಕರಿಸಿ ಶಿರಾಳಕೊಪ್ಪದಲ್ಲಿರುವ ಅವರ 120 ರೂ. ಕಂದಾಯ ಕೊಡುವ ಹೊಲಗದ್ದೆ ಮತ್ತು ಎಂದು ಮನೆಗಳ ಒಡೆತನ ಕೊಟ್ಟು ಬಿಡಬೇಕೆಂಬ

ಬಯಕೆಯನ್ನು ವ್ಯಕ್ತಪಡಿಸಿ ನಮ್ಮ ತಂದೆತಾಯಿಗಳ ಒಪ್ಪಿಗೆ ಪಡೆದು ಬರಲು ಕಳಿಸಿಕೊಟ್ಟರು. ಆದರೆ ನಮ್ಮ ತಂದೆತಾಯಿಗಳು ಬಡತನ ಇಂದಲ್ಲ ನಾಳೆ ಬಗೆ ಹರಿದೀತು. ನೀನು ಶಾಶ್ವತವಾಗಿ ಇನ್ನೊಬ್ಬರ ಪುತ್ರನೆಂದು ಹೇಳಿಕೊಂಡು ಬೇರೊಂದು ವಂಶಕ್ಕೆ ಹೋಗುವುದು ಇಷ್ಟವಿಲ್ಲವೆಂಬ ಅಭಿಪ್ರಾಯ ಸೂಚಿಸುತ್ತ ಮನೆಯಲ್ಲಿ ವ್ಯವಸಾಯ ಮಾಡಿಕೊಂಡು ಇದ್ದು ಬಿಡಲು ತಿಳಿಸಿ ಬಿಟ್ಟರು. ನಾನು ಚೆನ್ನಮಲ್ಲಿಕಾರ್ಜುನರಿಗೆ ಈ ವಿಷಯ ತಿಳಿಸಿ ಕೆಲ ದಿನಗಳ ಮೇಲೆ ಅವರನ್ನು ತೊರೆದು ಶ್ರೀಗಳವರಿಗೆ ತಿಳಿಸಿ ಹೊರಟು ಮುಂದೆ ದೀರ್ಘಕಾಲದವರೆಗೆ ನಮ್ಮ ಮನೆಯ ವ್ಯವಸಾಯ ಜೀವನಕ್ಕೆ ನನ್ನನ್ನು ಪೂರ್ಣ ತೊಡಗಿಸಿಕೊಂಡು ಬಿಟ್ಟೆ.

### ಯಶಸ್ವೀ ವ್ಯವಸಾಯ ಜೀವನ

1932ನೆಯ ಇಸ್ವಿಯಿಂದ ಏಳೆಂಟು ವರ್ಷಗಳು ನಮ್ಮ ಭಾಗದ ವ್ಯವಸಾಯ ಜೀವನದಲ್ಲಿ ತುಂಬಾ ಕರಿಸಾಲಿ (ಕರಿಸಾಲು = ಬೆಳೆ ಕೈಗೆ ಬಾರದ ದಿನಗಳು) ದಿನಗಳು. ಇದೂ ಅಲ್ಲದೆ ಮಲೇರಿಯಾದ ತೀವ್ರವಲ್ಲದಿದ್ದರೂ ಸಾಮಾನ್ಯವಾದ ಹಾವಳಿಯಿಂದ ತೊಂದರೆಗೊಳಗಾದ ದಿನಗಳು. ಅತಿವೃಷ್ಟಿ, ಅನಾವೃಷ್ಟಿ, ಕೀಟಬಾಧೆ ಮೊದಲಾದ ಈತಿಬಾಧೆಗೊಳಗಾದ ದುರ್ದಿನಗಳು. ನಾನು 1936ನೆಯ ಇಸ್ವಿಯ ಸುಗ್ಗಿಯ ದಿನಗಳಿಂದ ವ್ಯವಸಾಯದ ಭಾರವನ್ನೆಲ್ಲ ನಾನೇ ನನ್ನ ಮೈಮೇಲೆ ಎಳೆದುಕೊಂಡು ಬಿಟ್ಟೆ. ಹಾವೇರಿಯನ್ನು ಬಿಟ್ಟು ಬಂದು ಆ ವರ್ಷ ಸುಗ್ಗಿಯ ಕೂಲಿಯನ್ನು ಚೆನ್ನಾಗಿ ಮಾಡಿಬಿಟ್ಟೆ. ಅದಮ್ಯ ಚೇತನಶಕ್ತಿ ನನ್ನ ದೇಹದಲ್ಲಿ ಸಂಚಾರವಾಗಿ ಹೋಯಿತು. ಆರೋಗ್ಯವುಳ್ಳ ದೃಢಕಾಯನಾಗಿದ್ದುದರಿಂದ ಯಾವ ಕಾರ್ಯಮಾಡಲೂ ನನಗೆ ಶಕ್ತಿಯಿದೆಯೆಂಬ ಆತ್ಮವಿಶ್ವಾಸ ಅಧಿಕವಾಯಿತು. ಕಂಡಕಂಡವರ ಹೊಲಗಳನ್ನು ಗುತ್ತಿಗೆ ಹಿಡಿದು ನಮ್ಮ ಮನೆಯವರನ್ನೆಲ್ಲ ಕೂಡಿಕೊಂಡು ಕೆಲಸ ಮಾಡಿ ಸ್ವಲ್ಪ ಕಾಳುಕಡಿ ಸಂಗ್ರಹವಾಗುವಂತೆ ಮಾಡಿದೆ. ಆ ವರ್ಷ ನಮ್ಮ ಮೆಳ್ಳಳ್ಳಿಯ ಆರಕರೆ ಹೊಲಕ್ಕೆ ಜೋಳ ಬಿತ್ತಿದ್ದೆವು. ಜಿಟ್ಟಿ ಹತ್ತಿ ಕೈಗೆ ಏನೂ ಬರಲಿಲ್ಲ. ಕೇವಲ 24 ಚೆಟ್ಟಿ ಜೋಳ ಮಾತ್ರ ಆದವು. ನಮ್ಮ ದೊಡ್ಡಪ್ಪ, ಅಪ್ಪ ಇಬ್ಬರೂ ಕಣ್ಣೀರು ಹಾಕಿಬಿಟ್ಟರು. ಮಾಡುವುದೇನು? ನಮ್ಮ ಮನೆಗೆ ತಿಂಗಳಿಗೆ ಮೂರು ಚೀಲ ದವಸವಾದರೂ ಬೇಕಾಗುತ್ತಿತ್ತು. ಎಲ್ಲಿಂದ ತರುವುದು? ಸುಗ್ಗಿಯಲ್ಲಿ ಕೂಲಿಮಾಡಿದ್ದು ಒಂದೆರಡು ತಿಂಗಳಿಗಾಗುವಷ್ಟಾದರೂ ಮುಂದಿನ ಎಂಟು ಹತ್ತು ತಿಂಗಳು ಕಾಲಕಳೆಯುವುದು ಹೇಗೆ? ಅದರಲ್ಲೂ ಬಟ್ಟೆಬರೆ, ಕಂದಾಯ, ಹಬ್ಬಹುಣ್ಣಿಮೆ ಏನೆಲ್ಲ ಉಂಟಲ್ಲವೆ? ಅವಕ್ಕೆಲ್ಲಿಂದ ಹಣ ತರಬೇಕು? ಕಾಳು ಸಂಗ್ರಹಿಸುವುದು ಹೇಗೆ? ಇವೆಲ್ಲ ಚಿಂತೆಗಳು ನನ್ನನ್ನು ಬಾಧಿಸತೊಡಗಿದವು. ಸುಗ್ಗಿ ಕಳೆದ ಮೇಲಿನ ಕೂಲಿ ಗಂಡಾಳಿಗೆ ಕೇವಲ ಎರಡಾಣೆ, ಹೆಣ್ಣಾಳಿಗೆ ಒಂದೂವರೆ ಆಣೆ. ಧೈರ್ಯ ತಂದುಕೊಂಡೆ. ಏನಾದರೂ ಮಾಡಬೇಕೆಂದು ಯೋಚಿಸತೊಡಗಿದೆ. ದೇಸಾಯಿ ಮಹಾಲಿಂಗಪ್ಪನ ಐದೆಕರೆ ಹೊಲವನ್ನು ಕೋರಿನಂತೆ ಹಿಡಿದು ಎರಡು ಮೂರು ವರ್ಷಗಳಿಂದ ಮಾಡುತ್ತ ಬಂದಿದ್ದರೂ ಅವರಲ್ಲಿ ವಿಶೇಷ ಬೆಳೆತೆಗೆಯುವ ಯೋಚನೆಯನ್ನು ನಮ್ಮ ಹಿರಿಯರು ಮಾಡಿರಲಿಲ್ಲ. ಆ ಹೊಲದಲ್ಲಿ ಅರ್ಧ ಎಕರೆ ಹೊಲ ಹೊಳೆಗೆ ಹತ್ತಿತ್ತು. ಅದರಲ್ಲಿ ಬದನೆಗಿಡ ಹಚ್ಚಿ ಹೊಳೆಯಿಂದ ಏತದ ನೀರೆತ್ತಿ ಬಿಟ್ಟು ಬೆಳೆ ಬೆಳೆಯುವ ಯೋಚನೆಮಾಡಿ ನಮ್ಮ ದೊಡ್ಡಪ್ಪನಿಗೆ ಹೇಳಿ ಅವನ ಸಹಾಯದಿಂದ ಮಾಗಿಯಲ್ಲಿ ಎರಡು ಸಲ ರಂಟೆಹೊಡೆದು ಹೊಲವನ್ನು ಸಿದ್ಧಮಾಡಿಬಿಟ್ಟೆ. ನೀರಲಗಿಡಗಳನ್ನು ಹಚ್ಚಲು ಏರ್ಪಾಡು ಮಾಡಿದೆ. ಎಲ್ಲ ಕಾರ್ಯಗಳೂ ಸುಸೂತ್ರವಾಗಿ ಸಾಗಿದವು. ಅಕ್ಟೋಬರ್ ತಿಂಗಳಲ್ಲಿ ಬದನೇಸಸಿಗಳನ್ನು ತಂದು

ಹಚ್ಚಿಬಿಟ್ಟೆವು. ದಿನಕ್ಕೊಂದು ಚಂದವಾಗಿ ಬದನೆ ಭವ್ಯವಾಗಿ ಬೆಳೆಯತೊಡಗಿತು. ಕಾಲಕಾಲಕ್ಕೆ ಏತದಿಂದ ನೀರು ಹಾಯಿಸತೊಡಗಿದೆವು. ನಸುಕಿನಲ್ಲಿ ಐದು ಘಂಟೆಗೆ ಎದ್ದು ನಮ್ಮ ದೊಡ್ಡಪ್ಪನಿಗೆ ಸೂಚನೆ ಕೊಟ್ಟು ನಾನು ಮೊದಲ ಏತದಿಂದ ಹೊಳೆಗೆ ಹತ್ತಿದ ಏತದಿಂದ ನೀರೆತ್ತಿ ಮೇಲಣ ಗುಂಡಿಯನ್ನು ತುಂಬಿಸಿಬಿಡುತ್ತಿದ್ದೆ. ಅಷ್ಟು ಹೊತ್ತಿಗೆ ನಮ್ಮ ದೊಡ್ಡಪ್ಪ ಬಂದು ಮೇಲಿನ ಏತದಿಂದ ಆ ನೀರನ್ನು ಎತ್ತಿ ಹೊಲಕ್ಕೆ ಹರಿಸುತ್ತಿದ್ದ. ನಾನು ಬಿಡುವಿಲ್ಲದೆ ಕೆಳಗಿನ ಏತದಿಂದ ನೀರೆತ್ತಲೇ ಬೇಕಾಗುತ್ತಿತ್ತು. ನಾನು ನೀರೆತ್ತಿ ಗುಂಡಿಯನ್ನು ತುಂಬಿಸಿದಂತೆಲ್ಲ ಮೇಲಿನ ಏತದಿಂದ ಎತ್ತಿ ದೊಡ್ಡಪ್ಪ ಹೊಲಕ್ಕೆ ಹರಿಸಿ ಬಿಡುತ್ತಿದ್ದ. ಆ ದಿನ ಹಗಲೆಲ್ಲ ಬಿಡುವಿಲ್ಲದೆ ನೀರೆತ್ತಿ ಒಂದೇ ದಿನದಲ್ಲಿ ಅರ್ಧ ಎಕರೆ ಹೊಲಕ್ಕೆ ನೀರುಣ್ಣಿಸಿ ಬಿಡುತ್ತಿದ್ದೆವು. ಒಂಬತ್ತು ಗಂಟೆಯ ಹೊತ್ತಿಗೆ ನಮ್ಮ ತಾಯಿ ಸೊಗಸಾಗಿ ಬಿಸಿ ಬಿಸಿ ರೊಟ್ಟಿ, ಕಾರಬೇಳೆ ತಂದು ಊಟಕ್ಕೆ ಕೊಡುತ್ತಿದ್ದಳು. ಹೊಳೆದಂಡೆಯ ಆ ಪ್ರಶಾಂತವಾದ ವಾತಾವರಣದಲ್ಲಿ ನಾಲ್ಕೈದು ರೊಟ್ಟಿ ತಿಂದು ಬಿಸಿ ಬಿಸಿ ನುಚ್ಚಂಬಲಿಗೆ ಮಜ್ಜಿಗೆ ಬೆರೆಸಿ ತಂದದ್ದನ್ನು ಕಂಠಪೂರ್ತಿಕುಡಿದು ಸ್ವಲ್ಪ ಬದನೆ ಹೊಲದಲ್ಲಿ ತಿರುಗಾಡಿ ಪುನಃ ಯಾತ ಹೊಡೆಯಲು ಪ್ರಾರಂಭಿಸುತ್ತಿದ್ದೆ. ನನ್ನ ಉತ್ಸಾಹದ ಪರಿಚಯವನ್ನು ಮಾತಿನಿಂದ ಮಾಡಲಾರೆ.

**ಪ್ರಥಮವಾಗಿ ಬದನೆ ಕಾಯಿ ಕೊಯ್ದಾಗ**

ಬದನೆಗಿಡಗಳು ನಭೂತೋ ನಭವಿಷ್ಯತಿ ಅನ್ನುವಂತೆ ಬೆಳೆದು ನಿಂತು ಬಿಟ್ಟವು. ನನ್ನ ಇಪ್ಪತ್ತು ನಾಲ್ಕು ಘಂಟೆಗಳ ಜೀವನ ಬದನೆ ಹೊಲದಲ್ಲಿಯೇ ಕಳೆದು ಹೋಗುತ್ತಿತ್ತು. ಕಾಲುವೆ ಮಾಡುವುದು, ಕಳೆ ಕೀಳುವುದು, ಹುದಿಗಳನ್ನು ಸರಿಪಡಿಸುವುದು, ಬುಡಕ್ಕೆ ಗೊಬ್ಬರ ಹಾಕುವುದು ಮುಂತಾದ ಕೆಲಸಗಳಿಗೆ ಕಾಲವೇ ಸಾಲುತ್ತಿರಲಿಲ್ಲ. ಮಕರ ಸಂಕ್ರಮಣಕ್ಕೆ ಪ್ರಥಮತಃ ಕಿತ್ತ ಕಾಯಿಯ ರಾಶಿಯನ್ನು ಕಂಡು ನನಗಾದ ಆನಂದಭರಿತ ಮಾನಸಿಕ ಸ್ಥಿತಿಯನ್ನು ವರ್ಣಿಸಲು ಶಬ್ದ ಸಾಲದು. ಐದು ಸೇರು ಕಾಯಿಯನ್ನು ಪೂಜೆಮಾಡಿ ಪ್ರಥಮತಃ ಕಿತ್ತು ಸಂಗಮೇಶ್ವರನಿಗೆ ಮೀಸಲಿಟ್ಟು ಅರ್ಪಿಸಿಬಂದು ಹತ್ತು ಹನ್ನೆರಡು ಬಿದಿರ ದೊಡ್ಡ ಜಲ್ಲಿಗಳಷ್ಟು ಕಾಯನ್ನು ಕಿತ್ತು ತಲೆಯ ಮೇಲೆ ಹೊತ್ತು ಜಾತ್ರೆಗೊಯ್ದವು. ಉತ್ತಮವಾದ ಆ ಕಾಯಿಗಳನ್ನು ನೋಡಿ ಜಾತ್ರೆಯ ಜನವೆಲ್ಲ ಸಂತೋಷಪಟ್ಟರೆಂದು ಹೇಳುವುದರಲ್ಲಿ ಉತ್ಪ್ರೇಕ್ಷೆಯಿಲ್ಲ. ದೃಷ್ಟಿತಾಗುವಂತಹ ಅಂದವಾದ ಕಾಯಿ ಜನವೆಲ್ಲ ಮಂಕರಿ ಖರೀದಿಸತೊಡಗಿದರು. ಆಗ ಮಕರ ಸಂಕ್ರಮಣವಾದ್ದರಿಂದ ಕೂಡಲ ಸಂಗಮೇಶ್ವರ ಕ್ಷೇತ್ರದಲ್ಲಿ ಅಸಂಖ್ಯಾತ ಜನ ಸೇರುತ್ತಿದ್ದರು. ನಾವು ಒಯ್ದ ಹತ್ತು ಹನ್ನೆರಡು ಬುಟ್ಟಿ ಬದನೆಕಾಯಿಗಳು ನಮ್ಮ ಊಹೆಗೂ ಮೀರಿದ ಬೆಲೆಯಲ್ಲಿ ಮಾರಾಟವಾಗಿ ನಮ್ಮ ಮನೆಯವರೆಲ್ಲ ಉತ್ತೇಜಿತರಾಗಿ ಹೋದರು. ಆಗ ಸಾಮಾನ್ಯವಾಗಿ ಕಾಲಾಣೆಗೆ ಸೇರು ಅಥವಾ ಒಂದೂವರೆ ಸೇರು ಮಾರಾಟವಾಗುತ್ತಿದ್ದವು. ಸಂತೆಯಲ್ಲಿ ಸಾಯಂಕಾಲವಾದಂತೆಲ್ಲ ಕಾಲಾಣೆಗೆ ಎರಡು ಸೇರು ಸಹ ಮಾರಾಟವಾಗಿ ಒಂದು ಬುಟ್ಟಿ ಕಾಯಿಗೆ ಆರಾಣೆಯೋ, ಎಂಟಾಣೆಯೋ ಸಿಗುತ್ತಿತ್ತು. ಮಕರ ಸಂಕ್ರಮಣದ ಈ ಜಾತ್ರೆಯಲ್ಲಿ ಅರ್ಧ ಆಣೆಗೆ ಸೇರಿನಂತೆ ಮಾರಾಟವಾಗ ತೊಡಗಿದ್ದು ಬಹುದೊಡ್ಡ ಲಾಭದಾಯಕ ಧಾರಣೆ ಸಿಕ್ಕ ಹಾಗೆಯೇ ಆಗಿತ್ತು. ಸ್ಪಷ್ಟವಾಗಿ ಜ್ಞಾಪಕವಿಲ್ಲ. ಒಟ್ಟು ಹದಿನಾರು ರೂಪಾಯಿಯ ವ್ಯಾಪಾರವಾಗಿರಬಹುದೆಂದು ತೋರುತ್ತದೆ. ಅದರಲ್ಲಿ ಎಂಟು ರೂಪಾಯಿ ಹೊಲದ ಮಾಲೀಕನಾದ ಮಹಾಲಿಂಗಪ್ಪನಿಗೆ ಪ್ರಾಮಾಣಿಕವಾಗಿ ತಲುಪಿಸಿದಾಗ ಮಹಾಲಿಂಗಪ್ಪ ದೊಡ್ಡ ರಾಜ್ಯ ಗೆದ್ದು ಬಂದವನಂತೆ

ಉತ್ಸಾಹಿತನಾದ. ನನ್ನ ಪ್ರಾಮಾಣಿಕತೆಗಂತೂ ಬಹು ಸಂತೋಷಪಟ್ಟು, ತಾನಿರುವವರೆಗೂ ನನ್ನನ್ನು ಹೊಗಳುತ್ತಲೇ ಇದ್ದ.

ಬದನೆ ತೋಟದಲ್ಲಿ ಸಾಯಿಗುಣಿ (ಗಿಡಗಳು ಸತ್ತು ಬರಿದಾದ ನೆಲ) ಬಿದ್ದ ಕಡೆಗಳಲ್ಲಿ ಮೇಡುಮೂಲೆಗಳಲ್ಲಿ (ಹೊಲದ ಸುತ್ತಲಿನ ಕೊನೆಯ ಭಾಗ) ಉಳಿದ ಸ್ಥಳಗಳಲ್ಲಿ ಮಡಿಗಳನ್ನು ಮಾಡಿ ನಮ್ಮೂರ ಕೆಂಚಪ್ಪನ ಹಾಗೆ ನಾನೂ ಸಾಧ್ಯವಾದಷ್ಟು ತೋಟಮಾಡಬೇಕೆಂದು ಉಳ್ಳಾಗಡ್ಡಿ ಪಣಜು (ಗಡ್ಡೆಗಟ್ಟದ ಚಿಕ್ಕ ಚಿಕ್ಕ ಗಡ್ಡೆಗಳು)ತಂದು ಹಚ್ಚಿದೆ. ಹುದಿಗಳಲ್ಲಿ ಮೂಲಂಗಿ ಬೀಜ ಊರಿದೆ. ಕೆಲವು ಮಡಿಗಳಲ್ಲಿ ಮೆಂತೆ, ಕೋತಂಬ್ರಿ ಬೀಜ ಚಲ್ಲಿದೆ. ಸರಿ ಎಲ್ಲದಕ್ಕೂ ಏತದಿಂದ ನೀರೆತ್ತಿ ಎರಡು ಮೂರು ದಿನಕ್ಕೊಮ್ಮೆ ನೀರು ಬಿಡತೊಡಗಿದೆ. ಚನ್ನಾಗಿ ಗೊಬ್ಬರ ಸೊಪ್ಪು ಹಾಕಿದರ ಕಾರಣವಾಗಿಯೂ ನೀರನ್ನು ಸಕಾಲಕ್ಕೆ ಕೊಡುತ್ತ ಬಂದ ಫಲವಾಗಿಯೂ ಬದನೆಗಿಡಗಳು ಆ ಹೊಲದ ಇತಿಹಾಸದಲ್ಲಿಯೇ ಎಂದೂ ಬೆಳೆಯಲಾರದಷ್ಟು ಬೆಳೆದು ನಿಂತ ಗಿಡಗಳ ಸ್ಪಷ್ಟ ಚಿತ್ರ ಐವತ್ತು ವರ್ಷ ಕಳೆದರೂ ನನ್ನ ಕಣ್ಣಮುಂದೆ ಕಟ್ಟಿದಂತಿದೆ.

ಎರಡನೆಯ ಬೀಡಿನಿಂದ ಬಿಡುತ್ತ ಬಂದ ಕಾಯಿಗಳ ಪ್ರಮಾಣ ಊಹಾತೀತ ವಾಗಿಹೋಯಿತು. ನಮ್ಮದೊಡ್ಡಪ್ಪ ಅಪ್ಪ ಮತ್ತು ಮಾವ ಗುರುಪಾದಪ್ಪ ಇವರುಗಳು ದೂರ ದೂರದ ಊರಿಗೆ ಕಾಯಿ ಹೊತ್ತು ಕಾಳಿನ ತೂಕಕ್ಕೆ ಮಾರಿಬಂದರೆ ನಾನು ಮತ್ತು ನಮ್ಮ ತಾಯಿ ಇಬ್ಬರೂ ಸುತ್ತಮುತ್ತ ಹಳ್ಳಿಗಳಾದ ತೆವರ ಮೆಳ್ಳಳ್ಳಿ, ಹಲಸೂರು, ಕೂಡಲ, ಹಾದರಗೇರಿ, ಅಪ್ಪಾಪುರ, ಮಾರನ ಬೀಡುಗಳಿಗೆ ಬೆಳಿಗ್ಗೆ ಹೊತ್ತುಕೊಂಡು ಹೋಗಿ ಮಧ್ಯಾಹ್ನ 12 ಘಂಟೆ ಹೊತ್ತಿಗೆ ಮನೆಗೆ ಬರುತ್ತಿದ್ದೆವು. ಕಾಳಿನ ತೂಕವಾದ್ದರಿಂದ ಒಂದೊಂದು ಬುಟ್ಟಿಗೆ ಇಪ್ಪತ್ತು ಇಪ್ಪತ್ತೈದು ಸೇರು ಜೋಳ, ರಾಗಿ, ಬತ್ತ, ನವಣೆ, ತೊಗರಿ - ಹೀಗೆ ವಿವಿಧ ಧಾನ್ಯಗಳು ಬರತೊಡಗಿದರು. ನೇರವಾಗಿ ಮಹಾಲಿಂಗಪ್ಪನ ಮನೆಗೆ ಹೋಗಿ ಅವರ ಕೋರು ಪಾಲಿನ ಅರ್ಧಧಾನ್ಯ ಅಳೆದು ನಮ್ಮಮನೆಗೆ ಸುಮಾರು ಇಪ್ಪತ್ತೈದು ಸೇರು ಕಾಳು ನಾವಿಬ್ಬರೂ ತರುತ್ತಿದ್ದೆವು. ಅಂತೂ ಆ ವರ್ಷ ನಮ್ಮ ಮನೆಯ ಕಡುದಾರಿದ್ರ್ಯ ಈ ತೋಟದ ಫಲವಾಗಿ ಸ್ವಲ್ಪ ಕಡಿಮೆಯೇನೋ ಆಯಿತು. ಬೇಸಿಗೆ ಕಳೆದು ಮುಂದೆ ಆಶ್ವೀಜಮಾಸ ಬಂದು ಹೊಸಧಾನ್ಯದ ಪೈರು ಬರುವವರೆಗೂ ಬಹುಕಷ್ಟದ ಕಾಲವಲ್ಲವೆ? ಆಗ ಸ್ವಲ್ಪ ಕಷ್ಟವಾದರೂ ಹೇಗೋ ನಿಭಾಯಿಸಿದೆವು.

ಮರುವರ್ಷವೂ ಬದನೆ ಹಾಕಿದೆವು. ಆದರೂ ಏಕೋ ಮೊದಲಿನ ವರ್ಷದ ಬೆಳೆಯಂತಾಗಲಿಲ್ಲ. ಇಷ್ಟಾದರೂ ನಾನು ಬದನೆ ಹೊಲದಲ್ಲಷ್ಟೇ ಕಾಲ ಕಳೆಯುತ್ತಿರಲಿಲ್ಲ. ಹೊಲದ ಉಳುಮೆಯ ಕೆಲಸಕ್ಕೆ ಹೋಗುವ ಭಾರವು ನನ್ನ ಮೇಲೆಯೇ ಬಿದ್ದಿತು. ಅದನ್ನಂತೂ ಯಾವ ಕಸಬುದಾರ ರೈತನಿಗಿಂತಲೂ ಮೇಲೆನ್ನುವಂತೆ ಮಾಡುತ್ತಿದ್ದೆ. ವ್ಯವಸಾಯ ಜೀವನ ನನ್ನ ಅತ್ಯಂತ ಶ್ರದ್ಧೆಯ ಭಕ್ತಿಯ ಕಾಯಕವಾದದ್ದಂತೂ ನಿಜ.

### ಅತಿ ಭಯಗೊಂಡ ಒಂದು ಪ್ರಸಂಗ

ಒಮ್ಮೆ ನಮ್ಮ ಮೆಳ್ಳಳ್ಳಿಯ ಹಳ್ಳದ ಮೂರು ಎಕರೆ ಹೊಲವನ್ನು ಒಂದೇ ದಿನ ಹರಗಿ ಬರಬೇಕೆಂದು ರಾತ್ರಿ ಸಂಕಲ್ಪಮಾಡಿ ಒಂಬತ್ತು ಗಂಟೆಗೆ ಮಲಗಿಬಿಟ್ಟೆ. ಕನಸಿನಲ್ಲೆಲ್ಲ ಹೊಲ

ಹರಗುತ್ತಿರುವ ಚಿತ್ರಗಳೇ ಮೂಡಿ ಮಯಾವಾಗುತ್ತಿದ್ದವು. ಪಕ್ಕದ ಮನೆಯ ಓರ್ವ ಹೆಣ್ಣುಮಗಳು ರೊಟ್ಟಿ ಬಡಿಯುವ ಶಬ್ದ ಕೇಳಿ ಒಂದು ಗಂಟೆ ರಾತ್ರಿಯ ಸುಮಾರಿಗೇ ಎಚ್ಚರಗೊಂಡುಬಿಟ್ಟೆ. ಹೊರಗೆ ಬಂದು ನೋಡುವಷ್ಟರಲ್ಲಿ ಮೋಡದ ಮರೆಯ ಮುಳುಗುವ ಚಂದ್ರನ ನಸುಬೆಳಕು ಕಂಡು ಬೆಳಗಾಗಿಬಿಟ್ಟಿತೆಂದು ಭ್ರಮಿತನಾಗಿ ಅವಸರವಸರವಾಗಿ ಎತ್ತುಗಳಿಗೆ ಮುಸುರೆ ತಿನ್ನಿಸಿ ಕೊರಳುಕಟ್ಟಿ, ಕುಂಟಿ ಹೇರಿಕೊಂಡು ಹೊಲಕ್ಕೆ ಹೊರಟು ಬಿಟ್ಟೆ. ಕಾಲದ ಅರಿವು ಎಳ್ಳಷ್ಟೂ ಆಗಲೇ ಇಲ್ಲ. ಸ್ವಲ್ಪ ಹೊತ್ತಿನಲ್ಲಿ ಚಂದ್ರ ಮುಳುಗಿ ದಟ್ಟ ಕಗ್ಗತ್ತಲಾಗಿ ಹೋಯಿತು. ಇಷ್ಟು ಹೊತ್ತಿಗಾಗಲೆ ಅರ್ಧದಾರಿ ಬಂದು ಬಿಟ್ಟಿದ್ದೆ. ನನಗೂ ಆಶ್ಚರ್ಯವಾಯಿತು. ನಿಚ್ಚಳ ಬೆಳಕು ಹರಡಬೇಕಾಗಿದ್ದ ಸಮಯಲ್ಲಿ ಕಗ್ಗತ್ತಲಾವರಿಸುತ್ತ ಹೋದದ್ದು ಹೇಗೆಂಬುದನ್ನು ಎಷ್ಟು ಯೋಚಿಸಿದರೂ ಹೊಳೆಯದು. ಜ್ಯೇಷ್ಠಮಾಸದಲ್ಲಿ ಬೀಸುವ ನೈಋತ್ಯ ಮಾನ್ಸೂನಿನ ದಟ್ಟ ಮೋಡಗಳ ಮರೆಯ ಚಂದ್ರನ ಬೆಳಕೇ ನನಗೆ ಮೋಸ ಮಾಡಿತೆಂದು ಅಂದುಕೊಂಡೆ. ಈಗ ಮಾಡುವುದೇನು? ಈ ದಟ್ಟ ನಿಶೆಯಲ್ಲಿ ನಮ್ಮ ಮೆಳ್ಳಳ್ಳಿಯ ಹೊಲಕ್ಕೆ ಹೋಗುವುದಂತೂ ಅಪಾಯ ಎನ್ನಿಸಿತು. ಏಕೆಂದರೆ ಹಳ್ಳದ ಬೇವಿನ ಮರದಲ್ಲಿ ದೆವ್ವ ಇದೆ ಎಂದೂ ಆಗಾಗ ಅದು ನಮ್ಮ ದೊಡ್ಡಪ್ಪನನ್ನು ಕಂಡು ಮಾತನಾಡಿಸಿತ್ತೆಂದೂ ಹೇಳುತ್ತಿದ್ದ ಕಥೆಗಳನ್ನು ಕೇಳಿದ್ದೆ. ಅದನ್ನು ನೆನೆಸಿಕೊಂಡರಾಯಿತು, ಮೈ ಜುಮ್ಮೆನ್ನುತ್ತಿತ್ತು. ನಮ್ಮ ಹೊಲದಲ್ಲಿಯೇ ಬನ್ನಿಯ ಮರದ ಕೆಳಭಾಗದ ಹೊಲದಲ್ಲಿ "ಏಳು ಮಕ್ಕಳ ಚೌಡಿ ಕಿಚಕಿಚ ಎನ್ನುವ ಏಳು ಮಕ್ಕಳೊಡನೆ ತಿರುಗುತ್ತಿರುತ್ತಾಳೆ. ಬನ್ನಿಯ ಮರದ ಕೆಳಗೆ ಮಾತ್ರ ರಾತ್ರಿ ಹೊತ್ತು ಎಂದೂ ತಿರುಗಾಡಬೇಡಿ" ಎಂದು ನಮ್ಮ ದೊಡ್ಡಪ್ಪನೇ ಹೇಳುತ್ತಿದ್ದ ಎಚ್ಚರಿಕೆಯ ಮಾತುಗಳು ಜಾಗಟಿಯ ನಾದದಂತೆ ಕಿವಿಯಲ್ಲಿ ಪ್ರತಿಷ್ಪಂದಿಸುತ್ತಿದ್ದವು. ಇಂಥ ಅಪಾಯದ ಹೊಲಕ್ಕೆ ಅದರಲ್ಲೂ ಹಳ್ಳ ದಾಟಿ ಹೋಗಲು ಬಹಳ ಹೆದರಿಕೆಯಾಯಿತು. ಕೆಲಹೊತ್ತು ಹೊಲವಾರಿಯ ದಾರಿಯಲ್ಲಿ ಎತ್ತು ತರುಬಿ ಅವುಗಳ ಮಧ್ಯದಲ್ಲಿ ಬೆನ್ನ ಮೇಲೆ ಕೈಯಿಟ್ಟು ನಿಂತುಬಿಟ್ಟೆ. ಏನೂ ತೋಚಲೇ ಇಲ್ಲ. ಆ ಕಾಲಕ್ಕಾಗಲೆ ನನ್ನಲ್ಲಿ ಧೈರ್ಯ ಸ್ಥೈರ್ಯ ಶೌರ್ಯಗಳು ಅಧಿಕಗೊಂಡಿದ್ದರೂ ಪ್ರವಾಹಕ್ಕೊಡ್ಡಿದ ಮಳಲಗೋಡೆಯಂತೆ ನಿಷ್ಫಲವಾದವು. ದೂರದಲ್ಲಿ ಕಾಣುವ ಮೆಳ್ಳಳ್ಳಿ ಊರಿನ ಆಗೊಂದು ಈಗೊಂದು ಕಾಣುವ ದೀಪದ ಬೆಳಕುಗಳು ಕೊಳ್ಳಿಯ ದೆವ್ವಗಳೇ ಏನೋ ಎಂದು ಭೀತಿ ಹುಟ್ಟಿಸುತ್ತಿದ್ದವು. ಈ ಭೀತಿಗೆಲ್ಲ ಕಾರಣ ನಮ್ಮ ದೊಡ್ಡಪ್ಪನಿಂದ ಆಗಾಗ ಕೇಳುತ್ತಿದ್ದ ದೆವ್ವದ ಕಥೆಗಳೇ ಕಾರಣಗಳಾಗಿದ್ದವು.

ಮುದ್ದಪ್ಪಜ್ಜನನ್ನು ಕೆಲವರ್ಷಗಳ ಹಿಂದೆ ದಾರಿತಪ್ಪಿಸಿ ಅಲ್ಲಾಪುರದ ಹೊಳೆಯಲ್ಲಿ ಹೋಗಿ ನಿಲ್ಲುವಂತೆ ಮಾಡಿದ್ದ ಮೆಳ್ಳಳ್ಳಿಯ ಅರಳೀಮರದಲ್ಲಿರುವ ದೆವ್ವನ ನೆನಪಾಗಿ ಹೋಯಿತು. ಅದು ತಿರುಗಾಡುವ ದಾರಿ. ನಮ್ಮ ಹೊಲದ ಅಂಚಿನಲ್ಲಿಯೇ ಇದ್ದು, ಅಲ್ಲಿಂದ ನೇರವಾಗಿ ಆಲದಕಟ್ಟಿ ದಾರಿ ಹಿಡಿದು ಅಲ್ಲಾಪುರದ ಮೇಲೆ ಹಾಯ್ದು ಹೋಗುತ್ತಿತ್ತೆಂದು ನಮ್ಮ ದೊಡ್ಡಪ್ಪ ಹೇಳುತ್ತಿದ್ದ ಆಗಾಧ ಭೌಗೋಲಿಕ ನಿಖರ ನಕ್ಷೆಯೂ ಒಮ್ಮೊಮ್ಮೆ ಕಣ್ಣಮುಂದೆ ಹಾಯ್ದುಹೋಗುತ್ತಿತ್ತು. ಈಗ ಆಕಾಶಕ್ಕೆ ಹಾರಿಬಿಡುತ್ತಿರುವ ಉಪಗ್ರಹಗಳ ಮಾರ್ಗವನ್ನು ಕರಾರುವಾಕ್ಕಾಗಿ ಹೇಳುವಂತೆ ನಮ್ಮ ದೊಡ್ಡಪ್ಪ ಹೇಳುತ್ತಿದ್ದ ಅರಳಿಮರದ ದೆವ್ವನ ಮಾರ್ಗ ಇಂಥಿಂಥದೇ ಎಂದು ತಿಳಿಸಿತ್ತು.

ಆದ್ದರಿಂದ ಮುಂದೆ ಹೆಜ್ಜೆಯಿಡಲು ಶಕ್ಯವಿಲ್ಲದೆ ಬಹಳ ಹೊತ್ತಿನವರೆಗೆ ಎತ್ತುಗಳ ಮಧ್ಯದಲ್ಲಿ ನಿಂತೇ ಇದ್ದೆ. ಎತ್ತುಗಳೂ ಮೆಲಕು ಹಚ್ಚಿದ್ದವು. ನಿಂತು ನಿಂತು ಅವಕ್ಕೂ ಸಾಕಾಗಿರಬೇಕು. ನೊಗ ಕುಂಟಿ ಸಮೇತ ಅವು ಮಲಗಿಬಿಟ್ಟವು. ನಾನೂ ಅವುಗಳ ಮಧ್ಯದಲ್ಲಿ ಕುಳಿತೆ. ಸ್ವಲ್ಪ

ಹೊತ್ತಿನಲ್ಲಿ ನನಗೂ ನಿದ್ರೆ ಬಂತು. ಎತ್ತುಗಳ ಮಧ್ಯದಲ್ಲಿಯೇ ಮಲಗಿಬಿಟ್ಟೆ. ಎಚ್ಚರವಾದಾಗ ಉದಯಸೂರ್ಯನೇ ಮೊದಲು ಕಣ್ಣಿಗೆ ಬಿದ್ದ.

**ಮನೆಯ ಕೋಲಾಹಲ**

ಇತ್ತ ಮನೆಯಲ್ಲಿ ನಮ್ಮ ತಾಯಿ 'ಚನ್ನಪ್ಪ ಸರೋರಾತ್ರ್ಯಾಗ ಗಳೇ ಹೂಡಿಕೊಂಡು ಹೊಲಕ್ಕೆ ಹೋಗಿಬಿಟ್ಟ' ಎಂದು ಹುಯಿಲೆಬ್ಬಿಸಿದಾಗ ನಮ್ಮ ಮನೆಯ ಮೂವರೂ ಹಿರಿಯರು ಒಂದೊಂದು ಹಾದಿ ಹಿಡಿದು ಕೂಗುತ್ತ ಹೊರಟರಂತೆ. ನಾನು ಯಾವ ಹೊಲಕ್ಕೆ ಹೋದೆನೆಂಬುದು ಅವರಿಗಾರಿಗೂ ಗೊತ್ತಿಲ್ಲವಂತೆ. ಹೀಗಾಗಿ ಅವರಿಗೂ ತಬ್ಬಿಬ್ಬಾಗಿ ಕಗ್ಗತ್ತಲಲ್ಲಿ ಭಯಗೊಂಡು ಎತ್ತೆತ್ತಲೋ ಹೋಗಿ ಬಿಟ್ಟರಂತೆ. ನಮ್ಮ ದೊಡ್ಡಪ್ಪನಂತೂ ಗಾಬರಿಯಾಗಿ ಹುಡುಗ ಈ ದಿನ ಯಾವುದಾದರೊಂದು ದೆವ್ವದ ಕೈಗೆ ಸಿಕ್ಕು ಬಿಟ್ಟನೆಂದು ಅಂದುಕೊಂಡು ಬಂಕಾಪುರ ಓಣಿಯಲ್ಲಿ ನಡೆದು ಕೊನೆಗೆ ದಾರಿತಪ್ಪಿ ಬೆಳಗಾಗುವವರೆಗೆ ತೊಳಲಿದನಂತೆ. ಆದರೆ ಅವನಿಗೆ ಅಲ್ಪ ಸ್ವಲ್ಪ ಧೈರ್ಯ ಬಂದದ್ದು ಹೇಗೂ ಎತ್ತುಗಳು ಇವೆಯಲ್ಲಾ ಎಂಬುದು. ಎತ್ತುಗಳು ಜೊತೆಯಲ್ಲಿದ್ದರೆ ದೆವ್ವಗಳ ಹಾಜರಾತಿ ಕಡಿಮೆಯಂತೆ. ಆದರೂ ಕೆಲವು ಮೊಂಡ ದೆವ್ವಗಳು ಎತ್ತನ್ನು ಮುಂದೆಬಿಟ್ಟು ಹಿಂದೆ ಹಿಂದೆ ನಿಧಾನವಾಗಿ ಬರುತ್ತಿರುವುದೂ ಉಂಟಂತೆ. ನಮ್ಮ ದೊಡ್ಡಪ್ಪನ ಭಾವುಕತೆ ವಿಶೇಷವಾದದ್ದು. ಅವನು ದೆವ್ವದ ಕತೆ ಹೇಳುತ್ತ ಕುಳಿತರೆ ಬಹುಜನ ಬಾಯಿಬಿಟ್ಟು ಕೇಳುತ್ತ ಕೂಡುತ್ತಿದ್ದರು. ಅದೊಂದು ಅವನ ವಿಶೇಷ ಕಲೆಯಾಗಿತ್ತು. ಆದರೆ ನಮಗೆ ಶಾಶ್ವತವಾಗಿ ಮನಸ್ಸಿನ ಮೇಲೆ ಭಯದ ಮುದ್ರೆಯನ್ನೊತ್ತಿಬಿಟ್ಟಿತೆಂಬುದಂತೂ ಸತ್ಯ. ಬೆಳಗಾಗುತ್ತಲೇ ನಮ್ಮ ತಾಯಿ ರೊಟ್ಟಿಕಟ್ಟಿಕೊಂಡು ನಾನು ಹರಗುತ್ತಿದ್ದ ಹೊಲಕ್ಕೆ ಬಂದು ನನ್ನನ್ನು ಕಂಡು ತೃಪ್ತಿಯ ನಿಟ್ಟುಸಿರು ಬಿಟ್ಟು. ಒಂದಷ್ಟು ಗದಲಿಕೆಯನ್ನು ವಾತ್ಸಲ್ಯವನ್ನು ಕೂಡೇ ಎರೆದುಬಿಟ್ಟಳು.

ನನ್ನ ವ್ಯವಸಾಯ ಜೀವನದಲ್ಲಿ ನಮ್ಮ ಮನೆಯವರಿಗೆ ಭಯ ಹುಟ್ಟಿಸುವ ಇಂಥ ಅನೇಕ ಪ್ರಸಂಗಗಳು ನಡೆದುಹೋದವು. ಮಳೆ ಧೋ ಎಂದು ಸುರಿಯುತ್ತಿರುವಾಗ ನಾನು ಮನೆಯಲ್ಲಿ ಕುಳಿತುಕೊಳ್ಳಲು ಇಚ್ಛಿಸುತ್ತಿರಲಿಲ್ಲ. ಹೆಗಲಿಗೊಂದು ಗೊರೆ (ಸಲಿಕೆ) ಬಾಯಿಗುದ್ದಲಿ ಹಾಕಿಕೊಂಡು ಕಂಬಳಿ ಕೊಪ್ಪೆಹೊದ್ದುಕೊಂಡು ಹೊಲಕ್ಕೆ ಹೋಗುತ್ತಿದ್ದೆ. ಎಲ್ಲೆಲ್ಲಿ ಬದುಗಳು ಒಡೆದು ನೀರು ಹರಿದು ಮಣ್ಣನ್ನು ಕೊಚ್ಚಿಕೊಂಡು ಹೋಗುತ್ತದೆ, ಎಲ್ಲಿ ಒಡ್ಡು ಒಡೆದಿದೆ, ಎಲ್ಲಿ ನರಿ ಗುದ್ದುಗಳಿವೆ ಅಲ್ಲೆಲ್ಲ ಮಣ್ಣು ಕಡಿದು ಮೆಟ್ಟಿ ನೀರು ಬಸಿಯದಂತೆ, ಒಡ್ಡು ಒಡೆಯದಂತೆ ಮಾಡುವ ತಂತ್ರದಲ್ಲಿ ನಿರತನಾಗಿ ಬಿಡುತ್ತಿದ್ದೆ. ಈ ನನ್ನ ಚಟುವಟಿಕೆ ಎಲ್ಲರಿಗಿಂತ ಹೆಚ್ಚಾಗಿ ನನ್ನ ತಾಯಿಗೆ ಆತಂಕವನ್ನುಂಟುಮಾಡಿ ಚಡಪಡಿಸುತ್ತ "ಈ ಹುಡುಗ ಹೇಳಿದೋರ ಮಾತು ಕೇಳೋನೇ ಅಲ್ಲ. ಮುಂಗಾರಿ ಮಳಿಗೆ ಸಿಗಬೇಡ, ಮಳೆ ಸುರಿಯುವಾಗ ಮನೆಬಟ್ಟು ಹೋಗ್ಬ್ಯಾಡಾ ಅಂದ್ರ ಮುತ್ತಂತಾ ಹೋಗಿ ಬಿಡ್ತಾನಲ್ಲ. ನಾನೇನ್ಗತಿ ಮಾಡ್ಲಿ ಅಂತಿನಿ" ಎಂದು ಮನೆ ತುಂಬ ತಿರುಗಾಡಿ, ಗುಡುಗಾಡಿ ನಮ್ಮಪ್ಪನಿಗೆ "ನೀವು ಮನ್ಯಾಗ ಕುಂತು ಹುಡ್ಗನ್ನ ಹೊಲಕ್ಕ ಈ ಕೆಟ್ ಮಳ್ಯಾಗ ಕಳ್ಸಿ ಬಿಡ್ರಿ" ಇತ್ಯಾದಿ ಇತ್ಯಾದಿ ಮೂದಲಿಕೆ ಮಾಡಿ ಅವರ ಮುಖಕ್ಕೆ ಮಂಗಳಾರತಿ ಎತ್ತುತ್ತಿದ್ದಳಂತೆ. ಅವಳ ಆತಂಕ ಇಷ್ಟೆ : ಚೊಚ್ಚಲು ಮಕ್ಕಳನ್ನು ಕಂಡರೆ ಗುಡುಗು ಸಿಡ್ಲು ಬಹು ಜೋರು ಎಂಬುದು. ಅವರನ್ನು ಸಿಡಿಲು ಹುಡುಕಿಕೊಂಡು ಹೋಗಿ ಹೊಡೆದು ಬಿಡುತ್ತಂತೆ. ಕರ್ಣನ ಶಕ್ತ್ಯಾಯುಧದಂತೆ ಈ ನೂತನ ವಿಜ್ಞಾನ ಸತ್ಯವನ್ನು ಅವಳಿಗೆ ಇನ್ಯಾವ ಮಹಾತಾಯಿ

ಹೇಳಿದ್ದಾಳೋ! ಸಿಡಿಲೆರಗುವುದು ಸುಳ್ಳಲ್ಲದಿದ್ದರೂ ಚೊಚ್ಚಲು ಮಕ್ಕಳನ್ನೇ ಹುಡುಕಿಕೊಂಡೇಕೆ ಬರುತ್ತದೆ? ಎಂದು ನಾನು ತಾಯಿಗೆ ಹೇಳಿದ್ದೂ ಉಂಟು. ನಾನು ಸಣ್ಣವನಿರುವಾಗ ಮಳೆ ಬರುವಾಗ ಬೀದಿಗಳಲ್ಲಿ ನನ್ನನ್ನು ದರದರ ಎಳೆದುಕೊಂಡು ಬಂದು ಮನೆಯಲ್ಲಿ ಕೂಡಿ ಒಂದೆರಡು ಸಲ ಕಪಾಳಮೋಕ್ಷ ಕೊಟ್ಟ ಪ್ರಸಂಗಗಳೂ ಉಂಟು. ಈ ಪ್ರಸಂಗ ನೆನೆದು ಹೊಲದಲ್ಲಿ ನಾನಿದ್ದಾಗ ಗುಡುಗು ಗುಡುಗಿದರೆ, ಮಿಂಚು ಸೆಳೆದರೆ ಎದೆ ಗಡಗಡ ನಡುಗದೆ ಇರುತ್ತಿರಲಿಲ್ಲ. ಕರ್ತವ್ಯ ಶ್ರದ್ಧೆಯ ತೀವ್ರತೆಯಿಂದ ಅತ್ತ ಲಕ್ಷ್ಯ ಕಡಿಮೆಯಾಗಿತ್ತು. ಅಂತೂ ಗುಡುಗು ಸಿಡಿಲುಗಳಿಂದ ಇಂದಿಗೂ ನನಗೆ ಭಯಭೀತಿ ತಪ್ಪಿಲ್ಲ. ನನ್ನ ಈ ಉತ್ತರವಯಸ್ಸಿನಲ್ಲಿ ಚಿಕ್ಕವನಿರುವಾಗ ಮತ್ತು ತಾರುಣ್ಯದಲ್ಲಿರುವಾಗಿನಷ್ಟು ಧೈರ್ಯವಿಲ್ಲದೆ ಹೋಗುತ್ತಿದ್ದೆ. ಇದಕ್ಕೆ ಕಾರಣವೇನೆಂಬುದನ್ನು ಮನಶ್ಶಾಸ್ತ್ರಜ್ಞರೇ ಹೇಳಬೇಕು. ಈಗಲೂ ರಾತ್ರಿ ಮಲಗಿದ್ದಾಗ ಸಿಡಿಲಿನ ಸಪ್ಪಳವಾದರೆ ಎದ್ದುಕುಳಿತು ಬಿಡುತ್ತೇನೆ. ಮೂರು ವರ್ಷದ ಬಾಲ್ಯದ ಭಯ ನೂರುವರ್ಷಗಳವರೆಗೆ ಎನ್ನಲಡ್ಡಿಯಿಲ್ಲ ಅಲ್ಲವೆ!

## ಏನೆಲ್ಲ ಮಾಡಿದರೂ ಮನೆಯ ದಾರಿದ್ರ್ಯ ಹಾಗೇ ಇತ್ತು

ವ್ಯವಸಾಯದಲ್ಲಿ ನಾನು ಏನೆಲ್ಲ ಮೆಹನತ್ ಮಾಡಿದರೂ ಶ್ರಮದಿಂದ ನಾನಾ ಬಗೆಯಲ್ಲಿ ದುಡಿದರೂ ನಮ್ಮ ಮನೆಯ ದಾರಿದ್ರ್ಯವನ್ನು ದಿಡೀರನೆ ಹೋಗಲಾಡಿಸಲು ಸಾಧ್ಯವಿಲ್ಲದೆ ಹೋಗುತ್ತಿತ್ತು. ಇದಕ್ಕೆ ಕಾರಣ ಪ್ರಕೃತಿಯ ಕೋಪ. ಅಲ್ಲದೆ ಒಬ್ಬನು ದುಡಿಯುವುದಕ್ಕೆ ಸೀಮಿತವಾಗಿದ್ದ ಕೆಲಸದಿಂದ ನಾನೊಬ್ಬನು ಹೊಲಕ್ಕೆ ಹೋಗುತ್ತಿದ್ದರೆ, ಉಳಿದವರಿಗೆ ಕೆಲಸವಿಲ್ಲವಾಗಿ ವ್ಯರ್ಥವಾಗಿ ಕಾಲಹರಣಮಾಡುವ ಪ್ರಸಂಗಬರುತ್ತಿತ್ತು. ಮೈತುಂಬ ಕೂಲಿಕೆಲಸವೂ ಅವರಿಗೆ ಸಿಗುತ್ತಿರಲಿಲ್ಲ. ಮಹಾನವಮಿ ಕಳೆದು ಮಲೆನಾಡಿನಲ್ಲಿ ಬತ್ತದ ಸುಗ್ಗಿ ಪ್ರಾರಂಭವಾದರೆ ಆರೇಳು ಜನಗಳು ಬತ್ತದ ಕೊಯ್ಲಿನ ಕೂಲಿಗಾಗಿ ಮಲೆನಾಡು ಬೀಳುತ್ತಿದ್ದುದೆಷ್ಟೋ ಅಷ್ಟೇ ಕೆಲಸ. ಮಲೆನಾಡಿನಿಂದ ಬಂದ ಮೇಲೆ ಅಲ್ಲಿಂದ ಅಂಟಿಸಿಕೊಂಡು ಬಂದ ಮಲೇರಿಯಾದಿಂದ ಹಾಸಿಗೆ ಹಿಡಿದು ಹಾವೇರಿಗೋ ಬಂಕಾಪುರಕ್ಕೊ ತಿರುಗಿ ತಿರುಗಿ ಮಲೇರಿಯಾಕ್ಕೆ ಪರಿಹಾರ ಕಂಡುಕೊಳ್ಳಬೇಕಾಗುತ್ತಿತ್ತು. ನನ್ನ ವ್ಯವಸಾಯ ಜೀವನದ ಕಾಲದಲ್ಲಿ ನನ್ನ ಗಮನವನ್ನು ಸೆಳದು ಮನಸ್ಸಿಗೆ ನೆಮ್ಮದಿಕೊಡುತ್ತಿದ್ದ ಒಂದೇ ಒಂದು ಹವ್ಯಾಸವೆಂದರೆ ಗಳಗನಾಥರ ಕಾದಂಬರಿಗಳನ್ನು ಓದುವ ಚಟ. ಹೊಲಕ್ಕೆ ಹೋಗಲಿ, ಎಲ್ಲೇ ಹೋಗಲಿ, ಗಳಗನಾಥರ ಕಾದಂಬರಿಯೊಂದು ಹತ್ತಿರ ಇದ್ದೇ ಇರುತ್ತಿತ್ತು. ಇದು ನನ್ನ ಪ್ರೀತಿಯ ಸಂಗಾತಿ. ಬಿಡುವಾದಾಗಲೆಲ್ಲ ಅದನ್ನು ಓದುತ್ತಿದ್ದೆ. ಈಶ್ವರೀ ಸೂತ್ರ, ಛತ್ರಪತಿಶಿವಾಜಿ, ಮಾಧವಕರುಣಾ ವಿಲಾಸ ಇತ್ಯಾದಿ ಎಂಟು ಹತ್ತು ಪುಸ್ತಕಗಳನ್ನು ಎರಡೆರಡು ಸಲ ಓದಿ ಮುಗಿಸಿದೆ. ಈ ಕಾದಂಬರಿಗಳನ್ನು ಓದುತ್ತಿದ್ದಂತೆ ನನ್ನ ಭಾವಕೋಶ ಅನೇಕ ಸನ್ನಿವೇಶಗಳ ಚಿತ್ರಣದಿಂದ ಚಿತ್ರಿತವಾದುದಷ್ಟೇ ಅಲ್ಲ, ಅಲ್ಲಿನ ಘಟನಾವಳಿಗಳನ್ನು ಅವರಿವರ ಮುಂದೆ ವಿವರಿಸುವುದರ ಮೂಲಕ ನನ್ನ ಮಾತಿನ ಕಲೆ ಬೆಳೆಯಿತು. ಅನೇಕ ಸೃಷ್ಟಿ ಚಿತ್ರ, ಜೀವನ ಚಿತ್ರ, ರಾಜಕೀಯತಂತ್ರ ಚಿತ್ರ ಸಾಹಸದ ಚಿತ್ರಗಳು ನನ್ನಲ್ಲಿ ಶಾಶ್ವತ ಪ್ರಭಾವಮುದ್ರೆಯನ್ನೊತ್ತಿದವು. ಇದರಿಂದ ವಕ್ತೃತ್ವ ಕಲೆಯೂ ನನ್ನಲ್ಲಿ ಅಧಿಕಗೊಂಡಿತೆನ್ನಬೇಕು. ಕನ್ನಡದಲ್ಲಿ ಆಗ ಗಳಗನಾಥರ ಕಾದಂಬರಿಗಳು ದೊಡ್ಡ ಹೆಸರು ಮಾಡಿದ ಸಾಹಿತ್ಯ ಪ್ರಕಾರಗಳಾಗಿದ್ದವು. ಸಂಕಟವನ್ನು ಮರೆಸುವ ಸೂಕ್ತ ಮಾಧ್ಯಮಗಳಾಗಿದ್ದವು. ಓದುತ್ತೋದುತ್ತ ನನ್ನನ್ನೇ ನಾನು ಮರೆಯುತ್ತಿದ್ದೆ. ನನ್ನ ಭಾವಕೋಶ

ಈ ಗ್ರಂಥಗಳ ಅಧ್ಯಯನದಿಂದ ಅನೇಕ ರಾಗರಸಗಳ ಆಗರವಾಯಿತೆಂಬುದಂತೂ ಸತ್ಯ.

1937ರಲ್ಲಿ ತೀರಾ ದುಷ್ಕಾಳ ಪ್ರಾಪ್ತವಾಗಿ ಹೋಯಿತು. ಆ ವರ್ಷ ಮಲೆನಾಡಿಗೆ ಬಹುದೂರ ಕುಪ್ಪಕಡ್ಡೆಯ ಕಡೆಗೆ ಹೋದರು. ಅವರು ಹೋಗುವುದಕ್ಕೂ ಪುನಃ ಧಾರಾಕಾರವಾಗಿ ಮಳೆ ಬೀಳುವುದಕ್ಕೂ ಪ್ರಾರಂಭವಾಯಿತು. ಅಲ್ಲಿ ಕೊಯ್ಲಿಗೆ ಬಂದ ಬತ್ತ ಮಳೆಯಿಂದ ನಷ್ಟವಾಗುವ ಪರಿಸ್ಥಿತಿಯೊದಗಿತ್ತು. ಆದರೆ ಮಳೆಯಲ್ಲಿ ಗದ್ದೆಗಿಳಿದು ಬತ್ತ ಕೊಯ್ಯಲುಂಟೇ? ಕೊಯ್ದು ಮೆದೆಹಾಕುವುದೆಲ್ಲಿ? ಹೊರೆಕಟ್ಟುವುದು ಹೇಗೆ? ಈ ಎಲ್ಲ ಸಮಸ್ಯೆಯಲ್ಲಿ ಉಭಯರೂ ಸಿಕ್ಕುಹಾಕಿಕೊಂಡು ಹತ್ತು ಹದಿನೈದು ದಿನ ಊರಿಂದ ಒಯ್ದು ಆಹಾರ ಪರಿಕರಗಳನ್ನೆಲ್ಲ ತಿನ್ನುತ್ತ ಅಡಿಕೆ ಎಲೆ ಜಗಿಯುತ್ತ ಕುಳಿತುಕೊಳ್ಳಬೇಕಾದ ಪ್ರಸಂಗ ಒದಗಿ ಬಂತು. ಬರಗಾಲದಲ್ಲಿ ಅಧಿಕಮಾಸ ಬಂದ ಹಾಗಾಯಿತು. ಇತ್ತ ಮನೆಯಲ್ಲಿ ನಾನೊಬ್ಬನೇ ದೊಡ್ಡವನು. ಉಳಿದಂತೆ ನನ್ನ ತಂಗಿ ತಮ್ಮಂದಿರು. ಮನೆ ಬೀಕೋ ಎನ್ನುತ್ತಿತ್ತು. ಮಳೆ ಧೋ ಎಂದು ಹಿಡಿದುಬಿಟ್ಟಿತ್ತು. ಎತ್ತು ದನಕರುಗಳಿಗೆ ಮೇವು ಬೇಕಲ್ಲವೆ? ಏನು ಮಾಡುವುದು? ಮಳೆಯಲ್ಲಿಯೇ ಕಂಬಳಿ ಕೊಪ್ಪಿಮಾಡಿಕೊಂಡು ಹೊದ್ದು ಜೋಳದ ಹೊಲಕ್ಕೆ ಹೋದೆ.

ಬೆಳೆ ಆ ವರ್ಷವೂ ಕೈಕೊಟ್ಟಿತ್ತು. ತೆನೆಗಳೆಲ್ಲ ಬರಸಿ (ಕಾಳಾಗದೆ ಕಪ್ಪುಬಣ್ಣಕ್ಕೆ ತಿರುಗಿದ ತೆನೆ) ಬಚ್ಚತೆನೆಯಾಗಿ ತುದಿಯಲ್ಲಿ ಹತ್ತಾರು ಕಾಳುಗಟ್ಟಿತ್ತು. ಆರಿ ಒಡೆದುದು (ಸುಳಿ ಸತ್ತು ಮೂರು ನಾಲ್ಕು ಹೊಸತೆನೆ ಒಡೆದ ದಂಟು) ಕಾಡಿಗೆಗಟ್ಟಿದ ದಂಟುಗಳೂ ಅಧಿಕವಾಗಿದ್ದವು. ಬೇಗ ಬೇಗ ಒಂದು ದೊಡ್ಡ ಹೊರೆಯಾಗುವಷ್ಟು ಇಂಥ ಜೋಳದ ಗಂಟುಗಳನ್ನು ಆಯ್ದು ಕೊಯ್ದು ಹೊರೆಗಟ್ಟಿ ಹೊತ್ತುಕೊಂಡು ಹೊರಟೆ. ಕೆಸರಿನಲ್ಲಿ ಇಳಿದ ಕಾಲನ್ನು ಕಿತ್ತು ಹೆಜ್ಜೆಯಿಡುವುದು ದುರ್ಬಲನಿಗೆ ಸಾಧ್ಯವಿಲ್ಲದ್ದು. ದೇವರು ಅದ್ಭುತ ಶಕ್ತಿಕೊಟ್ಟಿದ್ದ ನನಗೆ. ಮೇಲಾಗಿ ವ್ಯವಸಾಯಜೀವನದ ಉತ್ಸಾಹ ತುಂಬಿತ್ತು. ಪ್ರಯಾಸದಿಂದ ಹೊರೆ ಹೊತ್ತು ತಂದೆ. ಮನೆಗೆ ಬರುವಷ್ಟರಲ್ಲಿ ಮೈಜೋರೆಂದು ಬೆವೆತು ಹೋಗಿತ್ತು. ಆ ದಿನವೇ ಪ್ರತಿಜ್ಞೆ ಮಾಡಿದೆ. ನಾನು ಇನ್ನು ಮನೆ ಬಿಡುವುದು ಒಳ್ಳೆಯದೆಂದು. ಏಕೆಂದರೆ ಭೂಮಿ ಕಡಿಮೆ. ಮನೆಯಲ್ಲಿ ಎಲ್ಲರಿಗೂ ಕೆಲಸವಿಲ್ಲ. ಹೀಗಾದರೆ ಮನೆ ಉದ್ಧಾರವಾಗುವುದು ಯಾವ ಕಾಲಕ್ಕೆ? ಈ ಪ್ರಶ್ನೆ ಕಾಡತೊಡಗಿತು. ಏನಾದರೂ ಮಾಡಿ ಮಲೆನಾಡಿಗೆ ಹೋಗಿ ಎಲ್ಲಿಯಾದರೂ ಒಂದು ಶಾಲೆಯನ್ನು ಹುಡುಕಿ ಶಿಕ್ಷಕನಾಗಿ ನನ್ನ ಕೈಲಾದ ಸಹಾಯದಿಂದ ಮನೆಯನ್ನು ಮೇಲಕ್ಕೆತ್ತಬೇಕೆಂದು ಸಂಕಲ್ಪಿಸಿಬಿಟ್ಟೆ. ಮಲೆನಾಡಿಗೆ ಹೋದವರು ಮಳೆ ನಿಂತ ಮೇಲೆ ಕೂಲಿಮಾಡಿಕೊಂಡು ಒಂದು ತಿಂಗಳ ನಂತರ ಎಲ್ಲರೂ ಮನೆಗೆ ಬಂದರು. ಬರುವಾಗ ಎಲ್ಲರೂ ಜೊತೆಗೆ ಮಲೇರಿಯಾ ಕಟ್ಟಿಕೊಂಡೇ ಬಂದು ಮಲಗಿಬಿಟ್ಟರು. ಬರುವಾಗ ನಾಲ್ಕು ನಾಲ್ಕು ಚೀಟಿ ಬತ್ತವನ್ನು ಹೊತ್ತು ತಂದಿದ್ದರು. ಅದರಿಂದ ಕೆಲವು ಕಾಲ ನಿರ್ಬಾಧಿತವಾಗಿ ಜೀವನ ಸಾಗಿತು. ಜೊತೆಗೆ ಮಲೇರಿಯಾದಿಂದ ಬಳಲುವ ಇವರೆಲ್ಲರಿಗೆ ಗುಳಿಗೆ, ಇಂಜೆಕ್ಷನ್ ಇತ್ಯಾದಿಗೆ ವಿಪರೀತ ಖರ್ಚು ವೆಚ್ಚಗಳು ಬಂದವು. ಬೇಗ ಗುಣಮುಖರಾದವರೆಂದರೆ ನಮ್ಮ ದೊಡ್ಡಪ್ಪ, ಅಪ್ಪ ಮತ್ತು ಅವ್ವ. ಉಳಿದವರು ತಿಂಗಳು ಗಟ್ಟಲೆ ನರಳಿದರು. ನಮ್ಮ ಮಾವನಿಗೆ ಬಂಕಾಪುರದಿಂದ ಡಾಕ್ಟರರನ್ನು ಕರೆಸಿ ಇಂಜೆಕ್ಷನ್ ಮಾಡಿಸಿದೆವು. ಅವನ ಸೊಂಟದಲ್ಲಿ ಇಂಜೆಕ್ಷನ್ ಗಡ್ಡೆ ಗಟ್ಟಿ ದಿನೇ ದಿನೇ ಅಧಿಕವಾಗಿ ನೋವು ತಿನ್ನತೊಡಗಿದ. ಅದಕ್ಕೆ ತೊಂಡೆ ಎಲೆಗೆ ಹರಳೆಣ್ಣೆ ಹಚ್ಚಿ ಬೆಂಕಿಯ ಮೇಲೆ ಹಾಕಿ ಬಿಸಿಬಿಸಿ ಎಲೆ ಕಟ್ಟತೊಡಗಿದೆವು. ನಮಗೆ ಅಂದು ಹೀಗೆ ಗಡ್ಡೆ ಕಟ್ಟುವುದಕ್ಕೆ ಗೊತ್ತಿದ್ದ

ಔಷಧೋಪಚಾರವೆಂದರೆ ಅದೊಂದೇ. .ನಮ್ಮ ಮಾವ ಹುಟ್ಟು ದುಡಿಮೆಗಾರ, ಶ್ರಮಜೀವಿ. ಅವನ ದುಡಿಮೆಯಿಂದ ನಮ್ಮ ಮನೆತನಕ್ಕೆ ಬಹುಲಾಭವಿತ್ತು. ಹೆಂಡತಿ ಇಬ್ಬರು ಮಕ್ಕಳನ್ನು ಬಿಟ್ಟು ಸತ್ತು ಹೋದ. ಅವನ ಅಗಲಿಕೆ ಮನೆಯವರನ್ನೆಲ್ಲ ದುಃಖಸಾಗರದಲ್ಲಿ ಮುಳುಗಿಸಿಬಿಟ್ಟಿತು. ಮುಂದೇನೆಂಬ ಚಿಂತೆ ನನ್ನನ್ನು ಬಾಧಿಸುತ್ತಿತ್ತು.

ಈ ಸಮಯದಲ್ಲಿ ನಮ್ಮ ದೊಡ್ಡಪ್ಪ ಅವರಿವರ ಮುಂದೆ ಆಡಿದ ಕೆಲವು ಮಾತುಗಳು ನನಗೆ ಸ್ವಲ್ಪ ಸಮಾಧಾನ ತಂದಿದ್ದವು. ಹಂದಿಗನೂರು ದೇಸಾಯಿರು ಯಾರದೋ ಸಂಗಡ "ಹರವಿ ಕಲ್ಲಪ್ಪಾನಿಗೆ ಬರಹೇಳು. ನಮ್ಮಿಂದ ಅವನಿಗೆ ಅನ್ಯಾಯವಾಗಿದೆ. ಅವನು ಬಂದರೆ ಅವನು ಯಾವ ಹೊಲ ಕೇಳುವನೋ ಅದರಲ್ಲಿ ಎಂಟು ಕೂರಿಗೆ (ಒಂದು ಕೂರಿಗೆ ಎಂದರೆ ನಾಲ್ಕು ಎಕರೆ) ಹೊಲ ಕೊಡುತ್ತೇನೆ. ಎತ್ತೂ ಕೊಡಿಸಿಕೊಡುತ್ತೇನೆ. ಮಕ್ಕಳು ದುಡಿಯಲು ಬಂದಿರುವರೆಂದು ಕೇಳಿದ್ದೇನೆ" ಇತ್ಯಾದಿ ವಿಷಯ ಕಿವಿಗೆ ತಲುಪಿದಾಗ ನಮ್ಮ ದೊಡ್ಡಪ್ಪನಿಗೆ ನೀನು ಹೋಗಿ ದೇಸಾಯಿಯರ ಹೊಲ ಹಿಡಿದುಕೊಂಡು ಬಂದುಬಿಡು. ಎತ್ತು ಕೊಡಿಸುತ್ತಾರಂತೆ ನಾನು ನಮ್ಮ ಹೊಲ ನಾಲ್ಕು ಕೂರಿಗೆ. ಅವರದು ಎಂಟು ಕೂರಿಗೆ. ಒಟ್ಟು ಹನ್ನೆರಡು ಕೂರಿಗೆ ಹೊಲವನ್ನು ಹೊಡೆದು ನಮ್ಮ ಮನೆತನದ ಮೂಲ ಕಸಬಾದ ವ್ಯವಸಾಯವನ್ನು ಅಭಿವೃದ್ಧಿ ಪಡಿಸುತ್ತೇನೆ. ಇಲ್ಲವಾದರೆ ಮುಂದಿನ ವರ್ಷ ನಾನು ಎಲ್ಲಿಯಾದರೂ ಹೋಗಿ ಒಂದು ಶಾಲೆ ಹಾಕಿ ಹಿಡಿದು ಕೈಲಾದ ದುಡಿಮೆ ಮಾಡಿ ಮನೆತನದ ಅಭಿವೃದ್ಧಿಗೆ ಹೆಣಗುತ್ತೇನೆ ಎಂದು ಹೇಳಿಬಿಟ್ಟೆ. ಇದರಲ್ಲಿ ಮೊದಲ ಪ್ರಾಧಾನ್ಯತೆ ಹೊಲ ಹಿಡಿದುಕೊಂಡು ಬರುವುದಕ್ಕೆ. ಅದು ಸಾಧ್ಯವಿಲ್ಲವೆಂದಾಗ ಮಾಸ್ತರ ಕೆಲಸ ಹುಡುಕಿಕೊಂಡು ಮಲೆನಾಡು ಬೀಳುವುದು.

ನಮ್ಮ ದೊಡ್ಡಪ್ಪನಿಗೆ ದೇಸಾಯಿಯರ ಹತ್ತಿರ ಹೋಗಿ ಬರಲು ಒತ್ತಾಯಿಸತೊಡಗಿದೆ. "ಹಾಗಾದರೆ ಹೋಗಿ ಹೊಲ ಹಿಡಿದುಕೊಂಡು ಬಂದು ಬಿಡುತ್ತೇನೆ" ಎಂದು ಸುಳ್ಳು ಹೇಳಿ ಹೋಗುವವನಂತೆ ನಟಿಸಿ ನಾಲ್ಕಾರು ರೊಟ್ಟಿ ಕಟ್ಟಿಸಿಕೊಂಡು ಹೆಗಲಿಗೇರಿಸಿ ಕಂಬಳಿ ಹೊತ್ತು ಮನೆಬಿಟ್ಟು ನಡೆದ. ಆದರೆ ಅವನು ಈ ವ್ಯವಹಾರದಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಲಿಲ್ಲ. ಹಾವೇರಿಗೆ ಹೋಗಿ ಅಲ್ಲಿ ಒಂದೆರಡು ದಿನ ಯಾವುದೋ ದಲ್ಲಾಲರ ಅಂಗಡಿಯಲ್ಲಿ ಉಳಿದು ರೊಟ್ಟಿ ಬುತ್ತಿಯನ್ನೆಲ್ಲ ಮುಗಿಸಿ, ಊರಿಗೆ ಬಂದು "ದೇಸಾಯರು ಹೊಲ ಕೊಡಲಿಲ್ಲ. ಅವರು ಹೇಳಿ ಕಳಿಸಿದ್ದೆಲ್ಲ ಸುಳ್ಳು" ಎಂದು ತಾನೊಂದು ದೊಡ್ಡಸುಳ್ಳು ಹೇಳಿಬಿಟ್ಟ. ಆಗ ನನಗಾದ ನಿರಾಸೆ ಹೇಳತೀರದು.

ದೇಸಾಯಿಯರ ಸಹವಾಸವನ್ನು ಇನ್ನೊಮ್ಮೆ ಮಾಡಲೇಕೂಡದು ಎಂಬ ನಿರ್ಧಾರ ನಮ್ಮ ದೊಡ್ಡಪ್ಪನಲ್ಲಿ ಗಟ್ಟಿಗೊಂಡು ಹೋಗಿತ್ತು. ಅಷ್ಟೊಂದು ನೋವನ್ನು ದೇಸಾಯಿ ಹತ್ತಿಪ್ಪತ್ತು ವರ್ಷ ನಿಷ್ಠೆಯಿಂದ ನಡೆದುಕೊಂಡ ನನಗೆ ಕೊಟ್ಟನಲ್ಲಾ! ನಮ್ಮ ತಂದೆ ತಾಯಿಯರು ಸಂಪಾದಿಸಿ ನಮ್ಮ ಕೈಗಿತ್ತು ಹೋದ ಮನೆಯ ಜಮೀನಿಗೆ ಮುಳುಗು ನೀರು ತಂದಿದ್ದನಲ್ಲಾ! ಇವರ ವಾಡೆಯಲ್ಲಿ ನಡೆಯುತ್ತಿದ್ದ ಎಲ್ಲ ಸಮಾರಂಭಗಳಲ್ಲಿ ಆಳಾಗಿ ನಿಂತು ದುಡಿದು ಸಮಾರಂಭವನ್ನು ಯಶಸ್ವಿಗೊಳಿಸಿ ಮನೆಗೆ ಹಿಂದಿರುಗುತ್ತಿದ್ದೆವಲ್ಲ! ನಾವು ಎಂದಾದರೂ ಲಾವಣಿ ನಿಲ್ಲಿಸಿದೆವೆ? ಕಾಡಿದೆವೆ? ಬೇಡಿದೆವೆ? ಮಕ್ಕಳು ಮರಿ ಸಹಿತ ಚಳಿಮಳೆಗಳೆನ್ನದೆ ದುಡಿದು ಸತ್ತು ಸುಣ್ಣವಾದರೂ, ಕೈಕೊಟ್ಟ ಪ್ರಕೃತಿ ವಿಕೋಪದಿಂದ ನಷ್ಟ ಅನುಭವಿಸಿ ಮಕ್ಕಳು ಮರಿ ಅನ್ನಾನ್ನ ಗತಿಯಾದುದನ್ನು ನೋಡದೆ

ಕೇವಲ 300 ರೂಪಾಯಿ ಬಾಕಿಗಾಗಿ ದೇಸಾಯಿ ನಮ್ಮ ಹೊಲ ಮನೆಗಳನ್ನು ಲಿಲಾವಿಗೆ ಹಚ್ಚಬಹುದೇ? ಮುಂದೆ ಇವನ ಹೊಲಮಾಡಿ ದುಡಿದು ಅಷ್ಟು ಬಾಕಿಯನ್ನು ತೀರಿಸಲಾರದವರಾಗಿದ್ದೆವೆ? ಅಷ್ಟು ನಂಬಿಕೆ ನಮ್ಮಲ್ಲಿ ಇವರಿಗೆ ಹುಟ್ಟಲಿಲ್ಲವೆ? ಇವರು ಸಾಹುಕಾರರು, ತಮಗೆ ನಷ್ಟವಾದರೆ ಎಲ್ಲಿಯಾದರೂ ಬಾಯಿಹಾಕಿ ಸಾವಿರಾರು ರೂಪಾಯಿ ತರಬಲ್ಲರು. ತಂದು ಅಂದಂದಿನ ತಮ್ಮ ಕಷ್ಟವನ್ನು ಸರಿಪಡಿಸಿಕೊಳ್ಳಲು ಶಕ್ಯ. ಬಡವರಾದ ನಮಗೆ ನಾಲ್ಕಾಣೆ ಸಾಲ ಹುಟ್ಟುವುದು ದುರ್ಲಭವಾಗಿರುವಾಗ ನಮ್ಮಂಥವರ ಜೀವನದೊಡನೆ ಇವರು ಚಲ್ಲಾಟವಾಡುವುದೆ? ಛೆ! ತೆಗೆ. ಇವರ ಸಹವಾಸ ಬೇಡ ಕೂಲಿಯನ್ನಾದರೂ ಮಾಡಿ ಜೀವಿಸೇವು. ಇಂಥ ನಿಷ್ಕರುಣಿಗಳ ಸಹವಾಸ ಇನ್ನೊಮ್ಮೆ ಬೇಡ. ಹೀಗೆಂಬ ದೊಡ್ಡಪ್ಪನ ಅಚಲನಿರ್ಧಾರವನ್ನು ಸಡಿಲಿಸಲು ನನ್ನಿಂದ ಶಕ್ಯವಾಗಲಿಲ್ಲವಾದರೂ ಜಮೀನನ್ನು ಹಿಡಿದುಕೊಂಡು ಬಾ. ನಾನು ಮುಂದೆ ಅದರ ಯೋಗಕ್ಷೇಮ ನೋಡಿಕೊಳ್ಳುತ್ತೇನೆ. ಎಂದು ಹೇಳಿದ್ದರ ಮೇರೆಗೆ ನನ್ನ ಮನಸ್ಸಿಗೆ ತೃಪ್ತಿತರಲು ಈ ಸುಳ್ಳು ಆಟ ಆಡಿ ಬಿಟ್ಟ.

ನಮ್ಮ ಪಿತೃಗಳು ಬಡವರು ನಿಜ. ಆದರೆ ಅಚಲಧೈರ್ಯದವರು. ಅನ್ಯಾಯವಾದರೆ ಸಹಿಸುತ್ತಿರಲಿಲ್ಲ. ಅಧರ್ಮ ವ್ಯವಹಾರಗಳಿಂದ ಬಹುದೂರ. ಕಳವು ಸುಳುವುಗಳು ಇವರ ಹತ್ತಿರವೂ ಸುಳಿಯಲಿಲ್ಲ. ಅಪ್ಪಿ ತಪ್ಪಿ ನಮ್ಮಿಂದ ಅಂಥ ಅಪರಾಧಗಳೇನಾದರೂ ಆದರೆ ಕಿಡಿಕಿಡಿಯಾಗಿ ಬಿಡುತ್ತಿದ್ದರು. ಇಂದಿಗೂ ಮರೆಯದ ಒಂದು ಪ್ರಸಂಗವನ್ನು ಇಲ್ಲಿಯೇ ತಿಳಿಸಿ ಬಿಡುತ್ತೇನೆ.

### ಪುಂಡಾಟಿಕೆಯಲ್ಲಿ ನೀರಲಗಿಯ ಒಡ್ಡಿನ ಹುಲ್ಲು ಕೊಯ್ದುತಂದೆ

ನೀರಲಗಿ ನಮ್ಮೂರಿಂದ 3-4 ಮೈಲು ದೂರದ ಒಂದು ಸಮೃದ್ಧ ಊರು. ಅಪರೂಪಕ್ಕೆ ಆ ಊರಿಗೊಂದು ಕೆರೆ ಇದೆ. ಆ ಊರ ಜಮೀನು ಮಡಿಕಟ್ಟಿನದು (ಕೆಂಪು ಮಣ್ಣು ಕರಿಮಣ್ಣುಗಳ ಮಿಶ್ರಣದಿಂದಾದ ಭೂಭಾಗ. ಇದು ಬೆಳೆಯಲು ಬಹು ಶ್ರೇಷ್ಠ ಭೂಮಿ) ಒಂದು ದಿನ ಒಂದು ಸಣ್ಣ ತಪ್ಪಿಗಾಗಿ ನಮ್ಮೂರ ದನ ಕಾಯುವ ಹುಡುಗನನ್ನು ಹೊಡೆದು ತಲೆ ಮೇಲಿನ ರುಮಾಲು ಕಿತ್ತುಕೊಂಡು ಬಿಟ್ಟನಂತೆ (ತಲೆ ಮೇಲಿನ ರುಮಾಲು ಕಿತ್ತುಕೊಳ್ಳುವುದು ರುಮಾಲು ಕಳಕೊಂಡವನ ದೃಷ್ಟಿಯಿಂದ ಅವಮಾನಕರ. ಕಳಕೊಂಡವನು ಪುನಃ ಅದನ್ನು ಹೋಗಿ ಕ್ಷಮೆ ಬೇಡಿಯೋ, ತಪ್ಪೊಪ್ಪಿಕೊಂಡೋ ರುಮಾಲು ತರಬೇಕು. ಇಲ್ಲದಿದ್ದರೆ ಅವಮಾನ. ಅದು ಊರಿಗೂ ಕೂಡ ಅವಮಾನ.) ರುಮಾಲನ್ನು ಎಷ್ಟು ದಿನಗಳಾದರೂ ಕೊಡಲಿಲ್ಲ. ಆಗ ನಮ್ಮೂರ ಹುಡುಗರಲ್ಲೆಲ್ಲ ಮುಖಂಡನಾದ ಗೂಳಪ್ಪನ ಮಗ ಫಕ್ಕೀರಪ್ಪನ 'ರುಮಾಲನ್ನು ಅವನೇ ಬಂದು ಒಪ್ಪಿಸಿ ಹೋಗುವಂತೆ ಮಾಡದಿದ್ದರೆ ನಾನು ಗುಳಪ್ಪನ ಉತ್ತರಕ್ಕೇ ಹುಟ್ಟಿದವನಲ್ಲ' ಎಂದು ಪ್ರತಿಜ್ಞೆ ಮಾಡಿಬಿಟ್ಟ. ಸರಿ ಮೊದಲ ದಾಳಿ ಎಂದರೆ, ಆ ಜಮೀನುದಾರನ ಹೊಲದ ಒಡ್ಡಿನಲ್ಲಿ ಎದೆಯುದ್ದ ಮಾರವಾಳಿ, ಮಾನಿಬಾರಿ, ನಟ್ಟು ಮೊದಲಾದ ಹುಲ್ಲು ಬೆಳೆದು ನಿಂತಿತ್ತು. ಇಪ್ಪತ್ತು ಇಪ್ಪತ್ತೈದು ಹುಡುಗರು ಈ ದಿನ ಹೋಗಿ ಆ ಹುಲ್ಲನ್ನೆಲ್ಲ ಕೊಯ್ದುಕೊಂಡು ಬರತಕ್ಕದ್ದೆಂದು ಕಟ್ಟಪ್ಪಣೆ ಮಾಡಿಬಿಟ್ಟ. ಆ ಗುಂಪಿನಲ್ಲಿ ನಾನೂ ಒಬ್ಬ. ಸರಿರಾತ್ರಿ ಮುಳ್ಳುಕಲ್ಲುಗಳ ಪರಿವೆಯಿಲ್ಲದೆ ನಮ್ಮ ಈ ದೊಡ್ಡ ತಂಡ ಕೆಸರು ತುಳಿಯುತ್ತ ಒಡ್ಡಿನ ಸಮೀಪಕ್ಕೆ ಹೋದೆವು. ಸ್ವಲ್ಪ ಸ್ವಲ್ಪ ಬೆಳದಿಂಗಳು ಇತ್ತು . ಆ ಬೆಳಕಿನಲ್ಲಿ ಸೊಗಸಾಗಿ ಬೆಳೆದ ಹುಲ್ಲು ನಮ್ಮ ಕಣ್ಣಿಗೂ ಹಬ್ಬವಾಗಿ

ಕಂಡಿತು. ಎಲ್ಲರೂ ತಮ್ಮ ತಮ್ಮ ಹೊರುವ ಸಾಮರ್ಥ್ಯಕ್ಕನುಗುಣವಾಗಿ ಹುಲ್ಲುಕೊಯ್ದು ಹೊರೆಕಟ್ಟಿದೆವು. ಒಬ್ಬರಿಗೊಬ್ಬರು ಹೊರಿಸಿಕೊಂಡು ಸರಿರಾತ್ರಿಗೆ ಜೀಕೊರೆಯುತ್ತ ಹೊರೆ ತಂದದ್ದಾಯಿತು. ಮನೆಯವರೆಲ್ಲ ಮಲಗಿದ್ದ ಕಾರಣ ಈಗ ಗದ್ದಲ ಮಾಡುವದು ಹಿತವಲ್ಲವೆಂದು ಹೊರಗಿನ ಕಟ್ಟೆಯ ಮೇಲೆ ಹೊರೆ ಇಳುಕಿ ಹೋಗಿ ಮಲಗಿಕೊಂಡೆವು.

ಆ ರಾತ್ರಿ ಅಷ್ಟುದೂರ ಹೋಗಿ ಕೆಸರು ಮುಳ್ಳುಮುಸಿ ತುಳಿಯುತ್ತ ಹಾವು ಚೇಳುಗಳ ಪರಿವೆಯಿಲ್ಲದೆ ಹೇಗೆ ಹೋದೆವು! ಹುಲ್ಲು ಕೊಯ್ದೆವು, ಹೇಗೆ ತಂದು ಮನೆಗೆ ಹಾಕಿದೆವೆಂಬುದನ್ನು ನೆನೆಸಿಕೊಂಡರೆ ಈಗಲೂ ಹೆದರಿಕೆಯಾಗುತ್ತದೆ. ಮರುದಿನ ಬೆಳಿಗ್ಗೆ ನಮ್ಮ ತಂದೆ, ದೊಡ್ಡಪ್ಪ ಇಬ್ಬರೂ ನನಗೆ ಛೀಮಾರಿ ಹಾಕಿ, "ನೀನು ಓದಿ ಶಾಣ್ಯಾ ಆಗಿದ್ದು ಇಂಥ ಉದ್ಯೋಗ ಮಾಡಲಿಕ್ಕೇನು?" ಎಂದಾಗ ನಾನು ಭೂಮಿಗೆ ಇಳಿದು ಹೋಗಿ ಎರಡು ದಿನ ನಾಚಿ ಊರಲ್ಲಿ ತಿರುಗಾಡಿದ್ದಿಲ್ಲವೆಂಬುದು ಇಂದಿಗೂ ಸ್ಮೃತಿಪಥದಲ್ಲಿದೆ.

ಹೀಗೆ ಬಡವರಾದರೂ ನಮ್ಮ ಹಿರಿಯರು ನ್ಯಾಯನಿಷ್ಠುರಾಗಿದ್ದುದು ಇಂದಿಗೂ ಅವರ ವಿಷಯದಲ್ಲಿ ನನಗೆ ಅಪಾರ ಗೌರವವಿದೆ. ಬಡತನ ಕಳವಿಗೆ ಆಹ್ವಾನಕೊಡುತ್ತದೆ. ಆದರೆ ನಮ್ಮವರು ಬಡವರಾದರೂ ಅನ್ಯಾಯಾರ್ಜಿತವಾದ ಸ್ವತ್ತಿನ ಬಳಕೆಯಿಂದ ಬಹಳ ದೂರ ಉಳಿದವರೆಂದು ತಿಳಿಸಲು ಈ ಪ್ರಸಂಗವನ್ನು ನೆನೆಸಿಕೊಂಡು ಹೇಳಬೇಕಾಯಿತು. ನಮ್ಮ ದೊಡ್ಡಪ್ಪ ಹೊಲಹಿಡಿದುಕೊಂಡು ಬರದಿರುವಾಗ ನನ್ನ ವ್ಯವಸಾಯ ಮಾಡಬೇಕೆಂಬ ತೀವ್ರಾಸಕ್ತಿಗೆ ಏಟು ಬಿದ್ದು ನಾನು ಮುಂದಿನ ನನ್ನ ಮಾರ್ಗ ಕಂಡುಕೊಳ್ಳಬೇಕಾದ ಪ್ರಸಂಗ ಬಂತು.

# ಅಧ್ಯಾಯ - 4

## ಶಾಲಾ ಮಾಸ್ತರನ ಜೀವನ

ನಮ್ಮೂರಿನಲ್ಲಿ ಪ್ರಥಮತಃ ಮುಲ್ಕೀ ಪರೀಕ್ಷೆ ಪಾಸಾಗಿದ್ದ ರವಳಪ್ಪ ಹಾವೇರಿ ತಾಲೂಕು, ಕುಳೇನೂರಿನಲ್ಲಿ ಒಂದು ಗಾವಠಿ ಶಾಲೆ (ಗ್ರ್ಯಾಂಟ್ ಇನ್ ಏಡ್ ಸ್ಕೂಲ್) ಹಾಕಿದ್ದ. ಬಹು ಸಾತ್ವಿಕ ಎಂದರೆ ಸಾತ್ವಿಕ. ಬಡವ. ಬಡವನಾದರೂ ಉದಾರಿ. ಆ ಊರಿನಲ್ಲಿಯೇ ಹೆಂಡತಿ ಮತ್ತು ಚಿಕ್ಕಪ್ಪನೊಡನೆ ವಾಸವಾಗಿದ್ದ. ಮೊಟ್ಟ ಮೊದಲು ಅವನ ಹತ್ತಿರ ಹೋಗಿ ಯಾವುದಾದರೂ ಊರಲ್ಲಿ ನನಗೊಂದು ಗಾವಠಿ ಶಾಲೆ ಹೊಂದಿಸಿ ಕೊಡಿ ಎಂದು ಹೇಳಿದೆ. ಅವನು ಬಸಾಪುರದ ಯಜಮಾನರಿಗೊಂದು ಪತ್ರ ಕೊಟ್ಟು ಆ ಊರಿಗೆ ಈಗಲೇ ಹೋಗಿ ವಿಚಾರಿಸಿಕೊಂಡು ಬಾ ಎಂದು ಕಳಿಸಿದ, ಹೋದೆ. ಆ ಊರಿನ ಮುಖ್ಯಸ್ಥ ಊರಲ್ಲಿದ್ದಿಲ್ಲ. ನನಗೆ ಯಾರ ಪರಿಚಯವೂ ಇರಲಿಲ್ಲ. ಊರ ಬಸವಣ್ಣ ದೇವರ ಗುಡಿಯಲ್ಲಿ ಕುಳಿತೆ. ಊರಿನವರೆಲ್ಲ ನನ್ನನ್ನು ಮಿಕಿಮಿಕಿ ನೋಡುವವರೇ. ಮೈಕಟ್ಟಿನಿಂದ ಬಹುಬಂಧುರವೆನಿಸಿದ್ದ ನನ್ನನ್ನು ಯಾವುದೋ ಊರಿನ ಕುಸ್ತಿ ಪಟು ಎಂದುಕೊಂಡದ್ದೂ ಉಂಟಂತೆ. ಇದು ನನಗೆ ಆಮೇಲೆ ರವಳಪ್ಪ ಮಾಸ್ತರರಿಂದ ತಿಳಿಯಿತು.

ಸಾಯಂಕಾಲದವರೆಗೆ ಊರ ಯಜಮಾನರ ದಾರಿ ಕಾಯ್ದೆ . ಬರಲೇ ಇಲ್ಲ. ನಾನು ಗುಡಿ ಬಿಟ್ಟು ಕದಲಲೇ ಇಲ್ಲ. ಹೊಟ್ಟೆ ಹಸಿವು ಮಿತಿಮೀರಿತು. ಊರ ಹೊರಗೆ ತಿರುಗಾಡುತ್ತ ಹೋದೆ. ಅಲ್ಲಿ ಒಂದು ಗದ್ದೆಯಲ್ಲಿ ಸವತಿಬಳ್ಳಿ ಹಾಕಿದ್ದರು. ಹೊಲ ಕಾಯವವನು ಗುಡಿಸಲಿನಲ್ಲಿ ಕುಳಿತಿದ್ದ. ಸುಮಾರು 40-45ರ ಪ್ರಾಯವಾಗಿರಬಹುದು ಆ ವ್ಯಕ್ತಿಗೆ. ಗದ್ದೆಯ ಮೇಡಿನಲ್ಲಿ ತಿರುಗುತ್ತ ಬಂದ ನನ್ನನ್ನು ಕಂಡು "ಯಾರಾಪಾ?" ಎಂದ. ನಾನು "ನಾವು ಹರವಿಯವರು" ಎಂದೆ. "ಏನು ಬಂದಿದ್ರಿ, ಬರ್‍ರಿ" ಎಂದೊಡನೆ ನನಗೆ ಸ್ವಲ್ಪ ನೆಮ್ಮದಿಯಾಗಿ ಅವನ ಗುಡಿಸಲಿಗೆ ಹೋದೆ. ಅವನು ಕುಳ್ಳಿರಿಸಿಕೊಂಡು ನನ್ನ ಪೂರ್ವೋತ್ತರಗಳನ್ನೆಲ್ಲ ಕೇಳಿದ. ನಾನು ಎಲ್ಲವನ್ನು ಹೇಳಿ ನಿಮ್ಮೂರ್‍ರಲ್ಲಿ ಶಾಲೆಯಿಲ್ಲವಂತೆ, ಗಾವಠಿ ಶಾಲೆ ಹಾಕಲು ಬಂದಿದ್ದೇನೆಂದೂ, ಕುಳೇನೂರು ರವಳಪ್ಪ ಮಾಸ್ತರರು ಚೀಟಿ ಕೊಟ್ಟರು ಎಂದೂ ಹೇಳಿದೆ. "ರವಳಪ್ಪ ಮಾಸ್ತರರನ್ನು ನಾನೂ ನೋಡಿದ್ದೇನೆ. ಬಹಳ ಸಂಭಾವಿತರು" ಹಾಗೆ ಹೀಗೆ ಎಂದು ಅವರ ವರ್ಣನೆ ಮಾಡಿ ತಮ್ಮೂರ್‍ರ ಶಾಲಾ ಮಾಸ್ತರರ ಕತೆ ಬಿಚ್ಚಿದ.

'ಅಯ್ಯೋ, ನಮ್ಮೂರ್‍ರ ಸಾಲೆ ಕತೆ ಏನು ಹೇಳಲೋ ತಮ್ಮಾ! ಅವನ್ಯಾವನೋ ಹಾವೇರಿ ಕಡೆ ಹುಡುಗ ಬಂದು ಸಾಲಿಹಾಕಿದ್ದ. ಚನ್ನಾಗೂ ಕಲಿಸ್ತಿದ್ದ ಅನ್ನು. ಮೊದಲು ಒಂದರೆಡು ವರ್ಷ ಚನ್ನಾಗಿ ಕಲಿಸಿದಾ. ನೋಡೋದಕ್ಕೆ ಚನ್ನಾಗಿದ್ದ. ಇಸ್ತ್ರಿ ಅರಿವೆ ತೊಡತಿದ್ದ. ನಮ್ಮೂರ್‍ರ ಈರವ್ವ ಅವನ ಮ್ಯಾಲ ಕಣ್ಣು ಹಾಕಿಬಿಟ್ಲು. ನಾವೆಲ್ಲ ಅವನಿಗೆ ವಾರದ ಮನೆ ಊಟ ಹಾಕಿ ಚನ್ನಾಗೇ ಇಟ್ಕಂಡಿದ್ವಿ. ಅವನಾದ್ರೂ ಹುಷಾರ್‍ಯಾಗಿ ಇರಬೇಕೋ ಇಲ್ವೊ. ಈರವ್ವನ ಬಲೆಗೆ ಬಿದ್ದು, ಅಯೋಗ್ಯ ಅವಳ್ನ ಓಡಿಸಿಕೊಂಡು ಹೋಗಿಬಿಟ್ಟ. ಈರವ್ವನ ಗಂಡ ಬಸ್ಯಾ ಪರದೇಶಿ ಆಗಿಬಿಟ್ಟ. ಈಗ ಅವರಿಬ್ಬರೂ ಹತ್ತಿ ಮತ್ತೂರು ಕಡೆಯ ಒಂದು ಹಳ್ಳಿಯಲ್ಲಿ ಕೂಲಿಕುಂಬಳಿ ಮಾಡಿ ಕೊಂಡಿದ್ದಾರಂತೆ ಅಯೋಗ್ಯರು. ಯಾರಿಗೆ ಸುಖ ಹೇಳ್ರಿ. ಈ ಮಾಸ್ತರರು ಇಂಥ ಕೆಲಸ ಮಾಡಿ ಬಿಡ್ತಾರಾ? ಅವತ್ತಿಂದ ಊರ ಸಾಲೆ ಹಾಳುಬಿತ್ತು. ಬೇರೆ ಯಾರ್‍ನಾದರೂ

ಮಾಸ್ತರನ್ನ ಕರೆಸಿ ಸಾಲಿ ಸುರು ಮಾಡ್ಯಾಕ ನಮ್ಮ ಊರ ಹಿರಿಯ ಚೆನ್ನಬಸಪ್ಪ ಹಿಂದೆ ಮುಂದ ನೋಡ್ತಾನ. ಅವ ಊರಾಗ ಇಲ್ಲ. ಕಬ್ಬೂರಿಗೆ ಹೋಗ್ಯಾನ. ಬಂದ ಮ್ಯಾಲ ಅವನ್ನ ಕಾಣ್ರಿ. ರವಳಪ್ಪ ಮಾಸ್ತರರ ಚೀಟಿಗೆ ಬೆಲೆಕೊಟ್ಟು ಸಾಲಿ ಸುರುವು ಮಾಡ್ಸಬಹುದು. ಸರಿ ನೀನು ಯಾವಾಗ ಬಂದೆ ಊಟಾಗೀಟಾ ಎಲ್ಲ್ಯಾರ ಆಗೈತೋ ಇಲ್ವೋ' ಎಂದ. ಹಸಿದು ಬೆನ್ನಿಗೆ ಹತ್ತಿದ ಹೊಟ್ಟೆಯವನಾಗಿದ್ದ ನಾನು ಆ ಹೊತ್ತಿನಲ್ಲಿ ಇನ್ನೇನು ಹೇಳಲು ಸಾಧ್ಯ? ನನಗೆ ಈ ಊರಲ್ಲಿ ಯಾರ ಪರಿಚಯವೂ ಇಲ್ಲ. ಇಷ್ಟೊತ್ತು ಬಸವಣ್ಣದೇವರ ಗುಡಿಯಲ್ಲಿ ಕುಳಿತಿದ್ದೆ...... ಹಾಗೆ ಹೀಗೆ ಅಡ್ಡ ಅಡ್ಡವಾಗಿಯೇ ಮಾತಾಡಿದೆ. ಅವನು ಅರ್ಥಮಾಡಿಕೊಂಡು ಮನೆಯಿಂದ ರೊಟ್ಟಿ ತರ್ಸಿ ಕೊಡತೇನಿ ತಿನ್ನುವಂತೆ. ಅಲ್ಲಿ ತನಕ ಬೇಕಾದರೆ ಸವತಿಕಾಯಿ ತಿನ್ನು ಎಂದು ಗುಡಿಸಲಿನಲ್ಲಿ ಕಿತ್ತಿಟ್ಟಿದ್ದ ಸವತೇಕಾಯಿ ತೋರಿಸಿ ಗುಡಿಸಲು ಬಿಟ್ಟು ಹೊರಗೆ ಹೋದ. ಮುಳ್ಳು ಸವತೆಯ ಎಳೆಕಾಯಿಯೊಂದನ್ನು ಆರಿಸಿಕೊಂಡು ತಿನ್ನತೊಡಗಿದೆ. ಹಸಿದ ಹೊಟ್ಟೆಗೆ ಆಪ್ಯಾಯನವಾಗತೊಡಗಿತು. ಸುಮಾರು ಅರ್ಧಗಂಟೆಯೊಳಗೆ ಮನೆಯಿಂದ ರೊಟ್ಟಿ ಕಾರದ ಚಟ್ನಿ ಸವತೇ ಕಾಯಿ ಪಲ್ಯಬಂತು. ಗಂಟನ್ನೇ ಮುಂದಿರಿಸಿ ರೊಟ್ಟಿ ತಿನ್ನು ಎಂದ.

ನಾನು ಆಗ ಎಷ್ಟು ರೊಟ್ಟಿ ತಿಂದೆನೆಂಬುದು ಮರೆತಿದೆ. ಅಂತು ಕಂಠಪೂರ್ತಿ ರೊಟ್ಟಿ ತಿಂದೆ. ಸಾಯಂಕಾಲದವರೆಗೆ ಅವನ ಗುಡಿಸಲಲ್ಲೇ ಇದ್ದೆ. ಸಾಯಂಕಾಲ ಊರೊಳಗೆ ಬಂದು ಪುನಃ ಬಸವಣ್ಣದೇವರ ಗುಡಿಯ ಕಟ್ಟೆಯ ಮೇಲೆ ಬಂದು ಕುಳಿತೆ. ಅವನು ಮನೆಗೆ ಹೋಗಿ ಒಂದು ಚಾಪೆ ಕಳಿಸಿಕೊಟ್ಟ. ಆ ಚಾಪೆ ಹಾಸಿಕೊಂಡು ದುಪ್ಪಟ್ಟಿ ಹೊದ್ದುಕೊಂಡು ಮಲಗಿಕೊಂಡೆ. ನನ್ನನ್ನು ನೀ ಯಾವೂರ ದಾಸಯ್ಯ ಎಂದು ಇವನ ಹೊರತು ಯಾರೂ ಕೇಳಲೇ ಇಲ್ಲ. ಆ ದಿನ ರಾತ್ರಿ ಸೊಳ್ಳೆಗಳ ಸ್ನೇಹದಿಂದ ರಾತ್ರಿ ಕಳೆದೆ. ಆದರೆ ಮಧ್ಯರಾತ್ರಿಯ ಹೊತ್ತಿಗೆ ಹೊಟ್ಟೆನೋವು ಕಾಣಿಸಿಕೊಂಡು ಎರಡು ಮೂರು ಸಲ ಭೇದಿಯಾಯಿತು. ಅಷ್ಟುಹೊತ್ತಿನಲ್ಲಿ ನೀರೆಲ್ಲಿ? ವಿಸರ್ಜನೆಗೆ ಹೋಗುವುದೆಲ್ಲಿ? ಧೈರ್ಯತಂದುಕೊಂಡೆ. ಊರನ್ನು ಹೊಗುವಾಗ ಊರ ಹೊರಭಾಗದಲ್ಲಿದ್ದ ನೀರಿನ ಹೊಂಡ ನೋಡಿದ್ದೆ. ರಾತ್ರಿ ಎರಡು ಮೂರು ಸಲ ಎದ್ದೆದ್ದು ಹೊಂಡದ ಬಳಿ ಹೋಗಿ ಬಂದಿದ್ದೆ. ರಾತ್ರಿಯೆಲ್ಲ ನಿದ್ರೆ ಬರಲಿಲ್ಲ. ಥೂ ಹಾಳು ಜೀವನಾ! ಈ ಗಾವಠಿ ಶಾಲೆನೂ ಬೇಡ ಏನೂ ಬೇಡ. ಬೆಳಗಾದ ಮೇಲೆ ಊರಿಗೆ ಹೋಗಿಬಿಡೋಣ ಎನ್ನಿಸಿತು. ಭೇದಿ ಮಾತ್ರ ನಿಲ್ಲಲಿಲ್ಲ. ನಮಗೆ ಆ ಕಾಲದಲ್ಲಿ ಇಂಥ ಏನಾದರೂ ಶಾರೀರಿಕ ಅಸ್ವಸ್ಥತೆಯಾದರೆ ಅದು ತನ್ನಷ್ಟಕ್ಕೆ ತಾನೇ ಹೋಗಬೇಕು. ಚಿಕಿತ್ಸೆ ಗಿಕಿತ್ಸೆ ನಮಗೆ ಗೊತ್ತಿದ್ದುದನ್ನು ನಾವೇ ಮಾಡಿಕೊಳ್ಳಬೇಕು. ಗುಣವಾದರೆ ಆಯಿತು, ಆಗದಿದ್ದರೆ ತನ್ನಷ್ಟಕ್ಕೆ ತಾನೇ ಹೋಗಬೇಕು ಅಷ್ಟೆ. ಊರಿನಲ್ಲಿದ್ದರೆ ಇಂಥವುಗಳಿಗೆಲ್ಲ ನಮ್ಮ ತಾಯಿಯೇ ಏನೇನೋ ಸೊಪ್ಪು ತಂದು, ಅರೆದು ಕುಡಿಸಿ ಜೋಳದ ಮುದ್ದೆ ಮಾಡಿ ಎಲ್ಲಿಂದಲೋ ಒಂದು ಬೆಟ್ಟಡಕಿ ಗಾತ್ರ ಬೆಣ್ಣೆ ತಂದು ಹಾಕಿ ಮುಟುಮುಟು ಉಣ್ಣು ಎಂದು ಹೇಳುತ್ತಿದ್ದುದುಂಟು; ಅದು ಗುಣವಾಗುತ್ತಿದ್ದುದೂ ಉಂಟು. ಒಮ್ಮೆ ಹೀಗೇ ನನಗೆ ರಕ್ತಭೇದಿ ಪ್ರಾರಂಭವಾದಾಗ ನಮ್ಮ ದೊಡ್ಡಪ್ಪ ತೊಂಡರಸಿಗನ ಸೊಪ್ಪು ತಂದು ಅರೆದು ಕೆನೆಮೊಸರಿನಲ್ಲಿ ಕಲಿಸಿ ಕುಡಿಸಿದ್ದು ಜ್ಞಾಪಕದಲ್ಲಿತ್ತು. ಅಲ್ಲಿ ನನಗೆ ಆ ಸೊಪ್ಪಾಗಲಿ ಕೆನೆ ಮೊಸರಾಗಲಿ ಎಲ್ಲಿ ಸಿಗಬೇಕು? ಬೆಳಗಾದ ಮೇಲೆ ಊರಹೊರಗೆ ಹೋಗಿ ತೊಂಡರಸಿಗನ ಸೊಪ್ಪಿನ ಹತ್ತಾರು ಎಲೆಗಳನ್ನು ಬಾಯಲ್ಲಿ ಹಾಕಿ ಜಗಿದು ನುಂಗಿದೆ. ಹೊನ್ನಾವರಿಕೆ (ತಂಗಡಿ) ಗಿಡದ ಮುಗುಳು ಮೊದಲಾದವನ್ನು ತಿಂದೆ. ಏನೇನೋ ವೈದ್ಯಗಳನ್ನು ನಾನೇ ಮಾಡಿಕೊಂಡೆ. ಭೇದಿ

ಮಾತ್ರ ಇದ್ದೇ ಇತ್ತು. ಬೆಳಗಾದ ಮೇಲೆ ಒಂದೆರಡು ಸಲ ಭೇದಿ ಆಗಿ ರಕ್ತಹೋಗುವುದ
ಕಡಿಮೆಯಾಯಿತು.

ಬೆಳಿಗ್ಗೆ ಆ ಊರ ಯಜಮಾನ ಚನ್ನಬಸಪ್ಪ ಸಿಕ್ಕ. ಅವನಿಗೆ ರವಳಪ್ಪ ಮಾಸ್ತರರ ಚೀ
ಕೊಟ್ಟೆ. ಓದಿಕೊಂಡು ನನ್ನನ್ನು ಎರಡು ಮೂರು ಸಲ ನಖಶಿಖಾಂತವಾಗಿ ನೋಡಿ, ಏ
ನೆನೆಸಿಕೊಂಡನೋ ಏನೋ "ನಾನು ರವಳಪ್ಪ ಮಾಸ್ತರರ ಹತ್ತಿರ ಮಾತಾಡುತ್ತೇನೆ. ನೀ
ಈಗ ಊರಿಗೆ ಹೋಗಿ ಬಿಡಬಹುದು" ಎಂದುಬಿಟ್ಟ. ಅವನಿಗೆ ಹಿಂದೆ ಇದ್ದ ಮಾಸ್ತರ
ವರ್ತನೆ ನೆನಪಿಸಿಕೊಂಡು ಏನೋ ನನ್ನಲ್ಲಿ ವಿಶ್ವಾಸದುಂಬಿ ಮಾತನ್ನೇ ಆಡಲಿಲ್ಲವಾಗಿ ಅವ
ಭಾವವನ್ನು ಅರ್ಥಮಾಡಿಕೊಂಡು ಈ ಊರಲ್ಲಿ ಸಾಲಿಮಾಸ್ತರನಾಗುವ ಪುಣ್ಯವಿಲ್ಲವೆಂದ
ನಿರ್ಧರಿಸಿಬಿಟ್ಟೆ. ಆಗ ನನಗಾದ ನಿರಾಸೆ ಹೇಳತೀರದು. ನಿನ್ನೆಯಿಂದ ಕಾದು ಕಾದು ಸಾಕಾ
ಭೇದಿಯಿಂದ ಸುಸ್ತಾಗಿ ಹೋಗಿದ್ದ ನಾನು ಆ ಕೂಡಲೆ ಅವನಿಂದ ಬೀಳ್ಕೊಂಡು ಕುಳೇನೂರಿ
ಬಂದು ರವಳಪ್ಪ ಮಾಸ್ತರರಿಗೆ ವಿಷಯ ತಿಳಿದಿದೆ. ರವಳಪ್ಪ ಮಾಸ್ತರರು ನನ್ನ ಭೇದಿಗೆ ತ
ಔಷಧೋಪಚಾರ ಮಾಡಿಸಿ, ಮನೆಯಲ್ಲಿ ಮುದ್ದೆ ಬೆಣ್ಣೆ ಊಟ ಹಾಕಿಸಿ ಕಳಿಸಿಕೊಟ್ಟರು. ನಾ
ಊರಿಗೆ ಬಂದು ಕೆಲ ದಿನ ಬಿಟ್ಟು ಪುನಃ ಉಪ್ಪುಣಸಿಗೆ ಮತ್ತೆಲ್ಲೆಲ್ಲಿಗೋ ಹೋಗಿ ಬಂದ
ಎಲ್ಲಿಯೂ ಸಾಧ್ಯವಾಗಲಿಲ್ಲ. ಅನಂತರ ಕೆಲವು ದಿನ ಊರಿನಲ್ಲಿಯೇ ಉಳಿದು ವ್ಯವಸಾಯದ
ತಲ್ಲೀನನಾದೆ.

### *ನಮ್ಮೂರ ಸರಕಾರಿ ಸಾಲೆ*

ನಮ್ಮೂರ ಸಾಲಿಮಾಸ್ತರ ಬಸವಣ್ಣೆಪ್ಪ ಭದ್ರಣ್ಣನವರ ವಿಚಾರ ಹಿಂದೆ ಅನೇಕ ಪ್ರಸಂಗಗಳ
ಬಂದಿದೆ. ಅವರು ನಮ್ಮ ದೊಡ್ಡಪ್ಪನಿಗೆ ಬಹು ಆತ್ಮೀಯರು. ನಮ್ಮ ದೊಡ್ಡಪ್ಪ ಸಂತೆಗೆ ಪೇಟೆ
ದುಡ್ಡು ಇಲ್ಲದಾಗ ಅವರಿಂದ ಕಾಡಿ ಬೇಡಿ ನಾಲ್ಕಾಣೆಯೋ ಎಂಟಾಣೆಯೋ ಸಾಲ ಪಡೆದ
ಅಂದಂದಿನ ಸಂತೆಯ ದಂದುಗವನ್ನು ಪೂರೈಸುತ್ತಿದ್ದ. ಬಸವಣ್ಣೆಪ್ಪ ಮಾಸ್ತರರು ಆರ್ಥಿಕವಾ
ಸ್ವತಂತ್ರನಲ್ಲ. ಸಂಬಳ ಬಂದ ದಿನ ಮನೆಯಲ್ಲಿ ಅಣ್ಣ ಫಕ್ಕೀರಪ್ಪನೆದುರು ಹಣ ಎಣಿಸಿಬಿಡಬೇಕ
ಅಣ್ಣನ ಮೇಲೆ ಮಾಸ್ತರರಿಗೆ ಎಲ್ಲಿಲ್ಲದ ಭಕ್ತಿ. ಅದೆ ಅಣ್ಣನ ವಾತ್ಸಲ್ಯ ತಮ್ಮನ ಮೇಲೆ ಇತ್ತೋ
ಇಲ್ಲವೊ? ಈ ಕಾರಣವಾಗಿ ನಮ್ಮ ದೊಡ್ಡಪ್ಪನಿಗೆ ಚಿಲ್ಲರೆ ಕಾಸುಗಳನ್ನು ಮಾಸ್ತರರು ಅಲ್ಲಿ ಇ
ಉಳಿಸಿಟ್ಟುಕೊಂಡು ಕದ್ದು ಕೊಡುತ್ತಿದ್ದ. ಈ ಕಾರಣಕ್ಕಾಗಿ ನಮ್ಮ ದೊಡ್ಡಪ್ಪ ಅವರಿಗೆ ಒ
ಬಂಟನ ತರಹ ಇರುತ್ತಿದ್ದ. ಊರಿನಲ್ಲಿ ಈ ಮಾಸ್ತರರ ಸುತ್ತ ಅವರ ಮನೆತನದ ಸು
ಏನಾದರೂ ಜಗಳ ತಂಟೆತಕರಾರು ನಡೆದರೆ ಅಲ್ಲಿ ನಮ್ಮ ದೊಡ್ಡಪ್ಪ ಹಾಜರಾಗಿ ಗಲಾಟೆಕೋರರ
ತಂಟೆಕೋರರನ್ನು ಹೆದರಿಸಿ ಇವರ ಮನೆತನಕ್ಕೆ ಒಂದು ರಕ್ಷಣೆಯ ಬೇಲಿಯಂತಾಗಿದ್ದನೆನ್ನಬಹುದ

ಮಾಸ್ತರರು ಒಂದು ದಿನ "ನಿಮ್ಮ ಚನ್ನಪ್ಪ ನಮ್ಮ ಸ್ಕೂಲಿನಲ್ಲೇ ಶಾಲೆಯ ಪಾಠಗೀ
ಮಾಡಿಕೊಂಡಿರಲಿ. ನನಗೆ ಹೇಗೂ ಪಿಂಚಣಿ ಕಾಲ ಸಮೀಪಿಸಿದೆ. ರಜಾ ಇದೆ. ರಜ
ತಕ್ಕೊಂಡು ಶಾಲೆ ಚಾರ್ಜು ಇವನ ಕಡೆ ಕೊಟ್ಟು ಬಿಡುತ್ತೇನೆ. ಮುಲ್ಕೀಪರೀಕ್ಷೆ ಆದವನಾದ್ದರಿಂ
ಇವನಿಗೇ ನನ್ನ ಬದಲಿ ಮಾಸ್ತರ ಅಂತಾ ಮಾಡಿಬಿಡ್ತಾರೆ. ಮುಂದೆ ನಾನು ರಜಾ ತಕ್ಕೋತಾ
ಹೋಗ್ತಿರ್‍ತೇನೆ. ನಾಲ್ಕೈದು ತಿಂಗಳು ಬದಲಿ ಕೆಲಸ ಮಾಡಿದವನಾಗುತ್ತಾನೆ. ಆಮೇಲೆ ಖಾಯಂಕೆ
ಸಿಗೋದಕ್ಕ ಇದು ಸಹಾಯಾಗ್ತದ" ಇತ್ಯಾದಿ ನಮ್ಮ ದೊಡ್ಡಪ್ಪನಿಗೆ ಹೇಳಿದಾಗ ಅವನು ಖುಷಿಪಟ

ನನಗೆ ಈ ವಿಷಯತಿಳಿಸಿದ. ನಾನು ಆಗಬಹುದೆಂದು ನಮ್ಮೂರ ಶಾಲೆಯಲ್ಲಿ ಪಾಠ ಹೇಳತೊಡಗಿದೆ. ಹೊಲದಲ್ಲಿರುವ ಕಲ್ಲಂಗಡಿ ತೋಟದಲ್ಲಿ ತಿರುಗಾಡಿಕೊಂಡು ಹೊಲ ಮನೆಗಳಿಗೆ ಅಡ್ಡಾಡಿಕೊಂಡು ಇರತೊಡಗಿದರು. ನಾನು ನಮ್ಮ ಊರವರಿಂದ ಸೈ ಅನ್ನಿಸಿಕೊಳ್ಳಲು ಶಾಲೆಯಲ್ಲಿ ಪಾಠಪ್ರವಚನ ಚನ್ನಾಗಿಯೇ ಮಾಡತೊಡಗಿದೆ. ಸಾಯಂಕಾಲ ಪುರೋಚಿ ಹೇಳಿಸುವುದು, ಬಾಯಿಲೆಕ್ಕ ಮಾಡಿಸುವುದು, ಶುದ್ಧ ಬರಹ ಬರೆಸುವುದು ಎಲ್ಲ ಸಕ್ರಮವಾಗಿ ನಾನೇ ಶಾಲೆಯ ಕಾಯಂ ಮಾಸ್ತರರಂತೆ ಕೆಲಸ ಮಾಡುವುದನ್ನು ಕಂಡು ಊರವರ 'ಶಹಬ್ಬಾಸ್ ಗಿರಿ'ಯ ಸುರಿಮಳೆಯೇ ಆಗತೊಡಗಿತು. ಮಾಸ್ತರರು ಇನ್ನು ರಜಾ ತಕ್ಕೊಳ್ಳಲೇ ಇಲ್ಲ. ಮೂರು ನಾಲ್ಕು ತಿಂಗಳು ಹೀಗೇ ಕಳೆಯಿತು. ನಾನು ಬಿಡುವಿನ ವೇಳೆಯಲ್ಲಿ ನಮ್ಮ ಹೊಲಮನೆಯ ಕೆಲಸ ಮಾಡುವುದನ್ನು ಬಿಟ್ಟಿರಲಿಲ್ಲ. ಅಲ್ಲಿಯೂ ಸೈ ಇಲ್ಲಿಯೂ ಸೈ ಆಗಿಹೋದೆ. ಊರ ಎಲ್ಲರ ಪ್ರಶಂಸೆಗೂ ಪಾತ್ರನಾದೆ.

**ಮೈಸೂರು ಭಾಗದ ಪ್ರವಾಸ ಘಟಿಸಿತು.**

ನಾನು ಹೀಗೆ ನಮ್ಮೂರ ಪಾಠಶಾಲೆಯಲ್ಲಿ ಕೆಲಸ ಮಾಡಿಕೊಂಡಿರುವ ವೇಳೆಗೆ ನಮ್ಮ ಮನೆತನದ ಗುರುಗಳಾಗಿದ್ದ ಹುಲಗಬಾಳಿ ಹಿರೇಮಠದ ಪಟ್ಟದ ದೇವರು ಬಂದರು. ಅವರ ಹೆಸರು ರಾಚಯ್ಯನವರು ಎಂದು. ಅವರು ನಮ್ಮೂರಲ್ಲಿ ನಮ್ಮ ವಂಶಜರೇ ಆಗಿದ್ದ ಹತ್ತಿಪ್ಪತ್ತು ಮನೆಗಳಿಗೂ ಗುರುಗಳು. ನಮ್ಮ ಮಾಸ್ತರ ಬಸವಣ್ಣೆಪ್ಪನೂ ನಮ್ಮ ವಂಶಜನೇ ಅಲ್ಲವೆ. ಅವರ ಮನೆಗೂ ಇವರೇ ಗುರುಗಳು. ಅವರಿಗೆ ಮೈಸೂರುಸೀಮೆಯಲ್ಲಿನ ಶಿರಾಳಕೊಪ್ಪ, ನ್ಯಾಮತಿ, ದೊಡ್ಡೆತ್ತಿನ ಹಳ್ಳಿ ಹಾರನ ಹಳ್ಳಿ, ಸಾಸಿವೆ ಹಳ್ಳಿ ಮೊದಲಾದ ಕಡೆಗಳಲ್ಲಿ ಶಿಷ್ಯರಿದ್ದರಂತೆ. ಅವರುಗಳ ಮನೆಗೆ ಎಷ್ಟೋವರ್ಷಗಳಿಂದ ಹೋಗಿದ್ದಿಲ್ಲವಂತೆ. ಮುಂದೆ ಕಾಲಕ್ರಮೇಣ ನಮಗೂ ಅವರಿಗೂ ಇರುವ ಗುರುಶಿಷ್ಯ ಸಂಬಂಧ ಹಾರಿಹೋದೀತೆಂದೂ, ಈಗಲೇ ಅವನ್ನೆಲ್ಲ ನವೀಕರಿಸಿಕೊಳ್ಳಬೇಕೆಂದು ಬಯಸಿ ರಾಚಯ್ಯನವರು ಅಲ್ಲಿಯ ಪ್ರವಾಸದ ಕಾರ್ಯಕ್ರಮ ಹಾಕಿಕೊಂಡರು. ಅವರ ಜೊತೆಗೆ ಅವರ ಮಠದ ಪಟ್ಟಾ ಧರಿಸುವ ಒಬ್ಬ ಸೇವಕನೂ ಇದ್ದ. ಅವರಿಬ್ಬರೇ ಪ್ರವಾಸ ಮಾಡಲು ಇಚ್ಛೆ ಇರಲಿಲ್ಲವಾಗಿ ಅಷ್ಟು ಇಷ್ಟು ಬುದ್ಧಿವಂತನೆಂದು ಹಳ್ಳಿಯ ಮಟ್ಟದಲ್ಲಿ ಹೆಸರು ಗಳಿಸಿದ್ದ ನನ್ನನ್ನು ಪ್ರವಾಸಕಾರ್ಯಕ್ಕೆ ನೇಮಿಸಿಕೊಂಡು ನಮ್ಮ ದೊಡ್ಡಪ್ಪನ ಮತ್ತು ಮಾಸ್ತರರ ಅನುಮತಿ ಪಡೆದರು. ನನಗೂ ಕುತೂಹಲ ಕೆರಳಿತು. ದುಡ್ಡಿಲ್ಲದೆ ಕಾಸಿಲ್ಲದೆ ಪ್ರವಾಸಕ್ಕೆ ಕರೆದರೆ ಒಲ್ಲೆ ಎನ್ನುವುದುಂಟೆ? ನಾನೂ ಸಿದ್ಧನಾಗಿ ಬಿಟ್ಟೆ. ರಾಚಯ್ಯನವರು ಈ ಪ್ರವಾಸದಿಂದ ಮೈಸೂರು ಸೀಮೆಯ ನಮ್ಮ ಶಿಷ್ಯವರ್ಗ ನಮ್ಮ ಹಸ್ತಗತವಾಗಿ ಹೋಗುತ್ತದೆಂದೂ ಅಷ್ಟು ಇಷ್ಟು ಕಾಣಿಕೆ ಸಿಕ್ಕೇ ಸಿಗುತ್ತದೆಂದೂ ಮನಸ್ಸಿನಲ್ಲಿ ದೊಡ್ಡ ಆಸೆ ಇಟ್ಟುಕೊಂಡರು. ತಮ್ಮ ಹಳೇ ಕಡತಗಳನ್ನು ಗಂಟುಕಟ್ಟಿ ತಮ್ಮ ಆಳಿನ ಮೇಲೆ ಹೇರಿಕೊಂಡು ಪ್ರಥಮತಃ ನ್ಯಾಮತಿಗೆ ಬಂದು ಇಳಿದೆವು. ಅವರ ಕಡತದಲ್ಲಿದ್ದ ವಂಶಸ್ಥರು ಯಾರೂ ಈಗ ಇಲ್ಲವೆಂದೂ ಹಿಂದೆ ಆದ ಗುದ್ದವ್ವನ ಬೇನೆಯಲ್ಲಿ ಅವರೆಲ್ಲ ಸತ್ತು ಕೆಟ್ಟು ಉಳಿದವರು ಎತ್ತೆತ್ತಲೋ ಹೋಗಿ ಬಿಟ್ಟರೆಂದೂ ತಿಳಿಸಿ ಅವರ ಹಾಳುಮನೆಯ ಜಾಗ ತೋರಿಸಿದರು. ರಾಚಯ್ಯನವರು ಭೂಮಿಗೆ ಕುಸಿದು ಹೋದರು. ತಾವು ಹೋದೊಡನೆ ಶಿಷ್ಯಪರಂಪರೆಯ ತಮ್ಮನ್ನು ಮರ್ಯಾದೆಯಿಂದ ಕಂಡು ಸ್ನಾನ ಪೂಜೆ ಊಟ ಉಪಚಾರ ಮಾಡುತ್ತಾರೆಂಬ ಭಾವನೆ ಅವರಿಗಿತ್ತು. ಶಿಷ್ಯರ ಮನೆಗಳೇ ಹಾಳುಕತ್ತೆಗಳ ನಿವಾಸಸ್ಥಳವಾದಾಗ ಇವರನ್ನು ಯಾರು ಮಾತನಾಡಿಸಬೇಕು. ಆ ಊರಿನಲ್ಲಿರುವ ಮಠವೋ ಏನೋ, ಹೆಸರು ಸ್ಪಷ್ಟವಾಗಿ ನೆನಪಿಲ್ಲ. ಅಲ್ಲಿಗೆ ಹೋದೆವು. ಆ ಮಠದ ಸ್ಥಿತಿಯೂ

ಚೆನ್ನಾಗಿರಲಿಲ್ಲ. ಆ ಮಠದ ಅಯ್ಯನೊಬ್ಬ ಶಾಲಾ ಶಿಕ್ಷಕ. ರಾಚಯ್ಯನವರ ಅಸಹಾಯಕ ಸ್ಥಿತಿಯನ್ನು ಅರಿತು ಹೇಗೋ ಆ ರಾತ್ರಿ ಊಟಕ್ಕೆ ಏರ್ಪಡಿಸಿ ಮಲಗಲು ಸ್ಥಳ ಕಲ್ಪಿಸಿದ. ಮರುದಿನ ಬೆಳಿಗ್ಗೆ ಅಲ್ಲಿ ನಿಲ್ಲದೆ ನಡೆಯುತ್ತಲೇ ದೊಡ್ಡೆತ್ತಿನ ಹಳ್ಳಿಯ ಕಡೆಗೆ ಹೊರಟೆವು. ಎಲ್ಲ ಕಾಲುನಡಿಗೆಯೇ ರಾಮಪುರದ ಹತ್ತಿರ ತುಂಗಭದ್ರಾ ನದಿಯಲ್ಲಿ ಸ್ನಾನಮಾಡಿ ಊರ ಅಂಗಡಿಯಿಂದ ತಂದ ಕಡ್ಲೆಪುರಿ ತಿಂದುಕೊಂಡು ಸಾಯಂಕಾಲದ ಹೊತ್ತಿಗೆ ದೊಡ್ಡೆತ್ತಿನಹಳ್ಳಿ ಹೊಕ್ಕೆವು. ಅಲ್ಲಿ ಅವರ ಶಿಷ್ಯರ ಮನೆ ಏನೋ ಸಿಕ್ಕಿತು. ಆ ಮನೆಯ ಯಜಮಾನ ದಟ್ಟದರಿದ್ರ. ಏನೂ ಅರಿಯದವ. ಅವನ ದಾರಿದ್ರ್ಯವೇ ಅವನಿಗೆ ಸಾಕಾಗಿ ಹೋಗಿತ್ತು. 'ನೀವ್ಯಾರೋ ಏನೋ ಗೊತ್ತಿಲ್ಲ, ಹೋಗ್ರೀ' ಎಂದು ಬಿಟ್ಟ. ರಾಚಯ್ಯನವರ ಆಶಾಗೋಪುರ ಅಲ್ಲಿಯೂ ಕಳಚಿಬಿತ್ತು. ಮುಂದೆ ಗತಿ ಏನು? ಎಂಬ ಚಿಂತೆ ರಾಚಯ್ಯನವರನ್ನು ಬಾಧಿಸಿತೊಡಗಿತು. ಸರಿ ನಾವು ಇಷ್ಟಕ್ಕೆ ಧೈರ್ಯಗುಂದಿದರೆ ಹೇಗೆ? ಮುಂದೆ ಹೊರಡೋಣವೆಂದು ಆ ರಾತ್ರಿ ದೊಡ್ಡೆತ್ತಿನಹಳ್ಳಿಯಲ್ಲಿರುವ ಒಂದು ದೇವಾಲಯದಲ್ಲಿ ಬಿಡಾರ ಮಾಡಿದೆವು. ನನ್ನ ಬುದ್ಧಿ ಚುರುಕಾಯಿತು. ಇನ್ನು ಬಾಯಿಸತ್ತವರಂತೆ ಕುಳಿತರೆ ಆಗುವುದಿಲ್ಲವೆಂದು ದೇವಾಲಯದಲ್ಲಿ ಪರಸ್ಥಳದ ನಾವಿದ್ದುದನ್ನು ಕಂಡು ಕುತೂಹಲದಿಂದ ನೋಡಲಿಕ್ಕೆ ಬರುವವರೆದುರು ನಮ್ಮ ಅಸಹಾಯಕ ಸ್ಥಿತಿಯನ್ನು ಬಣ್ಣಿಸುತ್ತ ರಾತ್ರಿಯ ಊಟಕ್ಕಾಗಿ ಏನೇನೋ ಪೀಠಿಕೆ ಹಾಕಿ ಯಾರದೋ ಮನೆಯಲ್ಲಿ ರಾತ್ರಿ ಊಟ ಗಿಟ್ಟಿಸಿಬಿಟ್ಟೆವು. ಬೆಳಿಗ್ಗೆ ಎದ್ದು ಸಾಸಿವೆಹಳ್ಳಿಯ ಕಡೆಗೆ ಹೊರಟೆವು. ರಾಚಯ್ಯನವರಿಗೆ ಇವೆಲ್ಲ ಹೊಸ ಅನುಭವಗಳು. ಇಂಥ ನೂರಾರು ಅನುಭವಗಳಲ್ಲಿ ಪಳಗಿಹೋಗಿದ್ದ ನನಗೆ ಇವೆಲ್ಲ ಸಮಸ್ಯೆಗಳೇ ಎನ್ನಿಸಲಿಲ್ಲ. ಸಾಸಿವೆ ಹಳ್ಳಿಗೆ ಹೋಗುತ್ತ ದಾರಿಯಲ್ಲಿ ನೀರು ಸಿಕ್ಕ ಕಡೆ ಸ್ನಾನ ಮಾಡಿಕೊಳ್ಳುತ್ತ ಅಂಗಡಿಯಲ್ಲಿ ಕೊಂಡು ತಂದ ಅವಲಕ್ಕಿ ಬೆಲ್ಲ ತಿನ್ನುತ್ತ ಊರು ತಲುಪಿದೆವು.

ಸಾಸಿವೆ ಹಳ್ಳಿಯಲ್ಲಿ ಶಿಷ್ಯರ ಮನೆಯ ವಿಳಾಸ ಹೇಳಿದೆವು. ಸುಲಭವಾಗಿ ಮನೆ ಸಿಕ್ಕಿತು. ಆ ಮನೆತನದವರು ಸಾಮಾನ್ಯವ್ಯಾಪಾರಿಗಳು; ಸ್ವಲ್ಪ ಮಟ್ಟಿಗೆ ಸಂಸ್ಕೃತಿ ಸಂಪನ್ನರು. ಅವರಿಗೆ ಆಯನೂರು ಮೊದಲಾದ ಕಡೆ ಬೀಗತನವಿದ್ದು ದೊಡ್ಡ ಬಳಗವನ್ನು ಹೊಂದಿದವರು. ಆ ಮನೆಯಲ್ಲಿದ್ದ ಮುದುಕನೊಬ್ಬ, ಹುಲಗಬಾಳಿ ಹಿರೇಮಠದ ಅದೃಶ್ಯಪ್ಪನ ಪಟ್ಟದ ದೇವರ ಮಠದವರೆಂದು ಕೇಳಿದೊಡನೆ ಎದ್ದು ರಾಚಯ್ಯನವರಿಗೆ ನಮಸ್ಕರಿಸಿ ಕಟ್ಟೆಯ ಮೇಲೆ ಕಂಬಳಿ ಹಾಸಿ ಕುಳ್ಳಿರಿಸಿ ಬಹಳ ದಿನಗಳಿಂದ ನಿಮ್ಮವರು ಈ ಕಡೆ ಬಂದಿಲ್ಲ. ಹಾಗೆ ಹೀಗೆ ಮಾತುಕತೆಗೆ ಪ್ರಾರಂಭಿಸಿದ. ರಾಚಯ್ಯನವರು ಒಂದಾದರೂ ಶಿಷ್ಯರ ಮನೆಯ ಆಶ್ರಯ ಸಿಕ್ಕಿತಲ್ಲ ಎಂದು ಹಿಗ್ಗಿದರು. ನನಗೂ ಸದ್ಯ ಬದುಕಿಕೊಂಡೆವೆನ್ನಿಸಿತು.

ರಾತ್ರಿ ಪೂಜೆ ಊಟವೆಲ್ಲ ಸಕ್ರಮವಾಗಿ ಆದರೂ ನಮ್ಮ ಊರಿನಲ್ಲಿ ಈ ಗುರುಗಳಿಗೆ ಸಿಗುತ್ತಿದ್ದ ಮಾನಮನ್ನಣೆ ಭಕ್ತಿ ಇತ್ಯಾದಿ ಏನೂ ಇಲ್ಲದೆ ಮನೆಗೆ ಗುರುತಿನವರು ಬಂದಾಗ ನಡೆಯುವ ಮಾಮೂಲಿ ಉಪಚಾರದಂತೆ ಉಪಚಾರವಾಯಿತು. ಮರುದಿನ ಮಧ್ಯಾಹ್ನ ಪುನಃ ಸ್ನಾನ ಊಟ ಉಪಚಾರ ನಡೆಯಿತು. ಎಲ್ಲಾ ಯಥಾಸ್ಥಿತಿ. ಮನೆಯ ಯಜಮಾನ "ಮುಂದೆ ನೀವು ಯಾವ ಊರಿಗೆ ಹೋಗುವವರು" ಎಂದು ಕೇಳಿಯೇ ಬಿಟ್ಟ. ಆಗ ನಾವು ಈ ಮಾತಿನ ಹಿನ್ನೆಲೆಯ ಅವನ ಭಾವನೆಯನ್ನು ಬೇಗ ಅರ್ಥಮಾಡಿಕೊಂಡು ಬಿಟ್ಟೆವು. ಸರಿ. ಇವರಲ್ಲಿಯೂ ಗುರುಭಕ್ತಿಯ ಸೆಲೆ ಬತ್ತಿಹೋಗಿದೆ. ಇನ್ನು ಭಂಡರಾಗಿ ಇಲ್ಲಿ ಕೂಡುವುದು ಸರಿಯಲ್ಲವೆಂದು ಭಾವಿಸಿ "ನಾವು ಹಾರ್ನಹಳ್ಳಿಗೆ ಹೋಗಬೇಕು. ಅಲ್ಲೊಂದೆರಡು ಶಿಷ್ಯರ

ಮನೆಗಳಿವೆ" ಎಂದು ಹೇಳಿದ್ದನ್ನು ಕೇಳಿ ಮುದುಕ ನಮಗೆ ಹೋಗುವ ಮಾರ್ಗವನ್ನು ತಿಳಿಸಿಬಿಟ್ಟ. ನಾವು ಮಧ್ಯಾಹ್ನದ ಊಟ ಮುಗಿಸಿಕೊಂಡು ಹೊರಡಲು ಸಿದ್ಧತೆ ಮಾಡಿಕೊಂಡೆವು. ಮುದುಕ ಒಂದು ತಟ್ಟೆಯಲ್ಲಿ ಎರಡೋ ಮೂರೋ ರೂಪಾಯಿ ದಕ್ಷಿಣೆಯಿಟ್ಟು ಕೊಟ್ಟು ಬಿಟ್ಟ. ರಾಚಯ್ಯನವರು ಕುಸಿದು ಬೀಳುವಂತಾಗಿ ಬಿಟ್ಟದ್ದರಂತೆ. ಈ ವಿಷಯವನ್ನು ಆಮೇಲೆ ನನ್ನೆದರು ಹೇಳಿದರು. "ಅಥಣಿಯ ಪಕ್ಕದ ಹುಲಗಬಾಳಿ ಎಲ್ಲಿ? ಶಿವಮೊಗ್ಗ ಜಿಲ್ಲೆಯ ಸಾಸಿವೆಹಳ್ಳಿಯೆಲ್ಲಿ? ಅಲ್ಲಿಂದ ಇಲ್ಲಿಗೆ ಶಿಷ್ಯರನ್ನು ಹುಡುಕಿಕೊಂಡು ಗುರುಗಳೇ ಬಂದರೆ ದಾರಿಯ ಖರ್ಚಿಗಾದರೂ ದಕ್ಷಿಣೆ ಇಡಬೇಡವೇ? ಭಕ್ತಿ ಬತ್ತಿಹೋಯಿತು. ಇನ್ನು ಮುಂದೆ ಶಿಷ್ಯರು ಗಿಷ್ಯರು ಅಂತಾ ನಾವು ತಿರುಗಿದರೆ ಮಾನಮರ್‍ಯಾದೆ ಬರುವುದಿಲ್ಲ. ಇದೇ ಕೊನೆ. ಇನ್ನು ಮುಂದೆ ಮೈಸೂರು ಸೀಮೆಯ ಈ ಶಿಷ್ಯರ ಮನೆ ಕಡೆ ಹೊರಳಿ ನೋಡುವುದಿಲ್ಲ. ಇದ್ದ ಹೊಲ ಮನೆ ನೋಡಿಕೊಂಡು ಇರುವುದೇ ಮೇಲೆಂದು ರಾಚಯ್ಯನವರು ದಾರಿಯಲ್ಲಿ ಉದ್ಗಾರ ತೆಗೆದರು. ಸಾಸಿವೆಹಳ್ಳಿಯ ಈ ಭಕ್ತನ ಮನೆಯಲ್ಲಿ ಇಬ್ಬರು ಮೂವರು ಮಕ್ಕಳು ಪ್ರೌಢರಿದ್ದರೂ ಅವರಾರೂ ನಮ್ಮ ಗುರುಗಳೆಂದು ಹತ್ತಿರ ಬಾರದಿದ್ದುದಕ್ಕೆ ರಾಚಯ್ಯನವರು ನಾವು ಇಷ್ಟು ಹಗುರಾಗಬಾರದೆಂದುಕೊಂಡರು.

ಸರಿ ಬಂದುದ್ದಾಗಿ ಹೋಗಿದೆ. ನಮ್ಮ ಹಳೆಯ ಕಡತದಲ್ಲಿರುವ ಹಾಗೆ ಹಾರನಹಳ್ಳಿ, ಶಿರಾಳಕೊಪ್ಪ ನೋಡಿಕೊಂಡು ಊರಿಗೆ ಹೋಗಿ ಬಿಡೋಣವೆಂದುಕೊಂಡು ಹಾರನಹಳ್ಳಿಗೆ ಹೊರಟೆವು. ನಮಗೆ ಹೊಸಪ್ರದೇಶವೊಂದು ಪರಿಚಯವೇನೋ ಆಯಿತು. ಆದರೆ ಇದಕ್ಕೆ ನಾವು ತೆತ್ತ ಬೆಲೆ ಅಷ್ಟಿಷ್ಟಲ್ಲ. ರಾಚಯ್ಯನವರು ಊರಿನಿಂದ ತಂದ ದುಡ್ಡೂ ಕರಗುತ್ತ ಬಂದಿತ್ತು. ಹಾರನಹಳ್ಳಿ ಶಿರಾಳಕೊಪ್ಪದ ಶಿಷ್ಯರೂ ಈ ಹಿಂದಿನ ಶಿಷ್ಯರಂತೆಯೇ ಆದರೆ ಮುಂದೆ ನಾವು ಊರು ತಲುಪುವುದು ಹೇಗೆ ಎಂಬ ಚಿಂತೆ ಬಾಧಿಸಿತು. ಬಸ್ಸುಗಿಸ್ಸು ಎಂದು ಕಾದು ಹಣ ವ್ಯಯಿಸಿದರೆ ಕಷ್ಟವಾದೀತೆಂದು ನಡೆಯುತ್ತಲೇ ಹಾರನಹಳ್ಳಿಗೆ ತಲುಪಿದೆವು. ಅಲ್ಲಿ ಜನರನ್ನು ಕೇಳಿ ಶಿಷ್ಯರ ಮನೆ ತಲುಪಿದೆವು. ರಾಚಯ್ಯನವರು ಈ ಮೊದಲೇ ಊರ ಹೊರಗೆ ಇದ್ದ ಹೊಂಡದಲ್ಲಿ ಮುಖಮಾರ್ಜನ ಮಾಡಿಕೊಂಡು ಭಸ್ಮಧರಿಸಿ ಜರಿರುಮಾಲು ಕೊಡವಿ ಸುತ್ತಿ ಠೀವಿಗೊಂಡರು. ಅವರ ಆಳೂ ಅಷ್ಟೆ. ಅವನು ತನ್ನ ಸಮವಸ್ತ್ರ ಧರಿಸಿ ಹಣೆಗೆ ವಿಭೂತಿ ಜಡೆದು ಬಿರುದಿನ ಪಟ್ಟಾಧರಿಸಿ ಕೈಯಲ್ಲಿ ಕೋಲು ಹಿಡಿದು ಹೊರಟಿದ್ದ. ಅವನ ಹಿಂದೆ ರಾಚಯ್ಯನವರು, ಅವರ ಹಿಂದೆ ಹೆಗಲ ಮೇಲೆ ಹಾಸಿಗೆ ಹೊದಿಕೆ ಹೊತ್ತ ನಾನು. ಹೀಗೆ ಮೂವರೂ ಶಿಷ್ಯರ ಮನೆಯನ್ನು ಹೊಕ್ಕು ನಿಮ್ಮ ಗುರುಗಳಾದ ಹುಲಗಬಳಿ ಹಿರೇಮಠದ ಪಟ್ಟದ ದೇವರು ಬಂದಿದ್ದಾರೆಂದು ಹೇಳಿ ನಿಂತುಕೊಂಡೆವು. ಒಳಗಿನಿಂದ ಓರ್ವತರುಣ ಯಾರದು? ಎಂದು ಗಡಸಿನ ಧ್ವನಿಯಿಂದಲೇ ಕೇಳುತ್ತ ಹೊರಬಂದ. ಅವನು ನಾವು ಹೇಳುವುದನ್ನು ಕೇಳುವ ಮೊದಲೇ "ಯಾರು ನೀವು? ಯಾರನ್ನು ಕೇಳಿ ಒಳಗೆ ಬಂದಿರಿ" ಎಂದೇ ಬಿಟ್ಟ. ನಮ್ಮ ಎದೆ ಝಲ್ ಎಂದಿತು. "ಅಯ್ಯ ನಾವು ಹುಲಗಬಾಳಿ ಪಟ್ಟದೇವರು, ನಿಮ್ಮ ಗುರುಗಳು. ಅಲ್ಲಿಂದ ಇಲ್ಲಿಗೆ ನಿಮ್ಮನ್ನು ಹುಡುಕಿಕೊಂಡು ಬಂದಿದ್ದೇವೆ" ಎಂದು ರಾಚಯ್ಯನವರು ಸಾಂತ್ವನ ಧ್ವನಿಯಿಂದ ಹೇಳಿದರೂ ಆ ತರುಣ ಕೇಳದೆ ಹೆಚ್ಚಿಗೆ ಮಾತಾಡಿದರೆ ಪೋಲೀಸ್ ಕಂಪ್ಲೆಂಟ್ ಕೊಟ್ಟು ಬಿಡುತ್ತೇನೆ ಎಂದು ಬೆದರಿಸಿಬಿಟ್ಟ. ನಾವು ತೀರಾ ನಿಸ್ಸಹಾಯಕರಾದೆವು. ಸ್ವಲ್ಪ ಮಟ್ಟಿಗೆ ನಡುಕವೂ ಹುಟ್ಟಿತು. ಮಾಡುವುದೇನು?

ಇಷ್ಟು ಹೊತ್ತಿಗೆ ಅನೇಕ ಜನಗಳು ಬಾಗಿಲಲ್ಲಿ ಸೇರಿಬಿಟ್ಟರು. ನಾವು ಹೊರಬಂದೆವು. ರಾಚಯ್ಯನವರು ಅಪಮಾನದಿಂದ ಸುಸ್ತಾಗಿ ಹೋದರು. ಮುಖ ಬಿಳಿಚಿಕೊಂಡು ಬಿಟ್ಟಿತು. ನಾನು ಮೊಂಡು ಧೈರ್ಯವಹಿಸಿದೆ. ಈ ಶಿಷ್ಯ ಮಹಾಶಯನ ಮನೆಯ ಪಕ್ಕದ ಮನೆಯಲ್ಲಿ ಮದುವೆ ಸಂಭ್ರಮ ನಡೆದಿತ್ತು. ಆ ಮನೆಯ ಯಜಮಾನ ರಾಚಯ್ಯವರ ಮುಖಮುದ್ರೆಯನ್ನು ಅವರ ಆಳಿನ ಎದೆಯ ಮೇಲಿನ ಹುಲಗಬಾಳಿ ಮಠದ ಬಿರುದಿನ ಪಟ್ಟಾವಳಿಯನ್ನು ಕಂಡು ನಮ್ಮನ್ನು ಕರೆದೊಯ್ದು ಅವರ ಮದುವೆಚಪ್ಪರದಲ್ಲಿ ಒಂದು ಕಡೆ ಕುರ್ಚಿಯ ಮೇಲೆ ಕುಳ್ಳಿರಿಸಿ ಎಲ್ಲವನ್ನು ಸಾವಧಾನವಾಗಿ 'ವಿಚಾರಿಸಿ ನೀವೇನೂ ಹೆದರಬೇಡಿ. ಈ ದಿನ ನಮ್ಮ ಮನೆಯಲ್ಲಿದ್ದು ಊಟೋಪಚಾರ ಮುಗಿಸಿಕೊಂಡು ಬೆಳಿಗ್ಗೆ ಹೋಗಿ' ಎಂದು ತಿಳಿಸಿದ್ದು ನಮಗೆ ಧೈರ್ಯತಂದುಕೊಟ್ಟಿತು. ಏಕೆಂದರೆ ಆ ದುಷ್ಟ ಶಿಷ್ಯ ನಮ್ಮ ಮೇಲೆ ಪೋಲೀಸ್ ಕಂಪ್ಲೆಂಟ್ ಹಾಗೆ ಹೀಗೆ ಹೇಳಿದ್ದು ನಮಗೆ ಭಯವನ್ನುಂಟು ಮಾಡಿತ್ತು. ಆಮೇಲೆ ಅಲ್ಲಿನ ಜನಗಳಿಂದ ಈ ಶಿಷ್ಯನ ಚರಿತ್ರೆ ನಮಗೆ ತಿಳಿದು ಬಂತು.

ಈ ಹುಡುಗನೊಬ್ಬ ಪೋಲಿಯಂತೆ. ಎಲ್ಲ ಮುಗಿಸಿ ಬಿಟ್ಟವನಂತೆ. ಇವನ ಹೆಂಡತಿ ಯಾರನ್ನೋ ಕಟ್ಟಿಕೊಂಡು ಓಡಿ ಹೋದವಳಂತೆ. ಇವರ ಮನೆಯ ಇನ್ನಿತರ ಹೆಂಗಸರ ಚರಿತ್ರೆಯೂ ಅಷ್ಟೇ ಅಂತೆ. ಅದೆಲ್ಲ ಕೆಟ್ಟು ಹಾಳಾಗಿ ಹೋದ ಮನೆತನ ಎಂದು. ನಾವು ಇಂಥ ದುಷ್ಟಶಿಷ್ಯರ ಮನೆಯಲ್ಲಿ ನಮಗೆ ಉಪಚಾರವಾಗದಿದ್ದುದೇ ನಮ್ಮ ಪುಣ್ಯವೆಂದು ಕೊಂಡು ಆ ರಾತ್ರಿ ಮದುವೆಯ ಮನೆಯಲ್ಲಿ ಪೂಜೆ ಮುಗಿಸಿ ಒಳ್ಳೆ ಭೋಜನ ಗಿಟ್ಟಿಸಿ ಮರುದಿನ ಶಿರಾಳಕೊಪ್ಪಕ್ಕೆ ಹೊರಟೆವು. ಈ ಸಲ ನಾವು ದೂರದ ಈ ದಾರಿಯನ್ನು ನಡೆದು ಹೋಗಲಾಗುತ್ತಿರಲಿಲ್ಲ. ಬಸ್ಸಿಗಾಗಿ ಸವುಳಂಗದವರೆಗೆ ಐದು ಮೈಲು ನಡೆಯಬೇಕಾಗಿತ್ತು ಅಷ್ಟೆ, ನಡೆದೆವು.

ಸೌಳಂಗದಲ್ಲಿ ಸ್ನಾನ ಪೂಜೆ ಮುಗಿಸಿಕೊಂಡು ಹೊಟ್ಟೆಗೇನಾದರೂ ಹಾಕಿಕೊಂಡು ಶಿರಾಳಕೊಪ್ಪಕ್ಕೆ ಹೋಗಬೇಕೆಂದು ಬಯಸಿ ಅಲ್ಲಿನ ಅಂಗಡಿಯಲ್ಲಿ ಪುರಿ- ಅವಲಕ್ಕಿ- ಬೆಲ್ಲ- ಉಳ್ಳೇಗಡ್ಡಿ ಬಟ್ಟೆಸೋಪು ಇತ್ಯಾದಿ ಕೊಂಡು ಗಂಟು ಕಟ್ಟಿಕೊಂಡು ಪಕ್ಕದಲ್ಲಿಯೇ ಹೊಸದಾಗಿ ಅದೇ ವರ್ಷ ಕಟ್ಟಿ ಮುಗಿಸಿದ್ದ ಅಂಜನಾಪುರ ಕೆರೆಗೆ ಹೋದೆವು. ಸುತ್ತಲೂ ಗುಡ್ಡಗಳು, ಗುಡ್ಡಗಳ ಮೇಲೆ ಬೆಳೆದ ಅರಣ್ಯ. ಇಂಥ ಅರಣ್ಯ ಮಧ್ಯದಲ್ಲಿ ಸಾಗರೋಪಾಯವಾಗಿ ಕಟ್ಟಿದ ಭವ್ಯ ಕೆರೆ. ಅದರಲ್ಲಿನ ಅಚ್ಛೋದವನ್ನು ಕಂಡು ನಾವು ಪಠ್ಯಪುಸ್ತಕದಲ್ಲಿ ಓದಿದ್ದ ಅಚ್ಛೋದ ಸರೋವರದ ವರ್ಣನಾಂಶವೇ ಕಣ್ಣಿಗೆ ಕಟ್ಟಿದಂತಾಯಿತು. ರಮ್ಯ ಪ್ರಕೃತಿ ಮಧ್ಯದ ಸರೋವರ ಸೌಂದರ್ಯ ನಮ್ಮನ್ನು ಮಂತ್ರಮುಗ್ಧರನ್ನಾಗಿಸಿತು. ಈ ಹಿಂದೆ ಅನುಭವಿಸಿದ ಭವಣೆಗಳೆಲ್ಲ ಮಾಯವಾದವು. ಮನಸ್ಸಿಗೆ ಅಷ್ಟು ಇಷ್ಟು ಸಮಾಧಾನವಾಯಿತು.

ಸರೋವರದಲ್ಲಿಳಿದು ಬಟ್ಟೆಬರೆಗಳನ್ನು ತೊಳೆದು ಒಣಹಾಕಿ ಬಹಳ ಹೊತ್ತಿನವರೆಗೆ ಆ ಅಚ್ಛೋದದಲ್ಲಿ ಮಿಂದು ಮಡಿಯುಟ್ಟೆವು. ಪಕ್ಕದಲ್ಲಿಯೇ ಇದ್ದ ವಿಶಾಲ ಮಾಮರದಡಿಗೆ ಹೋದೆವು. ಆ ನೆಳಲಲ್ಲಿ ಶಿವಪೂಜೆ ಮುಗಿಸಿ ತಂದಿದ್ದ ತಿಂಡಿ ತಿನಿಸು ತಿಂದು ಸ್ವಲ್ಪ ಹೊತ್ತು ಮಲಗಿ ಎದ್ದು ಸೌಳಂಗಕ್ಕೆ ಬಂದು ಶಿರಾಳಕೊಪ್ಪದ ಬಸ್ ಹತ್ತಿ ಪ್ರಯಾಣಮಾಡಿದೆವು. ಬಲಗಡೆ ಭವ್ಯವಾದ ಗುಡ್ಡದ ಸಾಲು ಗುಡ್ಡದ ನೆತ್ತಿಯವರೆಗೆ ಬೆಳೆದು ನಿಂತ ಗಿಡಮರಗಳ ಮಹಾರಣ್ಯ. ಓಹೋ ಎದ್ದು ಕುಣಿದಾಡುವ ಭಾವೋದ್ರೇಕ. ಎತ್ತೆತ್ತ ನೋಡಿದರೂ ಗಂಭೀರವಾಗಿ ಕಾಣುವ

ಹಚ್ಚ ಹಸಿರು. ಎಲ್ಲೆಲ್ಲೂ ತುಂಬಿನಿಂತ ಕೆರೆಕಟ್ಟೆಗಳು ಅಲ್ಲಲ್ಲಿ ತುಂಬಿದ ಕೆರೆಗಳಲ್ಲಿ ನೋಡುವವರ ನೋಟಕ್ಕೆ ಹಬ್ಬವನ್ನುಂಟು ಮಾಡುತ್ತಿದ್ದ ತಾವರೆಯ ಹೂಗಳು. ಇವುಗಳಿಂದ ನಾನಂತೂ ಬಹುಪ್ರಭಾವಿತನಾಗಿ ಹೋದೆ. ಪ್ರವಾಸದ ಸಾರ್ಥಕ್ಯವನ್ನು ಈ ಸುಂದರ ದೃಶ್ಯಾವಳಿಯಿಂದ ಮಾಡಿಕೊಂಡಂತಾಯಿತೆಂದು ಮನಸ್ಸಿನಲ್ಲಿ ಭಾವಿಸಿಕೊಂಡೆ. ರಾಚಯ್ಯನವರ ಪ್ರವಾಸ ಯಶಸ್ವಿಗೊಂಡಿತೇ ಇಲ್ಲವೆ ಎಂಬುದು ನನಗೆ ಸಂಬಂಧಪಡದ ವಿಷಯ. ನಾನು ಅವರೊಡನೆ ಅಪರಿಚಿತ ದೇಶವೊಂದಕ್ಕೆ ಜೊತೆಗಾರನಾಗಿ ಹೋದವನು ಅಷ್ಟೆ. ಉಳಿದದ್ದು ರಾಚಯ್ಯನವರ ಗುರುತ್ವ, ಅವರ ಶಿಷ್ಯರ ಶಿಷ್ಯತ್ವಕ್ಕೆ ಸಂಬಂಧಿಸಿದ್ದು. ಅದಕ್ಕೂ ನನಗೂ ಸಂಬಂಧವಿಲ್ಲವೆಂದು ಕೊಂಡೆ.

ಶಿರಾಳಕೊಪ್ಪದಲ್ಲಿ ಬಂದಿಳಿದೆವು. ಅಲ್ಲಿಯೂ ನಮಗೆ ವಿಧಿಯ ಅಣಕ ಕಾಯ್ದೇ ಇತ್ತು. ಅಲ್ಲಿನ ನಮ್ಮ ರಾಚಯ್ಯನವರ ಶಿಷ್ಯನ ಹೆಸರು ಪಂಪಣ್ಣ. ಅವರ ಮನೆತನವೆಲ್ಲ ಮಲೇರಿಯಾ ಹಾವಳಿಯಿಂದ ಸತ್ತು ಕೆಟ್ಟು ಪಂಪಣ್ಣ ಹೊಲಮನೆ ಕಳೆದುಕೊಂಡು ಹೆಂಡತಿ ಸಹಿತ ಶಿರಾಳಕೊಪ್ಪ ಬಿಟ್ಟು ಹೋಗಿ ಕಪನಳ್ಳಿ ಆಶ್ರಮ ಸೇರಿಕೊಂಡು ಬಿಟ್ಟಿದ್ದಾನೆಂದು ಗೊತ್ತಾಯಿತು. ರಾಚಯ್ಯನವರು ನಿಟ್ಟುಸಿರು ಬಿಟ್ಟು ತಲೆಯ ಮೇಲೆ ಕೈಹೊತ್ತು ಕೊಂಡು ಸ್ವಲ್ಪ ಹೊತ್ತು ಕುಳಿತು ಬಿಟ್ಟರು. "ಈ ಮಠಾಧಿಪತಿಯಾಗುವುದೂ ಬೇಡ, ಮಠಕ್ಕೆ ಶಿಷ್ಯಸಂಪುತ್ತೂ ಬೇಡ. ಸಾಕು ಸಾಕಪ್ಪ, ಗುರುಶಿಷ್ಯ ಸಂಬಂಧವನ್ನುಳಿಸಿಕೊಳ್ಳಲು ನಮಗೆ ಹೆಜ್ಜೆ ಹೆಜ್ಜೆಗೂ ಉಂಟಾಗುತ್ತಿರುವ ಈ ತೊಂದರೆ ಯಾವ ವೈರಿಗೂ ಬೇಡ" ಎಂದು ಬಿಟ್ಟರು. ಆದರೂ ಅವರು ಹಟಗಾರರು.

ಕಪನಹಳ್ಳಿ ಆಶ್ರಮ ಶಿರಾಳಕೊಪ್ಪಕ್ಕೂ ಶಿಕಾರಿಪುರಕ್ಕೂ ಮಧ್ಯದಲ್ಲಿ ಕುಮದ್ವನಿ ಹೊಳೆಯ ದಂಡೆಯ ಮೇಲೆ ಹೆದ್ದಾರಿಯನ್ನು ಬಿಟ್ಟು ಸ್ವಲ್ಪ ದೂರದಲ್ಲಿ ಅರಣ್ಯ ಮಧ್ಯೆ ಇತ್ತು. ರಾಚಯ್ಯನವರು "ಎಲ್ಲ ಕಳೆದುಕೊಂಡು ಆಶ್ರಮ ಸೇರಿರುವ ಶಿಷ್ಯನನ್ನು ನೋಡಿಕೊಂಡೇ ಹೋಗಿಬಿಡೋಣ, ಆದದ್ದಾಗಲಿ" ಎಂದು ಕಪನಹಳ್ಳಿ ಆಶ್ರಮಕ್ಕೆ ಹೊರಡಿಸಿಬಿಟ್ಟರು. ಬಸ್ಸಿನಲ್ಲಿ ಸ್ವಲ್ಪದೂರ ಶಿಕಾರಿಪುರದ ಕಡೆ ಹೋಗಿ ಕಪನಹಳ್ಳಿ ಕತ್ತರಿಗೆ ಇಳಿದು ಆಶ್ರಮ ತಲುಪಿದೆವು. ಅದೊಂದು ಪುಣ್ಯಾಶ್ರಮವಾಗಿ ನಮಗೆ ಕಂಡಿತು. ಲೋಕದ ಜನಜಂಗುಳಿಯಿಂದ ದೂರವಾಗಿ ಪ್ರಶಾಂತವಾದ ಅರಣ್ಯ ಮಧ್ಯದಲ್ಲಿ ಕುಮದ್ವನೀ ಹೊಳೆಯ ದಂಡೆಯ ಮೇಲೆ ಹಾನಗಲ್ಲು ಕುಮಾರ ಸ್ವಾಮಿಗಳು ಬಾದಾಮಿ ಹತ್ತಿರದ ಶಿವಯೋಗ ಮಂದಿರ ಸ್ಥಾಪನೆಗೂ ಮೊದಲು ಸ್ಥಾಪಿಸಿದ ಆಶ್ರಮವೆಂದು ಗೊತ್ತಾಯಿತು.

ಆ ಕಾಲದಲ್ಲಿ ಅಲ್ಲಿ ವ್ಯವಸಾಯದ ಅಭಿವೃದ್ಧಿ ಸಾಧಿಸಲೋಸುಗ ಹೊಳೆಯಿಂದ ನೀರೆತ್ತಲಿಕ್ಕೆಂದು ತರಿಸಿದ ಸಾವಿರಾರು ರೂಪಾಯಿಯ ಯಂತ್ರಗಳು ಹೊಳೆಯ ದಂಡೆಯ ಮೇಲೆ ಕೆಟ್ಟು ಕುಳಿತಿದ್ದವು. ಸ್ವತಃ ಮಠದ ಶ್ರೀಗಳವರೇ ವ್ಯವಸಾಯ ಮಾಡುತ್ತಿದ್ದುದನ್ನು ಅಲ್ಲಿ ನಾನು ಕಂಡೆ. ಹಾನಗಲ್ಲು ಶ್ರೀಗಳು ತಮ್ಮ ಶಿಷ್ಯರೇ ಆದ ಇವರಿಗೆ ಯಾವ ಭಕ್ತರನ್ನು ನೀನು ಯಾಚಿಸಬೇಡ. ಅವರು ಕೊಟ್ಟರೆ ದಾಸೋಹ ಮಾಡು. ಕೊಡದಿದ್ದರೆ ಸ್ವತಃ ದುಡಿದು ಸಾಧ್ಯವಾದಷ್ಟು ದಾಸೋಹ ಮಾಡು ಎಂದು ಹೇಳಿದ್ದರಂತೆ ಅದಕ್ಕಾಗಿ ಅಲ್ಲಿನ ಶ್ರೀಗಳು ರೈತರಲ್ಲಿ ರೈತರಾಗಿ, ಸ್ವಾಮಿಗಳಲ್ಲಿ ಸ್ವಾಮಿಗಳಾಗಿದ್ದರಂತೆ. ಸ್ವಾಮಿಗಳೇ ವ್ಯವಸಾಯ ಮಾಡುವಾಗ ನಮ್ಮಂಥವರ ಪಾಡೇನು ಎನ್ನಿಸಿತು. ಅಷ್ಟೇ ಅಲ್ಲ, ವ್ಯವಸಾಯದಂಥ ಪವಿತ್ರಉದ್ಯೋಗದ ಬಗೆಗೆ ನನಗಿದ್ದ ಗೌರವ ಇಮ್ಮಡಿಗೊಂಡಿತು.

ಪ್ರಥಮತಃ ಕೆಸರುಗದ್ದೆಯಿಂದ ಆಗ ತಾನೆ ಬಂದ ಮಠದ ಶ್ರೀಗಳವರನ್ನು ಕಂಡು ನಮ್ಮ ಪೂರ್ವೋತ್ತರ ಹೇಳಿದೆವು. ರಾಚಯ್ಯನವರು "ತಮ್ಮ ಆಶ್ರಮದಲ್ಲಿರುವ ಪಂಪಣ್ಣ ನಮ್ಮ ಮಠದ ಶಿಷ್ಯಮಗ. ಅವನನ್ನು ಕಾಣಲು ಬಂದಿದ್ದೇವೆ" ಎಂದರು. ಸ್ವಾಮಿಗಳು ಯಾವುದೋ ಕೆಲಸದ ಮೇಲಿದ್ದ ಪಂಪಣ್ಣನನ್ನು ಕರೆಸಿದರು. ಎಪ್ಪತ್ತೂ ಎಪ್ಪತ್ತೈದರ ಗಡಿಯಲ್ಲಿರುವ ವೃದ್ಧ ಪಂಪಣ್ಣನನ್ನು ಅವನ ಆಗಿನ ಸ್ಥಿತಿಯನ್ನು ಕಂಡು ರಾಚಯ್ಯನವರು ಅವನಿಗೆ ತಾವು ಬಂದ ಉದ್ದೇಶ ತಿಳಿಸಿದರು. ಪಂಪಣ್ಣ ತನ್ನ ಹೆಂಡತಿಯನ್ನು ಆ ಕೂಡಲೆ ಕರೆದುಕೊಂಡು ಬಂದ. ಇಬ್ಬರೂ ರಾಚಯ್ಯನವರಿಗೆ ನಮಸ್ಕರಿಸಿ, ಅಳುವುದಕ್ಕೆ ಪ್ರಾರಂಭಿಸಿದರು. ಈ ದೃಶ್ಯ ನನಗಂತೂ ವಿಚಿತ್ರವೆನಿಸಿತು. ದುಡ್ಡು ಕೇಳಲಿಲ್ಲ, ಕಾಸು ಕೇಳಲಿಲ್ಲ. ಇವರೇಕೆ ಬಿಕ್ಕಿ ಬಿಕ್ಕಿ ಅಳಬೇಕು ಎಂಬುದು ನನ್ನ ತರ್ಕ. ರಾಚಯ್ಯನವರು ಆ ಸಾತ್ವಿಕ ದಂಪತಿಗಳ ಆಗಿನ ಸಿತಿಯನ್ನು ಕಂಡು ಮನಮರುಗಿ ಸಾಂತ್ವನಗೊಳಿಸಿ "ನಾವು ನಿಮ್ಮನ್ನು ಕೇವಲ ಕಂಡು ಹೋಗಲು ಬಂದಿದ್ದೇವೆಯೇ ವಿನಾ ಬೇರೇ ಏನೂ ಭಾವಿಸಬೇಡ ಪಂಪಣ್ಣ" ಎಂದರು. ಪಂಪಣ್ಣ ಎಷ್ಟೇ ಆಗಲಿ ಸ್ವಾಮಿಗಳ ಸಾನ್ನಿಧ್ಯದಲ್ಲಿದ್ದು ಸಂಸ್ಕಾರಗೊಂಡ ಮನಸ್ಸಿನವನಾಗಿದ್ದ. ಆದ್ದರಿಂದ ಅವನು "ಸ್ವಾಮಿ, ಅಷ್ಟು ದೂರದಿಂದ ಗುರುವೇ ಭಕ್ತನನ್ನು ಹುಡುಕಿಕೊಂಡು ಬಂದಿರುವುದನ್ನು ಕಂಡು ನನ್ನ ಮನಸ್ಸು ಬಹು ಸಂತೋಷಗೊಂಡು ಹೋಯಿತು. ನಾನೀಗ ಕಡುಬಡವ. ಇಲ್ಲಿ ಶ್ರೀಗಳವರ ಸೇವೆಯನ್ನು ನಾನು ಮಾಡಿಕೊಂಡಿದ್ದೇನೆ. ನನ್ನ ಹೆಂಡತಿ ಬಂದವರಿಗೆ ಪ್ರಸಾದ ಸಿದ್ಧಪಡಿಸಿ ಉಣಬಡಿಸುವ ಕಾಯಕ ಮಾಡುತ್ತಿದ್ದಾಳೆ. ಹೀಗೆ ಕಾಲ ಕಳೆಯುತ್ತಿರುವ ನಾನು ಈಗ ಸ್ವತಂತ್ರವಾಗಿ ಸತ್ಕಾರ ಮಾಡಿ ಗುರುಕಾಣಿಕೆ ಸಮರ್ಪಿಸುವ ಶಕ್ತಿಯನ್ನು ಕಳೆದುಕೊಂಡು ಬಿಟ್ಟದ್ದೇನೆ. ಎಂಥ ಹೊತ್ತಿನಲ್ಲಿ ನನ್ನ ಗುರುವಿನ ದರ್ಶನವಾಯತಲ್ಲಾ! ಎಂಬ ಸಂಕಟ ನನ್ನನ್ನು ಬಾಧಿಸುತ್ತಿದೆ" ಎಂದಾಗ ರಾಚಯ್ಯನವರು ಏನು ಮಾತಾಡದೆ ನಕ್ಕು ಸುಮ್ಮನಾದರು. ರಾಚಯ್ಯನವರ ಜೇಬಿನಲ್ಲಿ ಆಗ ದುಡ್ಡಿದ್ದಿದ್ದರೆ ಗುರುವೇ ಶಿಷ್ಯನಿಗೆ ಕಾಣಿಕೆ ಕೊಟ್ಟು ಉದ್ಧಾರವಾಗೆಂದು ಹೇಳಿ ಬಿಡುತ್ತಿದ್ದರೋ ಏನೋ! ಅಂಥ ಸ್ಥಿತಿಯಲ್ಲಿ ಅವರು ಇರಲಿಲ್ಲ.

ಆಮೇಲೆ ಎಲ್ಲರೂ ಸ್ನಾನಮಾಡಿದೆವು. ರಾಚಯ್ಯನವರು ಶ್ರೀಗಳವರೊಡನೆ ಪೂಜೆಗೆ ಹೋಗಿ ಅಲ್ಲಿಯೇ ಪ್ರಸಾದ ಸ್ವೀಕರಿಸಿದರು. ಪಂಪಣ್ಣ ಗುರು ಬಂದಿರುವನೆಂದೋ ಏನೋ ಸಜ್ಜಿಗೆಯ ಪಾಯಸ ಇತ್ಯಾದಿ ವಿಶೇಷ ಪ್ರಸಾದವನ್ನು ಸಿದ್ಧಮಾಡಿದ್ದರು. ಆ ದಿನ ರಾತ್ರಿ ಅಲ್ಲಿ ಉಳಿದೆವು. ಮರುದಿನ ಅಲ್ಲಿಂದ ಹೊರಡುವ ಸಿದ್ಧತೆ ಮಾಡಿದೆವು. ಹೊರಡುವಾಗ ಪಂಪಣ್ಣ ಎರಡು ರೂಪಾಯ ಕಾಣಿಕೆ ಕೊಟ್ಟ. ರಾಚಯ್ಯನವರು ಬೇಡವೆಂದು ಹಿಂದಿರುಗಿಸಲು ಮಾಡಿದ ಪ್ರಯತ್ನ ವಿಫಲವಾಯಿತು. ಅದೇ ಸಮಯದಲ್ಲಿ ಮಠದ ಕಾರ್ಯದರ್ಶಿಯ ರೀತಿಯಲ್ಲಿ ಕೆಲಸಮಾಡಿಕೊಂಡಿದ್ದ ಇನ್ನೊಬ್ಬ ವೃದ್ಧ, ಸಿದ್ಧಲಿಂಗಪ್ಪನೋ ಏನೋ ಹೆಸರು ಸರಿಯಾಗಿ ಜ್ಞಾಪಕವಿಲ್ಲ. ಅವರೊಡನೆ ಸ್ವಲ್ಪ ಹೊತ್ತು ಸಂಭಾಷಣೆಗೆ ತೊಡಗಿದೆವು. "ಹಿಂದೆ ಈ ಭಾಗ ಕೆಲಸಕ್ಕೆ ಬಾರದ ಹುಲ್ಲುಗಾವಲು ಕಾಡಾಗಿತ್ತು. ಇಲ್ಲಿಗೆ ಇನ್ನು ಕೆಲವೇ ವರ್ಷಗಳಲ್ಲಿ ಕಾಲುವೆ ಬಂದು ಎಲ್ಲ ಭೂಮಿ ನೀರಾವರಿ ಆಗುತ್ತದೆ. ನಿಮಗೆ ಬೇಕಾದರೆ ಇನ್ನೂರು ಮುನ್ನೂರು ಎಕರೆ ಭೂಮಿ ಕೊಡಿಸುತ್ತೇನೆ" ಎಂದ. ರಾಚಯ್ಯನವರು "ಇಲ್ಲಿ ಭೂಮಿ ಮಾಡಿ ನಾವು ಮಾಡುವುದೇನು?" ಎಂದು ಬಿಟ್ಟರು. ನನಗೆ ಭೂಮಿ ಪುಕ್ಕಟೆಯಾಗಿ ಸಿಗುವುದಾದರೆ ನಾನೇ ಇಲ್ಲಿ ಭೂಮಿ ಹಿಡಿಯಬಾರದೆಂಬ ಬಯಕೆ. ಆದರೂ ಆಗಿನ ನನ್ನ ಸ್ಥಿತಿಗೆ ಶಕ್ತಿಗೆ ಎಲ್ಲವೂ

ಅಸಾಧ್ಯವೆನಿಸಿ ಆ ವಿಚಾರವನ್ನೇ ಮರೆತು ಬಿಟ್ಟೆ. ಆಗ ಅಲ್ಲಿ ಭೂಮಿಯನ್ನು ಉತ್ತು ಬಿತ್ತಿ ಬೆಳೆಯುವ ಸಾಮರ್ಥ್ಯವನ್ನೇ ರೋಗರುಜಿನಾದಿಗಳಿಂದ ಮನುಷ್ಯರು ಕಳೆದುಕೊಂಡಿದ್ದರು. ಮಲೇರಿಯಾ ಮಲೆನಾಡನ್ನೆಲ್ಲ ಆಕ್ರಮಿಸಿ ಜನದ ದೇಹಸತ್ವವನ್ನು, ಮನದ ಉತ್ಸಾಹಶಕ್ತಿಯನ್ನು ಹೀರಿ ಹಿಪ್ಪೆಮಾಡಿಬಿಟ್ಟಿತು.

## ಹಾವೇರಿಗೆ ನೇರವಾಗಿ ಬಂದೆವು

ಕಪನಹಳ್ಳಿ ಆಶ್ರಮದಿಂದ ನಾವು ಶಿರಾಳಕೊಪ್ಪಕ್ಕೆ ಬಂದು ಹಾವೇರಿಗೆ ಬಸ್ಸಿನಲ್ಲಿ ಬಂದು ಬಿಟ್ಟೆವು. ರಾಚಯ್ಯನವರಿಗೆ ಇನ್ನೊಂದು ಸಲ ಶಿಷ್ಯರು ಗಿಷ್ಯರು ಎನ್ನಲಾರೆನೆನ್ನುವಷ್ಟು ಬೇಸರ ಬಂದು ಹೋಯಿತು. ಅಷ್ಟು ಹೊತ್ತಿಗೆ ಅವರಲ್ಲಿದ್ದ ಬಂಡವಾಳವೆಲ್ಲ ಕರಗಿ ನಮ್ಮೂರಿಗೆ ಹೋಗಿ ಸೇರುವಷ್ಟು ಹಣ ಮಾತ್ರ ಉಳಿದಿತ್ತು. ಹಾವೇರಿಯಲ್ಲಿ ಹುಕ್ಕೇರಿಮಠದ ಶ್ರೀಗಳ ದರ್ಶನ ಮಾಡಬೇಕೆಂದು ರಾಚಯ್ಯನವರು ಅಪೇಕ್ಷಿಸಿದರು. ಹುಕ್ಕೇರಿಮಠದ ಶ್ರೀಗಳ ಪೂರ್ವಾಶ್ರಮದ ಊರು ಹುಲಗಬಾಳಿಯ ಸಮೀಪದ ಸಪ್ತಸಾಗರವಂತೆ. ಸಪ್ತಸಾಗರದಲ್ಲಿನ ಶಿವಬಸವಸ್ವಾಮಿಗಳ ಪೂರ್ವಾಶ್ರಮದ ಮಠಕ್ಕೂ ಹುಲಗಬಾಳಿ ಮಠಕ್ಕೂ ಸಂಬಂಧವಂತೆ. ಈಗಲೇ ನನಗೆ ಈ ವಿಷಯ ತಿಳಿದದ್ದು. ಹಿಂದೆ ಶಿವಬಸವಸ್ವಾಮಿಗಳು ನಿಮ್ಮ ಗುರುಗಳಾರೆಂದು ನನ್ನನ್ನು ಪ್ರಶ್ನಿಸಿದಾಗ ನಾನು ಹುಲಗಬಾಳಿ ಹಿರೇಮಠದ ಅದೃಶ್ಯಪ್ಪಗಳು ಎಂದಿದ್ದೆ. ಆಗ ಸ್ವಾಮಿಗಳು ನಗುತ್ತ "ನಾವೂ ನೀವು ಬೀಗರೇ ಆಗಬೇಕೋ ಚನ್ನಾ" ಎಂದು ಹೇಳಿದುದರ ಅರ್ಥ ಈಗ ಸ್ಪಷ್ಟವಾದಂತಾಯಿತು. ನಾನು ರಾಚಯ್ಯನವರು ಸ್ವಾಮಿಗಳನ್ನು ಕಂಡಾಗ ಆ ಕೂಡಲೇ "ಇವರು ಹುಲಬಾಳಿ ಹಿರೇಮಠದ ಅದೃಶ್ಯಪ್ಪನವರ ವಂಶಸ್ಥರು" ಎಂದೆ. ರಾಚಯ್ಯನವರೂ ಸ್ವಾಮಿಗಳವರಿಗೆ ತಮ್ಮ ಪೂರ್ವೋತ್ತರ ಹೇಳಿದರು. ಸ್ವಾಮಿಗಳು "ಹೌದು, ನೀವು ಚಿಕ್ಕವರಿದ್ದಾಗ ಒಮ್ಮೆ ಅಥಣಿಯಲ್ಲಿ ನಮ್ಮ ಹತ್ತಿರ ಕೆಲವು ದಿನ ಇದ್ದಿರಿ ಎಂದು" ಯಾವುದೋ ಪ್ರಸಂಗವನ್ನು ನೆನಪಿಸಿಕೊಂಡು ಹೇಳಿ, ನಮ್ಮ ಚನ್ನನೂ ನಿಮ್ಮ ಶಿಷ್ಯನಂತೆ ಎಂದು ನಗುತ್ತ ನನ್ನ ಕಡೆ ನೋಡಿ ಹೇಳಿದರು. ಅಲ್ಲಿ ಒಂದು ದಿನ ಇದ್ದು ಮರುದಿನ ಶ್ರೀಗಳವರ ಆಶೀರ್ವಾದ ಪಡೆದು ನಮ್ಮ ಊರಿಗೆ ಬಂದು ನಾನು ಈ ಪ್ರವಾಸದ ಪ್ರಯಾಸದಿಂದ ಐದಾರು ದಿನ ಮಲಗಿಬಿಟ್ಟೆ. ರಾಚಯ್ಯನವರೂ ನಾಲ್ಕಾರುದಿನ ಸ್ವಾಸ್ಥ್ಯ ಕಳೆದುಕೊಂಡು ನಮ್ಮ ಊರಲ್ಲಿ ಮಲಗಿ ಉಪಚಾರ ಹೊಂದಬೇಕಾಯಿತು. ಊರಿನ ಶಿಷ್ಯರೆದುರು ತಮ್ಮ ಪ್ರವಾಸದ ಕಥೆ ಹೇಳಿ ನಕ್ಕದ್ದೂ ನಕ್ಕದ್ದೇ. "ಇನ್ನು ಮೈಸೂರ ಸೀಮೆ ಶಿಷ್ಯರ ಕಡೆ ತಲೆಹಾಕಿ ಮಲಗುವುದಿಲ್ಲವಪ್ಪಾ! ಸಾಕು ಇಂಥ ಶಿಷ್ಯರ ಸಹವಾಸ" ಎಂದು ಬಿಟ್ಟರು.

## ನಿಡುಬಯಕೆ ಕೈಗೂಡಿತು : ಹಿರೇಕಾಂಶಿ ಶಾಲಾಮಾಸ್ತರ ಆದೆ

ಎಂಟು ಹತ್ತು ದಿನಗಳ ಮೈಸೂರು ಪ್ರವಾಸದ ನಂತರ ನಮ್ಮೂರಿಗೆ ಬಂದ ಮೇಲೆ ಪುನಃ ಬಸವಣ್ಣೆಪ್ಪ ಮಾಸ್ತರರ ಶಾಲೆಗೆ ಹೋಗತೊಡಗಿದೆ. ಅವರು ರಜಾ ತಕ್ಕೊಳ್ಳಲೇ ಇಲ್ಲ, ನನಗೆ ಬದಲಿ ಶಾಲಾಮಾಸ್ತರನ ಕೆಲಸ ಸಿಗಲಿಲ್ಲ. ಮೂರು ನಾಲ್ಕು ತಿಂಗಳು ನನ್ನನ್ನು ದುಡಿಯ ಹಚ್ಚಿ ತಾವು ಮಾತ್ರ ವಿರಾಮವಾಗಿ ಹೊಲ ಮನೆ ತಿರುಗಿಕೊಂಡು ಇದ್ದು ಬಿಟ್ಟರು. ಈ ದುಡಿಮೆಗೆ ಅವರು ನನಗೆ ಒಂದು ರೂಪಾಯಿ ಹನ್ನೆರಡಾಣೆಯಲ್ಲಿ ಒಂದು ಕೋಟು ಹೊಲಿಸಿ ಕೊಟ್ಟರು. ಅದನ್ನು ನಾನು ಹಾಕಿಕೊಂಡು ಜಬರ್‌ದಸ್ತಾಗಿ ರುಮಾಲು ಸುತ್ತಿ ಪಕ್ಕಾ ಮಾಸ್ತರರನಂತೆ

ಕಾಣತೊಡಗಿದೆ. ಆದರೆ ಮಾಸ್ತರ ಮಾತ್ರ ಇನ್ನು ಆಗಲೇ ಇಲ್ಲ. ಕೊನೆಗೊಮ್ಮೆ ಅವರು ತಮ್ಮ ಹಕ್ಕಿನ ರಜಾ ಹಾಕಿ ನನ್ನ ಕಡೆಗೆ ಚಾರ್ಜು ಕೊಟ್ಟ ಹಾಗೆ ರಿಕಾರ್ಡುಮಾಡಿ ಶಾಲೆಯ ಪೂರ್ಣ ಜವಾಬ್ದಾರಿ ವಹಿಸಿದರು. ಆದರೆ ಜಿಲ್ಲಾ ಬೋರ್ಡಿನವರು ಇಪ್ಪತ್ತು ಇಪ್ಪತ್ತೆರಡು ದಿನಗಳಲ್ಲಿ ಪುಟ್ಟಪ್ಪ ಮಲ್ಲಪ್ಪ ಪಾಟೀಲ ಎಂಬ ನನ್ನ ಏಳನೇ ತರಗತಿಯಲ್ಲಿನ ಸಹಾಧ್ಯಾಯಿಯನ್ನು ಅಲ್ಲಿಗೆ ಬದಲಿ ಉಪಾಧ್ಯಾಯನನ್ನಾಗಿ ಕಳಿಸಿದರು. ಅವನು ಬಂದು ನನ್ನಿಂದ ಚಾರ್ಜನ್ನೆಲ್ಲ ಪಡೆದು ನನ್ನನ್ನು ಅಲ್ಲಿಂದ ಓಡಿಸಿಬಿಟ್ಟ. ಆದರೂ ನಾನು ವಿಮುಖನಾಗಲಿಲ್ಲ. ಎಲ್ಲಿಯಾದರೂ ಈ ಕೆಲಸ ಪಡೆಯಲು ತೀರ್ಮಾನಿಸಿದೆ. ನಾನು ನನ್ನ ಜೀವನದಲ್ಲಿ ಆರಿಸಿಕೊಂಡ ವೃತ್ತಿಗಳು ಎರಡೇ ಎರಡು; ಒಂದು ವ್ಯವಸಾಯ. ಇದಕ್ಕೆ ಪ್ರಥಮ ಪ್ರಾಶಸ್ತ್ಯ. ಆದರೆ ಈ ವೃತ್ತಿಗೆ ಬೇಕಾದ ಭೂಮಿ ಎತ್ತು, ಚಕ್ಕಡಿ ಮುಂತಾದ ಪರಿಕರಗಳ ಅಭಾವದಿಂದ ಅದರ ಆಸೆ ತೊರೆಯಲೇಬೇಕಾಯಿತು. ಬೇಸರವಿಲ್ಲದೆ ಕೆಲಸ ಮಾಡುವ ಉತ್ಸಾಹೀ ಮನುಷ್ಯನಾದ ನನಗೆ ಹಿಡಿಸಿದ ಎರಡನೇ ವೃತ್ತಿ ಉಪಾಧ್ಯಾಯ. ಆ ವೃತ್ತಿಯನ್ನು ದೊರಕಿಸಿಕೊಂಡು ಆಲಸ್ಯವಿಲ್ಲದೆ ದುಡಿದು ಯಶಸ್ಸನ್ನು ಸಾಧಿಸಿಯೇ ತೀರಬೇಕೆಂಬ ದೃಢಸಂಕಲ್ಪ ಮಾಡಿದೆ. ನನ್ನ ಎಲ್ಲ ಪ್ರತಿಭೆ ಉತ್ಸಾಹ, ಶಕ್ತಿಯನ್ನು ವಿನಿಯೋಗಿಸಿ ಆದರ್ಶ ಉಪಾಧ್ಯಾಯನಾಗೇ ತೀರಬೇಕೆಂಬ ಪ್ರಬಲಸಂಕಲ್ಪಭರಿತನಾಗಿಬಿಟ್ಟೆ. ಸಂಬಳ ಎಷ್ಟೇ ಆಗಲಿ, ಚೆನ್ನಾಗಿ ಕೆಲಸ ಮಾಡಿ ಊರವರನ್ನು ಒಲಿಸಿ ಅವರಿಂದ ಲಾಭ ಮಾಡಿಕೊಂಡು ಸಾಧಿಸಬೇಕೆಂದಿದ್ದನ್ನು ಸಾಧಿಸಲು ದೃಢಸಂಕಲ್ಪದಿ ಮಾಡಿದ ನನಗೆ ಜಯ ಸಿಕ್ಕಿತೆಂದು ಆತ್ಮತೃಪ್ತಿಯಿಂದ ಈಗ ಹೇಳುತ್ತಿದ್ದೇನೆ. ಶ್ರದ್ಧಾವಾನ್‌ಲಭತೇ ಜ್ಞಾನಂ ಎಂಬ ಮಾತು ನನಗೆ ಈಗ ಬಹಳ ಹಿಡಿಸಿದೆ. ಬೆಲೆಯುಳ್ಳ ಮಾತು ಅದು.

ಬಹು ಬವಣೆಯನ್ನು ಅನುಭವಿಸಿದ ನನಗೆ ಬಹುವ್ಯಥೆಯಾಗಿ ಕೊನೆಗೊಮ್ಮೆ ಧೈರ್ಯಮಾಡಿ ನಮ್ಮ ತಾಲೂಕಿನ ಪ್ರಸಿದ್ಧ ಕಾಂಗ್ರೆಸ್ ಕಾರ್ಯಕರ್ತನೆಂದು ಹೆಸರಾಗಿದ್ದ ಸಿಂಧೂರ ಸಿದ್ಧಪ್ಪನವರನ್ನು ಕಂಡು ಅವರ ಮೂಲಕ ಯಾವುದಾದರೂ ಹಳ್ಳಿಯಲ್ಲಿ ಒಂದು ಶಾಲೆಯನ್ನು ಹಾಕಿಯೇ ತೀರಬೇಕೆಂದು ಹಟಹಿಡಿದು ಹಾನಗಲ್ಲಿಗೆ ಸಮೀಪದಲ್ಲೇ ಇದ್ದ ಸಿದ್ಧಪ್ಪನವರ ಊರು ಸುರಳೇಶ್ವರಕ್ಕೆ ನಡೆದುಬಿಟ್ಟೆ. ನಾನು ಹೋದಾಗ ಸಿದ್ಧಪ್ಪನವರು ತಮ್ಮ ಆಲೆಮನೆಯಲ್ಲಿ ಇದ್ದರು. ಅವರ ಆಲೆಮನೆ ನಮ್ಮ ತಾಲೂಕಿನಲ್ಲೆಲ್ಲ ಪ್ರಸಿದ್ಧವಾದದ್ದು. ಮಿಶನ್ನಿನಿಂದ ಗಾಣ ತಿರುಗಿಸಿ ಕಬ್ಬು ಅರೆಯುತ್ತಿದ್ದವರು ಆಗ ಅವರೊಬ್ಬರೇ. ದೊಡ್ಡ ಜಮೀನುದಾರರಾದ ಅವರ ಕಬ್ಬಿನ ತೋಟ ಇಪ್ಪತ್ತು ಮೂವತ್ತು ಎಕರೆಗಳಷ್ಟಿತ್ತು. ಆದ್ದರಿಂದ ಆಧುನಿಕತೆ ಅವರ ಆಲೆಮನೆ ಪ್ರವೇಶಮಾಡಿತ್ತು. ಹತ್ತಾರು ಕೊಪ್ಪರಿಗೆಗಳಲ್ಲಿ ಏಕಕಾಲದಲ್ಲಿ ಬೆಲ್ಲ ತಯಾರಾಗುವ ಏರ್ಪಾಟು ಅವರದಾಗಿತ್ತು. ಸಿದ್ಧಪ್ಪನವರ ಮನೆತನ ಹುಟ್ಟು ವ್ಯವಸಾಯಗಾರರ ಮನೆ ಸುಸಂಸ್ಕೃತ ಮನೆತನ. ಅವರು ನನ್ನನ್ನು ಕಂಡು ಯಾರ ಊರು? ಹೆಸರೇನು? ಇತ್ಯಾದಿ ಪ್ರಶ್ನಿಸಿ ಉತ್ತರ ಪಡೆದು ಬಂದ ಕಾರಣವನ್ನು ಕೇಳಿದರು. ನಾನು "ತಮ್ಮ ಪತ್ತಿನಲ್ಲಿ ಎಲ್ಲಿಯಾದರೂ ಒಂದು ಒಳ್ಳೆಯ ಊರಿನಲ್ಲಿ ಗಾವಠಿ ಶಾಲೆ ಹಾಕಿಕೊಂಡಿರಲು ಅವಕಾಶ ಮಾಡಿಕೊಡಿ" ಎಂದು ಕೇಳಿಕೊಂಡೆ. ಆಗವರು ಸ್ವಲ್ಪ ಯೋಚಿಸಿ "ಇಲ್ಲಿಂದ ಇಪ್ಪತ್ತು ಮೈಲಿನ ಮೇಲೆ ಸಂತೆ ಹೊಸೂರು ಅಂತಾ ಇದೆ. ಅಲ್ಲಿ ಗದಿಗೆಪ್ಪಸೆಟ್ಟರು ಎನ್ನುವ ಪ್ರಮುಖ ವ್ಯಾಪಾರಿಯಿದ್ದಾರೆ. ಅವರ ಊರಿಗೆ ಒಬ್ಬರು ಮಾಸ್ತರರು ಬೇಕಾಗಿದ್ದಾರೆಂದು ತಿಳಿಸಿದ್ದರು. ನೀನು ಅಲ್ಲಿಗೆ ಹೋಗುತ್ತೇನೆ ಎಂದರೆ ಚೀಟಿ ಬರೆದು ಕಳಿಸಿಕೊಡುತ್ತೇನೆ" ಎಂದರು. ನಾನು ಉತ್ಸಾಹದಿಂದ ಹೋಗುತ್ತೇನೆ. ಎಷ್ಟು ದೂರವಾದರೂ

ಚಿಂತೆಯಿಲ್ಲ. ಎಂಥ ಮಲೆನಾಡಾದರೂ ಭಯವಿಲ್ಲ ಎಂದೆ.

ಅಂದಿನ ರಾತ್ರಿ ತಮ್ಮ ಮನೆಯಲ್ಲಿಯೇ ನನಗೆ ಆದರಾತಿಥ್ಯ ಮಾಡಿದರು. ದೊಡ್ಡವರ ಮನಸ್ಸು ದೊಡ್ಡದು ಎಂದು ನನಗೆ ನಾನೇ ಅಂದುಕೊಂಡೆ. ಶ್ರೀಮಂತರ ಮನೆಯ ಆದರಾತಿಥ್ಯವನ್ನು ನಾನು ಕಂಡವನೇ ಅಲ್ಲ. ಅವರು ಆಗರ್ಭ ಶ್ರೀಮಂತರು. ಆದರೂ ನನ್ನನ್ನು ಉದಾಸೀನದಿಂದ ಕಾಣಲಿಲ್ಲ. ಮುಖಮಾರ್ಜನಕ್ಕೆ ಬಿಸಿನೀರು, ಬಿಸಿ ಬಿಸಿಯಾದ ಸೊಗಸಾದ ಭೋಜನ. ಮಲಗಲು ಹಾಸಿಗೆ ಹೊದಿಕೆ. ಬೆಳಿಗ್ಗೆ ಮುಖಮಾರ್ಜನವಾದ ಮೇಲೆ ಚಹಾ... ಎಲ್ಲಾ ಸೇವೆ ನಡೆದು ಹೋಯಿತು. 'ಲೋಕದಲ್ಲಿ ನನಗೂ ಒಂದು ಬೆಲೆ, ಸ್ಥಾನಮಾನ ಇದೆಯಲ್ಲಾ! ಎಂಬ ಆತ್ಮ ಪ್ರತ್ಯಯ ಮೂಡಿತು. ಉಪಾಧ್ಯಾಯನೆಂಬ ನಾಮಫಲಕ ಹಾಕಿಕೊಳ್ಳಲು ಸಿದ್ಧನಾದವನಿಗೇ ಇಷ್ಟೊಂದು ಆದರಾತಿಥ್ಯ ನಡೆದು ಹೋದ ಮೇಲೆ ಉಪಾಧ್ಯಾಯನೆಂಬ ಬೋರ್ಡ್ ಹಾಕಿಕೊಂಡ ಮೇಲೆ ಇನ್ನೆಷ್ಟು ಆತಿಥ್ಯಗಳಾಗಲಿಕ್ಕಿಲ್ಲ ಎಂಬ ಒಂದು ವಿಚಾರವೀಚಿ ಮನದಲ್ಲಿ ಮಿಂಚಿ ಮಾಯವಾಯಿತು. ನಾನು ಉಪಾಧ್ಯಾಯನೆಂದು ಅಧಿಕೃತವಾಗಿ ನೇಮಕವಾಗದಿದ್ದರೂ ನಮ್ಮೂರ ಬಸವಣ್ಣೆಪ್ಪ ಮಾಸ್ತರರ ಶಾಲೆಯಲ್ಲಿ ಹಾಗೂ ಹೀಗೂ 2-3 ವರ್ಷ ಕೆಲಸ ಮಾಡಿದ ಅನುಭವ ಇತ್ತಷ್ಟೆ. ಈ ವೃತ್ತಿ ನನಗೆ ಬಹಳ ಹಿಡಿಸಿಬಿಟ್ಟಿತು. ಈ ವೃತ್ತಿಯಲ್ಲೇ ಬಾಳು ಸವೆಸಬೇಕೆಂದು ಸಂಕಲ್ಪಸಿಕೊಂಡು ಬಿಟ್ಟೆ.

ಅವರು ಕೊಟ್ಟ ಚೀಟಿಯನ್ನು ಪಡೆದು ಸುರಳೇಶ್ವರದಿಂದ ಆಲೂರಿಗೆ ಬಂದು, ಆಲೂರಿಂದ ಸಂತೆ ಹೊಸೂರು ದಾರಿ ಹಿಡಿದೆ. ರಾಜಮಾರ್ಗದಿಂದ ಹೋದರೆ ಬಹಳಸುತ್ತಾಗಿ ಹದಿನೈದು ಇಪ್ಪತ್ತು ಮೈಲು ದೂರವಾಗುವುದೆಂದು ನೇರವಾಗಿ ಬಾಳೂರು, ಮಾಕೆಪ್ಪ ಶಿರಗೋಡು ಮಾರ್ಗವಾಗಿ ಹೋದರೆ ನಾಲ್ಕೈದು ಮೈಲು ಕಡಿಮೆಯಾಗುವುದೆಂದು ನನಗೆ ಕೆಲವರು ಮಾರ್ಗದರ್ಶನ ಮಾಡಿದರು. ಅವರ ಮಾತಿನಂತೆ ಬಾಳೂರು ದಾರಿಹಿಡಿದೆ. ಈ ಮೊದಲು ನಾನು ಬಸ್ಸಿನಲ್ಲಿ ಕುಳಿತು ದೂರದಲ್ಲಿ ಅರಣ್ಯವನ್ನು ಕಂಡಿದ್ದೆನೇ ವಿನಾ ಅರಣ್ಯವನ್ನು ಹೊಕ್ಕು ಓಡಾಡಿದವನಲ್ಲ. ಆಲೂರು ದೊಡ್ಡಸಂತೆಯಾಗುವ ಪೇಟೆ ಪಟ್ಟಣ. ನನಗೆ ತುಂಬಾ ಪರಿಚಿತವಾದದ್ದೇ. ಆ ಊರು ಬಿಟ್ಟ ಮೇಲೆ ಸಿಗುತ್ತಿದ್ದ ಊರೆಲ್ಲ ಹಾಳೂರುಗಳೇ ಆಗಿ ಕಂಡವು. ಹಾಗೆ ಮೊದಲು ಕಂಡ ಊರೇ ಬಾಳೂರು. ಅದೊಂದು ಹಾಳುಕೊಂಪೆ. ಎಲ್ಲೆಲ್ಲೂ ಬಿದ್ದ, ಬೀಳಲಿರುವ, ಬಿದ್ದು ಎಷ್ಟೋ ವರ್ಷಗಳಾಗಿ ಬರೀ ಬೀಳು ಗೋಡೆ ಉಳಿದಿರುವ ಅವಶೇಷಗಳು. ಅವುಗಳ ಮಧ್ಯೆ ಎಲ್ಲೆಲ್ಲಿಂದಲೋ ಬಂದು ಗುಡಿಸಲು ಹಾಕಿಕೊಂಡು ವ್ಯವಸಾಯವೃತ್ತಿ ಕೈಗೊಂಡಿರುವ ಅನಾರೋಗ್ಯಕರರಾದ ಜನಗಳಿಂದ ತುಂಬಿದ ನಾಲ್ಕಾರು ಒಕ್ಕಲುಗಳು. ಹಾಳಾಗಿ ಉಳಿದ ನಾಲ್ಕಾರು ಪ್ರತಿಷ್ಠಿತ ಮನೆತನಗಳು, ಒಂದು ನಿಸ್ತೇಜಗೊಂಡು ಜೀವಹಿಡಿದು ಕೊಂಡಿದ್ದ ವೀರಶೈವ ಮಠ, ಮಠದಲ್ಲೊಬ್ಬರು ನಿಸ್ಸಹಾಯಕರಾದ ಸ್ವಾಮಿಗಳು ಇಷ್ಟನ್ನು ಬಿಟ್ಟರೆ ಊರಲ್ಲಿ ಇನ್ನೇನೂ ಇರಲಿಲ್ಲ. ಬಹುಶಃ ಅದು ಬಹುದೊಡ್ಡ ಊರೆಂದು ನನಗೆ ಭಾಸವಾದದ್ದು ಪಳೆಯುಳಿಕೆಯ ಅನೇಕ ಅವಶೇಷಗಳಿಂದ ಅಲ್ಲಲ್ಲಿ ನಟ್ಟ ಕಲ್ಲುಗಳು, ಅವುಗಳ ಮೇಲಿನ ಬರವಣಿಗೆ - ಇವು ಆ ಊರಿನ ಹಳೇ ಇತಿಹಾಸ ಹೇಳುತ್ತಿದ್ದವು. ಏಕೆ ಈ ಊರುಗಳೆಲ್ಲ ಹಾಳಾಗಿವೆ ಎಂದು ಚಿಂತಿಸುತ್ತ ಮಾಕೊಪ್ಪದ ದಾರಿಯನ್ನು ಕಂಡವರಿಂದ ಕೇಳಿಕೊಂಡು ನಡೆದೆ.

## ಮಲೆನಾಡ ಹಳ್ಳಿಗಳು ಹಾಳಾದದ್ದು ಏಕೆ?

ದೊಡ್ಡಕೆರೆ ತುಂಬಿ ತುಳುಕುತ್ತಿತ್ತು. ಆ ಕೆರೆಯ ಏರಿಯ ಮೇಲೊಂದು ದೊಡ್ಡ ಬೂರುಗದ ಮರ ನೋಡಿ ಪ್ರಭಾವಿತನಾದೆ. ನಾನು ಪಠ್ಯಪುಸ್ತಕದಲ್ಲಿ ಓದಿದ ಬಾಣನ ಕಾದಂಬರಿಯ ಬೂರುಗದ ಮರದ ವರ್ಣನೆ ಥಟ್ಟನೆ ಜ್ಞಾಪಕಕ್ಕೆ ಬಂತು. ಮುಂದೆ ಸಾಗಿದರೆ ಅರಣ್ಯದ ಅಂಚಿನಲ್ಲಿ ಹಾಳಾಗಿ ನಾಲ್ಕಾರು ಮನೆ ಉಳಿದಿರುವ ಮಾಕೊಪ್ಪ ಸಿಕ್ಕಿತು. ಮುಂದೆ ದಟ್ಟವಾದ ಅರಣ್ಯ. ಅರಣ್ಯದಲ್ಲಿ ಹಾಯ್ದು ನಾನು ಶಿರಗೋಡು ಮೂಲಕ ಹೊಸೂರಿಗೆ ಹೋಗಬೇಕಾಗಿತ್ತು. ಮಾಕೊಪ್ಪದಲ್ಲಿ ರಸ್ತೆಯ ಬದಿಗೆ ಅರ್ಧಬಿದ್ದು ಅರ್ಧ ಉಳಿದುಕೊಂಡಿದ್ದ ಮನೆಯ ಹತ್ತಿರ ದಾರಿ ಕೇಳುವುದಕ್ಕೆ ಕಟ್ಟೆಯ ಮೇಲೆ ಕುಳಿತ ವಯಸ್ಕನೂ ನಿಸ್ತೇಜನೂ ರೋಗದಿಂದ ಕೂಡಿದವನೂ ಹೊಟ್ಟೆಯ ಭಾರದಿಂದ ನರಳುತ್ತಿರುವವನೂ ಆದ ವ್ಯಕ್ತಿಯನ್ನು ಕಂಡು ಮಾತನಾಡಿಸಿದೆ. ಆತ ಕರೆದು ಕುಳ್ಳಿರಿಸಿಕೊಂಡು ನನ್ನ ಊರು, ಹೆಸರು ಮೊದಲಾದ ಪೂರ್ವೋತ್ತರ ವಿಚಾರಿಸಿ ಆತ್ಮೀಯತೆ ತೋರಿದ. ನನಗೂ ಅತನೊಡನೆ ಮಾತನಾಡಿ ನನ್ನ ಪ್ರಯಾಣದ ಆಯಾಸ ಪರಿಹಾರ ಮಾಡಿಕೊಳ್ಳಬೇಕೆನಿಸಿತು. ನನ್ನ ಕುತೂಹಲ ಕೆರಳಿತು. ಮಲೆನಾಡಿನಲ್ಲಿ ನೋಡಿದಲ್ಲೆಲ್ಲ ಹಾಳುಹಳ್ಳಿಗಳೇ ಸಿಗುತ್ತವಲ್ಲ ಇವು ಹಾಳಾದದ್ದೇಕೆ? ಎಂದು ಪ್ರಶ್ನಿಸಿದೆ. ಆತ ನಿಟ್ಟುಸಿರು ಬಿಟ್ಟು "ತಮ್ಮ, ನಮ್ಮನ್ಯಾರು ಕೇಳಬೇಕಪಾ, ನೋಡು. ಹದಿನೇಳು ಹದಿನೆಂಟು ವರ್ಷದ ಹಿಂದೆ ಗುದ್ದವ್ವನ ಬ್ಯಾನೆಬಂತು. 1918-19 ನೆಯ ಇಸ್ವಿಯಲ್ಲಿ ಸಾಮಾನ್ಯವಾಗಿ ಭಾರತದಲ್ಲೆಲ್ಲ ಹರಡಿ ಭಾರಿಗದ್ದಲ ಮಾಡಿ, ಬಹುಜನರನ್ನು ಆಹುತಿ ತೆಗೆದುಕೊಂಡ ಇನ್‌ಫ್ಲೂಯೆಂಜಾ ಎಂಬ ರೋಗ ದೀಪಕ್ಕೆ ಹುಳು ಬಿದ್ದು ಚಟಾ ಪಟಾ ಒದ್ದಾಡಿ ಸತ್ತಂಗ ಜನ ಸತ್ರು. ಒಂದೊಂದೆ ಕುಣ್ಯಾಗ ಎರಡು ಮೂರು ಜನಾನ ಹುಗ್ದೊ. ಆವಾಗ ನಮಗ ಒಳ್ಳೆಪ್ರಾಯ. ಕಣ್ಣಾರ ಆ ಬ್ಯಾನಿ ಹಾವಳಿ ಕಂಡ್ವಿ. ಅದರಾಗಿಂದ ಪಾರಾಗಿ ಉಳಿದವ ನಾನು. ಆಮೇಲೆ ನಾಲ್ಕೈದು ವರ್ಷಕ್ಕೆ ಭಾರಿ ಪ್ಲೇಗು ಬಂತು. ಆಗ ನಮ್ಮ ಮಲೆನಾಡ ಹಳ್ಳಿ ಜನ ಸತ್ತು ಕೆಟ್ಟು ಹೋದ್ರು. ಆಮೇಲೆ ಇನ್ನೊಂದು ದೊಡ್ಡ ರೋಗ - ಕಾಲರಾ ಬಂತು ಮಾರಾಯಾ! ಅಬ್ಬಾ! ಅದನ್ನ ನೆನ್ಸಿಕೊಂಡ್ರೆ ಮೈ ನಡುಗತೈತಿ. ಆವಾಗ ಎಷ್ಟೋ ಮನಿಗಳು ಕದಾ ಕಟ್ಟಿದ್ವು. ಆಮೇಲೆ ಬಂತ್ನೋಡು ಈ ಚಳಿಜ್ವರಾ. ಈ ಚಳಿಜ್ವರದಾಗ ನಾವು ಸತ್ತು ಸುಣ್ಣ ಅಗಿ ಹೋಗೇವೆಪಾ. ಬೇಗನ ಸಾಯಂಗರಾ ಇಲ್ಲ! ಬದ್ಕಂಗರಾ ಇಲ್ಲ ಈ ರೋಗದಾಗ. ನೋಡು ನನ್ನ ಹೊಟ್ಟೆ ಹ್ಯಾಂಗ ಬಾತು ನಗಾರಿ ಆಗೈತಿ. ಕತ್ತರಿಸಿ ಉಣ್ಣಂಗಿಲ್ಲ, ತಿನ್ನಂಗಿಲ್ಲ. ಎಲ್ಲಾ ಪತ್ಯದ ಕೂಳು. ಹಿಂಗಾಗಿ ನಮ್ಮ ಜನವೆಲ್ಲ ಸತ್ತು ಕೊಟ್ಟು ನಮ್ಮ ಭಾಗಕ್ಕ ಈ ಗತಿ ಬಂತು. ಆಗೋ ನೋಡು ಕೆರಿ ತೆಳಗ ಇರೋ ಗದ್ದೆಲ್ಲಾ ನಮ್ಮ ಊರಿನವ್ರವು. ಒಬ್ಬರೂ ಗದ್ಯಾಗೆ ನಿಲ್ಲಂಗಿಲ್ಲ ಕೆಲಸಾ ಮಾಡಂಗಿಲ್ಲ. ಬೀಳುಬಿದ್ದು ಹಣ (ಕಂದಾಯ) ಕಟ್ಟಾಕ ಗತಿಯಿಲ್ಲದ ಸರಕಾರಕ ಹೋಗಿಬಿಟ್ವು. ನೀವು ಬೈಲುಸೀಮಿಯವರು ಪುಣ್ಯವಂತ್ರಪಾ. ಇಲ್ಲೈನೈತಿ ಮಣ್ಣು ಹಾಳಾದ ಮಸಿ. ಬೀಳುಬಿದ್ದ ಹೊಲಾ ಗದ್ದೆ. ಡೊಳ್ಳು ಹೊಟ್ಟೆ ಜನಾ" ಎಂದು ಬೆಂದಹೃದಯದಿಂದ ಹೇಳುತ್ತಿದ್ದಂತೆ ನನ್ನ ಮೈಯೂ ನಡುಗಿತು. ಇಂಥ ಮಲ್ನಾಡದಲ್ಲಿ ನಾನು ಕಾಲಹಾಕಿದ ಮೇಲೆ ನನಗೂ ಇವರಿಗೆ ಬಂದ ಗತಿಯೆ ಬಂದರೆ? ಅನ್ನುವ ವಿಚಾರವೊಂದು ನನ್ನ ಮನದ ಮುಂದೆ ಸುಳಿದು ಹೋಗಿ ಮತ್ತೆ ಮರೆವಿನ ಮೂಲೆಗೆ ಸೇರಿಕೊಂಡಿತು. ಆರೋಗ್ಯ ಭಾಗ್ಯದಿಂದ ಕೂಡಿದವರೆಲ್ಲ ನಾವು ಸದಾ ಹೀಗೆಯೆ ಆರೋಗ್ಯದಿಂದಲೇ ಇರುತ್ತೇವೆನ್ನುವ ಭಾವನೆ ಹೊಂದಿರುವುದು ಸಹಜ ತಾನೆ. ಆ ವ್ಯ

ಮುಂದುವರಿದು "ಆ ಆಗೋ ನೋಡು ಅಲ್ಲಿ ಮೇಲೆ ಕಾಣುವ ಮನ್ನ ಆಗ್ಯಾನಂತ ಅವನ ಹೆಸರೋ ಏನೋ ಹಾಳು. ಅಂವಾ ಎರಡ್ಮೂರು ವರ್ಸದ ಹಪ್ತೆ ಕಟ್ಟಿ ಹಿಡಕಂಡ. ಆಚೆಕಡೆ ಕೆರೆ ತೆಳಗಿನ ಪಟ್ಟಿ ಕಾಣತೈತೆ ನೋಡು ಅದನ್ನ ಮೊನ್ನೆ ಮೊನ್ನೆ ಅದ್ಯಾರೋ ಆಲೂರಾಗ ಪುರಾಣಾ ಗಿರಾಣಾ ಹೇಳ್ಕೊಂಡಿರೋ ಅಯ್ಯಾ ಹಿಡ್ಕಂಡ. ನಾವು ಮಾಡಾಕ ಸಾಧ್ಯವಿಲ್ಲ ಗದ್ದೀನ ಅಂವಾ ಎಷ್ಟರ ಮಟ್ಟಿಗೆ ಮಾಡ್ತಾನೋ ಏನೋ? ಹಿಂಗೇ ಹೇಳ್ಕಂತ ಹೊಂಟ್ರ ಕತಿ ಬಾಳೈ ತೋತಮ್ಮಾ ನಮ್ಮ ಊರಜನ ಹಿಂಗಾಗೇ ಸತ್ತು ಕೆಟ್ಟು ಹೋಯ್ತು. ಮನಿತನಗಳು ಹಾಳಾದ್ವು. ಹೊಲಗದ್ದೆ ಕಂಡವ್ರ ಪಾಲಾದ್ವು. ನಾವು ಹೊಟ್ಟೆ ಬಾಯಿಸಿಕೊಂಡು ಅನ್ನಕ್ಕ ಗತಿಯಿಲ್ದ ಕುಂತ್ವಿ. ಏನು ಮಾಡದಪಾ" ಎಂದು ಕಣ್ಣೀರು ಹಾಕಿದಾಗ ನನ್ನ ಕರುಳು ಚುರ್ರೆಂದಿತು. ಬಡತನದ ಬವಣೆಯ ಕರಾಳಹಸ್ತದಿಂದ ಅನೇಕ ಏಟು ತಿಂದ ನನಗೆ ಇವನ ಮಾತುಗಳಿಂದ ಬಹಳಷ್ಟು ನೋವಾಯಿತಾದರೂ ನಾವು ನಮ್ಮ ಕರ್ತವ್ಯದಲ್ಲಿ ಹೋರಾಟ ಮಾಡಲೇ ಬೇಕಷ್ಟೆ. ಅವನು ತೋರಿಸಿದ ದಾರಿ ಹಿಡಿದು ನನ್ನ ಪ್ರಯಾಣ ಸಾಗಿತು.

### *ಭಯಂಕರ ಅರಣ್ಯ ಹೊಕ್ಕೆ*

ಮಾಕೊಪ್ಪ ಬಿಟ್ಟು ಶಿರಗೋಡು ಕಡೆ ಹೊರಟು ನಾನು ಭಯಾನಕ ಅರಣ್ಯದ ಗರ್ಭವನ್ನೇ ಹೊಕ್ಕೆ. ಅನೇಕ ಸಮಸ್ಯೆಗಳು ಪ್ರಾರಂಭವಾದವು. ಹತ್ತಾರು ದಾರಿಗಳು ಅತ್ತ ಇತ್ತ ಹೋಗಿರುವಾಗ ಯಾವ ದಾರಿಯನ್ನು ನಾನು ತುಳಿಯಬೇಕೆಂಬುದು ಬಹುದೊಡ್ಡ ಮೊದಲ ಸಮಸ್ಯೆಯಾಗ ತೊಡಗಿತು. ಅರಣ್ಯವೆಂದರೇನು? ಎಂಬುದು ನನಗೆ ಗೊತ್ತಾದದ್ದೇ ಈಗ. ದಾರಿಗಳು ಅನೇಕವಾದರೂ ಅವೆಲ್ಲ ಹೋಗಿ ಮುಂದೆ ಮುಖ್ಯದಾರಿಗೇ ಸೇರುತ್ತಿದ್ದವು. ಕಾಡಿನಲ್ಲಿ ಕವಳಿ, ತುಮರಿ ಹಣ್ಣನ್ನು ಕೀಳಲು ಹೋಗುವ, ಬರುವ ಲಂಬಾಣಿ ಹೆಂಗಸರ ತಂಡ ಮತ್ತು ಮೇಯಲಿಕ್ಕೆ ಬಂದ ದನಗಳು ನೀರುನಿಡಿ ಹುಡುಕಿಕೊಂಡು ಹೋಗುವಾಗ ಉಂಟಾದ ದಾರಿಗಳಂತೇ ಅವು. ಇದೂ ಅಲ್ಲದೆ ಕೆಲವು ದಿನ ಒಂದು ದಾರಿ ಸವೆದು ಸವೆದು ಮುಂದೆ ಆ ದಾರಿಯಲ್ಲಿ ಅಡ್ಡ ಗಿಡಗಳು ಮೆಳೆಗಳು ಮುಳ್ಳುಕಂಟಿಗಳು ಬೆಳೆದರೆ ಬೇರೊಂದು ದಾರಿ ಮಾಡಿಕೊಂಡು ಅದನ್ನು ಸವೆಸುತ್ತಿದ್ದರಂತೆ, ಊರಿಂದೂರಿಗೆ ಹೋಗುವ ಜನಗಳು. ನನಗಂತೂ ದಾರಿಗಳು ತಬ್ಬಿಬ್ಬು ಮಾಡಿದವು. ನಾನು ಯಾವ ದಾರಿ ಬಹಳ ಸವೆದಿದೆಯೋ ಯಾವದಾರಿಯಲ್ಲಿ ಮನುಷ್ಯರ ಹೆಜ್ಜೆಯ ಗುರುತುಗಳಿವೆಯೋ ಅಲ್ಲಿ ಹೋಗುತ್ತಿದ್ದೆ. ಅಕ್ಕ ಪಕ್ಕದಲ್ಲಿ ಕೋಳಿಗಳೋ, ಬುರ್ಲಿ ಹಕ್ಕಿಗಳೋ ನನ್ನ ಕಾಲು ಸಪ್ಪಳಕ್ಕೆ ಕೊಕ್ಕೊಕೋ ಎಂದು ಕೂಗಿ ಹಾರಿದಾಗ, ಬುರ್ರೆಂದು ಹಾರುತ್ತ ಓಡಿದಾಗ ತರಗೆಲೆಯ ಸಪ್ಪಳಕ್ಕೇ ನಾನು ಮೆಟ್ಟಿ ಬಿದ್ದು ಸ್ತಬ್ಧನಾಗಿ ನಿಂತುಬಿಡುತ್ತಿದ್ದೆ. ಭೂತ ಭಯದಿಂದ ಬಾಲ್ಯದಿಂದಲೂ ಅಧೀರನೇ ಆಗಿದ್ದ ನನ್ನಲ್ಲಿ ಭೂತಗಳ ಕಲ್ಪನೆಯೂ ಬರುತ್ತಿತ್ತು. ಹಾರಿದುದು ಓಡಿಹೋದದ್ದು ಕೋಳಿ ಅಥವಾ ಪಕ್ಷಿ ಎಂದು ಗೊತ್ತಾದ ಮೇಲೆಯೇ ಧೈರ್ಯಬಂದು ಮುಂದೆ ಹೆಜ್ಜೆಯಿಡುತ್ತಿದ್ದೆ. ಕೆಲವು ಕಡೆ ರಸ್ತೆಗೆ ಅಡ್ಡಲಾಗಿ ಹರಿದು ಹೋದ ಹಾವಿನ ತೆವಳು ಗುರುತುಗಳು ಅತ್ತ ಇತ್ತ ನನ್ನ ದೃಷ್ಟಿಯನ್ನು ಚುರುಕುಗೊಳಿಸುತ್ತಿದ್ದವು.

ಮುಂದೆ ಒಂದು ಕಡೆ ಕಾಡುಹಂದಿಗಳ ಹಿಂಡೊಂದನ್ನು ನೋಡಿದ ನಾನು ಅಧೀರನಾದದ್ದು ಇನ್ನೂ ನೆನಪಿನಲ್ಲಿದೆ. ಆ ಹಿಂಡು ನನ್ನನ್ನು ನೋಡಿ ದುಬುದುಬೆಂದು ಓಡಿಹೋಗುತ್ತಿದ್ದಾಗ ನಾನು ಯಾವುದಾದರೊಂದು ಗಿಡ ಹತ್ತಿ ಕುಳಿತುಕೊಳ್ಳಲೇ ಎನಿಸುತ್ತಿತ್ತು. ಅಂಥ ಸಮಯದಲ್ಲಿ

ಬಹಳ ಹೊತ್ತು ದಾರಿಯಲ್ಲೇ ನಿಂತು ಎದೆಯ ಧಗಧಗಾಟ ನಿಂತ ಮೇಲೆ ಸುತ್ತಮುತ್ತ ನೋಡಿ ಮುಂದಕ್ಕೆ ಹೋಗುತ್ತಿದ್ದೆ.

ಹೀಗೆ ಹೆದರುತ್ತ ಹೆದರುತ್ತ ಮಾಕೊಪ್ಪದಿಂದ ಎರಡು ಮೂರು ಮೈಲು ಹೋಗುತ್ತಿದ್ದಾಗ ಅರಣ್ಯ ಮಧ್ಯದಲ್ಲಿ ಗುನುಗುನು ಮಾತನಾಡುವುದು, ಆಗೊಮ್ಮೆ ಈಗೊಮ್ಮೆ ನಗುತ್ತ ಕೆಲೆದಾಡುತ್ತಿರುವ ಶಬ್ದ ತೇಲಿತೇಲಿ ಬರುತ್ತಿದ್ದುದನ್ನು ಕೇಳಿ ಬಹುವಾಗಿ ಹೆದರಿಬಿಟ್ಟೆ. ಅವರು ಮತ್ತಾರೂ ಅಲ್ಲ ಅಡವಿಯಲ್ಲಿಯೇ ಸಮೀಪದಲ್ಲಿ ಇದ್ದ ಒಂದು ಲಂಬಾಣಿ ತಾಂಡಾದ ಹೆಂಗಸರು. ಅವರು ಕವಳಿ ಹಣ್ಣು ಮತ್ತು ಕಾಯಿ ಹರಿಯಲು ತುಮರಿಹಣ್ಣು, ಗೇರುಹಣ್ಣುಗಳನ್ನು ಮಾವಿನಕಾಯಿ ಹಣ್ಣುಗಳನ್ನು ಹರಿ ಮತ್ತು ಸೌದೆ ಮುರಿಯಲು ಬಂದವರೆಂದು ಆಮೇಲೆ ನನಗೆ ತಿಳಿಯಿತು. ಸ್ವಲ್ಪ ಮುಂದಕ್ಕೆ ಹೋಗುತ್ತಿದ್ದಂತೆ ನನಗೆ ಅವರು ಪ್ರತ್ಯಕ್ಷವಾಗಿ ಬಿಟ್ಟರು. ನನ್ನ ನಾಲಗೆಯೆಲ್ಲ ಒಣಗಿತ್ತು. ಭಯದಿಂದ ಎದೆ ಬಡಿದುಕೊಳ್ಳತೊಡಗಿತು. ಲಂಬಾಣಿಯ ಹೆಂಗಸರನ್ನು ನಾನು ಬಾಲ್ಯದಿಂದಲೂ ಕಂಡಿದ್ದೆ. ಅವರು ನಮ್ಮ ಊರಿಗೆ ದೂರದೂರದಿಂದ ಕವಳಿಹಣ್ಣು, ನೇರಳೆ ಹಣ್ಣು ಮಾರಲು ಬರುತ್ತಿದ್ದರು. ಅವರನ್ನು ತೋರಿಸಿ ನಮ್ಮ ತಾಯಿ ಇವರೆಲ್ಲ 'ಗಂಟೀ ಚೌಡೇರು', ಕಳ್ಳರು. ಯಾರಾದರೂ ಗಂಡು ಹುಡುಗರು ಒಬ್ಬೊಬ್ಬರೇ ಸಿಕ್ಕರೆ ಅವರ ಬೀಜ ಹಿಚುಕಿಕೊಂಡು ಬಿಡುತ್ತಾರೆ. ಹ್ಹೀಗೆ ಏನೇನೋ ಸುಳ್ಳುಕಥೆಗಳನ್ನು ಹೇಳಿ ಹೆದರಿಸುತ್ತಿದ್ದ ಮಾತುಗಳು ಒಂದೊಂದಾಗಿ ನೆನಪಿನ ಸುರುಳಿಯನ್ನು ಬಿಚ್ಚಿ ಬಿಡುತ್ತಿದ್ದವು. ಈ ಹೆಂಗಸರು ನನಗೆ ಹಾಗೇನಾದರೂ ಮಾಡಿದರೆ ಗತಿಯೇನು? ಎಂಬುದೇ ನನ್ನ ಭಯಕ್ಕೆ ಕಾರಣವಾಗಿತ್ತು.

ಅವರು ಒಬ್ಬನೇ ಬರುತ್ತಿದ್ದ ನನ್ನನ್ನು ಕಂಡು ಏನೇನೋ ಗುಸುಗುಸು ಮಾತನಾಡಿದಾಗಂತೂ ನಾನು ಈ ದಿನ ಸತ್ತೇ ಹೋದೆನೆನ್ನಿಸುತ್ತಿತ್ತು. ಅವರು ದೂರದಿಂದಲೇ 'ಯಾವೂರ್ರೋ' ಎಂದರು. ನಾನು ಹೆದಹೆದರಿ ಹರವಿ ಎಂದೆ. 'ಯಾವುರ್ಗ್ಗೋಗ್ಬೇಕ್ಪಾ' ಎಂದರು. ಧೈರ್ಯತಂದು ಕೊಂಡು ಹೊಸೂರಿಗೆ ಎಂದೆ. ಅವರು ನಗುತ್ತ ನಗುತ್ತ ನನ್ನ ಸನಿಹಕ್ಕೇ ಬಂದಾಗ ಮುಗಿದು ಹೋದೆ. ಆಯಿತು ನನ್ನ ಸಂತೆ, ನನ್ನ..... ಹಿಚುಕಿ ಕೊಂದೇ ಬಿಡುತ್ತಾರೇನೋ! ಎಂದುಕೊಂಡೆ ಮನಸ್ಸಿನಲ್ಲಿ ಅವರು 'ಸಿರ್ಗೋಡ್ಮೇಲೆ ಹೋಗ್ಬೇನ್ರೋ' ಎಂದು ಪುನಃ ಕೇಳಿದರು. ನಾನು ಉಗುಳು ನುಂಗಿ ಕಂಠ ಸರಿಪಡಿಸಿಕೊಂಡು ಹೂಂ ಎಂದೆ. 'ಅಡಿಕೆ ಕೊತ್ರೋ' ಎಂದರು. ನಾನು ಇಲ್ಲ ಎಂದು ಹೇಳಿ ಮುಂದಕ್ಕೆ ಹೊರಟೆ. ಅವರು 'ಹಿಂಗೇ ಹೋಗ್ರೋ, ಅಲ್ಲಿ ಆಲೆಮನೆ ಐತಿ. ಕಬ್ಬಿನ್ಹಾಲು ಕುಡ್ದು ಹೋಗು' ಎಂದರು. ಆಗ ನನಗೆ ಸ್ವಲ್ಪ ಧೈರ್ಯಬಂತು. ಬತ್ತಿದ್ದ ನಾಲಿಗೆಯಲ್ಲಿ ನೀರೊಡೆಯಿತು. ಅವರು ಮತ್ತೆ ನಗುತ್ತ 'ಹೊಸೂರಾಗ್ಯಾರ್ ಮನೆಗ್ರೋ' ಎಂದಾಗ ಸೆಟ್ಟರ ಗದಿಗೆಪ್ಪನವರ ಮನೆಗೆ ಎಂದೆ. 'ಅವರ್ನಿಮ್ಗೇನಾಗ್ಬೇಕ್ರೋ' ಎಂದರು. ಬೀಗರು ಎಂದು ಬಿಟ್ಟೆ. ಅವರು ಸುಮ್ಮನಾಗಿಬಿಟ್ಟರು. ಹೊಸೂರು ಸೆಟ್ಟರ ಗದಿಗೆಪ್ಪ, ಅವರ ಅಳಿಯಂದಿರಾದ ಶಿವಬಸಪ್ಪ, ಚೆನ್ನಪ್ಪ, ವಿರೂಪಾಕ್ಷಪ್ಪ ಮೊದಲಾದವರು ಎಲ್ಲರಿಗೂ ಪರಿಚಿತರಂತೆ. ಇವರಾರ ಹೆಸರೂ ನನಗೆ ಗೊತ್ತಿರಲಿಲ್ಲ. ಪ್ರತಿ ಸೋಮವಾರ ಸಂತೆ ಸೇರುತ್ತಿದ್ದ ಹೊಸೂರಿಗೆ ಇವರೆಲ್ಲ ಹೋಗುವವರಂತೆ. ಅಲ್ಲಿನ ದೊಡ್ಡವ್ಯಾಪಾರಸ್ಥರಾದ ಅವರನ್ನೆಲ್ಲ ಕಂಡವರೇ ಆಗಿದ್ದರು. ನಾನು ಸೆಟ್ಟರ ಬೀಗನೆಂದು ಹೇಳಿದ ಮಾತನ್ನು ಕೇಳಿ ಅವರು ನನ್ನಲ್ಲಿ ಗೌರವ ತೋರಿಸತೊಡಗಿದರು. ಸೆಟ್ಟರು ನಮ್ಮ ಬೀಗರೆಂದು ಹೇಳಿದ್ದು ತಿಳಿದು ಹೇಳಿದ್ದಲ್ಲ; ತಿಳಿಯದೆ ಹೇಳಿದ್ದು, ನನ್ನ ಭಯದಿಂದ

ಹೇಳಿದ್ದು. ನಿಜವಾಗಿ ಅವರು ಸಂಬಂಧಿ ಎಂಬುದು ನಾನು ಹೊಸೂರಿಗೆ ಹೋದ ಮೇಲೆ ತಿಳಿಯಿತು. ಲಂಬಾಣಿಗಳಿಗೆ ಸೆಟ್ಟರು ನಮ್ಮ ಬೀಗರೆಂದು ಹೇಳಿದ ಕಾರಣವಾಗಿಯೇ ಅವರು ಶಿರಗೋಡಿನ ದಾರಿತೋರಿಸಿ ಮುಂದೆ ಇರುವ ಆಲೆಮನೆಯಲ್ಲಿ ಹಾಲು ಕುಡಿದು ಹೋಗು ಎಂದು ಹೇಳಿದ್ದು. ಆ ಆಲೆಮನೆ ಈ ಲಂಬಾಣಿ ಜನಗಳದೇ ಎಂದು ಆಮೇಲೆ ತಿಳಿಯಿತು.

ಸ್ವಲ್ಪ ದೂರ ಭಯ ಆತಂಕ ಗಾಬರಿಗಳಿಂದ ಹೋದೆ. ಮುಂದೆ ಆಲೇಮನೆ ಸಿಕ್ಕಿತು. ಅಲ್ಲಿ ಕಬ್ಬು ಮುರಿದು ತರುವವರು, ಗಾಣಕ್ಕೆ ಕಬ್ಬು ಕೊಡುವವರು ಇತರ ಕೆಲಸಕಾರ್ಯ ಮಾಡುವವರೂ ಲಂಬಾಣಿ ಉಡಿಗೆತೊಡಿಗೆಯ ಹೆಂಗಸರೇ ಆಗಿದ್ದರು. ಲಂಬಾಣಿ ಜನಗಳೆಂದರೆ ನಮ್ಮಂತೆಯೇ ವ್ಯವಸಾಯ ಮಾಡಿಕೊಂಡು ಸಭ್ಯರಾಗಿ ಬಾಳುವವರೆಂದು ಗೊತ್ತಾದದ್ದು ಆಗಲೇ. ಆದಕ್ಕೂ ಮೊದಲು ಈ ಜನರು ಕಳ್ಳರು, ಗಂಟೀ ಚೌಡೇರು, ಖೂನಿಮಾಡುವವರು ಎಂದು ಭಾವಿಸಿದ್ದೆ. ನನ್ನ ಆ ಭಾವನೆಗೆ ಅಂದು ತೆರೆ ಎಳೆದು ಹೋಯಿತು. ಒಂದಾನೊಂದು ಕಾಲದಲ್ಲಿ ಇವರು ಕಳ್ಳರಾಗಿರಬಹುದು. ಗಂಟೀಚೌಡೇರು ಎಂದೆನ್ನಿಸಿಕೊಂಡಿರಬಹುದು. ಆದರೆ ಈಗಲ್ಲ, ಎಂದುಕೊಂಡೆ. ಆಲೆಮನೆಯಲ್ಲಿ ಚಾಪೆಯ ಮೇಲೆ ಅಡಿಕೆ ಎಲೆ ಜಗಿಯುತ್ತ ಆಳುಗಳಿಗೆ ನನಗೆ ತಿಳಿಯದ ಭಾಷೆಯಲ್ಲಿ ಗದರಿಸುತ್ತ ಕುಳಿತಿದ್ದ ಲಂಬಾಣಿ ಗಂಡಸು ನನ್ನನ್ನು ಕಂಡು ಯಾವೂರು, ಎಲ್ಲಿಗೆ ಹೊರಟಿದ್ದೀರಿ ಇತ್ಯಾದಿ ಕೇಳಿ ಚಾಪೆ ತೋರಿಸಿ "ಬನ್ನಿ ಕುಳಿತ್ಕೊಳ್ಳಿ ಹಾಲು ಕುಡೀರಿ" ಎಂದ. ನಾನು ಕುಳಿತುಕೊಂಡು ಅವರು ಕೊಟ್ಟ ಹಾಲು ಕುಡಿದು, ಬಿಸಿಬೆಲ್ಲ ತಿಂದು, ಅವರು ಕೊಟ್ಟ ಅಡಕೆ ಎಲೆ ಹಾಕಿ ಕೊಂಡೆ. ಬಹಳ ಧೈರ್ಯಬಂತು. ನಿಜವಾಗಿ ಲಂಬಾಣಿಗಳು ನಮ್ಮ ಹಾಗೆ ಸಭ್ಯರು ಎಂದುಕೊಂಡೆ.

ನಾನು ಅವರಿಗೆ ಹೊಸೂರ ಸೆಟ್ಟರ ಬೀಗರು ಎಂದು ಹೇಳಿದ್ದರ ಪ್ರಭಾವದಿಂದ ನನಗೆ ಬಹಳ ಮರ್ಯಾದೆ ತೋರಿಸಿ ಸೆಟ್ಟರ ಮನೆಯವರ ಹೆಸರನ್ನೆಲ್ಲ ಹೇಳಿದರು. ನಾನು ಆ ಹೆಸರುಗಳನ್ನೆಲ್ಲ ಬರೆದುಕೊಂಡೆ. ದೊಡ್ಡವರ ಹೆಸರು ಮುಂದೆ ಮಾಡಿದರೆ ಸಿಗುವ ಗೌರವವೇನೆಂಬುದರ ಅರಿವಾಯಿತು. ಅಲ್ಲಿಂದ ಹೊರಟೆ. ಸಂಜೆ ನಾಲ್ಕು ಗಂಟೆ ಆಗಿರಬಹುದು. ಈ ಲಂಬಾಣಿ ತಾಂಡಾದಿಂದ ಸ್ವಲ್ಪ ದೂರ ಹೋದ ಮೇಲೆ ಅರಣ್ಯ ಹಿಂದೆಬಿದ್ದು ವಿಶಾಲವಾದ ಶಿರಗೋಡಿನ ಗದ್ದೆ ಬೈಲು ಸಿಕ್ಕಿತು. ಆಮೇಲೆ ವೇಗವೇಗವಾಗಿ ನಡೆದು ಆರು ಗಂಟೆ ಸಮಯಕ್ಕೆ ಹೊಸೂರು ತಲುಪಿ ಗದ್ದಿಗೆಪ್ಪ ಸೆಟ್ಟರನ್ನು ಕಂಡೆ. ಕಾಗದ ಕೊಟ್ಟೆ. ಬಿಚ್ಚಿ ಎರಡು ಮೂರು ಸಲ ಓದಿದರು.

ಕಾಗದ ಓದಿದ ಅವರು ಹರ್ಷಿತರಾದಂತೆ ಕಂಡರು. ನನ್ನನ್ನು ನನ್ನ ಊರನ್ನು ತಿಳಿದು ಸಂತೋಷದಿಂದ ಬಹಳ ಉಪಚಾರ ಮಾಡಿದರು. ನಮ್ಮೂರು ಕೂಡಲ ನರೇಗಲ್ಲುಗಳೊಡನೆ ಇದ್ದ ಬಹು ಹಿಂದಿನ ಸಂಬಂಧಗಳನ್ನೆಲ್ಲ ಹೇಳಿದರು. ಅದು ನಮ್ಮ ಜನಕ್ಕೇ ಸಂಬಂಧಪಟ್ಟದ್ದೆಂದು ತಿಳಿಯಿತು. ಹೀಗಾಗಿ ನಾನೂ ಕೂಡ ಅವರ ಸಂಬಂಧದವನೆಂದೇ ಅವರು ಭಾವಿಸಿದರು. ಅವರ ಅಳಿಯಂದಿರಾದ ಶಿವಬಸಪ್ಪ ಮೊದಲಾದವರಿಗೆ ನನ್ನ ಪರಿಚಯ ಮಾಡಿದರು. ಶಿವಬಸಪ್ಪನ ಹೆಂಡತಿ ಸಮಸ್ಸಗಿಯವಳು. ಅವಳ ಸಂಬಂಧ ನಮ್ಮೂರಿನ ನಮ್ಮ ದಾಯಾದಿಗಳ ಸಂಬಂಧವೇ ಆಗಿತ್ತು. ಇದೆಲ್ಲ ಸಂಬಂಧದ ಪುರಾಣ ನನಗೆ ಅವರು ಹೇಳಿದ ಮೇಲೆಯೇ ಗೊತ್ತಾದದ್ದು. ಅದಕ್ಕೂ ಮೊದಲು ಈ ಸಂಬಂಧದ ತಳಬುಡ ಒಂದೂ ಗೊತ್ತಿರಲಿಲ್ಲ. ಸರಿ

ನನಗೂ ಈ ಮಲೆನಾಡಿನಲ್ಲಿ ದೊಡ್ಡ ಆಶ್ರಯ ಸಿಕ್ಕಹಾಗಾಯಿತೆಂದು ಭಾವಿಸಿಬಿಟ್ಟೆ. ಬಹುಮಟ್ಟಿಗೆ ಇದು ಸತ್ಯವೂ ಆಯಿತು. ಗದ್ದಿಗೆಪ್ಪಸೆಟ್ಟಿ ನನ್ನ ಊಟೋಪಚಾರಕ್ಕೆ ತಮ್ಮ ಮನೆಯಲ್ಲೇ ಏರ್ಪಡಿಸಿ ಮರುದಿನ ಊರವರನ್ನೆಲ್ಲ ಸೇರಿಸಿ, ನಾಳೆಯಿಂದ ಎಲ್ಲರೂ ತಮ್ಮ ತಮ್ಮ ಮಕ್ಕಳನ್ನು ಸಾಲಿಗೆ ಸೇರಿಸಬೇಕೆಂದೂ, ಸಿಂಧೂರ ಸಿದ್ಧಪ್ಪನವರು ಒಬ್ಬ ಒಳ್ಳೇ ಮಾಸ್ತರರನ್ನು ಕಳಿಸಿಕೊಟ್ಟಿರುವರೆಂದೂ ತಿಳಿಸಿದರು. ಬಸವಣ್ಣ ದೇವರ ಗುಡಿಯಲ್ಲಿ ನನಗೆ ಕೂಡಲೊಂದು ಕುರ್ಚಿ, ಮುಂದೊಂದು ಸ್ಟೂಲ್ ಒದಗಿಸಿ, ಆವರಣವನ್ನು ಸ್ವಚ್ಛಗೊಳಿಸಿ, ಶಾಲೆಗೆ ಬೇಕಾದ ಒಪ್ಪ ಓರಣಗಳನ್ನು ಮಾಡಿದರು. ಶಾಲೆಯಲ್ಲಿ ಹೋಗಿ ಕುಳಿತೆ. ನಾಲ್ಕೈದು ಹುಡುಗರು ಹುಡಿಗೆಯರು ಶಾಲೆಗೆ ಬಂದರು. ಆ ದಿನ ಒಂದು ರಿಜಿಸ್ಟರ್ ಕಟ್ಟಿ ಅವರ ಹೆಸರನ್ನೆಲ್ಲ ಬರೆದುಕೊಂಡೆ. ಇವರೆಲ್ಲ ಈ ಮೊದಲು ಅಲ್ಲಿ ಇಲ್ಲಿ ಒಂದು ಎರಡು ತರಗತಿಯಲ್ಲಿ ಓದಿದವರು. ಹೊಸದಾಗಿ ಅಕ್ಷರಾಭ್ಯಾಸ ಮಾಡುವವರೇನೂ ಅಲ್ಲ. ಅವರು ಯಾವ ಯಾವ ತರಗತಿಯವರು ಎಂಬುದನ್ನು ಗುರುತು ಮಾಡಿ ರಿಜಿಸ್ಟರಿನಲ್ಲಿ ಅದರಂತೆ ಬರೆದು ಕೊಂಡೆ. ನಾಲ್ಕಾರು ದಿನಗಳಲ್ಲಿ ಹೊಸೂರೆಲ್ಲ ಪರಿಚಯವಾದ ಹಾಗಾಯಿತು. ಆದರೆ ಹುಡುಗರ ಹಾಜರಾತಿ ಆರಕ್ಕೇರಲಿಲ್ಲ ಮೂರಕ್ಕಿಲಿಯಲಿಲ್ಲ. ಅನೇಕ ವರ್ಷಗಳಿಂದ ಶಾಲೆಯಿಲ್ಲದ್ದರಿಂದ ಇಲ್ಲಿಯ ಜನ ತಮ್ಮ ಮಕ್ಕಳನ್ನೂ ಪಕ್ಕದ ಬನವಾಸಿ, ಹಾನಗಲ್ಲು, ಆಲೂರು, ಸವಣೂರುಗಳಲ್ಲಿ ಸೇರಿಸಿದ್ದರು. ಅವರನ್ನು ಬಿಡಿಸಿ ಒಮ್ಮೆಲೆ ಇಲ್ಲಿಗೆ ಕರೆತರಲು ಯಾರೂ ಮುಂದೆ ಬರಲಿಲ್ಲ. ಹೀಗಾಗಿ ಹಾಜರಾತಿ ಏರಲಿಲ್ಲ.

ಹೊಸೂರು ಒಂದು ಕಾಲದಲ್ಲಿ ಬಹುದೊಡ್ಡ ಊರಾಗಿತ್ತೆಂಬುದು ಸುತ್ತ ಮುತ್ತಣ ಅವಶೇಷಗಳಿಂದ ತಿಳಿಯಿತು. ಪ್ರತಿಸೋಮವಾರ ಇಲ್ಲಿ ದೊಡ್ಡಸಂತೆ ಸೇರುತ್ತಿತ್ತು. ಈ ಸಂತೆ ಈ ಭಾಗದಲ್ಲೆಲ್ಲ ಪ್ರಸಿದ್ಧ. ಸಂತೆಯ ಕಾರಣವಾಗಿಯೇ ಇಲ್ಲಿ ಪ್ರಸಿದ್ಧವಾದ ಐದಾರು ಮನೆತನಗಳು ಒಳ್ಳೆಯ ಸ್ಥಿತಿಯಲ್ಲಿದ್ದವು ಸಂತೆಯ ಕಾರಣಕ್ಕಾಗಿ ಈ ಊರಿಗೆ ಸಂತೆ ಹೊಸೂರೆಂದೂ ಚಿಕ್ಕಾಂಸಿ ಮತ್ತು ಈ ಊರು ಒಂದಕ್ಕೊಂದು ಹತ್ತಿರವೇ ಇದ್ದ ಕಾರಣ ಚಿಕ್ಕಾಂಸಿ ಹೊಸೂರೆಂದೂ, ಕೇವಲ ಹೊಸೂರು ಎಂದೂ ಕರೆಯಲಾಗುತ್ತಿತ್ತು. ಈ ಮೊದಲು ನಾನು ಕಂಡ ಎಲ್ಲ ಊರುಗಳಂತೆ ಈ ಊರು ಪಕ್ಕದ ಚಿಕಾಂಸಿಯೂ ಹಾಳಾಗಿ ಹೋಗಿದ್ದವು. ಸಂತೆಪೇಟೆಯಲ್ಲಿ ಮಾತ್ರ ದೊಡ್ಡ ದೊಡ್ಡ ಎಂಟು ಹತ್ತು ಮನೆಗಳು ಸುಸ್ಥಿತಿಯಲ್ಲಿದ್ದವು. ಅವುಗಳಲ್ಲೆಲ್ಲ ಸೆಟ್ಟರ ಗದಿಗೆಪ್ಪನವರ ಮನೆ ಹತ್ತಿರ ಸ್ವಲ್ಪ ಜನಗಳಿಂದ ತುಂಬಿ ಕಳಕಳಿಸುತ್ತಿತ್ತು. ಅವರು ಬಹುಮುಖ ವ್ಯಾಪಾರಾಭಿವೃದ್ಧಿಯ ಕಾರಣವಾಗಿ ಆರ್ಥಿಕ ಸುಸ್ಥಿತಿಯಲ್ಲಿದ್ದರು. ಉಳಿದಂತೆಲ್ಲ ಗುಡಿಸಲುಗಳು, ಹಾಳುಮನೆಗಳು, ಬೀಳು ಹೊಲಗಳು, ಹರಕು ಮುರುಕು ಜೋಪಡಿಗಳು. ನಿಸ್ತೇಜಗೊಂಡ ಮುಖ, ಡೊಳ್ಳುಹೊಟ್ಟೆಯ ಜನಗಳು ಊರಲ್ಲೆಲ್ಲಾ ಕಣ್ಣಿಗೆ ಬೀಳುತ್ತಿದ್ದರು. ಈ ಊರು ಶಿವಮೊಗ್ಗ ಜಿಲ್ಲೆಯ ಸೊರಬ, ಕಾರವಾರ ಜಿಲ್ಲೆಯ ಶಿರ್ಶಿ, ಧಾರವಾಡ ಜಿಲ್ಲೆಯ ಹಾನಗಲ್ಲು ತಾಲೂಕುಗಳು ಸೇರುವ ಮೂಲೆಯಲ್ಲಿದ್ದು, ಬನವಾಸಿಗೆ ಅತಿ ಸಮೀಪದಲ್ಲೇ ಇತ್ತು. ನಮ್ಮ ಪಠ್ಯಪುಸ್ತಕಗಳಲ್ಲಿ ಬನವಾಸಿ ನಾಡು, ಬನವಾಸಿ ಮಂಡಲ ಎಂದು ಓದಿದ್ದರ ನೆನಪು ಮರುಕಳಿಸಿತು. ಕನ್ನಡನಾಡಿನಲ್ಲಿ ಖ್ಯಾತಿಹೊಂದಿದ್ದ ಹಿಂದಿನ ಕರ್ನಾಟಕದ ಮಹಾನಗರ ಕದಂಬರ ರಾಜಧಾನಿ ಬನವಾಸಿಯ ಮಧುಕೇಶ್ವರನ ದಿವ್ಯಸಾನ್ನಿಧ್ಯವಿರುವ ಬನವಾಸಿಯ ಸಮೀಪಕ್ಕೇ ಬಂದು ಬಿಟ್ಟಿದ್ದೇನೆಂಬ ಒಂದು ಗಂಭೀರ ಭಾವನೆಯುಂಟಾಗಿ ಉತ್ತೇಜಿತನಾಗಿ ಹೋಗಿದ್ದೆ. ಅಂಥ ಕದಂಬರ ರಾಜಧಾನಿ ಬನವಾಸಿಯನ್ನು ಒಮ್ಮೆ ಕಣ್ತುಂಬ ನೋಡಿಬರಬೇಕೆಂಬ ಭಾವನೆ ಹೊಳೆಯತೊಡಗಿತು.

'ಆರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ' ಎಂದು ಪಂಪ ಹೇಳಿದ್ದು ಸತ್ಯವೆಂದು ಸುತ್ತಮುತ್ತಣ ವನಪ್ರದೇಶ, ಜೀವನಸಮೃದ್ಧಿ, ಜಲಸಂಪತ್ತಿನ ಕೆರೆಕಾಲುವೆಗಳು, ಅವುಗಳಲ್ಲಿನ ತಾವರೆಯ ಹೂಗಳು. ಭವ್ಯವಾದ ಮಾಮರಗಳು, ಸುಗಂಧಪೂರಿತ ಕಾಡಿನ ಹೂಗಳ ನರುಗಂಪನ್ನು ಹೊತ್ತು ಬೀಸುವ ಸುಳಿಗಾಳಿಗಳು, ಅರಣ್ಯಮಧ್ಯದಿಂದ ತೂರಿಬರುವ ನಾನಾ ಬಗೆಯ ಪಕ್ಷಿಸಂಕುಲ ಧ್ವನಿಗಳು ಮೊದಲಾದವನ್ನು ಕಂಡು ಕೇಳಿ ತಿಳಿದೆ. ನಾನೂ ಪಂಪನು ಅನುಭವಿಸಿದ ಆನಂದ ಅನುಭವಿಸತೊಡಗಿದೆ. ಒಂದೆ ಒಂದು ದೊಡ್ಡ ಆತಂಕವೆಂದರೆ ಇಲ್ಲಿನ ಪ್ರದೇಶವೆಲ್ಲ ಅನಾರೋಗ್ಯದ ಬೀಡಾಗಿರುವುದು. ಏನೆಲ್ಲ ಸಂಪತ್ತು ಇದ್ದರೂ ಅದನ್ನು ಅನುಭವಿಸಲು ಯೋಗ್ಯವಾದ ಆರೋಗ್ಯದ ಕೊರತೆಯಿದ್ದರೆ ಏನಿದ್ದೇನು ಅನ್ನಿಸುತ್ತಿತ್ತು. ಊರ ಮಧ್ಯದಲ್ಲಿಯೇ ಬಾಳೆತೋಟ ನೋಡುತ್ತಿದ್ದೆ. ನೆಲ್ಲಿ, ಅಮಟೆ, ಮಾವು, ಸುರಗಿ, ಸಂಪಿಗೆ, ಜಾಜಿ, ಮಲ್ಲಿಗೆ ಸಂಪತ್ತು ಅಧಿಕವಾಗಿದ್ದು ಭಾವುಕರನ್ನು ಮುಗ್ಧಗೊಳಿಸಿ ಬಿಡುತ್ತಿದ್ದವು. ಇದನ್ನೆಲ್ಲ ನಮ್ಮ ಬೈಲುಸೀಮೆಯ ಬರಡುಗ್ರಾಮಗಳಲ್ಲಿ ನಾನೆಂದೂ ನೋಡಿದ್ದಿಲ್ಲ. ಅಲ್ಲಿ ಇದ್ದರೆ ಕೆಲವು ಹುಣಸೆ ಬೇವುಗಳ ಮರಗಳು ಉಳಿದಂತೆಲ್ಲ ಸೊನ್ನೆ. ಆದ್ದರಿಂದ ನನ್ನ ಪಾಲಿಗೆ ಇಲ್ಲಿಗೆ ಉಪಾಧ್ಯಾಯನಾಗಿ ಬಂದದ್ದೂ ಸಾರ್ಥಕವಾಯಿತೆನ್ನಿಸುತ್ತಿತ್ತು. ಕೆಲವೇ ದಿನಗಳಲ್ಲಿ ಈ ಊರಿನ ಮುಖ್ಯಸ್ಥರಾದ ನಾಲ್ಕಾರು ಜನ ಒಳ್ಳೆಯ ಸ್ನೇಹಿತರು ನನಗೆ ದೊರಕಿದರು. ಧಾರವಾಡದ ಪುಟ್ಟಪ್ಪ, ಸಜ್ಜನ ಸೆಟ್ರ ಗಣೇಶಪ್ಪ, ಸೆಟ್ಟರ ಶಿವಬಸಪ್ಪ ಮತ್ತು ವಿರೂಪಾಕ್ಷಪ್ಪ ಮೊದಲಾದವರು ಆತ್ಮೀಯ ಸ್ನೇಹಿತರಾದರು. ನನ್ನನ್ನು ಬಹುಗೌರವದಿಂದ, ಆತ್ಮೀಯತೆಯಿಂದ ನೋಡಿಕೊಳ್ಳತೊಡಗಿದರು. 'ಸುಖದುಃಖದೊಳೆ ಸಮಸ್ಥಿತಿ ಸಖನೇ ಸಖ' ಇಂಥವರು ಸುಕೃತದಿಂದ ಮಾತ್ರ ದೊರೆಯುವರಂತೆ ಇಂಥ ಸಖರು ನನ್ನ ಪಾಲಿಗಂತೂ ದೊರಕಿದರು. ಆದ್ದರಿಂದ ನಾನು ಸುಕೃತಿಯೇ ಆಗಿರಬೇಕು ಎನ್ನಿಸುತ್ತಿತ್ತು, ಇವರೆಲ್ಲರ ಗಾಢಸ್ನೇಹದ ಕಾರಣದಿಂದ.

**ವನಸಿರಿಯ ಮಧ್ಯದಲ್ಲಿ ತಿರುಗಾಟ**

ಶಾಲೆಯ ಕೆಲಸವೇನೂ ಅಷ್ಟೊಂದು ತೃಪ್ತಿದಾಯಕವಾಗಿರಲಿಲ್ಲ. ಹೇಗೆ ಎಣಿಸಿದರೂ ಐದಾರು ಹುಡುಗರಿಗಿಂತ ಜಾಸ್ತಿ ಇಲ್ಲ. ಸರಿ. ನನಗಿನ್ನೇನು ಕೆಲಸ? ನನ್ನಲ್ಲಿ ಅತ್ಯಂತ ಕುತೂಹಲವನ್ನುಂಟುಮಾಡಿದ್ದ ಬನಸಿರಿಯನ್ನಾದರೂ ಕಣ್ಣುಟ್ಟನೋಡಿ ಆನಂದಿಸಬೇಕೆಂಬ ಬಯಕೆ ಅಧಿಕವಾಯಿತು. ಈ ಕೆಲಸಕ್ಕೆ ಧಾರವಾಡ ಪುಟ್ಟಪ್ಪ ನೆರವಾದ. ಆತನೂ ಒಬ್ಬೊಂಟಿಗ, ಹೆಂಡಿರಿಲ್ಲ ಮಕ್ಕಳಿಲ್ಲ. ಓಂದು ಚಿಕ್ಕಚಹಾದ ಅಂಗಡಿ ನಡೆಸುತ್ತಿದ್ದ. ಭವ್ಯವಾದ ಮನೆಯಿತ್ತು. ಐದೆಕೆರೆ ಒಳ್ಳೆಯ ಗದ್ದೆಯೂ ಇತ್ತು. ಗದ್ದೆಯನ್ನು ತಾನೇ ಎರಡು ಬಡಕಲು ಎತ್ತು ಕಟ್ಟಿ ಉತ್ತು ಬಿತ್ತಿ ಬೆಳೆಯುತ್ತಿದ್ದ. ಬೆಳೆ ಬಂದಷ್ಟು ಇವನು ತೆಗೆದುಕೊಂಡದ್ದು ಅಷ್ಟೆ. ಇವನ ಬತ್ತದ ರಾಶಿಯಲ್ಲಿ ಅರ್ಧ ಹುಲ್ಲುಬೀಜ ಅರ್ಧ ಬತ್ತ. ಕೋರಕುಂಬಳಿಗೆ ಮಾಡುವುವರು ಯೂರೂ ಸಿಕ್ಕುತ್ತಿರಲಿಲ್ಲ ಎಂದೇ ಇವನು ಗದ್ದೆ ಉಳಿಸಿಕೊಳ್ಳಲು ಪ್ರಯತ್ನಿಸುತ್ತ ಐದು ಎಕರೆಯ ಉತ್ಕೃಷ್ಟ ಜಮೀನಿನಲ್ಲಿ ಎಂಟು ಹತ್ತು ಚೀಲ ಬತ್ತ ಬೆಳೆಯುತ್ತಿದ್ದ. ಅವನ್ನೆಲ್ಲ ಕೈಗೆ ಬಂದಂತೆ ಮಾರಿ ಬಿಡುತ್ತಿದ್ದ, ಮೂರು-ಮೂರುವರೆ ರೂಪಾಯಿ ಒಂದು ಚೀಲಕ್ಕೆ ಧಾರಣೆಸಿಕ್ಕರೆ ಸಾಕು. ಹಾಗೇ ಮಾರಿ ಕೈತೊಳೆದುಕೊಂಡು, ತಾನು ಇಟ್ಟ ಒಂದು ಚಹಾದಂಗಡಿಯಿಂದ ವರ್ಷಪಿಡೀ ಜೀವನ ನಿರ್ವಹಿಸುತ್ತಿದ್ದ. ಈತ ಚಹಾದ ಅಂಗಡಿಯಲ್ಲಿ ಇಟ್ಟುಕೊಂಡ ಎರಡು ಆಳುಗಳು ಅಂಗಡಿ ನಡೆಸುತ್ತಿದ್ದರು. ಇವನು ಮಾತ್ರ ಸದಾ ನಿರಾಭಾರಿಯೇ. ಇವನನ್ನು ಕೂಡಿಗೊಂಡು ನಾನು ಅರಣ್ಯದಲ್ಲಿ

ತಿರುಗಲಿಕ್ಕೆ ಹೇಗುತ್ತಿದ್ದೆ. ಅಬ್ಬಾ! ಆ ಅರಣ್ಯದ ಸೌಂದರ್ಯವೋ ಅಲ್ಲಿನ ಮಾಮರ ಹಲಸಿನ ಮರಗಳನ್ನು ಕಂಡು ನಾನಂತೂ ಅಪಾರ ಆನಂದ ಅನುಭವಿಸುತ್ತಿದ್ದೆ. ಪಂಪ ಮಹಾಕವಿ ಬನವಾಸಿಯ ಪ್ರಾಂತದಲ್ಲಿನ 'ಕಾಡನಾಡ ಬೆಳಸಿಂ ಬೆಳಸು' ಎಂದಿದ್ದಾನೆ. ಇದು ಸತ್ಯ. ಕಾಡಬೆಳಸು ಇಮ್ಮಾವು - ಆನೆಗಳಂತೆ. ಆನೆಗಳಂತೂ ನನ್ನ ಕಣ್ಣಿಗೆ ಬೀಳಲಿಲ್ಲ. ಇನಿದಾದ ಮಾವಿನ ಹಣ್ಣುಗಳ ಮಾಮರಗಳಂತೂ ಭವ್ಯವಾಗಿ ಬೆಳೆದು ನಿಂತವುಗಳನ್ನು ಕಾಡಿನಲ್ಲಿ ಕಂಡೆ. ನಾಡಿನಲ್ಲೂ ಕಂಡೆ. ನಾಡ ಬೆಳಸು ಗಂಧಸಾಲಿ ಎಂದು ಹೇಳಿದ್ದಾನೆ. ಹೌದು, ಅಲ್ಲಿ ಗಂಧಸಾಲಿಯನ್ನು ಬೆಳೆಯುತ್ತಿದ್ದುದನ್ನು ಕಂಡೆ ಮತ್ತು ಅದರ ಅನ್ನವನ್ನು ಉಂಡೆ.

"ಸೊಗಯಿಸಿ ಬಂದ ಮಾಮರನೆ, ತಳ್ತ ಎಲೆವಳ್ಳಿಯೆ, ಪೂತ ಜಾಜಿ ಸಂಪಿಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ...."

ಇಷ್ಟು ಮಾತ್ರವಂತೂ ಸತ್ಯ. ಆದರೆ "ನಲ್ಲರೊಳುಮ್ಗಂ ನಗೆಮೊಗದೊಳ್ ಪಳಂಚಿ ಅಲೆಯೆ ಕೂಡುವ ನಲ್ಲ"ರನ್ನು ಮಾತ್ರ ನಾನು ಕಾಣಲಿಲ್ಲ. ಇಂದು ಪಂಪನ ಶೃಂಗಾರ ಭಾವನೆಯ ಮಾತಾದೀತು. ನಾನು ಕಂಡ ಕಾಲದಲ್ಲಿ ಕಾಡಿನಲ್ಲಿ ಭವ್ಯವಾದ ಹಲಸಿನ ಮರಗಳು ಎಲ್ಲೆಲ್ಲೂ ಇದ್ದವು. ಆ ಬಗ್ಗೆ ಪಂಪ ಚಕಾರ ಶಬ್ದವೆತ್ತಿಲ್ಲ. ಅವನ ಕಾಲದಲ್ಲಿ ಬನವಾಸಿನಾಡಿನಲ್ಲಿ ಆ ಮರಗಳು ಇದ್ದಿಲ್ಲವೆನ್ನೋಣವೇ ಅಥವಾ ಹಲಸಿನ ರುಚಿ, ಸೌಂದರ್ಯ ಅವನಿಗೆ ಹಿಡಿಸಲಿಲ್ಲವೋ ತಿಳಿಯದು. ಮಾವಿನಷ್ಟೇ ಭವ್ಯವಾದ ಹಲಸಿನ ಮರದ ಸೊಗಸು ನನ್ನ ಕಣ್ಮನಗಳನ್ನು ಆವರಿಸಿಬಿಟ್ಟಿದ್ದಂತೂ ನಿಜ. 'ಬೇರ್ವೆರಸಿ ತುದಿವರಂ ಕಾತ ಪನಸಂಗಳ್ ಕರ್ನಾಟಕದ ಅಡವಿಯಲ್ಲಿ ಎಲ್ಲಿ ನೋಡಿದರಲ್ಲಿ ಸಿಗುತ್ತಿದ್ದವೆಂದು' ವಿಜಯನಗರ ವಿರೂಪಾಕ್ಷ ಪಂಡಿತ ಹೇಳಿದ್ದಾನೆ. ಅವು ಹೇಳಿದುದು ಸಿದ್ದರಾಮನನ್ನು ಕಲ್ಯಾಣಕ್ಕೆ ಪ್ರಭು ಕರೆದು ಕೊಂಡು ಹೋಗುವ ಮಾರ್ಗದಲ್ಲಿನ ಕನ್ನಡ ನಾಡಿನಲ್ಲಿ ಇಂಥ ಹಲಸಿನ ಮರಗಳನ್ನು ಕಂಡನೇ ಅಥವಾ ತಾನು ಸಹ್ಯಾದ್ರಿ ಸಾಲಿನಲ್ಲಿ ಸುತ್ತಿದಾಗ ಕಂಡ ಮಾಮರವನ್ನು ಸೊಲ್ಲಾಪುರದ ಮಾರ್ಗಕ್ಕೆ ಆರೋಪಿಸಿ ಹೇಳಿದನೋ ಗೊತ್ತಿಲ್ಲ. ಸಹ್ಯಾದ್ರಿ ಪ್ರದೇಶದಲ್ಲಿ ಮಾತ್ರ ಹಲಸು ಬಹುಹುಲಸು. ಇಲ್ಲಿನ ಮಾಮರಗಳನ್ನು ನೋಡಿ ನಾನು ದಿಗ್ಭ್ರಮೆಗೊಂಡೆ. ಕೆಲವು ಮರಗಳ ಕಾಂಡ ಹತ್ತಾರು ಜನಗಳು ಕೈಕೈಹಿಡಿದು ಅಪ್ಪಿದರೂ ಅವರ ಅಪ್ಪುಗೆಗೆ ನಿಲುಕದಷ್ಟು ದಪ್ಪನಾಗಿದ್ದು ನಾನಾ ವಿಧವಾದ ರೆಂಬೆ ಕೊಂಬೆಗಳಿಂದ ವಿಶಾಲಾಕಾಶದಲ್ಲಿ ಛತ್ರಿಯಂತೆ ಅರಳಿ ದಟ್ಟವಾದ ನೆಳಲಿನಿಂದ ಕೂಡಿದ ಮಾಮರಗಳು ಷಡಕ್ಷರ ಮಹಾಕವಿ ಹೇಳುವಂತೆ,

"ಕಾಮನ ಸಾಮಜಗಳಾಗಿ, ಮಧುಮಹೀಶನ ಕೋಶಗೃಹಗಳಾಗಿ ಮಧುವ್ರತಸ್ತೋಮದ ಭೋಗಭೂಮಿಗಳಾಗಿ ಮಲಯಾನಿಲನಾಡುವ ಮಾಡುವೆಟ್ಟುಗಳಾಗಿ ಮಲ್ಲೀಮೃದುಲಾಸ್ಯಶಾಲೆಗಳಾಗಿ ಶುಕವೃಂದದ ಜೇರಣದಾಗರಗಳಾಗಿ" ಇದ್ದು, ಆರು ಏಳನೇ ತರಗತಿಗಳಲ್ಲಿ ಓದಿದ ಶಬರಶಂಕರವಿಲಾಸದೊಳಗಿನ ಪದ್ಯಗಳ ಸೌಂದರ್ಯವನ್ನು ಕಣ್ಣುಟ್ಟಿ ಅನುಭವಿಸುವಂತೆ ಮಾಡಿದವು. ಶಿವಲಿಂಗಕ್ಕೆ ಎಲೆಪೂಜೆಯ ಮಂಟಪ ಕಟ್ಟಿದಂತೆ ಆಕಾಶಮಂಡಲದಲ್ಲಿ ನಿಗುರಿನಿಂತ ಮಾಮರಗಳು ಅನೇಕ ಪಕ್ಷಿಗಳಿಗೆ ದುಂಬಿಗಳಿಗೆ ಆಶ್ರಯಸ್ಥಾನಗಳಾಗಿ ವಾಚಾವರ್ಣಿಸಲಾಗದ ಸೌಂದರ್ಯದ ಗಣಿಗಳಾಗಿದ್ದವು. ಆದ್ದರಿಂದ ಇಂಥ ಮಾಮರವನ್ನು ಕಂಡು ಬ್ರಹ್ಮ ಕೂಗಿ ಮಹಾಮರ ಎಂದು ಅದಕ್ಕೆ ಹೆಸರಿಟ್ಟನೆಂಬ ಕವಿಯ ಹೇಳಿಕೆಯನ್ನು ಅಲ್ಲಗಳೆಯಲಾದೀತೇ? ಬ್ರಹ್ಮನಲ್ಲದಿದ್ದರೆ

ನಮ್ಮಂಥ ಸೌಂದರ್ಯ ಮುಗ್ಧರಾದವರೆಲ್ಲಾ ಮಹಾಮರ ಎಂದು ಉದ್ಗಾರತೆಗೆದಿರಬಹುದು. ಬರಬರುತ್ತ ಅದು ಸವೆದು ಮಾಮರ - ಮಾವಿನಮರ ಆಗಿರಬಹುದು ಅಥವಾ ಈ ಮಾತು ಮಾವಿನಮರ ಈ ಶಬ್ದಕ್ಕೆ ಸ್ವಲ್ಪ ಸಮೀಪದ ಸ್ವರ ಸಂಯೋಜನೆ ಶಬ್ದಗಳಿಂದ ಕೂಡಿದ್ದರಿಂದ ಬ್ರಹ್ಮನೇ ಕೂಗಿರಬೇಕೆಂದು ಅತಿಶಯ ಪ್ರೀತಿಯಿಂದ ಹೇಳಿದ ಒಂದು ಸುಳ್ಳಾದರೂ ಆಗಿರಬಹುದು.

"ಅಳಿಕುಲಮಿಂದ್ರ ನೀಲಮಣಿ, ಪಚ್ಚೆ ಪಸುರ್ಮಿಡಿ, ತಳ್ತ ಮಲ್ಲಿಕಾ ಸುಲಲಿತ ಕುಟ್ಮಳಾಳಿ ಪೊಸಮುತ್ತು, ಕೊಸರ್ ಪವಳಂ, ಪೊದಳ್ದು ಸಂಗಳಿಸಿದರೆ ತನ್ನೊಳ್ ಒಪ್ಪಿದುದು ಮಾಮರಮಲ್ಲ ಮನೋಜ್ಞ ರತ್ನಸಂಕುಳಂ ಎನೆ ಕಾತ ಕಲ್ಪಕುಜದಂತೆ ಮರುದ್ಗತ ನಂದನ ಸ್ಥಿತಂ" ಮರುದ್ಗತ ನಂದನವನ್ನು ಹಿಂದಿನವರು ವರ್ಣಿಸುತ್ತ ಬಂದಿರಬಹುದು. ಅದು ಹೇಗಿತ್ತೋ ದೇವರೇ ಬಲ್ಲ. ನಂದನವನದಲ್ಲಿರುವ ಕಾಯಿಬಿಟ್ಟ ಕಲ್ಪವೃಕ್ಷದ ಹಾಗೆ ಷಡಕ್ಷರಕವಿಯ ಕಲ್ಪನೆಯ ಕಣ್ಣಿಗೆ ಇಂದ್ರಕೀಲದಲ್ಲಿರುವ ಮಾವಿನ ಮರ ಕಂಡಿದೆ. ಇಂದ್ರಕೀಲ ಮಾಮರವಲ್ಲ, ಕರ್ನಾಟಕದ ಮಾವಿನ ಮರವೇ ಎಂಬುದಂತೂ ಸತ್ಯ. ದುಂಬಿಗಳೇ ಇಂದ್ರನೀಲ ಮಣಿಗಳಂತೆ - ಇದನ್ನು ಒಪ್ಪಬಹುದು. ಆದರೆ ಸುಲಲಿತವಾದ ಮಲ್ಲಿಗೆಯ ಮೊಗ್ಗುಗಳು ಮಾಮರದ ತುಂಬೆಲ್ಲ ಮುತ್ತಿನಂತೆ ಕಾಣುತ್ತಿದ್ದವೆಂದು ಹೇಳಿದುದು ಅಸದ್ವರ್ಣನೆಯೇ ಸರಿ ಎನ್ನಬಹುದು. ನನ್ನ ಕಣ್ಣಿಗೆ ಇದೊಂದು ದೃಶ್ಯ ಮಾತ್ರ ಎಲ್ಲೂ ಬೀಳಲಿಲ್ಲ. ಕವಿ ಇಲ್ಲಿ ಇದ್ದುದನ್ನು ಹೇಳಿರಲಿಕ್ಕಿಲ್ಲ. ಇರಬೇಕಾದ್ದನ್ನು ಹೇಳಿರಬಹುದು ಎನ್ನಿಸುತ್ತದೆ. ಮಲ್ಲಿಗೆ ಬಳ್ಳಿ ಮರದ ತುಂಬೆಲ್ಲ ಹರಡಿ ಬಿಳಿಯ ಮೊಗ್ಗುಗಳ ಬಂಬಲಿನಿಂದ ತುಂಬಿದ್ದರೆ ಎಷ್ಟು ಸೊಗಸಾಗಿರುತ್ತಿತ್ತು. ಎಂದು ಮನದಲ್ಲಿ ಬಯಸಿ ಭಾವಿಸಿ ಬರೆದಿರಬಹುದು ಅಥವಾ ಎಲ್ಲಿಯಾದರೊಂದೆಡೆ ಅಂಥ ಮಾಮರವನ್ನು ಕವಿ ಕಂಡು ಅದರ ಸೌಂದರ್ಯವನ್ನೀ ಸಂದರ್ಭಕ್ಕೆ ಜೋಡಿಸಿ ತೃಪ್ತಿಪಟ್ಟಿರಬಹುದೇ?

ಅಲ್ಲಿ ಕಳಕಂಠಗಳ ಬಗ್ಗೆ ಚಿಗುರಿದ್ದಲ್ಲಿ ಗಿಳಿಗಳ ಚಪ್ಪರಣೆ ತನಿವಣ್ಣಿದ್ದಲ್ಲಿಯೂ ಇತ್ತು, ಅಳಿಗಳ ಇಂಚರ ಸುಮಕುಳಂಗಳು ತುಂಬಿದಲ್ಲಿ ಇತ್ತು ಎಂದು ಮಾತ್ರ ಹೇಳಲಾಗುವುದಿಲ್ಲ. ಏಕೆಂದರೆ ಹಣ್ಣಾದ ಮಾವಿನಮರದಲ್ಲಿ ಹೂಗಳು ಇರಲು ಹೇಗೆ ಸಾಧ್ಯ? ಒಂದು ವೇಳೆ ಇದ್ದರೆ ಚಂದ ಎಂಬುದನ್ನು ಕವಿ ಭಾವಿಸಿ ಬರೆದಿರಬಹುದು. ನಾನು ಕಂಡ ಮಾಮರವನ್ನು ಕವಿಯ ಕಣ್ಣಿನಿಂದ ಕಂಡು ಬಹಳ ತೃಪ್ತಿಪಟ್ಟೆ. ಇದು ಮನದಲ್ಲಿ ಭಾವಿಸಿಕೊಂಡು ಹೊಂದಬೇಕಾದ ಅನುಭೂತಿ. ಕೆಲ ಮಾಮರಗಳಲ್ಲಿ ಗೊಂಚಲುಗೊಂಚಲಾಗಿ ಎಲೆಗೊಂದು ಚಿಕ್ಕ ಚಿಕ್ಕ ಕಾಯಿ ಬಿಟ್ಟದ್ದನ್ನು ಕಂಡೆ. ಬಾಯಿಗೆ ಹಾಕಿ ಕಡಿದರೆ ಹುಳ್ಳಾನ ಹುಳಿ. ಕಾಯಿ ಹರಿದರೆ ಚೆಲ್ಲೆಂದು ಸಿಡಿಯುವ ಸೋನೆ. ನನ್ನ ಗೆಳೆಯ ಆ ಮರದ ಬಗ್ಗೆ ಹೇಳಿದುದು ಹೀಗೆ : ಈ ಮಾವಿನ ಮರದ ಕಾಯಿ ಕೇವಲ ಉಪ್ಪಿನ ಕಾಯಿಗೆ ಮಾತ್ರ. ಈ ಮಿಡಿಗಳನ್ನೇ ಕಿತ್ತು ಉಪ್ಪಿನ ಕಾಯಿ ಹಾಕಿ ವರ್ಷವಿಡೀ ಕೆಡದೆ ಇರುವ ಉಪ್ಪಿನಕಾಯಿ ರುಚಿ ಅನುಭವಿಸಬಹುದು. ಇದರ ಹಣ್ಣು ತಿನ್ನಲಿಕ್ಕೆ ಯೋಗ್ಯವಲ್ಲ. ಇನ್ನು ಕೆಲವು ಮಾಮರಗಳ ಹೆಸರನ್ನು ಮಗೆಮಾವು ಕೊಬರಿಮಾವು, ಜೀರಿಗೆ ಮಾವು, ಚಿಟ್ಟೆಮಾವು, ಗಿಳಿಮೂತಿ ಮಾವು, ಚೆಟ್ಟಿಮಾವು ಇತ್ಯಾದಿ ಇತ್ಯಾದಿ ಹಲವಾರು ಹೆಸರು ಹೇಳಿದ. ಅವೆಲ್ಲ ಮರೆತು ಹೋಗಿವೆ.

ಕೆಲವು ಹಲಸಿನ ಮರಗಳ ಬಳಿಗೆ ನನ್ನನ್ನು ಕರೆದುಕೊಂಡು ಹೋದ. ಕಾಯಿಬಿಟ್ಟ ಆ ಮರಗಳನ್ನು ಕಂಡು ನಾನು ಹುಚ್ಚನಾಗಿ ಹೋದೆ. ಈ ಮರಗಳು ನೆಲದಲ್ಲೂ ಕಾಯಿ ಬಿಡುತ್ತವೆಂದೂ

ಹಾಗೆ ಕಾಯಿಬಿಟ್ಟು ಬಲಿಯುತ್ತ ಬಂದ ಹಾಗೆ ನೆಲಬಿರಿಯುವುದೆಂದೂ ತಿಳಿಸಿದ. ಆದರೆ ಅಂಥ ದೃಶ್ಯ ಕಣ್ಣಿಗೆ ಬೀಳಲಿಲ್ಲ. ಎಷ್ಟೋ ಜನ ಹಲಸಿನ ಹಣ್ಣು ತಿಂದು ತಿಂದು ಬೇಸರ ಬಂದು ಬಕ್ಕೆಹಲಸಿನ ಹಣ್ಣನ್ನು ಕಾಲಿನಿಂದ ತುಳಿದು ಬೀಜಗಳನ್ನು ಮಾತ್ರ ಆರಿಸಿ ತೆಗೆದು ಗಡಿಗೆಯಲ್ಲಿ ತುಂಬಿಟ್ಟುಕೊಂಡು ಮಳೆಗಾಲದಲ್ಲಿ ಪುಡಿಚಟ್ನಿ. ಸಾರುಗಳಿಗೆ ಬಳಸುವುದಲ್ಲದೆ ಹುರಿದು ಮಳೆ ಹತ್ತಿದಾಗ ತಿಂದು ಮೈಬಿಸಿ ಮಾಡಿಕೊಳ್ಳುತ್ತಾರೆಂದು ನಗುತ್ತ ಹೇಳಿದ. ನನಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ಈ ನಾಡಿನಲ್ಲಿ ಇಷ್ಟೊಂದು ಸಮೃದ್ಧವಾದ ಹಲಸಿನ ಹಣ್ಣನ್ನು ತಿನ್ನುವ ಬಾಯಿಗಳೇ ಇಲ್ಲವಲ್ಲಾ ಎಂದು ಮುಂದೆ ನಾನು ಹಲಸಿನಬೀಜದ ಚಟ್ನಿ, ಸಾರನ್ನು-ಮಲೆನಾಡಿನಲ್ಲಿ ಊಟಮಾಡಿದೆ. ಬೀಜಗಳನ್ನು ಬಾಯಲ್ಲಿ ಹಾಕಿ ಕಡಿಯುವ ಸಾಹಸ ಮಾಡಲಿಲ್ಲ. ಹಲಸಿನ ಹಣ್ಣಷ್ಟೇ ಅಲ್ಲ. ಜಮನೀರಲು ಹಣ್ಣು, ಕಾಡಿನ ಮಾವಿನ ಹಣ್ಣನ್ನು ತಿನ್ನುವವರೇ ದಿಕ್ಕಿಲ್ಲವೆನ್ನಬಹುದು. ಮಳೆಗಾಲ ಪ್ರಾರಂಭವಾದಾಗ ಮಾರ್ಗದಲ್ಲಿ ಉದುರಿಬಿದ್ದ ನೇರಳೆ ಮಾವಿನ ಹಣ್ಣುಗಳ ಕೊಳೆತ ವಾಸನೆ ಇರುತ್ತಿತ್ತು. ಕೆಲವು ಮಾರ್ಗಗಳಲ್ಲಿ ದಟ್ಟವಾಗಿ ಉದುರಿದ ನೇರಳೇ ಹಣ್ಣುಗಳ ಮೇಲೆ ಹರಿದು ಹೋಗುತ್ತಿದ್ದ ನೀರು ನೇರಳೆ ಬಣ್ಣದ್ದಾಗುತ್ತಿತ್ತು. ನಡೆವವರ ಕಾಲುಗಳೂ ಕರ್ರಗಾಗುತ್ತಿದ್ದುದನ್ನು ಕಂಡಿದ್ದೇನೆ. ಅಷ್ಟೊಂದು ಹಣ್ಣು ಸಮೃದ್ಧ. ತಿನ್ನುವವರೇ ದಿಕ್ಕಿಲ್ಲ. ಒಮ್ಮೆ ನಮ್ಮ ದೊಡ್ಡಪ್ಪ ಮನೆಯಲ್ಲಿ ಸೀಕರಣೆ ಮಾಡಿಸೋಣವೆಂದು ಹುಲ್ಲಾಳ ಸಂತೆಗೆ ಹೋಗಿ ಹತ್ತು ಬಿಲ್ಲಿ ಕೊಟ್ಟು ನೂರು ಮಾವಿನ ಹಣ್ಣು ತಂದುದನ್ನು ಈ ಸಂದರ್ಭದಲ್ಲಿ ಜ್ಞಾಪಿಸಿಕೊಂಡೆ. ಈ ಗಿಡಗಳಲ್ಲಿ ಹಣ್ಣುಗಳೇ ಕಾಣುವುದಿಲ್ಲ. ಕಾರಣವೇನೋ! ಒಂದು ಮಾತಂತೂ ಪಂಪ ಕವಿಯ ಹಾಗೆಯೇ ನನಗೂ 'ಆರಂಕುಶಮಿಟ್ಟೊಡಂ' ಇಂದಿಗೂ ನನ್ನ ಮನ ಬನವಾಸಿ ನಾಡಿನ ಉಪವನ ಪ್ರದೇಶವನ್ನು ನೆನೆಯುತ್ತಲಿದೆ. ಇಷ್ಟು ಹೇಳಿದರೆ ಸಾಕು.

***ಸಂಗೀತ ಕಚೇರಿಗಳು***

ಪುಟ್ಟಪ್ಪ ಮತ್ತು ನಾನು ಸೇರಿ ಅರಣ್ಯವನ್ನೆಲ್ಲ ತಿರುಗಿ ತುಮರಿ, ಕವಳಿ ಮೊದಲಾದವನ್ನು ಮಾವಿನ ಪಾಡುಗಳನ್ನು ತಿನ್ನುವಷ್ಟು ತಿಂದು ಉಳಿದವನ್ನು ತೇಗದ ದೊಡ್ಡದೊಡ್ಡ ಎಲೆಗಳ ದೊನ್ನೆ ಕಟ್ಟಿಕೊಂಡು ಬಂದು ಗಣೇಶಪ್ಪಾ, ಶಿವಬಸಪ್ಪ ಅವರುಗಳಿಗೆ ಕೊಡುತ್ತಿದ್ದೆವು. ಅವರು ಒಂದೆರಡರ ರುಚಿ ನೋಡಿ ಮುಖ ಕೆಡಿಸಿಕೊಂಡು ಕೈಬಿಡುತ್ತಿದ್ದರು. ನಾನು ಹೆಚ್ಚಾಗಿ ಕಾಲ ಕಳೆಯುತ್ತಿದ್ದುದು ಒಬ್ಬೊಬ್ಬರೇ ಆಗಿದ್ದ ಗಣೇಶಪ್ಪ, ಪುಟ್ಟಪ್ಪ ಅವರ ಮನೆಯಲ್ಲಿಯೇ. ಊಟೋಪಚಾರ ಗದಿಗೆಪ್ಪ ಸೆಟ್ಟರ ಮನೆಯಲ್ಲಿ ನಡೆಯುತ್ತಿತ್ತು. ರಾತ್ರಿ ನಾವು ಊಟೋಪಚಾರ ಮುಗಿಸಿದ ಮೇಲೆ ಏನಾದರೂ ಮನರಂಜನೆ ಬೇಕಲ್ಲವೆ? ಪುಟ್ಟಪ್ಪ ಕಟ್ಟೆಯ ಮೇಲೆ ಚಾಪೆ ಹಾಸಿ ಸಿದ್ಧನಾಗಿರುತ್ತಿದ್ದ. ನಾನು ಗಣೇಶಪ್ಪಾ, ಶಿವಬಸಪ್ಪ ಅಲ್ಲಿಗೆ ಹೋಗಿ ಸೇರುತ್ತಿದ್ದೆವು. ನಮ್ಮ ಈ ಮೇಳಕ್ಕೆ ಇನ್ನುಳಿದ ಏಳೆಂಟು ಜನ ಸೇರುತ್ತಿದ್ದರು. ಶಿವಬಸಪ್ಪ ಒಂದು ಒಳ್ಳೆಯ ಹಾರ್ಮೋನಿಯಂ ಇಟ್ಟಿದ್ದ. ಹಾರ್ಮೋನಿಯಂ ತರಿಸಿ ನನಗೆ ಹಾಡಲು ಹೇಳುತ್ತಿದ್ದ. ನಾನೇ ಆ ಊರಿಗೆ ಆಗ ದೊಡ್ಡ ಗವಾಯಿ. ಇದುವರೆಗೆ ಕಲಿತ ನಾಟಕದ ಪದ್ಯ, ಶಿವಯೋಗ ಮಂದಿರದ ಭಜನಾವಳಿ ಪದ್ಯಗಳೆಲ್ಲ ನನ್ನ ಉಚ್ಚಕಂಠದಿಂದ ಹೊರಬರುತ್ತಿದ್ದವು. ನಮ್ಮ ಜೋಡಿ ಹೇಗಿತ್ತೆಂದರೆ ನನಗೆ ಹಾಡಲು ಬರದು. ಶಿವಬಸಪ್ಪನಿಗೆ ಹಾರ್ಮೋನಿಯಂ ನುಡಿಸಲು ಬರದು. ಆದರೂ ಜನ ಸೇರಿಸುತ್ತಿದ್ದೆವು. ಏನಾದರೂ ಮನರಂಜನೆ ಜನಕ್ಕಂತೂ ಬೇಕಲ್ಲವೆ? ಪೇಟೆಯ ಸುತ್ತಮುತ್ತಲ ಮನೆಯವರು ನನ್ನ ಈ ಭವ್ಯವಾದ ಸಂಗೀತವನ್ನು ತಮ್ಮ ತಮ್ಮ ಕಟ್ಟೆಯ ಮೇಲೆಯೇ ಕುಳಿತು ಕೇಳಿ 'ಹೊಸದಾಗಿ

ಊರಿಗೆ ಬಂದ ಮಾಸ್ತರರು ಪರವಾಯಿಲ್ಲ. ಹಾಡು ಚೆನ್ನಾಗಿ ಹಾಡುತ್ತಾರೆ' ಎಂಬ ಮಾತನ್ನು ಕೇಳಿದ್ದೇನೆ. ಇದರಿಂದ ನನ್ನಷ್ಟಕ್ಕೆ ನಾನೇ ಹಾಡುಗಾರನೆನಿಸಿ ಬಿಟ್ಟಿದ್ದೆ. ಇದುವರೆಗೆ ನಾನು ನೋಡಿದ ಅನೇಕ ನಾಟಕದ ಹಾಡುಗಳ ಪ್ರಯೋಜನ ಮಲೆನಾಡಿನ ಈ ಹೊಸೂರಿನಲ್ಲಾದರೂ ಬೈಠಕ್ ರೂಪದಲ್ಲಿ ಹಾಡುವ ಸ್ಥಿತಿಗೆ ಬಂದಿತಲ್ಲಾ ಎಂಬ ಸಂತೋಷದಿಂದ ನಾನು ಬೀಗದೆ ಇರಲಿಲ್ಲ.

ನಾನು ಹಾಡುತ್ತ ಹಾಡುತ್ತ ಹೋದಂತೆ ದ್ರೌಪದಿಸ್ವಯಂವರದಲ್ಲಿ ಸುಶೀಲೆ ಹಾಡಿದ "ವನಮಾಲಿ..." ಪದ್ಯಹಾಡಿ, ಮಾನ್ವೂರು ಬಸವರಾಜರು ಹಾಡಿದ "ಶ್ಯಾಮಾನಿಕೋಮಲೇ.." ಎಂಬ ಹಾಡು ಹಾಡಿ ಎಂದು ಕೇಳುವವರೂ ಇದ್ದರು. ಅಷ್ಟರಮಟ್ಟಿಗೆ ಆ ಕಂಪನಿಯ ಹಾಡುಗಳು ಜನಜನಿತವಾಗಿ ಹೋಗಿದ್ದವು. ಪಲಗೇರಿ ಜಟ್ಟೆಪ್ಪನ ಉತ್ತರ ಭೂಪ, ಮನ್ನೂರು ಬಸವಣ್ಣೆಪ್ಪನ ಕಡ್ಲಿಮಟ್ಟಿ ಸ್ಟೇಷನ್ ಮಾಸ್ತರ, ದ್ರೌಪತಿ ವಸ್ತ್ರಾಪಹರಣ,ಉಷಾಸ್ವಯಂವರ ನಾಟಕದ ಅನೇಕ ಹಾಡುಗಳನ್ನು ಹಾಡುತ್ತಿದ್ದಂತೆ ಕೊನೆಯಲ್ಲಿ ನಕ್ಕುನಗಿಸುವ ಹಲಗೇರಿ ಕಂಪನಿಯ ಸ್ತ್ರೀನಾಟಕದೊಳಗಿನ "ಬಡವನ ಕೆಡಿಸಿದ್ಯೋ ಮಾರಾ, ನಿನ್ನ ಕುಡಿದರು ಮರುಗದು ಜೀವ......" ಎಂಬ ಪದ್ಯ, "ಜೂಜನಾಡಿದರ ದಂಪತಿಗಳು ಸರಿಬೆಸನಾಡಿದರ....." ಎಂಬ ಜಾನಪದ ಧಾಟಿಯ ಹಾಡನ್ನು ಹಾಡಲು ಹಾರ್ಮೋನಿಯಂ ಹತ್ತಿರ ತಾ ಮುಂದೆ ತಾ ಮುಂದೆ ಎಂದು ಅನೇಕರು ಬರುತ್ತಿದ್ದರು. ಹಾಡಿ ನಕ್ಕುನಲಿದು ಆಮೇಲೆ ಸಾಮಾನ್ಯವಾಗಿ ಎಲ್ಲರೂ ಶಿವಬಸಪ್ಪನ ಬೀಡಿಕಟ್ಟಿನಿಂದ ಒಂದೊಂದು ಬೀಡಿ ಹಿರಿದುಕೊಂಡು ಎಳೆದು ತಮ್ಮ ತಮ್ಮ ಮನೆಗೆ ಹೋಗುತ್ತಿದ್ದರು. ನನಗೇ ಆಗ ಬೀಡಿಹೊಗೆ ಎಂದರೆ ಆಗುತ್ತಿರಲಿಲ್ಲ. ನನ್ನನ್ನು ಕಂಡು ಬೀಡಿ ಕೊಡಲು ಬರುತ್ತಿದ್ದರು. ನಾನು ನಿರಾಕರಿಸಿದಾಗ ಪರವಾಯಿಲ್ಲ ಅದಕ್ಕಾಗಿಯೇ ಇವರ ಆರೋಗ್ಯ ಹೀಗಿದೆ ಎನ್ನುತ್ತಿದ್ದುದೂ ಉಂಟು. ನಿಜವಾಗಿ ನನ್ನ ಮೈಕಟ್ಟು ಬಹುಕ್ರಮಬದ್ಧವಾಗಿ ಬೆಳೆದಿತ್ತು. ಇದು ದೀರ್ಘಕಾಲ ವ್ಯವಸಾಯ, ನೀರೆತ್ತುವುದು ಮೊದಲಾದ ಶ್ರಮದ ಕೆಲಸಮಾಡಿ ಚೆನ್ನಾಗಿ ಆಹಾರ ತಕ್ಕೊಳ್ಳುತ್ತಿದ್ದುದರ ಫಲವಾಗಿತ್ತು. ಮಲೆನಾಡಿನವರಲ್ಲಿ ಇಂತ ಮೈಕಟ್ಟಿನವರನ್ನು ಆಗ ಕಾಣಲಾಗುತ್ತಿರಲಿಲ್ಲ. ನಾನು ಹಾಡುವ ಹಾಡುಗಳೆಲ್ಲ ಶುದ್ಧವಾಗಿರುತ್ತಿದ್ದವೆಂದೇನೂ ಇಲ್ಲ. ನಾಟಕ ನೋಡುವಾಗ ಅವು ನನ್ನ ಕಿವಿಗೆ ಹೇಗೆ ಕೇಳಿಸುತ್ತಿದ್ದವೋ ಹಾಗೆ ಹೇಳುತ್ತಿದ್ದೆ. ಮೂಲಪದ್ಯಗಳನ್ನು ಬರೆದುಕೊಂಡು ಬಾಯಿ ಪಾಠಮಾಡಿದ್ದಿಲ್ಲ. ಒಮ್ಮೊಮ್ಮೆ ಎಲ್ಲೋ ತಪ್ಪು ಬಂದರೆ ತನನ ನನನ ನನ ಇತ್ಯಾದಿ ತರಾನಾ ಹಾಡಿ ತಾಳ ಕೂಡಿಸಿ ನಗಿಸಿ ಬಿಡುತ್ತಿದ್ದುದೂ ಉಂಟು. ನಾನು ಹಾಡುತ್ತಿದ್ದೆ ಅನ್ನುವುದಕ್ಕಿಂತ ಕೂಗಾಡುತ್ತಿದ್ದೆ ಅನ್ನುವುದೇ ಮೇಲು. ಕಿರುಚುತ್ತಿದ್ದೆ ಎನ್ನಲಾಗುವುದಿಲ್ಲ. ಅಂತೂ ಆಗಿನ ನನ್ನ ಉತ್ಸಾಹದ ಬಗ್ಗೆ ನನಗೆ ಈಗಲೂ ಹೆಮ್ಮೆ. ಈ ಉತ್ಸಾಹ ಅದಕ್ಕೆ ಪ್ರೋತ್ಸಾಹ ಕೊಡುವ ಆತ್ಮೀಯ ಮಿತ್ರರು ಇರದಿದ್ದರೆ ನಾನು ಬೆಳೆಯುತ್ತಿರಲೇ ಇಲ್ಲ. ನಮ್ಮ ಶಿವಬಸಪ್ಪನ ಹಾರ್ಮೋನಿಯಂ ಬಾರಿಸುವಿಕೆಯೂ ನನ್ನ ಹಾಗೆಯೇ ಒಮ್ಮೊಮ್ಮೆ ನನ್ನ ರಾಗಕ್ಕೂ ಅವನ ತಾಳ ಹಿಡಿಯುವಿಕೆಗೂ ಸಂಬಂಧವೇ ಇರುತ್ತಿರಲಿಲ್ಲ. ಆದರೆ ಹಾರ್ಮೋನಿಯಂ ಬಾರಿಸುವಾಗ ನಮ್ಮ ಶಿವಬಸಪ್ಪನ ಭುಜ ಕುಣಿಸುವಿಕೆ, ತಲೆ ಹಾಕುವಿಕೆ ನೋಡತಕ್ಕಂಥವಾಗಿದ್ದವು. ಅಂತು ಇಂತೂ ನಮ್ಮ ಸಂಗೀತ ಕಚೇರಿ ಆ ಹಾಳುಊರಲ್ಲಿ ಗದ್ದಲವನ್ನಂತೂ ಮಾಡುತ್ತಿತ್ತು; ನಗೆ ಅಲೆ ಎಬ್ಬಿಸುತ್ತಿತ್ತು. ನಾನೊಂದು ಜಾತಿಯ ಪುಟ್ಟ ಗವಾಯಿಯೂ ಆದೆ.

## ಗಣೇಶಪ್ಪನ ಮನೆ ಒಮ್ಮೊಮ್ಮೆ ನಮ್ಮ ಪಾಕಶಾಲೆ

ಗಣೇಶಪ್ಪ ದೊಡ್ಡಮನೆತನದವ. ಅವರ ಪೂರ್ವಜರು ಸ್ವತಃ ಗಾಣದಲ್ಲಿ ಎಣ್ಣೆ ತೆಗೆದು ದೊಡ್ಡಪ್ರಮಾಣದಲ್ಲಿ ವ್ಯಾಪಾರಮಾಡಿಕೊಂಡಿದ್ದವರು. ಬಹು ಜನ ಸತ್ತು ಕೆಟ್ಟು ಹೋದರು, ಕೆಲವರು ಮಲೇರಿಯಾಕ್ಕೆ ಹೆದರಿ ಊರು ಬಿಟ್ಟು ಅತ್ತಿತ್ತ ಚದುರಿದರು. ಗಣೇಶಪ್ಪನ ಹೆಂಡತಿ ಮಕ್ಕಳು ಮಲೇರಿಯಾಕ್ಕೆ ಆಹುತಿಯಾಗಿ ಅವನೊಬ್ಬನೇ ಬದುಕಿ ಉಳಿದಿದ್ದ. ದೊಡ್ಡಮನೆ ಮನೆ ಮಧ್ಯದಲ್ಲಿಯೇ ಭಾರೀ ಪ್ರಮಾಣದ ಎಣ್ಣೆ ತೆಗೆಯುವ ಮರದ ಗಾಣಗಳು, ಎ ಹಾಳುಬಿದ್ದಿತ್ತು. ಮನೆಯ ಒಂದು ಪಾರ್ಶ್ವ ಅರ್ಧಮರ್ಧ ಬಿದ್ದು ಹೋಗಿತ್ತು. ಅದು ಬೂತಾವಾಸ ಮನೆಯೆಂದು ಮುಚ್ಚಿದ ಕದ ತೆರೆಯುತ್ತಲೇ ಇರಲಿಲ್ಲ. ಪೇಟೆಗೆ ಹೊಂದಿಕೊಂಡಿದ್ದ ಮಾಳಿ ಒಂದು ಕೊಠಡಿ, ಪಡಸಾಲೆ, ಅಡಿಗೆ, ಬಚ್ಚಲಮನೆ ಮಾತ್ರ ಉಪಯೋಗಕ್ಕೆ ಇಟ್ಟುಕೊಂಡಿದ್ದ ಅಂಥ ದೊಡ್ಡಮನೆಯಲ್ಲಿರಲು ಅವನಿಗೂ ಹೆದರಿಕೆಯೇ. ನಾನು ಅವನ ಜೊತೆಯಾದೆ. ಸದಾ ಅವನ ಮನೆಯಲ್ಲಿಯೇ ಕಾಲ ಕಳೆಯುತ್ತಿದ್ದೆ. ಗಣೇಶಪ್ಪನಿಗೆ ಗದ್ದೆ ಹೊಲ ಬೇಕಾದಷ್ಟಿತ್ತು ಎರಡು ಮೂರು ಎಕರೆ ತಾನು ಮಾತ್ರ ಇಟ್ಟುಕೊಂಡು ಒಂದು ಆಳಿನ ಜೊತೆ ಉಳುವ ಮಾಡಿಕೊಂಡು ಇದ್ದ. ಉಳಿದ ಹತ್ತಿಪ್ಪತ್ತು ಎಕರೆ ಗದ್ದೆಯನ್ನು ಇಪ್ಪತ್ತು ಮೂವತ್ತೂ ಎಕ ಹಕ್ಕಲು ಜಮೀನನ್ನು ಯಾರಾರಿಗೋ ಕೋರು, ಕುಂಬಳಿ ಕೊಟ್ಟಿದ್ದ. ಅವರಿಂದ ಇವನಿಗೇನು ಲಾಭವಿರಲಿಲ್ಲ. ಗದ್ದೆ ಹೊಲ ಸಾಗುವಳಿಯಾದರೂ ಆಗಿರಲಿ ಎಂದು ಕೊಟ್ಟಿದ್ದ. ವರ್ಷ ಅವರು ನಾಲ್ಕೈದು ಚೀಲ ಬತ್ತ ತಂದು ಹಾಕಿದರೆ ಇವನ ಪುಣ್ಯ ಅನ್ನಬೇಕಾಗಿತ್ತು. ಮಾ ಬಿಡೋಣವೆಂದು ಕೊಂಡ. ಕೊಳ್ಳುವವರಾರು? ಎಲ್ಲರಿಗೂ ಅವರವರ ಹೊಲಗದ್ದೆಗಳೆ ಭಾರವಾಗಿದ್ದವು. ಇಂಥ ಸ್ಥಿತಿಯಲ್ಲಿ ಅವನು ತಮ್ಮೂರ ಸೊಸೈಟಿ ಸೆಕ್ರಟರಿಯೋ ಏನೋ ಮಾಡಿಕೊಂಡು ತಿಂಗಳಿಗೆ ನಾಲ್ಕೋ ಐದೋ ರೂಪಾಯಿ ಸಂಬಳ ಪಡೆಯುತ್ತಿದ್ದ. ನಮ ಸೆಟ್ಟರ ಶಿವಬಸಪ್ಪನೇ ಸೊಸೈಟಿ ಅಧ್ಯಕ್ಷ. ತನ್ನ ಹೊಲದಿಂದ ಸ್ವಲ್ಪ ಉತ್ಪತ್ತಿ ಮಾಡಿಕೊಂಡ ನಾಲ್ಕಾರು ದನ ಕಟ್ಟಿಕೊಂಡು ಜೀವನ ಸಾಗಿಸುತ್ತಿದ್ದ. ಇವನದೇ ಆದ ಸುಮಾರು ಇಪ್ಪತ್ತು ಎಕ ವಿಸ್ತೀರ್ಣದ ಅರಣ್ಯ ಪ್ರದೇಶವಿತ್ತು. ಅದರಲ್ಲಿ ಮತ್ತಿ, ಹೊನ್ನೆ ಮೊದಲಾದ ಮರಗಳು ಇದ್ದವು ಆಗಾಗ ಕೆಲವು ಮರಗಳನ್ನು ಮಾರಿ ಎಂಟೋ ಹತ್ತೋ ರೂಪಾಯಿ ಗಿಟ್ಟಿಸಿಕೊಳ್ಳುತ್ತಿದ್ದ ಕೆಲವೊಂದು ಸಲ ಉರುವಲ ಕಟ್ಟಿಗೆಗಳಿಗಾಗಿ ಅರಣ್ಯ ಕಡಿಸಿ ವರ್ಷಕ್ಕೆ ಹತ್ತಿಪ್ಪತ್ತೂ ಗಾಡಿಗಳನ್ನ ಎಂಟಾಣೆಗೆ ಒಂದು ಗಾಡಿಯಂತೆ ಮಾರಾಟಮಾಡುತ್ತಿದ್ದ. ಹೀಗಿದ್ದ ಗಣೇಶಪ್ಪನ ಮನೆ ನಮ ಸೆಟ್ಟರ ಶಿವಬಸಪ್ಪನಿಗೂ ಒಮ್ಮೊಮ್ಮೆ ವಿರಾಮ ಪಡೆಯುವ, ಹರಟೆಕೊಚ್ಚುವ ತಾಣವಾಗಿರುತ್ತಿತ್ತು ನಾಲಿಗೆ ಚಪಲವನ್ನು ತೀರಿಸಿಕೊಳ್ಳಲೂ ಕೂಡ ಈ ಮನೆಯೇ ಶಿವಬಸಪ್ಪನಿಗೆ ಅನಧಿಕೃ ಬಾಣಸ ಗೃಹವಾಗಿತ್ತು.

ಒಂದೊಂದು ದಿನ ನಾನು, ಗಣೇಶಪ್ಪ ಇಬ್ಬರೇ ಮನೆಯಲ್ಲಿ ಇದ್ದೇವೆಂದು ತಿಳಿದರ ನಾನು ಅಂಗಡಿಯಿಂದ ಅವಲಕ್ಕಿ, ಉಳ್ಳೇಗಡ್ಡಿ, ಕಡಲೆ, ತೆಂಗಿನಕಾಯಿ, ಕುಸುಬೆ ಎಣ್ಣೆ ಮೊದಲಾ ಒಗ್ಗರಣೆ ಸಾಮಾನು ಸಹಿತ ಕಳಿಸುತ್ತಿದ್ದ. ಚಹಾಪುಡಿ, ಸಕ್ಕರೆಯನ್ನು ಕಳಿಸಿ ಬೇಗ ಒಗ್ಗರಣ ಹಾಕಬೇಕೆಂದೂ ಸ್ವಲ್ಪ ಹೊತ್ತಿನಲ್ಲೇ ಬರುತ್ತೇನೆಂದೂ ಹೇಳಿ ಕಳಿಸುತ್ತಿದ್ದ. ಸರಿ. ನಾನೇ ಬಾಣಸಿಗ ಗಣೇಶಪ್ಪ ಉಳ್ಳೇಗಡ್ಡಿ ಹೆಚ್ಚುವುದು. ಕೊಬ್ರಿ ತುರಿಯುವುದು ಮಾಡುತ್ತಿದ್ದ. ಕುಸುಬೆ ಎ ಒಗ್ಗರಣೆಯೆಂದರೆ ಕೇಳಬೇಕೆ? ಓಣಿಯೆಲ್ಲ ಘಮ ಎನ್ನುತ್ತಿತ್ತು. ಈ ವಾಸನೆಯ ಸುಳಿವು ಹಿಡಿದ

ತುಟ್ಟಪ್ಪ, ಮಾಟೂರು ಚನ್ನಬಸಪ್ಪ ಮೊದಲಾದವರೂ ಒಮ್ಮೊಮ್ಮೆ ನುಗ್ಗಿ ಬಿಡುತ್ತಿದ್ದರು. ನಾವು ಒಗ್ಗರಣೆ ಎಲ್ಲ ಮುಗಿಸಿ ಚಹಾಕ್ಕೆ ಇಟ್ಟು ಸೊಪ್ಪು ಕುದಿಯುವ ಹೊತ್ತಿಗೆ ಶಿವಬಸಪ್ಪನಿಗೆ ಹೇಳಿಕಳಿಸುತ್ತಿದ್ದೆವು. ಅಂಗಡಿಯ ಚಾರ್ಜನ್ನು ತನ್ನ ತಮ್ಮ ವಿರೂಪಾಕ್ಷಪ್ಪನಿಗೋ ಚನ್ನಪ್ಪನಿಗೋ ಒಪ್ಪಿಸಿ ಬೀಡಿ ಬೆಂಕಿ ಪೊಟ್ಟಣಗಳನ್ನು ಕೈಯಲ್ಲಿ ಹಿಡಿದು ಬಂದುಬಿಡುತ್ತಿದ್ದ. ಅವನಿಗೆ ಬೀಡಿ ಬೆಂಕಿಪೊಟ್ಟಣ ಕೈಯಲ್ಲಿ ಯಾವಾಗಲೂ ಇರಲೇಬೇಕು. ದಿನಕ್ಕೆ ಮೂರು ನಾಲ್ಕು ಕಟ್ಟಾದರೂ ಬೀಡಿ ಎಳೆಯಲೇ ಬೇಕು. ಅಂದರೇ ಅವನಿಗೆ ಸಮಾಧಾನ. ಉಂಡು ಮಲಗಿದಾಗ ಮಲಗಿಕೊಂಡೇ ಎರಡು ಮೂರು ಬೀಡಿಸೇದಿ ನಿದ್ರೆ ಹೋಗಬೇಕು ಶಿವಬಸಪ್ಪ.

ಶಿವಬಸಪ್ಪ ಬಂದೊಡನೆ ಎಲ್ಲರೂ ಸೇರಿ, ಎಲ್ಲ ಅವಲಕ್ಕಿ ಮುಕ್ಕಿ ಚಹಾಕುಡಿದು ಬೀಡಿ ಎಳೆದು ಅಡಿಕೆ ಎಲೆಯನ್ನು ಕತ್ತರಿಸಿ ಬಿಡುತ್ತಿದ್ದೆವು. ಶಿವಬಸಪ್ಪ ಪುನಃ ಗಡಬಿಡಿಯಿಂದ ಅಂಗಡಿಗೆ ಧಾವಿಸುತ್ತಿದ್ದ. ಅವರ ಅಂಗಡಿ ಬಹುದೊಡ್ಡದು. ಆ ಮಲೆನಾಡು ಪ್ರಾಂತ್ಯದಲ್ಲೆಲ್ಲ ಪ್ರಸಿದ್ಧ. ಊರೆಲ್ಲ ಹಾಳಾಗಿದ್ದರೂ, ಜನಸಂಖ್ಯೆ ತೀರಾ ಕಡಿಮೆ ಇದ್ದರೂ ಪೇಟೆ ಬೀದಿಯೊಂದೇ ಊರಿನ ಅಸ್ತಿತ್ವದ ಬಗೆಗೆ ಮಲೆನಾಡಿಗೆಲ್ಲ ನಾನಿನ್ನೂ ಇದ್ದೇನೆಂದು ಡಂಗುರ ಸಾರುತ್ತಿತ್ತು. ಶಿವಬಸಪ್ಪನ ಅಂಗಡಿಯ ದೊಡ್ಡದೊಡ್ಡ ಗಿರಾಕಿಗಳು ಎಂದರೆ ಮಲೆನಾಡಿನ ಗೌಡರು. ವ್ಯಾಪಾರದಲ್ಲಿ ಬಹುಚತುರನೂ ದಾಕ್ಷಿಣ್ಯಪರನೂ ವಿನಯಶಾಲಿಯೂ ಆದ ಶಿವಬಸಪ್ಪ ಅಂಗಡಿ ಮೇಲೆ ಕುಳಿತಿದ್ದರೆ ಅದರ ಕಳೆಯೇ ಬೇರೆ. ಎಲ್ಲರೂ ಇವನನ್ನೇ ಅಪೇಕ್ಷಿಸುತ್ತಿದ್ದರು. ಆದ್ದರಿಂದ ಶಿವಬಸಪ್ಪ ಹೆಚ್ಚು ಕಾಲ ನಮ್ಮೊಡನೆ ಕಳೆಯದೆ ಅಂಗಡಿಗೆ ಓಡಿಬಿಡುತ್ತಿದ್ದ. ಉಳಿದಂತೆಲ್ಲ ನಾನು ಮನೆ ಸ್ವಚ್ಛಗೊಳಿಸುವುದು, ಹರಟೆ ಹೊಡೆಯುವುದು ತಪ್ಪಿದರೆ ಹೊಲ, ಗದ್ದೆ, ಅರಣ್ಯದಲ್ಲಿ ತಿರುಗಾಡುವುದು - ಇವು ಅಲ್ಲಿ ನಮ್ಮ ಮುಖ್ಯವೃತ್ತಿಗಳು. ಶಿವಬಸಪ್ಪ ಮೊದಲಾದವರು ನಮ್ಮೊಡನೆ ಹೆಚ್ಚು ಹೊತ್ತು ಹರಟೆ ಹುಡುಗಾಟಗಳಲ್ಲಿ ಕಾಲ ಕಳೆಯುತ್ತಿದ್ದುದು ರಾತ್ರಿ 9 ಗಂಟೆಯ ಮೇಲೆ. ಊಟ ವಗೈರೆ ಆದ ಮೇಲೆ. ಶಾಲೆಗೆ ಹುಡುಗರು ಮೊದಲಿದ್ದಷ್ಟೆ ನಾಲ್ಕು ಐದು ಮಕ್ಕಳು. ಅವರಿಗೆ ಅಷ್ಟು ಇಷ್ಟು ಪಾಠಹೇಳಿ ಮನೆಗೆ ಕಳಿಸಿ ಬಿಡುತ್ತಿದ್ದೆ. ಊರಿನ ಧಣಿಗಳೇ ನನ್ನ ಕೈವಶವಾದ ಬಳಿಕ ನನ್ನನ್ನು ಪ್ರಶ್ನಿಸುವವರು ಯಾರಿದ್ದಾರು? ನಾನು ಆ ಊರಿನ ಜನರ ದೃಷ್ಟಿಯಲ್ಲಿ ಒಳ್ಳೇ ಮಾಸ್ತರು ಅಷ್ಟೆ.

ಶಿವಬಸಪ್ಪ ಒಮ್ಮೊಮ್ಮೆ ಮಧ್ಯಾಹ್ನ ನಾಲ್ಕು-ಐದು ಗಂಟೆ ಸಮಯಕ್ಕೆ ಮೂರು ನಾಲ್ಕಾಣೆ ದುಡ್ಡು ಕಳಿಸಿ ಮೊಸರು ಅವಲಕ್ಕಿ ಆಗಬೇಕಂತೆ ಎಂದು ಹೇಳಿ ಕಳಿಸಿ ಆ ಆಳಿನ ಜೊತೆಗೆ ಒಣಕೊಬ್ರಿ, ಅವಲಕ್ಕಿ, ಪುಠಾಣಿ, ಉಳ್ಳೇಗಡ್ಡಿಗಳನ್ನು ಕಳಿಸಿಬಿಟ್ಟು. ನಾವು ಮೂರಾಣೆಗೂ ಮೂರುವರೆ ಆಣೆಗೋ ಚೆನ್ನಾಗಿ ಕೆನೆಗಟ್ಟಿದ ಮೊಸರು ಗಡಿಗೆಯನ್ನು ಪರೀಕ್ಷಿಸಿ ತಂದು ಬಿಡುತ್ತಿದ್ದೆವು. ಮೊಸರು-ಅವಲಕ್ಕಿಯ ರುಚಿ ನನಗೂ ಬಾಲ್ಯದಿಂದ ಅಭ್ಯಾಸವೇ ಆಗಿತ್ತು. ಶಿವಬಸಪ್ಪನಿಗೆ ಅದರ ಮೇಲೆ ಮೋಹ ಬಹಳ. ನಾವು ಕಡಲೆ ಕೊಬ್ರಿ ಚಟ್ನಿ ಕುಟ್ಟಿ ಅವಲಕ್ಕಿಯನ್ನು ಶುದ್ಧೀಕರಿಸಿ ಮೊಸರು ಗಡಿಗೆಗೆ ಹಾಕಿ ನೆನೆಯಿಸಿ. ಶಿವಬಸಪ್ಪನಿಗೆ ಹೇಳಿ ಕಳಿಸಿದೊಡನೆ ಅವನು ಬಂದು ಪಟ್ಟಾಗಿ ಮೊಸರು ಅವಲಕ್ಕಿ ಗಿಟ್ಟಿಸಿ ಹೊರಟು ಹೋಗಿ ಬಿಡುತ್ತಿದ್ದ. ಅನಂತರ ನಾವು ಇಬ್ಬರೂ ತಿಂದು ಯಾರಾದರೂ ಮಧ್ಯೆ ಅಪ್ಪಿ ತಪ್ಪಿ ಹಾಜರಾತಿ ಕೊಟ್ಟರೆ, ಅವರಿಗೂ ರುಚಿ ತೋರಿಸಿ ಆಮೇಲೆ ಎತ್ತೆತ್ತಲೋ ತಿರುಗಲು ಹೋಗಿ ಬಿಡುತ್ತಿದ್ದೆವು. ಈ ಸುಖಭೋಗದಲ್ಲಿ ನಾನು ಯಾವ ಉದ್ದೇಶಕ್ಕಾಗಿ ಈ ಮಲೆನಾಡಿಗೆ ಬಂದೆನೋ ಆ ಉದ್ದೇಶದ ಗಮನವೇ

ಕಡಿಮೆಯಾಯಿತು. ಊರಿನ ಅನೇಕ ಜನರ ಮನೆಯ ಔತಣಗಳು, ಮದುವೆ ನಿಬ್ಬಣ
ಊಟಗಳು ಆಗಾಗ ಗಿಟ್ಟತೊಡಗಿದವು. ಊರ ಜನರ ಮಧ್ಯದಲ್ಲಿ ನಾನೂ ಓರ್ವ ಪ್ರತಿ
ಪುರುಷನೂ ಅದೆ. ಇದೆಲ್ಲ ಶಿವಬಸಪ್ಪ ಮತ್ತು ಸೆಟ್ಟರ ಗದಿಗೆಪ್ಪ, ಗಣೇಶಪ್ಪ ಮೊದಲಾದವ
ಸ್ನೇಹದ ಫಲವೇ ಆಗಿತ್ತು. ನನಗೂ ಒಂದು ವ್ಯಕ್ತಿತ್ವ ಇದೆ ಎಂಬುದು ಅರಿವಾಗತೊಡಗಿ
ಶಾಲೆ ಅಭಿವೃದ್ಧಿಯಾಗುವ ಲಕ್ಷಣ ಕಾಣಲಿಲ್ಲ. ಶಾಲೆ ರಿಜಿಸ್ಟೇಷನ್ ಆಗಿ ನಾನು ಗ್ರಾಂ
ತಕ್ಕೊಳ್ಳುವ ಭರವಸೆ ದಿನೇ ದಿನೇ ಮಾಯವಾದರೂ ಈ ಮಿತ್ರವೃಂದದ ಗುಂಪಿನ
ಸುಖಭೋಗದಲ್ಲಿ, ಅರಣ್ಯ ಪ್ರದೇಶದ ಸೋಟದಲ್ಲಿ ಮೈಮರೆತುಬಿಟ್ಟೆ ಅಂದರೂ ತಪ್ಪಲ್ಲ

### *ಒಗ್ಗರಣೆ ಅನ್ನದ ಬಾಣಸಿಗನಾದೆ*

ಒಂದು ದಿನ ರಾತ್ರಿ ಶಿವಬಸಪ್ಪ, ಸೆಟ್ಟರು ನನ್ನ ಮತ್ತು ಗಣೇಶಪ್ಪನ ಎದುರು "ಏ
ಗಣೇಶಪ್ಪಾ, ನಾಳೆ ಒಳ್ಳೆ ಅಕ್ಕಿ ಬೆಣ್ಣೆ ಎಲ್ಲಾ ಸಾಮಾನು ಕಳಿಸಿಕೊಡುತ್ತೇನೆ. ಇಬ್ಬರೂ ಸೆ
ಒಗ್ಗರಣೆ ಅನ್ನ ಮಾಡಿಬಿಡಿ. ಪಟ್ಟಾಗಿ ತಿಂದು ಬಿಡೋಣ" ಎಂದ. ಒಗ್ಗರಣೆ ಅನ್ನ ಅಂದರೇ
ಎಂಬುದರ ತಳ ಬುಡ ನನಗೆ ಗೊತ್ತಿರಲಿಲ್ಲ. ಹೇಗಿದ್ದರೂ ಗಣೇಶಪ್ಪ ಇದ್ದಾನಲ್ಲ ಅವ
ಹೇಳಿದಂತೆ ಮಾಡಿದರಾಯಿತೆಂದು ನಾನೂ ಒಪ್ಪಿಗೆ ಕೊಟ್ಟೆ. ಇದೆಲ್ಲ ರಾತ್ರಿಯ ಊಟಕ್ಕೆ. ಅ
ಅನ್ನದಲ್ಲಿ ಒಗ್ಗರಣೇ ಅನ್ನ, ಕಲಸನ್ನ, ಕಲಸಬಾರದ ಬುತ್ತಿ - ಹೀಗೆ ವಿವಿಧ ಹೆಸರುಗಳ ಭ
ತಯಾರಿಸುತ್ತಿದ್ದುದುಂಟು. ಪಲಾವ್, ರೈಸ್ ಬಾತ್, ವೆಜಿಟೆಬಲ್ ಬಾತ್ ಇತ್ಯಾದಿಯಾ
ಕರೆಯುವ ವಿದೇಶೀಯ ಅಸಹ್ಯ ಹೆಸರುಗಳು ಇರಲಿಲ್ಲ. ಆದರೆ ಬಿರ್ಯಾನಿ ಎಂಬ ಹೆಸರೇನೋ
ಇತ್ತು. ಅದನ್ನು ಸಸ್ಯಾಹಾರಿಗಳು ಕರೆಯುತ್ತಿರಲಿಲ್ಲ. ಒಗ್ಗರಣೆ ಅನ್ನ ಎಂದು ನಾವು ಬಿರಾ
ಅನ್ನುವುದಕ್ಕೆ ಬದಲಾಗಿ ಉಪಯೋಗಿಸುತ್ತಿದ್ದುದುಂಟು. ಆದರೂ ನಮಗೆ ಅದು ಅಸಹ್ಯವಾ
ಶಬ್ದವೇ.

ಮರುದಿನ ನಾಲ್ಕು ಘಂಟೆಗೆ ಒಂದು ಸೇರು ಒಳ್ಳೆ ಗಂಧಸಾಲಿ ಅಕ್ಕಿ, ಒಂದು ಸೇ
ಬೆಣ್ಣೆ, ಒಣಕೊಬ್ರಿ, ಗಸಗಸೆ, ದಾಲಚಿನ್ನಿ, ಲವಂಗ ವಗೈರೆ ಸಾಮಾನುಗಳು ಶಿವಬಸಪ್ಪ
ಅಂಗಡಿಯಿಂದ ಗಣೇಶಪ್ಪನ ಮನೆಗೆ ಬಂದವು. ಸರಿ ಪ್ರಾರಂಭವಾಯಿತು ನಮ್ಮ ಬಾಣಸಿಗತ
ಕೊಬ್ರಿ ತುರಿದು ಮಸಾಲೆ ಪುಡಿಯನ್ನು ನಮಗೆ ತಿಳಿದಂತೆ ತಯಾರಿಸಿಕೊಂಡು ಬೆಣ್ಣೆ ಕಾಯಿ
ತುಪ್ಪಮಾಡಿಟ್ಟುಕೊಂಡು, ಒಗ್ಗರಣೆಗೆ ಇಟ್ಟೆವು. ಗಣೇಶಪ್ಪ ಈ ಅನ್ನ ಮಾಡುವ ವಿಧಾನವ
ಅಷ್ಟು ಇಷ್ಟು ಹೇಳಿದ. ನಾನು ಎಲ್ಲವನ್ನು ತಿಳಿದ ಶ್ರೇಷ್ಠ ಬಾಣಸಿಗನಂತೆ ಒಗ್ಗರಣೆಗೆ ಇ
ಸಾಸಿವೆ - ಜೀರಿಗೆಗಳನ್ನು ಚಟಪಡಗುಟ್ಟಿಸಿ ಕೊಬ್ರಿತುರಿ ಮೊದಲಾದವೆಲ್ಲವನ್ನು ಒಗ್ಗರಣ
ಹಾಕಿದೆ. ಕರಿಬೇವು ಕೋತಂಬ್ರಿ ಸೊಪ್ಪು ಹಾಕುವುದನ್ನು ಮರೆಯಲಿಲ್ಲ. ಅದು ಚೆನ್ನಾಗಿ ಬೆ
ಮೇಲೆ ನೀರು ಸುರುವಿ ಬಾಯಿ ಮುಚ್ಚಿ ಕುಳಿತೆ. ನೀರು ಕುದಿ ಬಂದ ಮೇಲೆ ಅಕ್ಕಿಯ
ಸುರುವಿ ತಿರುವಿ, ಪಾತ್ರೆಯ ಬಾಯಿ ಮುಚ್ಚಿ ಕುಳಿತೆ. ಸ್ವಲ್ಪ ಹೊತ್ತಿನಲ್ಲಿ ಬಾಯಿ ತೆರೆ
ನೋಡಿದರೆ ನೀರೆಲ್ಲ ಇಂಗಿಹೋಗಿತ್ತು. ಒಂದು ಕಡೆ ಅಕ್ಕಿ ಅಕ್ಕಿ ಹಾಗೇ ಇತ್ತು; ಇನ್ನೊಂದು ಕ
ಅನ್ನವಾಗಿತ್ತು. ನನಗೆ ಗಾಬರಿಯಾಯಿತು. ಗಣೇಶಪ್ಪನಿಗೆ ತೋರಿಸಿದೆ. ಅವನು ಸ್ವಲ್ಪ ನೀ
ಹಾಕಿ ಬಾಯಿಮುಚ್ಚಿ ಬಿಡಿ ಸರಿಹೋಗುತ್ತೆ ಎಂದ. ನಾನು ನೀರು ಹಾಕಿ ಚುಂಚುಗದಿ
ತಿರುವಿ, ಬಾಯಿ ಮುಚ್ಚಿ ಒಲೆ ಚಾಚಿ ಉರಿಹೆಚ್ಚು ಮಾಡಿ ಕೈಕಟ್ಟಿ ಕುಳಿತೆ. ಸ್ವಲ್ಪ ಹೊತ್ತಿನ

ಇನ್ನೊಂದು ತರ ಆಯಿತು. ತಳದಲ್ಲಿ ಹೊತ್ತುವುದಕ್ಕೆ ಪ್ರಾರಂಭವಾಯಿತಷ್ಟೇ ಅಲ್ಲ ಒಂದೇ ಪಾತ್ರೆಯಲ್ಲಿ ಮೂರು ತರಹದ ಅನ್ನವಾಯಿತು. ಹೊತ್ತುವಾಗಲು ಅನ್ನದ ತಳದಲ್ಲಿ, ಒಂದು ಕಡೆ ಅಕ್ಕಿ ಹುಗ್ಗಿ, ಇನ್ನೊಂದು ಕಡೆ ಅಂಜಕ್ಕಿ (ಅರ್ಧಬೆಂದು ಅರ್ಧ ಬೇಯದ ಅನ್ನ) ಆಗಿ ಹೋಯಿತು. ಹೊತ್ತುವಾಗಿನ ವಾಸನೆ ಗಣೇಶಪ್ಪನ ಮೂಗಿಗೆ ಮೊದಲು ಬಡಿಯಿತು. "ಏಯ್ ಮಾಸ್ತರ, ಕೆಟ್ಟು ಹೋಯಿತಲ್ಲೊ! ಅನ್ನ ಹೊತ್ತಿ ಹೋಯ್ತು. ನಿನ್ನದೇನು ಮೂಗೋ, ಕಾಲಿ ಹೊಳ್ಳೆಗಳೋ ಎಂದು ಬಿಟ್ಟ. ನನಗೆ ಗಾಬರಿಯಾಗಿ ಇನ್ನೇನೂ ಮಾಡಲಿಕ್ಕೆ ತೋಚದೆ ಪಾತ್ರೆ ಇಳುವಿಬಿಟ್ಟೆ. ಅನಂತರ ಮುಚ್ಚಳತೆಗೆದು ನೋಡಿದರೆ ಎಲ್ಲ ಹಾಳಾಗಿಹೋಗಿತ್ತು. ಅಷ್ಟರಲ್ಲಿ ಶಿವಬಸಪ್ಪನವರೂ ಭೇಟಿ ಕೊಟ್ಟು, ಅನ್ನ ಹೊತ್ತಿಸಿ ಬಿಟ್ಟಿರೇನಪೋ, ಹೊತ್ತುಗಲ ವಾಸನೆ ಮುಂಚೆ ಬಾಗಿಲಿಗೇ ಬಡೀತೈತಿ ಮಹಾರಾಯ್ರೆ" ಎಂದು ಬಿಟ್ಟ. ನನ್ನ ಎದೆ ಡಬಡಬ ಎನ್ನತೊಡಗಿತು. ಬಂದು ಆವನೇ ಪರೀಕ್ಷಿಸಿ ನಗತೊಡಗಿದ "ಇದೇನು ಒಗ್ಗರಣೆ ಅನ್ನವಾಗಲಿಲ್ಲ. ಧಾರವಾಡ ಪುಟ್ಟಪ್ಪನನ್ನು ಕೂಡಿಸಿಕೊಂಡಿದ್ದರ ಹೀಂಗಾಗ್ತಿದ್ದಿಲ್ಲ" ಎಂದು ಬಿಟ್ಟ. ಆದರೂ ಬಹಳಷ್ಟು ಐನೇತಿ ಸಾಮಾಸು ಹಾಕಿ ಮಾಡಿದ ಅನ್ನವೆಂಬ ಅಭಿಮಾನದಿಂದ ಪಾತ್ರೆಯನ್ನು ಮೂವರ ಮಧ್ಯದಲ್ಲಿಟ್ಟುಕೊಂಡು ಆದರಲ್ಲಿ ಬೆಂದಿರುವ ಭಾಗವನ್ನಷ್ಟೇ ತಿಂದು ಬಿಡೋಣವೆಂದು ಮುತ್ತುಗದ ಎಲೆ ಪತ್ರಾವಳಿಗಳಲ್ಲಿ ಅನ್ನವನ್ನೆಲ್ಲ ಸುರುವಿದೆವು. ತಳದಲ್ಲಿ ಬಹಳಷ್ಟು ಹೊತ್ತಿತ್ತು. ಅನ್ನವೆಲ್ಲ ಹೊತ್ತುಗಲ ವಾಸನೆಗೊಂಡಿತ್ತು. ಒಂದುಕಡೆ ಮಿಜ್ಜಿಯಾಗಿರುವ ಭಾಗವನ್ನಷ್ಟೇ ಬೇರ್ಪಡಿಸಿದೆವು. ಅರ್ಧಬೆಂದುದನ್ನು ಇನ್ನೊಂದೆಲೆಯ ಮೇಲೆ ತೆಗೆದಿರಿಸಿದೆವು. ತುಪ್ಪ ತಪಗುಡುತ್ತಿತ್ತು. ಬೆಂದು ಬೆಂದದ್ದನ್ನೇ ಆರಿಸಿ ಎಲೆಗೆ ಹಾಕಿಕೊಂಡು ಅಷ್ಟು ಇಷ್ಟು ತಿಂದು ಬಿಟ್ಟೆವಾದರೂ ಆ ಅನ್ನದ ಊಟ ನಮಗಾರಿಗೂ ತೃಪ್ತಿ ನೀಡಲಿಲ್ಲ. ಇಷ್ಟೊಂದು ಕಷ್ಟಪಟ್ಟು ಬಹಳಷ್ಟು ಒಳ್ಳೊಳ್ಳೆಯ ಸಾಮಾನುಹಾಕಿ ಮಾಡಿದ ಹೊಟ್ಟೆಕಿಚ್ಚಿಗಾಗಿ ಸ್ವಲ್ಪಭಾಗ ಉಂಡದ್ದು ಉಳಿದುದನ್ನು ಮುಸುರೆಬಾನಿಗೆ ಎತ್ತಿಹಾಕಿ ಕೈತೊಳೆದುಕೊಂಡುಬಿಟ್ಟೆವು. ಶಿವಬಸಪ್ಪ "ಇನ್ನೊಂದು ದಿನ ಪುಟ್ಟಪ್ಪನನ್ನು ಕೂಡಿಸಿಕೊಂಡು ಚೆನ್ನಾಗಿ ಮಾಡೋಣ" ಎಂದು ಹೇಳಿ, ಅಂಗಡಿಗೆ ಹೋಗಿಬಿಟ್ಟ. ಆದರೆ ಇನ್ನೊಂದಿನ ಒಗ್ಗರಣೆ ಅನ್ನ ಮಾಡಲಿಲ್ಲ. ನಾನು ನನ್ನ ಮನಸ್ಸಿನಲ್ಲೇ ಉದ್ಧಾರವಾಯಿತು ನಿನ್ನ ಬಾಣಸಿಗತನ, ಎಂದುಕೊಂಡು ತೆಪ್ಪಗಾದೆ.

### ಕೋಣನ ಕೊಪ್ಪದಲ್ಲಿ ದೊಡ್ಡಾಟ

ಶಿವಬಸಪ್ಪನಿಗೆ ದಿನಗಳೆದಂತೆ ನನ್ನ ಅನಿಶ್ಚಿತ ಪರಿಸ್ಥಿತಿಯ ಅರಿವಾಗತೊಡಗಿತು. ತಮ್ಮ ಊರಿನಲ್ಲಿ ಶಾಲೆ ಯಶಸ್ವಿಗೊಳ್ಳಲಾರದೆಂದೂ ಅಷ್ಟು ದೂರದಿಂದ ಶಾಲೆ ಹಾಕಲು ಬಂದ ನಮ್ಮ ಬಂಧುವರ್ಗದವರೇ ಆದ ಈ ಮಾಸ್ತರರ ಆಸೆ ಇಲ್ಲಿ ಕೈಗೂಡುವುದು ಸಾಧ್ಯವಿಲ್ಲವೆಂದೂ ನಿರ್ಧರಿಸಿಬಿಟ್ಟ. ಏಕೆಂದರೆ ಬೇರೆ ಬೇರೆ ಊರುಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಮಕ್ಕಳನ್ನು ಕರೆಸಿ ತಮ್ಮೂರ್ರಿನ ಈ ಚಿಕ್ಕಗಾವಠಿ ಶಾಲೆಗೆ ಹಾಕಿ ವಿದ್ಯಾಭ್ಯಾಸ ಮುಂದುವರಿಸಲು ಯಾರೂ ಸಿದ್ಧರಿರಲಿಲ್ಲ. ಸ್ವತಃ ಶಿವಬಸಪ್ಪನವರ ಮಾವ ಗದಿಗೆಪ್ಪಸೆಟ್ಟರ ಮಕ್ಕಳನ್ನೇ ಸವಣೂರಿನಿಂದ ಕರೆಯಿಸಲು ಸಿದ್ಧರಿರಲಿಲ್ಲ ಅಂದಾಗ ಕಂಡವರ ಮಕ್ಕಳನ್ನು ಕರೆಯಿಸಿ ಇಲ್ಲಿನ ಶಾಲೆಗೆ ಹಾಕಿ ಎಂದು ಹೇಳಲು ಇವರಿಗೆ ನೈತಿಕ ಹಕ್ಕೇನುಂಟು? ಕೊನೆಗೆ ಶಿವಬಸಪ್ಪ ನನಗೆ "ನಮ್ಮೂರ್ರಲ್ಲಿ ಶಾಲೆ ನಡೆಯುವುದಿಲ್ಲ. ನೀವು ಬೇರೆ ಎಲ್ಲಾದರೂ ನೋಡಿಕೊಳ್ಳಿ" ಎಂದು ಜಾರಿಕೊಳ್ಳಲಿಲ್ಲ. "ಇಲ್ಲೇ ಸಮೀಪದ ಯಾವ ಊರಿನಲ್ಲಾದರೂ ನಿಮಗೆ ಮಾಸ್ತರ

ಕೆಲಸ ಕೊಡಿಸೋಣ, ಚಿಂತೆ ಮಾಡಬೇಡಿ" ಎಂದು ಹೇಳಿಬಿಟ್ಟ. ನನಗೆ ಸ್ವಲ್ಪ
ಸಮಾಧಾನವಾಯಿತು.

ಒಂದು ದಿನ ಹೊಸೂರಿನಿಂದ ಸುಮಾರು ಐದು ಮೈಲು ದೂರವಿರುವ ಕೋಣನ
ಕೊಪ್ಪಕ್ಕೆ ಅಲ್ಲಿನ ಸದಾಶಿವಪ್ಪಗೌಡರ ಆಹ್ವಾನದ ಮೇರೆಗೆ ಅಲ್ಲಿ ನಡೆಯುವ ದೊಡ್ಡಾಟ
ನೋಡಲು ಹೊರಟೆವು. ಸದಾಶಿವಪ್ಪ ಗೌಡನೇ ಭಾಗವತಣ್ಣ ಕಥೆ ನಡೆಸುವ ಸೂತ್ರಧಾರಿ.
ಹೊಸೂರು ಸೆಟ್ಟರು ಬರುತ್ತಾರೆಂದು ಇವರಿಗಾಗಿಯೇ ವಿಶೇಷ ಊಟೋಪಚಾರದ ವ್ಯವಸ್ಥೆಯನ್ನು
ಮಾಡಿಸಿದ್ದ. ಈ ವಿಷಯವನ್ನು ಶಿವಬಸಪ್ಪನಿಗೆ ಮೊದಲೇ ತಿಳಿಸಿದ್ದ. ಶಿವಬಸಪ್ಪ ಏಳುಗಂಟೆ
ಸುಮಾರಿಗೆ ತಮ್ಮ ಸವಾರಿಗಾಡಿ ಕಟ್ಟಿಸಿದ. ಎತ್ತಿನ ಕೊಳ್ಳಲ್ಲಿ ಹುರಗೆಜ್ಜೆ ಸರವಗೈರೆ ಬಿಗಿಸಿ
ಜೂಲುಹಾಕಿಸಿ ಬಿಟ್ಟ. ಸೆಟ್ಟರ ಗಾಡಿಯೆಂದರೆ ಡೌಲಿನಿಂದ ಕೂಡಿರಬೇಕಲ್ಲ. ಶಿವಬಸಪ್ಪನ
ಸುತ್ತ ಸೂರ್ಯನ ಸುತ್ತ ಇರುವ ಪ್ರಮುಖ ಗ್ರಹಗಳಂತೆ ಇದ್ದ ನಾನು, ಗಣೇಶಪ್ಪ, ಪುಟ್ಟಪ್ಪ,
ಮಾಟೂರು ಚೆನ್ನಬಸಪ್ಪ ಹೀಗೆ ಆರೇಳು ಜನ ಗಾಡಿಯೇರಿ ಅರಣ್ಯ ಮಧ್ಯದ ಕೋಣನ
ಕೊಪ್ಪಕ್ಕೆ ಹೋದೆವು. ಅದೊಂದು ಅರಣ್ಯ ಮಧ್ಯದ ಹಾದಿ. ಮಿಂಚುಹುಳಗಳ ವಿಚಿತ್ರ ಸೌಂದರ್ಯವನ್ನು
ಪ್ರಥಮ ಬಾರಿಗೆ ನಾನು ಕಂಡದ್ದು ಅಲ್ಲಿಯೇ. ಸದಾಶಿವಪ್ಪಗೌಡ ಸ್ವತಃ ತಾನೇ ನಮ್ಮನ್ನು
ಬೀಳ್ಕೊಂಡು ಮನೆಗೆ ಕರೆದೊಯ್ದ. ಇತ್ತ ಊರ ಹೊರಗೆ ಭವ್ಯವಾದ ಅಟ್ಟ ಹಾಕಿಸಿದ್ದ.
ನಾಲ್ಕಾರು ಗ್ಯಾಸ್‌ಲೈಟ್ ಕಟ್ಟಿಸಿದ್ದ. ಹಸಿರುವಾಣಿಯ ಆಟದ ಚಪ್ಪರ ಬಹುಸೊಗಸಾಗಿತ್ತು.
ಬಗನಿಹೂವಿನ ಗೊಂಚಲುಗಳು ಅಲ್ಲಲ್ಲಿ ಇಳಿಬಿದ್ದು ಶೋಭೆಗೊಂಡಿದ್ದವು. ಬಾಳೆಮರಗಳನ್ನು
ಎಲ್ಲೆಲ್ಲೂ ಕಟ್ಟಿದ್ದರು. ಮೇಲ್ಭಾಗದಲ್ಲಿ ಬಗನಿಗರಿಗಳನ್ನು ಕ್ರಮವಾಗಿ ಜೋಡಿಸುವುದರ ಮೂಲಕ
ಅಟ್ಟಕ್ಕೆ ಅಧಿಕ ಶೋಭೆ ಮಾಡಿಸಿದ್ದ. ಆಟ ಹೇಗಾದರೂ ಆಗಲಿ ಅಟ್ಟ ಮಾತ್ರ ಸೊಗಸಾಗಿತ್ತು.
ಮಲೆನಾಡಿನಲ್ಲಿ ಅಪರೂಪಕೊಮ್ಮೆ ಆಟಗಳಾದರೆ ದೂರದೂರದಿಂದ ಜನ ಗಾಡಿಗಳ ಮೇಲೋ,
ಕಾಲು ನಡಿಗೆಯಲ್ಲೋ ತಂಡ ತಂಡವಾಗಿ ಬರುತ್ತಿದ್ದುದುಂಟು. ಊರ ತುಂಬ ಜನ ಗುಜುಗುಜು
ಎನ್ನುತ್ತಿತ್ತು. ಆಟದವರು ಉತ್ಸಾಹದಿಂದ ಆಗೊಂದು ಈಗೊಂದು ಗರ್ನಲ್ ಹಚ್ಚಿ 'ಧಂ
ದಢಲ್' ಎಂಬ ಶಬ್ದ ಮಾಡುತ್ತಿದ್ದರು. ಏನೋ ಒಂದು ಥರಾ ಹಬ್ಬದ ವಾತಾವರಣ ಆ
ಊರಲ್ಲಿ ಕಾಣುತ್ತಿತ್ತು. ಆ ಊರಲ್ಲೇ ಏಕೆ ಮಲೆನಾಡಿನ ಹಳ್ಳಿಗಳಲ್ಲೆಲ್ಲ ಆಟದ ದಿನ ಹಬ್ಬದ
ವಾತಾವರಣವೇ ಇರುತ್ತಿತ್ತು. ಎಲ್ಲರ ಮನೆತುಂಬ ತಮ್ಮ ತಮ್ಮ ನಂಟರು ಇಷ್ಟರು ತುಂಬಿರುತ್ತಿದ್ದರು.
ಅದೊಂದು ಕಾಡುಹಳ್ಳಿಯಾದರೂ ಆ ದಿನ ಜನಭರಿತವಾಗಿ ಗ್ಯಾಸ್‌ಲೈಟ್ ದೀಪಗಳಿಂದ
ಝಗಝಗಿಸುತ್ತಿತ್ತು.

ಸದಾಶಿವಪ್ಪ ನಮ್ಮನ್ನು ಮನೆಗೆ ಕರೆದೊಯ್ದವನೇ "ಮೊದಲು ಊಟಮಾಡಿ ಬಿಡೋಣ.
ನಿಮ್ಮನ್ನು ಬೆಳಗಿನವರೆಗೆ ನಾನು ಪುನಃ ನೋಡಲಾಗುವುದಿಲ್ಲ. ಅಟ್ಟದ ಮೇಲೆ ಭಾಗವತಣ್ಣನಾಗಿ
ಕೆಲಸ ಮಾಡಬೇಕಾಗುವುದು" ಎಂದು ಹೇಳಿದ. ಹೋಳಿಗೆ ತುಪ್ಪದ ಸೊಗಸಾದ ಊಟ.
ಮಲ್ಲಿಗೆ ಹೂವಿನಂಥ ಕರೇರಡಿ ಮುಳ್ಳುಬತ್ತದ ಅಕ್ಕಿಯ ಅನ್ನ, ಹೋಳಿಗೆ ಸಾರು ಬಹುದಿನ
ನೆನಪಿನಲ್ಲುಳಿಯುವಂಥ ಹದದ್ದು. ಐದಾರು ತಹದ ಉಪ್ಪಿನಕಾಯಿಯ ರುಚಿಯ ವೈವಿಧ್ಯ
ಅವರ್ಣನೀಯ. ಸಾಸಿವೆ ಎಣ್ಣೆಯನ್ನು ಚೆನ್ನಾಗಿ ಹಾಕಿ ಕಲಸಿದ್ದ ಮಾವಿನಕಾಯಿ ಉಪ್ಪಿನ
ಕಾಯಿಯ ಗಾಟದಿಂದ ಕಣ್ಣು ಮೂಗಿನಲ್ಲಿ ನೀರು ಬರುತ್ತಿತ್ತು. ಕಂಚಿ ಬಿದಿರುಕಳಲೆ ಉಪ್ಪಿನ
ಕಾಯಿಯ ರುಚಿಯೇ ಒಂದು ತರ. ಮಲೆನಾಡಿನ ಮಲಾಗೌಡರ ಮನೆಯ ಆತಿಥ್ಯದಂಥ

ಆತಿಥ್ಯವನ್ನು ನಾನು ಎಲ್ಲೂ ಕಂಡಿಲ್ಲ. ಅವರ ಮನೆಯ ಸ್ತ್ರೀಯರ ಶ್ರಮಸಹಿಷ್ಣುತೆ, ಶ್ರದ್ಧಾಭಕ್ತಿಗಳು ಅವರ ಅಡಿಗೆ ಮತ್ತು ಮನೆಯ ಅಚ್ಚುಕಟ್ಟುತನದಿಂದ ಅಭಿವ್ಯಕ್ತವಾಗುತ್ತಿದ್ದವು. ಪ್ರಚ್ಛನ್ನವಾಗಿ ಮನೆಯ ಯಾಜಮಾನ್ಯವನ್ನು ಮಾಡುತ್ತಿದ್ದ ಆ ಸ್ತ್ರೀಯರು ಹೆಚ್ಚಾಗಿ ಹೊರಗೆ ಕಾಣಿಸಿಕೊಳ್ಳುವವರೇ ಅಲ್ಲ. ಈ ದಿನ ನಮ್ಮ ಮನೆಗೆ ಬರುವ ಅತಿಥಿಗಳು ಯಾರು? ಎಂಥವರು? ಅವರ ದರ್ಜೆ ಏನೆಂದು ತಿಳಿದುಕೊಂಡು ಅವರವರ ಯೋಗ್ಯತೆಗೆ ಅನುಗುಣವಾದ ಭಕ್ಷ್ಯ ಭೋಜ್ಯ ತಯಾರಿಸುವ ಜಾಣಾಕ್ಷ ಸ್ತ್ರೀಯರು ಅವರು. ಹೊಸೂರು ಶಿವಬಸಪ್ಪಸೆಟ್ಟರು ಅವರ ಮಿತ್ರರು ಅಂದರೆ ತೂಕ ಹೆಚ್ಚಾಯಿತು. ಹೋಳಿಗೆ ತುಪ್ಪದ ಊಟವೇ ಆಗಬೇಕೆಂದು ಶ್ರದ್ಧೆಯಿಂದ ಮಾಡಿದ ಹೋಳಿಗೆ ಆ ಹೋಳಿಗೆಯ ಮೇಲೆ ಬಿಸಿ ಹಾಲು, ಅದರ ಮೇಲೆ ಯಥೇಚ್ಛ ತುಪ್ಪ. ಹೂರಣದ ಮೇಲೆ ಉಳ್ಳೇಗಡ್ಡಿ ಪೊರೆಯಂತೆ ನವಿರಾಗಿ ಅಂಟಿದ ಗೋದಿಹಿಟ್ಟಿನ ಹೋಳಿಗೆಯ ಮೇಲೆ ಬಿಸಿ ಹಾಲು ಬಿದ್ದೊಡನೆ ಬೆಂದ ಕಣಕ ಕರಗಿ ಊಟ ಮಾಡುವವರಿಗೆ ಬಹು ಹಿತವೆನಿಸುತ್ತಿತ್ತು. ಅಂತೂ ಗೌಡರ ಮನೆಯ ಅತಿಥ್ಯ ಮುಗಿದೊಡನೆ ನಾವು ಅಟ್ಟದ ಮುಂದೆ ನಮಗಾಗಿಯೇ ಹಾಸಿದ ಗುಡಾರದ ಮೇಲೆ ಕುಳಿತೆವು. ಅದೇ ಗುಡಾರದ ಮೇಲೆ ಅಕ್ಕಪಕ್ಕದ ಹಳ್ಳಿಯ ಗೌಡರು. ಪ್ರತಿಷ್ಠಿತರು ನಮ್ಮಂತೆ ಅನೇಕರು ಕುಳಿತಿದ್ದರು. ಒಂದೊಂದು ಗುಂಪಿನ ಮಧ್ಯದಲ್ಲಿಯೂ ಅಡಿಕೆ ಎಲೆ ಬೀಡಿ ಬೆಂಕಿಪೊಟ್ಟಣಗಳು ಇಡಲ್ಪಟ್ಟಿದ್ದವು. ಆಗ ಅಲ್ಲಿ ಬೀಡಿಸೇದುವುದು ಪ್ರತಿಷ್ಠೆಯ ಒಂದು ಕುರುಹೇ ಆಗಿತ್ತಲ್ಲದೆ, ಅದೊಂದು ಕೆಟ್ಟ ಚಟ, ಅಸಭ್ಯವರ್ತನೆಯದು ಎಂಬ ಭಾವನೆಯೇ ಇದ್ದಿಲ್ಲವೆಂಬುದನ್ನು ನಾನು ಗಮನಿಸುತ್ತಿದ್ದೆ. ಆದರೆ ನಾನು ಮಾತ್ರ ಆ ಚಟಕ್ಕೆ ಬಲಿಯಾಗಬಾರದೆಂಬ ಭಾವನೆಯಿಂದ ಕೂಡಿದವನಾಗಿದ್ದೆನಾಗಿ, ಅದರ ತಂಟೆಗೆ ಹೋಗುತ್ತಿರಲಿಲ್ಲ. ಅಡಿಕೆಎಲೆ ಹಾಕಿಕೊಂಡು ಸಿಸ್ತಾಗಿ ನಾನೂ ಕುಳಿತೆ. ಮನುಷ್ಯನಿಗೆ ಅವನು ಅಲಂಕರಿಸಿದ ಸ್ಥಾನಮಾನ. ಸ್ನೇಹಸೌಭಾಗ್ಯಗಳಿಂದ ಅಂತಸ್ತು ಹೆಚ್ಚುತ್ತದೆಂಬುದು ನನಗೆ ಅಕಸ್ಮಾತ್ತಾಗಿ ಸಿಗುತ್ತಿದ್ದ ಪುರಸ್ಕಾರ ಮಾನ ಮರ್ಯಾದೆಗಳಿಂದ ಅರಿವಾಗತೊಡಗಿತು.

ಆಟದ ಮಧ್ಯದಲ್ಲಿ ಉತ್ತಮ ಪಾತ್ರಗಳಿಗೆ ಮುಂಭಾಗದಲ್ಲಿ ಗುಡಾರ ಹಾಸಿ ಮರ್ಯಾದೆಯಿಂದ ಕರೆದು ತಂದು ಕುಳ್ಳಿರಿಸಿದ ಪ್ರತಿಷ್ಠಿತರು ಬಹುಮಾನಗಳನ್ನು ಕೊಡದಿದ್ದರೆ ಹೇಗೆ? ಜನ ಏನೆಂದಾರು? ಸ್ವತಃ ಗೌಡರೇ ಏನು ತಿಳಿದುಕೊಂಡಾರು? ಬಹುಮಾನ ಕೊಡಲೇಬೇಕು. ಜನರ ಕಿವಿಗಳಿಗೆ ಪ್ರತಿಷ್ಠೆಯ ಸಂದೇಶ ಮುಟ್ಟಲೇಬೇಕು. ಊರಿನ ಗೌಡರು ನಮಗೆ ತೋರಿಸಿದ ಮರ್ಯಾದೆಗನುಗುಣವಾಗಿ ಅವರ ಆಟದಲ್ಲಿ ನಾವೂ ಮುಯ್ಯತೀರಿಸಲೇಬೇಕು. ಅದಕ್ಕಾಗಿ ನಮ್ಮ ಗುಂಪಿನಿಂದ ಶಿವಬಸಪ್ಪ, ಮಾಟೂರು ಚನ್ನಬಸಪ್ಪ, ಗಣೇಶಪ್ಪ ಮೂವರು ಒಂದೊಂದೋ ಎರಡೆರಡೋ ರೂಪಾಯಿಗಳನ್ನು ನನ್ನ ಕೈಗೆ ಕೊಟ್ಟು ಬಹುಮಾನ ಕೊಟ್ಟು ಬರಲು ಎರಡು ಮೂರು ಸಲ ಅಟ್ಟ ಹತ್ತಿಸಿದರು. ನಾನು ಅಟ್ಟ ಹತ್ತಿ ಗಂಟಲು ವಗೈರೆ ಸರಿಪಡಿಸಿಕೊಂಡು ಸದಾಶಿವಪ್ಪ ಗೌಡರನ್ನು ಮೊದಲು ಹೊಗಳುತ್ತ ಮೂರುಲೋಕದಲ್ಲಿ ಇವರಂಥ ಭಾಗವತರಿಲ್ಲ ಎಂಬಂತೆ ಭಾಷಣಬಿಗಿದು ಅವರನ್ನು ಎಂಟು ಹತ್ತು ಮೊಳ ಎತ್ತರದವರನ್ನಾಗಿ ಮಾಡಿ ಜನರಿಂದ ಚಪ್ಪಾಳೆಗಿಟ್ಟಿಸಿಕೊಂಡು ಅವರಿಗೊಂದು ರೂಪಾಯಿಯ ಆಹೇರು ಮೊದಲು ಮಾಡಿ ಅನಂತರ ಉಳಿದ ಹೆಣ್ಣು ಪಾರ್ಟಿನವನಿಗೆ, ಗಂಡು ಪಾರ್ಟಿನವರಿಗೆ ಅವರವರ ಹೆಸರನ್ನು ಕೇಳಿ ತಿಳಿದು ಹೇಳಿ ಅವರ ಬಗ್ಗೆ ಒಳ್ಳೆ ಸೊಗಸಾಗಿ ಹೊಗಳಿ ಭಾಷಣ ಬಿಗಿದು ಬಿಡುತ್ತಿದ್ದೆ. ಎಲ್ಲರಿಗೂ ಖುಷಿಯೋ ಖುಷಿ. ಜನಗಳೆಲ್ಲ ಆಟದವರ ಮೇಲಿನ

ಮೋಹಕ್ಕಿಂತ ನನ್ನ ಮಾತಿನ ಮೋಡಿಯಿಂದಾಗಿ ನನ್ನ ಮೇಲೂ ಮೋಹಗೊಂಡರು. ಇವರ್ಯಾರ
ಇವರ್ಯಾರು ಎಂಬ ಗುಜುಗುಜು ಪ್ರಾರಂಭವಾಗುತ್ತಿತ್ತು. ಆಗ ಭಾಗವತಣ್ಣ ಕೋಣನ ಕೊಪ್ಪ
ಸದಾಶಿವಪ್ಪನೇ ನನ್ನ ವಿಷಯವಾಗಿ ಇವರು ಹಾಗೆ ಹೀಗೆ, ಇಷ್ಟದಪ್ಪ ಇಷ್ಟುದ್ದ. ಸಾಕ್ಷಾತ
ಸರಸ್ವತಿ ಇವರ ನಾಲಿಗೆ ಮೇಲೆ ಹರಿದಾಡುತ್ತಿದ್ದಾಳೆ. ಒಳ್ಳೇ ಗವಾಯಿಗಳು. ಏನೆಲ್ಲವನ್ನು ಹೇ
ಬಿಡುತ್ತಿದ್ದ. ಜನರೆಲ್ಲ "ಪರವಾಯಿಲ್ಲ, ಇದ್ದರೆ ಇಂಥಾ ಮೇಷ್ಟ್ರು ಇರಬೇಕಪಾ ಊರಿಗೆ
ಎಂದುಕೊಳ್ಳುತ್ತಿದ್ದುದನ್ನು ಕೇಳಿ ನನ್ನ ಬೆನ್ನು ನಾನೇ ತಟ್ಟಿಕೊಳ್ಳುತ್ತ ಉತ್ಸಾಹದಿಂದ ಬೀಗುತ್ತಿದ
ಹೀಗೆ ದೊಡ್ಡಾಟದ ಅಟ್ಟದ ಮೇಲೆ ಮನಸ್ಸಿಗೆ ಬಂದಂತೆ ನಗೆ ಮಾತು, ಹುರಿದುಂಬಿಸು
ಮಾತುಗಳಿಂದ ಪ್ರಾರಂಭವಾಯಿತು ನನ್ನ ಭಾಷಣಕಲೆಯ ಪ್ರಥಮಾಧ್ಯಾಯ. ಮೊದಮೊದ
ಪಾತ್ರಧಾರಿಗಳಿಗೆ ಆಹೇರು ಮಾಡುವಾಗ ಮಾಡುವ ತುಂಟಭಾಷಣ, ತುಂಡುಭಾಷಣಕ್ಕಾ
ಅಟ್ಟವೇರಿದಾಗ ನನ್ನ ಕೈಕಾಲು ನಡುಗುತ್ತಿದ್ದುದನ್ನು ನಮ್ಮ ಗುಂಪಿನ ಜನ ಗಮನಿಸದೇ ಇರುತ್ತಿರಲಿಲ್ಲ
ಆಮೇಲೆ ಅವರು ಚೇಷ್ಟೆ ಮಾಡಿ ನಗುತ್ತಿದ್ದುದೂ ಉಂಟು. ಹೀಗೆಯೇ ಜನರ ಮಧ್ಯೆ ಧೈರ್ಯವಾ
ಮಾತಾಡಿ ಮಾತಾಡಿ ಭಾಷಣಕಲೆಯ ಅಭ್ಯಾಸ ಮಾಡಿಕೊಂಡೆ.

### *ಹಿರೇಕಾಂಶಿಗೆ ಮಾಸ್ತರನಾಗಿ ಹೋದದ್ದು*

ಹಿರೇಕಾಂಶಿ ಹೊಸೂರಿನಿಂದ ಪೂರ್ವಕ್ಕೆ ಮೂರು ಮೈಲುಗಳ ದೂರದಲ್ಲಿರುವ ಒಂದು
ದೊಡ್ಡಹಳ್ಳಿ. ಎರಡು ಮೂರು ಕೆರೆಗಳಿಂದ ಸಮೃದ್ಧವಾಗಿ ಬೆಳೆಬರಲು ಯೋಗ್ಯವಾದ ಗದ್ದ
ಬೈಲು, ತೋಟದಿಂದ ಕೂಡಿದ್ದ ಊರಾದರೂ ಗುದ್ದವ್ವನ ಬೇನೆ, ಮಲೇರಿಯಾ ಹಾವಳಿಗ
ತುತ್ತಾಗಿ ಜೀರ್ಣಗೊಂಡು ಹತ್ತಿಪ್ಪತ್ತು ದೊಡ್ಡ ದೊಡ್ಡ ವ್ಯವಸಾಯದ ಕುಟುಂಬಗಳಿಂದ ಕೂಡಿದ
ಊರು. ಇತರ ನಾಲ್ವತ್ತು ಐವತ್ತು ಸಣ್ಣಸಣ್ಣ ಹಿಡುವಳಿದಾರರು ಹತ್ತಿಪ್ಪತ್ತು ಗುಡಿಸಲುವಾಸಿಗಳು
ಕೂಲಿಕಾರರುಗಳಿಂದ ಕೂಡಿದ ಈ ಊರು ಉಳಿದ ಊರುಗಳಿಗಿಂತ ಸ್ವಲ್ಪ ಮೇಲಾದುದಾಗಿತ್ತು
ಆ ಊರಿನವರೂ ಕೋಣನ ಕೊಪ್ಪದ ಆಟ ನೋಡಲು ಬಂದಿದ್ದರು. ಅಟ್ಟದ ಮೇಲೆ ನನ್ನ
ಭಾಷಣದ ವೈಖರಿಗೆ ಮರುಳಾಗಿಹೋಗಿ "ಇದ್ದರ ಇಂಥಾ ಮಾಸ್ತರು ಇರಬೇಕಪಾ. ಏ
ನಮ್ಮೂರ್ರಾಗೂ ಹೆಣದಂಥ ಮಾಸ್ತರು. ಒಂದು ದಿನ ಸಾಲಿ ಹಾಕಿದ್ರ ನಾಕುದಿನ ಊರ್
ಹೋಗಿ ಬಿಡತೈತಿ. ಏನಾದ್ರೂ ಮಾಡಿ ಈ ಮಾಸ್ತರ್ನ ನಮ್ಮೂರ್ಗೆ ಕರ್ಸಿಕೊಳ್ಳಬೇಕು" ಎಂದು
ಮಾತನಾಡಿಕೊಂಡರಂತೆ. ಈ ಮಾತು ನಮ್ಮ ಶಿವಬಸಪ್ಪನ ಕಿವಿಗೆ ಬಿದ್ದಿತಂತೆ. ಈ ಮಾತು
ಕೇಳಿ ಶಿವಬಸಪ್ಪನಿಗೆ ಸಂತೋಷವಾಯಿತಂತೆ. ಏಕೆಂದರೆ "ನಮ್ಮೂರ್ನಲ್ಲಿ ಸಾಲಿ ಆಗೋ
ಮಾತಂತೂ ಇಲ್ಲ. ಮಾಸ್ತರಿಗೆ ಒಳ್ಳೆ ಊರು ಸಿಕ್ಕಂಗೂ ಆಯ್ತು, ದೂರ ಹೋದಂಗೂ
ಆಗೋದಿಲ್ಲ. ಶನಿವಾರ ಸಂಜೆ ಇಲ್ಲಿಗೆ ಬಂದರ ಶನಿವಾರ ರಾತ್ರಿ ಆದಿತ್ಯವಾರ ಹಗಲು ರಾತ್ರಿ
ಇವರ ಒಡನಾಟ ಸಿಗುತ್ತೆ" ಎಂದು ಗಣೇಶಪ್ಪನೊಡನೆ ಮಾತನಾಡಿ ಹಿರೇಕಾಂಶಿ ಗಿಣಿರಾ
ಈರಪ್ಪ, ಬಾಳೆಹಳ್ಳಿ ಬಸವಣ್ಣೆಪ್ಪ ಬಸವನಗೌಡ, ದಾನಪ್ಪನವರ ಚನ್ನಬಸಪ್ಪ - ಇವರುಗಳು
ಸೋಮವಾರ ಸಂತೆಗೆ ಬಂದ ದಿನ ಹುಡುಕಿಸಿ, ಕರೆಯ ಕಳುಹಿಸಿ ಎಲ್ಲ ವಿಷಯ ತಿಳಿಸಿ ಒಪ್ಪಿಸಿ
ಹಿರೇಕಾಂಶಿಯ ಶಾಲೆಗೆ ಕಳಿಸಿಕೊಟ್ಟುಬಿಟ್ಟರು. ಅಷ್ಟು ಹೊತ್ತಿಗೆ ಮಲೆನಾಡಿನ ಆ ಭಾಗದಲ್ಲಿ
ನನ್ನ ಗಂಧಸುಗಂಧ ಹರಡಿದ್ದುದರಿಂದಲೂ, ಕೋಣನಕೊಪ್ಪದ ಆಟದಲ್ಲಿ ನಾನು ಮಾಡಿದ
ಭಾಷಣ ಕೇಳಿದ್ದುದರಿಂದಲೂ ನನ್ನನ್ನು ಸಂತೋಷದಿಂದ ಕರೆದುಕೊಂಡುಹೋಗಿ ಮೊದಲಿದ್ದ
ಶೇಷಗಿರಿಯ ಎಂಥದೋ ಭಟ್ಟ ಎಂಬ ಹೆಸರಿನ ಮಾಸ್ತರರನ್ನು ತೆಗೆದುಹಾಕುವಂತೆ ಶಿಕ್ಷಣ

ಸಮಿತಿಗೆ ಕಾಗದ ಬರೆದು ನನ್ನನ್ನು ನೇಮಿಸಿಕೊಂಡಂತೆ ರಿಪೋರ್ಟ್ ಮಾಡಿಬಿಟ್ಟರು. ಅವರೂ ಅದನ್ನು ಒಪ್ಪಿಕೊಂಡರು. ನನ್ನನ್ನು ಶಿಕ್ಷಣ ಸಮಿತಿಯವರಿಂದ ನಡೆಸಲಾಗುತ್ತಿದ್ದ ಸರಕಾರದ ಮಾನ್ಯತೆ ಪಡೆದ ಆ ಶಾಲೆಯ ಅಧಿಕೃತ ಶಿಕ್ಷಕನನ್ನಾಗಿ ಅಂಗೀಕರಿಸಿಬಿಟ್ಟರು.

ನಾನು ಹಿರೇಕಾಂಶಿಗೆ ಬಂದದ್ದು ಆಲೆಮನೆಗಳು ಭರದಿಂದ ಬೆಲ್ಲದ ಉತ್ಪಾದನೆ ಮಾಡುತ್ತಿದ್ದ ಕಾಲದಲ್ಲಿ. ಎಲ್ಲೆಲ್ಲೂ ಅರಣ್ಯದಿಂದ ಹೊಗೆ ಏಳುತ್ತಿತ್ತು. ಅವೆಲ್ಲ ಆಲೆಮನೆಗಳು. ಅಲ್ಲಿಂದ ಬಿಸಿಬೆಲ್ಲದ ಸುವಾಸನೆ ಎತ್ತೆತ್ತಲೂ ಹರಡಿತ್ತು. ಕೆರೆಕಟ್ಟೆಗಳು ಎಲ್ಲೆಲ್ಲೂ ತುಂಬಿನಿಂತಿದ್ದವು. ಇದೆಲ್ಲ ಸರಿ. ಆದರೆ ವಿಶಾಲವಾದ ಆ ಊರಿನಲ್ಲಿ ಹಾಳುಮನೆಗಳೇ ಹೆಚ್ಚಾಗಿದ್ದವು. ಇಲ್ಲಿ ಇವರು ಬೆಲ್ಲ ಮಾಡುತ್ತಿದ್ದ ಕಬ್ಬು ಹುಲಗಬ್ಬು. ಹುಲಗಬ್ಬಿನ ಬೆಲ್ಲಕ್ಕೆ ಸಮಾನವಾದ ಬೆಲ್ಲವೇ ಇಲ್ಲ. ರಾಪಿನ ಬೆಲ್ಲವನ್ನು ಹೊಸಕೊಡಗಳಲ್ಲಿ ತುಂಬಿಟ್ಟುಕೊಂಡು ವರ್ಷವೆಲ್ಲ ಉಪಯೋಗಿಸುತ್ತಿದ್ದರು. ಹಾಗೆ ತುಂಬಿಟ್ಟ ಬೆಲ್ಲದ ಕೊಡದ ಮೇಲು ಭಾಗದಲ್ಲಿದ್ದ ಜೇನುತುಪ್ಪಕ್ಕೆ ಸಮಾನವಾದ ಕಾಕಂಬಿಯನ್ನು ದೋಸೆ, ಇಡ್ಡಲಿಗಳೊಡನೆ ತಿನ್ನುವುದು ಇಲ್ಲಿನ ಜನರ ಸಂಪ್ರದಾಯ. ತಳಭಾಗದಲ್ಲಿ ಅತ್ಯಂತ ಸಿಹಿಯಾದ ಮಳಲಿನಂತಹ ಬೆಲ್ಲ ಇರುತ್ತಿತ್ತು. ಈ ಮಳಲಿನಂತಹ ಬೆಲ್ಲದ ಕೊಡಗಳನ್ನೆ ನೆಲದಲ್ಲಿ ಹುಗಿದು ಗಡಿಗಿಕಲ್ಲುಸಕ್ಕರೆಯನ್ನು ಮಾಡುತ್ತಿದ್ದರು. ಪರಿಣಾಮದಲ್ಲಿ ಈ ಸಕ್ಕರೆಯ ಬಣ್ಣ ಕೆಂಪಾಗಿರುತ್ತಿತ್ತು. ಆಯುರ್ವೇದ ವೈದ್ಯಪದ್ಧತಿಯಲ್ಲಿ ಈ ಕಲ್ಲುಸಕ್ಕರೆಗೆ ಪ್ರಾಶಸ್ತ್ಯ ಬಹಳ. ಮಣ್ಣಿನ ಪಾತ್ರೆ, ಕೊಡ ಮೊದಲಾದವುಗಳಲ್ಲಿ ಹಾಕಿ ಹುಗಿದು ಸಕ್ಕರೆಮಾಡುತ್ತಿದ್ದ ಕಾರಣವೇ ಈ ಸಕ್ಕರೆ ಗಡಿಗಿಕಲ್ಲು ಸಕ್ಕರೆಯಾಗಿರಬಹುದು. ಇದನ್ನೆಲ್ಲ ಹುಲುಗಬ್ಬಿನಿಂದ ಮಾಡಿದರೆ ಚಂದ ಮತ್ತು ರುಚಿ. ರಸದಾಳಿ ಇತ್ಯಾದಿ ಇತರ ಸ್ಥಳೀಯ ಬೀಜದ ತಳಿಯಿಂದ ಒಳ್ಳೆಯ ಬೆಲ್ಲ ವಾಗುವುದಿಲ್ಲವೆಂದು ತಿಳಿದು ಬಂತು.

ಹಿರೇಕಾಂಶಿಗೆ ಹೊಂದಿ ಹೊಸೂರಿನಂತೆ ಅರಣ್ಯವಿರಲಿಲ್ಲ. ಊರ ಸುತ್ತಮುತ್ತ ವಿಶಾಲವಾದ ಗದ್ದೆಯ ಬೈಲು. ಬಯಲಿನಲ್ಲಿ ದೊಡ್ಡ ದೊಡ್ಡ ಹಲಸು, ನೇರಳೆ, ಮಾಮರಗಳು ಇದ್ದವು. ಕೆರೆಯ ಕೆಳಗೆ ಅಡಿಕೆ, ಎಲೆಬಳ್ಳಿ, ಬಾಳೆಯ ತೋಟಗಳು ಮನಮೋಹಕವಾಗಿದ್ದವು. ನಾನು ಪ್ರಥಮತಃ ಹಿರೇಕಾಂಶಿಯನ್ನು ಹೊಕ್ಕು ನೇರವಾಗಿ ಗಿಣಿವಾಟದ ಈರಪ್ಪನನ್ನು ಕಾಣಲು ಅವರ ಮನೆಗೆ ಹೋದಾಗ ಈರಪ್ಪ ಆಲೆಮನೆಯಲ್ಲಿದ್ದಾರೆಂದು ತಿಳಿಯಿತು. ಮನೆಯಲ್ಲಿ ಹೆಣ್ಣು ಮಕ್ಕಳು ನನ್ನನ್ನು ಕರೆದು ಕುಳ್ಳಿರಿಸಿ ಉಪಚರಿಸಿದರು. ನನ್ನಿಂದ ವಿಷಯವನ್ನೆಲ್ಲ ತಿಳಿದರು. ಹೊಸ ಮಾಸ್ತರರು ಬಂದಿದ್ದಾರೆಂದು ಆಗಲೆ ವೈರ್‌ಲೆಸ್ ಸುತ್ತುಮುತ್ತಣ ಮನೆಗಳಿಗೆಲ್ಲ ತಲುಪಿತ್ತು. ಕುತೂಹಲದಿಂದ ಹತ್ತಿಪ್ಪತ್ತು ಜನ ಹೆಂಗಸರ ಗುಂಪೇ ಕೂಡಿತು. ಆ ದೊಡ್ಡ ಸ್ತ್ರೀ ಬಳಗವನ್ನು ಕಂಡು ನಾನು ಸ್ವಲ್ಪ ತಬ್ಬಿಬ್ಬಾದೆ. ಅವರು ಗುಸುಗುಸು ಎಂದು "ಇವರೇ ನಮ್ಮೂರ್ರ ಮಾಸ್ತ್ರೆ" ಎನ್ನುತ್ತಿದ್ದ ಮಾತು ಕಿವಿಗೆ ಬಿತ್ತು. "ಕ್ವಾಣನ ಕೊಪ್ಪ ಅಟ್ದಾಗ ಬಾಸಣ ಮಾಡಿದವ್ರು ನೀವೇ ಅಲ್ವೆ" ಎಂದೂ ಕೆಲವು ಪ್ರೌಢೆಯರು ಕೇಳಿ ಬಿಟ್ಟರು. ನಾನು "ಹಿಹಿ ಹಿ....." ಎಂದು ನಕ್ಕು ಹೂಂ ಅಂದೆ. ಅವರೆಲ್ಲ ಅಲ್ಲಿ ಬೀಗರ ಮನೆಗೆ ಬಂದು ಉಳಿದುಕೊಂಡು ಆಟ ನೋಡಿದರಂತೆ. ಅರ್ಜುನ ವೇಷಾ ಹಾಕ್ದವ್ನು ನಮ್ಮ್ರನಂಟನೇ ಆಗಬೇಕು ಸುಭದ್ರಿ ಪಾರ್ಟು ಮಾಡಿದ ಹುಡುಗ ಥೇಟ್ ಹೆಂಗಸೇ ಇದ್ದ ಹಾಗಿದ್ದ ಅಲ್ವೇನ್ರೀ. ಅಂವಗ ನಮ್ಮೂರ್ರ ಹೆಣ್ಣೇ ಕೊಟ್ಟೈತಿ - ಇತ್ಯಾದಿ ಆಟಕ್ಕೂ ತಮಗೂ ಇರುವ ಸಂಬಂಧದ ಬಗ್ಗೆ ನನ್ನೆದುರಿಗೆ ಮಾತನಾಡಿದರು; ನಕ್ಕಾಡಿದರು. ನನಗೆ ನಾಚಿಕೆ, ಭಯ ಎರಡೂ ಆದವು. ಅನೇಕ ಸ್ತ್ರೀಯರು ನನ್ನನ್ನು ದುರುಗುಟ್ಟುತ್ತ ದೂರದಿಂದ

ಶಿಖಿನಖಾಂತವಾಗಿ ನೋಡಿ ನಕ್ಕಾಡಿದ್ದೂ ಉಂಟು. ಈ ಹೆಂಗಸರೆಲ್ಲ ಹೀಗೆ ಏಕೆ ನನ್ನನ್ನು ನೋಡಿ ನಗುತ್ತಾರೆ ಎಂದು ಮನದಲ್ಲಿ ಅಳುಕುಂಟಾಗುತ್ತಿತ್ತು. ನನ್ನ ಆಕಾರದಲ್ಲಿ ಇವರು ವಿಕೃತಿ ಕಂಡರೇ? ನಡೆನುಡಿಯಲ್ಲಿ ನಾನೇನಾದರೂ ತಪ್ಪಿದ್ದನ್ನು ಗಮನಿಸಿದರೇ? ಅಥವಾ ಹತ್ತಾರು ಜನ ಸ್ತ್ರೀಯರು ಕೂಡಿದಾಗ ನಿರ್ನಿಮಿತ್ತ ನಗೆಯಾಟ ಮಾಡುತ್ತಾರೆಂದು ತಿಳಿಯಲೇ? ಒಂದೂ ಗೊತ್ತಾಗಲಿಲ್ಲ. ಅಂತೂ ಆ ಹೊತ್ತಿನಲ್ಲಿ ನಾನು ಭಯಪಟ್ಟು ನಾಚಿಕೊಂಡದ್ದಂತೂ ನಿಜ. 'ಈರಪ್ಪನವರು ಯಾವಾಗ ಬರ್ತಾರೆ?' ಎಂದೆ ಧೈರ್ಯದಿಂದ. 'ಸಾಯಂಕಾಲ ಬರ್ತಾರೆ ಊಟ ಗೀಟಾ ಮಾಡೇಳ್ರಿ'. 'ಇಲ್ಲ ಇಲ್ಲ, ಆಲೇಮನೆ ತೋರಿಸಿದ್ರೆ ಅಲ್ಲೇ ಅವರನ್ನು ಭೇಟಿ ಮಾಡುತ್ತೇನೆ. ಈಗ ಹಸಿವೆ ಇಲ್ಲ' ಎಂದೆ. 'ಅಯ್ಯೋ! ಆಲಿಮನಿ ಇಲ್ಲಿಂದ ಅರ್ಧಮೈಲಿನ ಮೇಲೆ ಆಗ್ತದೆ. ಕೆರೆ ಆಚೆ ಐತಿ. ಹೇಗಿದ್ರೂ ನೀವೇ ನಮ್ಮೂರ್ರಿಗೆ ಮಾಸ್ತ್ರಾಗಿ ಬಂದವರಲ್ಲವೇ. ಕಟ್ಟೆ ಮ್ಯಾಲೆ ಚಾಪಿ ಹಾಸಿಕೊಡ್ತೇವೆ. ಅಲ್ಲಿ ಬೇಕಾದ್ರೆ ಮಲಕೋ ಬೌದು, ಸಾಯಂಕಾಲ ಹೇಗಿದ್ರೂ ಬಂದೇ ಬರ್ತಾರ'. 'ಇಲ್ಲ ಇಲ್ಲ, ನಾನು ಆಲೆಮನೆಗೆ ಹೋಗಿ ಮೊದಲು ವೀರಪ್ಪನವರನ್ನು ಕಾಣಬೇಕು. ದಯವಿಟ್ಟು ಯಾರನ್ನಾದರೂ ಕಳ್ಸಿದರೆ.....' ಎಂದೆ. ಒಬ್ಬ ಹುಡುಗನ ಜೊತೆ ಕೆರೆಯ ಕೆಳಗಿನ ಗದ್ದೆಯಲ್ಲಿರುವ ದೊಡ್ಡ ಆಲೆಮನೆಗೆ ಹೋದೆ.

ಗಿಣಿವಾಲಿ ಈರಪ್ಪ ಊರಿನ ಬಹುದೊಡ್ಡ ಕುಳ. ಮೂವತ್ತು ನಾಲ್ವತ್ತು ಜನರಿಂದ ಕೂಡಿದ ದೊಡ್ಡ ಸಾಮೂಹಿಕ ಕುಟುಂಬದ ಮುಖ್ಯಸ್ಥ. ಮನುಷ್ಯ ನೋಡಲು ಒರಟಾಗಿ ಕಂಡರೂ, ಹೃದಯಶ್ರೀಮಂತಿಕೆಯ ದೊಡ್ಡವ್ಯಕ್ತಿ. ಅವನ ಹೆಂಡತಿ ಪಾರ್ವತಮ್ಮ ಓರ್ವ ಕಾಯಕ ಯೋಗಿಣಿ, ಹೊಲಮನೆಗಳಲ್ಲಿ ಶ್ರಮದಿಂದ ದುಡಿದು ಆರೋಗ್ಯ ದೃಢಕಾಯದಿಂದ ಒಪ್ಪುತ್ತಿದ್ದ ವಿನಯಶಾಲಿನಿಯಾದ ಹೆಂಗಸು ಎಂದು ಗುರುತಿಸಿದೆ. ಮನೆತುಂಬ ಗಂಡು ಹೆಣ್ಣುಮಕ್ಕಳು ಮೂರು ನಾಲ್ಕುಜನ ತಮ್ಮಂದಿರು, ಅವರ ಹೆಂಡರು ಮಕ್ಕಳು - ಹೀಗೆ ಬಹುಜನರ ಕುಟುಂಬದ ಈ ಮನೆತನ ಆತಿಥ್ಯಕ್ಕೆ ಹೆಸರಾಗಿದ್ದು. ಗಂಡ ಈ ಊರಿಗೇ ಮುಖ್ಯಸ್ಥನೆಂಬ ಕಾರಣದಿಂದ ಅವನ ಹೆಂಡತಿ ಪಾರ್ವತಮ್ಮನೂ ಊರಿನ ಹೆಂಗಸರಿಗೆಲ್ಲ ಮುಖ್ಯಸ್ಥೆಯಂತೆ. ಕೊಟ್ಟಿಗೆ ತುಂಬ ದನಕರುಗಳು, ಗದ್ದೆ ಬೈಲಿನ ವಿಶಾಲ ಮೈದಾನದ ತುಂಬೆಲ್ಲ ಅನೇಕ ಹೊಲಗದ್ದೆಗಳು, ಎರಡು ತೋಟಗಳು. ಹೀಗೆ ಏನೇನೋ ಅವನ ಆಸ್ತಿಯ ವಿಸ್ತಾರವಿತ್ತು. ಮನೆ ಎಲ್ಲ ಕಡೆಗೂ ವ್ಯವಸಾಯೋತ್ಪನ್ನಗಳಿಂದ ಬೀಗಿತ್ತು. ಅಡಿಕೆ, ಬತ್ತ, ಬೆಲ್ಲ, ಬಾಳೆಗೊನೆ ಮುಂತಾದವುಗಳು ಒಪ್ಪ ಓರಣವಿಲ್ಲದೆ ಎಲ್ಲೆಲ್ಲೂ ಬಿದ್ದಿದ್ದವು.

ಅವರ ಮನೆಯ ಹುಡುಗನೊಡನೆ ದೂರದಿಂದಲೇ ಬರುತ್ತಿರುವ ನನ್ನನ್ನು ಗುರುತಿಸಿ ಹೊಸ ಮಾಸ್ತರರು ಬಂದರೆಂದು ಆಲೆಮನೆಯವರಿಗೆಲ್ಲ ತಿಳಿಸಿದನೆಂದು ತೋರುತ್ತದೆ. ಅವರೆಲ್ಲ ನನ್ನನ್ನು ಮಿಕಿಮಿಕಿ ನೋಡುವವರೇ, ಕೆಲವರು ನಗುವವರು, ಕೆಲವರು ಗಂಟು ಮೋರೆಯವರು, ಕೆಲವರು ದುರಗುಟ್ಟಿ ನೋಡುವವರು. ಹೀಗೆ ಆಲೆಮನೆ ತುಂಬೆಲ್ಲ ತುಂಬಿದ ಜನರ ವೈವಿಧ್ಯಮಯ ಕಣ್ಣುಗಳನ್ನು ಗಮನಿಸಿದೆ. ವೀರಪ್ಪ ಆಲೆಮನೆಯಿಂದ ಹೊರಬಂದು 'ಬರ್ರಿ ಮಾಸ್ತರ' ಎಂದು ಕರೆದು ಆಲೆಮನೆಯ ಒಂದು ಪಾರ್ಶ್ವದಲ್ಲಿ ಹಾಕಿದ್ದ ಕಟ್ಟೆಯ ಮೇಲೆ ಕಂಬಳಿ ಹಾಕಿ ಕುಳ್ಳಿರಿಸಿದ. ಕುಳಿತ ಮೇಲೆ ಕಬ್ಬಿನ ಹಾಲಿಗೆ ಲಿಂಬಿಹುಳಿ ಸೇರಿಸಿ ತುಂಬಿಟ್ಟ ಚಿಕ್ಕಮಣ್ಣಿನ ಮಗಿಯನ್ನು ಮುಂದಿರಿಸಿದ. "ಇಗೋ ತಗೊಳ್ಳಿ, ಮೊದಲು ರೊಟ್ಟಿ ಚಟ್ನಿ ತಿಂದು ಹಾಲು ಕುಡಿರಿ. ಅಂದರೆ ಹಾಲು ಬಹಳ ರುಚಿಯಾಗತ್ತೈತಿ" ಎಂದು ತಿಳಿಸಿದ. ನಾನು ರೊಟ್ಟಿ ಚಟ್ನಿ ತಿಂದೆ ಬಲು

ರುಚಿಯಾಗಿತ್ತು. ಆಮೇಲೆ ಹಾಲು ಕುಡಿದು ಡರಿಕೆ ಹೊಡೆದೆ. ಬಿಸಿಬಿಸಿಬೆಲ್ಲ ಕೊಟ್ಟರು. ಅದನ್ನು ಹೊಟ್ಟೆಗಿಳಿಸಿಬಿಟ್ಟದ್ದಾಯಿತು. ಈ ಮೊದಲೇ ಹಚ್ಚಿಟ್ಟಿದ್ದ ಕೆನೆಬೆಲ್ಲದ ಅಂಟುಗೋಲು ಕೈಗೆ ಕೊಟ್ಟು 'ಈ ಬೆಲ್ಲ ತಿನ್ರಿ. ಇದು ಬಾಳಕಂಪು' ಎಂದರು. ಆದನ್ನೂ ತಿಂದದ್ದಾಯಿತು. ಆಗಿನ ನಮ್ಮ ಹೊಟ್ಟೆ ಏನು ಹಾಕಿದರೂ ಭಸ್ಮಮಾಡತಕ್ಕ ಸಾಮರ್ಥ್ಯ ಪಡೆದ ಕುಂಭಕರ್ಣನ ಹೊಟ್ಟೆಯಾಗಿತ್ತು. ಕಲ್ಲುತಿಂದು ಕಲ್ಲು ಕರಗಿಸುವ ಹದಿಹರೆಯದ ಆ ಹೊಟ್ಟೆಗೆ ಎರಡು ರೊಟ್ಟಿ ಚಟ್ನಿ, ಅರ್ಧತಂಬಿಗೆ ಹಾಲು, ದೊಡ್ಡ ಎರಡು ಕರಣಿ ಬೆಲ್ಲ,ಅಂಟುಬೆಲ್ಲ ಏನೆಲ್ಲ ತಿಂದರೂ ಗರ್ ಎನ್ನಲಿಲ್ಲ, ಗುರ್ ಎನ್ನಲಿಲ್ಲ ಟಿಸ್ ಇಲ್ಲ ಬಸ್ ಇಲ್ಲ. ಇಷ್ಟೆಲ್ಲ ಆಲೇಮನೆ ಸೇವೆ ಮುಗಿಸಿ ಗಿಣಿವಾಲದ ಈರಪ್ಪ ತಮ್ಮ ತೋಟದ ಕಡೆ ಕರೆದೊಯ್ದು ತೋಟವನ್ನೆಲ್ಲ ತೋರಿಸಿ ಅಲ್ಲಿ ಎಳೆನೀರು ಹಿಗ್ಗಿಸಿದ. ತೋಟದಲ್ಲಿಯೇ ಇದ್ದ ಬಸವನಗೌಡರ ಹತ್ತಿರ ಕರೆದೊಯ್ದು ಅವರಿಗೆ ನನ್ನ ಪರಿಚಯ ಮಾಡಿಸಿದ. ಬಸನಗೌಡ ಊರಿನ ಇನ್ನೊಬ್ಬ ಪ್ರತಿಷ್ಠಿತ ವ್ಯಕ್ತಿ. ಅವನ ಮಾತನ್ನು ತೆಗೆದುಹಾಕುವ ಧೈರ್ಯ ಊರಲ್ಲಿ ಯಾರಿಗೂ ಇರಲಿಲ್ಲವಂತೆ. "ಗೌಡ್ರೇ, ದೇವರೇ ನಮ್ಮೂರ್ರಿಗೆ ಇಂಥ ಮಾಸ್ತರ್ನ ಕಳಿಸಿಕೊಟ್ಟಂಗಾಗೈತಿ. ಇವ್ರು ಹೊಸೂರು ಸೆಟ್ರ ಬೀಗರೂ ಆಗ್ಬೇಕು. ಮೊದ್ಲು ಅಲ್ಲಿಗೆ ಬಂದಿದ್ರು. ಆ ಊರಾಗ ಸಾಲಿ ನಡೀಲಿಲ್ಲ. ಸೆಟ್ರೇ ನಮ್ಮೂರ್ಗೆ ಕಳ್ಸಿದ್ರು. ಕ್ವಾಣನ ಕೊಪ್ಪ ಆಟ್ದಾಗ ಇವರು ಲಚ್ಚರ್ ಕೊಟ್ರು. ಜನಾ ಎಲ್ಲಾ ನಕ್ನಕ್ಕು ಬಿದ್ರು" ಎಂದು ಹಾಗೆ ಹೀಗೆ ತಾರೀಫ್ ಮಾಡಿಬಿಟ್ಟ. ಗೌಡರೂ ನನ್ನ ಬಗ್ಗೆ ಹೊಸೂರು ಸೆಟ್ಟರ ಶಿವಬಸಪ್ಪ, ಗದಿಗೆಪ್ಪ ಮೊದಲಾದವರಿಂದ ಬಹಳಷ್ಟು ವಿಷಯ ತಿಳಿದಿದ್ದರು. ಅಷ್ಟೇ ಅಲ್ಲ, ಶಿರಗೋಡದಲ್ಲಿದ್ದ ಇವರ ಬೀಗರು ಮಲ್ಲಗೌಡರು ನನ್ನ ಬಗ್ಗೆ ಬಹಳ ತಾರಿಫ್ ಮಾಡಿದ್ದರಂತೆ. ಅದನ್ನು ಬಸನಗೌಡ ಹೇಳಿ "ಈ ರಾತ್ರಿ ಡಂಗುರ ಹೊಡಿಸಿ ಹೊಸಮಾಸ್ತರು ಬಂದಾರ. ನಾಳೆಯಿಂದ ಎಲ್ಲರೂ ತಮ್ಮತಮ್ಮಮಕ್ಕಳನ್ನು ಸಾಲಿಗೆ ಕಳಿಸಿಕೊಡಬೇಕೆಂದು ತಿಳಿಸಿಬುಡೋಣ" ಎಂದರು. ಗಿಣಿವಾಲದ ವೀರಪ್ಪನ ಮನೆಯ ಮುಂದಿನ ಮಳಿಗೆಯನ್ನು ತೆರವು ಮಾಡಿ ನನ್ನ ವಾಸಕ್ಕೆ ಅನುಕೂಲ ಮಾಡಿಸಿದರು. ಊಟ ವೀರಪ್ಪನವರ ಮನೆಯಲ್ಲಿಯೇ ಸದ್ಯಕ್ಕೆ ನಡೆಯಲಿ, ಮುಂದೆ ತಕ್ಕ ವ್ಯವಸ್ಥೆ ಮಾಡೋಣವೆಂದರು.

ಮರುದಿನ ಬೆಳಿಗ್ಗೆ ನಾನು ಬೇಗನೆ ಎದ್ದು ತೋಟದ ಬಾವಿಗೆ ಹೋಗಿ ಸ್ನಾನ ಮಾಡಿ ಬಟ್ಟೆ ಬರೆ ತೊಳೆದುಕೊಂಡು ಬಂದವನೇ ದೇವರ ಪೂಜೆ ವಗೈರೆ ಮುಗಿಸಿ ಏಳುಘಂಟೆ ಹೊತ್ತಿಗೆ ಶಾಲೆ ನಡೆಯಲು ಗೊತ್ತಾಗಿದ್ದ ಬಸವಣ್ಣ ದೇವರ ಗುಡಿಗೆ ಬಂದೆ. ಕಿಚಿಕಿಚಿ ಎಂದು ನಲವತ್ತು ಐವತ್ತು ಹುಡಗರು ನೆರೆದಿದ್ದರು. ಅದರಲ್ಲಿ 2ನೇ ಇಯತ್ತೆ, 1ನೇ ಇಯತ್ತೆ ಮತ್ತು ಬಾಲಬೋಧೆಯ ತರಗತಿಯವರು ಮಾತ್ರ. ಮೊದಲದಿನವೇ ಶಾಲೆಯಲ್ಲಿ ಪ್ರಥಮತಃ ಸೂರ್ಯ ನಮಸ್ಕಾರದ ಟ್ರೈನಿಂಗ್ ಕೊಟ್ಟೆ. ಹತ್ತು ಮಜಲಿನಲ್ಲಿ ನಡೆಯುವ ಸೂರ್ಯ ನಮಸ್ಕಾರದ ಐದನೆ ಮಜಲಿನಲ್ಲಿ ಸೂರ್ಯಾಯ ನಮಃ ಎಂದು ಎಲ್ಲರೂ ಸಾಮೂಹಿಕವಾಗಿ ಹೇಳುವ ಉಚ್ಚಕಂಠದ ಧ್ವನಿಯನ್ನು ಕೇಳಿಯೇ ಶಾಲೆಗೆ ಜೀವಬಂತು ಎಂದು ಜನಗಳಗೆ ಅನಿಸಿರಬೇಕು. ಎಲ್ಲರೂ ನಿಂತು ನೋಡುವವರೇ, ಅವರ ದೃಷ್ಟಿಯಿಂದ ಇದು ಮೊದಲನೆಯ ಹೊಸ ದೃಶ್ಯವಾಗಿತ್ತು. ಆಮೇಲೆ ಎಲ್ಲರನ್ನು ಕ್ರಮವಾಗಿ ಕುಳ್ಳಿರಿಸಿ,ಎಲ್ಲ ತರಗತಿಯವರನ್ನು ತರಗತಿವಾರು ಪರೀಕ್ಷಿಸಿ, ಯಾರು ಯಾರು, ಯಾವಯಾವ ಹಂತದಲ್ಲಿರುವರೆಂಬುದನ್ನು ತಿಳಿದುಕೊಳ್ಳಲಿಕ್ಕೆ ಆ ದಿನವೆಲ್ಲ ವ್ಯಯವಾಯಿತು.

ಸಾಯಂಕಾಲ ಎಲ್ಲ ಹುಡುಗರನ್ನು ಕ್ರಮವಾಗಿ ನಿಲ್ಲಿಸಿ ಪುರೋಚಿ ಹೇಳಿಸಿದೆ. ಆ ಮೊದಲಗ್ಗೊಂಡು ವರ್ಣಮಾಲೆ, ಕಾಗುಣಿತಗಳು ಎಲ್ಲವನ್ನು ಹೇಳಿಸಿದ್ದೊಂದು ಅವರಿಗೆ ಹೊಸದು. ಇದು ಬಹು ಪ್ರಾಚೀನ ಪದ್ಧತಿಯಾಗಿತ್ತು. ಅನಂತರ ಎರಡರ ಮಗ್ಗಿಯಿಂದ ಇಪ್ಪತ್ತರವರೆಗೆ ಮಗ್ಗಿಯನ್ನು ಹೇಳಿಸಿದೆ. ಉತ್ಸಾಹದಿಂದ ಸಾಮೂಹಿಕವಾಗಿ ಹೇಳುವ ಧ್ವನಿ ಇತ್ತ ಊರಿಗೆ ಕೇಳಿಸುತ್ತಿತ್ತಂತೆ. ನನ್ನ ಈ ಮೊದಲ ದಿನದ ಶಾಲಾ ಚಟುವಟಿಕೆಯೇ ಊರ ತುಂಬೆಲ್ಲ ಕುತೂಹಲ ಕೆರಳಿಸಿತು. "ಭಲೇ, ಸೈಯಪಾ, ಮಾಸ್ತರು ಅಂದ್ರ ಇಂಥವ್ರಪಾ" ಎಂದು ಕೆಂಚಗೊಂಡರ ಲೋಕಪ್ಪ ಇಡೀ ಊರಿಗೆಲ್ಲ ಡಂಗುರ ಹೊಡೆದುಬಿಟ್ಟ. ಚನ್ನಾಗಿ ಓದಿಸುವ ಮಾಸ್ತರರು ಬಂದರೆಂದು ಎಲ್ಲರೂ ನನ್ನ ಬಗೆಗೆ ಶ್ರದ್ಧೆ ತಳೆದವರೇ ಆದರು. ಒಂದು ವಾರದಲ್ಲಿ ಇಡೀ ಊರನ್ನು ನನ್ನ ಪಾದರಸದಂತಹ ಚಟುವಟಿಕೆಯಿಂದ ಕೈವಶಮಾಡಿಕೊಂಡೆ. ಶಾಲೆಗೆ ಹೋದ ಜೀವ ನೂರ್ಮಡಿ ಸತ್ವ ತುಂಬಿಬಂದ ಹಾಗಾಯಿತು. ಶನಿವಾರ ಸಾಯಂಕಾಲ ಹೊಸೂರಿನಿಂದ ಕರೆಬಂತು. ಹೋದೆ. ನನ್ನ ಬಾಯಿಂದ ಶಾಲಾಜೀವನದ ಯಶಸ್ಸನ್ನು ತಿಳಿದು ಅಲ್ಲಿನ ನಮ್ಮ ಮಿತ್ರರೆಲ್ಲ ಸಂತೋಷಗೊಂಡು ಅಲ್ಲಿಯೇ ನಿಮ್ಮ ಸೇವೆ ಮುಂದುವರಿಯಲಿ. ಶನಿವಾರ, ಭಾನುವಾರ ತಪ್ಪದೆ ನಮ್ಮೂರಿಗೆ ಬರಲೇಬೇಕು. ರಜಾ ದಿನಗಳನ್ನೆಲ್ಲ ನಮ್ಮೂರಲ್ಲಿಯೇ ಕಳೆಯಬೇಕು ಇತ್ಯಾದಿ ಹೇಳಿಬಿಟ್ಟರು. ನನಗೂ ಅದು ಇಷ್ಟವಾದ ವಿಷಯವೇ ಆಗಿತ್ತು. ನಾನು ಹೊಸೂರಿನ ಸೆಟ್ಟರಮನೆಯ ಓರ್ವ ವ್ಯಕ್ತಿಯೇ ಆದೆ. ಹೊಸೂರಿನ ಜನತೆಯ ಮಧ್ಯದ ಓರ್ವ ಮುತ್ಸದ್ಧಿಯೂ ಆಗಿಬಿಟ್ಟೆ. ಪ್ರತಿ ಶನಿವಾರ ಸಂಜೆ ಹೋಗಿ ಸೋಮವಾರ ಬೆಳಿಗ್ಗೆ ಹಿರೇಕಾಂಶಿಗೆ ಬರುತ್ತಿದ್ದೆ. ಉಳಿದ ರಜಾದಿನಗಳೆಲ್ಲ ಹೊಸೂರಿನಲ್ಲಿಯೇ ಕಳೆಯತೊಡಗಿದವು. ಅಂಥ ಮಿತ್ರರು ದೊರೆತದ್ದು ನನ್ನ ಭಾಗ್ಯವೆಂದೇ ಭಾವಿಸಿದೆ. ಮಲೆನಾಡಿನಲ್ಲಿ ನಾನು ಪ್ರಸಿದ್ಧ ಪುರುಷನಾಗಲು ಹೊಸೂರು ಸೆಟ್ಟರ ಸ್ನೇಹಸೌಹಾರ್ದಗಳು ನನಗೆ ತುಂಬಾ ಸಹಕಾರಿಗಳಾದವು.

### *ಅರ್ಧವರ್ಷದ ಗ್ರಾಂಟ್ ಹಂಚಿಕೊಂಡದ್ದು*

ನಾನು ಬರುವ ಪೂರ್ವದಲ್ಲಿದ್ದ ಶೇಷಗಿರಿಯ ಭಟ್ಟರ ಹೆಸರಿನಲ್ಲಿ ಗ್ರಾಂಟ್ ತೊಂಭತ್ತಾರು ರೂಪಾಯಿ ಮಂಜೂರಾಗಿತ್ತು. ಅರ್ಧವರ್ಷ ಅವರು ಕೆಲಸ ಮಾಡಿದ್ದರು. ಆಮೇಲೆ ಊರವರೆಲ್ಲ ಅವರನ್ನು ತೆಗೆದು ನನ್ನನ್ನು ನೇಮಿಸಿಕೊಂಡು ರಿಪೋರ್ಟ್ ಮಾಡಿದ್ದರ ಮೇರೆಗೆ ಅವರ ಹೆಸರಿಗೆ ಮಂಜೂರಾಗಿದ್ದ ಗ್ರಾಂಟಿನಲ್ಲಿ ನನಗೆ ಅರ್ಧ ಕೊಡಬೇಕೆಂದು ಶಿಕ್ಷಣ ಸಮಿತಿಯವರ ಆದೇಶವಾಗಿತ್ತು. ಆದರೆ ತಾನಾಗಿ ಬಂದು ಕೊಡಲು ಹಿಂದೇಟು ಹಾಕುತ್ತಿದ್ದ ಭಟ್ಟರಿಂದ ಹಣ ವಸೂಲು ಮಾಡಲು ಒಂದು ದಿನ ಹಿರೇಕಾಂಶಿಯ ಗಿಣಿವಾಲ ಈರಪ್ಪ, ಬಸನಗೌಡ, ಲೋಕನಗೌಡ, ಕೆಂಚಗೊಂಡರ ಲೋಕಪ್ಪ, ಬಾಳಿಹಳ್ಳಿ ಬಸವಣ್ಣೆಪ್ಪ ಮುಂತಾದ ಎಂಟುಜನ ಗಾಡಿ ಕಟ್ಟಿಕೊಂಡು ಏಳೆಂಟು ಮೈಲಿ ದೂರವಿರುವ ಶೇಷಗಿರಿಗೆ ಹೊರಟರು. ಆ ದಿನ ನಮ್ಮ ದೊಡ್ಡಪ್ಪನನ್ನು ನಮ್ಮೂರಿಂದ ನೇರವಾಗಿ ಶೇಷಗಿರಿಗೆ ಬರಹೇಳಿದ್ದೆ. ನಮ್ಮ ಗಾಡಿ ಒಳ್ಳೆಯ ಹುರುಪಿನಿಂದ ಶೇಷಗಿರಿಗೆ ಹೋಗಿ ಮುಟ್ಟಿತು. ನಮ್ಮ ದೊಡ್ಡಪ್ಪ ಅಷ್ಟು ಹೊತ್ತಿಗೆ ಊರ ಹೊರಗಿನ ಬೇವಿನ ಕಟ್ಟೆಯ ಮೇಲೆ ನಮ್ಮ ದಾರಿ ಕಾಯುತ್ತಾ ಕುಳಿತಿದ್ದ. ಅವನನ್ನು ಗಾಡಿಯಲ್ಲಿ ಕುಳ್ಳಿರಿಸಿಕೊಂಡು ಭಟ್ಟನ ಮನೆ ಮುಂಭಾಗಕ್ಕೆ ನಮ್ಮ ಗಾಡಿ ಹೋಗಿ ನಿಂತಿತು. ಹುರಿಗೆಜ್ಜೆ ಸಪ್ಪಳ ಕೇಳಿ ಭಟ್ಟರ ಮನೆಯ ಜನವೆಲ್ಲ ಬಾಗಿಲಿಗೆ ಬಂದು ನಿಂತು ಬೆರಗುಗಣ್ಣುಗಳಿಂದ ನಮ್ಮನ್ನೇ ನೋಡತೊಡಗಿದರು. ಹಿರೇಕಾಂಶಿಯ ಪ್ರತಿಷ್ಠಿತರೆಲ್ಲ ಬಂದದ್ದು ಕಂಡು ಮಾಸ್ತರರು

ಹೆದರಿ ಜಂಘಾಬಲ ಉಡುಗಿದವರಂತೆ ಆಗಿಹೋಗಿದ್ದರು. ನಮ್ಮ ಗುಂಪಿನಲ್ಲಿದ್ದ ಲೋಕನಗೌಡನ ಗೌಡನನ್ನು ಕಂಡರೆ ಅವರಿಗೆ ಬಹಳ ಭಯವಂತೆ. ಲೋಕನಗೌಡ ಮಾತಾಡುವವನಲ್ಲ. ಮಾತಾಡಲು ಪ್ರಾರಂಭಿಸಿದರೆ ಅವನನ್ನು ತಡೆಯುವ ಧೈರ್ಯವೇ ಯಾರಿಗೂ ಇರುತ್ತಿರಲಿಲ್ಲ. ವೀರಭದ್ರನ ಅಂಶವಿದ್ದ ಹಾಗೆ ಆತ. ಲೋಕನಗೌಡನೊಬ್ಬನಿದ್ದರೆ ಹತ್ತು ಜನ ಇದ್ದ ಹಾಗೆ. ಹತ್ತು ಜನ ಮಾತನ್ನು ಒಬ್ಬನೇ ಆಡುತಿದ್ದ. ಹತ್ತು ಜನರ ಸಿಟ್ಟು ಅವನೊಬ್ಬನಲ್ಲೇ ಇತ್ತು. ಅಂತೆಯೇ ಇಂಥ ಪ್ರಸಂಗಗಳಲ್ಲಿ ಲೋಕನಗೌಡ ಇದ್ದೇ ತೀರಬೇಕು. ಅವನ ಮುಖ ಕಂಡನೋ ಇಲ್ಲವೋ ಗರುಡನನ್ನು ಕಂಡ ಸರ್ಪದಂತೆ ಭಟ್ಟ ಉಡುಗಿಹೋದ. ಎಲ್ಲರನ್ನೂ ಒಳಗೆ ಕರೆದು, ಕುಳ್ಳಿರಿಸಿ, "ಗೌಡರೇ, ನಾನೇ ಬಂದು ಅರ್ಥ ಗ್ರಾಂಟ್ ಒಪ್ಪಿಸಬೇಕಾಗಿತ್ತು. ಏನೇನೋ ಅನಾನುಕೂಲವಾಯಿತು. ಕ್ಷಮಿಸಬೇಕು" ಎಂದು ನಾವು ಯಾವುದೇ ಪ್ರಸ್ತಾಪ ಮಾಡುವ ಪೂರ್ವದಲ್ಲಿ ತಾನೇ ಎಲ್ಲ ಹೇಳಿ ನಾಲ್ವತ್ತೆಂಟು ರೂಪಾಯಿ ಎಣಿಸಿಬಿಟ್ಟ. ಲೋಕನಗೌಡ ಮಾತಾಡಲು ಅವಕಾಶವೇ ಆಗಲಿಲ್ಲ. ಮನೆಯಲ್ಲಿ ಅವಲಕ್ಕಿ ಒಗ್ಗರಣೆ ಹಚ್ಚಿಸಿ, ಚಹಾ ವಗೈರೆ ಮಾಡಿಸಿ ಉಪಚಾರವನ್ನು ಮಾಡಿದ. ಎಲ್ಲರ ಸಿಟ್ಟೂ ಇಳಿದುಹೋಯಿತು. ನನ್ನ ವಶಕ್ಕೆ ನಾಲ್ವತ್ತೆಂಟು ರೂಪಾಯಿ ಕೊಟ್ಟರು. ನಾನು ಊರಿಂದ ಬಂದ ದೊಡ್ಡಪ್ಪನ ಕೈಗೆ ಆ ಹಣ ಒಪ್ಪಿಸಿದೆ. ನಮ್ಮ ದೊಡ್ಡಪ್ಪ ಎಲ್ಲರನ್ನೂ ಬೀಳ್ಕೊಂಡು ಹಣದೊಡನೆ ಅತ್ತ ನಮ್ಮೂರ ಕಡೆಗೆ ನಡೆದ. ನಾವು ಗಾಡಿ ಕಟ್ಟಿಸಿಕೊಂಡು ಹಿರೇಕಾಂಶಿಗೆ ಹೊರಟೆವು. ರಾತ್ರಿಯಾಯಿತು, ಬೆಳದಿಂಗಳು ಹಿಟ್ಟು ಚೆಲ್ಲಿದಂತೆ ಬಿತ್ತು. ಲೋಕಾಭಿರಾಮವಾಗಿ ಅರಣ್ಯ ಪ್ರಾಂತದಲ್ಲಿ ಗಾಡಿ ಹೊರಟಿತು. ಗಾಡಿಯಲ್ಲಿ ಲೋಕನಗೌಡ ಹಿಂದೆ ತಮ್ಮ ಊರಿನಲ್ಲಿ ಆಡಿದ್ದ ಯಕ್ಷಗಾನ ಹರಿಶ್ಚಂದ್ರ ಕಥೆಯ ಪದ-ಪದ್ಯಗಳನ್ನು ಹಾಡುತ್ತ ಎಲ್ಲರನ್ನೂ ನಗಿಸುತ್ತ ನಡೆದ. ಮಕರವಳ್ಳಿಗೆ ಗಾಡಿ ಬಂತು. ಊರ ಹೊರಭಾಗದ ಅರಳೀಕಟ್ಟೆಯ ಮೇಲೆ ಕುಳಿತಿದ್ದ ಆ ಊರಗೌಡ ನಮ್ಮ ಗಾಡಿಯನ್ನು ಬೆಳದಿಂಗಳಲ್ಲಿ ಗುರುತಿಸಿ, "ಗೌಡರೇ" ಎಂದು ಕೂಗಿದ. ಗಾಡಿ ನಿಂತಿತು. ಆವನು "ಇದೇನು ಗೌಡ್ರೇ, ಇಡೀ ಹಿರೇಕಾಂಶಿಗೆ ಹಿರೇಕಾಂಶಿಯೇ ಎಲ್ಲಿಗೋ ಹೋಗಿ ಬಂದಂತಿದೆಯಲ್ಲಾ. ಗಾಡಿ ಕೊಳ್ಳಿ ಹರೀರಿ. ಊಟಾ ತೀರಿಸಿಕೊಂಡು ಹೋಗ್ರಿ" ಎಂದುಬಿಟ್ಟ. ನಾವು ಆ ಗೌಡರಿಗೆ ನಡೆದ ವೃತ್ತಾಂತ ತಿಳಿಸಿ, ಹೋಗುತ್ತೇವೆ ಹೊತ್ತಾಗುತ್ತದೆ ಎಂದೆವು. ಅವನು ಏನು ಮಾಡಿದರೂ ಬಿಡಲಿಲ್ಲ. ಮನೆಗೆ ಗಾಡಿ ಹೊಡಿಸಿಕೊಂಡೇ ಹೊರಟುಬಿಟ್ಟ. ಬಹಳಷ್ಟು ಮೆಹರ್ಬಾನ್ ಮಾಡಿಬಿಟ್ಟ. ಹೋದ ಕೂಡಲೇ ಮಂಡಕ್ಕಿಯನ್ನು ನೆನೆಸಿ ಒಗ್ಗರಣೆ ಹಾಕಿ ಬೊಗಸೆ ಬೊಗಸೆ ಮಂಡಕ್ಕಿಯನ್ನು ಎಲೆಗೆ ಹಾಕಿ ತಿನ್ನಿಸಿ, ಚಹಾ ಮಾಡಿಸಿ ಕುಡಿಸಿದ. ಸ್ವಲ್ಪ ಹೊತ್ತು ಆ ಮಾತು ಈ ಮಾತು ಆಡಿ ಕಾಲ ಕಳೆಯುವಷ್ಟರಲ್ಲಿ ಅವನ ಮನೆಯಲ್ಲಿ ಗುಳಿಗೆಹುಗ್ಗಿ ಪಾಯಸ, ಅನ್ನ, ಹೊಗಸಾದ ಮಜ್ಜಿಗೆ ಸಾರು, ಪಲ್ಯ, ಚಟ್ನಿ ಎಲ್ಲ ಸಿದ್ಧಪಡಿಸಿಬಿಟ್ಟಿದ್ದ. ಕಂಠಪೂರ್ತಿ ಎಲ್ಲರೂ ಊಟ ಮಾಡಿ ಎಲೆ ಅಡಿಕೆ ಹಾಕಿದೆವು. ಎಲ್ಲರೂ ಬೀಡಿ ಎಳೆದರು. ಕೆಲವರು ಗೌಡ ಕೊಟ್ಟ ಸಿಗರೇಟ್ ಪ್ಯಾಕಿನಿಂದ ಸಿಗರೇಟ್ ಹಿರಿಹಿರಿದು ಹಚ್ಚಿದರು. ಗೌಡ ನನ್ನ ಬಗ್ಗೆ ಬಹಳಷ್ಟು ಕೊಂಡಾಡಿಯೂ ಬಿಟ್ಟ. ನನಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ಸುತ್ತ ಮುತ್ತಣ ಊರಿನಲ್ಲಿ ನನ್ನ ಗಂಧ ಸುಗಂಧ ಈಗಾಗಲೇ ಸಾಕಷ್ಟು ಹರಡಿದೆಯಲ್ಲಾ! ಎಂದು. ಸರಿ ದಾರಿಯಲ್ಲಿ ಲೋಕನಗೌಡ ಪ್ರಾರಂಭಿಸಿದ "ಏನ್ರೆಪೋ, ಮಕರೊಳ್ಳಿ ಗೌಡ ನಮಗೆಲ್ಲ ಇಷ್ಟು ಉಪಚಾರ ಮಾಡಿ ಕಳಿಸಿದ್ದು ಯಾಕ ಗೊತ್ತಾಯ್ತೋ?" ಎಂದ. ಎಲ್ಲರೂ "ಗೊತ್ತು ಬಾರಪಾ, ಅದೇ

ನಮ್ಮೂರ್ರ ಹುಡಿಗಿ ಮನೆಗೆ ಓಡ್ಯಾಡ್ತಾನಲ್ಲ ಅದಕ" ಎಂದು ಬಿಟ್ಟರು. ನನಗೆ ಈ ಮಾತಿ
ಅರ್ಥ ಸ್ಪಷ್ಟವಾಗಲಿಲ್ಲ. ಆಮೇಲೆ ಗೊತ್ತಾಯಿತು. ಹಿರೇಕಾಂಶಿಯ ಒಂದು ಹುಡಿಗಿಯ ಸ್ನೇ
ಮಾಡಿದ್ದನಂತೆ. ಆಕೆಗಾಗಿ ಅವನು ಏನೆಲ್ಲ ಹಾಳುಮಾಡಿಕೊಂಡು ಹುಡಿಗಿಯ ಸಂಬಂಧಿಕರಿ
ಅಷ್ಟು ಇಷ್ಟು ಸಹಾಯ ಮಾಡಿದ್ದನಂತೆ. ಮುಂದೆ ಪ್ರಸಂಗದಲ್ಲಿ ಹುಡಿಗಿಯ ಕಡೆಯವರು ನ
ಮೇಲೆ ಎರಗಿದರೆ ಜನ ಇರಲಿ ಎಂದು ಇಷ್ಟೊಂದು ಉಪಚಾರ ಮಾಡಿದನೆಂದು ಲೋಕನಗೌಡ
ವಿಶದವಾಗಿ ನಗುತ್ತ ನಗುತ್ತ ತಿಳಿಸಿದ. ಇದಕ್ಕೆ ಮೊದಲು ಇಂಥ ಪ್ರಸಂಗಗಳ ಪ್ರಸ್ತಾಪವ
ನನ್ನಲ್ಲಿ ಯಾರೂ ಮಾಡುತ್ತಿರಲಿಲ್ಲ. ನನ್ನ ಕಿವಿಗೆ ಬೀಳುತ್ತಲೂ ಇರಲಿಲ್ಲ. ಈಗ ನನಗಿಂ
ದೊಡ್ಡವರಾದ ಇವರ ಮಧ್ಯದಲ್ಲಿ ನನಗೆ ಸಮಾಜಜೀವನ ಸ್ತರಗಳು, ಅದರಲ್ಲಿ
ಲೋಪದೋಷಗಳು, ವ್ಯಾಭಿಚಾರಿಕ ಜೀವನದ ಕಥೆಗಳು ಒಂದೊಂದಾಗಿ ಕಿವಿಗಳಿ
ತಾಕತೊಡಗಿದವು. ಆದರೂ ಈ ವಿಷಯದಲ್ಲಿ ನಾನು ಸದಾ ಮೌನಿಯಾಗಿರುತ್ತಿದ್ದೆ. ನ
ಒಂದು ತೀರ್ಮಾನವಾಗಲಿ, ವಿಮರ್ಶೆಯಾಗಲಿ ಇರುತ್ತಿರಲಿಲ್ಲ. ಮಾತು ಮೌನವಾಗಿ ಬಿಡುತ್ತಿತ್ತು
ಈ ಗಂಭೀರ ಸ್ವಭಾವದಿಂದ ನನ್ನ ಬಗೆಗೆ ಎಲ್ಲರೂ ಗೌರವ ತೋರಿಸುವಂತಾಯಿತು. ನಾನು
ಹರಕುಬಾಯಿಂದ ಇಂಥ ಪ್ರಸಂಗಗಳಲ್ಲಿ ಬಾಯಿ ಹಾಕಿ ಮಾತನಾಡಿದರೆ ನನ್ನ ಬಗೆಗೆ ಇವರ
ಅಷ್ಟೊಂದು ಗೌರವ ತೋರಿಸುತ್ತಿದ್ದರೋ ಇಲ್ಲವೋ. ಈ ಕಥೆಗಳೇ ನನಗೆ ಅಸಹ್ಯ ತರುತ್ತಿದ್ದವ

### ನಮ್ಮ ಕುಂಟು ಬೇಸಾಯದಲ್ಲಿ ಸ್ವಲ್ಪ ಪ್ರಗತಿ

ಇತ್ತ ನಮ್ಮ ದೊಡ್ಡಪ್ಪ ಊರಿಗೆ ಹೋದ ಮೇಲೆ ಇಲ್ಲಿಂದ ಒಯ್ದ ನಾಲ್ವತ್ತೆಂಟ
ರೂಪಾಯಿಗಳಲ್ಲಿ ತಾನೇನು ಮಾಡಿದೆನೆಂಬುದನ್ನು ಹದಿನೈದು ಇಪ್ಪತ್ತು ದಿನಗಳ ನಂತ
ಹಿರೇಕಾಂಶಿಗೆ ಬಂದು ತಿಳಿಸಿ ಒಂದೆರಡು ದಿನ ಇದ್ದು ಹೋದ.

ಮನೆಯಲ್ಲಿ ಹೈನು ಇಲ್ಲವೆಂದು ಬಂಕಾಪುರದ ಹತ್ತಿರದ ಕಲ್ಯಾಣವೆಂಬ ನಮ್ಮ ಬೀಗ
ಊರಲ್ಲಿ ಒಂದು ಹೋರಿಕರುವನ್ನು ಈಯ್ದ ಕರೆಯುವ ಹಸುವನ್ನು ಒಂಬತ್ತು ರೂಪಾಯಿಗಳಿ
ಕೊಂಡುಕೊಂಡು ಬಂದನಂತೆ. ಅದು ನಮ್ಮ ಮನೆಗೆ ಕೇವಲ ಹಸುವಾಗಿ ಬರಲಿಲ್ಲ
ಕಾಮಧೇನುವಾಗಿ ಬಂತು. ವರ್ಷಕ್ಕೊಂದರಂತೆ 11 ವರ್ಷ ಹನ್ನೊಂದು ಹೋರಿಕರು
ಹೆಣ್ಣುಗರುಗಳನ್ನು ಹಾಕಿ, ನಮ್ಮ ಮನೆತುಂಬ ದನಕರು ಸಂಪತ್ತನ್ನೇ ಉಂಟುಮಾಡಿತು. ಅದನ
ಮಾರಿದವರು ಬಹು ತುಡುಗ ಹಸುವೆಂದು ಬೇಸತ್ತು ಕೊಟ್ಟರಂತೆ. ಆದರೆ ನಮ್ಮ ಮನೆಯ
ಪಾಲಿಗೆ ತುಡುಗ ಹಸುವಾಗದೆ ಯಾವಾಗ ಬೇಕಾದರೂ ಕರೆವ, ಹಾಕಿದ ಮೇವನ್ನು ಹೊಟ್ಟೆತುಂಬ
ತಿಂದು ಕೊಡತುಂಬ ಹಾಲು ತುಂಬಿಕೊಂಡು ಎರಡೆರಡು ಚರಿಗೆ ಹಾಲು ಹಿಂಡುವ
ಕಾಮಧೇನುವಾದುದೊಂದು ಯೋಗಾಯೋಗವೆನ್ನಬೇಕು.

18 ರೂಪಾಯಿ ಕೊಟ್ಟು ನಮ್ಮ ಬದುಕಿಗೆ ಆವಶ್ಯಕವಾಗಿದ್ದ ಒಂದು ಹಳೆಯ ಚಕ್ಕ
ಕೊಂಡುಕೊಂಡನಂತೆ. ಕೈಯಿಂದ ಎರಡು ರೂಪಾಯಿ ಹಾಕಿ 23 ರೂಪಾಯಿಗಳಿಗೆ ನಮ
ಮನೆಯಲ್ಲಿದ್ದ ಒಂಟಿ ಎತ್ತಿನ ಜೊತೆಗೊಂದು ಎತ್ತನ್ನು ಕೊಂಡು ಜೋಡೆತ್ತಿನ ಬೇಸಾಯ
ಸ್ಥಿತಿಗೇರಿದನಂತೆ. ನಾನು ಹಿಂದೆ ನಮ್ಮ ಊರಿನಲ್ಲಿ ಬದಲಿ ಉಪಾಧ್ಯಾಯನಾಗಿ ಕೆಲಸ ಮಾಡಿ
9 ರೂಪಾಯಿಗಳ ಸಂಬಳ ನಾನು ಹೊಸೂರಲ್ಲಿದ್ದಾಗಲೇ ಬಂದಿತ್ತು. ಅದನ್ನು ಬಂದ ದಿನವ
ಊರಿಗೆ ಮನಿಆರ್ಡರ್ ಮೂಲಕ ಕಳಿಸಿದ್ದೆ. ಆ ಹಣದಲ್ಲಿ ಎರಡು ರೂಪಾಯಿಕೊಟ್ಟ

ಒಂದು ಥಾನು ಹುಬ್ಬಳ್ಳಿ ಭಾರತ ಮಿಲ್ಲಿನ ಅಂಗಿಬಟ್ಟೆ ತಂದನಂತೆ. ಮೂರು ರೂಪಾಯಿ ಕೊಟ್ಟು ಪಂಜೆ ಮಾಡಿಕೊಳ್ಳಲು ಮಾಂಜರಪಾಟ್‌ನ ಒಂದು ಥಾನು ಬಟ್ಟೆ ತಂದು ಮನೆಯವರಿಗೆಲ್ಲ ಪಂಜೆ ಮಾಡಿದನಂತೆ. ಎರಡು ರೂಪಾಯಿ ಹನ್ನೆರಡಾಣೆ ಕೊಟ್ಟು ಇದ್ದ ಒಂದು ಎತ್ತಿಗೆ ಗೋಣೀ ಚೀಲ ಸಹಿತ ಹತ್ತಿಕಾಳು ಚೀಲ ಕೊಂಡನಂತೆ. ಉಳಿದ ದುಡ್ಡಿನಲ್ಲಿ ಯಾವುದೋ ಒಂದು ಹಬ್ಬದ ಸಾಮಾನು ತಂದು ಹಬ್ಬ ಮಾಡಿ ಕಲ್ಲಪ್ಪ ದೇವರಿಗೆ ಎಡೆಮಾಡಿ ನನ್ನ ಮಗನಿಗೆ ನೌಕರಿ ಕೊಡಿಸಿ ಕಾಪಾಡೆಂದು ಅಡ್ಡಬಿದ್ದು ಬೇಡಿಕೊಂಡು ಬಂದಿದ್ದನಂತೆ. ಹಿರೇಕಾಂಶಿಗೆ ಬಂದಾಗ ಅದರ ಜಮಾ ಖರ್ಚನ್ನು ಒಪ್ಪಿಸಿ ಹೋಗಿದ್ದ. ನನಗೆ ಹಿರೇಕಾಂಶಿಯಲ್ಲಿ ಗ್ರಾಂಟ್ ಸ್ಕೂಲ್ ಮಾಸ್ತರ ಕೆಲಸ ಸಿಕ್ಕಿದ್ದು ಕಲ್ಲಿನಾಥ ದೇವರಿಗೆ ನಾನು ಮಾಡಿಕೊಂಡ ಹರಕೆಯ ಫಲವೆಂದೂ ತಿಳಿಸಿದ.

**ಮಳೆಗಾಲ ಬಂತು**

ಮಲೆನಾಡಿನ ಮಳೆಗಾಲದ ಸವಿಯುಂಡದ್ದು ಪ್ರಥಮತಃ ನಾನು ಹಿರೇಕಾಂಶಿಯಲ್ಲಿ. ಕೃತ್ತಿಕಾ ಮಳೆಯಿಂದ ಮೊದಲ್ಗೊಂಡು ಆಶ್ಲೇಷ-ಮಖ ಮಳೆಗಳವರೆಗೆ ನಾಲ್ಕು ತಿಂಗಳು ಧಾರಾಕಾರವಾದ ಮಳೆ ಸುರಿದದ್ದೇ ಸುರಿದದ್ದು. ಕೆರೆಕಾಲುವೆ ಹಳ್ಳಕೊಳ್ಳ ಹೊಲಗದ್ದೆ ಬಾವಿ ಹೊಂಡ ಎಲ್ಲೆಲ್ಲೂ ನೀರೇ ನೀರು. ಆರಿದ್ರಾ ಪುನರ್ವಸು ಮಳೆಗಳಂತೂ ದಿನವಿಡೀ ಸುರಿಯುತ್ತ ಸೂರ್ಯನನ್ನು ಕಾಣುವಂತೆಯೇ ಇರಲಿಲ್ಲ. ಹಕ್ಕಲದ ಹೊಲಗಳೆಲ್ಲ ಜವುಳುಗಟ್ಟಿ ಏನನ್ನು ಬೆಳೆಯಲು ಬಾರದಂತಹ ಸ್ಥಿತಿಯಲ್ಲಿರುತ್ತಿದ್ದವು. ಆದರೂ ದಿಬ್ಬದ ಹೊಲಗಳಲ್ಲಿ ರಾಗಿ, ಹುರುಳಿ, ಗುರೆಳ್ಳು, ಸಾಸಿವೆ, ಸ್ವಲ್ಪಸ್ವಲ್ಪ ಮೆಣಸಿನ ಗಿಡ ಮೊದಲಾದ ಬೆಳೆ ಬಿತ್ತುತ್ತಿದ್ದರೂ ಅದು ಬಂದಷ್ಟು ಇವರು ತಕ್ಕೊಂಡಷ್ಟು. ಆದರೆ ಗದ್ದೆಯ ಬೆಳೆ ಮಾತ್ರ ಸಮೃದ್ಧವಾದ ನೀರಿನಿಂದ ಪೂರ್ಣವಾಗಿ ಬರುತ್ತಿತ್ತು. ಮುಕ್ಕಾಲು ಭಾಗ ಗದ್ದೆಗಳು ಬೀಳುಬಿದ್ದಿದ್ದವು. ಕಾರಣ, ಜನಶಕ್ತಿಯ ಅಭಾವ. ತಮಗೆ ಶಕ್ಯವಿದ್ದಷ್ಟು ಹೊಲಗದ್ದೆಗಳನ್ನು ಉತ್ತು ಬಿತ್ತಿ ಉಳಿದುದನ್ನು ದನ ಮೇಯಲು ಅಡವಿಗಳನ್ನಾಗಿ ಮಾಡಿಕೊಂಡಿದ್ದರು. ದನಕರುಗಳ ಸಂಪತ್ತು ಅಧಿಕವಾಗಿದ್ದರೂ ಹೆಚ್ಚಾಗಿ ಅವು ಹಾಲು ಕೊಡುತ್ತಿರಲಿಲ್ಲ. ಆದರೂ ಒಂದೊಂದು ಮನೆಗೆ ಹತ್ತಾರು ಹಸುಗಳು ಕರೆಯುತ್ತಿದ್ದುದರಿಂದ ಹಾಲು ಮೊಸರು ಬೆಣ್ಣೆ ತುಪ್ಪ ಸಮೃದ್ಧವಾಗಿರುತ್ತಿತ್ತೆನ್ನಬಹುದು. ಆಗ ಆ ಮಲೆನಾಡಿನಲ್ಲಿ ಹಾಲು ಮೊಸರು ಮಜ್ಜಿಗೆಯನ್ನು ಯಾರೂ ದುಡ್ಡಿಗೆ ಮಾರುತ್ತಿರಲಿಲ್ಲ. ಎಲ್ಲರ ಮನೆಯಲ್ಲಿ ಹೈನು ಇರುವಾಗ ಕೊಳ್ಳುವವರಾರು? ಚಹಾದ ಅಂಗಡಿಗಳ ಅಬ್ಬರ ಆಗ ಇರಲಿಲ್ಲವಾದ್ದರಿಂದ ಹಾಲುಹೊಳೆ ಈಗಿನಂತೆ ಅತ್ತ ಹರಿಯದೇ ಅದೆಲ್ಲ ನೇರವಾಗಿ ಹಾಲು ಮೊಸರು ಮಜ್ಜಿಗೆ ರೂಪದಲ್ಲಿ ಜನರ ಹೊಟ್ಟೆ ಸೇರುತ್ತಿತ್ತು. ಆದರೂ ಮಲೇರಿಯಾದ ಹಾವಳಿಯ ಫಲವಾಗಿ ಯಾರೂ ಸದೃಢಶರೀರಿಗಳಾಗಿರಲಿಲ್ಲ.

ನಾನು ಹಿರೇಕಾಂಶಿಗೆ ಹೋದ ಹೊಸದರಲ್ಲಿ ಯಾವ ರೋಗರುಜಿನಗಳಿಲ್ಲದ ಸದೃಢ ಶರೀರಿಯಾಗಿದ್ದನ್ನು ಕಂಡು ಎಲ್ಲರೂ ನನ್ನನ್ನು 'ಏನಾಳಪಾ ಇದು' ಎಂದು ಕೆಲವು ಹೊತ್ತು ದಿಟ್ಟಿಸಿ ಕಾಲಿನಿಂದ ನೆತ್ತಿಯವರೆಗೆ ಕಣ್ಣಾಡಿಸುತ್ತಿದ್ದುದುಂಟು. ಶ್ರದ್ಧೆಯಿಂದ ವ್ಯವಸಾಯ ಕಾರ್ಯ ಮಾಡಿ ಹೊಟ್ಟೆ ತುಂಬ ರೊಟ್ಟಿ ಅಂಬಲಿ ಉಂಡು ರೋಗ-ರುಜಿನಕ್ಕೆ ಸಿಕ್ಕದೆ ಬೆಳೆದಿದ್ದ ನನ್ನ ದೇಹ ದಷ್ಟಪುಷ್ಟವಾಗಿತ್ತು, ಮಿರಿಮಿರಿ ಮಿಂಚುತ್ತಿತ್ತು. ಎಷ್ಟೋ ಜನ ನನ್ನನ್ನು 'ಗರಡಿ ಮನಿ

ಆಡೀರೇನು? ಎಲ್ಲಿಯಾದರೂ ಕುಸ್ತಿಗಿಸ್ತಿ ಮಾಡಿದ್ದೀರಾ? ನಿಮ್ಮನ್ನು ನೋಡಿದರೆ ಫೈಲ್ವಾ
ಹಾಗೆ ಕಾಣುತ್ತೀರಿ' ಎಂದು ಕೆಲವರು ಕೇಳಿದ್ದೂ ಉಂಟು. ಆಗ ನಾನು 'ನಮ್ಮಪ್ಪ ದೊಡ್ಡ
ಗರಡಿಮನಿ ಆಡಿದ್ದರು ಅಷ್ಟೇ' ಎಂದು ನಗುತ್ತ ಹೇಳುತ್ತಿದ್ದೆ. ನೀವು ಇಷ್ಟೊಂದು ದಪ್ಪಕ
ಏನ್ತಿಂದಾದ್ರಿ?' ಎಂದುದೂ ಉಂಟು. ಇಂಥ ಮಾತುಗಳನ್ನು ಕೇಳಿದಾಗ ನನಗೆ ನನ್ನ ಮೈಕಟ್ಟ
ಬಗೆಗೆ ಹೆಮ್ಮೆಯಾದರೂ ಇಂಥ ಹೆಮ್ಮೆಗೆ ಕಾರಣಳಾದ ನನ್ನ ತಾಯಿಯ ತ್ಯಾಗದ ಕಥೆ ಕಣ್ಣೆದುರಿ
ನಿಲ್ಲುತ್ತಿತ್ತು. ಆ ಜೀವ ತಾನು ಕಷ್ಟಪಟ್ಟು ದುಡಿದು, ಸವೆದು ನಮ್ಮನ್ನು ಬೆಳೆಸಿದ ಅಪಾ
ವಾತ್ಸಲ್ಯದ ಚರಿತ್ರೆಯು ಸುರುಳಿ ಸುರುಳಿಯಾಗಿ ಬಿಚ್ಚಿ ಮನಸ್ಸಿನ ಮುಂದೆ ಹರಿ
ಮಾಯವಾಗುತ್ತಿತ್ತು. ಕೆಲವು ಹೆಂಗಸರು ನನ್ನನ್ನು ಕಂಡು ಮುಸಿ ಮುಸಿ ನಗುತ್ತಿದ್ದಾಗ ನ
ನಾಚಿಕೆಯಾಗುತ್ತಿತ್ತು. ಅವರ ನಗುವಿನ ಹಿಂದಿನ ಉದ್ದೇಶ ಮಾತ್ರ ಆಗ ಅರ್ಥವಾಗಲಿಲ್ಲ

ನಾನು ಮನೆತನದಿಂದ ಬಡವ. ನನ್ನ ಹುಟ್ಟಿನ ಸಮಯದಲ್ಲಿ ನಮ್ಮ ಮನೆಯ
ಸಮೃದ್ಧಿಯೇನೋ ಇತ್ತಂತೆ. ಐದಾರು ವರ್ಷದವನಾಗುವವರೆಗೆ ತಾಪತ್ರಯವಿಲ್ಲದೆ ಉಂಡು
ವೈಭವದಿಂದ ಕೂಡಿದ್ದ ಮನೆಯ ವೈಭವ ಮುಂದೆ ಇಲ್ಲದಂತಾಗಿ ತಿನ್ನುವ ಅನೇಕ ಬಾಯಿಗ
ನಮ್ಮ ಅಲ್ಪ ಉತ್ಪನ್ನ ಹಂಚಿ ಅಭಾವ ತಲೆದೋರಿ ಅತ್ಯಂತ ಬಡತನ ಬಂದಿರಬಹುದು. ಇ
ಕಾಲದಲ್ಲಿ ನಮ್ಮ ತಾಯಿ ಅಪಾರ ತ್ಯಾಗಮಾಡಿ ರೊಟ್ಟಿಪಲ್ಲೆಗಳಿಗೆ ಕೊನೆಯಿಲ್ಲದಂತೆ ಮಾಡಿ
ದುಡಿತದ ಅನಾಥಶ್ರಮ ಅಷ್ಟಿಷ್ಟಲ್ಲ. ಹೊಲಕ್ಕೆ ಹೋದರೆ ಅಲ್ಲಿನ ಕೆಲಸ ಮುಗಿಸಿ ಬರುವುದಿ
ಅವಳ ಕೆಲಸವಾಗಿರಲಿಲ್ಲ. ಮಡಿಲ ತುಂಬ ಪಕ್ಕರಿಗೆ, ಗೊರಜಿ, ಅಣ್ಣೆ, ಸಬ್ಬಸಿಗೆ, ಎಲು
ಪರಾಟಿಗ, ಉತ್ರಾಣಿ, ದಾಗಡಿ, ಕಾಶಿ, ಕುಸುಬಿ, ಕಡಲಿ, ವಿಷ್ಣುಕಾಂತಿ, ಚಿಲಕ, ಪಲಕ, ಪರಿ
ಕಿರಕಸಾಲಿ, ಹೊನಗನ್ನೆ, ಹುಣಸೀಚಿಗರು - ಹೀಗೆ ಯಾವ ಯಾವ ಸೊಪ್ಪು ಸದೆ ಯಾ
ಯಾವ ಕಾಲದಲ್ಲಿ ಎಲ್ಲೆ ಎಲ್ಲೆ ಸಿಗುತ್ತದೆಯೋ ಅದನ್ನೆಲ್ಲ ತರೆದು ತಂದು ಬೇಯಿಸಿ ಬಿಸಿರೊ
ಮಾಡಿ ಕೊಟ್ಟರಾಯಿತು. ಐದಾರು ರೊಟ್ಟಿಗಳು ನಮ್ಮ ಹಸಿದ ಹೊಟ್ಟೆ ಸೇರಿ ತೃಪ್ತಿಗೊಳಿಸುತ್ತಿದ್ದ
ಬಿಸಿಯ ನುಚ್ಚಂಬಲಿಯ ಮೇಲೆ ಸ್ವಲ್ಪ ಉಪ್ಪು ಹಾಕಿ ಮಜ್ಜಿಗೆ ನೀಡಿದರೆ ಆಯಿತು. ನ
ಇದೇ ಅಮೃತವಾಗಿರುತ್ತಿತ್ತು. ಒಂದೊಂದು ಸೊಪ್ಪಿನಲ್ಲಿ ಒಂದೊಂದು ಗುಣ. ಒಂದೊಂ
ಶಕ್ತಿಯಿರುತ್ತದೆ. ಆಯಾಯ ಕಾಲದಲ್ಲಿ ಇವನ್ನೆಲ್ಲ ತಿನ್ನುತ್ತ ಬರಬೇಕೆಂದು ಮೊದಲು ತಿಳಿಸಿದವ
ನನ್ನ ತಾಯಿ. "ಓದಿದ್ದಿಲ್ಲ ಬರೆದಿದ್ದಿಲ್ಲ. ಏನೂ ಗೊತ್ತಿಲ್ಲದವರೆಂದು ಇಂಥವರ ಅನುಭವವ
ಅಲ್ಲಗಳೆಯಲಾದೀತೆ?" ಇಂದಿಗೂ ಅವಳ ಅನುಭವದ ಅನೇಕ ಮಾತುಗಳು ನ
ಬಡಿದೆಬ್ಬಿಸುತ್ತಿವೆ. ಇನ್ನಾವ ಏಳೋಗದ ಊಟವನ್ನೇನೂ ನಾನು ಮಾಡಿರಲಿಲ್ಲ. ಕೆ
ಸಂದರ್ಭದಲ್ಲಿ ನಮ್ಮ ಹೊಲಗಳ ಬದುವಿನಲ್ಲಿ ಹಳ್ಳದ ದಂಡೆಯಲ್ಲಿ ತಾನಾಗಿಯೇ ಬೆಳೆದಿರು
ಕಾಡು ಹಾಗಲಕಾಯಿ ತಂದು ಪಲ್ಯಮಾಡಿದರಂತೂ ನಮ್ಮ ಉತ್ಸಾಹ ಹೇಳತೀರದು. ನ
ಕಾಡುಹಾಗಲಕಾಯಿಯನ್ನು ತಿನ್ನುವ ಪದಾರ್ಥವಲ್ಲವೆಂದೇ ತಿಳಿದಿದ್ದೆ. ನಮ್ಮ ತಾಯಿ ಅದಕ್ಕೆ ಮಾಡು
ವ್ಯಾಖ್ಯಾನ ಏನು ಗೊತ್ತೆ? "ಹಿಂದಿನ ರಾಜರು ದೇಸಾಯಿ ದೇಶಪಾಂಡೆಗಳು ಇದ್ದಲ್ಲಿಂದ
ತರಿಸಿಕೊಂಡು ತಿನ್ನಾರ. ಅಂಥ ಒಳ್ಳೆ ಕಾಯಿ" ಎನ್ನುತ್ತಿದ್ದಳು. ಹಕ್ಕರಿಕೆ ಸೊಪ್ಪು ಕಹಿಯಾದ
ರೊಟ್ಟಿ ಜತೆಗೆ ಹಸಿಸೊಪ್ಪು ತಿನ್ನಬೇಕು. ಬಹಳ ಒಳ್ಳೇದು. ಅದರಂತೆ ಕುಸುಬಿಸೊಪ್ಪು ಕ
ಎಂದು ಹೇಳಿ ಒತ್ತಾಯ ಮಾಡಿ ತಿನ್ನಿಸುತ್ತಿದ್ದಳು. ನಾನು ತಿಂದು ತೋರಿಸಿ ತಿನ್ನು
ಮಾಡುತ್ತಿದ್ದಳು. ಕುಸುಬಿ ಸೊಪ್ಪನ್ನು ಒಗ್ಗರಣೆ ಹಾಕಿ ಬೇಯಿಸಿ ಕೊಡುತ್ತಿದ್ದುದೂ ಉಂಟು

ಬೇಸಿಗೆಯಲ್ಲಿ ನಮ್ಮ ಹೊಲಗಳಲ್ಲಿ ಯಾವ ಸೊಪ್ಪು, ತರಕಾರಿ ಸಿಗುತ್ತಿರಲಿಲ್ಲ. ಆಗ ನಮ್ಮ ಮನೆಯ ಪಕ್ಕದಲ್ಲೇ ಇದ್ದ ತಳವಾರ ಕರಿಯಪ್ಪನೊಡನೆ ಕೂಡಿದ ಹೊಳೆ ಮೂಲೆಗೆ ಹೋಗಿ ಅಲ್ಲಿ ಹೊಳೆಯ ತಂಪಿಗೆ ಅಲ್ಲಲ್ಲಿ ಹುಟ್ಟಿಕೊಂಡಿದ್ದ ಹೊನಗನ್ನೆ, ಎಲೂರಿ, ಗೊರಜಿ ಸೊಪ್ಪನ್ನು ತಂದೇ ತರುತ್ತಿದ್ದಳು. ಅಲ್ಲಿನ ಅತ್ತಿಮರದಲ್ಲಿನ ಎಳಗಾಯಿಗಳನ್ನು ತರುತ್ತಿದ್ದಳು. ಅತ್ತಿಕಾಯಿಗಳನ್ನು ಜಜ್ಜಿ ಹೆಸರುಕಾಳುಗಳಲ್ಲಿ ಹಾಕಿ ಬೇಯಿಸಿ ಒಗ್ಗರಣೆ ಕೊಟ್ಟು ಪಲ್ಲೆ ಮಾಡಿ ನೀಡುತ್ತಿದ್ದಳು. ಅದೂ ತಪ್ಪಿದರೆ ನಮ್ಮ ಹೊಲಗಳಲ್ಲಿ ಬನ್ನಿಯ ಗಿಡಗಳಲ್ಲಿನ ಬನ್ನಿಯ ಕಾಯಿಗಳನ್ನು ಒಯ್ದು ಬಡಿದು ತಂದು ಪಲ್ಲೆ ಮಾಡಿಕೊಡುತ್ತ ಬನ್ನೀಕಾಯಿ ಪಲ್ಯ ಬಹಳ ಕಾವು. ಇದನ್ನು ಹೆಚ್ಚಾಗಿ ತಿನ್ನಬಾರದು. ಸ್ವಲ್ಪ ಸ್ವಲ್ಪ ತಿನ್ನಿಯೆಂದು ಹೇಳುತ್ತಿದ್ದಳು. ಚೊಗಚೆ ಕಾಯಿ ಪಲ್ಯದಂತೆ ಪಲ್ಯವೇನೋ ಹಿತವಾಗಿರುತ್ತಿತ್ತು.

ಆಗಾಗ ಕೇಸಿನದಂಟು ಮಂಗರೋಳಿಯೋ ಏನೋ ಅದರ ಹೆಸರು ಹೇಳುತ್ತಿದ್ದಳು. ಅದು ಒಂದು ತರದ ಬೇಲಿಯ ಮೇಲೆ ಬೆಳೆಯುವ ಸಸ್ಯ. ಇದನ್ನು ಪಲ್ಯ ಚಟ್ನಿ ಮಾಡಿ ಇದನ್ನು ತಿನ್ನಬೇಕು. ಹೊಟ್ಟೆಯೊಳಗಿನ ಹುಳು ಹೋಗುತ್ತವೆ ಎನ್ನುತ್ತಿದ್ದಳು. ನರೇಗಲ್ಲು ತೋಟದಿಂದ ಬಾಳೆದಿಂಡು ತಂದು ಹೆಚ್ಚಿ ಅತ್ಯುತ್ತಮ ಪಲ್ಯೆ ತಯಾರಿಸಿ ಕೊಡುತ್ತಿದ್ದಳು. ಬಾಳೆದಿಂಡು ತಿಂದೇ ತೀರಬೇಕು. ಇದು ಬೆಳೆಯುವ ಮಕ್ಕಳಿಗೆ ಬಹಳ ಒಳ್ಳೆಯದೆಂದು ಹೇಳುತ್ತಿದ್ದುದು ಜ್ಞಾಪಕ. ಇದಲ್ಲದೆ ಆಗಾಗ ಕಾಡಿಗ್ಗರಗ ಸೊಪ್ಪು ತಂದು ಸ್ವಲ್ಪ ಹುರಿದು ಚಟ್ನಿ ಮಾಡಿಕೊಡುತ್ತಿದ್ದುದೂ ಉಂಟು. ಹಾಗಲ ಕಾಯಿ ಮಾಡಿದಾಗ ಹಾಗಲ ಬೀಜಗಳನ್ನು ಉಗುಳಬಾರದು. ಬೀಜಗಳನ್ನು ಕಡಿದು ನುರಿಸಿ ನುಂಗಬೇಕು. ಒಂದು ಬೀಜ ತಿಂದರೆ ಒಂದು ಸೇರು ತುಪ್ಪ ಕುಡಿದಂತೆ ಎಂದು ಹೇಳುತ್ತಿದ್ದುದನ್ನು ಇಂದಿಗೂ ಜ್ಞಾಪಿಸಿಕೊಳ್ಳುತ್ತಿದ್ದೇನೆ.

ಹೊಲದಲ್ಲಿ ನಾವು ಕೆಲಸ ಮಾಡುತ್ತಿದ್ದಾಗ ಹೊಟ್ಟೆ ಮುರಿತ -ನೋವು ಇತ್ಯಾದಿ ಹೇಳಿದರಾಯಿತು. ನಮ್ಮ ಹೊಲಗಳಲ್ಲಿ ತನ್ನಿಂದ ತಾನೇ ಒಡ್ಡು ಬದುಗಳಲ್ಲಿ ಬೆಳೆದಿದ್ದ ಅಜವಾನ (ಓವ್ವ) ಕಾಳನ್ನು ಹುಡುಕಿ ತಂದು ಕರಕರ ಕಡಿದು ನುಂಗು ಎನ್ನುತ್ತಿದ್ದಳು. ಅದು ಸಿಗದಿದ್ದಾಗ ಹೊನ್ನಾವರಿಕೆ (ತಂಗಡಿ)ಯ ಐದಾರು ಮುಗುಡುಗಳನ್ನು ತಂದು ಇವನ್ನು ಕಣ್ಣು ಮುಚ್ಚಿಕೊಂಡು ಕರಕರ ನುರಿಸಿ ನುಂಗು. ಅದೇನು ಮಾಡುತ್ತೆ ಹೋಗುತ್ತೆ ಎಂದು ಹೇಳಿ ಕೊಡುತ್ತಿದ್ದುದುಂಟು. ಅಡಿಕೆ ಎಲೆ ಹಾಕಿಕೊಂಡಾಗ ಹೊನ್ನಾವರಿಕೆ ತೊಗಟೆಯನ್ನು ಅಡಿಕೆ ಜೊತೆಗೆ ಅಗಿದು ಎಲೆಗೆ ಸುಣ್ಣ ಹಚ್ಚಿಕೊಂಡು ತಿನ್ನಬೇಕೆಂದು ಹೇಳುತ್ತಿದ್ದಳು. ಅವಳು ಹಾಗೆ ಮಾಡುತ್ತಿದ್ದಳು. ಈ ತೊಗಟೆ ಹಾಕಿಕೊಂಡರೆ ಬಾಯಿ ಮೃದುವಾಗುತ್ತದಂತೆ. ನುಂಗಿದಾಗ ಹೊಟ್ಟೆಗೆ ಹಿತವಂತೆ. ಹೀಗೆ ನಮ್ಮ ತಾಯಿ ಹೇಳುತ್ತಿದ್ದ ಮಾತುಗಳು ಅದೆಷ್ಟೊ. ಈ ಕಾರಣವಾಗಿಯೇ ಏನೋ ಹನ್ನೊಂದು ಮಕ್ಕಳನ್ನು ಹಡೆದು ಅಪಾರವಾದ ದೇಹದ ರಕ್ತ ಕಳೆದುಕೊಂಡಿದ್ದರೂ ಎಂಬತ್ತು ವರ್ಷಗಳವರೆಗೆ ಡಾಕ್ಟರರ ಹತ್ತಿರ ಹೋಗದೆ ಟಾನಿಕ್ಕು ಗೀನಿಕ್ಕುಗಳಿಗೆ ಬಂಗಿಗಳಾಗದೆ. ಇಂಜಕ್ಷನ್‌ಗಳ ಹಾವಳಿಗೆ ಸಿಗದೆ ದುಡಿಯುತ್ತಲೇ ಆರೋಗ್ಯದಿಂದ ಇದ್ದದ್ದು ಇಂದಿನವರಿಗೆ ಪವಾಡವಾಗಿ ಕಾಣಬಹುದು. ನನಗಂತೂ ಹಾಗೆ ಅನ್ನಿಸಿದೆ. ಇನ್ನೊಬ್ಬರಿಗೆ ಅನ್ನಿಸಲಿ ಬಿಡಲಿ ಅದನ್ನು ಕಟ್ಟಿಕೊಂಡು ಮಾಡುವುದೇನು? ಅವರು ಕ್ರಿಯೆಯಲ್ಲಿ ಸುಖ ಕಂಡವರು. ಒಂದು ಕ್ರಿಯೆ ಮುಗಿಸಿ ಇನ್ನೊಂದು ಕ್ರಿಯೆಮಾಡುವುದೇ ವಿರಾಮವೆಂದು ತಿಳಿದವರು. ನನಗೇನಾದರೂ ಕ್ರಿಯಾಶೀಲತೆ ಬಂದಿದ್ದರೆ ಅದು ನನ್ನ ತಾಯಿಯ ಆದರ್ಶವೇ.

## ಅಗಾಧ ಶಕ್ತಿಶಾಲಿನಿ ನನ್ನ ತಾಯಿ

ನನ್ನಿಂದ ನಾಲ್ಕನೆಯ ಅಥವಾ ಐದನೆಯ ತಮ್ಮನ್ನೋ ತಂಗಿಯೋ ಸರಿಯಾಗಿ ನೆನಪಿಲ. ಆ ಭ್ರೂಣ ಹೊಟ್ಟೆಯಲ್ಲಿರುವಾಗ ನಾನು ಕಂಡ ನನ್ನ ತಾಯಿಯ ಶಕ್ತಿಯುತ ಕಾರ್ಯಶಕ್ತಿಯ ಒಂದು ಚಿತ್ರ ನನ್ನ ನೆನಪಿನಾಳದಲ್ಲಿ ಇನ್ನೂ ಕೆನೆಗಟ್ಟಿ ನಿಂತಿದೆ. ನಮ್ಮ ಜಾಲಿಕಟ್ಟೆ ಹೊಲದಲ್ಲಿ ಸ್ವಲ್ಪ ಭಾಗದಲ್ಲಿ ಉಳ್ಳೇಗಡ್ಡಿ ಹಾಕಲಾಗಿತ್ತು. ಹಿಂದಿನ ರಾತ್ರಿ ಮಳೆ ಚೆನ್ನಾಗಿ ಸುರಿದಿತ್ತು. ಮನೆಯಲ್ಲಿ ದನಗಳಿಗೆ ಮೇವು ನಮ್ಮ ತಂದೆ ಮೊದಲಾದವರ ಸೋಮಾರಿತನದಿಂದಲೋ ಏನೋ ಇರಲಿಲ್ಲ. ಅಲ್ಲದೆ ಕಾಯಿಪಲ್ಯ ಕೂಡ ಮನೆಯಲ್ಲಿ ಇರಲಿಲ್ಲ. ಇದನ್ನು ಗಮನಿಸಿ ಬೆಳಿಗ್ಗೆ ಆರುಗಂಟೆಯ ಹೊತ್ತಿಗೇ ಹೊಲಕ್ಕೆ ಹೊರಟಳು ನನ್ನ ತಾಯಿ. ಕೆಸರು ತುಳಿಯುತ್ತ ಕೈಯಲ್ಲಿ ಕುಡುಗೋಲು ಹಿಡಿದು ಒಂದು ಕುಂಚಿಕೆ (ಮಳೆ ವಗೈರೆ ಬಂದರೆ ನಮ್ಮ ಕಡೆಯ ಹೆಣ್ಣು ಮಕ್ಕಳು ಹೊದ್ದುಕೊಳ್ಳಲು ಹಳೆಯ ಸೀರೆಯನ್ನು ಹರಿದು ಹೊಂದಿಕೊಂಡ ಕುಪ್ಪೆಯಂತಹ ಒಂದು ಬಟ್ಟೆ) ಸುತ್ತಿ ಎಡಗೈಯಲ್ಲಿ ಹಿಡಿದು ಹೊರಟ ಅವರ ಹೊಟ್ಟೆಯಲ್ಲಿ ಆರೇಳು ತಿಂಗಳ ಭ್ರೂಣ ಇತ್ತೆಂಬುದನ್ನು ಮರೆಯಲಾಗದು. ಅವಳ ಬೆನ್ನು ಹತ್ತಿ ನಾನೂ ಹೊರಟೆ. ಉಳ್ಳೇಗಡ್ಡಿ ಹೊಲಕ್ಕೆ ಹೋಗಿ ಅಲ್ಲಿದ್ದ ಹೀರೆ, ಬೆಂಡೆ, ಕೋತಂಬ್ರಿ, ಸೊಪ್ಪುಸೆದೆ ಏನೇನೊ ತರೆದು ಕುಂಚಿಕೆಯಲ್ಲಿ ಗಂಟುಕಟ್ಟಿಟ್ಟು ದನದ ಮೇವಿಗೆಂದೇ ಸಿಡಿಬೀಜ ಕೂಡಿಸಿ ಈರುಳ್ಳಿ ಹೊಲದಲ್ಲಿ ಬಿತ್ತಿದ್ದ ಎಣಿಗಾರದ (ಜೋಳದಲ್ಲಿ ಒಂದು ಬಗೆ. ಇದನ್ನು ಕೇವಲ ದನಗಳ ಮೇವಿಗಾಗಿಯೇ ಹೊಲದಲ್ಲಿ ಅಲ್ಲೊಂದು ಇಲ್ಲೊಂದು ಹುಟ್ಟುವಂತೆ ಸಿಡಿಬೀಜ ಹಾಕಿ ಬೆಳೆಸಿದ ದಂಟು) ಒಂದು ಹೊರೆ ಮೇವನ್ನು ಕೊಯ್ದು ಹೊರೆಕಟ್ಟಿದಳು. ಸ್ವಲ್ಪ ಹೊತ್ತು ಹೊಲದ ಬದುವಿನ ಮೇಲಿದ್ದ ಪುಟ್ಟ ಪುರಿಕಿ ಗಿಡಗಳ ಮೇಲೆ ಕುಳಿತು ದಣವಾರಿಸಿಕೊಂಡಳೋ, ಪ್ರಕೃತಿ ಸೌಂದರ್ಯದ ಸೊಬಗಿಗೆ ಮಾರು ಹೋಗಿ ಆನಂದ ತುಂದಿಲಳಾಗಿದ್ದಳೋ, ಭೂದೇವಿಯ ಅಗಾಧ ಕಾರುಣ್ಯವನ್ನು ನೆನೆಯುವ ಯೋಗಿಣಿಯಾಗಿದ್ದಳೋ, ಬಲ್ಲವರಾರು? ನಾನು ನನ್ನ ಪಾಡಿಗೆ ಈರುಳ್ಳಿ ಹೊಲದಲ್ಲಿ ಅಲ್ಲಲ್ಲಿ ಹುಟ್ಟಿದ್ದ ಸವತೇ ಬಳ್ಳಿಯಲ್ಲಿ ಎಳೆ ಸವತೇ ಕಾಯಿ ಹುಡುಕಿಕೊಂಡು ನಾಲಿಗೇ ಚಾಪಲ್ಯ ಪರಿಹಾರ ಕಾರ್ಯದಲ್ಲಿ ಮಗ್ನನಾಗಿದ್ದೆ.

ಸ್ವಲ್ಪ ಹೊತ್ತಿನ ನಂತರ "ಏ ತಮ್ಮಾ, ಬಾ ಹೋಗೂನು. ಹೊರೆ ಹೊರ್ಸು ಬಾ" ಎಂದಾಗ ನಾನು ನನ್ನ ಏಕಾಗ್ರತೆಯಿಂದ ಭಂಗಗೊಂಡು ಹೋಗಿ ಹೊರೆ ಹೊರಿಸಿದೆ. ನಾನೇ ಹೊತ್ತು ಕೊಳ್ಳುತ್ತೇನೆ ಎನ್ನಲಿಲ್ಲ. ನಾನು ಹೊತ್ತುಕೊಳ್ಳುವ ಹೊರೆಯೂ ಅದಾಗಿರಲಿಲ್ಲ. ಕಾಯಿಪಲ್ಯದ ಗಂಟು ಕೊಡು ಎಂದಳು, ಕೊಟ್ಟೆ. ಅದನ್ನು ಬಲಗೈಯಲ್ಲಿ ಹಿಡಿದು. ಎಡಗೈಯಲ್ಲಿ ಕುಡುಗೋಲಿನಿಂದ ಹೊರೆ ಹಿಡಿದುಕೊಂಡು ಕೆಸರು ತುಳಿಯುತ್ತ ನಡೆದಳು. ಸ್ವಲ್ಪ ಮುಂದೆ ಹೋಗಿ "ಕಾಯಿಪಲ್ಯದ ಗಂಟು ತಲೆಮೇಲೆ ಇಟ್ಕೊಂಡು ಬರ್ತೀಯಾ, ಕೈ ಸೋತು ಹೋತು" ಎಂದಳು. "ಹೋಗ್ಬೇ ಹೋಗು. ಕುಂಚ್ಗೆಗಂಟ್ಯಾರ್ ಹೊತ್ಕಂತಾರು" ಎಂದೆನೇ ಹೊರತು. ಹೊತ್ತು ತಾಯಿಯ ಭಾರ ಕಡಿಮೆ ಮಾಡುವ ಬುದ್ಧಿ ಬರಲೇ ಇಲ್ಲ. ತಾಯಿಯ ಭಾರ ನನಗೆ ಅರ್ಥವೇ ಆಗಲಿಲ್ಲವಲ್ಲ! ಎಂದು ಇಂದು ಯೋಚಿಸಿ ಮಮ್ಮಲ ಮರುಗುತ್ತಿದ್ದೇನೆ. ಒಂದು ಕಡೆ ಹೊಟ್ಟೆಯ ಭಾರ, ತಲೆಯ ಮೇಲೆ ಹೊತ್ತ ಮೇವಿನ ಬಾರ, ಬಲಗೈಯ ಕಾಯಿಪಲ್ಲೆ ಭಾರ, ಕಾಲಿಗೆ ಮೆತ್ತಿಕೊಳ್ಳುತ್ತಿದ್ದ ಕೆಸರಿನ ಭಾರ. ಮನೆಗೆ ಹೋಗಿ ಬೇಗ ಅಡಿಗೆ ಅಂಬಲಿ ಮಾಡಿ ಉಣ್ಣುವ ಬಾಯಿಗಳಿಗೆ ಯಾವಾಗ ತುತ್ತುಗಳನ್ನು ಮಾಡೇನೆನ್ನುವ ಮನಸ್ಸಿನ ತುಮಲದ

ಭಾರ. ಇವಾವುವೂ ನನಗೆ ಆಗ ಏಕೆ ಹೊಳೆಯಲಿಲ್ಲ? ನಾನೆಂತಹ ನಿಷ್ಕರುಣಿ ಎಂದು ಈಗೀಗ ಯೋಚಿಸುತ್ತಿದ್ದೇನೆ. ಇಂಥ ಯೋಚನೆಯಿಂದ ಫಲವಾದರೂ ಏನು? ಎಲ್ಲ ದೂರದ ಉಪಚಾರದ ಮಾತಾಯಿತು, ಹೃದಯವಂತಿಕೆಯ ಮಾತಾಗಲಿಲ್ಲ. ಎಷ್ಟೇ ಆಗಲಿ ಬಾಲಕನಲ್ಲವೆ? ಬಾಲಾಪರಾಧಗಳು ಗಣನೀಯಗಳಲ್ಲವೆಂದು ಸಮಾಧಾನ ಮಾಡಿಕೊಳ್ಳಬಹುದು ಅಲ್ಲವೇ!

ನನ್ನ ತಾಯಿಯ ಕ್ರಿಯಾಶಕ್ತಿ ಎಷ್ಟೊಂದು ಪ್ರಬಲವೆಂದರೆ ಸುಮ್ಮನೆ ಕುಳಿತದ್ದೇ ಗೊತ್ತಿಲ್ಲ. ಸುಮ್ಮನೆ ಕೆಲಸವಿಲ್ಲದೆ ಕುಳಿತಿದ್ದರೂ ಕೈಯಲ್ಲಿ ಕಲಸಿದ ಗೋದಿಹಿಟ್ಟು ಇರುತ್ತಿತ್ತು. ಆ ಹಿಟ್ಟಿನಿಂದ ಗವಲಿ, ಸವತೆಬೀಜಗಳನ್ನು ತಂತಾನೇ ಕೈ ಮಾಡುತ್ತಿತ್ತು, ಬಾಯಿ ಬಂದವರೊಡನೆ ಮಾತನಾಡುತ್ತ ಕ್ರಿಯೆ ನಡೆಸುತ್ತಲೇ ಇರುತ್ತಿತ್ತು. ಒಂದು ವಿಷಯವಂತೂ ಸತ್ಯ. ನನಗೆ ಕ್ರಿಯಾಶೀಲತೆ, ಕ್ರಿಯಾ ಮಗ್ನತೆಯ ಶಕ್ತಿಯೇನಾದರೂ ಉಂಟಾಗಿದ್ದರೆ ಅದು ನನ್ನ ತಾಯಿಯ ಮೈಯ ರಸದಿಂದಲೇ ಉಂಟಾಯಿತೆಂದು ಮಾತ್ರ ಹೇಳಬಲ್ಲೆ. ಅವರ ಕ್ರಿಯಾಶೀಲತೆ ಅಷ್ಟು ಪ್ರಬಲವಾದದ್ದು.

ನಮಗೆ ಗಂಟಲು ಕಡಿತ ಕೆಮ್ಮು ಆದರಾಯಿತು. ಚಟ್ಟನೆ ಎದ್ದು ಹೋಗಿ ಬೇಲಿಯ ಮೇಲೆ ಬೆಳೆದ ಕುಟಿಗನ ಸೊಪ್ಪು ತಂದು ಅದರಲ್ಲಿ ಒಂದು ಕಲ್ಲುಉಪ್ಪು, ಒಂದು ಬೆಳ್ಳುಳ್ಳಿ ಬೇಳೆ, ಎರಡು ಮೆಣಸಿನ ಕಾಳು ಹಾಕಿ ಮುದುಡಿ ಬಾಯಲ್ಲಿ ಹಾಕಿಕೊಂಡು ಕರಕರ ತಿಂದು ನುಂಗು ಎಂದು ಬಿಡುತ್ತಿದ್ದಳು. ಹಾಗೆ ಮಾಡುತ್ತಿದ್ದೆವು. ಕೆಮ್ಮು ಗಂಟಲು ಕಡಿತ ಮಂಗಮಾಯ. ಬಿಸಿಲಲ್ಲಿ ಹೊಲಕ್ಕೆ ಹೊರಟರೆ ನೆತ್ತಿಗೆ ಔಡಲ ಎಲೆ ಅಥವಾ ಅಡಸಾಲ ಎಲೆ ತಂದು ತಲೆಯ ಮೇಲೆ ಇಟ್ಟು ಟೋಪಿ ಹಾಕುತ್ತಿದ್ದಳು. ನಾವು ರುಮಾಲು ಸುತ್ತಿದಾಗ ರುಮಾಲು ತೆಗೆದು ಆ ಎಲೆ ಹಾಕಿ ರುಮಾಲು ಸುತ್ತಿಕೊ ಎನ್ನುವಳು. ಹೊಲದಿಂದ ಬಿಸಿಲಲ್ಲಿ ಮನೆಗೆ ಬಂದ ಕೂಡಲೇ ನೀರು ಕೇಳಿದರೆ ಬಿಸಿಲಲ್ಲಿ ಬಂದು ಗಪ್ಪನೆ ಗಳಗಳ ನೀರು ಕುಡಿಯಬಾರದು, ಸ್ವಲ್ಪ ಬೆಲ್ಲ ತಿಂದು ನೀರು ಕುಡಿ ಎಂದು ಬೆಲ್ಲ ಕೊಡುತ್ತಿದ್ದಳು. ಬಹುಶ್ರಮದ ದೂಳಿನಲ್ಲಿನ ಕೆಲಸ ಮಾಡಿ ಬಂದಾಗ ಹಗೇವುಗಳಿಗಿಳಿದು ಮೇಲೇರಿ ಬಂದಾಗ ಬೆಲ್ಲದ ಜೊತೆಗೆ ಉಳ್ಳೇ ಗಡ್ಡಿ ಕೊಟ್ಟು ಇದನ್ನು ತಿಂದ ಮೇಲೆಯೇ ನೀರು ಕುಡಿಯಬೇಕೆಂದು ಹೇಳಿ ಹಾಗೆ ಮಾಡಿಸುತ್ತಿದ್ದಳು. ಆಮಶಂಕೆ ಭೇದಿ ಇತ್ಯಾದಿ ಭೇದಿಯಾದರೆ ಇದ್ದಲ್ಲಿಂದ ತೊಂಡರಸಿಗನ ಸೊಪ್ಪು ತರಿಸಿ ಅರೆದು ಮೊಸರು ಹಾಕಿ ಕುಡಿಯಲು ಕೊಟ್ಟು ಊಟಕ್ಕೆ ಬಿಸಿಬಿಸಿ ಜೋಳದ ಮುದ್ದೆ ಬೆಣ್ಣೆಯನ್ನೇ ತಿನ್ನಿಸುತ್ತಿದ್ದಳು. ಹಲ್ಲು ನೋವಿಗೆ ಕುಪ್ಪಿಸೊಪ್ಪು, ಉಪ್ಪನ್ನು ಅರೆದು ಅರಳಿಯಲ್ಲಿಟ್ಟು ನೋವಿದ್ದಲ್ಲಿ ಹಿಡಿಯಬೇಕು. ಮಕ್ಕಳ ಮೈಕಟ್ಟು ಇಳಿದಿದೆ ಎಂದು ಮನಸ್ಸಿಗನ್ನಿಸಿದರೆ ಆಯಿತು. ತಂಗಡಿಹೂ ತಂದು ಬೇಯಿಸಿ ಹಾಲು ಸಕ್ಕರೆ ಹಾಕಿ ಕೊಡಬೇಕು. ಚಿಕ್ಕಮಕ್ಕಳಿಗೆ ಕೆಮ್ಮು ಉಂಟಾದರಾಯಿತು. ಅಡಸಾಲ ಎಲೆತಂದು ಬಿಸಿಮಾಡಿ ಹಿಂಡಿ ಜೇನುತುಪ್ಪದಲ್ಲಿ ನೆಕ್ಕಿಸಬೇಕು. ಹೀಗೆ ಏನೇನೋ ನಮ್ಮ ತಾಯಿಯ ಗೃಹವೈದ್ಯವಾಗಿರುತ್ತಿತ್ತು.

ಕಾಡುಹಳ್ಳಿಯಲ್ಲಿ ಹುಟ್ಟಿ ಓದದೆ ಬರೆಯದೆ, ಎಂಥ ದುರ್ಧರ ಪ್ರಸಂಗಗಳಿಗೂ ಹೆದರದೆ ದುಡಿತದಿಂದ ಅವನ್ನೆಲ್ಲ ಎದುರಿಸಿ ತುಂಬು ಆರೋಗ್ಯದಿಂದ ಹನ್ನೊಂದು ಮಕ್ಕಳ ತಾಯಿಯಾಗಿ ಎಂಬತ್ತು ವರ್ಷ ಬದುಕಿ ಬಾಳಿದ ನನ್ನ ತಾಯಿಯ ಆರೋಗ್ಯ ಸೂತ್ರದ ಕಕ್ಷೆಯಿಂದ ಹೊರಬಂದು ಜೀವನಕ್ಕಾಗಿ ಮಲೆನಾಡು ಗಿಲೆನಾಡುಗಳಲ್ಲಿ ಅಲೆಯುವುದಕ್ಕೆ ಪ್ರಾರಂಭವಾದ ಮೇಲೆ ನಾನು ಜ್ವರ - ಮಲೇರಿಯಾ ಇತ್ಯಾದಿಗಳ ನೋವನ್ನು ಕಂಡೆ. ಇಪ್ಪತ್ತೊಂದು ವರ್ಷಗಳವರೆಗೆ ಡಾಕ್ಟರರ

ಮುಖವನ್ನೇ ಕಾಣದ ನನಗೆ ಎಪ್ಪತ್ತೆರಡನೇ ವಯಸ್ಸಿನಿಂದ ಡಾಕ್ಟರರ ಮತ್ತು ಗುಳಿಗೆಗಳ ಸ್ನೇಹ
ಉಂಟಾಯಿತು. ಈ ಸ್ನೇಹದಿಂದ ಇಂದಿಗೂ ಮುಕ್ತನಾಗಲಿಲ್ಲ. ಒಂದು ರೀತಿಯಲ್ಲಿ ಗುಳಿಗೆಗಳ
ಮೇಲೆಯೇ ಇಂದಿನ ನಮ್ಮ ಜೀವನ ನಿಂತಿದೆ. ಗುಳಿಗೆ ನಿಂತ ದಿನವೇ ನಮ್ಮ ಬಾಳೂ ಇಲ್ಲ
ಅನ್ನುವಷ್ಟರ ಮಟ್ಟಿಗೆ ಆಗಿದೆ ಜೀವನ ವ್ಯವಸ್ಥೆ.

ಇಂಥ ತಾಯಿಯ ಆರೋಗ್ಯ ಸೂತ್ರ ಛತ್ರಿಯ ಅಡಿ ಬೆಳೆದ ನಾನು ಹಿರೇಕಾಂಶಿ ಜನರ
ಕಣ್ಣಿಗೆ ಗರಡಿ ಮನೆ ಆಳು, ಕುಸ್ತಿಯ ಪೈಲ್ವಾನ್ ಆಗಿ ಕಂಡಿದ್ದು ಆಶ್ಚರ್ಯದ ಸಂಗತಿಯೇನಲ್ಲ.
ಆರೋಗ್ಯವಂತರೇ ಇಲ್ಲ ಆ ಊರಲ್ಲಿ. ಆರೋಗ್ಯದಿಂದ ಬೆಳೆದಿದ್ದ ನನ್ನ ಮೈಕಟ್ಟು ಕಂಡು
ಎಲ್ಲರೂ ಹಿರಿಹಿರಿ ಹಿಗ್ಗಿದರೋ ಅಥವಾ ಮಾತ್ಸರ್ಯಪಟ್ಟರೋ ಹೇಳಲಾರೆ. ಒಂದು ವರ್ಷದವರೆಗೆ
ಅಲ್ಲಿನ ರೋಗಗಳು ನನ್ನ ಸನಿಹಕ್ಕೆ ಸುಳಿಯದಿದ್ದರೂ ಮುಂದೆ ನಾನು ರೋಗಗಳಿಗೆ ದಾಸನಾಗಲೇ
ಬೇಕಾಯಿತು. ಅಂಥ ಬ್ರಹ್ಮಾಂಡ ಮಲೇರಿಯಾ ಸ್ಥಾನ ಅದು. ಕುಡಿಯುವ ನೀರು ಹೊಂಡದ್ದು.
ಊರಲ್ಲಿ ಸೇದುವ ಬಾವಿಯೂ ಇಲ್ಲ. ಕೊಳೆನೀರನ್ನೇ ಕುಡಿದು ಇಷ್ಟುದಿನವಾದರೂ ಜೀವಂತ
ಇದ್ದಾರಲ್ಲ ಎನ್ನಿಸುತ್ತಿತ್ತು.

### *ಹಿರೇಕಾಂಶಿಯಲ್ಲಿ ಊಟೋಪಚಾರದ ವ್ಯವಸ್ಥೆ*

ಮೊದಮೊದಲು ಹಿರೇಕಾಂಶಿಗೆ ಬಂದ ಹೊಸದರಲ್ಲಿ ತಿಂಗಳೊಪ್ಪತ್ತು ಗಿಣಿವಾಲದ
ಈರಪ್ಪನ ಮನೆಯಲ್ಲಿ ಊಟ ಮಾಡಿಕೊಂಡು ಕಟ್ಟೆಯ ಮೇಲಿನ ಅವರ ಮಳಿಗೆಯಲ್ಲಿ
ಮಲಗುತ್ತಿದ್ದೆ. ಮುಂದೆ ಊರವರೆಲ್ಲ ಒಬ್ಬರಿಗೆ ಭಾರವೇಕೆ? ಎಂದು ದೊಡ್ಡ ದೊಡ್ಡ ನಾಲ್ಕೈದು
ಮನೆಗಳಲ್ಲಿ ಒಂದೊಂದು ಮನೆಯಲ್ಲಿ ಒಂದೊಂದು ತಿಂಗಳಂತೆ ಊಟಕ್ಕೆ ಗೊತ್ತು ಮಾಡಿದರು.
ನಾನಿದ್ದ ಗಿಣಿವಾಲದವರ ಮನೆ ಬಿಟ್ಟು ಉಳಿದ ಮನೆಗಳೆಲ್ಲ ದೂರ ದೂರ. ಹಗಲು
ಸಮಸ್ಯೆಯಾಗುತ್ತಿರಲಿಲ್ಲ. ರಾತ್ರಿಯ ಆಯಾಯ ದೂರದ ಮನೆಗಳಿಗೆ ಹೋಗಿ ಊಟ ಮಾಡುವುದು
ತುಂಬಾ ಭಯವನ್ನುಂಟು ಮಾಡುತ್ತಿತ್ತು. ಆ ಭಯ ದೆವ್ವ ಭೂತಗಳದ್ದಲ್ಲ.ಇಲ್ಲಿ ದೆವ್ವ ಇದೆ. ಇಲ್ಲಿ
ಏಳು ಮಕ್ಕಳ ಚವುಡಿ ಇದೆ. ಇಲ್ಲಿ ಮೊನ್ನೆ ಸತ್ತ ರಾಮಕ್ಕ ದೆವ್ವ ಆಗಿದ್ದಾಳೆ - ಎಂಬಂಥ
ಕಥೆಗಳನ್ನು ನನಗೆ ಯಾರೂ ಹೇಳಿರಲೇ ಇಲ್ಲವಲ್ಲಾ! ಆದ್ದರಿಂದ ಅಲ್ಲಿ ಭೂತ ಪ್ರೇತ ಪಿಶಾಚಿಗಳ
ಭಯವಿರಲಿಲ್ಲ. ಭಯವಿದ್ದುದು ಹಾವುಗಳದ್ದು. ಊರಿನಲ್ಲಿ ಅರ್ಧಭಾಗ ಹಾಳುಮನೆಗಳಿಂದ
ತುಂಬಿತ್ತು. ಊರಮಧ್ಯದಲ್ಲೆ ಬಾಳೆತೋಟ, ಪೊದೆ, ಗಿಡ, ಮರ, ಹುತ್ತ - ಏನೇನೋ ಬೆಳೆದಿದ್ದವು.
ಹಾವುಗಳು ಹಗಲು ಹೊತ್ತೇ ಹರಿದಾಡುವುದನ್ನು, ಹರಿದಾಡಿದ ಗುರುತುಗಳನ್ನು ಕಂಡಿದ್ದ
ನಾನು ರಾತ್ರಿ ಎಲ್ಲಿಯಾದರೂ ಹಾವುಗಳ ಮೇಲೆ ಹೆಜ್ಜೆಯಿಟ್ಟರೆ ಗತಿ ಏನು ಎಂಬುದು
ಘೋರಭಯಕ್ಕೆ ಕಾರಣವಾಗಿತ್ತು. ರಾತ್ರಿಯಾದರಾಯಿತು ಊರು ಬಿಕೋಎನ್ನುತ್ತಿತ್ತು.
ಬೀದಿದೀಪಗಳಿಲ್ಲ. ಮನೆಯ ಸೀಮೆಯೆಣ್ಣೆ ಚಿಮಣಿ (ಬುಡ್ಡಿ) ಯ ದೀಪ ಹೊಸ್ತಿಲು ಬಿಟ್ಟು
ಈಚೆ ಬರುತ್ತಿರಲಿಲ್ಲ. ನಾನು ಬ್ಯಾಟರಿ ಹಿಡಿಯುವಷ್ಟು ಶ್ರೀಮಂತನೂ ಆಗಿರಲಿಲ್ಲ. ಹೀಗಾಗಿ
ಹಾವಿನ ಭಯದಿಂದ ನಡುಗುತ್ತಿದ್ದೆ. ಬೀದಿಯ ಕಲ್ಲು ಮುಳ್ಳು ಏನೂ ರಾತ್ರಿ ಕಾಣುತ್ತಿರಲಿಲ್ಲ.
ಬೆಳದಿಂಗಳಿದ್ದಾಗ ಮಾತ್ರ ಸ್ವಲ್ಪ ಧೈರ್ಯ.ಅದಿಲ್ಲದಾಗ ಮೋಡ ಮುಸುಕಿದಾಗ ಉಂಟಾಗುತ್ತಿದ್ದ
ಭಯ ಅವರ್ಣನೀಯ.ಇಂಥ ಸ್ಥಿತಿಯಲ್ಲಿ ನನ್ನ ಯೋಚನೆಯೆಂದರೆ ಬಹು ವೇಗವಾಗಿ
ಓಡಿಬಿಡುವುದು. ಹಾಗೆ ಓಡುವಾಗ ಒಂದು ವೇಳೆ ಹಾವಿನ ಮೇಲೆ ಹೆಜ್ಜೆಯಿಟ್ಟರೂ ಅದು

ಮೊಡೆಮುರುಳಿ ಕಟ್ಟುವ ಹೊತ್ತಿಗಾಗಲೆ ಅವರ ಮೇಲಿನ ಹೆಜ್ಜೆ ಕಿತ್ತು ಇಡುತ್ತೇನಾಗಿ ಅದರ ಕಡಿತದ ಭಯವಿಲ್ಲವೆಂದು ಲೆಕ್ಕಾಚಾರ ಹಾಕಿದ್ದೆ. ಒಂದು ದಿನ ಥಕ್ ಥಕ್ ಎಂದು ಜಿಗಿಜಿಗಿದು ಹಾರುತ್ತ ಹೀಗೆ ವೇಗವಾಗಿ ಓಡುವುದರನ್ನು ಶಾನುಭಾಗ ಗೋವಿಂದರಾಯರು ತಮ್ಮ ಬಾಗಿಲು ಮುಂದೆ ನಿಂತು ಕಂಡು "ಅಯ್ಯೋ! ಯಾರೋ ಕಳ್ಳರು ಓಡುತ್ತಿದ್ದಾರೆ ಹೋ‍ಹೋ!" ಎಂದು ಹುಯಿಲೆಬ್ಬಿಸಿ ಬಿಟ್ಟರು. ನನ್ನ ಕಿವಿಗೆ ಅವರಾಡುವ ಈ ಮಾತು ಕೇಳಿದರೂ ಕೇಳಿದವನಂತೆ ನನ್ನ ಕೂಠಡಿಗೆ ಬಂದು ಬಿಟ್ಟೆ. ಮರುದಿನವೂ ರಾತ್ರಿ 9 ಘಂಟೆಯ ಹೊತ್ತಿಗೆ ಹೀಗೆಯೇ ಹೊಂಚು ಹಾಕಿ ಸ್ವಲ್ಪ ಹೊತ್ತು ಕುಳಿತಿದ್ದರಂತೆ. ತಮ್ಮ ಮನೆಯ ಮುಂದಿನ ಕೆಂಚಗೊಂಡದ ಲೋಕಪ್ಪನಿಗೆ ರಾತ್ರಿ ಈ ದಾರಿಯಲ್ಲಿ ಯಾರ್ಯಾರೋ ಓಡಿಹೋಗುತ್ತಾರ. ಅವರನ್ನು ಹಿಡಿಯಬೇಕು ಎಂದರಂತೆ. ಅದರಂತೆ ಅವನೂ ರಾತ್ರಿ ತಮ್ಮ ಕಟ್ಟೆಯ ಮೇಲೆ ದೀಪ ಆರಿಸಿ ಕಾಯುತ್ತ ಕುಳಿತಿದ್ದನಂತೆ. ನನಗೆ ಇದಾವುದರ ಅರಿವು ಇರಲಿಲ್ಲ. ನಾನು ದಿನದಂತೆ ರಾತ್ರಿ ಬಸನಗೌಡರ ಮನೆಯಲ್ಲಿ ಊಟ ಮಾಡಿ ಓಡುತ್ತ ಅವರ ಮಹೆಬಾಗಿಲಿಗೆ ಬರುವ ಹೊತ್ತಿಗೆ ಗೋವಿಂದರಾಯರು 'ಲೋಕಪ್ಪ, ಓಡಿಬರ್ತಾ ಇದ್ದಾನಪೋ' ಎಂದು ಬಿಟ್ಟರು. ಲೋಕಪ್ಪ ಥಟ್ಟನೆ ಮುಂದೆ ಬಂದು "ಯಾರಪಾ, ನಿಲ್ತೀಯೋ ಬೇಕೋ ಕಲ್ಲಿನೇಟು" ಎಂದು ಬಿಟ್ಟ. ಎದೆ ಝಲ್ಲೆಂದಿತು "ಏಯ್, ಲೋಕಪ್ಪಾ, ನಾನು ಮಾಸ್ತರು" ಎಂದು ಬಿಟ್ಟೆ. ಆಗ ಅವನು "ಮಾಸ್ತರೇ ಏನಿದು? ಹಿಂಗ್ಯಾಕೋಡ್ತೀರ್ರಿಪಾ" ಎಂದ. ನನ್ನ ಭಯ ಕಡಿಮೆಯಾಯಿತು. ಗೋವಿಂದರಾಯರು ಬಿದ್ದು ಬಿದ್ದು ನಗುತ್ತ, "ಏನ್ರೀ ಮಾಸ್ತರೇ, ಹಿಂಗ್ಯಾಕೋಡ್ತೀರಿ?" ಎಂದು ಬಿಟ್ಟ ಅಷ್ಟರಲ್ಲಿ ನಾಲ್ಕಾರು ಮನೆಯವರು ಸೇರಿ ಎಲ್ಲರೂ ನಕ್ಕದ್ದೇ ನಕ್ಕದ್ದು. ನಾನು ಅವರಿಗೆ ನನ್ನ ಥೇರಿ ಏನೆಂಬುದನ್ನು ವಿವರಿಸಿದೆ. ಮುಂದೆ ಯಾರೂ ನನ್ನನ್ನು ಪ್ರಶ್ನಿಸಲಿಲ್ಲ. ಆದರೆ ಓಡುವುದನ್ನು ಬಿಡಲಿಲ್ಲ. ಮಳೆಗಾಲದಲ್ಲಿ ಹೀಗೆ ಓಡುವಾಗ ಒಂದೆರಡು ಸಲ ಜಾರಿ ಬಿದ್ದು ಮೈಕೈಗೆ ಕೆಸರು ಮೆತ್ತಿಸಿಕೊಂಡುದೂ ಉಂಟು. ಇಂಥ ಮಳೆ ಹತ್ತಿದ ಕಾಲದಲ್ಲಿಯೇ ಇದುವರೆಗೆ ನನ್ನಿಂದ ಬಹುದೂರವಿದ್ದು ಅತೀವ ತಿರಸ್ಕಾರಕ್ಕೂ ಒಳಗಾಗಿದ್ದ ತಂಬಾಕು ಸೇದುವ ಚಟವನ್ನು ಕಲಿತುಬಿಟ್ಟೆ. ಕಲಿಯಲಿಲ್ಲ, ಕಲಿಸಿದರು ಎನ್ನುವುದು ಮೇಲು. ಆಗ ನಾನು ಬಾಳಹಳ್ಳಿ ಬಸವಣ್ಣೆಪ್ಪನ ಮನೆಯಲ್ಲಿ ಊಟಮಾಡುತ್ತಿದ್ದೆ. ಅವರ ವಿಶಾಲವಾದ ಕಟ್ಟೆಯ ಮೇಲೆ ಒಂದು ಮಂಚ. ಊಟಮಾಡಿ ಆ ಮಂಚದ ಮೇಲೆ ನಾನು ಕುಳಿತುಕೊಳ್ಳುತ್ತಿದ್ದೆ. ಅದೇ ಹೊತ್ತಿಗೆ ಹಗಲೆಲ್ಲ ಕೆಸರುಗದ್ದೆ ಹೊಡೆದು ಮನೆಗೆ ಬಂದು ಬಿಸಿನೀರು ಸ್ನಾನಮಾಡಿ ಊಟಮುಗಿಸಿಕೊಂಡು ನಾಲ್ಕಾರು ಜನರು ಹರಟೆ ಹೊಡೆಯಲು ಬರುತ್ತಿದ್ದರು. ಅವರೆಲ್ಲ ಮಂಚದ ಕೆಳಗೆ ಕುಳಿತುಕೊಂಡು ಮಾವಿನ ಎಲೆ ಬತ್ತಿ ಕಟ್ಟಿ ಅದರಲ್ಲಿ ತಂಬಾಕು ಹಾಕಿ ಮೇಲೆ ಕೆಂಡವನ್ನಿಟ್ಟು ಬತ್ತಿ ಸೇದುತ್ತಿದ್ದರು ನಾನು ಅವರು ಬತ್ತಿ ಸೇದುವುದನ್ನು ಕಂಡು ಚೇಷ್ಟೆ ಮಾಡುತ್ತಿದ್ದೆ. ಒಂದು ದಿನ ಸೋ ಎಂದು ಮಳೆ ಹೊರಗೆ ಸುರಿಯುತ್ತಿತ್ತು ಬತ್ತಿ ಕಟ್ಟಿ ಕೆಂಡ ಹೇರಿ ನನಗೆ ಮಾಸ್ತರೇ ಬತ್ತಿ ಹಚ್ಚಿಕೊಡಿ ಅಂದರು. ಒಂದೇ ಬತ್ತಿಯನ್ನು ಐದಾರು ಜನ ಸರತಿಯ ಮೇಲೆ ಸೇದುತ್ತಿದ್ದರು. ಮೊದಲು ನನಗೆ ಸೇದಿಕೊಡಲು ಕೇಳಿದರು. ನಾನು ಸಾಧ್ಯವಿಲ್ಲವೆಂದೆ. ಆಗ ಬಣಕಾರ ಲೋಕಪ್ಪ ಛೀ! ಹಾಗಲ್ಲ ನಮ್ಮೂರ ನೀರು ಬಹಳ ಕೆಟ್ಟದ್ದು. ಬತ್ತಿ ಸೇದದಿದ್ದರೆ ನೀರು ಹತ್ತುವುದಿಲ್ಲ. ಹಾಗೆ ಹೀಗೆ ಎಂದು ಬಣ್ಣದ ಮಾತಾಡಿ ಸೇದಿಸಿಬಿಟ್ಟರು. ಸೇದಿದುದೊಂದೇ ಗೊತ್ತು. ನನಗೆ ಎಚ್ಚರದಪ್ಪಿದಂತಾಯಿತು. ಆಗ ಎಲ್ಲರೂ ನಗುತ್ತ, ಮೊದಮೊದಲು ಹೀಗೇ ಆಗುವುದು. ಮುಂದೆ ಸರಿಹೋಗುತ್ತೆ ಎಂದರು.

ಹೀಗೆ ಪ್ರಾರಂಭವಾದ ನನ್ನ ಧೂಮಪಾನ ಚಟ ಇಂದಿನವರಿಗೆ ನನಗೆ ಒಂದು ಭೂತವಾ
ಕಾಡುತ್ತ ಬಂದಿದೆ. ಬಿಡುವ ಹಾಗಿಲ್ಲ. ಬಿಡಲು ಮಾಡಿದ ಅನೇಕ ಸಂಕಲ್ಪಗಳು ಸುಳ್ಳಾ
ಹೋಗಿವೆ.

ಬೇಸಿಗೆ, ಚಳಿಗಾಲ ಎರಡರಲ್ಲೂ ಪ್ರತಿದಿನ ಮಧ್ಯಾಹ್ನ ಶಾಲೆ ಬಿಟ್ಟ ಮೇಲೆ ತೋಟ
ಬಾವಿಗೆ ಹೋಗಿ ಹೂವು ಪತ್ರೆ ಎತ್ತಿಕೊಂಡು ಬಂದು ಲಿಂಗಪೂಜೆ ಮಾಡಿ, ಊಟ ಮುಗಿ
ಶಾಲೆಯಲ್ಲೇ ಬಂದು ಮಲಗಿಬಿಡುತ್ತಿದ್ದೆ. ಎಚ್ಚರವಾದೊಡನೆ ಅಲ್ಲಿಯೇ ಶಾಲೆಯ ಕೆಲಸ
ಪ್ರಾರಂಭಿಸಿ ಬಿಡುತ್ತಿದ್ದೆ. ಮಳೆಗಾಲ ಬಂದಾಗ ಮಾತ್ರ ಧೋ ಎಂದು ಸುರಿಯುತ್ತಿದ್ದ ಮಳೆಯ
ತೋಟದ ಬಾವಿಗೆ ಹೋಗುವುದು ದುಸ್ತರವಾಗುತ್ತಿತ್ತು. ಎಲ್ಲೆಲ್ಲೂ ನೀರೇ ನೀರು. ಆಗ ತೋಟ
ಬಾವಿಗೆ ಹೋಗಬೇಕಾದರೆ ಸುತ್ತಿಬಳಸಿ ಹೋಗಬೇಕು. ಒಂದಕ್ಕೆ ನಾಲ್ಕರಷ್ಟು ದೂರ. ಹತ್ತಿ
ಮಳೆ ಬಿಡುತ್ತಲೇ ಇರಲಿಲ್ಲ. ಆಗ ಯಾವ ಮನೆಯಲ್ಲಿ ಊಟ ಮಾಡುವನೋ ಅಲ್ಲಿಯೆ
ಸ್ನಾನ ಮಾಡುತ್ತಿದ್ದೆ. ಇಂತ ಸಮಯದಲ್ಲಿ ನನ್ನನ್ನು ಅತ್ಯಂತ ಶ್ರದ್ಧೆಯಿಂದ, ಭಕ್ತಿಯಿಂದ, ವಿಶ್ವಾಸದಿಂ
ಕಂಡ ದಾನಪ್ಪನವರ ಚೆನ್ನಬಸಪ್ಪನವರ ಮನೆಯವರ ಸೇವೆ ಎಂದೂ ಮರೆಯಲು ಸಾಧ್ಯವಿಲ್ಲದ
ಅವರ ಮನೆಯ ಗೃಹಿಣಿ ಗದಿಗೆಕ್ಕನ ತ್ಯಾಗ, ಭಕ್ತಿ, ಕರ್ತವ್ಯಶ್ರದ್ಧೆ, ಅತಿಥ್ಯದಲ್ಲಿ ಅಪಾರ ಭ
ಪ್ರೇಮದ ಬಗೆಗೆ ತುಂಬಾ ಗೌರವ ನನ್ನಲ್ಲಿ ಮೂಡಿ ಹೋಯಿತು. ತ್ಯಾಗವೇ ಮೂರ್ತಿವೆತ್ತಂತಿ
ಅವಳನ್ನು ಕಂಡ ನನಗೆ ಸದ್ಗೃಹಿಣಿಯರ ಬಗ್ಗೆ, ಸಾವಿತ್ರಿ, ಅನು ಸೂಯೆಯರ ಹಳೆಯ ಪವಾಡದ
ಚರಿತ್ರೆಗೆ ಕತೆಯನ್ನೇ ಓದಬೇಕಾಗಿಲ್ಲ ಎನಿಸಿದ್ದರೆ ಆಶ್ಚರ್ಯಪಡಬೇಕಾದುದಿಲ್ಲ. ಸದಾ ಕ್ರಿಯೆಯಲ್ಲಿ
ಮುಳುಗಿ ಹೋಗಿದ್ದ ಆ ಗರತಿಯ ಆರೋಗ್ಯ ಅಷ್ಟೊಂದು ಹಿತವಿರಲಿಲ್ಲವಾದರೂ, ಸೆ
ಹಿಡಿದು ಮಲಗುತ್ತಿರಲಿಲ್ಲ. ಒಂದು ಕಾರ್ಯ ಮುಗಿದೊಡನೆ ಇನ್ನೊಂದು ಕ್ರಿಯೆಯನ್ನು ಮಾಡುವುದ
ವಿರಾಮವೆಂದು ಹೇಳುವ ಆದರ್ಶವಾದಿಗಳ ಮಾತಿಗೆ ಅವಳು ನಿದರ್ಶನವಾಗಿ ನನ್ನ ಕಣ್ಣಿ
ಕಂಡಳು. ಚನ್ನಾಗಿ ಮಳೆ ಹಿಡಿದ ವೇಳೆಯಲ್ಲಿ ನಾನು ತೋಟದ ಬಾವಿಗಳಿಗೆ ಹೋಗಿ ಸ್ನಾ
ಮಾಡುವುದು ದುಸ್ತರವಾಗಿತ್ತು. ಅದ್ದರಿಂದ ಮನೆಯಲ್ಲೇ ಸ್ನಾನ ಮಾಡುತ್ತಿದ್ದೆ. ಶಾಲೆ ಬಿಟ
ನಾನು ಮನೆಗೆ ಹೋಗುವುದೇ ತಡ, ಬಿಸಿನೀರನ್ನು ಬಚ್ಚಲಕಟ್ಟೆಗೆ ಎತ್ತಿಟ್ಟು ಮಡಿಯನ್ನು ವಸ್ತ್ರವನ
ಹಾಕಿ ಶಿವಪೂಜಾ ಗೃಹವನ್ನು ಚೊಕ್ಕಟಗೊಳಿಸಿ ಹೂ ಪತ್ರೆಗಳನ್ನು ಮನೆಯ ಮುಂದಿ
ಕೈತೋಟದಿಂದ ಎತ್ತಿ ತಂದು ವ್ಯವಸ್ಥೆಗೊಳಿಸಿ ಬಿಡುತ್ತಿದ್ದಳು. ನಾನು ಶಿವಪೂಜೆ ಮುಗಿ
ಊಟಕ್ಕೆ ಕುಳಿತ ಮೇಲೆ ನನಗೆ ರೊಟ್ಟಿ ಮಾಡಿಕೊಡಲು ಒಲೆಯ ಮುಂದೆ ಕುಳಿತು ರೊಟ್ಟಿ
ತಟ್ಟಿ ಬೇಯಿಸಿಕೊಡುತ್ತಿದ್ದಳು. ಹತ್ತಾರು ಸಲ ಒಲೆಯ ಮುಂಭಾಗದಲ್ಲಿ ಕುಳಿತಿದ್ದು ನನ
ಉಣಬಡಿಸಿ, ಎಲೆ ಅಡಕೆಯನ್ನು ಸಜ್ಜುಗೊಳಿಸಿ ಬಿಡುತ್ತಿದ್ದಳು. ನಾನು ಬಚ್ಚಲಲ್ಲಿ ಬಿಟ್ಟ ಪಂಜೆಯನ
ಆ ದಿನವೇ ಶುಭ್ರವಾಗಿ ತೊಳೆದು ಒಣಗಿಸಿಡುತ್ತಿದ್ದಳು. ಸದಾ ಹಣೆಯಲ್ಲಿ ಭಸ್ಮಾಂಕಿತಳಾಗಿರುತ್ತಿ
ಗದಿಗೆಮ್ಮನನ್ನು ಎಲ್ಲರೂ ಗದಿಗೆಕ್ಕ ಎಂದೇ ಸಂಬೋಧಿಸುತ್ತಿದ್ದರು. ಮನೆ, ಹೊಲ, ತೋಟ
ಗದ್ದೆಯ ಯಾವ ಕೆಲಸವನ್ನೇ ಆಗಲಿ ಶ್ರದ್ಧೆಯಿಂದ ಮಾಡುವ ಅವಳ ವ್ಯಕ್ತಿತ್ವ ಇಷ್ಟು ವರ್ಷಗಳಾದರು
ನನ್ನ ಸ್ಮೃತಿಪಥದಿಂದ ಜಾರಿ ಹೋಗಿಲ್ಲ. ಇಂಥ ನಾಲ್ಕಾರು ಜನ ಕರ್ಮಯೋಗಿಣಿಯರು ನ
ಕಣ್ಣಿಗೆ ಓರೇಕಾಂಶಿಯಲ್ಲಿ ಕಂಡರು. ಪುರಾಣಗಳಲ್ಲಿ ಬರುವ ಕೆಲವು ಗುಪ್ತಭಕ್ತಿಜೀವನ
ತಾಯಂದಿರ ಕಥೆ ಕೇಳುತ್ತೇವೆ. ಅಂಥವರ ಸಾಲಿಗೆ ಸೇರಬಲ್ಲ ಸತ್ವ ನಾನು ಕಂಡ ಆ
ತಾಯಿಯರಲ್ಲಿತ್ತು ಎನ್ನಬಹುದು. ಇವರೆಲ್ಲ ತೆರೆಯ ಮರೆಯಲ್ಲಿ ಯಾರ ಕಣ್ಣಿಗೂ ಬೀಳದ

ಸಾಹಿತ್ಯದ ಬಾಯಿಗೆ ಬೀಳದ ಅಮೂಲ್ಯಜೀವನಶ್ರದ್ಧೆಯ ತಾಯಂದಿರು ಎನ್ನಬಹುದು. ಅವರು ಓದಿಲ್ಲದಿರಬಹುದು, ಆಧುನಿಕ ಜಗತ್ತಿನ ಥಳಕು ಬಳುಕುಗಳಿಲ್ಲದಿರಬಹುದು. ಆದರೆ ಹೃದಯದಿಂದ ಬಹು ಎತ್ತರ ಮಟ್ಟದವರು. ಹೃದಯ ಶ್ರೀಮಂತಿಕೆಯಿಂದ ಮೈಬಗ್ಗಿಸಿ ಸದಾ ದುಡಿದು ಅತಿಥಿ ಅಭ್ಯಾಗತರನ್ನು ಶ್ರದ್ಧಾ ಭಕ್ತಿಯಿಂದ ನೋಡಿಕೊಳ್ಳುತ್ತಿದ್ದ ಅವರ ಪ್ರೀತಿ ವಿಶ್ವಾಸಗಳು ತಮ್ಮ ಮನೆ-ಮಕ್ಕಳು - ಗಂಡ - ಬದುಕುಗಳಿಗಷ್ಟೇ ಸೀಮಿತವಾಗಿರದೆ ತುಮ್ಮವ್ಯಾಪ್ತಿಯ ಲೋಕಪೂರಕವಾದ ಕಾರಣವೇ ನಾನು ಸಾವಿತ್ರಿ ಅನುಸೂಯೆಯರ ಕಥೆಯನ್ನು ಓದಿ ಪಾತಿವ್ರತ್ಯ ಚಿಹ್ನಾಂಕಿತ ಸ್ತ್ರೀ ವ್ಯಕ್ತಿತ್ವವನ್ನು ಅರಿಯಬೇಕಿಲ್ಲವೆಂದು ಈ ಪೂರ್ವದಲ್ಲಿ ಹೇಳಿದ್ದು. ಇಂಥ ಸ್ತ್ರೀರತ್ನಗಳಲ್ಲಿ ಮುಖ್ಯವಾಗಿ ಗಿಣಿವಾಲ ಈರಪ್ಪನ ಪತ್ನಿ ಪಾರ್ವತಮ್ಮ ಧರಣೆಸಪ್ಪನವರ ತಿಪ್ಪಮ್ಮ ಬಾಳಿಹಳ್ಳಿ ಬಸಮ್ಮ, ಚಿನ್ನನಗೌಡರ ಪತ್ನಿಯವರು ಇನ್ನು ಮುಂತಾದವರನ್ನು ಹೆಸರಿಸಬಹುದು.

**ಆರು ತಿಂಗಳು ಕಳೆಯಿತು**

ನನ್ನ ಉಪಾಧ್ಯಾಯ ವೃತ್ತಿ ಆರು ತಿಂಗಳು ನಿರ್ಬಾಧಿತವಾಗಿ ನಡೆಯಿತು. ಅಷ್ಟುಹೊತ್ತಿಗಾಗಲೆ ನಾನು ನನ್ನ ವೃತ್ತಿಯಲ್ಲಿ ತೋರಿದ ಚಾತುರ್ಯದ ಫಲವಾಗಿ ಊರಿನ ಸಮಸ್ತರ ಅತ್ಯಂತ ನಂಬುಗೆ ವಿಶ್ವಾಸ ಪ್ರೀತಿಗಳಿಗೆ ಪಾತ್ರನಾಗಿ ಹೋದೆ. ಅಧಿಕ ಸಂಖ್ಯೆಯಲ್ಲಿ ಮಹಮ್ಮದೀಯರಿದ್ದ ಆ ಊರಿನಲ್ಲಿ ಅವರು ಪ್ರತ್ಯೇಕ ಜನಾಂಗವೆಂಬ ಭಾವನೆಯೇ ಇರಲಿಲ್ಲ. ದೊಡ್ಡದೊಡ್ಡ ಜಮೀನುದಾರರು ಶ್ರೀಮಂತರು ಬಡವರು ಎಲ್ಲ ವರ್ಗದ ಮಹಮ್ಮದೀಯರು ಹಿಂದೂ ಜನಾಂಗದಲ್ಲಿ ಅತ್ಯಂತ ವಿಶ್ವಾಸಿಗಳಾಗಿ ವರ್ತಿಸುತ್ತಿದ್ದರು. ಹಬ್ಬ ಹುಣ್ಣಿಮೆಗಳಲ್ಲಿ ಪರಸ್ಪರ ಪೂರಕವಾಗಿ ಬದುಕುತ್ತಿದ್ದ ಅವರು ಕೆಲ ದುಷ್ಟರ ಪ್ರಚೋದನೆಯ ಫಲವಾಗಿ ಇಂದು ಭಾರತಾದ್ಯಂತ ಅನುಭವಿಸುತ್ತಿರುವ ವಿರೋಧದ ಲವಲೇಶವನ್ನು ಅರಿತವರೇ ಅಲ್ಲ. ನನ್ನನ್ನು ಎಲ್ಲರೂ ತಮ್ಮತಮ್ಮ ಮನೆಗಳಿಗೆ ಕರೆದೊಯ್ದು ನಡುಮನೆಯಲ್ಲಿ ಕುಳ್ಳಿರಿಸಿ ಹಾಲು ಸಕ್ಕರೆ ಕೊಡುತ್ತಿದ್ದರು. ಮದುವೆಮುಂಜಿಗಳಲ್ಲಿ ಕರೆದೊಯ್ದು ಕಟ್ಟೆಯ ಮೇಲೆ ಕಂಬಳಿ ಹಾಸಿ ಕುಳ್ಳಿರಿಸಿ ವಧೂವರರಿಂದ ನಮಸ್ಕಾರ ಮಾಡಿಸುತ್ತಿದ್ದರು. ಘೋಷಾ ಪದ್ಧತಿಯ ಕೆಲ ಮನೆಗಳಿಗೆ ಹೋದಾಗ ನನ್ನೆದುರಿನಲ್ಲಿ ಅವರಿಗೆ ಘೋಷಾ ಇರುತ್ತಿರಲಿಲ್ಲ. ಹಜರಾತ್ ಆಯಾ, ಹಜರತ್ ಆಯಾ ಎಂದು ಮನೆಯೆಲ್ಲಾ ಮಾರ್ದನಿಗೊಳ್ಳುತ್ತಿತ್ತು. ಪೀರಸಾಬ ಎಂಬುವನು ಸತ್ತು ಹೋಗಿದ್ದ. ಅವನು ಇಡೀ ಊರಿನಲ್ಲಿ ಪ್ರತಿಷ್ಠೆ ಬೆಳೆಸಿದ್ದನಂತೆ. ಅವನಿಗೆ ಹಿಂದೂ ಮುಸ್ಲೀಂ ಎಂಬ ಭಾವನೆಯೇ ಇದ್ದಿಲ್ಲವಂತೆ. ಅವನಿಗೆ ಎಂಟು ಜನ ಗಂಡು ಮಕ್ಕಳು. ಅವರು ನನ್ನನ್ನು ಮನೆಗೆ ಕರೆದೊಯ್ದು ನಡುಮನೆಯಲ್ಲಿ ಕುಳ್ಳಿರಿಸಿ ತಮ್ಮ ಘೋಷಾದಲ್ಲಿದ್ದ ತಾಯಿಗೆ ಹೇಳಿದೊಡನೆ ಅವಳು ತನ್ನ ಘೋಷಾ ತೆಗೆದು ಬಿಸಾಡಿ ಮುಂದೆ ಬಂದು ಕುಳಿತು "ನಮ್ಮ ಯಜಮಾನರು ಇರಬೇಕಾಗಿತ್ತು. ನಿಮ್ಮನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡೇ ತಿರುಗುತ್ತಿದ್ದರು" ಎಂದು ಹೇಳಿದ ಮಾತು ನನ್ನ ಕಿವಿಯಲ್ಲಿ ಇನ್ನು ದನಿಗುಡುತ್ತಿದೆ. ಸ್ವತಃ ಆ ಮುದುಕಿಯೇ ಹಾಲು ಸಕ್ಕರೆ ಕೊಟ್ಟು ಅನಂತರ ಎಲೆ ಅಡಿಕೆ ಕೊಟ್ಟು ಉಪಚರಿಸುತ್ತಿದ್ದಳು. ಆಕೆಯ ಕೊನೆಯ ಮಗ ಶಾಲೆಗೆ ಬರುತ್ತಿದ್ದ.

ಅಹಮ್ಮದ ಸಾಬ ಎಂಬ ಮುದುಕ ಒಳ್ಳೆಯ ಮಾತುಗಾರ. ಎಲ್ಲರನ್ನು ನಕ್ಕು ನಗಿಸುವ ಅವನ ಮಾತುಗಾರಿಕೆಗೆ ಎಲ್ಲರೂ ಮರುಳಾಗಿ ಹೋಗುತ್ತಿದ್ದರು. ನಾನು ಅಲ್ಲಿಗೆ ಹೋದ

ಮೇಲೆ ಅವನ ಎರಡನೆಯ ಮಗ ಮೌಲಾಲಿಯ ಲಗ್ನ ಮಾಡಿದ. ಲಗ್ನ ಮುಗಿದು ಅವರ ಊಟೋಪಚಾರದ ಎಲ್ಲ ವ್ಯವಹಾರಗಳೂ ಮುಗಿದ ಮೇಲೆ ಮನೆಗೆ ಕರೆದೊಯ್ದು ಕಟ್ಟೆಯ ಮೇಲೆ ಕುಳ್ಳಿರಿಸಿ, ಸೊಸೆಯನ್ನು ಘೋಷಾ ತೆಗೆಸಿ ಕರೆದುಕೊಂಡು ಬಂದು ನಮಸ್ಕಾರ ಮಾಡಿಸಿಬಿಟ್ಟ. ಮೌಲಾಲಿ "ಅರೆ ಕಿದರ್ ಗಯಾತು? ಹಜರತ್ ಆಯಾ ಆರೇ ನಮಸ್ಕಾರ್ ಕರೋ" ಎಂದು ಮಗನನ್ನು ಕರೆದ. ಅವನೂ ನಗುನಗುತ್ತ ಬಂದು ನಮಸ್ಕರಿಸಿದ. ಅವನು ಒಳ್ಳೆ ಹುಡುಗ. ಯಾವಾಗಲೂ ನಗುತ್ತಲೇ ಇರುತ್ತಿದ್ದ. ನಗುನಗುತ್ತಲೇ ಮಾತಾಡುತ್ತಿದ್ದ. ನಾನು ನಾಲ್ಕು ವರ್ಷ ಹಿರೇಕಾಂಶಿಯಲ್ಲಿದ್ದು ನನ್ನನ್ನು ಕಂಡಾಗಲೆಲ್ಲ ನಗುನಗುತ್ತಲೇ ಇರುತ್ತಿದ್ದ. ಅವನ ಸುಂದರ ಮುಖ ಇಂದಿಗೂ ನನ್ನ ಕಣ್ಣಮುಂದೆ ಕಟ್ಟಿದಂತಿದೆ. ಮಲೆನಾಡಿನಲ್ಲಿ ಆಗ ಮಲೇರಿಯಾ ಹಾವಳಿಯಿಂದ ಜರ್ಜರಗೊಂಡ ಜನರೇ ಹೆಚ್ಚು. ಸದೃಢ ದೇಹದವರು ತುಂಬಾ ಅಪರೂಪವಾಗಿ ಹೋಗಿದ್ದರು. ಅಹಮದ್‌ಸಾಬ ನನ್ನ ಮೈಕಟ್ಟಿಗೆ ಮನಸೋತು ಹೋಗಿದ್ದ, "ಏ ಮೌಲಾಲಿ, ನೋಡೋ ಮಾಸ್ತರು ಮೈ ಹೇಗೆ ಇಟ್ಟುಕೊಂಡಿದ್ದಾರೆ! ಮೈ ಕಲ್ಲು ಕಲ್ಲು. ಚೆನ್ನಾಗಿ ಥಾಲೀಮ್ ಮಾಡಿದ ಗರುಡಿ ಮನಿ ಆಳೂ ಹೀಗಿರೋದಿಲ್ಲ" ಎಂದು ತನ್ನ ಮಗನೆದರು ನನ್ನ ತೋಳು ಹಿಡಿದು ಹೇಳುತ್ತಿದ್ದ. ಹಾಗೇ ಇತ್ತು ನನ್ನ ಮೈ ಕಟ್ಟು. ಇದು ಹಿರೇಕಾಂಶಿಯ ಜನಗಳನ್ನೆಲ್ಲ ಮರುಳುಗೊಳಿಸಿತ್ತು. ನಾನು ತಿಂದುದಾದರೂ ಏನು? ನಮ್ಮ ಮನೆಯಲ್ಲಿ ಸೊಪ್ಪು, ಬದನೆ, ಬೆಂಡೆಕಾಯಿಪಲ್ಯ, ಬಿಸಿ ಬಿಸಿ ರೊಟ್ಟಿ ಅಷ್ಟೆ. ಆದರೆ ಮೈಮುರಿದು ಕೆಲಸ ಮಾಡುತ್ತಿದ್ದುದಂತೂ ಸತ್ಯ. ಈ ಕಾರಣ ನನ್ನ ಆರೋಗ್ಯ ಬಹಳ ಸದೃಢವಾಗಿತ್ತು.

ಕೇವಲ ಆರು ತಿಂಗಳ ಅವಧಿಯಲ್ಲಿ ನಾನು ಇಡೀ ಊರವರ ವಿಶ್ವಾಸಕ್ಕೆ ಹೇಗೆ ಪಾತ್ರನಾದೆ? ಏನಿದು ಪವಾಡ ಎಂದೆನಿಸುತ್ತದೆ. ನನಗೆ ಇದು ನನ್ನ ಶಾಲೆಯ ಒಳ್ಳೆಯ ಚಟುವಟಿಕೆಯಷ್ಟರ ಫಲವಲ್ಲ. ನನ್ನನ್ನು ಒಳ್ಳೆಯ ಕೈಗುಣವುಳ್ಳ ವೈದ್ಯನೆಂದು ಎಲ್ಲರೂ ಭಾವಿಸಿದ್ದೊಂದು ದೊಡ್ಡ ಪವಾಡದ ಕಥೆಯಾಗಿ ಅದು ನನ್ನ ಜನಪ್ರೀತಿಯನ್ನು ಹೆಚ್ಚಿಸಿ ಬಿಟ್ಟಿತು.

### *ವೈದ್ಯನಾಗಿ ನನ್ನ ಚಟುವಟಿಕೆಗಳು*

ಒಂದು ದಿನ ಮಾಕೊಪ್ಪದವರ ಮನೆಯ ಒಂದು ಮಗುವಿಗೆ ಶೀತಭಾದೆಯಾಗಿ ಅಳಿ ಬಿಡಿದುಕೊಳ್ಳುತ್ತ ಸಂಕಟಪಟ್ಟು ಉಸಿರಾಡುವುದೇ ಕಷ್ಟವಾಗಿ, ಈಗೋ ಆಗೋ ಅನ್ನುವ ಸ್ಥಿತಿಯಲ್ಲಿತ್ತು. ಮಗುವಿನ ತಾಯಿಗೆ ಯಾರೋ ಮಾಸ್ತರರನ್ನಾದರೂ ಕರೆಸಿ ತೋರಿಸಬಾರದೇ? ಎಂದರಂತೆ. ಆ ತಾಯಿ ಏದುತ್ತ ಸಾಲೆಗೆ ಬಂದು "ಮಾಸ್ತರೇ, ನನ್ನ ಮಗು ಹ್ಯಾಂಗ್ ಹ್ಯಾಂಗೋ ಮಾಡ್ತೈತಿ. ತುಸು ಬಂದು ನೋಡ ಬಾರೋ ನಮಪ್ಪ" ಎಂದಳು. ನಾನು ಆ ಕೂಡಲೇ ಶಾಲೆ ಬಿಟ್ಟು ಓಡಿ ಹೋಗಿ ಮಗುವನ್ನು ನೋಡಿದೆ. ಆ ಕೂಡಲೆ ಹಸಿಶುಂಠಿರಸ (ಕ್ಷಾರತೆಗೆದದ್ದು), ತುಳಸೀರಸ, ಬಿಳೀ ಉಳ್ಳೀಗಡ್ಡಿರಸ ಮಾಡಿ ಜೇನುತುಪ್ಪದಲ್ಲಿ ಅವನ್ನು ಕಲಸಿ ನಾಲ್ಕಾರು ಹನಿ ಕುಡಿಸಿದೆ. ಇದರಂತೆ ಮೂರು ನಾಲ್ಕು ಸಲ ಕುಡಿಸಿ ಆಮೇಲೆ ಹೇಳಿ ಎಂದು ಹೇಳಿ ಹೋದೆ. ಎರಡು ಮೂರು ತಾಸುಗಳಲ್ಲಿ ಈ ಔಷಧ ಪ್ರಯೋಗದಿಂದ ಮಗುವು ಆರೋಗ್ಯಗೊಂಡು ಆಟವಾಡತೊಡಗಿದ್ದು ತಂದೆ ತಾಯಿಗಳ ದೃಷ್ಟಿಯಿಂದ ದೊಡ್ಡ ಪವಾಡವಾಗಿ ಹೋಯಿತು. ನಮ್ಮ ಪಾಲಿಗೆ ಮಾಸ್ತರು ದೇವರಾಗಿ ಬಂದು ಮಗೂನ ಬದುಕಿಸಿದ್ರು ಎಂದು ಊರತುಂಬೆಲ್ಲ ಡಂಗುರ ಸಾರಿಬಿಟ್ಟರು. ಬೆಳಗಾಗುವ ಹೊತ್ತಿಗೆ ನಾನು ದೊಡ್ಡ ಡಾಕ್ಟರ್ ಆಗಿಬಿಟ್ಟೆ. ಹೀಗೆ

ಪ್ರಾರಂಭಗೊಂಡ ನನ್ನ ವೈದ್ಯವೃತ್ತಿ ಊರಲ್ಲಿ ಯಾರಿಗೇ ಏನೇ ಕಾಯಿಲೆಯಾಗಲಿ ನನ್ನನ್ನು ಕರೆದುಕೊಂಡು ಹೋಗತೊಡಗಿದರು. ನಾಸು ಜ್ವರ, ಹೊಟ್ಟೆ ದಪ್ಪನಾಗಿ ಆಹಾರ ರೋಚಕವಾಗದೆ ಇರುವಂಥದು. ಕೆಮ್ಮು, ಕಫದಿಂದ ನರಳುವ ಮಕ್ಕಳು, ದೊಡ್ಡವರು ಇಂಥವರನ್ನೆಲ್ಲ ಕಂಡು ನೋಡಿ ಕೆಲವು ಔಷಧ ಮಾಡುತ್ತಿದ್ದೆ. ಈ ಔಷಧ ಪ್ರಯೋಗ ಹಾವೇರಿ ಹುಕ್ಕೇರಿ ಮಠದ ಶ್ರೀಗಳವರಲ್ಲಿದ್ದಾಗ ಅವರು ಹೇಳಿದ್ದು. ಅವರು ನನಗೆ ಒಂದು ದಿನ ಕುಳ್ಳಿರಿಸಿಕೊಂಡು ಇಂಥಿಂಥ ಕಾಯಿಲೆಗಳಿಗೆ ಇಂಥಿಂಥ ಔಷಧ ಕೊಡಬೇಕು ಎಂದು ಹೇಳದ್ದಲ್ಲದೆ ಅಡಸಾಲ, ಗಾಡಗ್ಗರಗ, ಕುಪ್ಪೆ, ವಿಷ್ಣುಕಾಂತಿ, ಹಿರೇಮದ್ದು (ಅಶ್ವಗಂಧಿ), ಕಾಕಿ, ಅಮೃತ ಬಳ್ಳಿ, ಉತ್ತರಾಣಿ ಮೊದಲಾದ ವನಸ್ಪತಿಗಳ ಗುಣಧರ್ಮ ಅವುಗಳ ಪ್ರಯೋಜನದ ಬಗ್ಗೆಯೂ ಏನೇನೋ ಹೇಳಿದ್ದರು. ಅವುಗಳ ಬಗೆಗೆ ನನಗೆ ಆಗ ಆಸಕ್ತಿ ಇಲ್ಲದಿದ್ದರೂ ಶ್ರೀಗಳು ಇವನ್ನೆಲ್ಲ ಬರೆದುಕೋ ಎಂದು ಬರೆಸಿದ್ದರು. ಅದರಂತೆ ನಾನು ಬರೆದುಕೊಂಡಿದ್ದೆ. ಅವುಗಳ ಪ್ರಯೋಗ ಮಾಡುವ ಕಾರ್ಯಕ್ಷೇತ್ರ ಹಿರೇಕಾಂಶಿಯಾಗಿ ನನ್ನನ್ನು ದೊಡ್ಡವೈದ್ಯನನ್ನಾಗಿ ಮಾಡಿ ಬಿಟ್ಟಿತು.

ಒಂದು ದಿನ ಕುರುಬರ ರಾಮಣ್ಣ ಬಂದು ತಮ್ಮ ಅಕ್ಕನಿಗೆ ತೀವ್ರ ಜ್ವರವೆಂದೂ ಈ ಕೂಡಲೇ ಬರಬೇಕೆಂದೂ ಕರೆದುಕೊಂಡು ಹೋದ. ನನಗೆ ಅವಳ ಜ್ವರದ ತಳಬುಡ ಒಂದೂ ಅರ್ಥವಾಗಲಿಲ್ಲ. ನಾಡಿ ನೋಡಿರಿ ಎಂದು ಅವರೇ ಹೇಳಿದರು. ಅವರಿಗೆ ಸಮಾಧಾನ ವಾಗಲೆಂದು ನಾಡಿ ಹಿಡಿದವನಂತೆ ಮಾಡಿದೆ. ನಾಡಿಯೆಂದರೇನು? ಅದರ ಕ್ರಮವೇನು? ಎಂಬುದು ನನಗೆ ಏನೂ ತಿಳಿದಿರಲಿಲ್ಲ. ನಾನು ಔಷಧಕೊಡುತ್ತೇನೆ ಎಂದು ಬೇವಿನ ಚಕ್ಕೆ, ಅಮೃತಬಳ್ಳಿ ತರಿಸಿದೆ. ಆ ಕೂಡಲೆ ಹೊಸೂರಿಗೆ ಕಳಿಸಿ ಗ್ರಂಧಿಗೆಯ ಕೆಲವು ಸಾಮಾನು ತರಿಸಿದೆ. ಸರಿ ನನ್ನ ಕಷಾಯದ ಔಷಧಿ ಸಿದ್ಧಪಡಿಸಲು ನಾನೇ ಕುಳಿತೆ. ನಾಲ್ಕು ಲೋಟ ನೀರು ಇಟ್ಟು ಅದರಲ್ಲಿ ಬೇವಿನ ಒಳಚಕ್ಕೆ, ಅಮೃತ ಬಳ್ಳಿ ಹಾಕಿದೆ. ಗ್ರಂಧಿಗೆಯ ಸಾಮಾನುಗಳಾದ ಚಿರಾತಕಡ್ಡಿ, ಕಟುಕರೋಹಿಣಿ, ಹಿಪ್ಲಿ, ಕಾಡುಜೀರಿಗೆ, ಜೀರಿಗೆ, ಸ್ವಲ್ಪ ಶುಂಠಿ, ಹತ್ತು ಕಾಳು ಮೆಣಸು ಇತ್ಯಾದಿ ಸಾಮಾನುಗಳನ್ನು ಹಾಕಿ ಅಷ್ಟಮಾಂಶ ಕಷಾಯ ಇಳಿಸಿದೆ. ಅರ್ಧಲೋಟ ಕಷಾಯವನ್ನು ಮೂರು ಹೊತ್ತು ಕುಡಿಸಿದೆ. ಅವಳಿಗೆ ಸ್ವಲ್ಪ ಆರಾಮಾದ ಹಾಗೆ ಮೊದಲ ದಿನವೇ ಕಂಡಿತು. ಆದರೂ ಜ್ವರ ಇದ್ದೇ ಇತ್ತು. ಮೂರು ದಿನ ಇದೇ ರೀತಿ ಕುಡಿಸಿದರೂ ಜ್ವರ ಹೋಗಲಿಲ್ಲ. ಆದರೆ ಬಾಧೆ ಕಡಿಮೆಯಾಗಿತ್ತು. ಅವಳ ಜ್ವರ ಕಡಿಮೆ ಮಾಡುವುದು ನನ್ನ ಔಷಧದಿಂದ ಶಕ್ಯವಿಲ್ಲದಿದ್ದಾಗ ಡಾಕ್ಟರನ್ನು ಹಾನಗಲ್ಲಿನಿಂದ ಕರೆಸಲೇ ಬೇಕಾಯಿತು. ಡಾಕ್ಟರರು ಬಂದು ನೋಡಿ ಇದು ವಿಷಮಶೀತಜ್ವರ (ಕಟ್ಟು ಜ್ವರ) ಎಂದು ಹೇಳಿ ನನಗೆ ಏನೇನು ಔಷಧ ಕೊಟ್ಟಿರೆಂದು ಕೇಳಿದರು. ನಾನು ಕೊಟ್ಟ ಔಷಧದ ವಿಚಾರ ತಿಳಿಸಿದೆ. ಡಾಕ್ಟರರು "ಒಳ್ಳೆ ಕೆಲಸ ಮಾಡಿದಿರಿ. ಇಲ್ಲದಿದ್ದರೆ ಈ ಹೆಣ್ಣು ಮಗಳು ಉಳಿಯುತ್ತಿರಲಿಲ್ಲ" ಎಂದಾಗ ನನಗೆ ಧೈರ್ಯಬಂತು. ಮುಂದೆ ಡಾಕ್ಟರರು ಏನೇನೋ ತಮ್ಮ ವಿಧಾನದ ಚಿಕಿತ್ಸೆ ಮಾಡಿದರು. ಅವಳಿಗೆ ಗುಣವಾಯಿತು. ನಾನಿರುವವರೆಗೆ ಕುರುಬರ ಮನೆಯ ವೈದ್ಯ ನಾನೇ ಆಗಿಬಿಟ್ಟೆ. ಆ ಮನೆಯ ಎಲ್ಲ ಜನರೂ ನನ್ನನ್ನು ಅತ್ಯಂತ ವಿಶ್ವಾಸದಿಂದ ಕೊನೆಯವರೆಗೂ ಕಂಡರು. ಅವರ ಮನೆಯ ಮಕ್ಕಳಾರೂ ಶಾಲೆಗೆ ಬರುತ್ತಿರಲಿಲ್ಲ. ಆದರೂ ವರ್ಷಕ್ಕೊಂದು ಸಲ ನನಗೆ ಬತ್ತ ಕೊಡುವುದನ್ನು ಮಾತ್ರ ತಪ್ಪಿಸಲಿಲ್ಲ.

ಹಿರೇಕಾಂಶಿಯಲ್ಲಿ ಯಾರಿಗೇ ಜ್ವರಬರಲಿ, ಜ್ವರಕ್ಕೆ ನಾನು ಕೊಡುವ ಕಷಾಯವೆಂದರೆ ಇದೊಂದೇ. ಇದರಿಂದ ಬಹಳಷ್ಟು ಜನ ಗುಣಹೊಂದಿದ್ದರು. ಅತೀವ ಜ್ವರದ ಬಾಧೆಯಿಂದ ಕಂಗಾಲಾದವರಿಗೂ ಇದನ್ನೇ ನಾನು ಕೊಡುತ್ತಿದ್ದುದು. ಜ್ವರಕ್ಕಾಗಿ ಬೇರೆ ಔಷಧಿ ಗೊತ್ತಿದ್ದರೆ ತಾನೇ ಕೊಡುವುದು? ಮಲೇರಿಯಾದಿಂದ ಹೊಟ್ಟೆ ದಪ್ಪನಾಗಿದ್ದರೆ ಅದಕ್ಕೆ ಅಲ್ಲಿ ಅಡ್ಡಗೈ ಆಗಿದೆ ಅನ್ನುತ್ತಿದ್ದರು. ಅಂಥವರ ಹೊಟ್ಟೆಯ ಭಾರ ಕಡಿಮೆ ಮಾಡಲು ಒಂದು ಔಷಧ ಮಾಡುತ್ತಿದ್ದೆ. ಆದನ್ನು ಅನೇಕರ ಮೇಲೆ ಪ್ರಯೋಗಿಸಿದೆ. ಅದು ಪ್ರಭಾವಕಾರಿಯಾಗುತ್ತಿತ್ತು. ಚೆನ್ನಾಗಿ ಬಲಿತ ಪಪ್ಪಾಯಿ ಕಾಯಿಯಲ್ಲಿನ ಬೀಜಗಳನ್ನು ಟಾಕಿಹಾಕಿ (ಚಂದ್ರಿಕೆ ಹಾಕಿ) ತೆಗೆದು ಅದರಲ್ಲಿ ಸಮಪ್ರಮಾಣವಾಗಿ ಎರಡೆರಡು ತೊಲೆ ಸೈಂಧಲವಣ, ಗಾಜುಲವಣ, ಬೀಡುಲವಣ, ಸೌರ್ಜಲವಣ, ಸಮುದ್ರಲವಣಗಳೆಂದು ಪಂಚಲವಣಗಳನ್ನು ತುಂಬಿ, ಆ ಕಾಯಿಗೆ ಕಣಕ ಮೆತ್ತಿ ಮೇಲ್ಭಾಗದಲ್ಲಿ ಕೆಂಪುಮಣ್ಣು ತರಿಸಿ ಪೂರ್ಣ ಮೆತ್ತಿ ಕುಳ್ಳುತಾಲೆ (ಬೆರಣಿಯ ತಾಳೆ)ಯಲ್ಲಿ ಸುಟ್ಟು, ಅನಂತರ ನೀರಾದ ಲವಣವನ್ನೆಲ್ಲ ಬಸಿದಿಟ್ಟುಕೊಂಡು ಒಣಗಿಸಿ, ಪಪ್ಪಾಯಿ ಕಾಯಿ ತಿಳಲನ್ನೆಲ್ಲ ಚೂರು ಚೂರು ಮಾಡಿ ದಿನವೂ ಸ್ವಲ್ಪ ಲವಣ, ಕೆಲವು ಚೂರು ಕಾಯಿ ತಿನ್ನಿಸುತ್ತಿದ್ದೆ. ಇದರಿಂದ ಅವರಿಗೆ ಆಹಾರ ರುಚಿ ಬಂದು ಚೆನ್ನಾಗಿ ಊಟಮಾಡುತ್ತಿದ್ದರು. ಹೊಟ್ಟೆಯ ಭಾರವೂ ಕಡಿಮೆಯಾಗುತ್ತಿತ್ತು. ಹೊಟ್ಟೆ ದಪ್ಪಾದರೆ ನಾನು ಕೊಡುತ್ತಿದ್ದ ಈ ಔಷಧಿ ಕೆಲವರಿಗೆ ಪ್ರಯೋಜನ ಕೊಟ್ಟರೂ ಕೆಲವರಿಗೆ ಪ್ರಯೋಜನವಾಗಲಿಲ್ಲ. ಹೊಟ್ಟೆ ಏತರಿಂದ ದಪ್ಪನಾಗಿದೆ ಎಂದು ನನಗೆ ಗೊತ್ತಿದ್ದರೆ ತಾನೇ ಬೇರೆಬೇರೆ ಕಾರಣಗಳಿಂದಲೂ ಹೊಟ್ಟೆ ದಪ್ಪನಾಗಬಹುದು. ಹೀಗೆ ಅನೇಕ ಬಗೆಯ ಔಷಧ ಪ್ರಯೋಗದಿಂದ ನಾನು ಊರ ತುಂಬೆಲ್ಲ ಬೇಗ ಪರಿಚಿತನಾಗಿ ಜನಪ್ರಿಯನಾಗಿ ಎಲ್ಲರೂ ಭಕ್ತಿಯನ್ನು ಪ್ರೀತಿಯನ್ನು ತೋರಿಸುವಂತಾದ್ದು ಮಾತ್ರ ನಿಜ. ಈ ಕಾರಣವಾಗಿ ನನ್ನ ಬಗ್ಗೆ ನನಗೇ ಹೆಮ್ಮೆಯುಂಟಾಗಿ ತಲೆ ತಿರುಗಿ ಹೋಯಿತು. ನನ್ನ ಆತ್ಮನನಗೆ ಹೇಳುತ್ತಿತ್ತು, ಅಯ್ಯಾ! ಮಹಾರಾಯಾ, ಏನೂ ಗೊತ್ತಿಲ್ಲದೆ ಗೊತ್ತಿದ್ದವರಿಗಿಂತ ಮಿಗಿಲಾಗಿ ಔಷಧೋಪಚಾರ ಮಾಡುತ್ತಿರುವೆಲ್ಲಾ, ಎಂದು. ಒಮ್ಮೆ ಒಂದು ದೊಡ್ಡ ಪೇಚಿಗೆ ಸಿಕ್ಕಿಕೊಂಡು ಬಿಟ್ಟೆ. ಆ ಪ್ರಸಂಗ ನೆನೆಸಿಕೊಂಡು ಎಷ್ಟೋ ಸಲ ನನಗೆ ನಾನೇ ಹೆದರಿಕೊಳ್ಳುತ್ತಿದ್ದೇನೆ. ಒಬ್ಬನೇ ಮುಸುಮುಸು ನಗುತ್ತೇನೆ.

ಧರಣಪ್ಪನವರ ಚನ್ನಬಸಪ್ಪ ನನ್ನಲ್ಲಿ ಬಹುದೊಡ್ಡ ಗೌರವವನ್ನಿಟ್ಟುಕೊಂಡಿದ್ದ ಅತೀವ ಹಿತಚಿಂತಕ. ಅವನು ನನಗಿಂತ ಬಹಳ ಹಿರಿಯ. ಆದರೂ ನನ್ನಲ್ಲಿ ಅವನಿಟ್ಟಿದ್ದ ಅಭಿಮಾನ ನಂಬುಗೆಗಳು ಯಾವಜ್ಜೀವವೂ ನೆನೆಯುವಂತಹವು. ಅವನು ಒಂದು ದಿನ ನನಗೆ "ಮಾಸ್ತರೇ, ಊರಿಗೆಲ್ಲ ಔಷಧ ಕೊಟ್ಟು ಗುಣಮಾಡುತ್ತೀಯಪ್ಪ! ನನಗೇ ಏನನ್ನೂ ಕೊಡಲಿಲ್ಲ. ನಿಶ್ಶಕ್ತಿ ಬಹಳ, ಯಾವ ಕೆಲಸ ಮಾಡಲು ಮನಸ್ಸಿಲ್ಲ. ಏನಾದರೂ ಔಷಧ ಕೊಡೋ ಮಾರಾಯಾ" ಎಂದ. ನಾನು ಅವನ ನಿಶ್ಶಕ್ತಿಗೆ ಔಷಧಮಾಡಲು ಒಂದು ಸೇರಿನಷ್ಟು ಉತ್ತರಾಣಿ ಬೀಜಗಳನ್ನು ಸಂಗ್ರಹಿಸಿ ಕೊಂಡು ಬನ್ನಿ ಎಂದೆ. ಅವನು ಅದರಂತೆ ಮಾಡಿದ. ಆ ಮುಳ್ಳು ಬೀಜಗಳನ್ನೆಲ್ಲ ಒರಳಲ್ಲಿ ಕುಟ್ಟಿಸಿ ತಯಾರಿಸಿದೆ. ಆ ಬೀಜಕ್ಕೆ ಅದರ ಎರಡರಷ್ಟು ತೂಕದ ಗಡಿಗೆ ಸಕ್ಕರೆ ಬೆರಸಿ ಚೂರ್ಣ ಮಾಡಿಸಿ ಅವನಿಗೆ ಕೊಟ್ಟು ದಿನವೂ ಬೆಳಿಗ್ಗೆ ಒಂದು ಕಪ್ಪು ಹಾಲಿಗೆ ಒಂದು ಚಮಚಪುಡಿ ಹಾಕಿ ಕುಡಿಯಿರಿ ಎಂದು ಹೇಳಿದೆ. ಅದರಂತೆ ಕೆಲವು ದಿನ ಮಾಡಿದ. ಅದರಿಂದ ಅವನಿಗೆ ಗುಣ ಕಂಡಿತು. ಆಗ ಅವನು ಈಗ ಮೊದಲಿಗಿಂತ ಗುಣವೇನೋ ಕಂಡಿದೆ, ಆದರೆ ಭೇದಿಯೇ

ಸರಿಯಾಗಿ ಆಗುತ್ತಿಲ್ಲ. ಭೇದಿಗೆ ಏನಾದರೂ ಔಷಧಿ ಕೊಡಿ ಎಂದು ಬಿಟ್ಟ. ಮಹಾವೈದ್ಯನೆಂಬ ಅಹಂಕಾರದಿಂದ ತಲೆತಿರುಗಿ ಹೋಗಿದ್ದ ನಾನು ಒಂದು ಹೀರೇಬೀಜದ ಸಿಪ್ಪೆ ತೆಗೆದು ತಿನ್ನಿಸಿ 'ನಿಮಗೆ ಭೇದಿ ಸಾಕಾದಾಗ ಮೊಸರು ಅನ್ನ ಊಟಮಾಡಿ ಬಿಡಿ' ಎಂದು ಹೇಳಿದೆ. ಅವನು ತೋಟಕ್ಕೆ ಹೋಗಿ ಅಲ್ಲಿಯೇ ಇದ್ದು ಹನ್ನೆರಡು ಘಂಟೆಗಳವರೆಗೆ ಭೇದಿಯೇ ಆಗದೆ ಹೊಟ್ಟೆಮುರಿತ, ಹೊಟ್ಟೆಯಲ್ಲ ಏನೋ ಒಂದು ರೀತಿಯ ಅಸಹ್ಯಗೊಂಡು ಭೇದಿಯಾಗುವದರ ದಾರಿ ಕಾಯುತ್ತ ಉಳಿದು ಬಿಟ್ಟ. ಅವನ ಹೆಂಡತಿ ತಿಪ್ಪಮ್ಮ ಅವನಿಗೆ ತೋಟಕ್ಕೆ ಮೊಸರು ಅನ್ನ, ಸಪ್ಪೆ ಸಾರು ವಗೈರೆ ಎಲ್ಲ ತುಂಬಿಕೊಂಡು ಹೋದಳು. ಅವಳೆದುರಿಗೆ "ಇನ್ನು ಭೇದಿಯೇ ಆಗಿಲ್ಲ. ಹೊಟ್ಟೆಯಲ್ಲಿ ಸಣ್ಣನಾಗಿ ನೋವು - ಏನೇನೋ ಅಸಹ್ಯ. ಮಾಸ್ತರಿಗೆ ಹೇಳಿ ಬಾ" ಎಂದು ಹೇಳಿ ಕಳಿಸಿಬಿಟ್ಟ. ನನ್ನ ಹತ್ತಿರ ಬಂದು ಹೇಳಿದ ತಿಪ್ಪಮ್ಮನ ಕೈಯಲ್ಲಿ ನಾನು ಇನ್ನೊಂದು ಹೀರೆಬೀಜವನ್ನು ತಿನ್ನಲು ಕೊಟ್ಟು ಕಳಿಸಿದೆ. ಅದನ್ನು ತಿಂದ ಮೇಲೆ ಭಯಂಕರ ಬೇಧಿ ಪ್ರಾರಂಭವಾಗಿ ಬಿಟ್ಟಿತಂತೆ. ಭೇದಿಯಾಗಿ ಸುಸ್ತಾಗಿ ಚನ್ನಬಸಪ್ಪ ಮಲಗಿಬಿಟ್ಟನಂತೆ. ಕೊನೆಕೊನೆಗೆ ಪಂಜೆಯಲ್ಲೆ ಭೇದಿಯಾಗತೊಡಗಿತಂತೆ. ನಾನು ಹೇಳಿದಂತೆ ತಿಪ್ಪಮ್ಮ ಮೊಸರನ್ನ ತಿನ್ನಲು ಕೊಟ್ಟಳಂತೆ. ಅದನ್ನು ತಿಂದ ಮೇಲೆ ವಾಂತಿಯೂ ಪ್ರಾರಂಭವಾಯಿತಂತೆ. ತಿಪ್ಪಮ್ಮ ಗಾಬರಿಯಿಂದ ನನ್ನ ಬಳಿಗೆ ಓಡಿಬಂದು ನಡೆದ ವೃತ್ತಾಂತವನ್ನೆಲ್ಲ ತಿಳಿಸಿ "ಮಾಸ್ತರೇ, ಬೇಗ ತೋಟಕ್ಕೆ ನಡೀರಿ" ಎಂದು ಕರೆದುಕೊಂಡು ಹೋದಳು. ಆಗ ನಾನು ಅಧೀರನಾಗಿ ಹೋದೆ. ಎದೆ ಡಬಡಬ ಬಿಡಿದುಕೊಳ್ಳಲು ಪ್ರಾರಂಭವಾಯಿತು. ಇವನ ಭೇದಿ ನಿಲ್ಲಿಸುವುದು ಹೇಗೆ? ಎಂಬುದೇ ಹೊಳೆಯದೆ ತಿಪ್ಪಮ್ಮನಿಗೆ "ನೀವು ಬೇಗ ಹೋಗಿ ಅನ್ನ ಸಿಹಿಸಾರು ಕೊಟ್ಟು ಬಿಡಿ. ನಾನು ಬರುತ್ತೇನೆ" ಎಂದು ಹೇಳಿ ಕಳಿಸಿದೆ. ಅವಳು ಗಾಬರಿಯಿಂದಲೇ ತೋಟಕ್ಕೆ ಹೋಗಿ ಬಹುಸುಸ್ತಾಗಿ ಒದ್ದಾಡುತ್ತಿದ್ದ ಗಂಡನಿಗೆ ಬೇಳೆ ತಿಳಿಸಾರು ಅನ್ನ ಕೊಟ್ಟಳಂತೆ. ಅದನ್ನು ಕೊಟ್ಟ ಮೇಲೆ ಒಂದು ಸಲ ಮಾತ್ರ ಭೇದಿಯಾಗಿ ನಿಂತುಕೊಂಡಿತಂತೆ. ವಾಂತಿ ಮಾತ್ರ ಆಗಲಿಲ್ಲ. ಅಷ್ಟುಹೊತ್ತಿಗೆ ನಾನು ಭಯದಿಂದಲೇ ನಡುಗುತ್ತ ತೋಟಕ್ಕೆ ಹೋದೆ. ತೋಟದಲ್ಲಿ ಅಳುವ, ಬಡಿದುಕೊಳ್ಳುವ ಯಾವ ಸದ್ದೂ ಕೇಳಿ ಬಾರದ್ದರಿಂದ ಚನ್ನಬಸಪ್ಪ ಸತ್ತಿಲ್ಲವೆಂದು ನಿರ್ಧರಿಸಿಕೊಳ್ಳುತ್ತ ಅವರ ತೋಟಕ್ಕೆ ಹೋದಾಗ ತಿಪ್ಪಮ್ಮ "ಊಟ ಮಾಡಿದ ಮೇಲೆ ಭೇದಿ ಕಡಿಮೆಯಾಗಿದೆ. ಬಹು ಸುಸ್ತಾಗಿ ಹೋಗಿದ್ದ ಅವರಿಗೆ ಈಗ ತಾನೆ ಜಂಪು ಹತ್ತಿದೆ. ಮಲಗಿ ಎಚ್ಚರಗೊಂಡ ಮೇಲೆ ಮಾತಾಡಿಸೋಣ" ಎಂದಳು. ಆಗ ನಾನು ಗೊತ್ತಿಲ್ಲದೆ ಯಾರಿಗೂ ಔಷಧವನ್ನು ಇನ್ನು ಮುಂದೆ ಕೊಡಬಾರದೆಂಬ ತೀರ್ಮಾನಕ್ಕೆ ಬಂದೆ. ಸ್ವಲ್ಪ ಹೊತ್ತಿನ ಮೇಲೆ ಚನ್ನಬಸಪ್ಪ ಎದ್ದು ನನ್ನನ್ನು ಕಂಡು - "ಇವತ್ತು ನನ್ನನ್ನು ಕೊಂದೇ ಬಿಟ್ಟಿದ್ದೆಲ್ಲೊ ಮಾರಾಯ. ಏನು ಭೇದಿ ಏನು ತ್ರಾಸಾ! ಭೇ ಭೇ! ಹೀರೆಬೀಜ ಇಂಥಾ ಭೇದಿಮಾಡಿಸ್ತೈತೆಂತ ನಾನು ತಿಳಿದಿದ್ದಿಲ್ಲ ಮಾರಾಯಾ" ಎಂದ. ನಾನು. "ಇದೇ ಕೊನೆ. ಇನ್ನು ಯಾರಿಗೂ ಭೇದಿಗೆ ಔಷಧ ಕೊಡೋದಿಲ್ಲ, ಲೋಕಪ್ಪನ ಆಣೆ" ಎಂದು ಬಿಟ್ಟೆ. ಆಗ ಚನ್ನಬಸಪ್ಪ ನಕ್ಕ ಅಷ್ಟೆ. ಈ ಸುದ್ದಿ ಊರ ತುಂಬೆಲ್ಲ ಹರಡಿದರೂ ನಾನು ತಪ್ಪುಗಾರನೆಂದು ಯಾರೂ ಹೇಳಲು ಸಿದ್ಧವಿರಲಿಲ್ಲ. "ಮಾರಾಯ ಹೊಟ್ಯಾಗ ಎಷ್ಟು ದಿನದ ಹೊಲಸು ಇಟ್ಟುಕೊಂಡಿದ್ನೋ ಏನೋ, ಅದ್ನೆಲ್ಲ ಸ್ವಚ್ಛ ಮಾಡಬ್ಯಾಡವೇ? ಮತ್ತೆ ಅದಕ್ಕಾಗಿಯೇ ಮಾಸ್ತರು ಚೆನ್ನಾಗಿ ಭೇದಿ ಆಗೋ ಔಷಧ ಕೊಟ್ಟು ಹೊಟ್ಟೆ ಕ್ಲೀನ್ ಮಾಡಿದ್ರು" ಅನ್ನತೊಡಗಿದರು. ನಿಜವೃತ್ತಾಂತ ಏನೆಂಬುದು ನನಗೆ ಗೊತ್ತಿದ್ದ ಹಾಗೆ ಇತರರಿಗೇನು ಗೊತ್ತು ಹೇಳಿ!

ಹಳ್ಳಿಯಲ್ಲಿ ಆಗ ತಿಳಿಯದವರು ಮಾಡುತ್ತಿದ್ದ ಔಷಧ ಪ್ರಯೋಗದಿಂದ ಸಾಯ
ಬದುಕಿದವರೇ ಪುಣ್ಯವಂತರು. ಹಳ್ಳಿಯವರನ್ನು ಆಗ ಯಾರು ಕೇಳಬೇಕು? ಓರೇಕಾಂಶಿಯ
ಯಾರಿಗಾದರೂ ಏನಾದರೂ ಕಾಯಿಲೆ ಕಸಾಲೆ ಆದರೆ ಗಾಡಿಯಲ್ಲಿ ಹೇರಿಕೊಂಡು ಮೈ
ದೂರದ ಹಾನಗಲ್ಲಿಗೋ, ಅಷ್ಟೇ ದೂರದ ಆಲೂರಿಗೋ ಹೋಗಿ ಕೇಳಿದಷ್ಟು ಹಣ ತೆ
ಎಲ್ಲೆಲ್ಲಿಯೋ ವಸ್ತಿಮಾಡಿ ಮೂರು ನಾಲ್ಕು ದಿನ ಇದ್ದು ಹುಳಿ ಬುತ್ತಿ ತಿಂದು, ಪ್ರಸಂಗ ಬಂದ
ಹೆಣವನ್ನು ಹೇರಿಕೊಂಡು ಊರಿಗೆ ಬರಬೇಕಾಗಿತ್ತು. ಕಾಯಿಲೆ ಗುಣವಾದರೆ ಅವರ ಪು
ಅಷ್ಟೆ. ಊರಿಗೆ ಹಿಂದಿರುಗಬೇಕಾಗಿದ್ದರೆ ಒಯ್ಯಾತನ ತಿಥಿ ಆಗಿ ಹೋಗುತ್ತಿತ್ತು. ಹೀಗ
ಸಾಯಲಿ ಬದುಕಲಿ ಊರಿನ ಔಷಧಗಳಿಗೇ ಸಾಮಾನ್ಯವಾಗಿ ಎಲ್ಲರೂ ಶರಣು ಹೋಗುತ್ತಿದ್ದರ
ಆಗ ಹಳ್ಳಿಯಲ್ಲಿ ಸಿಗುತ್ತಿದ್ದ ವೈದ್ಯರೆಂದರೆ ನನ್ನಂಥ ಅರಬರೆ ಅರಣ್ಯಪಂಡಿತರೇ. ಇಂಥವ
ಔಷಧಿಯಿಂದ ಪಾರಾಗಿ ಬದುಕಲು ರೋಗಿಗೂ ಪುಣ್ಯಬೇಕು ಅಷ್ಟೆ.

*ನನ್ನ ಮೇಲೆಯೇ ಒಂದು ಹಳ್ಳಿಔಷಧ ಪ್ರಯೋಗ!*

ಮಲೇರಿಯಾ ಬೇನೆಯಿಂದ ಮನುಷ್ಯನಿಗೆ ಏನೇನು ವಿಕಾರವಾಗುತ್ತದೆ ಎಂ
ಹೇಳುವಂತೆಯಿಲ್ಲ. ಏನೇನೋ ವಿಕಾರ, ಎಂಥೆಂಥದೋ ಹೀಗೇ ಎಂದು ಆ ಕಾಯಿಲೆ
ಪರಿಣಾಮ ಹೇಳುವಂತಿರಲಿಲ್ಲ. ಆಗ ಮಲೇರಿಯಾದವರಿಗೆ ಸರಕಾರ ಪೂರೈಸುತ್ತಿದ್ದುದು ಕ್ವಿನೈ
ಒಂದೇ. ಪಟ್ಟಣಗಳಲ್ಲಿ ಡಾಕ್ಟರರು ದಿನವೂ ಕ್ವಿನೈನ್ ಔಷಧಿಯನ್ನು ಗುಳಿಗೆ ರೂಪದ
ಇಂಜೆಕ್ಷನ್‌ರೂಪದಲ್ಲಿ, ಮಿಕ್ಚರ್ ರೂಪದಲ್ಲಿ ಕೊಡುತ್ತಿದ್ದರು. ಕೆಲವರು ಕ್ವಿನೈನನ್ನು ಮಿ
ತೆಗೆದುಕೊಂಡು ವಿವಿಧ ರೀತಿಯ ತೊಂದರೆಗೊಳಗಾಗುತ್ತಿದ್ದುದೂ ಉಂಟು. ಅಂಥವರ
ನಾನು ಒಬ್ಬನಾಗಿ ಹೋದೆ. ಒಂದುವರ್ಷದ ನಂತರ ಮಲೇರಿಯಾ ನನ್ನಲ್ಲೂ ಪ್ರವೇಶಿಸಿಬಿಟ್ಟ
ಆಗ ನಾನು ಕ್ವಿನೈನನ್ನು ತೆಗೆದುಕೊಳ್ಳಲು ಪ್ರಾರಂಭಿಸಿದೆ. ಹೆಚ್ಚಾಗಿ ಕ್ವಿನೈನ್ ಸೇವನೆಯಿಂದಲೋ
ಏನೋ ನನ್ನ ಕಣ್ಣುಗಳು ಹಸಿರಾಗಿ ನಿಶ್ಶಕ್ತಿ ಅಧಿಕಗೊಂಡು ಏನೇನೋ ತೊಂದರೆಗೊಳಗಾ
ಬಿಟ್ಟೆ. ನನ್ನ ಹಾಗೆಯೇ ಊರ ಮುಖಂಡರಲ್ಲೊಬ್ಬರಾದ ಚನ್ನನಗೌಡನೂ ಆಗಿಬಿಟ್ಟಿದ್ದ. ಅವ
ಯಾರೋ ಅರಣ್ಯಪಂಡಿತರೊಬ್ಬರು. "ನಿಮಗೆ ಯಾರೋ ಕಪ್ಪು ಹಾಕಿದ್ದಾರೆ. ಕರಿಗಡಬಿನಲ್ಲಿ
ಇನ್ನಾವುದರಲ್ಲೊ ಹಾಕಿದ ಕಪ್ಪಿನಫಲವಾಗಿ ನಿಮ್ಮ ಕಣ್ಣಲ್ಲಿ ಹಸಿರಾಗಿ ಜೀವಶಕ್ತಿ ಕುಂದಿ ಉಗುರುಕ
ರಕ್ತ ಇಲ್ಲದೆ ಹಾಗಾಗಿದೆ" ಎಂದುಬಿಟ್ಟರಂತೆ. ಚನ್ನನಗೌಡ ಈ ಕಪ್ಪಿಗೆ (ಆಗ ಹಳ್ಳಿಗಳ
ಆಗದವರಿಗೆ ಊಟದಲ್ಲಿ ಯಾರು ಯಾರೋ ಕಪ್ಪು ಔಷಧವೊಂದನ್ನು ಹಾಕುತ್ತಾರೆಂದು,
ಕಪ್ಪು ಔಷಧ ಹೊಟ್ಟೆಯಲ್ಲಿ ನಿಧಾನವಾಗಿ ಕೆಲಸ ಮಾಡುತ್ತ ಒಂದು ದಿನ ಅವನನ್ನು ಕೊಂ
ಬಿಡುತ್ತದೆಂದೂ ಒಂದು ಪ್ರತೀತಿ ಇರುತ್ತಿತ್ತು. ಇದು ಎಷ್ಟರಮಟ್ಟಿಗೆ ಸತ್ಯವೋ ದೇವರೇ ಬ
ಈ ಪ್ರಯೋಗಕ್ಕೆ ಒಳಗಾದ ವ್ಯಕ್ತಿಯು ಕಣ್ಣು ತೇಜ ಕಡಿಮೆಯಾಗಿ ಹಸಿರುಗಟ್ಟುತ್ತವೆಂದ
ಉಗುರುಗಳನ್ನು ರಕ್ತ ಕೂಡ ಹಸಿರಾಗುತ್ತವೆಂದೂ ಹೇಳುತ್ತಿದ್ದುದುಂಟು. ಇದು ಅಷ್ಟೊಂ
ಒಳ್ಳೆಯ ತೀರ್ಮಾನವೇನಲ್ಲದಿದ್ದರೂ ಹೇಳುವವರಾರು? ಕೇಳುವವರಾರು?) ಔಷಧಕೊಡುವ
ಯಾರೆಂಬುದರ ತಪಾಸಣೆ ಶುರುಮಾಡಿದ. ಸಾಬಾರದಲ್ಲೋ? ತುಮರಿ ಕೊಪ್ಪದಲ್ಲೋ..... ಎ
ಒಬ್ಬರು ಇದ್ದರಂತೆ. ಅವರಿಗೆ ಬರಹೇಳಿ ಬಂದನಂತೆ. ಬೃಹಸ್ಪತಿವಾರ, ಸೋಮವಾರ ಮಾ
ಈ ರೋಗಕ್ಕೆ ಔಷಧಿ ಕೊಡುತ್ತಾರಂತೆ. ಉಳಿದ ದಿನ ಔಷಧ ಕೊಡುವುದಿಲ್ಲವಂತೆ.
ಅರಣ್ಯ ಪಂಡಿತ ಸೋಮವಾರ ಬರುವ ಹೊತ್ತಿಗೆ ಚನ್ನನಗೌಡ ನನ್ನನ್ನು ಕಂಡು "ನೀವೂ ಕ

ಕಂಡವರ ಮನೆಯಲ್ಲಿ ಊಟಮಾಡುವವರು. ನನ್ನ ಹಾಗೆಯೇ ನಿಮಗೂ ಯಾರೋ ಕಪ್ಪು ಹಾಕಿದ್ದಾರೆ. ನನಗೆ ಸೋಮವಾರ ಔಷಧ ಕೊಡಲು ವೈದ್ಯರೊಬ್ಬರು ಬರುತ್ತಾರೆ. ಅವರು ಆಡಿನ ಹಾಲಿನಲ್ಲಿ ಮಾಡುವ ಔಷಧ ದಿವ್ಯೌಷಧ. ಹೊರಗೆ ಬಂದು ಮನುಷ್ಯ ಗುಣ ಹೊಂದುತ್ತಾನೆ. ನೀವೂ ಬೇಕಾದರೆ ತಕ್ಕೊಳ್ಳಬಹುದು" ಎಂದ. ನಾನು ಅವನ ಮಾತಿಗೆ ಸಮ್ಮತಿಸಿ ಕಪ್ಪಿಗೆ ಔಷಧ ತಕ್ಕೊಳ್ಳಲು ಸಿದ್ಧನಾಗಿ ಅವರ ಮನೆಗೆ ಬಂದೆ. ವೈದ್ಯರು ಬರುವಾಗ ಯಾವುದೋ ಸೊಪ್ಪು ತಂದೇ ಬಿಟ್ಟರು. ಬಹುಶಃ ಅದು ಮುಳ್ಳುಕಣಗಿಲೆ ಸೊಪ್ಪೆಂದು ಜ್ಞಾಪಕ. ಆ ಸೊಪ್ಪನ್ನು ಚನ್ನಾಗಿ ಅರೆದರು. ಅದರಲ್ಲಿ ಇನ್ನೂ ಏನೇನೋ ಕೂಡಿಸಿದರು. ಆಡಿನ ನಾಲ್ಕು ಲೋಟ ಹಾಲಿಗೆ ಸಣ್ಣನಾಗಿ ಅರೆದ ಸೊಪ್ಪನ್ನು ಬೆರೆಸಿ ನನಗೆ ಎರಡು ಲೋಟ, ಚೆನ್ನನ ಗೌಡರಿಗೆ ಎರಡು ಲೋಟ ಕೊಟ್ಟು ಗಟಗಟ ಕಣ್ಣುಮುಚ್ಚಿಕೊಂಡು ಕುಡಿದು ಪಾತ್ರೆ ಡಬ್ಬುಹಾಕಿ ಬಿಡಿ ಎಂದರು. ಹಾಗೆ ಮಾಡಿದೆವು. ಅಬ್ಬಾ! ಕಹಿಯೋ ಕಹಿ. ಮುಖವೆಲ್ಲ ಕೆಟ್ಟು ಹೋಯಿತು. ಹೊಟ್ಟೆಯಲ್ಲಿ ಉರಿ ಉರಿ ಪ್ರಾರಂಭವಾಯಿತು. ಐದೇ ನಿಮಿಷದಲ್ಲಿ ಒಮ್ಮೆಲೆ ಅಬ್ಬಳಿಕೆ ಬಂದು ಹಗ್ಗದಂತೆ ಉದ್ದವಾಗಿ ಕುಡಿದುದೆಲ್ಲ ಗಟ್ಟಿಯಾಗಿ ವಾಂತಿಯಾಯಿತು. ಗಟ್ಟಿಯಾಗಿ ಉದ್ದಕ್ಕೆ ಹಗ್ಗದಂತೆ ಬಿದ್ದ ವಾಂತಿಯನ್ನು ಕಂಡು, ನೋಡಿದಿರಾ ಕರಿಗಡಬಿನಲ್ಲಿ ಮಾಸ್ತರರಿಗೆ ಯಾರೋ ಔಷಧಿ ಹಾಕಿದ್ದಾರೆ. ಚಿನ್ನನಗೌಡರಿಗೂ ಅದೇ, ಹಾಗೆ ಹೀಗೆ ವ್ಯಾಖ್ಯಾನ ಮಾಡಿದರು. ನೀರಿನಂತೆ ವಾಂತಿ ಪದೇ ಪದೇ ಆಗುತ್ತಲೇ ಇತ್ತು. ಹೊಟ್ಟೆಯೊಳಗಿನ ಹೊಲಸೆಲ್ಲ ಕಿತ್ತು ಬರುತ್ತಾ ಇದೆ ಎಂದು ವ್ಯಾಖ್ಯಾನ ಮಾಡುವವರು ಸುತ್ತಮುತ್ತ ನೆರೆದು ಬಿಟ್ಟರು. ವಾಸ್ತವಾಂಶ ಹಾಗಲ್ಲ. ಆ ಸೊಪ್ಪಿನ ರಸವನ್ನು ಆಡಿನ ಹಾಲಿಗೆ ಹಾಕಿದ ಕೂಡಲೆ ಅದು ಗಟ್ಟಿಯಾಗುತ್ತದೆ. ಕುಡಿದೊಡನೆ ಹೊಟ್ಟೆಯಲ್ಲಿ ಗಟ್ಟಿಯಾಗಿ ಬಿಡುತ್ತದೆ. ಹೊಟ್ಟೆ ತನಗೆ ಬೇಡವಾದ ಪದಾರ್ಥವನ್ನು ಹೊರಹಾಕುವ ಸ್ವಭಾವದ್ದು ತಾನೆ. ಬೇಡವಾದ ಅದನ್ನು ಹೊಟ್ಟೆ ಹೊರಹಾಕಿತು. ಇನ್ನು ಸೊಪ್ಪಿನ ಅಂಶ ಹೊಟ್ಟೆಯಲ್ಲಿ ಉಳಿದಾಗ ಅದನ್ನು ವಾಂತಿಯ ಮೂಲಕ ಹೊರಹಾಕಿತು. ಈ ಅಪಾಯದ ಭಯಂಕರ ಔಷಧಿಯನ್ನು ಆ ಹಳ್ಳಿಯ ಗಮಾರ ಯಾವ ಚರಕ, ಸುಶ್ರುತರಿಂದ ತಿಳಿದಿದ್ದನೋ! ಆ ಔಷಧಿಯ ಪ್ರಯೋಗದಿಂದ, ನಾನು ತೀರಾ ಸುಸ್ತಾಗಿ ಸುಧಾರಿಸಿಕೊಳ್ಳಲು ಮೂರು ನಾಲ್ಕು ದಿನಗಳೇ ಬೇಕಾಯಿತು. ಚಿನ್ನನ ಗೌಡ ಸುಧಾರಿಸಿಕೊಳ್ಳಲಿಲ್ಲ. ಒಂದಕ್ಕೆ ಹತ್ತಾಗಿ ನೆಲ ಹಿಡಿದೇ ಬಿಟ್ಟ. ಹೀಗೆಯೇ ಐದಾರು ತಿಂಗಳು ನೆಲಹಿಡಿದು ಸತ್ತ. ಕಪ್ಪಿನ ಈ ಔಷಧದ ಪರಿಣಾಮವಾಗಿ ಸತ್ತನೊ ಅಥವಾ ಅವನ ಮೊದಲಿನ ವ್ಯಾಧಿ ಉಲ್ಬಣಗೊಂಡು ಸತ್ತನೋ ಹೇಳಲಾರೆ. ಅಂತೂ ಸತ್ತು ಹೋದ. ನಾನು ದೇವರ ದಯದಿಂದ ಪಾರಾದೆ. ಇದುವರೆಗೆ ದೇಹದಲ್ಲಿ ನಾನು ಗಳಿಸಿಟ್ಟುಕೊಂಡಿದ್ದ ಶಕ್ತಿಯೇ ನನ್ನನ್ನು ಬದುಕಿಸಿತು ಎಂದು ನಾನು ಈಗ ಊಹಿಸುತ್ತೇನೆ. ಇಂಥ ಏನೂ ತಿಳಿಯದ ಕಾಡುವೈದ್ಯರಿಂದ ತುಂಬಿದ ಈಗಿನ ಕಾಲದ ಔಷಧಿಗಳನ್ನು ಕುಡಿದು ಬದುಕಿದರೆ ಅದೇ ಪುಣ್ಯವೆಂದು ಭಾವಿಸಬೇಕು. ಬ್ರಿಟಿಷರ ಕಾಲದ ಆಡಳಿತದ ಅನೇಕ ವೈಖರಿಗಳಿಗೆ ಇದೊಂದು ನಿದರ್ಶನ. ಆಗ ಜನಗಳ ಹಿತ ಬಯಸುವ ಯಾವ ರಾಜಕಾರಣಿಗಳೂ ಇರಲಿಲ್ಲ. ಹಳ್ಳಿಯ ಜನರಂತೂ ಕಾಲುಕಸ. ಈ ಜನವೂ ಎಲ್ಲ ದೇವರಿಚ್ಛೆ ಎಂದು ಬಿಡುತ್ತಿದ್ದರು. ಮುಂದೆ ಎಂದೂ ನಾನು ಇಂಥ ಕಾಡುವೈದ್ಯರ ಮತ್ತು ಔಷಧಿಗಳಿಂದ ದೂರ ಉಳಿದೆ.

ನನ್ನ ಜನಪ್ರೀತಿಗೆ ಕಾರಣಗಳಾದ ಜ್ವರ - ಕೆಮ್ಮುಗಳ ಔಷಧಿಗಳನ್ನು ಮಾತ್ರ ಮಾಡುತ್ತ ಗೊತ್ತಿಲ್ಲದೆ ಕೊಡುವ ಉಳಿದ ಔಷಧಗಳನ್ನು ಜನಗಳ ಮೇಲೆ ಪ್ರಯೋಗಿಸುವುದರಿಂದಲೂ ದೂರ ಉಳಿದೆ. ಆದರೆ ನಾನು ಔಷಧ ಕೊಡುವುದಿಲ್ಲವೆಂದರೂ ಜನ ಮಾತ್ರ ನನ್ನನ್ನು ಬಿಡುತ್ತಿರಲಿಲ್ಲ. ರೋಗಿಯನ್ನು ಹೋಗಿ ನೋಡಿ ಅಪಾಯವಿಲ್ಲದ ಔಷಧ ಕೊಡುತ್ತಿದ್ದೆ. ನನಗೆ ಏನೂ ತಿಳಿಯದಿದ್ದರೆ ಔಷಧ ಕೊಡದೆ ಗಾಡಿಕಟ್ಟಿಸಿಕೊಂಡು ಹಾನಗಲ್ಲಿಗೋ ಆ ಊರಿಗೊ ಹೋಗಿ ಚಿಕಿತ್ಸೆ ಮಾಡಿಸಿಕೊಂಡು ಬರುತ್ತಿದ್ದೆ. ಇಂಥ ಕೆಲಸಗಳಿಗೆಲ್ಲ ಜನ ನನ್ನನ್ನು ಕರೆದುಕೊಂಡು ಹೋಗುತ್ತಿದ್ದರು. ಡಾಕ್ಟರರೊಡನೆ ಮಾತನಾಡಲು ನನ್ನ ಅವಶ್ಯಕತೆ ಇತ್ತು. ನಾನು ಡಾಕ್ಟರರಿಗೆ ರೋಗಿಗಳ ರೋಗದ ತಪಶೀಲನ್ನು ವಿವರಿಸಿ ಯೋಗ್ಯ ಚಿಕಿತ್ಸೆ ಮಾಡಿಸುತ್ತಿದ್ದೆ. ಆದ್ದರಿಂದ ಪದೇ ಪದೇ ಡಾಕ್ಟರರ ಹತ್ತಿರ ನಾನು ಹೋಗಲೇಬೇಕಾಗುತ್ತಿತ್ತು.

ಒಮ್ಮೆ ಧರಣಪ್ಪನವರ ಚನ್ನಬಸಪ್ಪನ ಹೆಂಡತಿ ತಿಪ್ಪಮ್ಮನವರಿಗೆ ಹೆರಿಗೆ ತೊಂದರೆಯಾಗಿ ಹೊಟ್ಟೆನೋವು ಸಹಿಸಲು ಅಸಾಧ್ಯವಾಗಿತ್ತು. ಹೆರಿಗೆ ಆಗಲೇ ಇಲ್ಲ. ಈಗ ಮಾಡುವುದೇನೆಂದು ಎಲ್ಲರೂ ಚಿಂತೆಗೊಳಗಾದರು. ನನ್ನನ್ನು ಕರೆಸಿ ಏನು ಮಾಡಬೇಕೆಂದು ಕೇಳಿದರು. ಬೇಗನೆ ಒಳ್ಳೆಯ ವೇಗವಾಗಿ ಓಡುವ ಎತ್ತುಗಳಿಂದ ಗಾಡಿ ಕಟ್ಟಿ ಬಿಡಿ. ಉದಾಸೀನಮಾಡಿದರೆ ಆ ತಾಯಿಯ ಪ್ರಾಣಕ್ಕೇ ಅಪಾಯವಾದೀತೆಂದು ಹೇಳಿದೆ. ಎಲ್ಲಿಗೆ ಹೋಗಬೇಕು? ಯಾವ ಡಾಕ್ಟರರನ್ನು ಕರೆತರಬೇಕು ಎಂದು ಕೇಳಿದಾಗ ನಮ್ಮ ಆಲೂರು ಹಾನಗಲ್ಲಿನ ಡಾಕ್ಟರರೂ ಬೇಡ, ಸೂಲಗಿತ್ತಿಯರೂ ಬೇಡ, ಜಡೆಯಲ್ಲಿ ಓರ್ವ ಬುದ್ಧಿವಂತ ಸೂಲಗಿತ್ತಿ ಬಂದಿದ್ದಾಳಂತೆ. ಅವಳನ್ನು ಕರೆದುಕೊಂಡು ಬಂದರೆ ಸಾಕು. ಎಲ್ಲ ಸಮಸ್ಯೆ ಬಗೆಹರಿಯುತ್ತದೆಂದು ತಿಳಿಸಿದೆ. ಜಡೇ ಇರುವುದು ಬನವಾಸಿಯ ಪಕ್ಕದಲ್ಲಿ. ಅದು ಹಳೇ ಮೈಸೂರು ಪ್ರಾಂತಕ್ಕೆ ಸೇರಿದ ಊರು. 12 ಮೈಲು ದೂರವಿರುವ ಜಡೆಯ ಕಡೆಗೆ ಗಾಡಿ ಹೊರಟಿತು. ಗಾಡಿಗೆ ಕಟ್ಟಿದ ಎತ್ತುಗಳು ಜಿಂಕೆಯಂತೆ ಹಾರಬಲ್ಲ ಉತ್ಕೃಷ್ಟ ಜತೆಗಳು. ಚನ್ನಬಸಪ್ಪ ತನ್ನ ಮನೆತನದ ಪ್ರತಿಷ್ಠೆಗಾಗಿ ಅಂಥ ಎರಡು ಒಳ್ಳೆಯ ಎತ್ತುಗಳನ್ನು ಕಟ್ಟಿ ಮೇಯಿಸಿದ್ದ. ಗಾಡಿಗೆ ಕಟ್ಟಿದರೆ ಸಾಕು ತಕತಕ ಕುಣಿಯುತ್ತಿದ್ದ ಆ ಎತ್ತುಗಳ ಡುಬ್ಬದ ಮೇಲೆ ಕೈಯಿಟ್ಟರೆ ಸಾಕು, ನಾಗಾಲೋಟದಿಂದ ಓಡುತ್ತಿದ್ದವು. ಮಲಕಪ್ಪ ಎಂಬ ಚನ್ನಬಸಪ್ಪನ ಅಳಿಯನೊಡನೆ ನಾಲ್ಕೇ ತಾಸಿನಲ್ಲಿ ಜಡೆಗೆ ಹೋಗಿ ಸೂಲಗಿತ್ತಿಯನ್ನು ಕರೆದುಕೊಂಡು ಬಂದದ್ದು ಇಡೀ ಊರಿಗೆ ಆಶ್ಚರ್ಯವನ್ನುಂಟು ಮಾಡಿತ್ತು. ಇಪ್ಪತ್ತು ನಾಲ್ಕು ಮೈಲು ದಾರಿಯನ್ನು ನಾಲ್ಕು ತಾಸುಗಳಲ್ಲಿ ಹೋಗಿ ಅಲ್ಲಿ ಅರ್ಧಗಂಟೆ ನಿಂತು ಗಾಡಿಯ ಭಾರವನ್ನು ಎಳೆದುಕೊಂಡು ಅವು ಕ್ರಮಿಸಿದ್ದು ಒಂದು ಅದ್ಭುತ ವಿಷಯವೇ ಆಗಿತ್ತು. ದಾರಿಯೋ ಅರ್ಧ ಕಾಡು ದಾರಿ, ಅರ್ಧ ಜಲ್ಲಿಕಲ್ಲಿನ ಕಚ್ಚಾದಾರಿ. ಜಡೇದಿಂದ ಬರುವಾಗ ಸೂಲಗಿತ್ತಿ ಎತ್ತುಗಳ ವೇಗಕ್ಕೆ ಹೆದರಿ ಹೋಗಿದ್ದಳಂತೆ. ಮೈಕೈಯೆಲ್ಲಾ ನೋವಾಗಿ ಹೋಯಿತೆಂದು ಹೇಳಿದ್ದು ಜ್ಞಾಪಕ. ಸೂಲಗಿತ್ತಿ ಬಂದವಳೇ ಸುಖಪ್ರಸವವಾಗುವ ಹಾಗೆ ಮಾಡಿಬಿಟ್ಟಳು. ಪುನಃ ಬೇರೆ ಎತ್ತುಗಳನ್ನು ಕಟ್ಟಿದ ಗಾಡಿಯಲ್ಲಿ ಅವಳನ್ನು ಜಡೆಗೆ ಕಳಿಸಿಬರಲಾಯಿತು. ಈ ಸಾಹಸವನ್ನು ದುಡ್ಡು ಮತ್ತು ಸಾಧನ ಸಲಕರಣೆಗಳಿಲ್ಲದವರು ಮಾಡಲು ಸಾಧ್ಯವೇ? ಅಂಥವರು ನೋವು ತಿಂದು ನರಳಿ ಬಾಯಿ ಬಡಿದುಕೊಂಡು ಸತ್ತರೂ ಕೇಳುವವರಾರು? ಆಗ ಜನ "ಅವಳ ಪುಣ್ಯ ಅಲ್ಲಿಗೆ ತೀರಿತು. ಎಲ್ಲಾ ದೇವರಾಟ" ಎಂದು ದೇವರ ಮೇಲೆ ಅಪವಾದ ಹೇರಿ ತೆಪ್ಪಗಾಗುತ್ತಿದ್ದರಲ್ಲದೆ ಬೇರೆ ಯಾರ ವಿರುದ್ಧ ಆಪಾದನೆ ಮಾಡಲು ಶಕ್ಯ? ದುರ್ಬಲರು

ದೇವರ ದಯೆಯಿಂದಲೇ ಬದುಕಬೇಕಾದ ಕಾಲ ಅದಾಗಿತ್ತು. ಮಾನವನ ಜೀವಕ್ಕೆ ಬೆಲೆ ಎಂಬುದು ಇರಲಿಲ್ಲವೆನ್ನಬಹುದು. ಇಂಥ ಗಂಡಾಂತರದ ದಿನಗಳಲ್ಲಿ ಮಲೇರಿಯಾ ಹಾವಳಿ ಮಲೆನಾಡನ್ನು ತಿಕ್ಕಿ ಮುಕ್ಕಿ ಹಳ್ಳಿಗಳನ್ನೆಲ್ಲ ಹಾಳುಕೊಂಪೆಗಳನ್ನಾಗಿಸಿತ್ತು. ಇದಕ್ಕೆ ಆಗಿನ ಬ್ರಿಟಿಷ್ ಸರಕಾರ ಮಾಡುತ್ತಿದ್ದ ಸಹಾಯವೆಂದರೆ ತಾಲೂಕು ಆಫೀಸಿಗೆ ಬಂದು ಕೇಳಿದವರಿಗೆ ಪುಕ್ಕಟೆಯಾದ ಕ್ವಿನೈನ್ ಗುಳಿಗೆಗಳಲ್ಲದೆ ಬೇರೆ ಏನೂ ಇರಲಿಲ್ಲ. ಹೊರಳಿ ನೋಡುತ್ತಿರಲಿಲ್ಲ. ಸತ್ತವನು ಸತ್ತ, ಬದುಕಿದವನು ಬದುಕಿದ. ಹೊಲ ಉಳಲು ಗತಿಯಿಲ್ಲದೆ, ಕಂದಾಯ ಕಟ್ಟದಿದ್ದರೆ ಕಂದಾಯ ಬಾಕಿಗಾಗಿ ಹೊಲ ಹರಾಜು ಹಾಕುವುದೊಂದೇ ಅವರಿಗೆ ಗೊತ್ತಿದ್ದ ಆಳ್ವಿಕೆಯ ವಿಧಾನ.

### *ಸಂಪೂರ್ಣ ರಾಮಾಯಣ ಆಡಿಸಿದೆ*

ರೋಗರುಜಿನ, ಕಷ್ಟ ನಷ್ಟ ಏನೇ ಇರಲಿ. ಬದುಕಿರುವವರಿಗಾದರೂ ಆಗ ಈಗ ಏನಾದರೂ ಮನರಂಜನೆ ಬೇಕೇ ಬೇಕಲ್ಲವೆ? ಅವರು ತಮ್ಮ ಕಷ್ಟ ನಷ್ಟ, ನೋವುಅಳುವುಗಳನ್ನು ಮರೆಯಲು ಏನೇನಾದರೂ ಕಾರ್ಯಕ್ರಮ ಹಮ್ಮಿಕ್ಕೊಳ್ಳಲೇ ಬೇಕಲ್ಲವೆ? ಅದಕ್ಕೆಲ್ಲ ನಾನೇ ಕೇಂದ್ರ ವ್ಯಕ್ತಿಯಾಗಿ ಬಿಟ್ಟೆ. ಊರಲ್ಲಿ ಭಜನೆ, ಕೀರ್ತನೆ, ಪುರಾಣ ಇತ್ಯಾದಿಗಳನ್ನು ಏರ್ಪಾಡು ಮಾಡತೊಡಗಿದೆ. ಅವು ಬಹುಮಟ್ಟಿಗೆ ಹಳ್ಳಿಯ ಜನರ ಮನರಂಜನೆಯ ಮಾಧ್ಯಮಗಳಾದವು. ಒಂದು ದೃಷ್ಟಿಯಿಂದ ಆ ಊರಿವರಿಗೆ ನಾನೊಬ್ಬ ಪವಾಡಪುರುಷನೇ ಆಗಿ ಬಿಟ್ಟೆ. ಊರಲ್ಲಿ ಯಾರ ಯಾರ ಮನೆಯಲ್ಲಿ ಕಾಯಿಲೆ ಕಸಾಲೆ ಆಗಿದೆ, ಅಲ್ಲೆಲ್ಲ ಭೇಟಿ ಕೊಟ್ಟು ನನಗೆ ತಿಳಿದ ಸೌಮ್ಯ ಔಷಧಿ ಕೊಟ್ಟು ಪಥ್ಯ ಹೇಳಿ, ಮಾತನಾಡಿಸಿ, ನಗಿಸಿ ಬರುತ್ತಿದ್ದೆ. ಪಾದರಸದಂತಹ ನನ್ನ ಚಟುವಟಿಕೆ. ಒಳ್ಳೆಯ ಆರೋಗ್ಯಭಾಗ್ಯದಿಂದ ಇದೆಲ್ಲ ಸಾಧ್ಯವಾಗುತ್ತಿತ್ತಾಗಿ ಇದರಿಂದ ನಾನೂ ನನ್ನ ಬಹಳಷ್ಟು ಪ್ರಯೋಜನ ಲಾಭ ಗಿಟ್ಟಿಸಿದೆ. ಅವರಾಗಿಯೇ ನನ್ನ ಕಷ್ಟಕಾರ್ಪಣ್ಯ ಕಳೆಯಲು ಮುಂದಾದರು. ಏತನ್ಮಧ್ಯೆ ನನ್ನ ಶಾಲಾಜೀವನದ ಕಾರ್ಯಕ್ರಮಗಳು ಸರಕಾರಿ ಶಾಲೆಗಳನ್ನು ಮಿಕ್ಕಿಸುವಂತಹ ಉತ್ತಮ ಪ್ರಗತಿಯಿಂದ ನಡೆದು ಸುತ್ತುಮುತ್ತಣ ಹಳ್ಳಿಗಳಲ್ಲೆಲ್ಲ ನಮ್ಮದು ಆದರ್ಶಪಾಠಶಾಲೆಯೆಂದು ಕೀರ್ತಿತವಾಗಿ ಹೋಯಿತು. ನಿಯತಕಾಲಿಕ ವ್ಯಾಯಾಮ, ಆರೋಗ್ಯ ನಿಯಮಪಾಲನೆಗಳಿಂದ ಶಾಲಾ ಮಕ್ಕಳ ಆರೋಗ್ಯದಲ್ಲಿ ಬಹಳಷ್ಟು ಪ್ರಗತಿ ಕಂಡುಬಂದು ಹುಡುಗರ ಪಾಲಕರಲ್ಲಿ ನನ್ನ ಬಗೆಗೆ ಅಪಾರ ಭಕ್ತಿಭಾವ ಮೂಡಿ ಬಂದಿತ್ತು. ಹೊಟ್ಟೆ ಮುಂದಾಗಿದ್ದ ಮಕ್ಕಳ ಹೊಟ್ಟೆ ಮಾಯವಾಗುತ್ತ ಬಂತು. ಕಣ್ಣುಗಳಲ್ಲಿ ತೇಜಸ್ಸು ಮೂಡತೊಡಗಿತ್ತು. ಮಕ್ಕಳೆಲ್ಲರಲ್ಲಿ ಒಂದು ರೀತಿಯ ದೈಹಿಕ ಪ್ರಗತಿ ಥಟ್ಟನೆ ಎಲ್ಲರಿಗೂ ಕಾಣುವಂತಾಗಿತ್ತು.

ಆ ಊರಲ್ಲಿ ಮನರಂಜನೆಯ ಮುಖ್ಯಮಾಧ್ಯಮವೆಂದರೆ ಪ್ರತಿ ವರ್ಷ ಯುಗಾದಿ ಮಹಾನವಮಿಗಳಲ್ಲಿ ಯಕ್ಷಗಾನ ಅಥವಾ ಮೂಡಲಪಾಯದ ಆಟ ಆಡಿಸುವುದು. ಅನೇಕ ವರ್ಷಗಳ ಹಿಂದೆ ಗದುಗಿನ ಕಡೆಯವರೊಬ್ಬರು ಇಲ್ಲಿ ಗಾವಠಿ ಶಾಲೆ ಹಾಕಿ ಕೆಲವು ದಿನ ಮಾಸ್ತರರಾಗಿದ್ದರಂತೆ. ಅವರು ಹರಿಶ್ಚಂದ್ರನ ಕಥೆಯನ್ನು ಮೂಡಲಪಾಯದ ಶೈಲಿಯಲ್ಲಿ ಬರೆದು ಆಡಿಸಿದ್ದರಂತೆ. ಅವರು ಊರುಬಿಟ್ಟು ಹೋದ ಮೇಲೆ ಅದೇ ಆಟವನ್ನು ಊರಲ್ಲಿ ಪ್ರತಿವರ್ಷವೂ ಪುಣ್ಯಪ್ರದ ಕಥೆಯೆಂದು ಆಡುತ್ತ ಬರುತ್ತಿದ್ದರಂತೆ. ಆ ಕಥೆಯ ಮಾತುಗಳು, ಪದ್ಯಗಳು ಆಟ ನೋಡಿ ನೋಡಿ ಎಲ್ಲರಿಗೂ ಬಾಯಿಪಾಠವಾಗಿ ಹೋಗಿದ್ದವಂತೆ. ಅಂಥ ಕೆಲವು ಪದ್ಯಗಳನ್ನು, ಮಾತುಗಳನ್ನು ಟೋಕನಗೌಡ ನನ್ನೆದುರಿಗೆ ಪದೇಪದೇ ಹಾಡಿ ಆಡಿ

ತೋರಿಸುತ್ತ ಬಹಳ ನಗಿಸುತ್ತಿದ್ದ. ಒಂದು ದಿನ ಈ ಯಕ್ಷಗಾನ ಆಟದ ಆರಾಧಕರೆಲ್ಲ ಸೇ
ನನಗೆ "ನೀವು ನಮ್ಮ ಊರಿಗೆ ಅಪರೂಪವಾಗಿ ಬಂದಿದ್ದೀರಿ. ನಮಗೆ ಸಂಪೂರ್ಣ
ರಾಮಾಯಣ ಯಕ್ಷಗಾನ ಆಟದ ಕಥೆ ಬರೆದು ಕೊಡಿ. ಚೆನ್ನಾಗಿ ಮಾಡಿಬಿಡೋಣ" ಎಂದು
ದುಂಬಾಲುಬಿದ್ದು ಹೇಳಿದರು. ನನಗೆ ಇಂಥ ಆಟಗಳನ್ನು ಬಹಳ ನೋಡಿದ್ದರಿಂದಲೂ, ಅನೇ
ದೊಡ್ಡಾಟದ ಕಥೆಗಳನ್ನು ಅವರಿವರಿಗೆ ಪ್ರತಿ ಎತ್ತಿ ಕೊಟ್ಟುದರ ಅನುಭವದಿಂದಲೂ
ಸಂಪೂರ್ಣ ರಾಮಾಯಣವನ್ನು ಬರೆಯಬಲ್ಲೆನೆಂದು ಆತ್ಮವಿಶ್ವಾಸ ಹೇಳುತ್ತಿತ್ತು. ನನ್ನ ಹತ್ತಿರ
ಯಾರೋ ಒಳ್ಳೆಯ ಗದ್ಯದಲ್ಲಿ ಬರೆದ ಒಂದು ರಾಮಾಯಣ ಪುಸ್ತಕವಿತ್ತು. ಅದನ್ನು ನೋಡಿ
ಅಲ್ಲಿನ ನೇರ ಮಾತುಗಳನ್ನೆತ್ತಿ ಸಂಭಾಷಣೆಯನ್ನು ಜೋಡಿಸಿ ಪದ್ಯಗಳನ್ನು ಹಾಕಿ ಮೂರ
ತಿಂಗಳಲ್ಲಿ ಸಂಪೂರ್ಣ ರಾಮಾಯಣವನ್ನು ಬರೆದು ಮುಗಿಸಿಬಿಟ್ಟೆ. ನಾನು ಬರೆದ ಈ
ರಾಮಾಯಣದ ಸಂಭಾಷಣೆಯನ್ನು ಕೇಳಿ ಈ ಆಟಗುಳಿಗಳೆಲ್ಲ ಕುಣಿದಾಡಿಬಿಟ್ಟರು. ಆಗ
ಸಂಪೂರ್ಣ ರಾಮಾಯಣ ಆಡುವುದೆಂದರೆ ಬಹುಸಾಹಸದ ಆಟವಾಗಿತ್ತು. ಶಿರಹಟ್ಟಿ ನಾಟಕ
ಕಂಪನಿಯವರು ಈ ನಾಟಕವನ್ನಾಡಿ ಅಪಾರ ಯಶಸ್ಸು ಗಳಿಸಿದ್ದರು. ಅದೇ ಕಥೆಯನ್ನು
ಯಕ್ಷಗಾನದಲ್ಲಿ ಆಡುವುದೆಂದರೆ ಸುತ್ತಮುತ್ತಲ ಹಳ್ಳಿಯಲ್ಲೆಲ್ಲ ಒಂದು ಬಗೆಯ ಕುತೂಹಲವೇಳಲು
ಕಾರಣವಾಗಿತ್ತು. ಸರಿ. ಬಂಗಾರೆಪ್ಪನನ್ನು ಪ್ರಧಾನ ಭಾಗವತಣ್ಣನನ್ನಾಗಿ ಆರಿಸಿದೆವು
ಓದೋಗೌಡ್ರ ಲೋಕನಗೌಡ ಹಿಮ್ಮೇಳದ ಮುಖಂಡನಾದ. ಆಟ ಪ್ರಾರಂಭವಾಯಿತು
ಆದರೆ ಜಿಜ್ಞಾಸೆ ಬಂದದ್ದು ಹನುಮಂತನ ಪಾತ್ರ ಮಾಡುವ ಬಗ್ಗೆ. ಆ ಪಾರ್ಟು ಮಾಡಲು
ಇಬ್ಬರು ಪ್ರಬಲವ್ಯಕ್ತಿಗಳಲ್ಲಿ ಪೈಪೋಟಿ ನಡೆಯಿತು. ಹನುಮಂತನ ಪಾತ್ರವೇ ರಾಮಾಯಣದಲ್ಲಿ
ದೊಡ್ಡ ಜೀವಾಳ. ನೋಡಲು ಬರುವವರೆಲ್ಲರ ದೃಷ್ಟಿ ಹನುಮಂತನ ಪಾರ್ಟು
ಮಾಡಿರುವವರು ಯಾರೆಂಬುದರ ಮೇಲಿರುತ್ತಿತ್ತು. ಹೀಗಾಗಿ ಆ ಪಾತ್ರಧಾರಿ ಯಶಸ್ಸು
ಗಳಿಸಬೇಕೆಂಬ ಮಹತ್ವಾಕಾಂಕ್ಷೆ ಬಾಳಿಹಳ್ಳಿ ಬಸವಣ್ಣೆಪ್ಪ ಮತ್ತು ಮಾದಣ್ಣನವರ ಪುಟ್ಟಪ್ಪ
- ಇವರಿಬ್ಬರಲ್ಲಿ ಬೆಳೆದು ಪೈಪೋಟಿಗಿಟ್ಟುಕೊಂಡು ಜಗಳವೂ ಆದದ್ದುಂಟು. ಕೊನೆಗೆ ಒಂದು
ಸಲ ಬಾಳಿಹಳ್ಳಿ ಬಸವಣ್ಣೆಪ್ಪ ಮಾಡಿದ ಮೇಲೆ ಇನ್ನೊಂದು ಸಲ ಆಡುವ ಪ್ರಸಂಗ ಬಂದರೆ
ಪುಟ್ಟಪ್ಪ ಮಾಡಬೇಕೆಂದು ಊರಿನ ಯಜಮಾನರೆಲ್ಲ ತೀರ್ಮಾನಿಸಿಬಿಟ್ಟಿದ್ದರಿಂದ ಪುಟ್ಟಪ್ಪ
ಸಭೆಯಿಂದ ಬುಸುಗುಡುತ್ತ ಎದ್ದು ಮನೆಗೆ ಹೋಗಿಬಿಟ್ಟ. ಆತನ ಈ ಕೋಪದಿಂದ
ಬಸವಣ್ಣೆಪ್ಪನಲ್ಲಿ ವೈರವೂ ಬೆಳೆದು ಬಸವಣ್ಣೆಪ್ಪನ ಎರಡು ಬತ್ತದ ಬಣಾವೆಗಳು ಬೆಂಕಿಗೆ
ಆಹುತಿಯಾಗಬೇಕಾಯಿತು. ಆದರೆ ಈ ಕಾರ್ಯವನ್ನು ಪುಟ್ಟಪ್ಪ ಮಾಡಿಸಿದನೋ ಅಥವಾ
ಇನ್ಯಾವ ಕಾರಣದಿಂದ ಆಯಿತೋ ಅದು ಜಿಜ್ಞಾಸೆಯಾಗಿ ಉಳಿಯಿತು. ಅದೇನೇ ಇರಲಿ.
ಯುಗಾದಿ ಹಬ್ಬಕ್ಕೆ ಆಟ ಆಡಬೇಕೆಂದು ನಿಷ್ಕರ್ಷೆಯಾಯಿತು. ಬಹು ಉತ್ಸಾಹದಿಂದ ದೊಡ್ಡ
ಅಟ್ಟಹಾಕುವ ಏರ್ಪಾಡು ನಡೆಯಿತು. ಕೊಪ್ಪದಿಂದ ಹಸಿರುವಾಣಿ ಚಪ್ಪರಕ್ಕಾಗಿ ನಾಲ್ಕೈದು
ಗಾಡಿ ಬಾಳೆ, ಬಗನಿ, ತೆಂಗಿನಗರಿಗಳು ಬಂದವು.

ನಾನಂತೂ ದೊಡ್ಡ ಕವಿಯೂ ಆಗಿಬಿಟ್ಟೆ. ಸುತ್ತಮುತ್ತಲ್ಲ ನಮ್ಮೂರ ಮಾಸ್ತರರು
ಅದ್ಭುತ ವ್ಯಕ್ತಿ, ದೊಡ್ಡ ಕವಿ, ವೈದ್ಯ, ಶ್ರೇಷ್ಠ ಉಪಾಧ್ಯಾಯ ಇತ್ಯಾದಿ ಇತ್ಯಾದಿ ಪ್ರಚಾರ
ಹಿರೇಕಾಂತಿಯಿಂದ ಅವ್ಯಾಹತವಾಗಿ ಆಗಿಹೋಯಿತು. ಉತ್ಸಾಹದಿಂದ ಈ ಆಟಕ್ಕೆ ಒಂದು
ಸೀತಾಸ್ವಯಂವರ ಚಿತ್ರದ ಪರದೆಯನ್ನು ಬರೆದೆ. ನಾಲ್ಕು ಸೈಡ್‌ಪೀಸ್ ಬರೆದೆ.

ಂಕಾಪಟ್ಟಣಕ್ಕೆ ಸಮುದ್ರ ಹಾರಿ ಸೀತಾದೇವಿಯನ್ನು ಕಾಣಲು ಹನುಮಂತ ಹೋಗುವ ದೃಶ್ಯಕ್ಕಾಗಿ ಎರಡು ದೊಡ್ಡ ಕಾರ್ಡ್‌ಬೋರ್ಡಿನಲ್ಲಿ ಹನುಮಂತನ ಚಿತ್ರ ಬರೆದು ರಟ್ಟು ಹಾಕಿ ಬಣ್ಣ ಕೊಟ್ಟು ಅಟ್ಟದಿಂದ ಹತ್ತು ಹದಿನೈದು ಮಾರು ದೂರದಲ್ಲಿ ಅಶೋಕವನ ಮಾಡಿ ಅಲ್ಲಿ ಸೀತೆಯನ್ನು ಕುಳ್ಳಿರಿಸಲು ಒಳ್ಳೆಯ ಏರ್ಪಾಡು ಮಾಡಿಸಿದೆ. ಕಾರ್ಡುಬೋರ್ಡಿನಲ್ಲಿ ಬರೆದ ಹನುಮಂತನ ಹಿಂಬದಿಗೆ ಎರಡು ಬಾಣ ಕಟ್ಟಿ ಹಗ್ಗಕ್ಕೆ ರಿಂಗ್ ಹಾಕಿ ಬಿರದೊಡನೆಯೇ ಬಾಣದ ರಭಸದಿಂದ ಆ ಹನುಮಂತ ಸಮುದ್ರ ಹಾರಿ ಸೀತೆಯಲ್ಲಿಗೆ ಹೋದನೆಂದು ತೋರಿಸಲು ಈ ಏರ್ಪಾಡು ಮಾಡಿದೆ. ಲಂಕಾಪಟ್ಟಣಕ್ಕೆ ಹನುಮಂತ ಬೆಂಕಿ ಹಚ್ಚುವ ಸಮಯಕ್ಕೆ ಸರಿಯಾಗಿ ಅಟ್ಟದಿಂದ ದೂರದಲ್ಲಿ ಕಾಗದದಿಂದ ಲಂಕಾ ಪಟ್ಟಣವೊಂದನ್ನು ಸಾಂಕೇತಿಕವಾಗಿ ಮಾಡಿ, ಅದರಲ್ಲಿ ಅನೇಕ ಗರ್ನಲ್, ಸುರುಸುರುಬತ್ತಿ, ಬಾಣ, ಪಟಾಕಿಗಳನ್ನು ಕಟ್ಟಲಾಯಿತು. ನಾಲ್ಕೈದು ಬಹುಶಕ್ತಿಯ ಬಾಣಗಳು ಅಲ್ಲಿಂದ ಮೇಲಕ್ಕೆ ಹಾರಿಹೋಗುವಂತೆ ಅದನ್ನು ಕಟ್ಟಲಾಗಿತ್ತು. ಇಷ್ಟೆಲ್ಲ ಏರ್ಪಾಡುಗಳು ಅಲ್ಲಿಯ ಹಳ್ಳಿಗಳ ಇತಿಹಾಸದಲ್ಲಿ ಹಿಂದೆ ಯಾರೂ ಮಾಡಿದ್ದಿಲ್ಲ. ಪ್ರಯತ್ನ ಮಾಡಿ ನಾನು ಮಾಡಿಸಿಬಿಟ್ಟೆ. ನಾನು ಹೇಳಿದ ಯಾವ ಮಾತನ್ನೂ ಅವರು ಇಲ್ಲ ಎನ್ನದೆ ಮಾಡಿಸಿದರು. ನಾನು ಊರ ಬಡಗಿ ಸಹಾಯದಿಂದ ಮಾಡಿದ ಈ ಏರ್ಪಾಡನ್ನು ಸುತ್ತ ಮುತ್ತಣಹಳ್ಳಿಗಳಲ್ಲಿ ಪ್ರಚಾರ ಮಾಡಿಬಿಟ್ಟರು. ಕೇಳಬೇಕೆ? ಹಿರೇಕಾಂಶಿ ಹಿಡಿಯದಷ್ಟು ಜನ ಆಟದ ದಿನ ಸೇರಿಬಿಟ್ಟರು. ಜನ ನಿಲ್ಲಲು ಊರಲ್ಲಿ ಜಾಗ ಇಲ್ಲದಂತಾಯಿತು. ಎಲ್ಲರೂ ಉತ್ಸಾಹಿತ ರಾಗಿಬಿಟ್ಟರು.

ಆಟದ ದಿನ ಅಹಮ್ಮದ ಸಾಬನ ದರ್ಬಾರು ಹೇಳತೀರದು. ಬಿಳಿಯ ಗಡ್ಡದ ಆ ಮುದುಕ ಆ ದಿನ ಬಿಳಿಯ ಅಂಗಿ ಪಂಚೆಯನ್ನು ಉಟ್ಟು ತಲೆಗೆ ರುಮಾಲು ಸುತ್ತಿ, ಸುತ್ತಮುತ್ತಣ ಊರವರನ್ನೆಲ್ಲ ನಮಸ್ಕಾರ ಮಾಡಿ ಮಾಡಿ ಕುಳ್ಳಿರಿಸುವಲ್ಲಿ ಅವನ ಚಾತುರ್ಯ ಎದ್ದು ಕಾಣುತ್ತಿತ್ತು. "ಈ ಹಿರೇಕಾಂಶಿ ನಿಮ್ಮ ಊರು. ಈ ಊರಿನ ಮಾನ ಮರ್ಯಾದೆ ನಿಮ್ಮದೇ. ಎಲ್ಲೆಲ್ಲಿ ಜಾಗ ಇದೆಯೋ ಅಲ್ಲೆಲ್ಲ ಗದ್ದಲ ಇಲ್ಲದೆ ಕುಳಿತುಕೊಳ್ಳಬೇಕು. ನಿಮಗೆ ಸಲಾಂ ಹೇಳತೇನಿ. ಬಣ್ಣ ಬಳೀತಾ ಇದ್ದಾರೆ. ಈಗ ಆಟ ಸುರುವಾಗ್ತದೆ. ಮೂಡಿ ದಾಗೀನು ತರಿಸಿದ್ದೇವೆ. ರಾಮಚಂದ್ರನ ವೇಷಾ ನೋಡಬೇಕು ನೀವು. ಥೇಟ್ ರಾಮನೇ. ಹನುಮಂತನ ಪಾರ್ಟು ನಮ್ಮ ಬಾಳಿಹಳ್ಳಿ ಬಸವಣ್ಣೆಪ್ಪ ಗೌಡರೇ ಮಾಡಿದ್ದಾರೆ. ಅವರ ಹನುಮಂತನ ಪಾರ್ಟು ಶಿರಹಟ್ಟಿ ನಾಟಕದ ಹನುಮಂತನೇ. ನಮ್ಮ ಹಜರತ್ ಮಾಸ್ತರು ಬಹುತ್ ಬಡಾ ಶಾಹೀರ್. ಅವರು ಬರೆದಿರೋ ರಾಮಾಯಣ ಮಾತು ಕೇಳಾಕ ಪುಣ್ಯಾ ಮಾಡಿರಬೇಕು. ಅವರು ಲಂಕಾಪಟ್ಟಣ ಮಾಡಿದ್ದಾರೆ. ಲಂಕಾ ಪಟ್ಟಣಕ್ಕೆ ಹನುಮಂತ ಬೆಂಕಿ ಹಚ್ಚಿದ್ದು ನೋಡಬೇಕು. ಗಲಾಟೆ ಮಾಡಬೇಡಿ. ಸಲಾಂ ಮಾಡ್ತೇನೆ. ಹಡೆದವ್ವಗಳಾ, ಗುಜುಗುಜು ಮಾಡಬೇಡಿ. ಇನ್ನೇನು ಆಟ ಸುರುವಾಯಿತು" ಎಂದು ಏನೇನೋ ಸಪಿಸಪಿ ಮಾತು ಹೇಳುತ್ತ ತನ್ನ ನೀಳ ಗಡ್ಡದ ಮೇಲೆ ಕೈಯಿಟ್ಟು ನೀವುತ್ತ ಹೇಳುತ್ತಿದ್ದಂತೆ, ಮೃದಂಗ ಬಾರಿಸಲು ಬರದಿದ್ದರೂ ಕ್ಷೌರದ ಗದಿಗೆಪ್ಪ ಜರಿ ರುಮಾಲು ಸುತ್ತಿಕೊಂಡು ಅಟ್ಟದ ಮೇಲೆ ಬಂದು ತನ್ನ ದೊಡ್ಡ ದೊಡ್ಡ ಮೀಸೆಗಳನ್ನು ನೇವರಿಸಿಕೊಂಡು ಮೃದಂಗವನ್ನು ದಬ್ ದಬ್ ಎಂದು

ಬಾರಿಸುತ್ತಿದ್ದ. ಗಣಪತಿ, ಸರಸ್ವತಿ ಪ್ರಾರ್ಥನೆ ಆಗುವವರೆಗೆ ಆತನೇ ಮೃದಂಗ ಬಾರಿ
ಆಮೇಲೆ ಶರ್ಕನವಳ್ಳಿ ರಾಮಪ್ಪನಿಗೆ ಮೃದಂಗ ಕೊಟ್ಟು ಹಿಮ್ಮೇಳಕ್ಕೆ ನಿಂತುಬಿಡುತ್ತಿದ್ದ.

ಎಲ್ಲಕ್ಕೂ ಮೊದಲು ಪರದೆ ಮುಂದೆ ನಾನು ಬಂದು ನಿಂತೊಡನೆ ಜನವೆಲ್ಲ ಹೋ
'ಹೋ! ಆಟ ಸುರುವಾತು. ಮಾಸ್ತರು ಈಗ ಬಾಸಣ ಸುರು ಮಾಡಿದರು' ಎನ್ನುತ್ತ ಜ
ಗದ್ದಲ ಗಿದ್ದಲ ಮಾಡದೆ ಸ್ತಬ್ಧವಾಗಿ ಬಿಡುತ್ತಿದ್ದರು. ನಾನು ಒಂದು ತುಂಡು ಭಾಷಣ ಮಾ
ಜನಕ್ಕೆ ವಿನಂತಿಸಿಕೊಂಡು ನಿಲ್ಲಿಸಿದೊಡನೆಯೇ... 'ಶ್ರೀಗಜಾನನಂ ಭೂತಗಣಾಧಿ ಸೇವಿತಂ..
ಬಂಗಾರೆಪ್ಪನ ಗಂಡುದನಿಯಲ್ಲಿ ಹೊರಬರುತ್ತಿತ್ತು. ಮುಖವೀಣೆ ಬೇರೆ ರಾಗಾಲಾಪ
ಮಾಡುತ್ತಿತ್ತು. ಮೃದಂಗ ದುಮುಗುಡುತ್ತಿತ್ತು. ಜನಸಾಗರವೆಲ್ಲ ಸ್ತಬ್ಧವಾಗುತ್ತಿತ್ತು. ನಾ
ಹಂದರದ ಸುತ್ತಮುತ್ತ ತಿರುಗಾಡುತ್ತ, ಬಣ್ಣದ ಮನೆಗೆ ಹೋಗಿ ಮೇಕಪ್ ಮಾಡುವವರಿ
ಸಲಹೆ ಕೊಡುತ್ತ, ಜನಗಳು ಯಾವ ಯಾವ ಪಾತ್ರಗಳ ಬಗ್ಗೆ ಏನೇನು ಮಾತಾಡುತ್ತಾ
ಎಂಬುದನ್ನು ಕೇಳುತ್ತ, ಲಂಕಾಪಟ್ಟಣಕ್ಕೆ ಬೆಂಕಿ ಹಚ್ಚಿದಾಗ ಮದ್ದಿನಿಂದ ಕುಳಿತ ಜನ
ಏನಾದರೂ ಅಪಾಯ ಗಿಪಾಯ ಆದೀತೆ? ಎಂದು ಅದರ ಬಗ್ಗೆ ಮದ್ದಿನವರ ಸಂಗ
ಸಮಾಲೋಚನೆ ಮಾಡುತ್ತ, ಪಾತ್ರಧಾರಿಗಳಿಗೆ ಮಾತುಕತೆ ಹೇಗಿರಬೇಕೆಂಬ ಸಲಹೆ ಸೂಚ
ಕೊಡುತ್ತ, ಕಥೆ-ಸಂಭಾಷಣೆ ಬಗ್ಗೆ ಯಾರಾದರೂ ಏನಾದರೂ ಮಾತನಾಡುತ್ತಾರೆಯೋ
ಎಂಬುದನ್ನು ಸೂಕ್ಷ್ಮವಾಗಿ ಗಮನಿಸುತ್ತ ಗಾಳಿಯಂತೆ ಎತ್ತೆತ್ತಲೂ ಸುಳಿದಾಡುತ್ತಲೇ ಇರುತ್ತಿ
ನಾನು ಬರೆದ ಒಂದು ಕಥೆ ಆಟವಾಗಿ ಅಟ್ಟವೇರಿ ಇಂದು ಪ್ರದರ್ಶಿತವಾಗುತ್ತಿರುವುದ
ನನಗೆ ಅತ್ಯಂತ ಹೆಮ್ಮೆಯುಂಟಾಗಿ ನಾನು ಒಮ್ಮೆಲೇ ಹತ್ತು ಮೊಳ ಬೆಳೆದವನಂತಾ
ಹೋಗಿದ್ದೆ. ಒಂದು ರೀತಿಯಲ್ಲಿ ನನಗೆ ಚತುರ್ಭುಜಗಳೇ ಮೂಡಿದಂತಾಗಿದ್ದವೆನ್ನಬೇಕು
ಅಹಮ್ಮದ ಸಾಹೇಬನ ಹಿರಿಯತನವಿಲ್ಲದೆ, ಅವನ ಮೇಲ್ವಿಚಾರಣೆಯಿಲ್ಲದೆ ಹಿರೇಕಾಂಶಿಯ
ಯಾವ ಕಾರ್ಯಗಳೂ ಆಗುತ್ತಲೇ ಇರಲಿಲ್ಲ. ಅವನೊಬ್ಬ ಆ ಊರಿನ ಅನಭಿಷಿ
ಪಟ್ಟಾಧಿಕಾರಿಯಂತೆ ಎಲ್ಲರ ಪ್ರೀತಿಗೂ ಪಾತ್ರನಾದ ಹಿರಿಯ ಮನುಷ್ಯನೇ ಆಗಿರುತ್ತಿದ್ದ. ಎ
ಪಂಚಾಯಿತಿಗಳು ಅಹಮ್ಮದ ಸಾಬನ ಹಾಜರಾತಿಯಿಲ್ಲದೆ ನಡೆಯುತ್ತಿರಲಿಲ್ಲ. ಊರ ತಂ
ತಕರಾರುಗಳನ್ನು ಬಗೆಹರಿಸುವಾಗ ಅವನಿಲ್ಲದೆ ಸುಗಮವಾಗಿ ಅವು ಬಗೆಹರಿಯುತ್ತಲೇ
ಇರಲಿಲ್ಲ. ಆಟದ ದಿನ ನನ್ನಂತೆಯೇ ಅಹಮ್ಮದ ಸಾಬನೂ ಸುತ್ತಮುತ್ತೆಲ್ಲ ತಿರುಗಾಡು
ತನ್ನ ಮಾತಿನ ಮೋಡಿಯಿಂದ ಗದ್ದಲವಾಗುತ್ತಿದ್ದಲ್ಲೆಲ್ಲ "ಏನಿದು ಗದ್ದಲ, ಆಟವಾಡುವಾ
ಗದ್ದಲ ಮಾಡಿದವರು ಮುಂದಿನ ಜನ್ಮದಾಗ ದೆವ್ವಾಗಿ ಹುಟ್ಟತಾರಂತೆ" ಎನ್ನುತ್ತಿದ್ದ
ಪರಊರಿನಿಂದ ಬಂದವರನ್ನೆಲ್ಲ ಪ್ರೀತಿಯಿಂದ ಮಾತನಾಡಿಸಿ "ಇದು ನಿಮ್ಮೂರು, ನಾಟ
ನಿಮ್ಮ ಮಕ್ಕಳದ್ದು. ನಿಮಗೆಲ್ಲ ಮುಂದೆ ಒಯ್ದು ಕೂಡ್ರಿಸಬೇಕಾಗಿತ್ತು. ನೀವೆಲ್ಲ ನಮ್ಮೂರಿ
ಬಂದಿರೋದು ನಮಗೆ ದೊಡ್ಡ ಹೆಮ್ಮೆ. ಮುಂದ ಜಾಗ ಭರ್ತಿ. ಜಾಗಾ ಇದ್ದ ಇದ್ದಲ್ಲೆ
ಕುಂತು ನಿಮ್ಮ ಮಕ್ಕಳ ಆಟ ನೋಡಿ ಸಂತೋಷ ಪಡಬೇಕು" ಇತ್ಯಾದಿ ತನ್ನದೇ ಆದ ಆಕರ್ಷ
ಶೈಲಿಯ ಮಾತುಗಳಿಂದ ಸಂತೋಷಪಡಿಸಿ ಗಲಾಟೆಯಾಗದಂತೆ ಮಾಡುತ್ತಿದ್ದ. "ಅಗೊ
ರಾಮಚಂದ್ರನ ಪಾರ್ಟು ಬಂತು. ಕೈಕೆಯ ಕುಣಿತ ಬಹು ಸೊಗಸು. ನಮ್ಮೂರ ರಾಮಾಯಣ
ಶಿರಹಟ್ಟಿ ಕಂಪನಿ ರಾಮಾಯಣಕ್ಕಿಂತ ಒಂದು ತೂಕ ಹೆಚ್ಚು" ಎಂದೆಲ್ಲ ಪ್ರಶಂಸೆ ಮಾಡುತ್ತಲೆ
ಇರುತ್ತಿದ್ದ.

## ಇದ್ದಕ್ಕಿದ್ದ ಹಾಗೆ ವಿಘ್ನ ತಂದ ಪೋಲಿಸ್ ಹವಾಲ್ದಾರ್

ಆಟ ನಡೆದು ಅರ್ಧ ಮುಕ್ಕಾಲು ತಾಸಾಗಿರಬಹುದು. ಮೂಡೂರಿನಲ್ಲಿ ಕ್ಯಾಂಪ ಹಾಕಿದ್ದ ಹವಾಲ್ದಾರ ಮೂಡೂರಿನ ಎರಡು ಮೂರು ಜನ ಓಲೆಕಾರರೊಡನೆ ಇದ್ದಕ್ಕಿದ್ದಂತೆ ಅಟ್ಟದ ಮುಂದೆ ಬಂದು "ಹೇಯ್, ನಿಲ್ಲಿಸ್ರಿ ಆಟಾನ. ಹುಕ್ಕುಂ ತಂದಿದ್ದೀರೇನು ಆಟಾ ಆಡಾಕ. ಎಲ್ಲೈತಿ ಹುಕ್ಕುಂ ತೋರಿಸ್ರಿ" ಎಂದು ಕೂಗಾಡತೊಡಗಿದ. ಆಟ ಸ್ವಲ್ಪ ಹೊತ್ತು ಸ್ತಬ್ಧವಾಗಿ ಹೋಯಿತು. ಅಟ್ಟದ ಮೇಲಿದ್ದವರು ಗಾಬರಿಗೊಂಡರು. ಆ ಕಾಲದಲ್ಲಿ ಆಟ ಆಡಲು ಹಳ್ಳಿಯವರು ಮಾಮಲೇದಾರರಿಂದ ಪರವಾನಿಗಿ ತರಲೇಬೇಕಾಗಿತ್ತು. ಹಿರೇಕಾಂಶಿಯ ಪೋಲೀಸ್ ಹಾಗು ಮುಲ್ಕೀಗೌಡಿಕೆ ಆಟದಲ್ಲಿ ಹನುಮಂತನ ಪಾರ್ಟ್ ಮಾಡಿದ್ದ ಬಾಳಿಹಳ್ಳಿ ಬಸನಗೌಡನದೇ ಆಗಿತ್ತು. ಅವನು ಬಣ್ಣದ ಮನೆಯಲ್ಲಿಯೇ ಕುಳಿತು "ಯಾರವಾ ಹವಾಲ್ದಾರಾ, ನಾನು ಈ ಊರ ಪೋಲೀಸ್ ಪಾಟೀಲ್ ಇದ್ದೇನಿ. ಯಾವ ಗಲಾಟೆ, ಗದ್ದಲ, ಬೆಂಕಿ ಬೆಳಕು ಆಗದಂಗ ನೋಡಿಕೊಳ್ಳೋ ಶಕ್ತಿ ನಂಗೇ ಇದೆ. ಹುಕ್ಕುಂ ತರದಿದ್ದರೇನಾತು? ಈಗ ಊರ ವಾಲೀಕಾರ್‍ರ ಮನೆಯವರೆಲ್ಲ ಹತ್ತು ಹನ್ನೆರಡು ಜನ ಊರ ಹಿತ್ತಲ ಬಣಿವಿ, ಗುಡಿಸಲ-ಚಪ್ಪರಗಳ ಸುತ್ತಮುತ್ತೆಲ್ಲ ಗಸ್ತು ತಿರುಗೋ ಹಾಂಗ ಮಾಡೇನಿ. ಯಾವಂದೇನು? ಲೇ ಬಸ್ಯಾ, ಆ ಹವಾಲ್ದಾರ್‍ನ ಕಟ್ಟಿಹಾಕ್ರಲೆ. ಬಂದದ್ನ ನೋಡ್ಕೊಂತೇನಿ, ಆಟ ನಿಲ್ಸಬಾರ್‍ದ್ರಂತ ಹೇಳ್ರಿ" ಎಂದು ಬಣ್ಣದ ಮನೆಯಲ್ಲೇ ಗುಡುಗು ಹಾಕುತ್ತಿದ್ದ. ಬಣ್ಣದ ಮನೆ ಆಟದ ಅಟ್ಟದಿಂದ ಹತ್ತಾರು ಮಾರು ದೂರದಲ್ಲಿತ್ತು. ಕೂಡಿದ ಹತ್ತಾರು ಜನಗಳು "ಇವನ್ಯಾವನಲೇ ಕುಡುಕು ನನ ಮಗ ಒಳ್ಳೇ ಆಟ ನಡೇ ಹೊತ್ನಾಗ ಒಳ್ಳೇ ಗಲಾಟಿ ಹಚ್ಚಿಬಿಟ್ನಲ್ಲ" ಎನ್ನುವವರು ಕೆಲವರಾದರೆ ಮಕರೊಳ್ಳಿ ಗೌಡ "ಕಟ್ಟಿ ಹಾಕರ್ಲೇ ಅವನ್ನ ನೋಡಿಕೋತೇನಿ. ನೀವು ಆಟಾ ಚಾಲೂ ಮಾಡ್ರಿ. ಮಾಮಲೇದಾರ್‍ರೇನು ನಾನು ಕಾಣದವನೇ. ಹುಕ್ಕುಂ ಇಲ್ಲ ನಿಜ. ಊರಲ್ಲಿ ಗಲಾಟೆ ಗಿಲಾಟೆ ಆಗದಂಗ ನೋಡ್ಕೊಳ್ಳೋ ಶಕ್ತಿ ನಮಗಿಲ್ಲಂತೇನು. ಹಾಕಲ್ರೇ ಎರಡವಗ" ಅನ್ನುತ್ತಿದ್ದ. ಇದನ್ನೆಲ್ಲ ಹವಾಲ್ದಾರ ಗಮನಿಸಿದ್ದ. ಆದರೂ ಮೊಂಡು ಧೈರ್ಯದಿಂದ ಕೂಗಾಡುತ್ತಲೇ ಇದ್ದ.

ಹವಾಲ್ದಾರ "ಆ ಪಟೇಲ್ ಎಲ್ಲಿ ಅದಾನ, ಕರ್‍ಸರಿ ಅವನ್ನ. ಹ್ಯಾಂಗ ಆಟ ಆಡ್ಸತಾನಂತ. ಹುಕ್ಕುಂ ಇಲ್ಲದಂಗ! ಹಿಂಗ ಆಡ್ಸಾಕೇನ ಇದು ಮೊಗಲಾಯಿ ಕೆಟ್ಟು ಹೋತಂತೇನು?" ಹೀಗೆ ಸೇಂದಿ ಕುಡಿದು ಬಂದ ಅಮಲಿನಲ್ಲಿ ಮನಸ್ಸಿಗೆ ಬಂದಂತೆ ಕೂಗಾಡುತ್ತಿದ್ದ. ಅಷ್ಟರಲ್ಲಿ ಈ ಸುದ್ದಿಯನ್ನು ತಿಳಿದ ಅಹಮ್ಮದ ಸಾಬ ಎಲ್ಲಿದ್ದನೋ ಹಾಜರಾಗಿ "ಈ ಅಯೋಗ್ಯ ಚಂದಾಗಿ ನಡಿಯೋ ಆಟಾ ಕೆಡ್ಸಾಕ ಬಂದ ಕುಡುಕ ಸಾಬಾ" ಎಂದು ಬೈಯುತ್ತಲೇ ಹತ್ತಿರ ಬಂದು ವಿನಯ ಪ್ರಕಟಿಸುತ್ತ "ಸಲಾಂ ಸರ್ದಾರ್ ಕ್ಯಾವೊ" ಎಂದು ಕೈಹಿಡಿದು "ಎಲ್ಲಿಟ್ಟೇರಿ ಬುದ್ಧೀನ. ಮಕ್ಕಳು ಚಂದಾಗಿ ಆಟ ಆಡೋ ಹೊತ್ತಿನಲ್ಲಿ ಶಿವಪೂಜ್ಯಾಗ ಕರಡಿ ಬಿಟ್ಟಂಗ ಏನಿದು ಗಲಾಟೆ? ನಿಮಗ ಮಕ್ಕಳು ಇಲ್ಲೇನು. ನಿಮ್ಮ ಮಕ್ಕಳು ಪ್ರೀತಿಯಿಂದ ಆಟಾ ಆಡೋ ಹೊತ್ತಿನಾಗ ನೀವು ಆಟಾ ಕೆಡಸ್ತೀರೇನು? ಬುದ್ಧಿ ಎಲ್ಲಿಟ್ಟೇರಿ?" ಎಂದು ಕೈ ಹಿಡಿದು ಎಳೆದುಕೊಂಡು ಹೋಗುತ್ತ "ಆಟದಾಗ ಹನುಮಂತನ ಪಾರ್ಟು ನಮ್ಮೂರ್‍ರ ಗೌಡ ಬಾಳಿಹಳ್ಳಿ ಬಸವಣ್ಣೆಪ್ಪನೇ ಮಾಡ್ಯಾನ್ರೀ ಸರ್ದಾರ್. ಅವಂಗ ಮಾಮಲೇದಾರ್‍ರು ಗೊತ್ತಿಲ್ಲ, ಫೌಜದಾರ ಗೊತ್ತಿಲ್ಲ. ಆವರ್‍ನೆಲ್ಲ ಕಂಡು ಕೇಳಿಕೊಂಡು ಕೈ ಬೆಚ್ಚಗ ಮಾಡಿ ಬಂದೇ

ಆಟ ಅದ್ಭತಾ ಇದ್ದಾನ. ನಿಮಗೇನು ಗೊತ್ತು? ಅವರು ಬಣ್ಣದ ಮನ್ಯಾಗ ಇದ್ಕಂಡೇ
ಹವಾಲ್ದಾರ್ನ ಕಂಬಕ್ಕ ಕಟ್ಟಿಹಾಕಿ ಆಟ ಆಡ್ತ್ರಲೇ, ನಿಲ್ಲಸಬ್ಯಾಡ್ರಿ ಅಂತಾ ಹೇಳಿಕಳ್ಯಾನ. ನೀ
ಅಲ್ಲಿ ಇನ್ನೊಂದು ತುಸು ಹೊತ್ತಿದ್ರೆ ನಿಮ್ಮನ್ನು ಕಟ್ಟಿ ಆಟಾ ಆಡ್ಸಿಬಿಟ್ಟು ಬೆಳಿಗ್ಗೆ ಹಾನಗಲ್
ಹೋಗಿ ನಿಮ್ಮ ಫೌಜದಾರರ ಮುಂದೆ ನಿಮ್ಮ ಮೇಲೆ ಚಾಡಿ ಹೇಳಿ ನಿಮ್ಮನ್ನು ಸಿಗ್ಗಿಬಿಡು
ಸರ್ದಾರ್" ಎಂದುಬಿಟ್ಟ. ಹವಾಲ್ದಾರ ಅರ್ಧ ಇಳಿದುಬಿಟ್ಟ. ಅರ್ಧ ಅಮಲು ಮಾಯವಾ
ಕಣ್ಣುಬಿಟ್ಟ. ಕುಡಿದು ಬಂದ ಅವನಿಗೆ ಅಹಮ್ಮದ್ ಸಾಬ ಕಾರಮಂಡಕ್ಕಿ, ಹಚ್ಚಿದ ಅವಲ
ಚೆನ್ನಾಗಿ ತಿನ್ನಿಸಿ ಒಳ್ಳೆ ಚಹಾ ಮಾಡಿಸಿ ಕುಡಿಸಿ ಎರಡು ರೂಪಾಯಿ ಕೈಗಿಟ್ಟು ಬಸವಣ್ಣದೇವ
ಗುಡಿಗೆ ಕರೆದುಕೊಂಡು ಹೋಗಿ ಒಂದು ಗುಡಾರ ಹಾಸಿ ಹೊದಿಸಿ ಮಲಗಿಸಿಬಿ
ಹವಾಲ್ದಾರ ಗೊರಕೆ ಹೊಡೆಯಲು ಪ್ರಾರಂಭಿಸಿಬಿಟ್ಟ. ಮೂಡೂರಿಂದ ಬಂದ ಇಬ್ಬ
ವಾಲೀಕಾರರನ್ನು ಅಲ್ಲಿಯೇ ಇರಲು ಹೇಳಿ. "ಈ ಸಾಬು ಮತ್ತೇನಾದರೂ ಗಲಾಟೆ ಗಿಲಾ
ಮಾಡಿದರ ನನಗ ಬಂದು ಹೇಳ್ರಿ" ಎಂದು ಹೇಳಿ ಅಟ್ಟದ ಹತ್ತಿರ ಬಂದುಬಿಟ್ಟ. ಅಷ್ಟರ
ಆಟ ಭರ್ಜರಿಯಾಗಿ ನಡೆಯುತ್ತ, ಸೀತೆ ಕಳಕೊಂಡ ರಾಮ ಸುಗ್ರೀವನ ಹತ್ತಿರ ಬಂ
ಪ್ರಸಂಗ ನಡೆಯುತ್ತಿತ್ತು. ಇನ್ನೇನು ಸ್ವಲ್ಪ ಹೊತ್ತಿನಲ್ಲಿ 'ಟಕ್ ಟಕ್' ಎನ್ನುತ್ತ ಹನುಮಂ
ಬರುವ ಸಿದ್ಧತೆಯಲ್ಲಿದ್ದ. ಹವಾಲ್ದಾರನ ಅಬ್ಬರ ಕಡಿಮೆ ಮಾಡಿದ ಅಹಮ್ಮದ ಸಾಬ ಬಣ್ಣ
ಮನೆಗೆ ಬಂದು ಬಾಳಿಹಳ್ಳಿ ಬಸವಣ್ಣೆಪ್ಪನಿಗೆ "ಆ ಹುಲೀನ ತಿನಿಸಿ, ಉಣಿಸಿ ಮಲಗಿ
ಬಂದೇನಿ. ಇನ್ನೇನು ಆಟ ಮುಗ್ದು ಎಲ್ಲರೂ ಬಣ್ಣ ತೊಳಕಂಡ ಮ್ಯಾಲ ಅಂವಾ ಏಳಾ
ಹನುಮಂತನ ಪಾರ್ಟು ಭರ್ಜರಿ ನಡೀಲಿ. ನಾನು ಉಳಿದದ್ದೆಲ್ಲ ನೋಡ್ಕಂತೇನಿ. ಹಿರೇಕಾ
ಅಂದ್ರ ಅವನೆಲ್ಲೋ ಕಾಡಹಳ್ಳಿ ಅಂತಾ ತಿಳದಾನೋ ಏನೋ ಮಂಗ್ಯನ ಮಗ" ಎಂದ
ನಗೆಯಾಡ ಹತ್ತಿದ. ಬಣ್ಣದ ಮನೆಯಲ್ಲಿದ್ದ ಎಲ್ಲರಿಗೂ ಧೈರ್ಯ ಬಂದು ನಕ್ಕು ತಮ್ಮ ತವ
ಕೆಲಸದಲ್ಲಿ ಉತ್ಸಾಹಿತರಾಗಿ ಹೋದರು.

ನಿಜವಾಗಿಯೂ ಬಸವಣ್ಣೆಪ್ಪಗೌಡ ತಾಲೂಕು ಮಟ್ಟದಲ್ಲಿ ಒಳ್ಳೇ ಹೆಸರು ಗಳಿಸಿದ
ಊರಿಗೆ ಯಾವುದೇ ರೆವಿನ್ಯೂ ಆಫೀಸರ್ ಬರಲಿ, ಪೋಲೀಸ್ ಆಫೀಸರೇ ಬರಲಿ ಅವರೇ
ಇವರ ಆದರೋಪಚಾರದಿಂದ ತೃಪ್ತರಾಗಿ ಹೋಗುತ್ತಿದ್ದರು. ಹಾಲು, ಮೊಸರು, ತುಪ್ಪ
ಬೆಣ್ಣೆಗಳಿಗೆ ಬಸವಣ್ಣೆಪ್ಪನ ಮನೆಯಲ್ಲಿ ಕೊರತೆಯಿರಲಿಲ್ಲ. ಕರೆಯುವ ಎಂಟು ಹತ್ತು ದನಗಳ
ಸದಾ ಅವನ ಮನೆಯಲ್ಲಿರುತ್ತಿದ್ದವು. ಊಟ ಉಪಚಾರಗಳಲ್ಲಿ ತುಂಬಾ ಧಾರಾ
ತೋರಿಸುತ್ತಿದ್ದ ಅವನು ಬಂದ ಆಫೀಸರರಿಗೆಲ್ಲ ಅವಲಕ್ಕಿ ಮೊಸರು, ಹಚ್ಚಿದವಲಕ್ಕಿ ಮೊಸರು
ಹಾಲುಗಳನ್ನು ಯಥೇಚ್ಛವಾಗಿ ತಿನ್ನಿಸಿ ಕುಡಿಸುತ್ತಿದ್ದ. ಅವರು ಊಟ ಮಾಡುವ ಪ್ರಸಂ
ಬಂದರೆ ಗಂಧಸಾಲಿಅಕ್ಕಿಯ ಅನ್ನ, ಪಾಯಸ ಮಾಡಿಸುತ್ತಿದ್ದ. ಕಂಪಾಗಿ ಮಾಡಿದ
ಸಾರುಪಲ್ಯದೊಡನೆ ಊಟಮಾಡಿದ ಯಾವ ಆಫೀಸರೇ ಆಗಲಿ ಚಕಾರವನ್ನೆತ್ತದೆ ಈ
ಗೌಡನನ್ನು ಹೊಗಳಿಯೇ ಹೋಗುತ್ತಿದ್ದರು. "ಏ ಗೌಡ, ಎಂಥಾ ಅಕ್ಕೀ ಇವು? ಅನ್ನ ಎಷ್ಟು
ಕಂಪು, ಎಷ್ಟು ಮಧುರ" ಅಂದರೆ, ಬಸವಣ್ಣೆಪ್ಪ "ಇವು ಗಂಧಸಾಲಿ ಅಕ್ಕಿ ಸಾಹೇಬ್ರ. ಮುಂದಿನ
ಮೌಸಮಿಗೆ ಮನೆಗೆ ತುಸ ಅಕ್ಕಿ ಕಳ್ಸತೀನಿ" ಎಂದು ಹೇಳಿ ಕಳಿಸುತ್ತಿದ್ದ. ಆಗಾಗ ನಾಲ್ಕೈದು
ಸೇರು ಅಕ್ಕಿಯನ್ನು ಕೈಯಲ್ಲಿ ಹಿಡಿದುಕೊಂಡು ಹಾನಗಲ್ಲಿಗೆ ಹೋಗಿ ಮುಖ್ಯಮುಖ
ಆಫೀಸರರಿಗೆ ತಲುಪಿಸುತ್ತಿದ್ದ. ಹಬ್ಬ ಹರಿದಿನಗಳಲ್ಲಿ ಹಾಲು-ಬೆಣ್ಣೆ, ವೀಳ್ಯದೆಲೆ, ಅಡಿಕೆಗೊನೆ

ಬಾಳೆಎಲೆ, ಸಂಪಿಗೆ ಹೂವು, ಸುರಗಿ ಹೂವಿನ ಸರ ಇವನ್ನೆಲ್ಲ ನಗುನಗುತ್ತ ಹೋಗಿ ಸಾಹೇಬರ ಮನೆಗಳಿಗೆ ಹಾಕಿ ಬರುವ ಚಾತುರ್ಯ ಇವನಿಗಿತ್ತು. ಹೀಗಾಗಿ ಈ ಗೌಡನ ಬಗ್ಗೆ ಎಲ್ಲರಿಗೂ ದಾಕ್ಷಿಣ್ಯವಿತ್ತು. ಆದ್ದರಿಂದಲೇ ಧೈರ್ಯವಾಗಿ ಲೈಸೆನ್ಸ್ ಇಲ್ಲದೆ ಆಟ ಆಡಿಸುತ್ತಿದ್ದ. ಬಸವಣ್ಣೆಪ್ಪ ಆಟಕ್ಕೆ ಸಿದ್ಧತೆ ಮಾಡಿಕೊಳ್ಳುವ ಪೂರ್ವದಲ್ಲಿ ತಾಲೂಕಿನ ಫೌಜದಾರರಲ್ಲಿ "ನಮ್ಮೂರ್ರಲ್ಲಿ ಆಟ ಆಡ್ತೇವಿ ಸರ್ದಾರ್ರೇ. ಮತ್ತೆ ಹುಕ್ಕುಂ ಗಿಕ್ಕುಂ ಏನಾದರೂ ತಕ್ಕೋಬೇಕೋ ಹ್ಯಾಂಗೆ" ಅಂದನಂತೆ. ಆಗ ಫೌಜದಾರರು "ಏ ಗೌಡಾ, ಆಡ್ಯಾ ಹೋಗ ನಿನ. ತಕ್ಕ ಬಂದೋ ಬಸ್ತ್ ಮಾಡಿ ಆಡಿಕ್ಯಾ. ನೀನೇ ಊರ ಪೋಲೀಸ್ ಪಾಟೀಲ ಇದ್ದೀ. ಜವಾಬ್ದಾರಿ ನಿನ್ನದ ಇರುವಾಗ ಯಾವಂದೇನು ಹೋಗ ನಿನ" ಅಂದಿದ್ದನಂತೆ. ಈ ಕಾರಣವಾಗಿ ಬಸವಣ್ಣೆಪ್ಪ ಹುಕ್ಕುಂಗಿಕ್ಕುಂಗಳ ತಂಟೆಗೆ ಹೋಗಲಿಲ್ಲವಂತೆ. ಗೌಡನ ವರ್ಚಸ್ಸು ಹವಾಲ್ದಾರನಿಗೆ ಗೊತ್ತಿದ್ದರೂ ಕುಡಿದ ಅಮಲಿನಲ್ಲಿ ಕೂಗಾಡಿದ. ಅಲ್ಲದೆ ಅದು ಒಂದು ರೀತಿಯ ಕಸಬು. ಹೀಗೆ ಗದ್ದಲ ಮಾಡಿದಾಗಲೇ ಅಲ್ಲವೆ ಅವರಿಗೆ ಶಾಕಾಯ ಲವಣಾಯ ಕಾರ್ಯಸಿದ್ಧಿಯಾಗುವುದು? ಇವನ ಈ ಗಲಾಟೆಗೆ ಬಸವಣ್ಣೆಪ್ಪ ಹೆದರುವವನೇ ಅಲ್ಲ. ಆಗಿನ ಕಾಲ, ಗೌಡರು ಬಹುವರ್ಚಸ್ವಿಗಳಾಗಿರುತ್ತಿದ್ದರು. ಅವರಿಗೆ ಅಧಿಕಾರವೂ ಬಹಳ ಇತ್ತು. ಅವರು ಒಂದು ಗುಡುಗು ಹಾಕಿದರಾಯಿತು, ಊರಜನ ಹೆದರುತ್ತಿದ್ದರು. ಪುಂಡಪೋಕರಿಗಳನ್ನಂತೂ ಕೆಲವು ಗೌಡರು ಮಟ್ಟಹಾಕಿಬಿಡುತ್ತಿದ್ದರು. ಆದರೆ ಕಚ್ಚೆಹರಕಗೌಡ ಎಂದು ಜನಕ್ಕೆ ಗೊತ್ತಾದರೆ ಯಾರೂ ಹೆದರುತ್ತಿರಲಿಲ್ಲ. ಬಸವಣ್ಣೆಪ್ಪ ಸಾತ್ವಿಕನಾದ ಗೌಡ. ಕೋಪ ಬಂದರೆ ಮಾತ್ರ ವೀರಭದ್ರ. ಅದು ಬರುತ್ತಿದ್ದುದೂ ಕಡಿಮೆ. ಹವಾಬ್ದಾರ ಬಂದು ಗಲಾಟೆ ಮಾಡಿದಾಗ ಬಣ್ಣ ಬಳಿದುಕೊಂಡು ಬಣ್ಣದ ಮನೆಯಲ್ಲಿದ್ದದ್ದರಿಂದ ಹವಾಲ್ದಾರನ ಮಾನ ಉಳಿಯಿತು. ಇಲ್ಲದಿದ್ದರೆ ಏನು ಮಾಡುತ್ತಿದ್ದನೋ. ಆದರೆ ಗಲಾಟೆ ಮಾಡದಂತೆ ನೋಡಿಕೊಳ್ಳಲು ಅಹಮ್ಮದ ಸಾಬನೊಬ್ಬನಿದ್ದನಲ್ಲಾ! ಅವನು ಯಾವ ಅಹಿತಕರ ಪ್ರಸಂಗಗಳಾಗದಂತೆ ಎಲ್ಲರನ್ನೂ ತಮ್ಮಣಿಗೊಳಿಸಿಬಿಟ್ಟ.

ಈ ಸಮಯದಲ್ಲಿ ನನಗೆ ಹೆದರಿಕೆಯೇನೂ ಆಗಲಿಲ್ಲ. ಏಕೆಂದರೆ ನನಗೆ ಬಾಳಿಹಳ್ಳಿ ಬಸವಣ್ಣೆಪ್ಪನ ಬಲದ ಅರಿವಿತ್ತು. ಬಸವಣ್ಣೆಪ್ಪಗೌಡ-ಅಷ್ಟೆ. ಗೌಡನ ಗೌಡಿಕೆಯ ಅರ್ಧಪಾಲೂ ನನ್ನದೇ ದರ್ಬಾರು. ಬರವಣಿಗೆಯ ಕೆಲಸವೆಲ್ಲ ನನ್ನದೇ. ಬಸವಣ್ಣೆಪ್ಪನಿಗೆ ಅದೊಂದೂ ಗೊತ್ತಿರಲಿಲ್ಲ. ಜನನ ಮರಣ ಲೆಕ್ಕ ನನ್ನದು. ಉಳಿದ ಉಸ್ತುವಾರಿ ಬರವಣಿಗೆ ನನ್ನದು. ಊರಿಗೆ ಬಂದು ಹೋದ ಗ್ಯಾಂಗಿನ ಜನರ ತಪಶೀಲು ಬರವಣಿಗೆ ನನ್ನದು. ಹೀಗೆ ಅರ್ಧ ಗೌಡನೂ ಕೂಡ ನಾನಾಗಿದ್ದೆ. ಹಾನಗಲ್ಲಿನಿಂದ ಆಗಾಗ ಬರುವ ಕುಲಕರ್ಣಿ ಬಸವಣ್ಣೆಪ್ಪನಿಗೆ ಬಹಳ ಹೊಂದಿಕೊಂಡಿದ್ದ. ಗೌಡನಿಗೆ ಯಾವ ತೊಂದರೆಯಾಗದಂತೆ ಎಲ್ಲ ರಿಕಾರ್ಡನ್ನೂ ಅವನು ತೀರ್ಪುಗೊಳಿಸುತ್ತಿದ್ದ. ಅವನು ಏನು ಹೇಳಿದರೂ ನನ್ನನ್ನೇ ಕೇಳುತ್ತಿದ್ದ. ಬಸವಣ್ಣೆಪ್ಪನಿಂದ ಅವನಿಗೂ ಬಹು ಪ್ರಯೋಜನವಿತ್ತು. ಈ ಕಾರಣವಾಗಿ ತಾಲೂಕಿನ ಅರ್ಧಮರ್ಧ ವರಿಷ್ಠ ಅಧಿಕಾರಿಗಳ ಪರಿಚಯವೂ ನನಗೆ ಇತ್ತು. ಹವಾಲ್ದಾರ ನನಗೆ ಪರಿಚಿತನೇ ಆದರೂ ಕುಡಿದ ಅಮಲಿನವರೊಡನೆ ಮರ್ಯಾದೆವಂತರು ಮಾತನಾಡುವುದು ಸಲ್ಲದೆಂದು ಎಲ್ಲವನ್ನೂ ಅಹಮ್ಮದ್ ಸಾಹೇಬನಿಗೆ ಬಿಟ್ಟುಕೊಟ್ಟು ಬಿಟ್ಟಿದ್ದೆ. ಅಹಮ್ಮದ ಸಾಬ ಎಲ್ಲವನ್ನೂ ಸರಿಪಡಿಸಿಬಿಟ್ಟ. ಮುಸ್ಲಿಂ ಅಧಿಕಾರಿ ಯಾರೇ ಬರಲಿ ಅಹಮ್ಮದ್ ಸಾಬ

ಹಾಜರು. ನಮ್ಮ ಶಾಲೆಯ ಇನ್‌ಸ್ಪೆಕ್ಟರ್ ಒಬ್ಬರು ಲಗಥಕ್ ಎಂಬ ಹೆಸರಿನವರು ಶಾಲಾ ಇನ್‌ಸ್ಪೆಕ್ಷನ್‌ಗೆ ಬಂದಾಗ ಅವರೆದುರಿಗೆ ನನ್ನನ್ನು ಹೊಗಳಿ ಹೊಗಳಿ ಆಕಾಶಕ್ಕೇರಿಸಿ "ನಮ್ಮೂರ್ರಿಗೆ ಇಂಥ ಮಾಸ್ತರು ಹಿಂದೆ ಬಂದಿದ್ದಿಲ್ಲ, ಮುಂದೆ ಬರೋದಿಲ್ಲ ಬಿಡಿ" ಎಂದು ಮನೆಗೆ ಕರೆದುಕೊಂಡು ಹೋಗಿ ಕೋಳಿಗೀಳಿ ಕೊಯ್ಸಿ ಅಡಿಗೆ ಮಾಡಿ, ಊಟ ಮಾಡಿಸಿ ಪ್ರಸನ್ನಗೊಳಿಸಿಬಿಟ್ಟಿದ್ದ. ಆ ಮುದುಕನ ಸಹೃದಯತೆಯ ಫಲವಾಗಿ ಊರ ಹೆಣ್ಣು ಗಂಡು ಎಲ್ಲರೂ ಅವನನ್ನು ಗೌರವಿಸುತ್ತಿದ್ದರು. ಅವನಿಗೆ ಹಿಂದೂ-ಮುಸ್ಲಿಂ ಭೇದ ಗೊತ್ತೇ ಇರಲಿಲ್ಲ ಎಲ್ಲರ ಮನೆಗೂ ಹೋಗಿ ಹೆಂಗಸರನ್ನು ಮಾತನಾಡಿಸಿ ನಗಿಸಿ ಕುಣಿಸಿ ಬರುತ್ತಿದ್ದ.

ಅಟ್ಟಕ್ಕೆ ರಂಗು ಏರುವುದು ಹನುಮಂತ ಆಟಕ್ಕೆ ಬಂದ ಮೇಲೆಯೇ. ಮೊದಲ ಸಲ ಅಟ್ಟಕ್ಕೆ ಹನುಮಂತ ಬರುವಾಗ ಅಟ್ಟದ ಮುಂಭಾಗದ ಜನ ಮಧ್ಯದಲ್ಲಿ ಪಂಜು ಹಚ್ಚಿ ಲಾಲಿಯಲ್ಲಿ ಕುಣಿಕುಣಿದು ಟರ್-ಟರ್ ಎನ್ನುತ್ತ ಬರುತ್ತಿದ್ದಂತೆ ನಿದ್ರೆಯಲ್ಲಿದ್ದವರೆಲ್ಲ ಎಚ್ಚರಗೊಂಡು 'ಹನುಮಂತ-ಹನುಮಂತ' ಎನ್ನುತ್ತ ಮೈಮುರಿದು ಎದ್ದು ಕುಳಿತುಬಿಡುತ್ತಿದ್ದರು. ಅಶೋಕವನದಲ್ಲಿ ಸೀತೆ ಇರುವುದನ್ನು ಅಟ್ಟದಿಂದ ಹತ್ತು ಮಾರುಗಳ ದೂರದಲ್ಲಿ ಬಾಳೆಕಂಬ, ಬಗನಿ, ತೆಂಗಿನಗರಿಗಳ ಸೊಗಸಾದ ಮಂಟಪದಲ್ಲಿ ಕುಳ್ಳಿರಿಸಿ ಅಲ್ಲಿ ಒಂದು ಗ್ಯಾಸ್‌ಲೈಟನ್ನು ಕಟ್ಟಿರುತ್ತಿತ್ತು. ಇದೇ ಒಂದು ರೀತಿಯ ಹೊಸ ಏರ್ಪಾಡು. ಇದು ಮಲೆನಾಡಿನ ಜನಗಳನ್ನೆಲ್ಲ ಬೆರಗುಗೊಳಿಸುತ್ತಿತ್ತು. ಸೀತೆಯನ್ನು ಕಾಣಲು ಹೋಗುವಾಗಲೇ ಹನುಮಂತನ ಪಾತ್ರದ ಅಬ್ಬರ ಆರ್ಭಟ ನೋಡಬೇಕು. ಅಟ್ಟದಿಂದ ಅಶೋಕವನದವರೆಗೆ ಎರಡು ದೊಡ್ಡ ಸೆಳ್ಳುಗಳನ್ನು ಕಟ್ಟಿರುತ್ತಿತ್ತು. ಒಂದು ಹಗ್ಗದ ಮೇಲೆ ಕಾಲಿಟ್ಟು ಇನ್ನೊಂದು ಹಗ್ಗವನ್ನು ಹಿಡಿದು ಲಾಗ ಹಾಕುತ್ತ ಟರ್ ಟರ್ ಎಂದು ಚೀರುತ್ತ ಹಲ್ಲು ಕಿರಿಯುತ್ತ, ಮೈ ತುರಿಸಿಕೊಳ್ಳುತ್ತ ಹೊರಟನೆಂದರೆ ಜನವೆಲ್ಲ ಮೈಯೆಲ್ಲ ಕಣ್ಣಾಗಿ ನೋಡುತ್ತ ತಮ್ಮನ್ನೇ ತಾವು ಮೈಮರೆಯುತ್ತಿದ್ದರು. ಇತ್ತ ಭಾಗವತಣ್ಣ ಬಂಗಾರೆಪ್ಪ ಅತ್ಯುತ್ಸಾಹದಿಂದ,

ಹಾರಿದನು ಹನುಮಂತ ಸೀತಾದೇವಿಯಲ್ಲಿಗೆ
ತೋದಿನ್ನಾ ಧಿನ್ನಾ ಕೃಡತಿಕ ಧೋದಿನ್ನಾ ಧೋದಿನ್ನಾ
ತೈತಯ್ಯಾ...ತೈತಯ್ಯಾ

ಇತ್ಯಾದಿಯಾಗಿ ಹಾಡನ್ನು ಹಾಡುತ್ತಿದ್ದಂತೆ ಮದ್ದಳೆ ದುಮುಗುಡುತ್ತಿತ್ತು. ಮುಖವೀಣೆ ಚೀರುತ್ತಿತ್ತು. ಹಿಮ್ಮೇಳ ಉತ್ಸಾಹದಿಂದ ಉಚ್ಚಕಂಠದಿಂದ ಕೂಗುತ್ತಿತ್ತು. ಆಟ ರಂಗಾಗಿ ಹೋಗುತ್ತಿತ್ತು. ಹೀಗೆ ಕುಣಿಕುಣಿದು ಬೇರೊಂದು ಅಟ್ಟದಲ್ಲಿ ಇರುವ ಸೀತೆಯನ್ನು ಹನುಮಂತ ಕಂಡು ಅಲ್ಲಿಯೇ ಸಂಭಾಷಿಸುತ್ತಿದ್ದ. ಇದಾದ ನಂತರ ಅಶೋಕವನ ದಹನ. ಅದೊಂದು ಹಳ್ಳಿಯವರಿಗೆ ಅದ್ಭುತ ದೃಶ್ಯ. ಕಾರ್ಡುಬೋರ್ಡಿನಲ್ಲಿ ಬರೆದ ದೊಡ್ಡ ಹನುಮಂತ ಹಿಂಬದಿಯ ಎರಡು ಹಗ್ಗಗಳಿಗೆ ಅಳವಡಿಸಿದ್ದ ರಿಂಗುಗಳ ಆಶ್ರಯದಿಂದ ಹಾರಿ ಲಂಕಾ ಪಟ್ಟಣಕ್ಕೆ ಹೋಗಬೇಕಾಗಿತ್ತು. ಅದಕ್ಕಾಗಿ ಹನುಮಂತನ ಚಿತ್ರದ ಹಿಂಬದಿಯಲ್ಲಿ ಕಟ್ಟಿದ ಶಕ್ತಿಯುತವಾದ ಎರಡು ಬಾಣಗಳಿಗೆ ಏಕಕಾಲದಲ್ಲಿ ಬೆಂಕಿ ಕೊಟ್ಟ ಕೂಡಲೇ ಬೆಂಕಿಯನ್ನುಗುಳುತ್ತ ಸರ್ ಎಂದು ಹನುಮಂತನ ಚಿತ್ರ ಹತ್ತಿಪ್ಪತ್ತು ಮಾರುಗಳ ದೂರದಲ್ಲಿ ಮಾಡಿದ್ದ ಕಾಗದದ ಲಂಕಾಪಟ್ಟಣಕ್ಕೆ ಹೋಗಿ ಅಪ್ಪಳಿಸುತ್ತಿತ್ತು. ಅಷ್ಟು ಹೊತ್ತಿಗೆ ಅಲ್ಲಿನ

ಮದ್ದಿಗೆಲ್ಲ ಬೆಂಕಿ ಹಚ್ಚಲಾಗುತ್ತಿತ್ತು. ಒಮ್ಮೆಲೆ ಗರ್ನಲ್ಲುಗಳ ಸಿಡಿತ, ಸುರುಬತ್ತಿಯ ಕೋರೈಸುವ ಉರಿತ, ಮೇಲೆ ಹಾರಿಹೋಗುವ ಬಾಣಗಳ ಮೊರೆತ, ಪಟಾಕಿಗಳ ಸಿಡಿತ ಇವೆಲ್ಲ ನಾಲ್ಕೈದು ನಿಮಿಷ ಆಶ್ಚರ್ಯಕರ ಒಂದು ದೃಶ್ಯವನ್ನು ನೋಡುವವರಿಗೆ ಒದಗಿಸುತ್ತಿತ್ತು. ಭಯಭ್ರಾಂತರನ್ನಾಗಿಸಿ ಬಿಡುತ್ತಿತ್ತು. ಈ ಎಲ್ಲ ಕಾರಣಗಳಿಂದ ಹಿರೇಕಾಂಶಿಯ ಸಂಪೂರ್ಣ ರಾಮಾಯಣ ಮಲೆನಾಡಿನಲ್ಲೆಲ್ಲ ಅತ್ಯಂತ ಪ್ರಸಿದ್ಧಿಗೊಂಡು ಹೋಯಿತು. ಆ ಕಾಲದಲ್ಲಿ ಇದೊಂದು ನೂತನ ಮಾದರಿಯ ವೈಜ್ಞಾನಿಕ ದೃಶ್ಯವಾಗಿದ್ದಂತೂ ನಿಜ. ಅಗಸನಹಳ್ಳಿ, ತುಮಕಿ ಕೊಪ್ಪ, ಡೋರಹಳ್ಳಿ ಮೊದಲಾದ ಅನೇಕ ಊರುಗಳ ಜನಗಳು ತಮ್ಮ ತಮ್ಮ ಊರುಗಳಲ್ಲಿ ಆಟ ಆಡಬೇಕೆಂದು ವೀಳ್ಯ ಕೊಟ್ಟರು. ಎಲ್ಲ ಊರುಗಳಿಗೆ ಹೋಗಿ ಆಟ ಆಡಲು ಆಗದಿದ್ದರೂ ಅಗಸನಹಳ್ಳಿ, ತುಮರಿಕೊಪ್ಪಗಳಲ್ಲಿ ಭರ್ಜರಿಯಾಗಿ ಆಟ ಆಡಿಸಿಬಿಟ್ಟರು. ಅಗಸನಹಳ್ಳಿಯಲ್ಲಿ ಆಡಿದ ಆಟದಿಂದ ಸೊರಬ ತಾಲೂಕಿನಲ್ಲೆಲ್ಲ ಹಿರೇಕಾಂಶಿಯ ಸಂಪೂರ್ಣ ರಾಮಾಯಣದ ಖ್ಯಾತಿ ಹರಡಿತು. ಬಹಳ ಊರುಗಳ ಜನಗಳು ತಮ್ಮ ತಮ್ಮ ಊರುಗಳಲ್ಲಿ ಈ ಆಟ ಆಡಿಸುವ ಉತ್ಸಾಹ ತೋರಿದರೂ, ಎಲ್ಲರೂ ವ್ಯವಸಾಯಗಾರರೇ ಆಗಿದ್ದ ಆಟದ ಹುಡುಗರು ಒಪ್ಪಲಿಲ್ಲ.

ಈ ಆಟದ ಪರಿಣಾಮವಾಗಿ ಈ ಕಥೆ ಬರೆದವನೂ, ಒಂದು ರೀತಿಯಿಂದ ಆ ನಿರ್ದೇಶಕನೂ ಆಗಿದ್ದ ನನ್ನ ಕೀರ್ತಿ ಎಲ್ಲ ಕಡೆಗೂ ಹರಡಿ ಒಮ್ಮೆಲೆ ಹತ್ತು ಮೊಳ ಬೆಳೆದ ಬಹು ದೊಡ್ಡಮನುಷ್ಯನೇ ಆಗಿಬಿಟ್ಟೆ. ಸ್ವಲ್ಪ ಮಟ್ಟಿಗೆ ಗರ್ವವೂ ಬಂತು. ಸೀತೆಯ ಪಾತ್ರ ಮಾಡಿನ ನಾಗನಗೌಡ, ಕೈಕೆಯ ಪಾತ್ರ ಮಾಡಿದ ಶಿವು ಇವರುಗಳು ತಮ್ಮ ಒನಪು ವೈಯಾರ, ಕುಣಿತ ಮೊದಲಾದವುಗಳಿಂದ ಮಲೆನಾಡಿನ ಹೆಣ್ಣುಗಳು ಇವರ ಬಗ್ಗೆ ಬಾಯಿ ಬಾಯಿ ಬಿಡಹತ್ತಿದವಂತೆ. ಈ ಹುಡುಗನಿಗೆ ಹೆಣ್ಣು ಕೊಟ್ಟು ಲಗ್ನ ಮಾಡಲು ಅನೇಕರು ಮುಂದೆ ಬಂದರು. ನಾಗನಗೌಡ ಎಂಬ ಹುಡುಗ ನೋಡಲು ಸುಂದರ. ಹೆಣ್ಣು ಪಾರ್ಟ್ ಮಾಡಿ ಅಟ್ಟಕ್ಕೆ ಬಂದರೆ ಇವನನ್ನು ಗಂಡು ಹುಡುಗನೆಂದು ಗುರುತಿಸುವುದೇ ಕಷ್ಟವಾಗುತ್ತಿತ್ತು. ಅಷ್ಟೊಂದು ಬೆಡಗು ಬಿನ್ನಾಣ ಇವನದು. ತನ್ನ ಒನಪು ಒಯ್ಯಾರಗಳಿಂದ ಅನೇಕ ಹುಡುಗಿಯರ ಮನಸ್ಸನ್ನೇ ಗೆದ್ದುಬಿಟ್ಟ. ಮುಂದೆ ಇವನನ್ನು ಬಲೆಗೆ ಹಾಕಿಕೊಳ್ಳಲು ಅನೇಕ ಹುಡಿಗಿಯರು ಪ್ರಯತ್ನಿಸಿದ್ದರೂ ಯಾರ ಬಲೆಗೂ ಬೀಳದ ಈತ ನಾಲ್ಕು ವರ್ಷವಾದ ಮೇಲೆ ಎರಡು ಮೂರು ತಳವಾರರ ಹುಡಿಗಿಯರ ಪ್ರೇಮಪಾಶಕ್ಕೆ ಸಿಕ್ಕುಬಿದ್ದು ಪಲ್ಲೀ ಹುಲ್ಲಾದ. ಈ ಹುಡುಗಿಯರ ಸಹವಾಸದಿಂದ ಬರಬರುತ್ತಾ ಹಿರಿಯರು ಮಾಡಿದ ಆಸ್ತಿಯನ್ನು ಕಳಕೊಂಡನಂತೆ. ಇವೆಲ್ಲ ನಾನು ಆ ಊರು ಬಿಟ್ಟು ಹೋದ ಮೇಲೆ ಆದ ಘಟನೆಗಳು. ಶಿವು ಮಾತ್ರ ಯಾರ ಸೆಳೆತಕ್ಕೂ ಸಿಕ್ಕದೆ ಬೇಗ ಮದುವೆ ಮಾಡಿಕೊಂಡು ಉಳಿದುಕೊಂಡ. ರಾವಣನ ಪಾತ್ರ ಮಾಡಿದ ಅಲೂರು ಬಸವಣ್ಣಿಗೆ ಅವನ ಪಾತ್ರ ನೋಡಿಯೇ ಶ್ರೀಮಂತರ ಹುಡುಗಿ ಲಗ್ನ ಮಾಡಿಕೊಂಡುಬಿಟ್ಟಳು. ಶ್ರೀರಾಮನ ಪಾತ್ರ ಮಾಡಿದ ಶಂಕರನಿಗೆ ಸ್ಫುರದ್ರೂಪಿಯಾದ ಹುಡುಗಿ ಒಲಿದು ಲಗ್ನ ಮಾಡಿಕೊಂಡುಬಿಟ್ಟಳು. ಆಟ ನಾಟಕ ಮುಂತಾದವುಗಳಲ್ಲಿ ಉತ್ತಮ ಕಲಾಪ್ರದರ್ಶನ ಮಾಡುವವರೂ ಚಂದವಾದ ಮುಖಮುಸಡಿ ಇರುವವರಿಗೆಲ್ಲ ಈ ಭಾಗ್ಯಗಳೂ, ಅಪಾಯಗಳೂ ಇದ್ದೇ ಇರುವುದು ಹೊಸಮಾತಲ್ಲ. ಆದರೆ ಕೆಲವೇ ಕೆಲವು ಜನ ಈ ಅಪಾಯದಿಂದ ಪಾರಾದರೂ ಅಪಾಯಕ್ಕೆ ಸಿಕ್ಕು ಹಾಳಾಗುವವರೇ

ಬಹಳ. ಆದ್ದರಿಂದ ಇಂದಿಗೂ ನಾಟಕದ ಜನ ಅಂದರೆ ನಾಟಕ ನೋಡಿ ಆನಂದಿಸುವುದು ಎಷ್ಟೋ ಅಷ್ಟೇ. ಆಮೇಲೆ ಇವನನ್ನು ಹತ್ತಿರ ಸೇರಿಸಲೂ ಹೆದರುತ್ತಾರೆ. ನಾಟಕ ಕಂಪನಿಯವರು ಯಾವ ಊರಿಗೇ ಬರಲಿ ಅವರಿಗೆ ತಮ್ಮ ವಠಾರಗಳಲ್ಲಿ ಬಾಡಿಗೆಗೆ ಮನೆಯನ್ನು ಕೂಡ ಕೊಡದಿದ್ದ ಸನ್ನಿವೇಶಗಳನ್ನು ಕಂಡಿದ್ದೇನೆ. ನಾಟಕ ನೋಡಿ ಹೊಗಳುತ್ತಿರುತ್ತಾರೆ. ಅಲ್ಲಿನ ಅವರ ಅಭಿನಯಕ್ಕೆ, ಸಂಗೀತಕ್ಕೆ ಬಾಯಿ ಬಾಯಿ ಬಿಡುತ್ತಾರೆ. ಅವರನ್ನು ಹತ್ತಿರ ಸೇರಿಸಲು ಮಾತ್ರ ಹೆದರುತ್ತಾರೆ. ಕಾರಣ, ಅವರ ಶೀಲದ ಬಗ್ಗೆ ಸಂಪ್ರದಾಯಸ್ಥರು ವಿಶ್ವಾಸಪಡುವುದಿಲ್ಲ. ನಾಟಕದಲ್ಲಿ ಒಳ್ಳೆಯ ಪತಿವ್ರತೆಯರ ಪಾರ್ಟು ಮಾಡಿದವಳ ನಿಜಜೀವನದ ಬಗೆಗೆ ಎಲ್ಲರಿಗೂ ಏನೋ ಇರಸು ಮುರುಸು. ಏನೇನೋ ಗುಸುಗುಸು. ಆದ್ದರಿಂದ ಹೊರಗಡೆ ಇವರನ್ನು ಯಾರೂ ಹತ್ತಿರ ಸೇರಿಸುತ್ತಿರಲಿಲ್ಲ. ಆದರೂ ಕೆಲ ರಸಿಕರು ಇವರನ್ನು ಹೊತ್ತು ಮೆರೆಯುವವರೂ ಹಳ್ಳಿಗಳಲ್ಲಿ ಸಿಗುತ್ತಿದ್ದರು. ಅವರ ಆದರೋಪಚಾರಗಳಿಂದ ಕಂಪನಿಯವರು ತೃಪ್ತಿಪಟ್ಟುಕೊಂಡು ಹೋಗುತ್ತಾರೆ. ಈಗಿನ ಸಿನೇಮಾ ನಟನಟಿಯರ ಬಗೆಗೂ ಅಷ್ಟೆ. ಅವರು ಹೊರಗೆ ಬಂದರೆ ತಂಡೋಪತಂಡವಾಗಿ ನೋಡಲು ಸೇರುತ್ತಾರೆ. ಆದರೆ ವಿಶ್ವಾಸವಿರುವುದಿಲ್ಲ. ಅವರು ತಮ್ಮ ದುಡ್ಡಿನ ಬಲದಿಂದ ವಿಶ್ವಾಸ ಗಿಟ್ಟಿಸಿಕೊಂಡು ಪ್ರದರ್ಶನದ ವಸ್ತುಗಳ ಹಾಗೆ ವರ್ತಿಸಿ ಪುನಃ ತಮ್ಮ ವೃತ್ತಿಯಲ್ಲಿ ಮುಂದುವರಿಯುತ್ತಾರೆ. ಸಂಪ್ರದಾಯಸ್ಥರು, ಸಂಸ್ಕಾರಿಗಳೂ ಇವರ ಬಗೆಗೆ ತೀರಾ ಅಸಹ್ಯ ಪಡುವಷ್ಟರ ಮಟ್ಟಿಗೆ ಇವರ ಚಿತ್ರೀಕರಣ ಜೀವನ ಕಿರಿಕಿರಿ ಹುಟ್ಟಿಸುವ ಸನ್ನಿವೇಶಗಳಿಂದ ಕೂಡ ತೊಡಗಿದೆ.

## ನನ್ನನ್ನು ರೈತನನ್ನಾಗಿಸಿಬಿಟ್ಟರು

ಇದೇನೇ ಇರಲಿ. ರಾಮಾಯಣ ಆಟವನ್ನು ಬರೆದು ಆಡಿಸಿದ ಮೇಲೆ ಊರವರು ಮುಖ್ಯವಾಗಿ ಬಾಳಿಹಳ್ಳಿ ಬಸವಣ್ಣೆಪ್ಪ, ಗಿಣಿವಾಲರ ಈರಪ್ಪ, ಮೂಲೆಮನಿ ಬಸನಗೌಡ ಧರಣಪ್ಪನವರ ಚನ್ನಬಸಪ್ಪ, ಕೆಂಚಗೊಂಡ ಇಷ್ಟೇ ಏಕೆ, ಇಡೀ ಊರ ಜನಗಳ ಪ್ರೀತ್ಯಾದರಗಳು ನನ್ನ ಮೇಲೆ ಅತಿಶಯವಾಗಿ ಬೆಳೆದು ಹೋದವು. ಆಟದ ಹುಡುಗರೆಲ್ಲ ಸೇರಿ ಶೇಷಗಿರಿಭಟ್ಟರ ಎರಡು ಎಕರೆ ಗದ್ದೆಯನ್ನು ಹಿಡಿದು ಉತ್ತು ಬಿತ್ತಿ, ಕಳೆ ತೆಗೆ ಬೆಳೆಬೆಳೆದು ಕೊಡತೊಡಗಿದ್ದು ನನ್ನ ಮನೆತನದ ದಾರಿದ್ರ್ಯ ನಿವಾರಣೆಯ ಹಾದಿಯಲ್ಲಿ ದೊಡ್ಡ ಹೆಜ್ಜೆ. ರೈತರ ಮಗನಾಗಿ ಜನಿಸಿ ನನ್ನನ್ನು ಒಬ್ಬ ರೈತನ ಪಟ್ಟಿಯಲ್ಲಿ ಅಲ್ಲಿನ ಅಭಿಮಾನಿ ಹುಡುಗರು ಸೇರಿಸಿದುದು ನನಗೂ ಬಹುಇಷ್ಟವಾದ ವಿಷಯವೇ ಆಗಿತ್ತು. ಆ ವರ್ಷ ಹುಡುಗರ ಮೇಲೆ ಎತ್ತಿದ ಬತ್ತ, ಹೊಲದ ಬತ್ತ, ಆಟದ ಹುಡುಗರು ಅಭಿಮಾನದಿಂ ಕೊಟ್ಟ ಬತ್ತ ಎಲ್ಲ ಸೇರಿ ಇಪ್ಪತ್ತೈದು ಚೀಲಗಳಾದವು. ಆರು ಗಾಡಿಗಳಲ್ಲಿ ಅವನೆಲ್ಲ ಊರಿಗೆ ಹೇರಿಸಿ . ಊರಿನವರಿಗೆಲ್ಲ ಆಶ್ಚರ್ಯವೋ ಆಶ್ಚರ್ಯ. ಒಂದುನೂರ ಎಂಟುರೂಪಾಯಿ ವಾರ್ಷಿ ಗ್ರಾಂಟ್ ಬಂತು. ಇದು ನಮ್ಮ ಮನೆಯವರಿಗೆಲ್ಲ ಊರವರಿಗೆಲ್ಲ ನಾನು ಮಾಡಿದ ಬಹುದೊಡ್ಡ ಪವಾಡವಾಗಿ ಕಂಡಿತು. ಆ ವರ್ಷ ನಮ್ಮ ಹೊಲದಲ್ಲಿಯೂ ಸ್ವ ಬೆಳೆಯಾಯಿತು. ಮನೆಯ ಸಾಲ ಕರಗುತ್ತ ಬಂದು ನಾವು ಮೂರುನೂರು ರೂಪಾಯಿಗೆ ಒತ್ತೆ ಹಾಕಿದ್ದ ಐದು ಎಕರೆ ಹೊಲವನ್ನು ಬಿಡಿಸಿಕೊಂಡೆವು. ಆ ದಿನ ನಮ್ಮ ದೊಡ್ಡಪ್ಪ ತೆವರಮಳ್ಳಿಯಲ್ಲಿರುವ ಅವನ ಆರಾಧ್ಯದೇವತೆ ಬಸವಣ್ಣನಿಗೆ ತುಪ್ಪದ ದೀವಿಗೆ ಹಚ್ಚಿ

ದೇವರ ಸುತ್ತ ಸಾಷ್ಟಾಂಗ ಹಾಕಿ ಕಣ್ಣೀರ್ಗರೆದು 'ನಮ್ಮ ಅಪ್ಪ ಅಮ್ಮ ಗಳಿಸಿ ನಮ್ಮ ಕೈಗಿತ್ತ ಹೊಲವನ್ನು ನಮಗೆ ಹಿಂದಕ್ಕೆ ಕೊಡಿಸಿದೆ' ಎಂದು ಹೇಳಿ ಬಂದನಂತೆ.

ಬಹು ದಿನಗಳಿಂದ ಬಂಗಾರವಾಗಿದ್ದ ಸೆಲ್ಲಕ್ಕಿಯ ಅನ್ನವನ್ನು ನಮ್ಮ ಮನೆಯವರು ಎರಡು ಹೊತ್ತೂ ಊಟಮಾಡಿದರು. ಇದು ನನಗಂತೂ ಹಿಡಿಸಲಾರದ ತೃಪ್ತಿ ತಂದಿತು. ನಮ್ಮ ಮನೆಯಲ್ಲಿ ಮೊಟ್ಟಮೊದಲು ವಿದ್ಯಾಭ್ಯಾಸ ಮಾಡಿದ ನಾನು ಮುಲ್ಕೀ ಪರೀಕ್ಷೆಯಲ್ಲಿ ಪಾಸಾದ ಮೇಲೆ ಯಾವುದಾದರೂ ನೌಕರಿ ಮಾಡಿ ನಮಗೆಲ್ಲ ಸಹಾಯಕನಾಗುತ್ತಾನೆಂದು ಬೆಳಗು ಬೈಗೂ ನಿರೀಕ್ಷಿಸುತ್ತ, ಕಂಡ ದೇವರಿಗೆಲ್ಲ ಹರಕೆ ಹಾಕಿ ಕಾಲ ಕಳೆಯುತ್ತಿದ್ದ ನಮ್ಮ ಮನೆಯ ಎಲ್ಲರಿಗೂ ತೃಪ್ತಿಯನ್ನು ನಾನು ತಂದೆನೆಂದು ಅನ್ನಿಸಿತು. ಮನೆಯವರಿಗೂ ಹಾಗೆಯೇ ಅನ್ನಿಸಿರಬೇಕು. ಮನೆಗೆಲ್ಲ ಹಿರಿಯ ಮಗನಾಗಿ, ಓದಿದವನಾಗಿ ನನ್ನ ಪಾಲಿನ ಕರ್ತವ್ಯವನ್ನು ಮಾಡಿದೆನೆಂಬ ಹೆಮ್ಮೆ ಇಂದಿಗೂ ನನಗೆ ಆಗುತ್ತಿದೆ.

ಹಿರೇಕಾಂಶಿ ನನ್ನ ಪಾಲಿಗಂತೂ ಕಾಮಧೇನು, ಕಲ್ಪವೃಕ್ಷವಾಯಿತು. ನಾನು ಯಾರನ್ನೂ, ಏನನ್ನೂ ಕೇಳದಿದ್ದರೂ ತಾನಾಗಿಯೇ ನನಗೆ ಅನೇಕ ಅನುಕೂಲ್ಯಗಳು ಲಭ್ಯವಾಗತೊಡಗಿದವು. ನನಗೆ ನೂರಾರು ಎಕರೆ ಹೊಲಗದ್ದೆ ಕೊಡುತ್ತೇವೆ. ಇಲ್ಲಿಯೇ ಒಂದು ಮನೆತನ ಮುಂದುವರಿಸಿ ಎಂದು ಗೌಡರು, ದೊಡ್ಡ ದೊಡ್ಡ ರೈತರು ಎಲ್ಲರೂ ಹೇಳಿದರು. ಉತ್ಕೃಷ್ಟವಾದ ಕೆರೆಯ ಕೆಳಗಿನ ಬೆಲೆಯುಳ್ಳ ಗದ್ದೆಗಳು ಮಾಡುವವರು ದಿಕ್ಕಿಲ್ಲದೆ, ಕಂದಾಯ ಕಟ್ಟಲು ದಿಕ್ಕಿಲ್ಲದೆ ಪಡ ಬಿದ್ದಿದ್ದವು. ಕಂದಾಯ ಬಾಕಿಗಾಗಿ ಗದ್ದೆ ಹೊಲ ತೋಟಗಳನ್ನು ಸರಕಾರ ಕಿತ್ತುಕೊಂಡು ಬಿಟ್ಟಿತ್ತು. ಈಗ ಊರವರೆಲ್ಲ "ಪಟ್ಟಿ ಹಾಕಿ ಕಂದಾಯ ಕಟ್ಟಿ. ನಿಮ್ಮ ಹೆಸರಿಗೆ ಅವನ್ನೆಲ್ಲ ಮಾಡಿಸಿಕೊಡುತ್ತೇವೆ. ಊರವರನ್ನು ಕರೆಸಿ ಇಲ್ಲಿಯೇ ವ್ಯವಸಾಯ ಪ್ರಾರಂಭಿಸಿರಿ" ಎಂದು ಚಾಲುರಿದರು. (ಚಾಲುರಿ = ಬಹುವಿಧವಾಗಿ ಕೇಳಿಕೊಳ್ಳುವಿಕೆ). ನಾನು ಊರಿಗೆ ಹೋಗಿ ನಮ್ಮ ತಂದೆ, ದೊಡ್ಡಪ್ಪ, ಮಾವ ಇವರನ್ನು ವಿಚಾರಿಸಿದೆ. ಬಾವಿಯೊಳಗಿನ ಕಪ್ಪೆಯಂತಿದ್ದ ಅವರು "ಥೂ! ಆ ಮಲೆನಾಡಿಗೆ ಸಾಯುವುದಕ್ಕೆ ಹೋಗಬೇಕೆ? ಅದು ಸಾಧ್ಯವಿಲ್ಲ" ಎಂದುಬಿಟ್ಟರು. ನಿರುಪಾಯನಾಗಿ ಸುಮ್ಮನಾದೆ.

ಆರ್ದ್ರೀಮಠದ ಚೆನ್ನಬಸಯ್ಯನಿಗೆ ಎಪ್ಪತ್ತೈದು ಎಕರೆ ಒಂದೇ ಕಡೆ ಹೊಲ, ಗದ್ದೆ ತೋಟ ಮತ್ತು ಅರಣ್ಯ ಹೀಗೆ ವಿವಿಧ ರೀತಿಯ ಭೂಮಿ ಮತ್ತು ಅವನ ಹೆಂಡತಿ ಮತ್ತು ಏಳೆಂಟು ವರ್ಷದ ಮಗ ಮೂರರ ಈ ಸಂಸಾರದಲ್ಲಿ ಇನ್ನಾರೂ ದಿಕ್ಕಿರಲಿಲ್ಲ. ಹೆಂಡತಿಗೆ ರೋಗ, ಎದ್ದೇಳುವಂತಿರಲಿಲ್ಲ. ಚಿಕ್ಕಮಗನಿಗೂ ಮಲೇರಿಯಾ, ಅಪ್ರಾಪ್ತ ವಯಸ್ಕ. ಚೆನ್ನಬಸವಯ್ಯನಿಗೆ ಗುದ್ದು ಮೊಳ ಹೊಟ್ಟೆ ಹಾಯ್ದು ಹೊಲಮನೆ ಬದುಕಿಗೆ ನಾಲಾಯಕ್ ಆಗಿಬಿಟ್ಟಿದ್ದ. ಬೀಡಿ ಕಟ್ಟಿ ಜೀವಿಸುತ್ತಿದ್ದ. ಆತ ನನ್ನನ್ನು ಕರೆಸಿ "ಅಪ್ಪಾ, ಊರಿಗೆ ದೇವರು ಬಂದ ಹಾಗೆ ಬಂದಿದ್ದೀ. ಯಾವ ಗಳಿಗೆಯಲ್ಲಿ ಊರಿಗೆ ಬಂದೆಯೋ ಏನೋ ಊರಲ್ಲಿ ಮಳೆಬೆಳೆ ಸಮೃದ್ಧಿಯಾಗಿ ಆಗುತ್ತಿದೆ. ಊರು ಕಳಕಳ ಅನ್ನುತ್ತಾ ಇದೆ. ಇಲ್ಲೇ ನೆಲೆನಿಂತು ಬಿಡು. ನನ್ನ ಹೊಲ, ತೋಟವೆಲ್ಲ ಕಂದಾಯ ಕಟ್ಟಲು ಗತಿಯಿಲ್ಲದೆ ಈ ವರ್ಷ ಸರಕಾರಕ್ಕೆ ಹೋಗಿಬಿಡುತ್ತದೆ. ಎಪ್ಪತ್ತೋ-ಎಂಬತ್ತೋ ರೂಪಾಯಿ ಕಂದಾಯ ಕಟ್ಟಿಬಿಡು. ಹೊಲದ ಖಾತೆಯನ್ನು ನಿನಗೆ ವರ್ಗಾಯಿಸಿಬಿಡುತ್ತೇನೆ. ಇನ್ನಾರಿಗಾದರೂ ಹೊಲ ಹೋಗುತ್ತೆ.

ಹನ್ನೆರಡೆಕರೆ, ಅದರಲ್ಲಿ ಕೆರೆ ಕೆಳಗಿನ ಗದ್ದೆ ಇದೆ. ಎರಡೆಕರೆ ತೋಟದ ಜಮೀನು ಇದೆ
ಹಾಳು ಬಾವಿ ಇದೆ. ಅಷ್ಟು ಮಾಡು" ಎಂದು ದುಂಬಾಲು ಬಿದ್ದು ಹೇಳಿದ. ಅದೂ ನನ್ನಿಂದ
ಸಾಧ್ಯವಾಗಲಿಲ್ಲ. ಗದ್ದೆ ಹೊಲ ಮಾಡುವವರೇ ಊರಿಂದ ಬರದಿದ್ದರೆ ಪ್ರತಿವರ್ಷ
ಅಷ್ಟೊಂದು ಕಂದಾಯವನ್ನು ನಾನಾದರೂ ಕಟ್ಟುವುದು ಹೇಗೆ? ಸಾಧ್ಯವಿಲ್ಲವೆಂದು ಹೇಳಿಬಿಟ್ಟೆ
ಆ ಊರಿನಲ್ಲಿ ತಾತ್ಪೂರ್ತಿಕವಾಗಿ ಶೇಷಗಿರಿ ಭಟ್ಟರ ಎರಡೆಕರೆ ಹೊಲದ ಲಾವಣಿಯ
ರೈತನಾದೆನೇ ವಿನಾ ಖಾಯಂ ಖಾತೆದಾರನಾಗುವ ಪುಣ್ಯ ಬರಲಿಲ್ಲ. ನಮ್ಮ ಮನೆಯವರ
ಸಹಕಾರ ಸಿಕ್ಕಿದ್ದರೆ ಅಲ್ಲಿ ನಾನು ನೂರಿನ್ನೂರು ಎಕರೆ ಜಮೀನಿನ ರೈತನಾಗಬಹುದಾಗಿತ್ತು
ಆ ಭಾಗ್ಯ ಕೂಡಿ ಬರಲಿಲ್ಲ ಎನ್ನಲೇ ಅಥವಾ ಅಪಾಯದಿಂದ ಪಾರಾದೆನೇ? ಹೇಳುವುದಕ್ಕೆ
ಶಕ್ಯವಿಲ್ಲವೆನ್ನಿ. ಎಪ್ಪತ್ತು ಎಂಬತ್ತು ರೂಪಾಯಿಗೆ ಉತ್ಕೃಷ್ಟವಾದ ಎಪ್ಪತ್ತೈದು ಎಕರೆ ಜಮೀನು
ಸಿಗುತ್ತಿತ್ತು ಎಂದರೆ ಬಹುಜನಕ್ಕೆ ಈಗ ಆಶ್ಚರ್ಯವಾಗಬಹುದು. ಭೂಮಿ ಉತ್ತು ಬಿತ್ತಿ
ಬೆಳೆಯುವುದು ಉತ್ಸಾಹಿಯೂ, ಆರೋಗ್ಯವಂತನೂ, ಶ್ರಮಸಹಿಷ್ಣುವೂ ಆದವನ
ಕ್ರಿಯಾಶಕ್ತಿಯನ್ನುವಲಂಬಿಸಿದ್ದೇ ವಿನಾ, ದರಿದ್ರನ ಸೊತ್ತಲ್ಲ. ಹೇಳುವವರು ಕೇಳುವವರು
ದಿಕ್ಕಿಲ್ಲದೆ ಜನಶಕ್ತಿಯೆಲ್ಲ ರೋಗ-ರುಜಿನಗಳಿಂದ ಪಾತಾಳಕ್ಕಿಳಿದ ಹೊತ್ತಿನಲ್ಲಿ ಎಷ್ಟು
ಭೂಮಿಯಿದ್ದರೇನು? ಇಂಥ ಸಮೃದ್ಧ ಭಾರತದ ಭೂಮಿಯಲ್ಲಿಯೇ 1934ನೇ ಇಸ್ವಿಯಲ್ಲಿ
ಬಿದ್ದ ಭೀಕರ ಬರಗಾಲದಿಂದ ಹಾದಿ-ಬೀದಿಯಲ್ಲಿ ಜನ ಬಿದ್ದು ಸತ್ತರೆ ಬ್ರಿಟಿಷರು ಜಪ್ಪೆನ್ನಲಿಲ್ಲ
ದರ್ಪದಿಂದ ತಮ್ಮ ತಪ್ಪನ್ನು ಮುಚ್ಚಿಕೊಂಡರು. ಅವರು ಭಾರತೀಯರಿಗೆ ಅಪಚಾರವನ್ನು
ಎಸಗಿದರೂ, ಉಪಕಾರವನ್ನು ಮಾಡಿದರು. ಆದರೆ ಉಪಕಾರಕ್ಕೆ ಅಪಕಾರ ಬುದ್ಧಿ
ಹೆಚ್ಚಾಯಿತು. ಏನೇ ಅಂದರೂ ಹಿಂದಿನ ಮೊಗಲರ ಕಾಲಕ್ಕಿಂತ, ಪೇಶ್ವೆಯವರಿಗಿಂತ
ಸಾವಿರಪಟ್ಟು ಮೇಲೆನ್ನಬೇಕು. ಇವರ ಕಾರಣವಾಗಿಯೇ ಭಾರತೀಯರಲ್ಲಿ ವೈಜ್ಞಾನಿಕ
ಮನೋಭಾವ, ಜಗತ್ತಿನ ಸಂಪರ್ಕ ಅಧಿಕಗೊಂಡು ಮುಂದೆ ಸ್ವಾತಂತ್ರ್ಯಸಂಗ್ರಾಮಕ್ಕೆ
ಭಾರತೀಯರನ್ನು ಒಗ್ಗಟ್ಟಾಗಿಸಲು ಬಹಳ ಸಹಕಾರಿಯಾಯಿತು. ಭಾರತೀಯರನ್ನು ಸದೃಢ
ಶರೀರಿಗಳನ್ನಾಗಿ, ಆರೋಗ್ಯವಂತರನ್ನಾಗಿ ಮಾಡಿದರೆ ಇವರು ನಮ್ಮ ರಾಜಸತ್ತೆಗೇ ಅಪಾಯ
ತರುತ್ತಾರೆಂಬ ಭಯವನ್ನೂ ಅವರಿಗೆ 1857ರ ಸ್ವಾತಂತ್ರ್ಯ ಸಂಗ್ರಾಮ ತೋರಿಸಿಕೊಟ್ಟಿತ್ತೋ
ಏನೋ, ಜನಾರೋಗ್ಯಕ್ಕಾಗಿ ಇವರು ತಕ್ಕ ಏರ್ಪಾಡು ಮಾಡಲಿಲ್ಲ. ಜನ ಸತ್ತು ಕೆಟ್ಟು
ನಿಸ್ಸತ್ವವಾಗಿ ಹೋದರು. ಇವರು ಕಣ್ಣು ಬಿಟ್ಟಿದ್ದು 1946ರ ನಂತರವೇ. ಆಗಲೇ ಮಲೇರಿಯಾ
ಹಾವಳಿ ವಿಶ್ವಸಂಸ್ಥೆಯವರ ವಿಶೇಷ ಪ್ರಯತ್ನದಿಂದ ತಹಬಂದಿಗೆ ಬಂದದ್ದು. ಅದೇನೇ ಇರಲಿ
ನನ್ನ ಪುರಾಣ ನನಗೆ ಸಾಂದರ್ಭಿಕವಾಗಿ ಆಗಿನ ಪರಿಸ್ಥಿತಿ ನನ್ನನ್ನು ಹೇಗೆ ರೂಪಿಸಲು
ಯತ್ನಿಸಿತು. ನಾನು ಆ ಸನ್ನಿವೇಶಕ್ಕೆ ಎಷ್ಟರ ಮಟ್ಟಿಗೆ ಪ್ರತಿಸ್ಪಂದಿಸಿದೆ ಎಂದು ಹೇಳಬೇಕಾದಾಗ
ನಾಲ್ಕು ಮಾತನ್ನು ಅಡ್ಡತಿಡ್ಡ ಹರಿದು ಹೇಳಬೇಕಾಯಿತು. ಹೇಳಿದೆ ಅಷ್ಟೆ.

### *ಹಿರೇಕಾಂಶಿ ನನ್ನನ್ನು ಕೀರ್ತನಕಾರನನ್ನಾಗಿಸಿತು*

ಹಿರೇಕಾಂಶಿಯ ಸಮಗ್ರ ಜೀವನದೊಡನೆ ಹಾಸುಹೊಕ್ಕಾಗಿ ಹೆಣೆದುಕೊಂಡಿದ್ದ ನನ್ನ
ಜೀವನ ಹೊಸೂರಿನೊಡನೆಯೂ ಅವಿಚ್ಛಿನ್ನವಾಗಿ ಹೆಣೆದುಕೊಂಡೇ ಬಂತು. ಶನಿವಾರ
ಸಾಯಂಕಾಲದಿಂದ ಸೋಮವಾರ ಬೆಳಗಿನವರೆಗೆ ನಾನು ಇರುತ್ತಿದ್ದುದೇ ಹೊಸೂರಿನ

ಮಿತ್ರರ ಮಧ್ಯದಲ್ಲಿ. ಅಂಥ ಸರ್ವೋತ್ಕೃಷ್ಟ ಮಿತ್ರರು ಸಿಕ್ಕದ್ದು ನನ್ನ ಪುಣ್ಯವೇ ಆಗಿತ್ತು. ಹೊಸೂರು ಮತ್ತು ಚಿಕ್ಕಾಂಸಿಗಳಿಗೆ...ಆಗ ಕುಮ್ಮೂರ್ರು ಕೊಟ್ರಯ್ಯ ಎಂಬ ವಾಚಾಳಿ ಕೀರ್ತನಕಾರ ಬರುತ್ತಿದ್ದರು. ಅಷ್ಟು ಇಷ್ಟು ಜ್ಯೋತಿಷ್ಯ ವಗೈರೆ ಕಲಿತುಕೊಂಡು ಆಗಾಗ ಅಲ್ಲಿಗೆ ಬಂದು ಶಿವಕೀರ್ತನೆಗಳನ್ನು ಮಾಡುತ್ತಿದ್ದರು. ಸಂಗೀತದ ಗಂಧವಾಗಲಿ, ಶಾಸ್ತ್ರೀಯ ಜ್ಞಾನವಾಗಲಿ, ತತ್ತ್ವಶಾಸ್ತ್ರದ ಬಗೆಗೆ ಸರಿಯಾದ ತಿಳುವಳಿಕೆಯಿರಲಿಲ್ಲವಾದರೂ ಬಹು ವಾಚಾಳಿಯಾಗಿದ್ದ ಅವರು ಜನಗಳನ್ನು ನಕ್ಕು ನಗಿಸುವ ಮಾತಿನ ಮೋಡಿಯಿಂದ ನಾಲ್ಕಾರು ಕಥೆಗಳನ್ನು ಕಲಿತುಕೊಂಡು ಕಥೆಮಾಡಿ ಅಷ್ಟು ಇಷ್ಟು ಪುಡಿಗಾಸು ಗಿಟ್ಟಿಸಿಕೊಂಡು ಹೋಗುತ್ತಿದ್ದರು. ಇನ್ನೊಬ್ಬರು ಇಂಗಳಿಗಿ ವಿರೂಪಾಕ್ಷಶಾಸ್ತ್ರಿಗಳೆಂಬುವರು ಬರುತ್ತಿದ್ದರು. ಹೊಸೂರಿನ ಪಕ್ಕದಲ್ಲಿಯೇ ಇದ್ದ ಕ್ಯಾಸನೂರಿನ ನಂಟರಾಗಿದ್ದ ಈ ಶಾಸ್ತ್ರಿಗಳು ಬಂದಾಗಲೆಲ್ಲ ತಮ್ಮ ನಂಟರ ಪತ್ತಿನ ಮೂಲಕ ಅಲ್ಲಲ್ಲಿ ಕಥೆ ಗಿಟ್ಟಿಸಿಕೊಂಡು ನಾಲ್ಕಾರು ಕಾಸು ಸಂಪಾದಿಸಿಕೊಂಡು ಹೋಗುತ್ತಿದ್ದರು. ವಿರೂಪಾಕ್ಷಶಾಸ್ತ್ರಿ ಪರವಾಯಿಲ್ಲ. ಸ್ವಲ್ಪ ಸಂಗೀತಾಭ್ಯಾಸ ಮಾಡಿದ್ದರು. ಬಜಾರಿ ಬಾಯಿ ಅಲ್ಲ. ಇವರು ಶಿವಶರಣರ ಬಗ್ಗೆ ಕಥೆ ಮಾಡಿದರೆ ಕೇಳುವಂತಿರುತ್ತಿತ್ತು. ಕಸಬುದಾರರು ಎನಿಸುವಷ್ಟರ ಮಟ್ಟಿಗೆ ಇವರ ಕಥೆಗಳು ಇರುತ್ತಿದ್ದವು. ಇವರಿಬ್ಬರ ಕೀರ್ತನೆಗಳು ಹೊಸೂರು, ಚಿಕ್ಕಾಂಸಿ, ಕ್ಯಾಸನೂರು ಎಲ್ಲೇ ಆಗಲಿ ನನಗೆ ಆಹ್ವಾನ ಬರತೊಡಗಿತು. ಅಷ್ಟು ಹೊತ್ತಿಗಾಗಲೆ ನನ್ನ ಗಂಧ ಸುಗಂಧ ಮಲೆನಾಡಿನ ಅನೇಕ ಊರುಗಳಲ್ಲಿ ಹಬ್ಬಿ ಹೋಗಿದ್ದೇ ನನಗೆ ಆಹ್ವಾನಗಳ ಮೇಲೆ ಆಹ್ವಾನಗಳು ಬರಲು ಕಾರಣವಾಗಿತ್ತು. ಅವರ ಕಥೆಗಳನ್ನು ಲಕ್ಷ್ಯವಿಟ್ಟು ಕೇಳುತ್ತಿದ್ದ ನನಗೆ ಕಥೆಯ ಬಂಡವಾಳ ಎಂದರೆ ಇಷ್ಟೇಯೆ? ಎನ್ನಿಸತೊಡಗಿತು. ಒಮ್ಮೊಮ್ಮೆ ಅವರು ಮಾತುಗಳನ್ನೇ ರಾಗವಾಗಿ ಹೇಳಿ ಪದ್ಯವನ್ನಾಗಿಸಿ ಬಿಡುತ್ತಿದ್ದರು. ಈ ಕಲೆ ನನ್ನಲ್ಲೂ ಇತ್ತು. ಇವರ ನಾಲ್ಕಾರು ಕಥೆಗಳನ್ನು ಕೇಳಿದ ಮೇಲೆ ನಾನು ನನ್ನಲ್ಲಿರುವ ಬಂಡವಾಳದಿಂದ ಇಂಥ ಒಂದು ಅಂಗಡಿಯನ್ನೇಕೆ ತೆರೆಯಬಾರದು ಎನ್ನಿಸಿ ಒಂದು ವೇಳೆ ತಾಳಗಳನ್ನು ಕೈಯಲ್ಲಿ ಹಿಡಿದು ನಾನು ಕಥೆಗೆ ನಿಂತರೆ ಇವರಿಗಿಂತಲೂ ಹೆಚ್ಚಾಗಿ ಪದ್ಯಗಳನ್ನು ಹೇಳಿ ಚಂದವಾಗಿ ಕಥೆ ಮಾಡಬಹುದಲ್ಲವೇ? ಎನ್ನಿಸಿ ಅವರ ಮಾತುಕತೆ, ರಾಗ ಭಾವಗಳ ಅನುಕರಣೆಗೆ ಪ್ರಾರಂಭಿಸಿದೆ. ಆರು ಮತ್ತು ಏಳನೇ ತರಗತಿಗಳಲ್ಲಿ ನಾವು ಬಾಯಿಪಾಠ ಮಾಡಿದ್ದ ಷಡಕ್ಷರಿಯ ಶಬರಶಂಕರ ವಿಳಾಸದ ಹದಿನೈದು ಇಪ್ಪತ್ತು ವೃತ್ತಕಂದಗಳ ಬಂಡವಾಳದಿಂದ ಶಬರಶಂಕರ ವಿಳಾಸ ಎಂಬ ಕಥೆಯನ್ನೇಕೆ ಮಾಡಬಾರದು ಎಂದು ಎನಿಸಿಬಿಟ್ಟಿತು. ಮೇಲಾಗಿ ನಾನು ಬಾಲ್ಯದಿಂದ ನೋಡಿದ ನೂರಾರು ನಾಟಕದ ಪದ್ಯಗಳನ್ನು ಮನಸ್ಸಿಗೆ ಬಂದ ಹಾಗೆ ಹಾಡಿ ಹಾಡಿ ಹಳ್ಳಿಯ ಜನಗಳ ಮಧ್ಯದಲ್ಲಿ ಮಾಸ್ತರು ಬಹಳ ಚೆನ್ನಾಗಿ ಹಾಡ್ತಾರೆ ಎನ್ನಿಸಿಕೊಂಡೂ ಆಗಿತ್ತು. ಮಾತುಗಳನ್ನೇ ರಾಗವಾಗಿ ಹೇಳಿದರೆ ಪದ್ಯಗಳಾಗುತ್ತವೆ. ನನ್ನಲ್ಲಿ ರಾಗದ ಹೆಸರೇ ಗೊತ್ತಿರದಿದ್ದರೂ ರಾಗಗಳಿಗೆ ಕೊರತೆಯಿರಲಿಲ್ಲ. ಇದು ನಾಟಕಪ್ರಪಂಚ ನನ್ನಲ್ಲಿ ಬಿಟ್ಟು ಹೋಗಿದ್ದ ಸಂಸ್ಕಾರವೇ ಆಗಿತ್ತು. ಈ ತಂತ್ರ ಉಪಯೋಗಿಸಿ 'ಶಬರ ಶಂಕರ ವಿಳಾಸ' ಕೊಡಲು ನಿಶ್ಚಯಿಸಿದೆ. ಆದರೂ ಹಾಗೆ ಕಥೆ ಮಾಡಲು ಒಮ್ಮೆಲೆ ಧೈರ್ಯ ಬರುತ್ತಿರಲಿಲ್ಲ. ಆಗಾಗ ನಾನೇ ನನಗೆ ತಿಳಿದಂತೆ ಪದ್ಯಗಳನ್ನು ಅವರಿವರ ಮುಂದೆ ಹಾಡಿ, ಕಥೆ ಮಾಡುವವರ ಗತ್ತುಗಾರಿಕೆಯಲ್ಲಿ ಮಾತನಾಡಲು ಪ್ರಾರಂಭಿಸಿದೆ. ಇದು ಕೇವಲ ಜನರನ್ನು ನಗಿಸುವ ಪ್ರಸಂಗಗಳಿಗಷ್ಟೇ

ಸೀಮಿತವಾಗಿತ್ತು. ಹುಡುಗಾಟಿಕೆಯ ಚೇಷ್ಟೆಯ ಪ್ರಸಂಗಗಳಲ್ಲಿ ಪ್ರಾರಂಭಗೊಂಡ ಈ ನನ್ನ ಅನುಕರಣ ವಿದ್ಯೆಯೇ ಮುಂದೆ ಆ ವೃತ್ತಿಯಲ್ಲಿ ಯಕಶ್ಚಿತ್ ಯಶಸ್ಸು ಗಳಿಸಲು ಕಾರಣವಾದದ್ದೊಂದು ಆಕಸ್ಮಿಕ ಘಟನೆ.

ಮಿರಗನ ಮಳೆ (ಮೃಗಸಿರಾ ಮಳೆ)ಯ ಕಾಲ. ಹಾನಗಲ್ಲಿಗೆ ಗಿಣಿವಾಲ ವೀರಪ್ಪನ ಮಗ ಬಸವಣ್ಣೆಪ್ಪನ ಸಂಗಡ ಅವರ ಗಾಡಿಯಲ್ಲಿ ಹೋಗಿದ್ದೆ. ಅಲ್ಲಿನ ಕೆಲಸ ಮುಗಿಸಿಕೊಂಡು ರಾತ್ರಿ ಎಂಟು ಗಂಟೆಯ ಹೊತ್ತಿಗೆ ಗಾಡಿ ಕೊರಳುಕಟ್ಟಿ ಹಿರೇಕಾಂಶಿಗೆ ಹೊರಟೆವು ಶಾನುಭೋಗರ ರಾಮಪ್ಪ ಮತ್ತು ತಳವಾರ ಫಕ್ಕೀರಪ್ಪ ಇಬ್ಬರೂ ಗಾಡಿ ನೋಡಿ ಬಂದುಬಿಟ್ಟರು. ಒಟ್ಟು ನಾಲ್ಕೂ ಜನರೂ ಗಾಡಿ ಏರಿದೆವು. ಮಳೆ ಜಿಟಿ ಜಿಟಿ ಹತ್ತಿತ್ತು. ಗಾಡಿಯಲ್ಲಿ ತಿನ್ನಲಿಕ್ಕೆಂದು ಶಾನುಭೋಗರ ರಾಮಪ್ಪ ಓಡಿ ಹೋಗಿ ನಾಕು ಸೇರು ಮಂಡಕ್ಕಿ ಕಾರದಾಣಿ, ಉಳ್ಳೇಗಡ್ಡಿ, ಹಸಿಮೆಣಸಿನ ಕಾಯಿ ಏನೆಲ್ಲ ತಿನಿಸನ್ನು ಗಂಟುಕಟ್ಟಿಕೊಂಡು ಬಂದು ಗಾಡಿ ಏರಿದ. ಸವಾರಿ ಗಾಡಿಯಾದ್ದರಿಂದ ಮಳೆಗಾಳಿಗಳ ಭಯವಿರಲಿಲ್ಲ. ಗಾಡಿ ಹಾನಗಲ್ಲು ಬಿಟ್ಟು ಆನೆಕೆರೆ ದಾಟಿದ ನಂತರ ಮಂಡಕ್ಕಿ ಗಂಟು ಬಿಚ್ಚಿ ಈರುಳ್ಳಿ ಹಸಿಮೆಣಸಿನ ಕಾಯಿಯೊಡನೆ ಒಂದು ಮೈಲು ದೂರ ಹೋಗುವ ಹೊತ್ತಿಗೆ ಮುಗಿಸಿಬಿಟ್ಟೆವು. ಮುಂದೆ ಬಂದ ಧರ್ಮಾನದಿಯ ಹತ್ತಿರ ಗಾಡಿ ಕೊಳ್ಳುಹರಿದು, ಎತ್ತಿಗೆ ನೀರು ಕುಡಿಸಿ ಮಂಡಕ್ಕಿ ತಿಂದ ನಾವೆಲ್ಲ ನೀರು ಕುಡಿದು ಗಾಡಿಕಟ್ಟಿ ಹೊರಟೆವು. ಒಟ್ಟು ಹದಿನೈದು ಮೈಲು ದೂರದ ಹಿರೇಕಾಂಶಿ ಮುಟ್ಟಲು ನಮಗೆ ಬೆಳತನಕ ದಾರಿ ಸಾಗಬೇಕಾಗಿತ್ತು. ನಮ್ಮಂತೆ ಅನೇಕ ಗಾಡಿಗಳು ಮಾರ್ಗದಲ್ಲಿ ಹೋಗುತ್ತ ಬರುತ್ತ ಇದ್ದವು. ಅಕ್ಕಪಕ್ಕದಲ್ಲಿ ಅರಣ್ಯ. ಹುಲಿ, ಚಿರ್ಚುಗಳ ಭಯವಿತ್ತಾದರೂ ಎತ್ತಿನ ಕೊರಳಲ್ಲಿ ಕಟ್ಟಿದ ಬಿದಿರುಗಂಟೆ (ಬಿದಿರಿನ ದಪ್ಪನೆಯ ಬೊಂಬನ್ನು ಕತ್ತರಿಸಿ ಗಂಟೆಯಂತೆ ಮಲೆನಾಡಿನ ಎತ್ತಿನ ಕೊರಳಲ್ಲಿ ಕಟ್ಟುತ್ತಿದ್ದರು. ಅದು ಆಗಾಗ ಡಂ ಡಂ ಎಂದು ಸಪ್ಪಳ ಮಾಡುತ್ತಿತ್ತು), ಹುರಿಗೆಜ್ಜೆ ಸರಗಳ ಗದ್ದಲಕ್ಕೂ, ಗಾಡಿಯ ಸಪ್ಪಳಕ್ಕೂ ಅವುಗಳ ಭಯವಿರಲಿಲ್ಲ. ಗಾಡಿಯ ಮುಂಭಾಗದಲ್ಲಿ ಲಾಟೀನನ್ನು ಕಟ್ಟಿ ಥಾಳವಾಗಿ ಬೆಳಕು ಮಾಡಿದ್ದೆವು.

ರಾಮಪ್ಪ "ಮಾಸ್ತರ, ಏನಾದರೂ ಹೇಳ್ರಿ ಮಾರಾಯ್ರೇ" ಎಂದು ಪ್ರಾರಂಭಿಸಿದ. ಸರಿ ನನ್ನ ಪ್ರತಾಪ ಶುರುವಾಯಿತು. ಮಕರವಳ್ಳಿಯ ಕತ್ತರಿಗೆ ಬರುವವರೆಗೆ ಹತ್ತು ಹನ್ನೊಂದು ಮೈಲು ಬರುವವರೆಗೆ ಶಬರ ಶಂಕರ ವಿಳಾಸದ ಕಥೆಯನ್ನೂ, ಅನಸೂಯಾ ಕಥೆ, ಕುಮ್ರು ಕೊಟ್ರಯ್ಯಾ ಹೇಳುತ್ತಿದ್ದ ಮಂಗಳಗೌರೀ ಕಥೆ, ಏನೇನೋ ಕಥೆಗಳನ್ನು ಕೀರ್ತನೆ ಮಾಡುವವರ ಶೈಲಿಯಲ್ಲಿ ಅನೇಕ ಪದ್ಯಗಳನ್ನು ರಾಗವಾಗಿ ಹಾಡುತ್ತ ಮಧ್ಯ ಮಧ್ಯದಲ್ಲಿ ...ಕಥೆಗಳನ್ನು ಹೇಳುತ್ತಾ ಭರ್ಜರಿಯಾಗಿ ಕೂಗಾಡಿಬಿಟ್ಟೆ. ಎಲ್ಲರೂ ನಕ್ಕು ನಕ್ಕು ಬೀಳತೊಡಗಿದರು. ಅವರು ನಕ್ಕಷ್ಟು ನನಗೆ ತಿಕ್ಕಲು ಏರುತ್ತಿತ್ತು. ಕೀರ್ತನೆ ಮಾಡುವವರ ರಾಗ, ಅವರ ಮಾತಿನ ಮೋಡಿ ಎಲ್ಲ ಸೇರಿಸಿ ಹುಡುಗಾಟಕ್ಕೆ ಮಾಡಿದ ಆ ಕಥೆಯನ್ನು ಕೇಳಿದ ರಾಮಪ್ಪ ಪ್ರಭಾವಿತನಾಗಿ ನಕ್ಕು ನಕ್ಕು ಸುಸ್ತಾದ. ಈ ಕಥೆಯ ಪ್ರಸಂಗದ ನಂತರ ಅವರಿವರ ಬಾಯಿಂದ ಕೇಳಿದ್ದ ಅನುಸೂಯಾ ದೇವಿ ಕಥೆಯನ್ನು ಮಾಡಿಬಿಟ್ಟೆ. ಅನಂತರ ನಾನು ಇದುವರೆಗೆ ನೋಡಿದ್ದ ನಾಟಕಗಳ ಪದ್ಯಗಳನ್ನೂ ಹಾಡಿದೆ. ನಾಟಕದ ಸಂಭಾಷಣೆಗಳನ್ನು ನನ್ನದೇ ಆದ ಶೈಲಿಯಲ್ಲಿ

ಹೇಳಿಮುಗಿಸಿದೆ. ಹಲಗೇರಿ ನಾಟಕ ಕಂಪನಿಯ ಸ್ತ್ರೀ ನಾಟಕದ ಭಗವಂತನ ಪಾತ್ರದ ಮಾತುಕತೆ, ಉತ್ತರ ಭೂಪ ನಾಟಕದ ಮಾತುಕತೆ, ಮನ್ನೂರ ಬಸವರಾಜರ ನಾಟಕ ಕಂಪನಿಯ ದ್ರೌಪದಿ ವಸ್ತ್ರಾಪಹರಣದ ಕಥೆಯ ಮಾತುಕತೆ ಎಲ್ಲವೂ ಮುಗಿದುಹೋದವು. ನಾನು ಸುಸ್ತಾದೆ. ಎಲ್ಲರೂ ಮಲಗಿಬಿಟ್ಟೆವು. ಬೆಳಕು ಹರಿದಾಗ ನಮ್ಮ ಗಾಡಿ ಹಿರೇಕಾಂಶಿ ಗಿಣಿವಾಲದವರ ಮನೆ ಮುಂದೆ ಬಂದು ನಿಂತಿತ್ತು.

ರಾಮಪ್ಪ ಇಡೀ ಊರತುಂಬ ಮಾಸ್ತರು ಒಳ್ಳೇ ಕೀರ್ತನ ಮಾಡುತ್ತಾರೆಂದು ಡಂಗುರ ಸಾರಿ, ದೊಡ್ಡ ಸುದ್ದಿಯನ್ನೇ ಮಾಡಿಬಿಟ್ಟ. ಊರಿನವರೆಲ್ಲ ಕೀರ್ತನೆ ಮಾಡಬೇಕು, ಕಥೆ ಮಾಡಬೇಕು ಎಂದು ದುಂಬಾಲು ಬೀಳತೊಡಗಿದರು. ತಾಳ ಹಿಡಿದು ನಿಂತು ಕಥೆ ಮಾಡಲು ಧೈರ್ಯ ಬರಲಿಲ್ಲ. ಅಷ್ಟರಲ್ಲಿ ಶ್ರಾವಣಮಾಸ ಬಂತು. ಊರಿನವರಿಗೆಲ್ಲ ಹೇಳಿ ಬೆಂಚುಳ್ಳಿಯಿಂದ ಓರ್ವ ಶಾಸ್ತ್ರಿಗಳನ್ನು ಕರೆಸಿ ಚೋರಬಸವಪುರಾಣ ಓದಿಸಿದೆ. ಆಗ ನನಗೆ ಕಥೆ ಹೇಗೆ ಮಾಡಬೇಕು, ಪುರಾಣ ವಿಷಯಗಳನ್ನು ಹೇಗೆ ಜನಗಳಿಗೆ ಒಪ್ಪವಾಗುವಂತೆ ತಿಳಿಸಬೇಕೆಂಬುದು ಇನ್ನಷ್ಟು ಅನುಭವವಾಯಿತು. ಪುರಾಣದ ಶಾಸ್ತ್ರಿಗಳಿಂದ ಅನೇಕ ಸಂಸ್ಕೃತ ಸುಭಾಷಿತಗಳನ್ನು ಕೇಳಿ ಬರೆದುಕೊಂಡು ಬಾಯಿಪಾಠ ಮಾಡಿದೆ. ಆ ಶ್ಲೋಕಗಳನ್ನು ತಪ್ಪುತಪ್ಪಾಗಿ ಬಾಯಿಪಾಠ ಮಾಡಿ ತಪ್ಪನ್ನೇ ಹೇಳಿ ನಿಭಾಯಿಸಿಕೊಂಡವರಲ್ಲಿ ನಾನೂ ಒಬ್ಬ.

ಮುಂದೆ ಕೆಲದಿನ ಕಳೆದ ಮೇಲೆ ನಮ್ಮ ಧವಣಪ್ಪನವರ ಚನ್ನಬಸಪ್ಪನ ಮನೆಯಲ್ಲಿ ಪ್ರತಿವರ್ಷವೂ ವಿಜೃಂಭಣೆಯಿಂದ ಆಚರಿಸುತ್ತಿದ್ದ ಎಳೆಅಷ್ಟಮಿ ಹಬ್ಬ ಬಂತು. ಆ ವರ್ಷ ಚನ್ನಬಸಪ್ಪ ಬಹು ಸೊಗಸಾದ ಬಣ್ಣಬಣ್ಣದ ಕಾಗದಗಳ ಮಂಟಪ ಕಟ್ಟಿಸಿ ಅದರ ಮಧ್ಯೇ ಮಂಗಲ ಕುಶಲ ಪೂಜೆ ಮಾಡಿಸಿದ. ಆ ಹಬ್ಬದ ದಿನ ಇಡೀ ಊರಿಗೇ ಊಟ ಹಾಕುವುದು ಅವನ ಪ್ರತಿಷ್ಠೆಯ ಒಂದು ಕ್ರಿಯೆಯಾಗಿತ್ತು. ಬಹಳಷ್ಟು ಸ್ಥಳ-ಪರಸ್ಥಳದ ಜನ ಸೇರಿಬಿಟ್ಟರು. ಅಷ್ಟೂ ಜನಗಳ ಗಮನ ಸೆಳೆದಿದ್ದ ಕೇಂದ್ರವ್ಯಕ್ತಿ ನಾನಾಗಿ ಏನೇನೋ ಮಾತಾಡುತ್ತ ನಗಿಸುತ್ತ ಮಧ್ಯದಲ್ಲಿ ಕುಳಿತಿದ್ದೆ. ಎಲ್ಲರೂ ಬಾಯಿಬಿಟ್ಟು ನನ್ನ ಮಾತುಕತೆ ಕೇಳುತ್ತಿದ್ದರು. ಇದೂ ಅಲ್ಲದೆ ಕಾಗದದ ಸುಂದರ ಮಂಟಪ ಎಲ್ಲರ ಗಮನವನ್ನೂ ಸೆಳೆದು "ಈ ಮಾಸ್ತರರಿಗೆ ಗೊತ್ತಿಲ್ಲದ್ದು ಏನೂ ಇಲ್ಲಲ್ಲಪ್ಪೋ" ಎನ್ನುವಂತೆ ಮಾಡಿತ್ತು. ಹೆಂಗಸರಂತೂ ಆ ಮಂಟಪ ಕಂಡು ಬಾಯಿ ಬಾಯಿ ಬಿಡುತ್ತಿದ್ದರು. "ಮಾರಾಯ್ತಿ ಈ ಮಾಸ್ತರು ಎಲ್ಲಿಂದ ಬಂದ್ರೋ, ಏನವ್ವ ನಮ್ಮೂರ್ಗು ಕಳಕಳ ಅಂತೈತಿ, ಕಾಗದದಾಗ ಈ ಹೂವು ಗೀವು ಹ್ಯಾಂಗ ಮಾಡಿದ್ರವ್ವ ಆ ನಮಪ್ಪ, ಈ ಚಿತ್ರಾ ಕತ್ತರಿಸಿ ಹ್ಯಾಂಗ ಅಟ್ಟಿದಾರ ನೋಡ್ರವ್ವೋ...." ಇತ್ಯಾದಿ ಇತ್ಯಾದಿ ಮಾತಾಡುತ್ತಿದ್ದುದು ನನ್ನ ಕಿವಿಗೆ ಬೀಳುತ್ತಿತ್ತು.

ಈ ಕೋಲಾಹಲದ ಮಧ್ಯದಲ್ಲಿ ಶಾನುಭೋಗರ ರಾಮಪ್ಪ ಬಾಯಿಹಾಕಿ"ಮಾಸ್ತರು ಬಾಳ ಚೆನ್ನಾಗಿ ಕೀರ್ತನೆ ಮಾಡ್ತಾರ್ರೆಪೋ! ಇವತ್ತ ಹ್ಯಾಂಗಿದ್ರೂ ಬಾಳ ಜನ ಸೇರಿಬಿಟ್ಟೈತಿ. 'ಕಿರಾತಾರ್ಜುನರ ಯುದ್ಧ' ಕಥೆ ನಡ್ಸು ಹೋಗಿಬಿಡ್ರಿ. ಏಳ್ರೀ ಮಾಸ್ತರೇ, ಎದ್ದುಬಿಡಿ" ಎಂದೊಡನೆ ಎಲ್ಲರೂ ಹೌದು ಹೌದು ಕೀರ್ತನ ಮಾಡಿಬಿಡ್ರಿ ಎಂದುಬಿಟ್ಟರು. ನನಗೂ ಬಹಳ ದಿನದಿಂದ ಕಾಡುತ್ತಿದ್ದ ನನ್ನ ಒಳತೋಟಿಯ ಈ ಬಯಕೆ ಉದ್ದೀಪನಗೊಂಡು ಬೆಂಕಿಯಲ್ಲಿ ಹಾಕಿದ ತುಪ್ಪದಂತೆ ದಿಗ್ಗೆಂದಿತು. ನಾನು "ಆಗೇ ಹೋಗ್ಲಿ ಹಾಂಗರ.

ಹಾರ್ಮೋನಿಯಂ ತಬಲಾ ತರ್ರಿಸಿಬಿಡ್ರಿ" ಎಂದುಬಿಟ್ಟೆ. ಸಾಬಾರದ ಆನಾದಿ ಬಸಣ್ಣ ಆ ದಿ
ಅಲ್ಲೇ ಇದ್ದ. ಅವನ ಮುಂದೆ ಗಿಣಿವಾಲದವರ ಮನೆಯ ಮುರುಕು ಹಾರ್ಮೋನಿಯ
ತಂದು ಇಟ್ಟೇಬಿಟ್ಟರು. ಕ್ಷೌರದ ಗದಿಗೆಪ್ಪನ ಮನೆಯ ಹಳೆಕಾಲದ ತಬಲಾ-ಡಗ
ಬಂದೇಬಿಟ್ಟವು. ತಬಲಾ ಬಾರಿಸುವುದೇ ಗೊತ್ತಿಲ್ಲದ ಗದಿಗೆಪ್ಪ 'ತಬಲಾವಾಲಾ' ಆ
ಅನಾದಿ ಬಸಣ್ಣನೇನೋ ಹಾರ್ಮೋನಿಯಂ ಬಾರಿಸುತ್ತಿದ್ದ. ಆದರೆ ಹಾರ್ಮೋನಿಯಂನ ತಿ
ಒತ್ತಲು ಕಟ್ಟುಮಸ್ತಾದ ಆಳೇ ಆಗಬೇಕಾಗಿತ್ತು. ರಿಪೇರಿಯ ಮುಖವನ್ನೇ ಕಾಣದ ಹಳೆಕಾಲ
ಆ ಹಾರ್ಮೋನಿಯಂ ತಿದಿಯಲ್ಲಿ ಎಂಟು ತೂತುಗಳು. ಅಲ್ಲಿ ಗಾಳಿ ಹೋಗಿ ಹೋಗಿ
ಹಾರ್ಮೋನಿಯಂ 'ಬಸಕ್ ಬಸಕ್' ಎಂದು ಧ್ವನಿಮಾಡುತ್ತಿತ್ತು. ಬೇಗಬೇಗ ರಭಸದಿಂ
ತಿದಿ ಒತ್ತಿದಾಗ ಕುಂಇ ಕುಂಇ ಎನ್ನುತ್ತಿತ್ತು. ಒಂದು ಮೈಲು ದೂರದ ಸಾಬಾರಕ್ಕೆ ಬ
ಹಾರ್ಮೋನಿಯಂ ತರಲು ಇಬ್ಬರನ್ನೂ ಓಡಿಸಿಬಿಟ್ಟರು. ಆ ಹಾರ್ಮೋನಿಯಂ ಬರುವವರ
ಇದರಲ್ಲೇ ಕಥೆ ನಡೆಯಬೇಕೆಂದು ಕೆಲವರು ಹೇಳಿದರು. ಹರಕು ಹಾರ್ಮೋನಿಯ
ದನಿಯಲ್ಲಿಯೇ ನನ್ನ ಕೂಗಾಟ ಪ್ರಾರಂಭವಾಗಿ ಹೋಯಿತು. ನನ್ನ ಉತ್ಸಾಹ
ಹಾರ್ಮೋನಿಯಂ ತಬಲಾಗಳು ಏತಕ್ಕೂ ಸಿಲುಕದಾದವು. ವಾದ್ಯಗಳದೇ ಒಂದ
ದಾರಿಯಾದರೆ ನನ್ನದೇ ಬೇರೊಂದು ದಾರಿಯಾಯಿತು. ಆದರೂ ನನ್ನ ಕೂಗಾಟ
ಉತ್ಸಾಹದಲ್ಲಿ ಇದಾವುದೂ ನನಗೆ ಲಕ್ಷ್ಯವೇ ಇರಲಿಲ್ಲ. ನಾನು ತಾಳ ಹಿಡಿದು ಎದ್ದು ನಿಂ
ಕಥೆ ಪ್ರಾರಂಭಿಸಿಬಿಟ್ಟೆ. ಇಂಗಳಗಿ ವಿರೂಪಾಕ್ಷಶಾಸ್ತ್ರಿ ಹಾಡುತ್ತಿದ್ದ,

ವರದಾಯಕ ರೇಣುಕಾರ್ಯ,
ರಂಭಾಪುರಿ ಪೀಠಾಧೀಶ ಕುಂಬೋದ್ಭವ ಯೋಗಿದಾಸ
ನಂಬಿ ಭಜಿಪೆ ಭಕ್ತತೋಷ ॥ ವರದಾ....॥

ಎಂಬ ಯಮನ ಕಲ್ಯಾಣಿ ರಾಗದ ಪದ್ಯವನ್ನು ಒಳ್ಳೆ ಗತ್ತಿನಲ್ಲಿ ಹೇಳಿಬಿಟ್ಟೆ. ಅ
ಪದ್ಯವನ್ನು ವಿರೂಪಾಕ್ಷ ಶಾಸ್ತ್ರಿಯಿಂದ ಬರೆಯಿಸಿಕೊಂಡು ಗಟ್ಟಿಮಾಡಿಕೊಂಡು ಬಿಟ್ಟಿ
ರಾಗವೂ 'ಯಮನ ಕಲ್ಯಾಣಿ' ಎಂದು ಅವರೇ ಹೇಳಿದ್ದು. ನನಗೆ ರಾಗ-ಗೀಗಗ
ಪರಿಚಯವಿರಲಿಲ್ಲ. ನಾನು ಹಾಡಿದ್ದೇ ರಾಗ, ಹಾಕಿದ್ದೇ ತಾಳ ಎನ್ನುವಂತೆ ಇತ್ತು ನನ್ನ ಸಂಗೀ
ಜ್ಞಾನ. ಆದರೆ ಲಯದಲ್ಲಿ ಹಾಡು ಹಾಡಿ ಜನರನ್ನು ತಣಿಸುವ ಸಾಮರ್ಥ್ಯ ಅನೇಕ ವರ್ಷಗ
ಅನೇಕ ನಾಟಕಗಳ ಸಂಪರ್ಕ ಜನ್ಯ ಅನುಭವ ಸಾಧನೆಗಳಿಂದ ಅಷ್ಟಿಷ್ಟು ಕೈಗೂಡಿತ
ಮಂಗಳಪದ್ಯ ಹಾಡಿ ಮುಗಿದೊಡನೆ ಜನವೆಲ್ಲ ಭವ್ಯವಾಗಿ ಚಪ್ಪಾಳೆ ಹೊಡೆದು 'ಭ
ಸರ್ದಾರ' ಎಂದು ಬಿಟ್ಟರು. ಸರಿ ನನ್ನ ಉತ್ಸಾಹ ನೆತ್ತಿಗೇರಿ ಮೈಮೇಲೆ ಎಚ್ಚರವಿಲ್ಲದವನಂ
ಕಥೆಯಲ್ಲಿ ತನ್ಮಯನಾಗಿ ಮನಸ್ವೀ ಕೂಗಾಡಿಬಿಟ್ಟೆ. ಮೊದಲೇ ವೀರರಸಪ್ರಧಾನವಾ
ಕಥೆಯಲ್ಲವೆ? ಅದರ ಜೊತೆಗೆ ನನ್ನ ವೈಯಕ್ತಿಕ ರೌದ್ರವೂ ಗರಿಗೆದರಿ ಕುಳಿತವರ
ಹೌಹಾರುವಂತಾಗಿ ಹೋಯಿತು.

"ಇನಿತೊಂದಾರ್ಭಟೆಯೇಂ ಪುಳಿಂದ ಬಿಡು ನಿನ್ನೀ ಬಿಂಕಮಂ ಮಾ
ಶಸ್ತ್ರನಿಶಿತಾಸ್ತ್ರನಿಕಾಯದಿಂ ನೆಗಳ್ತೆ ಯುದ್ಧಂ ಮುಷ್ಟಿಯುದ್ಧಕ್ಕೆ ನಿಂದನುವಾಗೀಗಳೆ ತೋರ್ಪೆನಿ
ಬಲವದ್ದೋರ್ದಂಡ ಶೌರ್ಯಪ್ರವರ್ತನೆಯ ನೋಡುಗ ನಿನ್ನ ನಚ್ಚಿನ ಕಿರಾತವ್ರಾತಮೆನ್ನಂದವ

ಎಂಬ ಆರನೇ ತರಗತಿಯಲ್ಲಿ ಓದಿದ ಈ ವೃತ್ತದ ಲಾಭವನ್ನು ಚೆನ್ನಾಗಿ ಾಡಿಕೊಳ್ಳುವ ಸನ್ನಿವೇಶದಲ್ಲಿ ನಾನು ನನ್ನ ಭುಜಗಳನ್ನು ತೊಡೆಗಳನ್ನು ಚಪ್ಪರಿಸಿ ಅಭಿನಯ ಾಡಿಯೇ ಹಾಡಿದೆ. ಕಿರಾತನೊಡನೆ ಅರ್ಜುನ ಮಾಡಿದ ಈ ಸನ್ನಿವೇಶದ ಂಭಾಷಣೆಯನ್ನು ಅತ್ಯಂತ ಯಶಸ್ವಿಯಾಗಿ ಮಾಡಿದಾಗ ಜನರೆಲ್ಲ ದಂಗಾಗಿ ಹೋದರು. ಳಗಿನಿಂದ ಬಿಸಿ ಬಿಸಿ ಚಹಾವನ್ನು ತಿಪ್ಪಮ್ಮ ಮಾಡಿ ತಂದಿಟ್ಟಳು. "ನಿಮ್ಮೆಲ್ಲರನ್ನೂ ಬಿಟ್ಟು ನೊಬ್ಬನೇ ಈ ಚಹಾ ಕುಡಿಯಲು ಸಂಕಟವಾಗುತ್ತದೆ" ಎಂದು ಹೇಳುತ್ತಲೇ ಚಹಾ ಡಿಯುವುದನ್ನು ಕಂಡು ಜನವೆಲ್ಲ ಬಿದ್ದುಬಿದ್ದು ನಕ್ಕರು. ಹೆಣ್ಣುಮಕ್ಕಳ ಬಳಗವೆಲ್ಲ ಕಣ್ಣೆಲ್ಲ ವಿಯಾಗಿ ಕೇಳುತ್ತ ಮೈಮರೆತರು. ತಮ್ಮ ಮನೆಯ ಎಳೆಅಷ್ಟಮಿಯಲ್ಲಿ ಇಂಥ ಒಂದು ಕಥೆ ಡೆದುದಕ್ಕಾಗಿ ಚನ್ನಬಸಪ್ಪನ ಮನೆಯ ಬಳಗವೆಲ್ಲ ಸಂತೋಷಾಬ್ಧಿಯಲ್ಲಿ ಮುಳುಗಿಹೋದರು. ಬಲಾದವನ ಕೈ ನಿಂತಿತು. ತಾಳಮೇಳ ಶ್ರುತಿಗಿತಿ ಏನನ್ನೂ ನೋಡದೆ ಕ್ಷೌರದ ಗದಿಗೆಪ್ಪ ನ್ನ ಮನಸ್ಸಿಗೆ ಬಂದಂತೆ ಧಂಧಂ ಎಂದು ಬಾರಿಸತೊಡಗಿದ್ದ. ಅಷ್ಟರಲ್ಲಿ ಸಾಬಾರದಿಂದ ಳ್ಳೇ ಹಾರ್ಮೋನಿಯಂ ಬಂತು. ಜೊತೆಗೆ ತಬಲಾ ಡಗ್ಗಾಗಳೂ. ಅದನ್ನು ಬಾರಿಸುವ ನ್ನೊಬ್ಬ ಅಸಾದಿ ಬಳಗದವನೇ ಆದ ದುರುಗಪ್ಪನೂ ಬಂದ. ಮುಂದಿನ ಕಥೆ ಇನ್ನೂ ಕಳೆಗಟ್ಟಿ ೋಯಿತು. ಎರಡು ತಾಸು ನಾನು ಹೇಗೆ ಕಥೆ ಮಾಡಿದೆ? ಏನು ಹಾಡಿದೆ? ನಗಿಸಲು ನೇನು ಅಡ್ಡಕಥೆ ಹೇಳಿದೆ? ಎಂಬುದರ ಅರಿವೇ ಇಲ್ಲದೆ, ಕಥೆ ಮುಗಿದು ಹೋಯಿತು. ಂಗಳಕ್ಕೆ "ಮಾನಿನಿ ಪಾಡೆಲೆ ಮಂಗಳವ ಪಿಂಗದೆ ಪಾಪಂ ಪಾಹಿಶಿವ" ಎಂಬ ಶಿವಯೋಗ ುಂದಿರ ಭಜನಾವಳಿಯ ನನ್ನ ಅತಿ ಮೆಚ್ಚಿನ ಹಾಡು ಹಾಡಿದೆ. ಹಾಡು ಬಹಳ ್ರಭಾವಯುತವಾಗಿ ಹೊರಬಂತು. ಎಲ್ಲ ಕಥೆಗಾರರೂ ಮಾಡುವಂತೆ ನಾನು ಮಂಗಳಾರತಿ ಟ್ಟೆ ಹಿಡಿಸಿದೆ. ಬಿಲ್ಲಿ, ಎರಡು ಬಿಲ್ಲಿ, ಕಾಸು ಎಲ್ಲ ಸೇರಿ ಹನ್ನೆರಡಾಣೆ ಆರತಿ ತಟ್ಟೆಯಲ್ಲಿ ಿದ್ದುಬಿಟ್ಟಿದ್ದವು. ನನ್ನ ದೃಷ್ಟಿಯಲ್ಲಿ ಅದು ಚಿಕ್ಕ ಮೊತ್ತವೇನೂ ಆಗಿರಲಿಲ್ಲ. ಕಥೆ ಮುಗಿಸಿ ಂತ ಮೇಲೆ ಜನರೆಲ್ಲ ಮೂಕವಿಸ್ಮಿತರಾಗಿ ನನ್ನನ್ನೇ ನೋಡತೊಡಗಿದರು. ನಾನು ಆ ಕಥೆ ಮಾಡಿ ಮೂರು ಲೋಕವನ್ನೇ ಗೆದ್ದುಕೊಂಡು ಬಂದ ಶೂರ ಪುರುಷನಂತೆ ಬೀಗಿಹೋದೆ. ನ್ನಲ್ಲಿ ಏನೇನೋ ಶಕ್ತಿ ತುಂಬಿದೆ ಎನ್ನುವ ಆತ್ಮಪ್ರತ್ಯಯ ಮನಸ್ಸಿನ ಮುಂದೆ ಧೀಂಕಿಟ್ಟಿತು. ಇಷ್ಟೊಂದು ಪ್ರಭಾವಯುತವಾಗಿ ಕಥೆ ಮಾಡುತ್ತೇನೆಂಬ ಅರಿವು ನನಗೆ ಇಲ್ಲದಂತೆ ಕಥೆಯಾಗಿ ೋಯಿತಲ್ಲಾ! ಅಬ್ಬಾ! ಎಂದು ನನಗೆ ನಾನೇ ಅಂದುಕೊಂಡೆ. ಸರಿ, ಸ್ವಲ್ಪ ಹೊತ್ತು ಪ್ರಶಂಸೆಯ ಸುರಿಮಳೆ ಸುರಿಯಿತು. ಧರಣಪ್ಪನವರ ಚನ್ನಬಸಪ್ಪ ಎರಡು ರೂಪಾಯಿ ಸಂಭಾವನೆ ಇಟ್ಟು ನಮಸ್ಕರಿಸಿಬಿಟ್ಟ. ನಾನು ಆ ಎರಡು ರೂಪಾಯಿ ಬೇಡವೆಂದು ಂದಕ್ಕೆ ಕೊಟ್ಟೆ. ಅವನು ಪುನಃ ನನ್ನ ಜೇಬಿನಲ್ಲಿ ತುರುಕಿದ. ಶಾನುಭೋಗರ ರಾಮಪ್ಪ ವಂದಾರ್ಪಣೆ ಮಾಡುವಾಗ ನನ್ನನ್ನು ಹೊಗಳಿ ಹೊಗಳಿ ಹೊನ್ನಶೂಲಕ್ಕೇರಿಸಿಬಿಟ್ಟ.

ಇಷ್ಟಾದದ್ದೇ ತಡ ಮರುದಿನ ನಾನು ಕಥೆ ಮಾಡಿದ ಸುದ್ದಿ ಹೊಸೂರಿಗೆ ಮುಟ್ಟಿಬಿಟ್ಟಿತು. ಡೋರಹಳ್ಳಿ, ಅಗಸನಹಳ್ಳಿ, ಮೂಡೂರು, ಗೊಂದಿಗೆಲ್ಲ ಡಂಗುರ ೊಡೆದುಬಿಟ್ಟಿತು. ಶನಿವಾರ ಹೊಸೂರಿಗೆ ಹೋದೊಡನೆ "ಕಳ್ಳಾ, ಇಷ್ಟು ದಿನ ಕೀರ್ತನ ಮಾಡುವುದನ್ನು ನಮ್ಮೆದುರಿಗೆ ಹೇಳದೆ ಮುಚ್ಚಿಟ್ಟುಕೊಂಡು ಹಿರೇಕಾಂಶಿಯಲ್ಲಿ ನಮಗಾರಿಗೂ ೇಳಿಕಳಿಸದೆ ಕೀರ್ತನ ಮಾಡಿಬಿಟ್ಯಾ. ಈ ದಿನ ನಮ್ಮೂರ್ನಲ್ಲಿ ಕೀರ್ತನ ಮಾಡೇ ತೀರಬೇಕು"

ಎಂದುಬಿಟ್ಟರು. ಆ ದಿನ ಬಿಟ್ಟು ನಾಳೆ ಆದಿತ್ಯವಾರ ಮಾಡುತ್ತೇನೆ ಎಂದು ಹೇಳಿ ಆದಿತ್ಯವಾ
ಅಲ್ಲಿ ಇದೇ 'ಕಿರಾತಾರ್ಜುನರ ಯುದ್ಧ' ಕಥೆ ಮಾಡಿ ಅವರನ್ನು ದಂಗುಗೊಳಿಸಿಬಿಟ್ಟೆ.
ದಿನ ಹೊಸೂರಲ್ಲಿ ಮಾಡಿದ ಕಥೆಗೆ ಸುತ್ತಮುತ್ತಣ ಹಳ್ಳಿಯಿಂದ ಅನೇಕ ಜನ ಬಂದುಬಿಟ್ಟರು
ಶಿವಬಸಪ್ಪ ಸೊಗಸಾದ ಏರ್ಪಾಡು ಮಾಡಿಬಿಟ್ಟ. ಆದರೆ ನಾನೇ ಹಾರ್ಮೋನಿಯ
ನುಡಿಸಲು ಕುಳಿತು ಹಾರ್ಮೋನಿಯಂ ನುಡಿಸಲು ಬಾರದ ಕಾರಣವಾಗಿ ಸಂಗೀ
ಕಳಪೆಯಾಯಿತು. ಶಿವಬಸಣ್ಣನಿಗೆ ಹಾರ್ಮೋನಿಯಂ ಬಾರಿಸಲು ಉತ್ಸಾಹವಿತ್ತು. ಆದ
ಅಭ್ಯಾಸವಿರಲಿಲ್ಲ. ಅವನಿಗೆ ಹಾರ್ಮೋನಿಯಂ ಬಾರಿಸಲು ಬರುತ್ತಿರಲಿಲ್ಲ ಎಂದರೂ
ಸರಿಯೆ.

ಆಮೇಲೆ ಚಿಕ್ಕಾಂಶಿ, ದೊರಪಳ್ಳಿ, ಶಿರಗೋಡು, ಶಕುನವಳ್ಳಿ ಇತ್ಯಾದಿ ಅನೇ
ಊರುಗಳ ಜನ ತಮ್ಮ ತಮ್ಮ ಊರುಗಳಿಗೆ ಕರೆಸಿ ಕಥೆ ಮಾಡಿಸತೊಡಗಿದರು. ಅದರಿಂ
ನನಗೆ ಅಷ್ಟು ಇಷ್ಟು ಕಾಸು ಕೈಸೇರತೊಡಗಿತು. ವಿಶೇಷಾಧ್ಯಯನಕ್ಕೆ ಅನಿವಾರ್ಯರಾಗಿ
ತೊಡಗಿಸಿತು. ಈ ಲಾಭ ಅಷ್ಟಿಷ್ಟಲ್ಲ. ಈ ಬಂಡವಾಳದಿಂದಲೇ ಮುಂದೆ ನಾನು ಕನ್ನಡ
ಪಂಡಿತ ಪರೀಕ್ಷೆಯಲ್ಲಿ ರ್‍ಯಾಂಕ್ ಪಡೆಯಲು ಕಾರಣವಾಯಿತು. ಇಲ್ಲಿ ಒಂದು ಮಾತು
ಹೇಳಲೇಬೇಕು. ಕೇವಲ ಮುಲ್ಕೀ ಪರೀಕ್ಷೆ ಪಾಸಾದ ನಾನು ಅವರಿವರಿಂದ ಕೇಳಿ
ಬರೆಸಿಕೊಂಡು ಬಾಯಿಪಾಠ ಮಾಡಿದ್ದ ಸಂಸ್ಕೃತ ಶ್ಲೋಕಗಳನ್ನೂ ಬಹಳ ಅಬದ್ಧವಾಗಿ
ಹೇಳುತ್ತಿದ್ದೆನೆಂಬ ಅರಿವು ನನಗಾದದ್ದು ನಾನು ಸಂಸ್ಕೃತವನ್ನು ಅಭ್ಯಾಸ ವಿಷಯವಾಗಿ ಕನ್ನಡ
ಪಂಡಿತ ಪರೀಕ್ಷೆ ಓದಿದ ನಂತರವೇ. ಅದುವರೆಗೆ ಎಲ್ಲೆಲ್ಲೂ ಈ ಅಬದ್ಧ ಸಂಸ್ಕೃತ ಶಬ್ದಗಳನ್ನೇ
ಚಲಾವಣೆಗೆ ಬಿಟ್ಟುಬಿಟ್ಟಿದ್ದೆ. "ಅವಸರ ಪಠಿತಾವಾಣೀ ಗುಣಗಣರಹಿತಾಪಿ ಶೋಭತೇ"
ಎಂಬಂತೆ ಅವಸರವಾಣಿಯಲ್ಲಿ ಅವೆಲ್ಲ ಎಷ್ಟೋ ದೂರ ನಡೆದಾಡಿಬಿಟ್ಟವು. "ಸಾರ್ಥಜೀವನ"
ಎಂಬುದನ್ನು "ಸ್ವಾರ್ಥಕ ಜೀವನ" ಎಂದೂ, "ಪೃಥಿವ್ಯಾಂ ತ್ರೀಣಿರತ್ನಾನಿ' ಎಂಬುದನ್ನು
"ಪೃಥಿವೀಂ ತ್ರೀಣಿರತ್ನಾನಿ' ಎಂದು 'ಗುರವೇನಮಃ' ಎಂಬುದನ್ನು 'ಗುರುವೇ ನಮಃ' ಎಂದೂ
'ಆಹಾರನಿದ್ರಾಭಯಮೈಥುನಂಚ' ಎಂಬುದನ್ನು 'ಆಹಾರನಿದ್ರಾಂ ಭಯಮೈಥುನಶ್ಚ', 'ಗುರು
ಬ್ರಹ್ಮಾ ಗುರುರ್ವಿಷ್ಣು' ಎಂಬುದನ್ನು 'ಗುರುಬ್ರಹ್ಮ ಗುರುಂವಿಷ್ಣುಂ' ಇತ್ಯಾದಿ ಅಬದ್ಧ ಕಂಠ
ನನ್ನ ಮುಖವಿನಿರ್ಗತವಾಗಿ ಯಾವ ಯಾವ ದೇವಾನುದೇವತೆಗಳನ್ನು ಎಷ್ಟೆಷ್ಟು
ಕೋಪಗೊಳಿಸಿಬಿಟ್ಟವೋ ಅವರೇ ಬಲ್ಲರು! ಅರ್ಧಮರ್ಧ ಸಂಸ್ಕೃತ ತಿಳಿದವರು ತಾವು
ತಿಳಿದದ್ದು ತಪ್ಪೋ, ಅಥವಾ ಇವರು ಹೇಳುವುದು ತಪ್ಪೋ? ಎಂದು ಗೊಂದಲಗೊಳ್ಳುವಂತೆ
ನನ್ನ ಸಂಸ್ಕೃತ ಶಬ್ದೋಚ್ಚಾರಣೆ. ಇದು ತಪ್ಪು ಎಂದು ಮುಂಗೈ
ಹಿಡಿದು ಕೇಳುವವರಿಗೆ ಧೈರ್ಯವಾದರೂ ನನ್ನೆದುರಿಗೆ ಹೇಗೆ ಬಂದೀತು! ನಾನು ಮಾತ್ರ
ಉತ್ಸಾಹದಿಂದ ಕೂಗಾಡಿದ್ದೇ ಕೂಗಾಡಿದ್ದು. ಮೊದಲ ಸಲ ನನ್ನ ಅಬದ್ಧ ಸಂಸ್ಕೃತದ ತಪ್ಪು
ಕಂಡುಹಿಡಿದು ಯೋಗ್ಯ ಸಲಹೆ ಕೊಟ್ಟವರೆಂದರೆ ಮಲ್ಲಾಡಿಹಳ್ಳಿಯ ರಾಘವೇಂದ್ರ
ಸ್ವಾಮಿಗಳು. 1943ನೇ ಇಸ್ವಿ ಅಲ್ಲಿಗೆ ನನ್ನನ್ನು ಕೆಂಗುಂಟೆಯ ಒಬ್ಬಿಬ್ಬರು ಮಿತ್ರರು ಕರೆದುಕೊಂಡು
ಹೋದಾಗ ಅಲ್ಲಿ ನನ್ನ ಪೇಟೆಂಟ್ ಕಥೆಯಾದ ಶಬರ ಶಂಕರ ವಿಳಾಸವನ್ನೇ ಮಾಡಿದೆ.
ರಾಘವೇಂದ್ರರು ಅಲ್ಲಿ ಆಶ್ರಮ ಸ್ಥಾಪಿಸಿಕೊಂಡು ಇದ್ದರು. ಅಂದಿನ ಕಥೆಗೆ ಅವರೇ
ಮುಖ್ಯಅತಿಥಿಗಳು ಮತ್ತು ಹಾರ್ಮೋನಿಯಂ ವಾದಕರೂ ಆಗಿದ್ದರು. ಈ ವಿಷಯವನ್ನು

ರಾಘವೇಂದ್ರ ಸ್ವಾಮಿಗಳಿಗೆ ಕೊಟ್ಟ ಸಂಭಾವನಾ ಗ್ರಂಥ 'ನಂದನವನ'ದಲ್ಲಿ ಬರೆದ ನನ್ನ ಲೇಖನದಲ್ಲಿ ವಿಸ್ತಾರವಾಗಿ ವಿವರಿಸಿದ್ದೇನೆ.

ಕೀರ್ತನ ಮಾಡಬೇಕು, ಕೀರ್ತನಕಲೆ ಮೈಗೂಡಿಸಿಕೊಳ್ಳಬೇಕು ಎನ್ನುವ ಬಯಕೆ ನನ್ನಲ್ಲಿ ಬಹು ಹಿಂದಿನಿಂದಲೂ ಸುಪ್ತವಾಗಿತ್ತು. ಆದರೆ ಸನ್ನಿವೇಶ ಮತ್ತು ಸಾಮಗ್ರಿಗಳ ಅಭಾವ, ಧೈರ್ಯ, ಗತ್ತುಗಾರಿಕೆ ಸಾಲದೆ ಅದು ಕೇವಲ ಮಾತುಗಾರಿಕೆಯಲ್ಲಿ, ವಿನೋದ ಹಾಸ್ಯಪ್ರಸಂಗಗಳಲ್ಲಿ ಅಭಿವ್ಯಕ್ತವಾಗುತ್ತಿತ್ತು. ಪ್ರಥಮತಃ ನಾನು ನನ್ನ ಊರು ಬಿಟ್ಟು ಹಾನಗಲ್ಲು ಮಠದಲ್ಲಿದ್ದುಕೊಂಡು ವಿದ್ಯಾಭ್ಯಾಸ ಮಾಡುತ್ತಿದ್ದ ಕಾಲದಲ್ಲಿ ಕಜ್ಜರಿ ಗುರುಮೂರ್ತಿ ಶಾಸ್ತ್ರಿಗಳಿಂದ ರೇವಣ ಸಿದ್ಧೇಶ್ವರ ಪುರಾಣ ಪ್ರವಚನ ಕೇಳಿ ಪ್ರಭಾವಿತನಾಗಿ ಹೋದಂದಿನಿಂದ ಈ ಬಯಕೆ ಉಂಟಾಯಿತೆನ್ನಬೇಕು. ಶಾಸ್ತ್ರಿಗಳವರ ಪುರಾಣದ ಗತ್ತುಗಾರಿಕೆಯನ್ನು ಅದನ್ನು ಓದುತ್ತಿದ್ದ ಮಣ್ಣೂರು ಗವಾಯಿಗಳ ಹಾಡುಗಾರಿಕೆಯ ಶೈಲಿಗಳನ್ನು ನಾನು ಅನುಕರಣ ಮಾಡಿ ಮಿತ್ರರಲ್ಲಿ ಹಾಸ್ಯ ಮಾಡುವಲ್ಲಿಂದಲೇ ಈ ಕಲೆಯ ಬೀಜಾರೋಪಣವಾಗಿತ್ತೆನ್ನಬೇಕು. ಮುಂದೆ ಕುಮ್ಮೂರು ಕೊಟ್ರಯ್ಯ, ಇಂಗಳಿಗಿ ವಿರೂಪಾಕ್ಷಶಾಸ್ತ್ರಿ, ಆಲೂರಿನ ಕಲ್ಯಾಣಯ್ಯ, ಇವರುಗಳು ಮಾಡುತ್ತಿದ್ದ ಅನೇಕ ಕಥೆ ಕೇಳಿ ಅವರ ಅನುಕರಣೆ ಮಾಡಿ ಚೇಷ್ಟೆ ಮಾಡುತ್ತಿದ್ದೆ. ಹುಕ್ಕೇರಿ ಮಠದಲ್ಲಿ (ಹಾವೇರಿಯಲ್ಲಿ)ದ್ದಾಗ ಅಲ್ಲಿಗೆ ಅನೇಕರು ಮಾಡುತ್ತಿದ್ದ ಕಥೆಗಳನ್ನು ಕೇಳಿದ್ದೆ. ಇದಕ್ಕೆ ಬಾಲ್ಯದಿಂದಲೂ ಅನೇಕ ನಾಟಕಗಳನ್ನು ಸಣ್ಣಾಟ-ದೊಡ್ಡಾಟಗಳನ್ನು ನೋಡಿದ್ದಾಗ ಸಂಸ್ಕಾರ ಸೇರಿಕೊಂಡಿತು. ಹಿರೇಕಾಂಶಿಯಲ್ಲಿ ಬೆಂಚಳ್ಳಿ ಶಾಸ್ತ್ರಿಗಳಿಂದ ನಾನೇ ಸ್ವತಃ ನಿಂತು ಮಾಡಿಸಿದ್ದ ಚೋರಬಸವಪುರಾಣ ಪ್ರವಚನದ ಬಂಡವಾಳ ಸಾಕಷ್ಟು ಸಂಗ್ರಹವಾಯಿತು. ಪ್ರಾಥಮಿಕ ಶಾಲೆಯ ಎಲ್ಲ ಪಠ್ಯಪುಸ್ತಕಗಳ ಪದ್ಯಗಳನ್ನೂ ಬಾಯಿಪಾಠ ಮಾಡಿದ್ದರ ಪರಿಣಾಮ ನನಗೆ ಸಾಹಿತ್ಯದ ವಿಶಿಷ್ಟ ಶಕ್ತಿಯೆನ್ನಿಸಿತು. ಈ ಎಲ್ಲ ಸಾಮಗ್ರಿಗಳ ಸಮಿಶ್ರಣದಿಂದ ನನ್ನಲ್ಲಿ ಕೀರ್ತನ ಕಲೆ ಮೈಗೂಡಿ, ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿ ತಿರುಗಿ ಕಥೆ ಮಾಡಿ ಕೀರ್ತಿ-ಯಶ-ಧನ-ಧಾನ್ಯ ಸಂಪತ್ತು ಗಳಿಸಿ ಈ ಬಂಡವಾಳದಿಂದಲೇ ನಾನು ಹಳೆಯ ಮೈಸೂರಿಗೆ 1943ರಲ್ಲಿ ಪ್ರವೇಶಿದ್ದೆನಷ್ಟೇ! ವಿದ್ಯಾಭ್ಯಾಸಕ್ಕೆ ಅಲ್ಲಿ ಈ ಕಲೆಯೇ ನನಗೆ ಸಮಸ್ತ ಸೌಕರ್ಯಗಳನ್ನೊದಗಿಸಿತು. ಮೈಸೂರಿನಿಂದ ಸೊಲ್ಲಾಪುರದವರೆಗಿನ ಕನ್ನಡನಾಡಿನ ಪ್ರಸಿದ್ಧ ಮಠಮಾನ್ಯಗಳಲ್ಲಿ ದೊಡ್ಡದೊಡ್ಡ ಸಭೆ-ಸಮಾರಂಭಗಳಲ್ಲಿ ಕಥೆ-ಉಪನ್ಯಾಸಗಳನ್ನು ಮಾಡಿದೆ. ಆದರೆ ಬೀದಿಬೀದಿಗಿಳಿದು ಕಥೆ ಮಾಡುವ ವೃತ್ತಿಗೆ ಇಳಿಯಲಿಲ್ಲ. ಅದಕ್ಕೆ ಬೇರೆಬೇರೆಯ ವ್ಯಕ್ತಿತ್ವ ಮಾಧ್ಯಮ ಬೇಕಾಗುತ್ತಿತ್ತು. ನನ್ನದು ಅಪ್ಪಟ ಸಾಹಿತ್ಯಾಧಾರಿತ ಕಥೆಯಾಗತೊಡಗಿದ್ದು ಇದಕ್ಕೆ ಕಾರಣ. ಶುದ್ಧಸಾಹಿತ್ಯ ಸಂಗ್ರಹಿಸಿ ಕಿರಾತಾರ್ಜುನಯುದ್ಧ, ಗಿರಿಜಾಕಲ್ಯಾಣ, ಚಿಕ್ಕಮಾದಣ್ಣನ ಪ್ರಾಣದಾನ, ಬಸವಣ್ಣನವರ ಪಂಚಪರುಷ, ಶಾಕುಂತಲ, ಸಿದ್ಧರಾಮನ ಅಖಂಡ ಸಾಕ್ಷಾತ್ಕಾರ, ಮಂಗಳಗೌರಿ, ತಿರುನೀಲಕಂಠ, ಕನ್ನಡ ಸೀತಾಪರಿತ್ಯಾಗ, ಇತ್ಯಾದಿ 10-15 ಕಥೆಗಳನ್ನು ಅಭ್ಯಾಸ ಮಾಡಿದ್ದೆ. ಬರಬರುತ್ತ ಹಾಸ್ಯ, ಚೇಷ್ಟೆ, ನಗೆಗಾರಿಕೆಗಳನ್ನು ಕಡಿಮೆ ಮಾಡಿ ಮೌಲಿಕ ಸಾಹಿತ್ಯ, ತತ್ತ್ವಶಾಸ್ತ್ರ ಮತ್ತು ಜನಜೀವನ ಶ್ರದ್ಧೆಗಳ ವಿಷಯ ಅಭಿವ್ಯಕ್ತಿಗೆ ಪ್ರಾಧಾನ್ಯತೆ ಕೊಡತೊಡಗಿದೆ. ಅನೇಕ ಕಡೆಗಳಲ್ಲಿ ಪುರಾಣ ಪ್ರವಚನವನ್ನು ತಿಂಗಳುಗಟ್ಲೆ ಮಾಡಿದೆ. ಬೆಂಗಳೂರು ಆಕಾಶವಾಣಿಯಲ್ಲಿ ನಾಲ್ವತ್ತು ಐವತ್ತು ಕಾರ್ಯಕ್ರಮಗಳನ್ನು ಬಿತ್ತರಿಸಿದೆ. ಒಟ್ಟಿನಲ್ಲಿ ಈ ಕಲೆ ಕರಗತವಾದುದು ನನ್ನ ಅಭಿವ್ಯಕ್ತಿ ಶಕ್ತಿಗೂ, ಅಧ್ಯಯನ ಶೀಲತೆಗೂ, ವೈವಿಧ್ಯಮಯ ವಿಷಯ ಸಂಗ್ರಹಣೆಗೂ ಅವಕಾಶ ಮಾಡಿತೆನ್ನಬೇಕು. ನಾನು ಹಿರೇಕಾಂಶಿಗೆ

ಬರದಿದ್ದರೆ ಅಥವಾ ಓರೇಕಾಂಶಿಯ ಚನ್ನಬಸಪ್ಪನ ಮನೆಯಲ್ಲಿ ಆ ಘಳಿಗೆಯಲ್ಲಿ ಕಥೆ ಮಾಡದಿದ್ದರೆ ಮುಂದೆ ನಾನು ಕಥೆ, ಪ್ರವಚನಕಾರನಾಗುತ್ತಿದ್ದೆನೋ ಇಲ್ಲವೋ ಹೇಳುವುದಕ್ಕಾಗುವುದಿಲ್ಲ. ಕಾಲ ಕೂಡಿ ಬರಬೇಕು ಇತ್ಯಾದಿಯಾಗಿ ಕರೆಯುತ್ತಾರಲ್ಲ ಹಾಗೆ ಅದು ಸತ್ಯವೇ ಸರಿ. ಚನ್ನಬಸಪ್ಪನ ಮನೆಯ ಆ ದಿನ ಸಮಾರಂಭ ನನ್ನ ಪಾಲಿಗೊಂದು ಅಮೃತಘಳಿಗೆಯೇ. ಪ್ರಚೋದನೆ ಶಾನುಭೋಗರ ರಾಮಪ್ಪನದೇ ಎನ್ನಬೇಕು. ಇದೇನೇ ಇರಲಿ, ಉತ್ತರೋತ್ತರ ಹಲವಾರು ಬಗೆಯ ಶಕ್ತಿ ಸಂಪನ್ನತೆ ನನ್ನಲ್ಲಿ ಉಂಟಾಯಿತು. ಬಹುಮುಖವಾಗಿ ಸತತ ಪ್ರಯತ್ನದಿಂದ ದುಡಿದು ಕೇವಲ ನಾಲ್ಕು ವರ್ಷಗಳಲ್ಲಿ ನಮ್ಮ ಮನೆಯ ಕಡುದಾರಿದ್ರ್ಯವನ್ನು ದೂರೀಕರಿಸಿ ತಮ್ಮ ಅನ್ನವನ್ನು ತಾವು ದುಡಿದು ಸಂಪಾದಿಸಿ ನಿಶ್ಚಿತೆಯಿಂದ ಅಂಬಲಿ ಗಂಜಿ ಕುಡಿಯುವಷ್ಟಾದರೂ ಪ್ರಗತಿಯನ್ನು ಸಾಧಿಸಿದೆ. ನನ್ನ ಹುಟ್ಟಿದ ಮನೆಯಲ್ಲಿನ ಬಾಲ್ಯದಿಂದ ನನ್ನನ್ನು ಮಮತೆಯಿಂದ ಸಲಹಿದ ಎಲ್ಲರ ಮುಖದಲ್ಲೂ ಒಂದಿಷ್ಟು ನಗೆ ಚಿಮ್ಮುವಂತೆ, ತೃಪ್ತಿಯ ನಿಟ್ಟುಸಿರು ಬಿಡುವಂತೆ ಮಾಡಿದೆನಲ್ಲಾ ಎಂಬ ಸಂತೋಷಕ್ಕೆ ಉತ್ಸಾಹ ಶಕ್ತಿಯ ಆಧಿಕ್ಯಕ್ಕೆ ...ನನ್ನ ಶ್ರಮ, ಶಕ್ತಿ ಇನ್ನೂ ನೂರ್ಮಡಿಸಿ ಬಂದ ಅನುಭವವಾಗತೊಡಗಿತು. ಆಗಿನ ನನ್ನ ಆನಂದವನ್ನು ಇಂದು ನೆನೆಸಿಕೊಂಡರೆ ಆ ಮೊತ್ತದ ಆನಂದ ಸಿಗಲಿಕ್ಕಿಲ್ಲ. 48 ವರ್ಷಗಳಷ್ಟು ದೂರದ ಹೆಜ್ಜೆಗಳು, ದೂರದ ಹೆಜ್ಜೆ ಕಾಣುವುದಿಲ್ಲ ಅಲ್ಲವೆ? ಹೆಜ್ಜೆ ಇಡುತ್ತ ಬಂದೆವೆಂಬ ಅರಿವು ಮಾತ್ರ ಉಳಿದಿರುತ್ತದೆ. ಆ ಅರಿವಿನಲ್ಲಿ ಹಿಂದು ಹಿಂದಕ್ಕೆ ಹೋಗಿ ನೆನೆಸಿಕೊಳ್ಳಬೇಕು. ನೆನೆಸಿಕೊಂಡು ಹೇಳಿದ ಮಾತುಗಳಷ್ಟೇ ಇಲ್ಲಿವೆ! ಮನದ ಆಳದ ಅಂದಿನ ಆನಂದಾನುಭೂತಿಯಿಲ್ಲ. ಅದನ್ನು ಶಬ್ದಗಳಿಂದ ಈಗ ವರ್ಣಿಸಲಾರೆ ಮನದಲ್ಲಿ ಕರಗಿದೆ. ಏತನ್ಮಧ್ಯೆ, ಈ ನಾಲ್ಕು ವರ್ಷಗಳ ಅವಧಿಯಲ್ಲಿ ಅನೇಕ ಸ್ವಾರಸ್ಯಕರ ಅನುಭವಗಳುಂಟಾಗತೊಡಗಿದವು. ಕೆಲವು ಅನುಭವಗಳನ್ನು ನೆನೆಸಿಕೊಂಡರೆ ಇಂದಿಗೂ ಜೀವ ಹಿಂಡಿ ಬರುತ್ತಿದೆ. ಆದರೆ ಸನ್ನಿವೇಶದ ಯಮಪಾಶ ನನ್ನನ್ನು ಕೊಲ್ಲುತ್ತಲೇ ಇತ್ತು ಎಂದು ಬಹಳ ವಿಷಾದದಿಂದ ಹೇಳಲೇಬೇಕು. ಹಾಗೆ ಹೇಳದಿದ್ದರೆ ನಾನು ಪ್ರಾಮಾಣಿಕನೂ ಆಗುವುದಿಲ್ಲ. ಯಾವನೇ ಆಗಲಿ ತನ್ನ ಜೀವನಚರಿತ್ರೆಯನ್ನು ತಾನೇ ಬರೆದಾಗ ಮಾಡಿದ ತಪ್ಪು, ಒಪ್ಪು, ಯೋಗಕ್ಷೇಮ, ಸುಖದುಃಖ, ಹಾನಿವೃದ್ಧಿ, ವಾಮಕ್ಷೇಮ ಎಲ್ಲವನ್ನೂ ತೆರೆದಿಡಬೇಕಾಗುವುದಲ್ಲವೆ? ಕೇವಲ ಲೋಕ ನನ್ನನ್ನು ದೊಡ್ಡವನೆಂದೂ, ಸಾಹಸಿಯೆಂದೋ ಇನ್ನು ಏನೇನೋ ತಿಳಿದುಕೊಳ್ಳಲೆಂದು ತಪ್ಪುಗಳನ್ನು ಮುಚ್ಚಿ ಒಪ್ಪುಗಳನ್ನು ಹೇಳುವುದು ಪ್ರಾಮಾಣಿಕತೆಯಲ್ಲ. ಮುಂದೆ ನನ್ನ ಅಪರಾಧಗಳನ್ನು ಒಂದೊಂದಾಗಿ ಹೇಳಲೇಬೇಕು. ಬಚ್ಚಿಡದೆ ಹೇಳುತ್ತೇನೆ. ಅಪರಾಧ ನನ್ನದೆಷ್ಟು, ಸನ್ನಿವೇಶದ್ದೆಷ್ಟು? ಓದುಗರೇ ತಿಳಿಯಲಿ. ಹಾಗೆ ಹೇಳುವಾಗ ವ್ಯಕ್ತಿಗಳ ನಿಜ ಹೆಸರು ವೃತ್ತಾಂತಗಳನ್ನು ಮಾತ್ರ ಬಚ್ಚಿಡುವುದು ಅನಿವಾರ್ಯ. ಘಟನೆ ಮುಖ್ಯ. ಅದೂ ಅಲ್ಲದೆ ಈಗ ಇರುವ ನನ್ನ ಹಿತಚಿಂತನೆ ಮಾಡಿದ ಅನೇಕ ಸಾತ್ವಿಕ ಜೀವಗಳಿಗೆ ನಾನು ಈಗ ನೋವು ಮಾಡಿ ಯಾವ ನರಕಕ್ಕೆ ಹೋಗಲಿ!

**"ಜೋಕೆ ಕಂಡ್ಯಾ ಆತ್ಮಾ ಜೋಕೆ...."**

ಈ ಪದ್ಯ ನನಗೆ ಬಾಲ್ಯದಿಂದಲೂ ಅಚ್ಚುಮೆಚ್ಚು. ನಮ್ಮೂರ ಭಜನೆಯ ಮೇಳದಲ್ಲಿ ಆಗಾಗ ಆನಂದಿ ಮುದುಕಪ್ಪ ಹೇಳುತ್ತಿದ್ದ. "ಜೋಕೆ ಕಂಡ್ಯಾ ಆತ್ಮಾ ಜೋಕೆ, ಕಾಕುಸ್ತ್ರೀಯರು ಬಳಗ ಅನೇಕ ಬರುತಿಹುವಿಲ್ಲಿ. ಮರವೆ ಮನೆಯೊಳಗರಿಪಿಲ್ಲದಂಗನೆಯರು ಪರಿಪರಿ ನೆರೆದು

ನಿನ್ನ ಮರುಳುಮಾಡುವರಯ್ಯಾ..." ಬಾಲಲೀಲಾಮಹಾಂತ ಶಿವಯೋಗಿಗಳದ್ದೋ ಏನೋ ಈ ಹಾಡಿನಲ್ಲಿ ಆತ್ಮನನ್ನು ಕುರಿತು ಆತ್ಮನೇ ಹೇಳುವ ಮಾತು. ಮನಸ್ಸೇ ಮನಸ್ಸಿಗೆ ಬುದ್ಧಿ ಹೇಳುವುದುಂಟು. ಮನಸ್ಸು ತಿಳಿಗೊಂಡಾಗ ಯಾವಾಗಲೋ ಹಿಂದೊಮ್ಮೆ ಕದಡಿ ವಿಕಾರಗೊಂಡ ಸ್ಥಿತಿಯಲ್ಲಿದ್ದಾಗಿನ ಅದರ ಕಪಿತನಕ್ಕೆ ಹಾಗಲ್ಲ ಹೀಗೆ, ಹೀಗಲ್ಲ ಹಾಗೆ ಇತ್ಯಾದಿ ಹೇಳಿ ಅದರ ಕಪಿತನಕ್ಕೆ ಕಡಿವಾಣ ಹಾಕಿ ದಾರಿಗೆ ತರುವುದುಂಟು. ಇದೇ ಸದಸದ್ವಿವೇಕವೆನ್ನುವುದು. ಮನಸ್ಸು ಒಮ್ಮೊಮ್ಮೆ ಕೋಪದಲ್ಲಿ ಮೂಗು ಮುರಿದುಕೊಂಡು ಶಾಂತಿಯಲ್ಲಿ ಹರಿದ ಮೂಗನ್ನು ಸರಿಪಡಿಸಲು ಹೋಗುತ್ತದೆ. ತನ್ನ ಶತಾಪರಾಧಗಳನ್ನು ನೆನೆದು ಎಂಥ ಮೂರ್ಖತನ ಮಾಡಿಬಿಟ್ಟೆನಲ್ಲಾ ಎಂದು ಹಳಹಳಿಸಿ ಮುಂದೆ ಅಂಥ ಸನ್ನಿವೇಶ ಬಂದಾಗ ವಿವೇಕದಿಂದ ಹೋಗಲು ಸಂಕಲ್ಪ ಮಾಡುತ್ತದೆ. ದೇಹ ಮರವೆಯ ಮನೆ. ಮರೆವು ಪದೇ ಪದೇ ಬರುತ್ತದೆ. ಮೈಮರೆತು ವ್ಯವಹರಿಸುವ ಸಮಯದಲ್ಲಿ ಅರಿವೇ ಇಲ್ಲದ ಅಂಗನೆಯ ನೆರೆದು ವ್ರತಭಂಗ ಮಾಡಿ ನಿನ್ನನ್ನು ಪಾಪಕೂಪಕ್ಕೆ ತಳ್ಳುತ್ತಾರೆ ಎಂದೇ ಜ್ಞಾನಿಗಳು ಎಚ್ಚರಿಕೆ ಕೊಡುತ್ತಾರೆ. ನಾನು ಮಲೆನಾಡಿಗೆ ಉಪಾಧ್ಯಾಯನಾಗುವ ಹಂಬಲದಿಂದ ಮನೆಬಿಟ್ಟು ಹೊರಟ ದಿನ ಅಪ್ಪ ಅಷ್ಟು ದೂರ ಕಳಿಸಿ ಬರೋಣವೆಂದೋ ಅಥವಾ ಕೆಲವು ಎಚ್ಚರಿಕೆಯ ಮಾತು ಹೇಳಿ ಬರೋಣವೆಂದೋ ಅಥವಾ ನನ್ನ ಮಗ ದೂರದ ದೇಶಕ್ಕೆ ಹೋಗುತ್ತಿದ್ದಾನೆ, ಇವನನ್ನ ಅಗಲಿ ಹೇಗಿರುವುದೆಂಬ ವಾತ್ಸಲ್ಯ ಉಕ್ಕಿ ಬಂತೋ ಏನೋ ಏಳು ಮೈಲುದೂರ ಆಡೂರುವರೆಗೆ ಹಾಗೆ ಮಾತಾಡುತ್ತ ಬಂದೇ ಬಂದ. 'ನಾನು ಹೋಗುತ್ತೇನೆ, ನೀನು ಹೋಗು' ಎಂದು ಎರಡು ಮೂರು ಸಲ ಹೇಳಿದೆ. 'ನಡೆ ನಡೆ ಆಡೂರುವರೆಗೆ ಬರುತ್ತೇನೆ' ಎಂದು ಬಂದುಬಿಟ್ಟ. ದಾರಿಯಲ್ಲಿ ಏನೇನೋ ನೂರೆಂಟು ಮಾತಾಡಿದ. ಅವೆಲ್ಲ ಮರೆತು ಹೋದವು. ಒಂದು ಮಾತು ಮಾತ್ರ ಇಂದೂ ಮರೆತಿಲ್ಲ. "ತಮ್ಮಾ ಮಲ್ಲಾಡದಲ್ಲಿ ಬಾಳ ಜ್ವಾಕಿ. ಅಲ್ಲಿನ ಅನೇಕ ಹೆಂಗಸರು ಬಾಳ ಬೆರ್ಕಿಯರು. ಎಲ್ಲಾರು ಹಾಂಗಿರುತ್ತಾರಂತಲ್ಲಪಾ. ಒಬ್ಬಿಬ್ರು ಇರ್ತಾರ. ಊಟದಾಗ ಕಪ್ಪು ಹಾಕರೂ ಇರ್ತಾರ. ಕೆಟ್ಟಚಾಳಿಯರೂ ಇರ್ತಾರ, ಬಾಳ ಜ್ವಾಕಿ. ನೀ ಅಲ್ಲಿ ನಾವಿಲ್ಲಿ. ಹೋಗ್ಬಂಗರ, ನಾ ಹೋಗ್ತಿನಿ" ಎಂದು ಹೇಳಿ ಕಣ್ಣಂಚಿನಲ್ಲಿ ನೀರು ತಂದು ತೋರಗೊಡದೆ ಬೇರೆಡೆಗೆ ಮುಖ ಹೊರಳಿಸಿ ಕಣ್ಣು ತಿಕ್ಕಿಕೊಂಡು ಹಿಂದಕ್ಕೆ ಹೊರಟ. ನಾನು ಹೊರಳಿಹೊರಳಿ ನೋಡುತ್ತ ಮುಂದಕ್ಕೆ ಹೊರಟೆ. ಅವನೂ ಹೊರಹೊರಳಿ ನೋಡಿ ಊರಕಡೆ ಹೊರಟ.

ಮಲೆನಾಡಿನ ಹೆಂಗಸರು 'ಬೆರ್ಕಿಯರು' ಸರಿ. ಅಂಥ ಹೆಂಗಸರು ನಮ್ಮ ಊರಾಗೂ ಅದಾರಲ್ಲ. ನಮ್ಮ ಪಾಡಿಗೆ ನಾವು ಇದ್ದರಾತು. ಅವರ ಬೆರ್ಕಿತನ ನನ್ನನೇನು ಮಾಡ್ತದೆ? ಎಂದು ನನ್ನ ತರ್ಕ. ನಮ್ಮ ತಂದೆ ಹೇಳಿದ ಈ ಮಾತು ಎರಡು ವರ್ಷ ಹಿರೇಕಾಂಶಿಯಲ್ಲಿ ನನ್ನ ಪಾದರಸದಂತಹ ಚಟುವಟಿಕೆಯಿಂದ ಕೂಡಿದ ಹತ್ತಾರು ಮುಖದ ಕಾರ್ಯಕ್ರಮದ ಮಧ್ಯದಲ್ಲಿ ಅನುಭವಕ್ಕೆ ಬರಲೇ ಇಲ್ಲ. ನಮ್ಮ ತಂದೆಯ ತರ್ಕ, ಅನುಭವ ಸುಳ್ಳೆಂದು ಭಾವಿಸುವಂತೆ ಆಯಿತು. ಆದರೆ ನನ್ನ ತಂದೆ ಹೇಳಿದ ಮಾತು ಸುಳ್ಳಲ್ಲ, ಸತ್ಯವೆನ್ನುವ ಕಾಲ ಸನ್ನಿಹಿತವಾಗುತ್ತ ಬರತೊಡಗಿತು. ವ್ಯಾಧ ಒಡ್ಡಿದ ಬಲೆಯಲ್ಲಿ ಜಿಂಕೆ ಒಮ್ಮೆಲೆ ಬಿದ್ದೀತೆ? ಅನೇಕ ದಿನಗಳ ಸಾಧನೆಯಿಂದ ಮೈಮರೆತ ಜಿಂಕೆ ಒಮ್ಮೊಮ್ಮೆ ಬಲೆಗೆ ಸಿಕ್ಕೀತು. ಸಿಕ್ಕು ಗೋಣು ಮುರಿಸಿಕೊಂಡೀತು!

ಧರಣಪ್ಪನವರ ಮನೆಯಲ್ಲಿ ಕೀರ್ತನೆ ಮಾಡಿದಾಗ ನನ್ನ ಸಂಗೀತ, ವಾಚಾಳಿತನ, ನಗಿಸುವಿಕೆ, ಇವೇ ಮೊದಲಾದ ಚಟುವಟಿಕೆಗಳು ಅನೇಕರಿಗೆ ಸಾತ್ವಿಕ ಭಾವೋದ್ದೀಪನಗೊಳಿಸಿದರೆ ಕೆಲವರಿಗೆ ಅನುರಾಗೋದ್ದೀಪನಕಾರಿಯಾಗಿರಬೇಕು. ಅಂದೇ ಆ ಘಳಿಗೆಯಲ್ಲೇ ಅನುರಾಗ ಗೊಂಡರೆಂದೂ ತಿಳಿಯಲು ಶಕ್ಯವಿಲ್ಲ. ನಾನು ಹಿರೇಕಾಂಶಿಗೆ ಬಂದಾಗಿಸಿಂದ ನನ್ನ ಮೈಕಟ್ಟು ನೋಡಿಯೇ, ಸಂಪೂರ್ಣ ರಾಮಾಯಣದ ಚಟುವಟಿಕೆಗಳನ್ನು ಕಂಡೋ, ಉಪಾಧ್ಯಾಯ ವೃತ್ತಿ, ವೈದ್ಯಕೀಯ ವೃತ್ತಿ ಇತ್ಯಾದಿ ಇತ್ಯಾದಿ ಚಟುವಟಿಕೆಗಳನ್ನು ಕಂಡೋ ಎಂದಿನಿಂದಲೋ ಆ ಬೇಡ ತನ್ನ ಬಲೆಯನ್ನು ಒಡ್ಡುತ್ತಿರಬೇಕು. ಈ ಚತುರ ಜಿಂಕೆ ದೂರ ದೂರದಿಂದಲೇ ಬಲೆಯಿರಬಹುದೆಂದು ಶಂಕಿಸಿ ದೂರಹೋಗಿರಬಹುದು.

ಒಮ್ಮೊಮ್ಮೆ ಕೆಲಕೆಲವು ಸನ್ನಿವೇಶಗಳು ನನ್ನನ್ನು ಬಹಳ ಸಂಕಟಕ್ಕೀಡು ಮಾಡುತ್ತಿದ್ದವು. ಈ ಜನಗಳಿಂದ ದೂರವಿದ್ದು ಬಹಳ ಗಂಭೀರವಾಗಿ ನನ್ನಷ್ಟಕ್ಕೆ ನನ್ನ ಶಾಲೆಯ ಕೆಲಸವಾಯಿತು. ನಾನಾಯಿತು! ಹೀಗೇಕೆ ಇರಬಾರದು ಎನ್ನಿಸುತ್ತಿತ್ತು. ಆದರೆ ನನ್ನ ಜಾಯಮಾನಕ್ಕೆ ಆ ಸ್ವಭಾವ ತುಂಬಾ ದೂರದ್ದು. ಸದಾ ಹೆಣ್ಣುಮಕ್ಕಳ ಬಳಗ, ಗಂಡಸರ ಬಳಗ, ಸಾಮಾನ್ಯರು, ಕೂಲಿಕಾರರು, ಬಡವರು, ಮಹಮ್ಮದೀಯ ಹೆಣ್ಣುಮಕ್ಕಳು ಕೂಡ ನನ್ನನ್ನು ಬಹು ಆತ್ಮೀಯತೆಯಿಂದ ಪರಿಶುದ್ಧ ಹೃದಯದಿಂದಲೇ ಕಾಣುತ್ತಿದ್ದರು. ನಾನು ಅವರಲ್ಲಿ ಅದೇ ರೀತಿ ವರ್ತಿಸುತ್ತಿದ್ದೆ. ತುಂಬಾ ಗಂಭೀರವಾಗಿ ನನ್ನಷ್ಟಕ್ಕೆ ನಾನಿರುವುದು ಹೇಗೆ ಸಾಧ್ಯ ಹೇಳಿ! ಮಹಮ್ಮದೀಯರ ಘೋಷಾ ಸ್ತ್ರೀಯರು "ಹಜರತ್ ರಸ್ತೆಮೆ ಜಾ ರಹಾ ಹೈ, ಬುಲಾವ್ ರೇ" ಎಂದು ತಮ್ಮ ಮಕ್ಕಳಿಗೆ ಹೇಳಿ ಕರೆಸುತ್ತಿದ್ದರು. ನಾನು ಹೋದರೆ ಕಂಬಳಿ ಹಾಸಿ ಕುಳ್ಳಿರಿಸಿ ಅರೆಬರೆ ಕನ್ನಡದಲ್ಲಿ ನನ್ನನ್ನು ಶ್ಲಾಘಿಸಿ ಮಾತನಾಡಿದ್ದೇ ಆಡಿದ್ದು. "ದೇಖೋ ಮಾಸ್ತರ್ ಮೇರಾ ಏ ಬೇಟಿ ಬುಖಾರ್ ಹೋಕು...ದೇಖನೇ ಸರ್ಕಾಚ್ ನೈ" ಎನ್ನುತ್ತಿದ್ದರು. ನಾನು ಆ ಹುಡುಗಿಯನ್ನು ನೋಡಿ ಈ ಜ್ವರವೆಂದ ಮೇಲೆ ಇನ್ನೇನಿದೆ, ನನ್ನ ಬಹು ವಿಶ್ವಾಸದ ಔಷಧವಾದ ಬೇವಿನಚಕ್ಕೆ ಕಷಾಯವನ್ನು ಮಾಡಿಸಿ ಕುಡಿಸೇ ಹೋಗಬೇಕು. ಹಾಗೆ ಮಾಡಿದೆ. ಆಗ ಅವರು ಗಟ್ಟಿ ಹಾಲು ಕಾಯಿಸಿ, ಸಕ್ಕರೆ ಹಾಕಿ ಕುಡಿಸೇ ಕಳಿಸಬೇಕು. ಜ್ವರಬಂದ ಹುಡುಗಿ ತೋರಿಸುವುದಕ್ಕಿಂತ ಹೆಚ್ಚಾಗಿ ನನಗೆ ಹಾಲು ಕುಡಿಸಿ ಕಳಿಸುವುದೂ ಆ ಹೆಂಗಸರಿಗೆ ಮುಖ್ಯವಾಗಿತ್ತು ಎನ್ನಿಸುತ್ತದೆ ನನಗೆ. ಇಷ್ಟೊಂದು ಭಕ್ತಿ-ಪ್ರೀತಿ-ವಿಶ್ವಾಸವುಳ್ಳ ಆ ಜನಗಳ ಮಧ್ಯದಲ್ಲಿ ನಾನು ಬಹು ಮಾತು ಕತೆಯಿಲ್ಲದೆ ಅವರ ವಿಶ್ವಾಸಕ್ಕೆ ಸ್ಪಂದಿಸದೆ ಗಂಭೀರವಾಗಿ ನನ್ನಷ್ಟಕ್ಕೆ ನಾನು ಇರುವುದು ಹೇಗೆ ಸಾಧ್ಯವೆಂಬುದೇ ಹೊಳೆಯುತ್ತಿರಲಿಲ್ಲ. ಅಹಮ್ಮದ್‌ಸಾಬ್ ಆ ಕೇರಿಯಲ್ಲಿ ಸಿಕ್ಕರಂತೂ ತೀರೇ ಹೋಯಿತು. ಕೈ ಹಿಡಿದು ಎಳೆದುಕೊಂಡೇ ಹೋಗುತ್ತಿದ್ದ. ಆತನ ಹೆಂಡತಿಯೂ ಒಳಗಿಂದ 'ಹಜರತ್ ಆಯಾ' ಎಂದು ಸಂಭ್ರಮದ ದನಿಯಲ್ಲಿ ಮಾತನಾಡಿಕೊಳ್ಳುವುದು ಕೇಳುತ್ತಿತ್ತು. ಅವರ ಉಪಚಾರ ಅನ್ಯಾದೃಶ. ಅಹಮ್ಮದ್ ಸಾಬಿ ತನ್ನ ಮನೆ-ಮಕ್ಕಳು ಎಲ್ಲರನ್ನೂ ಹೊರಗೆ ಕರೆದು 'ಸಲಾಂ' ಮಾಡಿಸಿಯೇ ತೀರಬೇಕು. ಇಷ್ಟೊಂದು ಪ್ರೀತಿ, ಗೌರವದ ಒಂದು ಪ್ರಪಂಚದ ಮಧ್ಯದಲ್ಲಿ ನಾನು ಬಾಳುತ್ತೇನೆಂದು ಎಂದೂ ಪೂರ್ವದಲ್ಲಿ ಭಾವಿಸುವುದಕ್ಕೆ ಸಾಧ್ಯವಿರುತ್ತಿರಲಿಲ್ಲ. ನನ್ನ ವೈಯಕ್ತಿಕ ವಿಚಾರದಲ್ಲಿ ಯಾರಿಗೂ ತಿಲಮಾತ್ರವೂ ಅಪವಿತ್ರ ಭಾವವಿರಲೇ ಇಲ್ಲ.

ದೀರ್ಘಕಾಲ ಪರಾನ್ನಭುಂಜನ, ಪರಗೃಹವಾಸದಂಥ ಸನ್ನಿವೇಶ ಒಮ್ಮೊಮ್ಮೆ ನನಗೆ ಜಿಗುಪ್ಸೆ ಮಾಡುತ್ತಿದ್ದವು. ಈ ಸನ್ನಿವೇಶವೇ ನನಗೆ ಮಾನಸಿಕವಾಗಿ ಬೇಸರದ್ದಾಗಿತ್ತು.

ದೇಶಸಂಚಾರಿಯೂ, ಪರಾನ್ನ ಭುಂಜಿಸುವವನೂ, ಪರಗೃಹವಾಸ ಮಾಡುವವರು ಬದುಕಿದ್ದರೂ ಸತ್ತವರಿಗೆ ಸಮಾನರೆಂದು ಆ ಪಂಚತಂತ್ರಕಾರ ಸುಮ್ಮನೆ ಹೇಳುತ್ತಾನೆಯೇ? ನನ್ನ ಈ ಸನ್ನಿವೇಶವೇ ನನ್ನನ್ನು ಸಂಕಟಕ್ಕೀಡುಮಾಡುವಂತಹುದೆಂದು ಹೇಳಿದ್ದು. ಆದರೆ ಊರ ಜನಕ್ಕೆ "ಇವನೊಬ್ಬ ಭಾರವಾದ ಮನುಷ್ಯ" ಎನ್ನುವ ಮನೋಭಾವವನ್ನೆಂದೂ ತೋರಿಸಿಕೊಳ್ಳದಂತೆ ಅವರೊಡನೆ ವರ್ತಿಸಿದೆ. ಎಲ್ಲ ರೀತಿಯಿಂದ ಸಮೃದ್ಧವಾಗಿದ್ದ ಆ ಜನರೂ ಹಾಗೆ ಭಾವಿಸಿರಲಾರರು! ಹಾಗೆ ಭಾವಿಸಿದ್ದರೆ, ಯಾರ ಮನೆಯಲ್ಲೇ ಆಗಲಿ ಏನಾದರೂ ವಿಶೇಷ ಅಡಿಗೆ ಮಾಡಿದ್ದಾಗಲೋ, ವಿಶೇಷ ಹಣ್ಣು ಹಂಪಲುಗಳನ್ನು ಅರಣ್ಯದಿಂದ ತಂದಾಗಲೋ ನನಗೆ ನೈವೇದ್ಯ ಮಾಡದೆ ತಿಂದುದೇ ಇಲ್ಲದುದು ಸಾಕ್ಷಿಯಾದೀತು. ನನ್ನ ಮನಸ್ಸಿಗೇ ಅಂಥ ಒಂದು ಅಳುಕು ಇದ್ದುದಂತೂ ನಿಜ. ಮದುವೆ ಮುಂಜಿಗಳಲ್ಲಿ ಮದುವೆ ಮುಗಿದು ಬೀಗರು ಊರಿಗೆ ಹೋಗುವವರೆಗೂ ನಾನು ಆ ಮನೆಯ ಮುಖ್ಯ ಯಜಮಾನ್ಯ ವಹಿಸಲೇಬೇಕಾಗಿತ್ತು. ನನಗೆ ಆ ಯಜಮಾನ್ಯ ಬೇಡವಾಗಿದ್ದರೂ ಅವರು ಬಿಡುತ್ತಿರಲಿಲ್ಲ. ಕರೆದುಕೊಂಡು ಹೋಗಿ ಕಟ್ಟೆಯ ಮೇಲೆ ಕಂಬಳಿ ಹಾಸಿ ಕುಳ್ಳಿರಿಸಿ ಮುಂದೆ ದೊಡ್ಡ ತಟ್ಟೆಯಲ್ಲಿ ಅಡಿಕೆ, ವೀಳ್ಯದೆಲೆ, ಸುಣ್ಣ, ಬೀಡಿಯ ಕಟ್ಟುಗಳನ್ನು ಇಟ್ಟಿರುತ್ತಿದ್ದರು. ಪಟ್ಟಣದ ಪ್ರತಿಷ್ಠಿತರು ನನ್ನ ಅಕ್ಕ ಪಕ್ಕದಲ್ಲಿ ಕುಳಿರಲೇಬೇಕು. ನಾನೇ ಆ ಜನದಲ್ಲಿ ಸರ್ವಜ್ಞ. ನನಗೆ ಸರ್ವಜ್ಞತ್ವವನ್ನು ಆ ಜನ ಕೊಟ್ಟುಬಿಟ್ಟಿದ್ದರು. ನಾನು ಸರ್ವಜ್ಞ ಹೌದೋ ಅಲ್ಲವೋ ನನಗೇ ತಿಳಿದಿರಲಿಲ್ಲ. ಜನ ಮಾತ್ರ ನನಗೆ ಆ ಪಟ್ಟ ಕಟ್ಟಿದ್ದಂತೂ ನಿಜ.

ಒಮ್ಮೆ ಒಂದು ಮದುವೆ ಮನೆಯಲ್ಲಿ ನಾಗವಲ್ಲಿಯ ರಾತ್ರಿಯ ಸಮಯದಲ್ಲಿ ನನಗೇ ಹಸೆಯನ್ನು ವಿವಿಧ ಬಣ್ಣದ ಅಕ್ಕಿಯಲ್ಲಿ ಸ್ತ್ರೀ ಬಳಗದ ಮಧ್ಯದಲ್ಲಿ ಅಲಂಕರಿಸುವ ಕಾರ್ಯಭಾರ ಬಿತ್ತು. ಆ ಮದುವೆಯ ತುದಿ ಮೊದಲಿಗೆಲ್ಲ ನಾನೇ ಯಜಮಾನನಾಗಿದ್ದೆ. ರಾತ್ರಿ ಎರಡು ಘಂಟೆಯವರೆಗೆ ಹಸೆ ಬರೆದುದಾಯಿತು. ಆ ಹಸೆ ಬರೆದ ರೀತಿ ಬಹು ಜನರಿಗೆ ಆಶ್ಚರ್ಯ ಹುಟ್ಟಿಸುವಂತೆ, ಹಸೆ ಬರೆಯುವ ಪ್ರಸಿದ್ಧ ಹೆಂಗಸರೂ ಬೆರಳುಕಚ್ಚುವಂತೆ ಇತ್ತು ಆ ಹಸೆ. ಶ್ಲಾಘನೆಗಳ ಸುರಿಮಳೆ ಹೆಂಗಸರಿಂದ. ರಾತ್ರಿ ಬಹಳವಾಗಿ ಹೋಯಿತು. ಬಿಡುವಿಲ್ಲದೆ ಬೆಳಗಿನಿಂದ ಕೆಲಸ ಮಾಡಿದ ನನಗೆ ನಿದ್ರೆ ಬಂದು ತೂಕಡಿಸುತ್ತಿದ್ದುದನ್ನು ಗಮನಿಸಿ ಮಹಡಿಯಲ್ಲಿ ಮಲಗಲು ಹೇಳಿ ಹಾಸಿಕೊಟ್ಟರು. ನಾನು ಅಲ್ಲಿ ಸ್ವಸ್ಥವಾಗಿ ಮಲಗಿಬಿಟ್ಟೆ. ನನ್ನ ವಿಷಯದಲ್ಲಿ ಎಂದಿನಿಂದಲೂ ತಲೆಕೆಡಿಸಿಕೊಂಡಿದ್ದ ಓರ್ವ ಹೆಣ್ಣುಮಗಳು ಯಾವುದೋ ಸಾಮಾನು ಹುಡುಕುವ ನೆಪದಲ್ಲಿ ಎಡವಿದ ನೆಪ ಮಾಡಿ ಮೈಮೇಲೆ ಬಿದ್ದು ಗಟ್ಟಿಯಾಗಿ ತಬ್ಬಿಬಿಟ್ಟಳು. ನಾನು ಮೈಮೇಲೆ ಹಾವು ಹರಿದವನಂತೆ ಅಬ್ಬರಿಸುತ್ತ ಎದ್ದು ಯಾರು? ಎಂದುಬಿಟ್ಟೆ. ಆ ಹೆಂಗಸಿನ ಇಚ್ಛೆ ಏನಿತ್ತೋ ದೇವರೇ ಬಲ್ಲ. 'ಅಯ್ಯೋ ಮಾಸ್ತರೇನು?' ಎಂದು ಕಾಲುಮುಟ್ಟಿ ನಮಸ್ಕರಿಸುತ್ತ 'ನೋಡಿ ಮೇಷ್ಟ್ರೇ ತೆಂಗಿನಕಾಯಿ ಬೇಕಾಗಿತ್ತು, ನಿಮ್ಮನ್ನು ನೋಡಲಿಲ್ಲ. ಎಡವಿಬಿದ್ದುಬಿಟ್ಟೆ. ಥೂ! ......ಮೇಷ್ಟ್ರನ್ನೇ ತುಳಿದುಬಿಟ್ಟೆ' ಎನ್ನುತ್ತ, ಮೈಮೇಲೆ ಕೈಯಾಡಿಸುತ್ತಾ ತನ್ನ ಚಪಲ ತೀರಿಸಿಕೊಂಡುಬಿಟ್ಟಳು. ಇವಳು ಆಗಾಗ ನನಗೆ ಭೇಡಿಸುತ್ತಲೇ ಬಂದಿದ್ದ ಅತ್ಯಂತ ಸಲಿಗೆಯ ಹೆಂಗಸಾಗಿದ್ದಳು. ಬಹು ವಿಶ್ವಾಸಿಕರ ಮನೆಯ ಹೆಂಗಸು ಅವಳು. ಅನೇಕ ಜನಗಳ ಎದುರಿಗೆ ಅವಳು ಆಗಾಗ ಭೇಡಿಸುತ್ತಿದ್ದರೂ ಈ ಬಗೆಗೆ ಜನಗಳಾರಿಗೂ ಇವಳ ಮನದಾಳದಲ್ಲಿ ಅಶುದ್ಧಭಾವವಿದೆ ಎಂಬ ಸಂಶಯ ತಿಳಿದವರೇ ಅಲ್ಲ. ಅವಳನ್ನು ಗದರಿಸಿಬಿಡಬೇಕೆಂದು ಮನಸ್ಸಾಗುತ್ತಿದ್ದರೂ ಗದರಿಸುವುದಕ್ಕೆ ನನಗೆ ಹೆದರಿಕೆ. ಹಾಗೆ ಗದರಿಸಿದರೆ ಮುಂದೆ ಏನೇನು

ಅನರ್ಥಗಳಾದಾವೋ ಎಂಬ ಭಯದಿಂದ ಸಹಿಸಿಕೊಂಡು ನಗುನಗುತ್ತಲೇ ಇರುತ್ತಿದ್ದೆ. ನ
ಮನಸ್ಸನ್ನು ಗೆಲ್ಲಲಾಗಲಿಲ್ಲ. ಇದು ನನ್ನ ದೊಡ್ಡವರ ಸೇವೆ ಸಲ್ಲಿಸಿದ್ದ ಸುಸಂಸ್ಕೃತ ಫಲವಾಗಿರಬಹುದು

ಇದೇ ಹೆಂಗಸು ಸಾಮಾನ್ಯವಾಗಿ ನನ್ನ ಚಟುವಟಿಕೆಗಳ ಮೇಲೆ ಬಹಳ ಕಣ್ಣು ಇಟ್ಟಿದ್ದಾಳೆಂ
ತೋರುತ್ತದೆ. ನಾನು ದಿನವೂ ಶಾಲೆಬಿಟ್ಟು ತೋಟದ ಬಾವಿಗೆ ಹೋಗಿ ಸ್ನಾನ ಮಾ
ಬರುತ್ತಿದ್ದೆನಷ್ಟೆ. ಒಂದು ದಿನ ನಾನು ತೋಟದ ಬಾವಿಗೆ ಹೋಗಿ ಸ್ನಾನಕ್ಕಿಳಿದ ಸಂದರ್ಭದ
ಬಟ್ಟೆ ತೊಳೆಯುವ ನೆಪ ಮಾಡಿಕೊಂಡು ಅಲ್ಲಿಗೆ ಬಂದೇ ಬಿಟ್ಟಳು. ನಾನು ಈಸಾಡಿ ದಂಡೆ
ಬರುತ್ತಿದ್ದಾಗ ತಾನು ಸೀರೆಯನ್ನು ನೀರಿನಲ್ಲಿ ಜಾಲಾಡಿಸುವ ನೆಪಮಾಡಿ ಸೀರೆಯ ಒಂದ
ತುದಿ ನನಗೆ ಬಡಿಯುವಂತೆ ನೀರಿನಲ್ಲಿ ಬಹುದೂರಕ್ಕೆ ಬಿಸಾಡಿದಳು. ನಾನು ಮೆಟ್ಟಿಬಿ
ಹಿಂದಕ್ಕೆ ಹಾರಿದೆ. ಅವಳು ಆಗ 'ಮಾಸ್ತರೇ, ನೀವು ಸೀರೇನೇ ಮುಟ್ಟಿಸಿಕೊಳ್ಳುವುದಿಲ್ಲವೇ
ನೋಡ್ತೇನೆ ಎಷ್ಟು ದಿನ ಸೀರೆ ಮುಟ್ಟದಂತೆ ಇರುತ್ತೀರೋ ಅನ್ನೋದನ್ನ!' ಅಂದು ಹ
ಕಿರಿದಳು. ಅಷ್ಟರಲ್ಲಿ ಅಲ್ಲಿಗೆ ಬಟ್ಟೆ ತೊಳೆಯಲು ಬೇರೆ ಇಬ್ಬರು ಹೆಂಗಸರು ಬಂದುಬಿಟ್ಟರ
ಅಲ್ಲಿಗೆ ಆ ಪ್ರಸಂಗ ಮುಂದುವರಿಯಲಿಲ್ಲವಾದರೂ, ನಾನು ದಂಡೆಗೆ ಬಂದು ಉಟ್ಟ ಪಂಚೆಯನ
ಬಿಚ್ಚಿ ಮಡಿಪಂಚೆ ಉಡುವಷ್ಟದಲ್ಲಿ ನಾ ಬಿಟ್ಟ ಪಂಚೆಯನ್ನು ಒಯ್ದು ಆ ಹೆಂಗಸ
ಒಗೆಯತೊಡಗಿದಳು. 'ಮಾಸ್ತರೇ, ನಾನೇ ನಿಮ್ಮ ಪಂಚೆಯನ್ನೂ ಒಗೆದುಕೊಡ್ತೇನೆ. ಅಲ್ಲ
ಗುಡಿಸಲಲ್ಲಿ ಕುಳಿತುಕೊಳ್ಳಿ' ಎಂದು ಪಂಚೆ ಒಗೆದು, ಹಿಂಡಿ ನನ್ನ ಹತ್ತಿರ ಬಂದು ಕೈಯ
ಪಂಚೆಕೊಟ್ಟು ಕುಕ್ಕಿ ಹೋಗಿಬಿಟ್ಟಳು. ಹೀಗೆ ಒಂದಲ್ಲ ಎರಡಲ್ಲ, ಅನೇಕ ಪ್ರಸಂಗಗಳ
ದೇವರೇ ನನ್ನನ್ನು ಸ್ತ್ರೀಯರಿಂದ ಕಾಪಾಡಿದ್ದಾನೆ. ಈ ಪ್ರಸಂಗ ನಡೆದ ಮೇಲೆ ನನಗೆ ನಾಚಿಕೆಯಾ
ಅವರ ಮನೆ ಮುಂದೆ ಹಾಯ್ದು ಹೋಗುವುದನ್ನೇ ಕೆಲವು ದಿನ ನಿಲ್ಲಿಸಿದೆ. ಬೇರೆ ದಾರಿಯಿಂ
ಶಾಲೆಗೆ ಹೋಗುವ ಬರುವುದನ್ನು ಮಾಡಿದೆ. ಆದರೆ ಆ ಹೆಂಗಸು ಸಿಕ್ಕಲ್ಲಿ ಏನಾದರು
ಮಾತನಾಡಿಸಿ ತನ್ನ ಚಪಲ ತೀರಿಸಿಕೊಳ್ಳುತ್ತಿದ್ದಳು. ನಾನು ನಡೆದುಕೊಂಡು 'ಹಿ ಹಿ ಹಿ
ಎಂದು ಅಲ್ಲಿಂದ ಹೊರಟು ಹೋಗಿಬಿಡುತ್ತಿದ್ದೆ.

ಸ್ತ್ರೀ ಸಂಬಂಧದ ಅಪಾಯಗಳು ನನಗೆ ಒಂದರ ಮೇಲೊಂದು ಎರಡು ಮೂ
ಕಡೆಯಿಂದ ಅಪ್ಪಳಿಸುತ್ತ ಬಂದವು ನಿಜ. ಆದರೆ ಶಿವಕಾರುಣ್ಯ ನನ್ನನ್ನು ಬದುಕಿಸಿತು ಎಂದ
ಭಾವಿಸಿದ್ದೇನೆ. ಸಮುದ್ರಕ್ಕಿಳಿದಾಗ ಕಾಲು ಗಟ್ಟಿಯಾಗಿ ನೆಲಕ್ಕೆ ಕಚ್ಚಿರಬೇಕು. ತೆರೆಗಳು ಒಂದ
ಹಿಂದೊಂದು ಬರುತ್ತಲೇ ಇರುತ್ತವೆ. ಕಾಲು ಗಟ್ಟಿಯಾಗಿರದಿದ್ದರೆ ಕೊಚ್ಚಿಕೊಂಡು ಹೋಗಬೇಕ
ಸಂಸಾರವೆಂಬುದೊಂದು ದೊಡ್ಡ ಸಮುದ್ರವೆಂದು ದೊಡ್ಡವರು ಹೇಳುತ್ತ ಬಂದಿದ್ದಾರೆ.
ಸಮುದ್ರದಲ್ಲಿ ಈಸಲೇಬೇಕು. ಈಸಿ ಜೈಸಬೇಕು. ಅಪಾಯ ಬರುವುದು ಗೊತ್ತಾದ ಕೂಡಲ
ಶಕ್ತಿಯನ್ನೆಲ್ಲ ವ್ಯಯಿಸಿ ದಂಡೆಗೆ ಬಂದುಬಿಡಬೇಕು. ಅಲ್ಲಿ ಮುಳುಗಿ ಸಾಯುವ ಅವಿವೇ
ಮಾಡಬಾರದು. ಈ ವಿವೇಕ ನನ್ನನ್ನು ಆಗಾಗ ಎಚ್ಚರಿಕೆಯ ಗಂಟೆಯನ್ನು ಬಾರಿಸುತ್ತಲೇ ಇತ
ಇಂದ್ರಿಯಗಳ ಮೆಟ್ಟಿ ಕಾಮಾರಿ ಎನ್ನಿಸಿಕೊಂಡ ಶಿವನಿಗೂ ಕಾಮನ ಕಾಟ ತಪ್ಪಲಿಲ್ಲ. ಕೃಷ್ಣನಿಗಂತ
ಗೊಲ್ಲತಿಯರ ಬಹು ದೊಡ್ಡ ಬಳಗವೇ ಸುತ್ತುವರಿದು ಬಿಡುತ್ತಿತ್ತು. ಇಂಥಿಂಥವರಿಗೇ ಸ್ತ್ರೀ
ಸಂಬಂಧದ ರತಿಭಾವಗಳು ಬಂದು ಬಂದು ತಗಲುತ್ತವೆಂದ ಮೇಲೆ ನಮ್ಮಂಥವರ ಪಾಡೇನು
ಪರಮೇಶ್ವರನೇ ಹೆಂಡತಿಯನ್ನೂ ತನ್ನಲ್ಲಿ ಒಳಹಾಕಿಕೊಂಡು ಸಮಸ್ಯೆಯನ್ನು ಬಗೆಹರಿಸಿಕೊಂ
ಅವಳು ಒಲಿದಳು. ಸರಿ ಹೋಯಿತು. ಒಲಿದರೆ ನಾರಿ, ಒಲಿಯದಿದ್ದರೆ ಮಾರಿ ಎಂಬ ಗಾ

ಇದೆ. ಈ ಹೆಂಗಸರು ನನ್ನೊಡನೆ ಬಳಸಿದ ಸಲುಗೆಯೆಂತಹುದೋ. ಅವರಾದರೋ ವಿವಾಹಿತ ಸ್ತ್ರೀಯರು! ಇವರು ನನ್ನಂಥವನೊಡನೆ ಈ ಸಲುಗೆ ಬೆಳೆಸಿರುವುದರ ಹಿನ್ನೆಲೆಯೆಲ್ಲಿ ಎಷ್ಟೆಷ್ಟು ಸಮಸ್ಯೆಗಳಿಗೆ ಸಮಸ್ಯೆ ಪ್ರತಿಕೂಲರಾಗಿ ಬಿಟ್ಟರೆ? ಆಗ ನಾವು ದೇಶಾಂತರ ಓಡಬೇಕು. ಇಹಪರಗಳೆರಡರಲ್ಲೂ ಒಳ್ಳೆಯದಾಗ ಬೇಕೆನ್ನುವವರು ಸಾಮಾನ್ಯರಾದರೂ ಕಾಮ-ಕ್ರೋಧಾದಿಗಳ ಆವೇಗವನ್ನು ತಡೆಯಲೇಬೇಕು. ಇಲ್ಲವಾದರೆ ಹಾಳುಬಾವಿಯಲ್ಲಿ ಮುಳುಗಿ ನಾಮಾವಶೇಷವಾಗಿ ಹೋಗಬೇಕು. ಇವೆಲ್ಲ ಪ್ರವೃತ್ತಿಗಳಾಗಿರಬಹುದು. ಆದರೆ ಇಲ್ಲಿ ನಿವೃತ್ತಿಯೇ ಮಹಾಫಲ ಅಲ್ಲವೆ? ಈ ಎಲ್ಲ ಭಾವನೆಗಳು ನನಗೆ ಪುಣ್ಯವಶದಿಂದ ಉಂಟಾದವು.

ಪ್ರಾಯವೆಂಬುದೊಂದು ಕುರುಡು. ಪ್ರಾಯದ ಮತ್ತು ನೆತ್ತಿಗೇರಿದಾಗ, ಮೈಯೆಲ್ಲ ಮನದಲ್ಲಿ ಉಕ್ಕಿ ಹೊರಹೊಮ್ಮುವಾಗ ಹೆಣ್ಣಿನ ಕುಲವೆಲ್ಲ ಚೆಂದವಾಗೇ ಕಂಡೀತು. ಬೇಲಿಯ ಮೇಲಿನ ಹೂವು ಅದು. ಹೂವೇನೋ ಚೆಂದ; ಆದರೆ ಹೂವಿನ ಕೆಳಗೆ ಭರ್ಜಿಯಂತಹ ಮುಳ್ಳು. ಕುರುಡುಗಣ್ಣಿನಿಂದ ಕೈಯಿಟ್ಟರಾಯಿತು. ಮುಳ್ಳಿನಿಂದ ವ್ಯಥೆಗೊಳಗಾಗಬೇಕು. ಅಂಥ ಹೂವು ಚಂದವೆಂದು ಮುಂದೆ ಹೆಜ್ಜೆಯಿಡುವ ಮೊದಲು ನೂರಾರು ಬಗೆಯಲ್ಲಿ ಯೋಚಿಸಬೇಕು. ಆಗ ಉಂಟಾಗುವ ಮನೋಭಾವಕ್ಕೆ ವಿವೇಕದ ಕಡಿವಾಣವನ್ನು ಎಳೆದು ಮನಸ್ಸೆಂಬ ಹುಚ್ಚುಗುದುರೆಯನ್ನು ಹಿಂದಕ್ಕೆಳೆಯಬೇಕು. ಇದಕ್ಕೆ ಪ್ರಬಲ ಸಂಸ್ಕಾರ ಬೇಕಾದೀತು. ಲೋಕ ಸಾಮಾನ್ಯ ಸಂಸ್ಕಾರದಿಂದ ಸಾಧ್ಯವಿಲ್ಲ; ಆದ್ದರಿಂದಲೇ ಶಿವಕಾರುಣ್ಯ ಆಗ ನಮ್ಮನ್ನು ಉಳಿಸುತ್ತದೆ ಎಂದು ಹೇಳುವುದು. ಶಿವ ಎಂದರೆ ಮಂಗಳಕರವಾದ ಮನಸ್ಸು. ನಾಳಿನ ಭವ್ಯಜೀವನದ, ಶುದ್ಧ ಜೀವನದ ಚಿಂತೆಯನ್ನು ಮರೆತು ಅವ್ಯವಹಾರದಲ್ಲಿ ಮೈಮನಗಳು ಸುಳಿಗೊಂಡು ದಳವೇರಿ ಬೆಳೆದರೆ ಆಯಿತು. ಪರಿಶುದ್ಧ ಜೀವನದ, ಭವ್ಯಜೀವನದ ಹಡಗು ಮುಳುಗಿದ ಹಾಗೆಯೇ. ನನಗೆ ಹಾಗೆ ಮುಳುಗಲು ಇಚ್ಛೆಯಿರಲಿಲ್ಲ. ನನ್ನದು ಭವ್ಯ ಕನಸು. ಬರಡು ನೆಲದಲ್ಲೂ ಬತ್ತ ಬೆಳೆದೇನೆಂಬ ಆತ್ಮಪ್ರತ್ಯಯ. ನನ್ನ ದೇಹ ಮನೋಬುದ್ಧಿಗಳಲ್ಲಿ ಉತ್ಸಾಹ ಗರಿಗೆದರಿ ನಿಂತಿತ್ತು. 'ನಾನು ಏನೇನೋ ಆಗಬೇಕು' ಎಂಬ ನೂರಾರು ಆಶಾಗೋಪುರಗಳನ್ನು ಕಲ್ಪನಾಲೋಕದಲ್ಲಿ ಕಟ್ಟಿತ್ತು. ವಿಶಾಲಾಕಾಶದಲ್ಲಿ ಎತ್ತರ ಬಿತ್ತರಗೊಂಡು ಹಾರಾಡಬೇಕೆಂಬ ಗರುಡ ಬಯಕೆ ಅದರದು. ಈ ಬಯಕೆ ಮಣ್ಣು ಪಾಲಾಗದ ಹಾಗೆ ನನ್ನನ್ನು ಬದುಕಿಸಿದ್ದು ಶಿವಕೃಪೆಯೇ ಆಗದಿದ್ದರೆ ಮತ್ತೇನು? ವಿವೇಕದ ಮನವೇ ಶಿವಕೃಪೆ. ದೇಶದ ಯಾವ ಮೂಲೆಯೇ ಆಗಲಿ ಅಲ್ಲಿ ಹೊಕ್ಕು ದುಡಿದು ಸಂಪಾದಿಸಿ ಸುಖಿಸಬೇಕೆಂದು ನಿಡುಗಾಲದ ಚಿಂತನೆಗಳಿಗೆ ತಕ್ಕ ಸ್ಥಾನವನ್ನು ಶಿವನೇ ಕರುಣಿಸಿದ್ದಾನೆ. ಈ ಕ್ಷೇತ್ರದಿಂದಲೇ ನನ್ನ ಬಯಕೆ ಈಡೇರುತ್ತದೆ ಎಂದು ನನ್ನಾತ್ಮ ನನಗೆ ಹೇಳುತ್ತಿತ್ತು. ನನ್ನ ದೃಷ್ಟಿಯಿಂದ ಈ ಊರು ನನ್ನ ಪುಣ್ಯಕ್ಷೇತ್ರ. ಇಂಥ ಪುಣ್ಯಕ್ಷೇತ್ರದಲ್ಲಿಯೇ ನಾನೀಗ ಎಡವಿದರೆ? ಪುಣ್ಯಕ್ಷೇತ್ರದಲ್ಲಿ ಅಶುದ್ಧ ವ್ಯವಹಾರ ಸಲ್ಲದಲ್ಲ! ಸುಂದರ ಜೀವನದುದ್ದಕ್ಕೂ ಎಡವಿದಂತೆಯೇ ಎನ್ನಿಸುತ್ತಿತ್ತು. ಕ್ಷಣಕಾಲದ ದೈಹಿಕಸುಖಕ್ಕೆ ಮನಸ್ಸು ಮಾಡಿ ಆ ಹೊಲಸು ಕ್ಷೇತ್ರಕ್ಕೆ ಧುಮುಕಿದೆನಾದರೆ ಮುಂದೆ ಈ ಊರಲ್ಲಿ ತಲೆಯೆತ್ತಿ ನಡೆಯುವುದೆಂತು?

ಮನುಷ್ಯನ ಇನ್ನಾವ ದುರ್ವರ್ತನೆಯಾದರೂ ಮುಚ್ಚೀತು! ಕಳವು, ಸುಳ್ಳು, ಹಾದರ ಇವು ಮುಚ್ಚುವುದೇ ಇಲ್ಲ. ಒಮ್ಮೆ ಆ ಮಾರ್ಗದಲ್ಲಿ ಹೋದರಾಯಿತು ಪುನಃ ಪುನಃ ಅದೇ ಬಯಕೆ ಬೆಂಕಿಯಲ್ಲಿ ತುಪ್ಪ ಹೊಯ್ದಂತಾಗಿ ದಿನೇದಿನೇ ಅಧಿಕಗೊಳ್ಳುತ್ತದಾದ್ದರಿಂದ ಆ ಕ್ರಿಯೆ ಬಹುದಿನ ಗುಪ್ತವಾಗಿರಲು ಸಾಧ್ಯವೇ ಇಲ್ಲ. ಆಗ ನನ್ನ ಗತಿ! ಈಗ ಊರ ಪ್ರಮುಖರು ನನ್ನ

ಎದುರಿಗೆ "ಆ ಹುಸೇನಿ ಪಾತಿ-ಗೀತಿ ಅಂತ ಮೂವರು ಹುಡಿಗೆಯರನ್ನು ಕೆಡಿಸಿಬಿಟ್ಟ ಕಳ್ಳಬಡ್ಡೀಮಗ. ಆ ಅಯೋಗ್ಯನ್ನ ಮನಿ ಹೊಚ್ಚಲಾ ಮೆಟ್ಟಿಸಬಾರದು. ಆ ಅಯೋಗ್ಯ ತಳವಾರ ಕರಿಯಾ ಅದಾನಲ್ಲಾ ಅಂವಾ ಅವಳ್ಯಾವಳೋ ಕೆಂಪಿ, ಎಲ್ಲಿ ಅಂತಾ ಅದಾರಲ್ಲ ಅವರಿಬ್ಬರನ್ನೂ ಕೆಡಿಸಿಬಿಟ್ಟ. ಆ ಸೂ....ಮಗನ ಕಾಲು ಮುರಿಬೇಕು. ಹಿಂಗಬಿಟ್ಟರ ಅಂವಾ ಇನ್ನೂ ಏನೇನಾರ ಮಾಡಿಬಿಟ್ಟಾನು...." ಹಾಗೆ ಹೀಗೆ ಎಂದು ಕೂಗಾಡುತ್ತಿಲ್ಲವೆ? ಛೀ! ಥೂ! ಎಂದು ಮನಸ್ಸೇಚ್ಛೆಯ ಉಗಿಯುವುದಿಲ್ಲವೆ? ಈಗ ನಾನೇ ಆ ವೃತ್ತಿಗಿಳಿದರೆ ನನ್ನನ್ನೂ ಹಾಗೆ ಅನ್ನದೇ ಬಿಟ್ಟಾರೆಯೇ ಎಂದು ಮನದಲ್ಲಿಯೇ ಕುದಿದು ಭಯದಿಂದ ನಡುಗಿ ನನಗಾಗಿ ಬಾಯಿ ಬಾಯಿ ಬಿಡುವ ಹೆಂಗಸರಿಂದ ಕಾಪಾಡಲು ದೇವರನ್ನು ಸದಾ ಬೇಡಿಕೊಳ್ಳುತ್ತಿದ್ದೆ. ದೇವರು ನನ್ನ ಮಾತಿಗೆ ಮುಖ ತಿರುಗಿಸಿ ನೋಡಿ ಕರುಣಿಸಿದ.

ಈ ಊರಿನಲ್ಲಿ ಇಷ್ಟೊಂದು ಸಾಧನೆ ಮಾಡಿ ಊರ ಜನಗಳ ಮನವನೆಲ್ಲ ಗೆದ್ದು ಸುತ್ತ ಮುತ್ತಣ ಹಳ್ಳಿ ಹಳ್ಳಿಗಳ ಜನಗಳ ಮನಸ್ಸನ್ನು ಗೆದ್ದು ಹೊಗಳಿಸಿಕೊಳ್ಳುತ್ತಿಲ್ಲವೆ? 'ಆದರ್ಶ ಶಿಕ್ಷಕ, ಒಳ್ಳೆ ಕಲೆಗಾರ. ಹಿರೇಕಾಂಶಿಯ ಭಾಗ್ಯದಿಂದ ನಿಮ್ಮೂರ್ರಿಗೆ ಇಂಥ ಮಾಸ್ತರರು ಸಿಕ್ಕಿದ್ದಾರೆ' ಎಂದು ಪರ ಊರಿನವರ ಹೊಗಳಿಕೆಗೂ ಪಾತ್ರನಾಗಿ ಯಶಸ್ಸು ಗಳಿಸಿ ಉತ್ಕರ್ಷದ ಹಾದಿಯಲ್ಲಿ ಈಗ ಕಣ್ಣು ಬಿಡುತ್ತಿರುವ ನನ್ನ ಪ್ರಾಯದ ಕುರುಡಿನಿಂದ ಮುಂದುವರಿದೆನಾದರೆ ಕೆರೆಬಾವಿಗೆ ಕಲ್ಲುಕಟ್ಟಿಕೊಂಡು ಬಿದ್ದವನ ಗತಿಯಾಗಿ ನನ್ನ ಯಶಸ್ಸಿನ ಸಮಾಧಿಯಾಗಿ ಹೋಗುತ್ತದೆಂದು ಅಂಜಿ, ಅಳುಕಿ ಆ ಹೆಂಗಸರ ಮನಸ್ಸನ್ನು ಸಾತ್ವಿಕಸ್ವಭಾವದಿಂದಲೇ ಗೆದ್ದು, ಅವರ ಮನಃಪರಿವರ್ತನೆಯಾಗುವಂತೆ ನಾಲ್ಕು ವರ್ಷ ಅಲ್ಲಿ ಜೀವಿಸಿದುದು ನನ್ನ ಒಂದು ಅದ್ಭುತ ಪವಾಡಸದೃಶ ಜೀವನವೆಂದು ಭಾವಿಸಿದ್ದೇನೆ. ಈ ಪ್ರಕರಣವನ್ನು ಇಲ್ಲಿಗೆ ಸಾಕು ಮಾಡುತ್ತೇನೆ. ಹಿರೇಕಾಂಶಿಯಲ್ಲಿದ್ದಾಗ ನಡೆದ ಕೆಲವು ಘಟನೆಗಳು ನನ್ನ ಮನಸ್ಸಿನಲ್ಲಿ ಆಳವಾಗಿ ಬೇರೂರಿ 45 ವರ್ಷ ಕಳೆದರೂ ಹಚ್ಚ ಹಸುರಾಗಿರುವವುಗಳನ್ನು ವಿವರಿಸಲೇಬೇಕು.

### ಇದ್ದಿಲು ಸುಡಿಸುವ ವ್ಯವಹಾರಕ್ಕೆ ಕೈ ಹಾಕಿದೆ

ಹಿರೇಕಾಂಶಿಗೆ ಕರ್ಜಗಿ ಹತ್ತಿರದ ಗಣಜೂರಿನ ಘೂಡೂಸಾಬ ಎಂಬಾತ ಸರದಾರರ ಕೆಲವು ಕಾಮಗಾರಿಗಳನ್ನು ಗುತ್ತಿಗೆ ಹಿಡಿದು ನಾಲ್ಕಾರು ಜನ ಪರಿವಾರದೊಡನೆ ಬಂದ. ಅವನ ಪರಿವಾರದಲ್ಲಿದ್ದವರೆಲ್ಲ ಹಿಂದೂಗಳೇ. ಸ್ವಭಾವತಃ ಘೂಡೂಸಾಬ ಸಾತ್ವಿಕ ಮನುಷ್ಯ. ವಿನಯಶಾಲಿ. ಕಳ್ಳ ಸುಳ್ಳ ಅಲ್ಲ. ಆತ ಈ ಊರಿಗೆ ಬಂದ ವಾರೊಪ್ಪತ್ತಿನಲ್ಲೇ ಊರ ಜನಗಳನ್ನೆಲ್ಲ ಕಾರಮಂಡಕ್ಕಿ, ಚಹಾ ಕೊಟ್ಟೇ ಬುಟ್ಟಿಗೆ ಹಾಕಿಕೊಂಡು ಬಿಟ್ಟ. ಬೀಡಿ ಚಟವಿದ್ದ ಯಾರೇ ಆಗಲಿ ತಮ್ಮಲ್ಲಿ ಬೀಡಿ ಇಲ್ಲದಿದ್ದರೆ 'ಘೂಡುಸಾಬರೇ ಒಂದು ಬೀಡಿ ಬಿಸಾಕಿರಿ' ಎಂದರೆ ಸಾಕು. ಬೀಡಿಕಟ್ಟು, ಬೆಂಕಿ ಪೊಟ್ಟಣ ಎಸೆದು 'ಸೇದಿರಿ' ಎನ್ನುತ್ತಿದ್ದ. ಅವರು ಒಂದು ಬೀಡಿ ಎಳೆದು ಸೇದಿ ಒಂದೆರಡು ಬೀಡಿಗಳನ್ನು ಜೇಬಿನೊಳಗೆ ಇಳಿಬಿಡುತ್ತಲೂ ಇದ್ದರು. ಈ ಕಾರಣಗಳಿಂದ ಊರತುಂಬ ಎಲ್ಲಿ ಕೇಳಿದರೂ ಘೂಡುಸಾಬ-ಘೂಡುಸಾಬ ಎಂಬ ಹೆಸರು ಕೇವಲ ಎಂಟುಹತ್ತು ದಿನಗಳಲ್ಲಿ ಸಿದ್ಧಗೊಂಡು ಹೋಯಿತು. ಊರಿನ ಇಪ್ಪತ್ತು ಮೂವತ್ತು ಜನಗಳನ್ನು ಕೂಲಿಗೆ ಗೊತ್ತು ಮಾಡಿಕೊಂಡು ತನ್ನ ಕೆರೆಕುಂಟೆಗಳ ಕಾಮಗಾರಿ ಪ್ರಾರಂಭಿಸಿದ. ಒಂದು ದೊಡ್ಡ ಮನೆಯನ್ನು ಬಾಡಿಗಗೆ ತೆಗೆದುಕೊಂಡು ಅಲ್ಲಿ ಅಡಿಗೆ, ಚಹಾ, ಕಾಫಿ, ಕಾರಮಂಡಕ್ಕಿ ದಾಸೋಹ ಪ್ರಾರಂಭವಾಗಿ ಹೋಯಿತು. ಅವನ ಮಾತಿನ ಮಾರ್ದವಕ್ಕೆ ಮರುಳಾಗಿ ಅನೇಕರ ನಾಲಿಗೆ

ಮೇಲೆ ಅವನ ಹೆಸರು ನಲಿದಾಡತೊಡಗಿತು. ಬಹುಶಃ ಅವನು ಸ್ವಭಾವತಃ ಒಳ್ಳೆಯವನೇ. ಅವನಿಗೆ ಜನಗಳನ್ನು ಬುಟ್ಟಿಗೆ ಹಾಕಿಕೊಳ್ಳುವ ಕಲೆ ಮೈಗೂಡಿ ಬಂದಿತ್ತೆಂದು ಹೇಳಬಹುದು. ಕೆಲವೇ ದಿನಗಳಲ್ಲಿ ಊರಿನ ಪ್ರತಿಷ್ಠಿತರಲ್ಲಿ ಒಬ್ಬನಾಗಿ ಹೋದ. ಹಿಂದೂಗಳಲ್ಲಿ ಹಿಂದೂ; ಮುಸ್ಲೀಮರಲ್ಲಿ ಮುಸ್ಲೀಂ ಆಗಿದ್ದು ಆತನು ಹಿಂದೂ-ಮುಸ್ಲಿಂ ಸಂಸ್ಕೃತಿಗಳ ಸಂಗಮದಂತಿದ್ದನೆಂದರೂ ನಡೆದೀತು.

ಬೆಳಗ್ಗೆ ಹತ್ತು ಹನ್ನೆರಡು ಸೇರು ಪುರಿಗೆ ಒಗ್ಗರಣೆ ಹಾಕಿ ಕೂಲಿಯವರಿಗೆ ತಿನ್ನಿಸಿ ಮೇಲೊಂದು ಕಪ್ಪು ಚಹಾ ಕೊಟ್ಟು ಕಳಿಸಿದ್ದಲ್ಲದೆ ಕೂಲಿ ಮುಗಿಸಿಕೊಂಡು ಬಂದ ನಂತರವೂ ರಾತ್ರಿ ಚಹಾ ಸೇವೆ ನಡೆಯುತ್ತಿತ್ತು. ಇಷ್ಟೇ ಅಲ್ಲ, ಊರ ಪ್ರತಿಷ್ಠಿತರನ್ನೂ ಚಹಾಕ್ಕೆ ಕರೆದು ಒಳ್ಳೆ ಸೊಗಸಾಗಿ ಒಗ್ಗರಣೆ ಹಾಕಿದ ಪುರಿ ತಿನ್ನಿಸಿ, ಚಹಾ ಕುಡಿಸಿ ಕಳಿಸತೊಡಗಿದ. ನನ್ನನ್ನೂ ಒಂದೆರಡು ಸಲ ಕರೆದುಕೊಂಡು ಹೋಗಿ ಚಹಾ ವಗೈರೆ ಕೊಟ್ಟು, ನನ್ನನ್ನು ಹೊಗಳಿ ಹೊಗಳಿ ಅಟ್ಟಕ್ಕೇರಿಸಿ ಕಳಿಸಿಬಿಟ್ಟಿದ್ದ. ತಾನು ಒಬ್ಬ, ತನ್ನ ಕಡೆಯ ನಾಲ್ಕು ಜನ ಕೂಲಿ ಆಳು ಈ ಐದಾರು ಜನಕ್ಕೆ ಐದಾರು ಸೇರು ಅಕ್ಕಿಯ ಅನ್ನ, ಒಳ್ಳೆ ಘಮಘಮ ಅನ್ನುವಂತೆ ಬೇಳೆಯ ಸಾರು ಮಾಡಿಸುತ್ತಿದ್ದ. ಆತ ಊಟಕ್ಕೆ ಕೂಡುವಾಗ ಅವನ ಕೊಠಡಿಯಲ್ಲಿ ಸೇರಿದವರೆಲ್ಲರೂ ಊಟ ಮಾಡಬೇಕಾಗಿತ್ತು. ಜನ ಹೆಚ್ಚಾದರೆ ಪುನಃ ಒಲೆಯ ಮೇಲೆ ಅನ್ನದ ಪಾತ್ರೆ ಕೊತಕೊತ ಪ್ರಾರಂಭಿಸುತ್ತಿತ್ತು. ಹೀಗೆ 'ಧಾಂಮುಪಾಟಿ' ನಡೆದುದರಿಂದಲೋ ಏನೋ, ಇನ್ನೇನಾಯಿತೋ ಅವನು ಪಡೆದು ಬಂದಿದ್ದ ಸರಕಾರದ ಗುತ್ತಿಗೆ ವ್ಯವಹಾರ ಮೈಮೇಲೆ ಬಂದು ಬರಬರುತ್ತ ಖರ್ಚುವೆಚ್ಚಗಳು ಹೆಚ್ಚಾಗಿ ಕೈಸುಟ್ಟುಕೊಂಡು ತನ್ನ ಜೊತೆಗೆ ಬಂದವರನ್ನು ಅಲ್ಲಿಯೇ ಬಿಟ್ಟು ಪರಾರಿಯಾಗಿ ಹೋಗಿಬಿಟ್ಟ. ಊರಿನಲ್ಲಿ ಅವರು ಇವರು ಅವನಿಗೆ ಕೆಲವು ಪುಡಿಗಾಸುಗಳನ್ನು ಕೈಗಡ ಕೊಟ್ಟಿದ್ದರು. ಅವರು ದುಡ್ಡು ಹೋದರೂ ಚಿಂತೆಯಿಲ್ಲ. ಮೂರು ನಾಲ್ಕು ತಿಂಗಳು ಆತನ 'ಕ್ಯಾಂಪಸ್'ನ್ನು ಚಹಾ ಮಂಡಕ್ಕಿ ತಿಂದುದ ಸೂಟು ಹಾಕಿಕೊಂಡು ಸುಮ್ಮನಾಗಿಬಿಟ್ಟರು. ಅತಂತ್ರವಾದವರೆಂದರೆ ಅವನ ಕೂಡ ಬಂದವರು. ಅವರು ಕೈಯಲ್ಲಿ ಕಾಸಿಲ್ಲದೆ ಊರಿನಲ್ಲಿ ಕಾಸಿಗೆ ಕಡೆಯಾಗಿ ಹೋದರು. ಕೆಲವರು ಅಲ್ಲೇ ಕೂಲಿ ಕುಂಬಳಿ ಮಾಡಿಕೊಂಡರು. ನಾಲ್ಕಾರು ಕಾಸು ಮಾಡಿಕೊಂಡು ತಮ್ಮ ತಮ್ಮ ಊರಿಗೆ ಹೋದರು. 'ಬಸ್ಯಾ' ಎಂಬವನು ಮಾತ್ರ ಊರಲ್ಲಿ ಕೆಲವರಿಂದ ಸಾಲ ತೆಗೆದುಕೊಂಡು ತೀರಿಸಲಾಗದೆ ನನ್ನ ಸ್ನೇಹ ಮಾಡಿದ. ಅವನ ಊರು ನಮ್ಮ ಊರಿಂದ ಕೇವಲ ಐದಾರು ಮೈಲು ಅಂತರದ ಕೋಳೂರಾಗಿತ್ತು. ಅವನ ಸ್ಥಿತಿ ಕಂಡು ನನಗೂ ಅಯ್ಯೋ ಎನಿಸಿತ್ತು. ಅವನು ನನ್ನಿಂದ ಕೊಡುತ್ತೇನೆಂದು ಹೇಳಿ ಎರಡೋ ಮೂರೋ ರೂಪಾಯಿ ಹೇಗೋ ಕಿತ್ತುಬಿಟ್ಟಿದ್ದ.

ಒಂದು ದಿನ ಅವನು ನನಗೆ ಇದ್ದಲು ಸುಟ್ಟು ಮಾರಾಟ ಮಾಡಿ, ಲಾಭ ಸಂಪಾದಿಸಬಹುದಾದ ಉದ್ಯಮದ ಬಗೆಗೆ ಮನಂಬುಗುವಂತೆ ಉಪನ್ಯಾಸ ಕೊಟ್ಟುಬಿಟ್ಟ. ಇದ್ದಿಲನ್ನು ಸುಟ್ಟು ಮಾರಾಟ ಮಾಡಿ ಒಂದಕ್ಕೆ ಎರಡು ಮೂರರಷ್ಟು ಗಳಿಸಬಹುದೆಂದು ನನ್ನ ಬಾಯಲ್ಲಿ ನೀರು ಬರುವಂತೆ ವರ್ಣಿಸಿದ್ದನ್ನು ಕೇಳಿ ನನಗೂ ಲಾಭದಾಸೆಯಾಯಿತು. ಅವನು ಹೇಳಿದ್ದು ಹೀಗೆ : "ನೀವು ಎಷ್ಟು ದುಡ್ಡು ಖರ್ಚು ಮಾಡುವಿರೋ ಆ ಹಣವಲ್ಲದೆ ಅದರಷ್ಟೇ ಲಾಭ ನಿಮಗೆ ಕೊಟ್ಟನಂತರ ಉಳಿದದ್ದರಲ್ಲಿ ನನಗೂ ನಿಮಗೂ ಸಮಪಾಲು. ನೀವು ಹೆದರಬೇಡಿ" ಹಾಗೆ ಹೀಗೆ ಎಂದು ತನ್ನ ಚಾತುರ್ಯವನ್ನೆಲ್ಲ ವ್ಯಯಮಾಡಿ ಬಣ್ಣಿಸಿದ. ನಾನು ಎಂದೂ ಇಂಥ

ಯಾವ ವ್ಯವಹಾರ ಮಾಡಿದವನಲ್ಲ. ಇದೊಂದು ವ್ಯವಹಾರ ಮಾಡಿ ಸ್ವಲ್ಪ ಹಣ ಗಳಿಸೋಣ
ಎಂಬ ಆಸೆಯಾಗಿ ಒಪ್ಪಿಗೆ ಕೊಟ್ಟೆ. ಆಗ ಇದ್ದಿಲಿಗೆ ಬೇಡಿಕೆ ಬಹಳ ಇತ್ತು. ಯುದ್ಧದ ಕಾರಣ
ಪೆಟ್ರೋಲು ಇಲ್ಲದೆ ಬಸ್ಸುಗಳನ್ನೆಲ್ಲ ಇದ್ದಿಲಿನಿಂದ ಓಡಿಸುತ್ತಿದ್ದರು. ನನಗೆ ಅದೇ 108 ರೂಪಾಯಿ
ವಾರ್ಷಿಕ ಗ್ರ್ಯಾಂಟು ಬಂದಿತ್ತು. ಅದರಲ್ಲಿ ಇಡೀ ವರ್ಷ ನಾನು ಮಾಡಿದ ಸಾಲ, ಬಟ್ಟೆಬರೆ
ಇತರ ಖರ್ಚು-ವೆಚ್ಚವೆಲ್ಲ ತೆಗೆದು ಎಪ್ಪತ್ತೈದು ರೂಪಾಯಿ ಉಳಿದಿದ್ದವು. ಈ ಎಪ್ಪತ್ತೈದು
ರೂಪಾಯಿ ಬಂಡವಾಳದಿಂದ ಕೇವಲ ಒಂದು ತಿಂಗಳಲ್ಲೇ ಎಪ್ಪತ್ತೈದು ರೂಪಾಯಿ ಲಾಭ
ಮತ್ತು ಉಳಿದದ್ದರಲ್ಲಿ ಸಮಪಾಲು ಲಾಭವನ್ನೇಕೆ ಗಳಿಸಬಾರದು! ಎಂಬಾಸೆ ಚಿಗುರೊಡೆಯಿತು.
ಆಗ ನನಗೆ ಇಡೀ ತಿಂಗಳು ದುಡಿದರೆ ಸಿಗುವ ಸಂಬಳ ಒಂಬತ್ತು ರೂಪಾಯಿ. ಒಂಬತ್ತು
ರೂಪಾಯಿ ಎಲ್ಲಿ? ನೂರಾರು ರೂಪಾಯಿ ಎಲ್ಲಿ? ಒಟ್ಟಿಗೆ ತಂದೆ-ತಾಯಿಗಳಿಗೆ ನೂರಿನ್ನೂರು
ರೂಪಾಯಿ ಕಳಿಸಿದರೆ ಅಲ್ಲಿನ ಆರ್ಥಿಕ ಸಮಸ್ಯೆಗಳಾದರೂ ಪರಿಹಾರವಾದಾವೆಂಬ ಮಹದಾಸೆ
ದಾಂಗುಡಿಯಿಟ್ಟು ಕಾರ್ಯಪ್ರವೃತ್ತನಾದೆ. ದೊಡ್ಡ ಉದ್ದಿಮೆದಾರನೆಂಬ ಎರಡು ಕೋಡುಗಳನ್ನು
ನನಗೆ ನಾನೇ ಹುಟ್ಟಿಸಿಕೊಂಡುಬಿಟ್ಟೆ. ದುಡ್ಡು ಎಷ್ಟೇ ಆಗಲಿ ವಿಕಾರವನ್ನುಂಟುಮಾಡುವ
ವಸ್ತುವಲ್ಲವೆ?

ಇದ್ದಿಲು ಸುಡಲು ಮರಗಳನ್ನೆಲ್ಲ ಕಡಿಯಬೇಕೆಂಬ ಬಗ್ಗೆಯೂ ಕಷ್ಟವಿರಲಿಲ್ಲ.
ಹೊಸೂರಿನಲ್ಲಿ ಆಗ ಮಾಟೂರ ಚನ್ನಬಸಪ್ಪ ಎಂಬ ನನ್ನ ಓರ್ವ ಮಿತ್ರನೇ ಗ್ರಾಮ ಪಂಚಾಯಿತಿ
ಪ್ರೆಸಿಡೆಂಟ್ ಆಗಿದ್ದ. ಅದು ಮಲೇರಿಯಾ ಹಾವಳಿಯಿಂದ ಜನಜೀವನವೆಲ್ಲ ರೋಸಿ ಹೋಗಿದ್ದ
ಕಾಲ. ಚನ್ನಬಸಪ್ಪ ಒಂದು ರೀತಿಯಲ್ಲಿ ಐಲುದೊರೆಯಿದ್ದ ಹಾಗೆ. ಅವನಿಗೆ ಯಾವ ಆರೋಗ್ಯ
ವಿಜ್ಞಾನಿ ಹೇಳಿದ್ದನೋ ಏನೋ, "ಯಾವ ಊರಲ್ಲಿ ಹುಣಸೇ ಮರಗಳು ಹೆಚ್ಚಾಗಿವೆಯೋ
ಅಲ್ಲಲ್ಲಿ ಮಲೇರಿಯಾ ಹಾವಳಿ ಹೆಚ್ಚು" ಎಂದ. ಆ ಮಾತಿನಿಂದ ಪ್ರೇರಿತನಾಗಿ ಹೊಸೂರಿನ
ಪರಿಸರದಲ್ಲಿರುವ ಹುಣಸೇ ಮರಗಳಿಗೆ ಮಾರಕನಾಗಿ ಬಿಟ್ಟ. ನಾನು ಇದ್ದಿಲು ವ್ಯಾಪಾರ
ತೊಡಗಿದ್ದ ವಿಷಯವನ್ನು ತಿಳಿದು "ಮಾಸ್ತರೇ, ನಮ್ಮ ಹೊಸೂರು ಗಾಂವ್‌ಠಾಣಾದಲ್ಲಿರುವ
ಹುಣಸೇ ಮರಗಳಲ್ಲಿ ಎಷ್ಟಾದರೂ ನೀವು ಕಡಿದು ಇದ್ದಲು ಮಾಡಿಕೊಂಡುಬಿಡಬಹುದು"
ಎಂದುಬಿಟ್ಟ. ಕೇಳುವುದಿನ್ನೇನು, ಮರಗಳೂ ಪುಕ್ಕಟೆಯಾಗಿ ಸಿಗುವುದಾದರೆ ಲಾಭ ಇನ್ನೂ
ಹೆಚ್ಚೇ ಆಗಬಹುದೆಂದು ಲೆಕ್ಕ ಹಾಕಿದೆ. ಆಗ ಹೊಸೂರು ಮುಕ್ಕಾಲುಪಾಲು ಮಲೇರಿಯಾ
ಪ್ಲೇಗುಗಳ ಹಾವಳಿಯಿಂದ ಹಾಳಾಗಿ ಹೋಗಿತ್ತು. ಕೇವಲ ಕಾಲುಭಾಗ ಮಾತ್ರ ಊರು
ಉಳಿದಿತ್ತು. ಹಾಳಾದ ಊರಿನಲ್ಲಿ ಮತ್ತಿ, ಹೊನ್ನೆ, ತೇಗ, ತಾಳೆ ಮರಗಳೇ ಮೊದಲಾದ
ಅನೇಕ ಬಗೆಯ ಬೆಳೆದು ನಿಂತ ಕಾನಿನ ಮಧ್ಯದಲ್ಲಿ ನೂರಾರು ದೊಡ್ಡ ದೊಡ್ಡ ಹುಣಸೆ
ಮರಗಳು ಅನೇಕ ವರ್ಷಗಳ ತಮ್ಮ ಚರಿತ್ರೆಯನ್ನು ಪ್ರಕಟಿಸುತ್ತ ಕಣ್ಣೀರು ಸುರಿಸುತ್ತ ನಿಂತಿವೆಯೋ
ಅನ್ನುವಂತೆ ಕಾಣುತ್ತಿದ್ದವು. ಅವುಗಳಲ್ಲಿರುವ ಹಣ್ಣನ್ನು ಬಡಿದುಕೊಂಡು ಹೋ...
ಉಪಯೋಗಿಸುವವರೂ ದಿಕ್ಕಿಲ್ಲದಂತೆ ಆಗಿತ್ತು. ಆಣೆ ಕೊಟ್ಟರೆ ಎಂಟುಹತ್ತು ಸೇರು ಹುಣಸೇಹಣ್ಣು
ಪೇಟೆಯಲ್ಲಿ ಸಿಗುತ್ತಿತ್ತಾಗಿ ಆ ಕಷ್ಟದ ಕೆಲಸವನ್ನೂ ಮಾಡುವವರು ಊರಲ್ಲಿ ಯಾರು ಬರಬೇಕು
ಎಲ್ಲರೂ ಮಲೇರಿಯಾದಿಂದ ನರಳುವವರೇ! ಅಂತೂ ನಮ್ಮ ಹತ್ತಾರು ಕೊಡಲಿ, ಗರಗಸಗಳನ್ನು
ಹಿಡಿದ ಯಮದೂತರಂತಹ ಆಳುಗಳು ಹುಣಸೆ ಮರಗಳ ಸಂಹಾರಕರಾಗಿ ಬಂದುಬಿಟ್ಟರು.
ಯಾವ ಪುಣ್ಯಾತ್ಮರು ಅವನ್ನು ಬೆಳೆಸಿ ನೂರಾರು ವರ್ಷಗಳಿಂದ ಸಾಕಿ ಸಲಹಿ ನಿತ್ಯ ನಿತ್ಯ

ತಮ್ಮ ಆಹಾರದಲ್ಲಿ ಬಳಸುತ್ತ ಬಂದಿದ್ದರೋ ಏನೋ, ನಾವು ಅವನ್ನು ಅರೆಕ್ಷಣದಲ್ಲಿ ಕಡಿದು ನಾಮಾವಶೇಷಗೊಳಿಸುವ ರಾಕ್ಷಸಕೃತ್ಯಕ್ಕಂತೂ ಇಳಿದುಬಿಟ್ಟಿದ್ದೆವು. ಎಂಟು ಹತ್ತು ದಿನಗಳಲ್ಲಿ ದೊಡ್ಡ ದೊಡ್ಡ ಹತ್ತು ಹನ್ನೆರಡು ಮರಗಳನ್ನು ಕಡಿದು ನೆಲಕ್ಕುರುಳಿಸಿಬಿಟ್ಟೆವು. ಅವುಗಳನ್ನು ಸಣ್ಣ ತುಂಡುಗಳನ್ನಾಗಿ ಮಾಡಿದಾಗ ಗುಡ್ಡದಂತಹ ರಾಶಿಯೇ ಬಿದ್ದುಬಿಟ್ಟಿತು. ಆಗ ಬಸ್ಯಾ ಬಂದು ನನ್ನ ಹತ್ತಿರ 'ಮಾಸ್ತರೇ, ದೇವರು ಕೊಟ್ಟುಬಿಟ್ಟ, ಹೆದರಬೇಡಿ. ನಿಮ್ಮ ಹಣಕ್ಕೆ ಎರಡರಷ್ಟು, ಮೂರರಷ್ಟು ಪ್ರಸಂಗದಲ್ಲಿ ನಾಲ್ಕರಷ್ಟು ಲಾಭ ಮಾಡಿಕೊಡುವ ಭಾರ ನನ್ನದು. ಪುಕ್ಕಟೆ ಮರ ಕೊಡಿಸಿಕೊಟ್ಟಿರಿ. ಕೆಲಸ ಹಗುರಾಯಿತು, ಲಾಭ ಹೆಚ್ಚಾಯಿತು, ನಾನು ಉದ್ಧಾರವಾದೆ, ನೀವೂ ಉದ್ಧಾರವಾದಿರಿ. ಈ ಮರಗಳನ್ನೆಲ್ಲ ಸುಟ್ಟು ಇದ್ದಿಲು ಮಾಡಿದರೆ ಏನಿಲ್ಲವೆಂದರೂ ಮುನ್ನೂರು ಚೀಲಗಳಾದರೂ ಇದ್ದಿಲು ಆದಾವು. ಮೂರು ರೂಪಾಯಿಗೆ ಒಂದು ಚೀಲವಂತೂ ಈಗ ಮಾರ್ಕೆಟಿನಲ್ಲಿ ಮಾರಾಟವಾಗುತ್ತಾ ಇದೆ. ಮೋಟಾರಿಗೆಲ್ಲ ಈಗ ಇದ್ದಿಲೇ ಪೆಟ್ರೋಲು' ಇತ್ಯಾದಿಯಾಗಿ ಬಾಯಲ್ಲಿ ನೀರೂರುವಂತೆ ಹೇಳುತ್ತಿದ್ದ. ನಾನೂ ಮನಸ್ಸಿನಲ್ಲೇ ನೂರಾರು ಯೋಜನೆಗಳ ಹೊಂಗನಸು ಕಾಣುತ್ತಿದ್ದೆ. ಆ ಸಮಯದಲ್ಲಿ ನಾನು ಹಿರೇಕಾಂಶಿಯ ಪ್ರಸಿದ್ಧ ಮಾಸ್ತರನ ಜೊತೆಯಲ್ಲಿಯೇ ಮಾನಸಿಕವಾಗಿ ಒಮ್ಮೆಲೆ ಬಹುದೊಡ್ಡ ಉದ್ದಿಮೆದಾರನೇ ಆಗಿಹೋದೆ.

ಇಪ್ಪತ್ತೈದು ಅಡಿ ವ್ಯಾಸದ ಮೂರು ಅಡಿ ಆಳದ ತಗ್ಗು ತೋಡಿಸಿದ. ಐದಾರು ಲಾರಿಯಷ್ಟು ದೊಡ್ಡ ಗುಡ್ಡದಂತಹ ಸೌದೆಯ ರಾಶಿಯನ್ನು ಸುಡಲು ಆ ತಗ್ಗಿನಲ್ಲಿ ಶಂಖುವಿನ ಆಕೃತಿಯಲ್ಲಿ ದೊಡ್ಡ ಇದ್ದಿಲು ಬಟ್ಟಿಯನ್ನು ಕಟ್ಟಿದ. ಅದು ನೆಲದ ಮೇಲೆ ಎರಡಾಳು ಎತ್ತರ ಗುಡ್ಡದ ಹಾಗೆ ನಿಂತಿತು. ಅದರ ಮೇಲೆ ಸೊಪ್ಪು ಕಡಿದು ಪೇರಿಸಿ ಮಣ್ಣನ್ನು ಮೆತ್ತಿದ. ಕೆಳಗೆ ಮಾಡಿದ ಒಲೆಯಿಂದ ಕೊಳ್ಳಿಯನ್ನು ಕೊಟ್ಟುಬಿಟ್ಟ. ಹೊಸೂರಿನ ನನ್ನ ಮಿತ್ರರಾದ ಶಿವಬಸಪ್ಪ ಬಂದು ಆ ಬಟ್ಟಿಯನ್ನು ಕಂಡು ಪರವಾಯಿಲ್ಲ. ನಮ್ಮ ಮಾಸ್ತರ ಬಹಳ ಸಾಹಸವನ್ನೇ ಮಾಡಿಬಿಟ್ಟರು ಎಂದರು. ನಾನು ನನ್ನ ಭುಜವನ್ನು ಮನಸ್ಸಿನಲ್ಲಿಯೇ ತಟ್ಟಿಕೊಳ್ಳುತ್ತ ಹಿರೇಕಾಂಶಿಗೆ ಬಂದು ಸುಖವಾಗಿ ಮಲಗಿಬಿಟ್ಟೆ. ಬಸ್ಯಾ ಬಟ್ಟಿಗೆ ಬೆಂಕಿಯಿಟ್ಟು ಎಲ್ಲಿಯೋ ಹೋಗಿ ಮಲಗಿಬಿಟ್ಟನಂತೆ. ರಾತ್ರಿಯೆಲ್ಲ ಬಟ್ಟಿ ಪಟಗುಟ್ಟಿ ಉರಿಯುತ್ತ ನಡೆಯಿತು. ಯಾವುದೋ ಗಳಿಗೆಯಲ್ಲಿ ಭಯಂಕರ ಕಾವಿನಿಂದ ಆ ದೊಡ್ಡ ಬಟ್ಟಿಯ ತುದಿ ಮೋತಿಯಿಂದ ಜ್ವಾಲಾಮುಖಿ ಪರ್ವತದಂತೆ ಉರಿಚಿಮ್ಮಿ ಉರಿದು ಉರಿದು ಬೆಳಕು ಹರಿಯುವುದರೊಳಗೆ ಬಟ್ಟಿಯೆಲ್ಲ ಇದ್ದಿಲಿನ ಬದಲು ಬೂದಿಯ ರಾಶಿಯಾಗಿಬಿಟ್ಟಿತು.

ಬೆಳಕು ಹರಿದ ಮೇಲೆ ಬಸ್ಯಾ ಬಂದು ನೋಡಿ ಎದೆ ಎದೆ ಬಡಿದುಕೊಂಡು ಅಳುತ್ತ ಹೌಹಾರಿ ಹೋಗಿ, ನನಗೂ ಕೂಡ ಮುಖ ತೋರಿಸದೆ, ಖರ್ಚಿಗೆಂದು ನಾನು ಅವನ ಕೈಗೆ ಕೊಟ್ಟ ಪುಡಿಗಾಸಿನ ಸಹಾಯದಿಂದ ತನ್ನ ಊರಾದ ಕೋಳೂರಿಗೆ ಓಡಿಹೋಗಿಬಿಟ್ಟ. ಈ ಸುದ್ದಿಯನ್ನು ನಮ್ಮ ಶಿವಬಸಪ್ಪ ಸೆಟ್ಟರು ನನಗೆ ಹಿರೇಕಾಂಶಿಗೆ ಮುಟ್ಟಿಸಿದರು. ನಾನು ಕುಸಿದು ಭೂಮಿಗೆ ಇಳಿದುಹೋದೆ. ಶಾಲೆಯನ್ನು ಬಿಟ್ಟು ಊಟಗೀಟಗಳ ಪರಿವೆಯಿಲ್ಲದೆ ಹೊಸೂರಿಗೆ ಓಡಿ ಹೋದೆ. ಬೂದಿಯ ರಾಶಿ ನನ್ನನ್ನು ಎದೆಯೊಡಿಸಿಬಿಟ್ಟಿತು. ಆ ಬೆಂಕಿ ಆರಲಿಕ್ಕೇ ಎಷ್ಟೋ ಕಾಲ ಹಿಡಿಯಿತು. ದೊಡ್ಡದೊಡ್ಡ ಮರದ ಬೊಡ್ಡೆಯ ತುಂಡುಗಳೆಲ್ಲ ನಿಗಿನಿಗಿ ಅನ್ನುತ್ತಿದ್ದವು. ಈಗ ಮಾಡುವುದೇನೆಂದು ತಲೆಯ ಮೇಲೆ ಕೈಹೊತ್ತು ಕುಳಿತುಬಿಟ್ಟೆ. ಇಡೀ ವರ್ಷ

ದುಡಿದದ್ದೆಲ್ಲವನ್ನೂ ಈ ಮಸಿಯ ವ್ಯವಹಾರಕ್ಕೆ ಹಾಕಿ ಮೈ-ಕೈಯನ್ನೂ ಮಸಿ ಮಾಡಿಕೊಂಡುಬಿಟ್ಟೆ ನಲ್ಲಾ! ಎಂದು ಬಹಳವಾಗಿ ಹಳಹಳಿಸಿದೆ. ನನ್ನ ಈ ವ್ಯಥೆಯನ್ನು ಕಂಡು ಮರುಗಿ ಶಿವಬಸಪ್ಪನ ತಮ್ಮ ವಿರೂಪಾಕ್ಷಪ್ಪ ಗಾಡಿಕಟ್ಟಿ ಎರಡು ಮೂರು ರೂಪಾಯಿಗಳನ್ನಿಟ್ಟು ನೀರನ್ನು ತಂದು ಐದಾರು ಗಾಡಿ ನೀರನ್ನು ಸುರಿದು ಬೆಂಕಿಯನ್ನು ನಂದಿಸಿದ. ಆಗ ನನಗೆ ಸಿಕ್ಕ ಇದ್ದಿಲು ಕೇವಲ 13 ಚೀಲ. ಅವನ್ನೂ ಕೂಡ ನೀರು ಹಾಕಿ ತೋಯಿಸಿದವುಗಳೆಂದು ಒಂದೂವರೆ ರೂಪಾಯಿಗೆ ಒಂದು ಮೂಟೆಯಂತೆ ಯಾರಿಗೋ ಮಾರಿ ಕೈತೊಳೆದುಕೊಂಡೆ. ಈ ಸುದ್ದಿ ಹಿರೇಕಾಂಶಿಯ ನನ್ನ ಹಿತೈಷಿಗಳಿಗೆಲ್ಲ ಗೊತ್ತಾಗಿ ಅವರಿಂದ ಮನಸ್ವೀ ಬೈಸಿಕೊಂಡು ಬಿಟ್ಟೆ. ನಮ್ಮ ಬಸನಗೌಡರ ತಾಯಿ ಬೈದಷ್ಟು ಯಾರೂ ಬೈಯಲಿಲ್ಲ. "ಸುಮ್ಮನೆ ಇರಲಾರದೆ ಕೈ ಮೈ ಮಸಿಮಾಡಿಕೊಳ್ಳೋ ವ್ಯವಹಾರ ಮಾಡಿ ಬಿಟ್ಟೆಲ್ಲಾ! ಮೊದಲು ನಮ್ಮನ್ನಾದರೂ ಕೇಳಬಾರದಾಗಿತ್ತಲ್ಲಾ! ಅವನ್ಯಾವನೋ ಬಸ್ಯಾ ಗಿಸ್ಯಾ ಅಂತ ಅವನ್ನ ಮೇಲೇರಿಸಿಬಿಟ್ರಿ. ಆ ಹಲ್ಕಾ ಬಸ್ಯಾ ನಿನ್ನ ಮುಖಕ್ಕೂ ಮಸಿ ಹಚ್ಚಿ ತಾನೂ ಹಚ್ಕೊಂಡು ಓಡಿಹೋದ. ಈಗೇನು ಮಾಡ್ತೀಯಾ ಹೇಳು..." ಇತ್ಯಾದಿ. ಸದಾ ಏಕವಚನದಲ್ಲೇ ಮಾತಾಡುತ್ತಿದ್ದ ಆ ಮುದುಕಿ ಏಕವಚನದಲ್ಲೇ ಬೈದುಹಾಕಿಬಿಟ್ಟರು. ನಾನು ಒಂದೂ ಮಾತಾಡದೆ ತಲೆ ತಗ್ಗಿಸಿಕೊಂಡು ಸುಮ್ಮನೆ ನಿಂತುಬಿಟ್ಟೆ. "ಒಂದು ರೂಪಾಯಿಯಲ್ಲಾ ಎರಡು ರೂಪಾಯಿಯಲ್ಲಾ, ನೂರಾರು ರೂಪಾಯಿ ಕಳ್ದುಬಿಟ್ಟೆ. ಊರಿಗೆ ಕಳಿಸಿದ್ರೆ ನಿಮ್ಮ ಅಪ್ಪಾ ಅಮ್ಮಾ ಅವರ ತಾಪತ್ರಯಾದರೂ ಹಿಂಗತಿತ್ತು. ನಡಿ ಮೈ ತೊಳಕೊಂಡು ಊಟ ಮಾಡು. ಕಳ್ದು ಹೋದದ್ದಕ್ಕ ಚಿಂತ್ಸಿದ್ರೆ ಏನಾಗ್ತೈತೆ..." ಎಂದು ಮಮತೆಯಿಂದ ಹೇಳುತ್ತಾ ತನ್ನ ಮಗ ಬಸನಗೌಡನಿಗೆ "ಏ ತಮ್ಮಾ.. ಬಸನಗೌಡ, ಮಾಸ್ತ್ರು ಈ ವರ್ಷ ಭಾಳಾ ಹಾಳಾಗಿ ಹೋದ್ರು. ಹುಡುಗುರ ಮ್ಯಾಲೆ ಇನ್ನು ನಾಲ್ಕು ನಾಲ್ಕು ಪಡಿ ಬತ್ತಾ ವರ್ಸ ವರ್ಸಕ್ಕಿಂತ ಹೆಚ್ಚಿಗೆ ಹಾಕಿ ಕೊಡ್ಸಿಬಿಡು. ಹೇಗಿದ್ರೂ ದೇವರು ಒಳ್ಳೇ ಬೆಳೆ ಕೊಟ್ಟಾನ" ಎಂದು ಹೇಳಿದ್ದು ಕೇಳಿ ನನ್ನ ಕಣ್ಣಂಚಿನಲ್ಲಿ ನೀರು ತೊಟ್ಟಿಕ್ಕ ಹತ್ತಿದ್ದವು. ಇಂಥ ಆಪ್ತ ಬಂಧುಗಳನ್ನೂ ಇನ್ಯಾವ ಜನ್ಮದಲ್ಲಿ ನಾನು ತರಲಿ! ಎಂದು ಮನದಲ್ಲೇ ಅಂದುಕೊಂಡೆ. ಈ ಮುದುಕಿಯ ಮಾತಿಗೆ ಊರ ಯಾರೂ ಎದುರು ಮಾತಾಡುತ್ತಿರಲಿಲ್ಲ. ಕಳ್ಳ-ಸುಳ್ಳರನ್ನು ಧೈರ್ಯವಾಗಿ ಕಳ್ಳ-ಸುಳ್ಳ ಎಂದೇ ಬೈದು ನಡುಗಿಸುತ್ತಿದ್ದಳು.

ಇಡೀ ಹಿರೇಕಾಂಶಿಯಲ್ಲಿ ನನ್ನ ಇದ್ದಿಲು ಕಂಟ್ರಾಕ್ಟ್ ಸುದ್ದಿಯೇ ಸುದ್ದಿ. ಎಲ್ಲರೂ ಅಯ್ಯೋ ಎನ್ನುವವರೇ! ಕೆಲವರು ಬೈದು ಗಲಾಟೆ ಮಾಡುವವರೇ. ಆ ವರ್ಷ ನನಗೆ ಊರವರೆಲ್ಲ ಬಿತ್ತಿ ಕೊಡುತ್ತಿದ್ದ ಗದ್ದೆಯ ಬತ್ತ, ಊರಿನವರು ಕೊಟ್ಟಿದ್ದು ಎಲ್ಲಾ ಸೇರಿ ಮೂವತ್ತು ಚೀಲ ಬತ್ತ ಆಯಿತು. ನನ್ನ ರಾಮಾಯಣ ದೊಡ್ಡಾಟದ ಪಾತ್ರಧಾರಿಗಳೆಲ್ಲ ಧಾರಾಳವಾಗಿ ಬತ್ತ ಸುರಿದರು. ಬತ್ತದ ರಾಶಿ ಶಾಲೆಯಲ್ಲಿ ಕಂಗೊಳಿಸತೊಡಗಿತು. ಎಲ್ಲ ಬತ್ತವನ್ನೂ ಊರಿಗೆ ಸಾಗಿಸಿ ನಮ್ಮ ಮನೆಯವರ ಗಲಾಟೆಯನ್ನು ತಪ್ಪಿಸಿಕೊಂಡೆ. ಎಪ್ಪತ್ತೈದು ರೂಪಾಯಿ ಬದಲು ನೂರಿಪ್ಪತ್ತು ರೂಪಾಯಿಯ ಬತ್ತ ಮನೆಗೆ ಬಂದದ್ದು ಕಂಡು ಅವರಿಗೂ ತೃಪ್ತಿಯಾಯಿತು.

ಇತ್ತ ಹೊಸೂರಿನಲ್ಲಿ ನನ್ನ ಇದ್ದಿಲು ವ್ಯವಹಾರದ ಸುದ್ದಿಯೇ ಸುದ್ದಿಯಾಗಿ ಹೋಯಿತು. ಇದ್ದಿಲು ಬಟ್ಟಿ ಅಗ್ನಿಗಾಹುತಿಯಾದುದರ ಬಗ್ಗೆ ಅವರ ಪ್ರತಿಕ್ರಿಯೆಯೇ ಬೇರೆ. "ಹಿರೇಕಾಂಶಿ ಮಾಸ್ತರು ಆ ಹಲ್ಕಾ ಮನುಷ್ಯನ್ನ ನಂಬಿ ಬಹಳ ಲುಕ್ಸಾನು ಮಾಡಿಕೊಂಡುಬಿಟ್ರು. ಇದ್ದಿಲು ಬಟ್ಟಿಗೆ ಬೆಂಕಿಯಿಡುವಾಗ ಮಡಿ-ಹುಡಿ ಬೇಡವೇ? ಈ ಊರಿಗೆ ಹುಣಸೀಗಿಡ ಕಡಿಯೋದಕ್ಕೆ

ಬಂದಲಾಗಾಯ್ತು ಇಲ್ಲಿನ ಜೋಗೇರ ಶಾಂತಿ ಗೀಂತಿ ಅಂತಾ ಅದಾಳಲ್ಲ! ಅವಳ ಸಂಗ ಮಾಡಿಬಿಟ್ಟಿದ್ದ. ಅವತ್ತು ಎಲ್ಲೋ ಅವಳ ಸಂಗ ಮಾಡಿ ಬಂದಿದ್ದನೋ ಏನೋ! ಆ ಮೈಲಿಗಿಯಲ್ಲೇ ಬಟ್ಟಿಗೆ ಬೆಂಕಿ ಹಾಕಿದ. ಅದಕ್ಕೇ ಬಟ್ಟಿಯೆಲ್ಲ ಸುಟ್ಟು ಬೂದಿಯಾಯಿತು" ಎಂದವರು ಕೆಲವರು. ಮತ್ತೆ ಕೆಲವರು "ಅವನು ಮಠದ ಬೈಲಿನಲ್ಲಿರೋ ಹುಣಸೇ ಮರ ಕಡಿಬಾರದಾಗಿತ್ತು. ಆ ಹುಣಸೀ ಮರದ ಪಕ್ಕದಲ್ಲೇ ಹಿಂದೆ ದೊಡ್ಡಮಠ ಇತ್ತು. ಅಲ್ಲಿ ಹಿಂದಿನ ಸ್ವಾಮಿಗಳ ಗದ್ದಿಗೇನೂ ಕೂಡ ಇದೆ. ಎಲ್ಲಾ ಬಿಟ್ಟು ಅಲ್ಲಿ ಹಿಂದಿನ ಸ್ವಾಮಿಗಳು ಹಾಕಿದ ಮರ ಕಡಿದ. ಆ ಮರ ಉರುಳಿ ನೆಲಕ್ಕೆ ಬೀಳುವಾಗ ಅಲ್ಲಿರೋ ಒಂದು ಬಿಲ್ವಪತ್ರಿ ಮರದ ಮೇಲೆ ಬಿತ್ತು. ಬಿಲ್ವ ಮರವೂ ಅದರ ಜೊತೆ ಮುರ್‍ದು ಬಿತ್ತು. ಅಯೋಗ್ಯ ಆ ಬಿಲ್ವ ಮರವನ್ನೂ ತುಂಡರಿಸಿ ಇದ್ದಿಲು ಬಟ್ಟಿಗೆ ಹಾಕಿಬಿಟ್ಟ. ಆದ್ದರಿಂದಲೇ ಇದ್ದಿಲುಬಟ್ಟಿ ಉರ್‍ದು ಬೂದಿಯಾಗಿ ಮಾಸ್ತರರ ಮುಖಕ್ಕೆ ಮಸಿ ಹಚ್ಚಿತು" ಎನ್ನುವವರು ಕೆಲವರು. ಬೇರೆ ಕೆಲವರು "ಮಾಸ್ತರು ಬಡಪೆಟ್ಟಿಗೆ ಬೀಳೋರಲ್ಲಾ! ಹ್ಯಾಂಗ ಬಿದ್ರು ಅನ್ನೋದೇ ಸೋಜಿಗ!" ಅಂದವರು ಒಬ್ಬಿಬ್ಬರು. ಹೀಗೆ ವಿಧವಿಧವಾದ ಮೃದು-ಕಠಿಣೋಕ್ತಿಗಳ ಮಿಶ್ರಪ್ರತಿಕ್ರಿಯೆಗಳ ಸುಳಿಗೆ ಸಿಕ್ಕ ನನಗೆ ಹುಚ್ಚು ಹಿಡಿಯದಿದ್ದುದೇ ಆಶ್ಚರ್ಯ. ಇಡೀ ವರ್ಷ ದುಡಿದದ್ದು ಒಂದೇ ತಿಂಗಳಲ್ಲಿ ಮಂಗ ಮಾಯವಾಯಿತಲ್ಲಾ ಎಂಬ ಕೊರಗು ಮನಸ್ಸನ್ನು ಕೊರೆಯಿತಾದರೂ ನನ್ನ ಕೊರಗಿಗೆ ಹಿರೇಕಾಂಶಿಯವರ ಮರುಕದ ಸುರಿಮಳೆಯಿಂದ ಕ್ರಮೇಣ ಮನಸ್ಸು ಗಟ್ಟಿಯಾಯಿತು. ಅವರು ಕೊಟ್ಟ, ನನ್ನ ಊಹೆಗೂ ಮೀರಿದ, ಬತ್ತದ ದೇಣಿಗೆಯಿಂದ ಲುಕ್ಸಾನನ್ನು ತುಂಬಿಕೊಟ್ಟಿದ್ದಂತು ದೊಡ್ಡ ಔದಾರ್ಯವಾಗಿ ನನ್ನ ದುಃಖಕ್ಕಾಗಿ ಮರಗುವವರು ಇದ್ದಾರಲ್ಲ ಎಂಬ ಧೈರ್ಯದಲ್ಲಿ ಪುನಃ ನಾನು ಹೊಸಮನುಷ್ಯನಾಗಿ ಮುಂದೆ ಎಂದೂ ಇಂಥ ನನ್ನ ವೃತ್ತಿಗೆ ವಿರುದ್ಧವಾದ ವ್ಯವಹಾರದಲ್ಲಿ ತೊಡಗಲಿಲ್ಲ. ಇದೊಂದು ನನಗೆ ದೊಡ್ಡ ಪಾಠವಾಯಿತು. ಬಸ್ಯಾನನ್ನು ಹುಡುಕಿಕೊಂಡು ಕೋಳೂರು ವಗೈರೆಗೆ ತಿರುಗಿದ್ದೂ ಉಂಟು. ಪ್ರಯೋಜನವಾಗಲಿಲ್ಲ. ಊರವರು ಒಳ್ಳೆಯವನ ಸಹವಾಸ ಮಾಡಿದ್ದಿರಿ. ಆತನೊಬ್ಬ ಶುದ್ಧ ವ್ಯಭಿಚಾರಿ, ಕಳ್ಳ....ಇತ್ಯಾದಿ ಹೇಳಿಬಿಟ್ಟರು. ನೀವು ಪದೇ ಪದೇ ಅವನನ್ನು ಹುಡುಕಿಕೊಂಡು ಬರಬೇಡಿ. ಅದೂ ಕೂಡ ಅಪಾಯ ಎಂದರು. ನಾನು ಆ ಚಿಂತೆ ಬಿಟ್ಟುಬಿಟ್ಟೆ.

### ಜೋಗಫಾಲ್ಸ್ ಪ್ರವಾಸ

ಹಿರೇಕಾಂಶಿಯಲ್ಲಿದ್ದಾಗಿನ ನನ್ನ ಜೀವನದಲ್ಲಿ ಮರೆಯಲಾಗದ ಇನ್ನೊಂದು ದೊಡ್ಡ ಘಟನೆಯೆಂದರೆ ಎರಡು ಚಕ್ಕಡಿಗಳಲ್ಲಿ ಎಂಟು ಜನ ಊರಿನ ಪ್ರಮುಖ ಆತ್ಮೀಯರೊಡನೆ ನಾನು 'ಜೋಗಫಾಲ್ಸ್' (ಗೇರಸೊಪ್ಪೆಯ ದಬದಬೆ)ಯನ್ನು ನೋಡಿಬಂದ ಪ್ರವಾಸ ಪ್ರಸಂಗ. ಆ ಪ್ರವಾಸ ನನಗೆ ಒಳ್ಳೆಯ ಆನಂದವನ್ನು ನೀಡಿದ್ದಲ್ಲದೆ, ಭಾವನಾತ್ಮಕವಾಗಿ ಪ್ರಭಾವ ಬೀರಿದುದು ಮರೆಯಲಾಗದು, ಜೊತೆಗೆ ಇಂದಿಗೂ ನನ್ನ ಮನಸ್ಸನ್ನು ಕೊರೆಯುವ ಒಂದು ಕಹಿಯೂ ಮನಸ್ಸಿನಾಳದಲ್ಲಿ ನೆಟ್ಟಿದೆ.

1940ನೆಯ ಇಸ್ವಿಯೋ ಏನೋ ಸರಿಯಾಗಿ ನೆನಪಿಲ್ಲ. ಆಗ ಜೋಗಫಾಲ್ಸ್ ಮೈಸೂರು ರಾಜ್ಯಕ್ಕೆ ಸೇರಿದ್ದಾಗಿತ್ತು. ವಿಶ್ವೇಶ್ವರಯ್ಯನವರ ಸಲಹೆಯಂತೆ ವಿದ್ಯುಚ್ಛಕ್ತಿ ಉತ್ಪಾದಿಸುವ ಒಂದು ಬೃಹದ್ಯೋಜನೆ ಪ್ರಾರಂಭವಾಗುವ ಕಾಲ. ಆ ಯೋಜನೆಯ ಶಂಕುಸ್ಥಾಪನೆಗೆ ಆಗಿನ ಮೈಸೂರು

ಮಹಾರಾಜರಾಗಿದ್ದ ಜಯಚಾಮರಾಜೇಂದ್ರ ಒಡೆಯರು ಬರುತ್ತಾರೆಂದು ಗೊತ್ತಾಗಿತ್ತು. ಆ ಸಮಯದಲ್ಲಿ ಅಲ್ಲಿಗೆ ಹೋಗಿ ಆ ಸಮಾರಂಭವನ್ನು ನೋಡಿಕೊಂಡು ಬರಬೇಕೆಂದು ಗಿಣಿವಾಲದ ವೀರಪ್ಪ, ಲೋಕನಗೌಡ, ಬಸನಗೌಡ, ಬಾಳಿಹಳ್ಳಿ ಬಸವಣ್ಣೆಪ್ಪ ಮೊದಲಾದ ಊರ ಪ್ರಮುಖರೆಲ್ಲಾ ಹೊರಟರು; ನನ್ನನ್ನೂ ಹೊರಡಿಸಿದರು. ಈ ಪ್ರವಾಸಕ್ಕೆ ಹುಸೇನಸಾಬ ಮತ್ತು ತಳವಾರ ಫಕ್ಕೀರಣ್ಣ ಇವರಿಬ್ಬರ ಎರಡು ಬಾಡಿಗೆ ಚಕ್ಕಡಿಗಳು ಸಿದ್ಧವಾದವು. ಒಂದೊಂದು ಗಾಡಿಯಲ್ಲಿ ನಾಲ್ಕು ನಾಲ್ಕು ಜನರು ಕುಳಿತುಕೊಳ್ಳಬೇಕೆಂದು ಗೊತ್ತಾಯಿತು. ನನಗೆ ಮಾತ್ರ ಯಾವ ಭಾರ್ಜೂ ಇಲ್ಲ. ಖರ್ಚು-ವೆಚ್ಚ ಏನಿಲ್ಲ. ನಾನೇನಿದ್ದರೂ ಮಕ್ಕಳ ಆಟದಲ್ಲಿ ಹಾಲುಂಡಿ ಅನ್ನುತ್ತಾರಲ್ಲ ಹಾಗೆ ಹತ್ತರೊಡನೆ ಹನ್ನೊಂದು ಅಷ್ಟೆ. ನಾನಿದ್ದರೆ ಅವರಿಗೆಲ್ಲ ಏನೋ ಸಂತೋಷ. ಅದಕ್ಕಾಗಿ ನನ್ನನ್ನು ಹೊರಡಿಸಿದ್ದರು. ನಮ್ಮ ಪ್ರವಾಸ ಐದಾರು ದಿನದ್ದಾದ್ದರಿಂದ ಐದಾರು ದಿನಕ್ಕಾಗುವಷ್ಟು ಅಕ್ಕಿ-ಬೇಳೆ, ಸಂಬಾರ ಪುಡಿ, ತರಕಾರಿ ದಂಡಿನ ಹುಳಿ (ತಂಬೂಳಿಕಾರ), ಅಡಿಗೆಪಾತ್ರೆ ಏನೇನು ಬೇಕೋ ಅದನ್ನೆಲ್ಲ ತುಂಬಿಕೊಂಡದ್ದಾಯಿತು.

ಬೆಳದಿಂಗಳ ರಾತ್ರಿಯಲ್ಲಿ ಗಾಡಿ ಕಟ್ಟಿಸಿಕೊಂಡು ನಮ್ಮ ಪ್ರವಾಸ ಎತ್ತಿನ ಕೊರಳಿಗೆ ಕಟ್ಟಿದ ಹುರಗೆಜ್ಜಿ ಸರದ ಗುಲುಕ್ ಗುಲುಕ್ ನಿನಾದದೊಡನೆ ಪ್ರಾರಂಭವಾಯತು. ಊರು ಬಿಟ್ಟು ಗಾಡಿಗಳು ಕಾಡಿನ ಮಧ್ಯದ ಹಾದಿಯಲ್ಲಿ ನಿಧಾನವಾಗಿ ಸಾಗುತ್ತಿದ್ದಂತೆ ಹಿರೇಕಾಂಶಿಯ ಆಟಗಳಲ್ಲೆಲ್ಲ ಹಿಮ್ಮೇಳದ ಪ್ರಧಾನ ವ್ಯಕ್ತಿಯಾಗಿದ್ದ ಲೋಕನಗೌಡನ ಹರಿಶ್ಚಂದ್ರ ದೊಡ್ಡಾಟದ ಪದಗಳು ಪ್ರಾರಂಭವಾಗಿಬಿಟ್ಟವು. ಅವರು ತಮ್ಮ ಗಾಡಿಯಲ್ಲೇ ಇದ್ದರು. ಕೇಳುವುದೇನು! ಎಲ್ಲರೂ ನಕ್ಕದ್ದೇ ನಕ್ಕದ್ದು. ನಾನೂ ಅನೇಕ ನಾಟಕದ ಹಾಡನ್ನು ಹಾಡತೊಡಗಿದೆ. ಬೇಸರವಾದಾಗಲೆಲ್ಲ ಎಲ್ಲರೂ ಬೀಡಿ ಹಚ್ಚಿ ದಮ್ಮ ಎಳೆಯುತ್ತ, ನಿಚ್ಚಳ ಬೆಳದಿಂಗಳಿನಲ್ಲಿ ಸಾಗುತ್ತಿದ್ದ ಅಂದಿನ ದಿನಗಳ ಆ ಅರಣ್ಯ ಮಧ್ಯದ ವಿವಿಧ ದೃಶ್ಯಗಳು ನನ್ನ ಮನದಾಳದಲ್ಲಿ ಬೇರೂರಿ ಉಳಿದುಬಿಟ್ಟಿವೆ. ಎಂಟು ಹತ್ತು ಮೈಲು ದೂರ ಸಾಗಿದ ಮೇಲೆ ಎಲ್ಲರೂ ಗಾಡಿ ಹೊಡೆಯುವ ಹುಸೇನಸಾಬನಿಗೂ ಫಕ್ಕೀರಣ್ಣನಿಗೂ "ಅಪ್ಪಾ! ಜೋಕೆ, ನಾವು ಮಲಗುತ್ತೇವೆ. ನಮ್ಮೆಲ್ಲರ ಪ್ರಾಣಗಳನ್ನು ನಿಮ್ಮ ಉಡಿಯಲ್ಲಿ ಬಿಟ್ಟಿದ್ದೇವೆ. ನಿಧಾನವಾಗಿ ಗಾಡಿ ಹೊಡೆದುಕೊಂಡು ನಡೀರಿ" ಎಂದು ಹೇಳಿ ಹೊದ್ದುಕೊಂಡು ಗಾಡಿಯಲ್ಲಿ ಮುದುಡಿ ಮಲಗಿಬಿಟ್ಟೆವು. ನಮಗೆ ಎಚ್ಚರವಾದಾಗ ಗಾಡಿಗಳು ಚಂದ್ರಗುತ್ತಿ ದೇಶಪಾಂಡೆಯವರ ಮನೆಬಾಗಿಲಲ್ಲಿ ನಿಂತಿದ್ದವು.

ದೇಶಪಾಂಡೆಯವರ ಮನೆತನ ಪುರಾತನವಾದದ್ದು. ಹಿರೇಕಾಂಶಿ-ಸಮಸ್ರಗಿ ಚಂದ್ರಗುತ್ತಿಗಳಲ್ಲಿರುವ ದೇಶಪಾಂಡೆ ಮನೆತನದ ಬುಡಕಟ್ಟು ಒಂದೇ. ಇವರೊಬ್ಬ ಚಿಕ್ಕ ಸಂಸ್ಥಾನಿಕರಿದ್ದ ಹಾಗೆ. ಆ ಮನೆತನ ಕಾಲಾನಂತರ ಒಡೆದು ಮೂರು ಊರುಗಳಲ್ಲಿರುವ ತಮ್ಮ ತಮ್ಮ ಜಮೀನಿನ ಸಾಗುವಳಿ ಮಾಡಿಕೊಂಡು ಸುಖ-ಸಮೃದ್ಧಿಯಿಂದಲೂ, ಔದಾರ್ಯಾದಿ ಗುಣವಿಶೇಷಗಳಿಂದಲೂ ಬಾಳಿ ಬದುಕಿದ್ದ ಮನೆತನಗಳು. ಹಿರೇಕಾಂಶಿಯ ಪ್ರತಿಷ್ಠಿತರೆಲ್ಲ ಬಂದರೆಂಬುದನ್ನು ಅರಿತ ಅವರು ಅಮಿತೋತ್ಸಾಹ ತೋರಿ ನಮ್ಮನ್ನೆಲ್ಲ ಸ್ವಾಗತಿಸಿ ಮನೆಯ ಒಂದು ಭಾಗವನ್ನು ನಮಗೆ ತೆರವು ಮಾಡಿಕೊಟ್ಟು ಆ ಕ್ಷಣವೇ ಬಿಸಿಬಿಸಿ ಚಹಾ ಒಗ್ಗರಣೆ ಹಾಕಿದ ಅವಲಕ್ಕಿ ತಂದಿಟ್ಟರು. ಅವಲಕ್ಕಿಯ ಜೊತೆಗೆ ಕಲಸಿಕೊಂಡು ತಿನ್ನಲು ಒಟ್ಟು ನಮ್ಮ ಹತ್ತು ಜನಕ್ಕೂ ಎರಡು ಮೊಸರಿನ ಗಡಿಗೆಗಳೂ ಬಂದವು. ಕೆನೆಸಹಿತವಾದ ಮೊಸರನ್ನು ಅವಲಕ್ಕಿ ಹಾಕಿಕೊಂಡು ತಿನ್ನುವುದು ಒಂದು ರೂಢಿ. ಬ್ರಾಹ್ಮಣ ಜನಾಂಗದ ಆಚಾರಶೀಲರು

ಪರಸ್ಥಳಕ್ಕೆ ಹೋಗುವಾಗ ಅವಲಕ್ಕಿಯ ಒಂದು ಗಂಟು ಸಹಿತ ಹೋಗುತ್ತಿದ್ದರು. ಅಡಿಗೆ ಮಾಡಿಕೊಂಡು ಊಟ ಮಾಡುವ ತಾಪತ್ರಯಕ್ಕಿಂತ ತಮ್ಮ ಮನೆಯಲ್ಲೇ ತಮ್ಮ ಹೆಂಗಸರೇ ತಯಾರಿಸಿ ಕಟ್ಟಿಕೊಟ್ಟ ಅವಲಕ್ಕಿ ತಿನ್ನುವಲ್ಲಿಯೇ ಅವರಿಗೆ ಹೆಚ್ಚು ವಿಶ್ವಾಸ. ಅವಲಕ್ಕಿಯನ್ನು ನೆನೆಸಿ ಬೆಲ್ಲದೊಡನೆ ತಿನ್ನುವುದು ಒಂದು ಬಗೆಯಾದರೆ ಕೆನೆಮುರಿಯದ ಮೊಸರಿನ ಗಡಿಗೆ ತರಿಸಿ ಅದರಲ್ಲಿ ಅವಲಕ್ಕಿಯನ್ನು ಹಾಕಿ ಕಡ್ಲಿಕೊಬ್ರಿ ಚಟ್ನಿಯನ್ನು ನಂಜಿಕೊಂಡು ಕಂಠಪೂರ್ತಿ ತಿನ್ನುವುದು ಇನ್ನೊಂದು ಬಗೆ. ಅವಲಕ್ಕಿಗೆ ಒಗ್ಗರಣೆ ಹಾಕಿ ಅವನ್ನು ಕೆನೆಮೊಸರಿನಲ್ಲಿ ನೆನೆಸಿಕೊಂಡು ತಿನ್ನುವುದೂ ಇನ್ನೊಂದು ಬಗೆ.

ಅವಲಕ್ಕಿ ಎಂದೊಡನೆ ಕಂಡಕಂಡ ಅಂಗಡಿಯಲ್ಲಿ ಸಿಕ್ಕುವ, ಕಂಡಕಂಡವರು ಕಂಡಕಂಡಲ್ಲಿ ಬತ್ತವನ್ನು ಕುಟ್ಟಿ ಹುರಿದು ಕುಟ್ಟಿದ ಅವಲಕ್ಕಿ ಅಲ್ಲ ಅಥವಾ ಯಾಂತ್ರಿಕಯುಗದ ಇಂದಿನ ಯಂತ್ರಭಾಗದಲ್ಲಿ ಬತ್ತವನ್ನು ದೊಡ್ಡ ಪ್ರಮಾಣದಲ್ಲಿ ಕುದಿಸಿ ಹುರಿದು ಕುಟ್ಟಿದುದೂ ಅಲ್ಲ. ಬತ್ತ ಬಲಿತು ಇನ್ನೂ ಸ್ವಲ್ಪ ಹಸಿಯಿರುವಾಗಲೇ ಒಂದು ಹದದಲ್ಲಿ ಅವನ್ನು ಬಡಿದು ಮನೆಯಲ್ಲಿ ಕುಟ್ಟಿ ಮಾಡಿದ ಅವಲಕ್ಕಿಯನ್ನು ಆಗ ಮಲೆನಾಡಿನಲ್ಲಿ ಮಾಡಿ ಇಟ್ಟುಕೊಂಡು, ಆಗಾಗ ಒಗ್ಗರಣೆ ಹಾಕಿಕೊಂಡು ತಿನ್ನುವ ಪದ್ಧತಿಯಿತ್ತು. "ಜೋಳದಾ ಬೋನಕ್ಕೆ ಬೇಳೆಯ ತೊಗೆ"ಯ ಜೊತೆಗೆ ಕಾಳೆಮ್ಮೆ ಮೊಸರು ಮಜ್ಜಿಗೆಯೊಡನೆ ಉಂಡು ಬೆಳುವೊಲನಾಡಿನ ಊಟದ ರುಚಿಯನ್ನು ಹೊಗಳಿದ ಸರ್ವಜ್ಞನಿಗೆ ಮಲೆನಾಡಿನ ಹಸುಗಳ ಕೆನೆಮೊಸರಿನಲ್ಲಿ ಅವಲಕ್ಕಿಯನ್ನು ನೆನೆಸಿಕೊಂಡು ತಿಂದ ಅನುಭವ ಉಂಟಾಗಿದ್ದರೆ, ಈ ಸೊಗಸನ್ನೂ ಅನೇಕ ಪದ್ಯಗಳಲ್ಲಿ ಹಾಡಿ ಹರಸಿ ಸಾಹಿತ್ಯದಲ್ಲಿ ರೆಕಾರ್ಡ್ ಮಾಡಿಬಿಡುತ್ತಿದ್ದ. ಅವನಿಗೆ ಈ ಅನುಭವ ಆದಂತಿಲ್ಲ. ಮಲೆನಾಡಿನಲ್ಲಿ ಅವನು ಕಂಡದ್ದೂ ಕೇವಲ "ಅಲ್ಲ ಅರಿಸಿಣವುಂಟು ಬೆಲ್ಲ ಬಿಳಿಯೆಲೆಯುಂಟು...ಒಳ್ಳೆಯ ಹಲಸು" ಮಾತ್ರ. ಇಂಥವನ್ನೇ ಅನುಭವಿಸಿ ಪದ್ಯ ಬರೆದು ಮಲೆನಾಡನ್ನು ಹೊಗಳಿದ. ಮಲೆನಾಡಿನ ಕಾಳೆಮ್ಮೆ ಕಡಿಮೆ. ಇಲ್ಲಿ ಕಪಿಲವರ್ಣದ ಹಸುಗಳು ಅಧಿಕ. ಕಪಿಲವರ್ಣದ ಹಸುವಿನ ಹೈನು ಬಹು ಪ್ರಸಿದ್ಧವಾದದ್ದು. ರುಚಿಯಲ್ಲಿ, ಶುಚಿಯಲ್ಲಿ ಕಪಿಲವರ್ಣದ ಹಸುವಿನ ಹೈನಿಗೆ ಸಮಾನ ಬೇರೆ ಇಲ್ಲ. ಹಾಲು ಮೊಸರು ಸಮೃದ್ಧವಾಗಿದ್ದ ಅಂದಿನ ಮಲೆನಾಡಿನಲ್ಲಿ ಹಾಲನ್ನು ಮಾರಿದವರೇ ಇಲ್ಲ. ಒಂದೊಂದಾಣೆಗೆ ಸೇರು ಹಾಲು ಸಿಗುತ್ತಿದ್ದ ಆ ಕಾಲದಲ್ಲಿ ಮೊಸರಿಗೆ ಬಡತನವೇ ಇರಲಿಲ್ಲ. ಮಜ್ಜಿಗೆಯಂತೂ ಉಂಡು ಉಳಿದು ಪುನಃ ದನಗಳಿಗೆ ಮುಸುರೆಯಾಗುತ್ತಿತ್ತು. ಚಂದ್ರಗುತ್ತಿ ದೇಶಪಾಂಡೆ ಅವರು ನಮ್ಮ ಉಪಚಾರಕ್ಕೆ ತಂದಿಟ್ಟ ಎರಡು ಕೆನೆಮೊಸರ ಗಡಿಗೆಯೊಳಗಿನ ಮೊಸರನ್ನೆಲ್ಲ ದೊಡ್ಡ ಡಬರಿಯ ತುಂಬ ಮಾಡಿಟ್ಟ ಅವಲಕ್ಕಿಯೊಡನೆ ಬೆರೆಸಿ ತಿಂದು ಮೇಲೆ ಬೆಲ್ಲ ಹಾಕಿ ಮಾಡಿದ ಎರಡೆರಡು ಲೋಟ ಚಹಾವನ್ನು ಕುಡಿದು, ತಟ್ಟೆಯಲ್ಲಿ ತಂದಿಟ್ಟ ಚಿಗುರೆಲೆ, ಹದ ಮಾಡಿ ತುಪ್ಪದಲ್ಲಿ ಹುರಿದ ಎಳೆಅಡಿಕೆಯ ರುಚಿ ನೋಡಿ, ನಮ್ಮ ಮುಖ್ಯ ಚಟವಾದ ಬೀಡಿಯನ್ನೆಳೆದು ಚಂದ್ರಗುತ್ತಿ ದೇವಸ್ಥಾನ ಗುಡ್ಡ ನೋಡಲು ಹೊರಟೆವು. ಹನೀಫಸಾಬು, ಲೋಕನಗೌಡ ಮತ್ತು ಕ್ಷೌರದ ಗರಿಗೆಪ್ಪ ಬರಲಿಲ್ಲ. "ನಾವು ನಾಲ್ಕಾರು ಸಲ ಗುಡ್ಡ ಹತ್ತಿ ಎಲ್ಲ ನೋಡಿದ್ದೇವೆ. ನೀವೇ ಹೋಗಿಬನ್ನಿ. ನೀವು ಬರುವಷ್ಟರಲ್ಲಿ ಭರ್ಜರಿ ಅಡಿಗೆ ಮಾಡಿಡುತ್ತೇವೆ. ಉಂಡು ಮಲಗಿ ಸಾಯಂಕಾಲ ಗಾಡಿ ಕೊರಳು ಕಟ್ಟಿ ಮುಂದೆ ಸಾಗೋಣ" ಎಂದರು. ನಾವು ಉತ್ಸಾಹದಿಂದ ಗುಡ್ಡವನ್ನೇರಿದವು. ಅಲ್ಲಿನ ವಿಜಯ ನಗರದ ಅರಸರ ಕಾಲದ ವೈಭವಪೂರ್ಣ ಕೋಟೆಯ ಅವಶೇಷಗಳನ್ನು, ರೇಣುಕಾ ದೇವಾಲಯ

ವನ್ನು ನೋಡಿಕೊಂಡು ಕೆಳಕ್ಕೆ ಬಂದೆವು. ಗುಡ್ಡದ ತುದಿಯಿಂದ ಭೂಮಿಯವರೆಗೆ ಅಖಂಡ ಬಂಡೆಯಲ್ಲಿ ನೈಸರ್ಗಿಕ ಜಾಡನ್ನು ಕಂಡು ಭಯದಿಂದ ನಡುಗಿದೆವು. ಅದನ್ನು ನೆನೆಸಿಕೊಂಡರೆ ಇಂದಿಗೂ ನಡುಕ. ಅಂಥ ರುದ್ರ ರಮಣೀಯ ನೈಸರ್ಗಿಕ ದೃಶ್ಯ ಅದು. ಹಿಂದೆ ವೈರಿಗಳನ್ನು ಕಣ್ಣುಕಟ್ಟಿ ಬೆಟ್ಟ ಹತ್ತಿಸಿಕೊಂಡು ಆ ಜಾರು ಬಂಡೆಯ ತುತ್ತ ತುದಿಗೇರಿಸಿ ನಿಲ್ಲಿಸಿ ಭಯಂಕರ ಪ್ರಪಾತಕ್ಕೆ ತಳ್ಳುತ್ತಿದ್ದರೆಂಬುದನ್ನು ನೆನೆದರೆ ಇಂದಿಗೂ ಹೃದಯದಲ್ಲಿ ಒಂದು ಬಗೆಯ ಕಸಿವಿಸಿ. 18ನೆಯ ಶತಮಾನದಲ್ಲಿ ಮೈಸೂರು ರಾಜ್ಯಾಧಿಕಾರವನ್ನು ತಡೆದಿದ್ದ ಟಿಪ್ಪುವೂ ವೈರಿಗಳಿಗೆ ಈ ಶಿಕ್ಷೆ ಕೊಡುತ್ತಿದ್ದನೆಂಬ ಬಗ್ಗೆ ಅನೇಕ ಕಥೆಗಳನ್ನು ಕೇಳಿದೆವು. ಬೆಟ್ಟಕಲ್ಲಿನ ಐತಿಹಾಸಿಕ ಅವಶೇಷಗಳ ಮಸಕು ದೃಶ್ಯ ಇನ್ನೂ ನನ್ನ ಭಾವಕೋಶದಲ್ಲಿ ಸ್ಥಳವನ್ನಾಶ್ರಯಿಸಿ ಮಸಮಸಕಾಗಿ ಕುಳಿತಿದೆ.

ಕೆಳಗಿಳಿದು ಬರುವಷ್ಟರಲ್ಲಿ ಬಾಣಸಿಗರಾದ ಲೋಕನಗೌಡ, ಹನೀಫ, ಕ್ಷೌರದ ಗದಿಗೆಪ್ಪ ಮಾಡಿದ ಅಡಿಗೆಯ ಘಮ ಘಮ ವಾಸನೆ ನಾಲಗೆಯ ಮೇಲೆ ನೀರು ಕಂಡು ಬಿಟ್ಟಿತು. ಗುಡ್ಡವನ್ನೇರಿ ಇಳಿದು ಬರುವಷ್ಟರಲ್ಲಿ ಬೆಳಗ್ಗೆ ಕಂಠಪೂರ್ತಿ ತಿಂದಿದ್ದ ಅವಲಕ್ಕಿ ಮೊಸರು ಭಸ್ಮವಾಗಿ ಹೊಟ್ಟೆ ಚುರುಗುಟ್ಟತೊಡಗಿತ್ತು. ದೇಶಪಾಂಡೆಯವರು ಹತ್ತೂ ಜನಕ್ಕೆ ಆರೇಳು ಸೇರು ಗಂಧಸಾಲಿ ಅಕ್ಕಿ, ಎರಡು ಸೇರು ಬೇಳೆ, ಬೆಲ್ಲ, ಹುಣಸೇಹಣ್ಣು, ಸಂಬಾರಪುಡಿ, ಹಿತ್ತಿಲಲ್ಲಿ ಬೆಳೆದ ಬಾಳೆಕಾಯಿ, ಬೂದಿಗುಂಬಳ ಏನೇನೋ ಸಮೃದ್ಧ ತರಕಾರಿ, ಒಗ್ಗರಣೆಗೆ ತುಪ್ಪ, ಏನೆಲ್ಲ ಕೊಟ್ಟು ತಾವೇ ನಿಂತು ಅಡಿಗೆ ಮಾಡಿಸಿದ್ದರಂತೆ. ಅವರ ಮನೆಯ ಹೆಂಗಸರು ನಿಂತು ಹೇರಳೆಕಾಯಿ ಗೊಜ್ಜು ಗಿಜ್ಜು ಅಂತಾ ಏನೇನೋ ಮಾಡಿಸಿ ಬಿಟ್ಟಿದ್ದರಂತೆ. ಈ ಎಲ್ಲ ಸಮೃದ್ಧ ಆಹಾರ ಪರಿಕರದ ಸುವಾಸನೆ ಹಸಿದ ಹೊಟ್ಟೆಯ ಬರವನ್ನು ತಣಿಸುವ ಪೂರ್ವರಂಗವಾಗಿ ಮೂಗಿಗೆ ಘಮಘಮ ಎಂದು ಸುಖಾನುಭವ ಮೂಡಿಸುತ್ತಿತ್ತು. ನಾಲಗೆ ಚಪ್ಪರಿಸುತ್ತ ಮುಖಮಾರ್ಜನೆ ಮಾಡಿಕೊಂಡು ಎಲ್ಲರೂ ಸಾಲಾಗಿ ಕುಳಿತುಕೊಂಡೆವು. ಒತ್ತೋಳುದ್ದದ ಬಾಳೆಯೆಲೆಯನ್ನು ಬಿಸಿಯ ಝಳಕ್ಕೆ ಹಿಡಿದು ಮುಗ್ಗಿಸಿ, ಲೋಕನಗೌಡನೇ ಹಾಸಿದ. ಇಂಥ ಉಪಚಾರಕ್ಕೆ ನಮ್ಮ ಕಂಪನಿಯಲ್ಲಿ ಲೋಕನಗೌಡನೇ ಹೇಳಿ ಮಾಡಿಸಿದ ವ್ಯಕ್ತಿ. ಲೋಕನಗೌಡ ಊರಿನಲ್ಲೂ ಅಷ್ಟೆ. ಸಾರ್ವಜನಿಕ ವ್ಯವಹಾರದಲ್ಲಿ ಎಲ್ಲರನ್ನೂ ನಗಿಸಿಕೊಂಡು, ತಾನೂ ನಕ್ಕು ಮದುವೆ ಮುಂಜಿ, ಊರ ವ್ಯವಹಾರ ಎಲ್ಲ ಕೆಲಸ ಕಾರ್ಯಕ್ಕೂ ಯಾವಾಗಲೂ ನಡು ಕಟ್ಟಿ ನಿಲ್ಲುವ ಅಪರೂಪದ ವ್ಯಕ್ತಿ; ಕಲೆಗಾರ; ಕ್ರಿಯಾಶೀಲ; ಕಲಾವಂತ.

ದೊಡ್ಡ ತಪ್ಪಲೆಯಲ್ಲಿ ಬೇಯಿಸಿದ ಅನ್ನವನ್ನು ದೊಡ್ಡ ಪರಾತದಲ್ಲಿ ತೆಗೆದು ಎತ್ತಿಕೊಂಡು ಬಂದಾಗಲೆ ಗಮಗಮವಾಸನೆ ಸುತ್ತೆಲ್ಲ ಹರಡಿತು. "ಗಂಧ ಸಾಲಿಅಕ್ಕಿಯ ಇಂಥ ಅನ್ನ ಊಟ ಮಾಡಲು ಪುಣ್ಯ ಮಾಡಿರಬೇಕು ಮಾಸ್ತರೇ" ಎನ್ನುತ್ತ ಪಂಕ್ತಿಯಲ್ಲಿ ಮೊದಲಿನವನಾಗಿ ಕುಳಿತ ನನಗೆ ನೀಡಿದ ಆ ಅನ್ನದ ಸುವಾಸನೆಗೆ ನನ್ನ ನಾಲಗೆಯಲ್ಲಿ ನೀರೂರಿತು. ಹನೀಫ, ಬಸನಗೌಡ, ಹುಸೇನಸಾಬ, ತಳವಾರ ಫಕ್ಕೀರಣ್ಣ ಇವರೆಲ್ಲ ಊಟದಲ್ಲೂ, ಶ್ರಮವ್ಯವಹಾರದಲ್ಲೂ ಕಂಬೀರರು. ಅವರ ಎಲೆಯ ಮೇಲೆ ಅನ್ನದ ಗುಡ್ಡೆಯನ್ನೇ ಲೋಕನಗೌಡ ಇಟ್ಟುಬಿಟ್ಟ. ....ಬೂದಿಗುಂಬಳಕಾಯಿ ಹುಳಿ, ಬಾಳೆ ಕಾಯಿಪಲ್ಯ, ಎರಡು ಮೂರು ತರದ ಗೊಜ್ಜು, ಸವತೇಕಾಯಿ ಗಟ್ಟಿ ಮೊಸರು ಬಜ್ಜಿ, ಆರೇಳು ಪ್ರಕಾರದ ಉಪ್ಪಿನಕಾಯಿ ಪರಿಕರಗಳೆಲ್ಲ ಒತ್ತೋಳುದ್ದದ ಎಲೆಯ ತುಂಬೆಲ್ಲ ಕುಳಿತವು. ನಾನಂತೂ ಬಹುಶಃ ಮಲೆನಾಡಿನ ಇಂಥ ಸಮೃದ್ಧ ಊಟ ಉಂಡದ್ದು ಇದೇ ಮೊದಲು. ಮುಂದೆ ಇಂಥ ಅನುಭವಗಳು ಎಷ್ಟೋ ಸಲ ಆದವು. ಆ ಪ್ರಸಂಗ ಬಂದಾಗ

ಹೇಳುತ್ತೇನೆ. ಪಂಪ ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಬನವಾಸಿ ನಾಡಿನ ಕಾಡ ನಾಡ ಬೆಳಸು ಇಂಬೆಳಸೆಂದು ಹೇಳಿದ -

> ಲಲಿತ ವಿಚಿತ್ರ ಚಕ್ರಫಲ ಪುಷ್ಪಯುತಾಟವಿ ಸೊರ್ಕಿದಾನೆಯಂ ।
> ಬೆಳೆವುದು ದೇವಮಾತೃಕವೆನಿಪ್ಪ ಪೊಲಂ ನವಗಂಧಶಾಲಿಯಂ ।
> ಬೆಳೆವುದು ರಮ್ಯನಂದನವನಾಳಿ ವಿಯೋಗಿಜನಕ್ಕೆ ಬೇಟಮಂ ।
> ಬಳೆವುದು ಕಾಡನಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ ॥

ಈ ಪದ್ಯದ ಯಥಾರ್ಥಜ್ಞಾನವಾದುದು ನನಗೆ ಈಗಲೇ. ಮಳೆಯ ನೀರಿನಿಂದ ಹಕ್ಕಲು ಗದ್ದೆಗಳಲ್ಲೂ ಆ ಬನವಾಸಿ ನಾಡಿನ ಜನ ಗಂಧಶಾಲಿಯನ್ನು ಬೆಳೆಯುತ್ತಿದ್ದರಂತೆ. ಪಂಪನ ಈ ವರ್ಣನೆಯಲ್ಲಿ ಉತ್ಪ್ರೇಕ್ಷೆಯೆಂಬುದೇ ಇಲ್ಲವೆಂಬುದನ್ನು ಈ ನನ್ನ ಪ್ರವಾಸ ಪ್ರಸಂಗ ಮನವರಿಕೆ ಮಾಡಿಕೊಟ್ಟಿತು. ಅಲ್ಲಿನ ಅಡವಿ, ಅರಣ್ಯ ಪ್ರದೇಶ ನಿಜವಾಗಿ ಲಲಿತವಾದ ವಿಚಿತ್ರ ಪತ್ರ ಫಲ ಪುಷ್ಪಗಳಿಂದ ಕೂಡಿತ್ತು. ಆ ಅರಣ್ಯ ಆನೆಯ ಬೆಳೆಯನ್ನು ಬೆಳೆಯುತ್ತಿತ್ತಂತೆ. ಆದರೆ ಅರಣ್ಯದ ಆನೆ ಪ್ರತ್ಯಕ್ಷವಾಗದಿದ್ದರೂ ಅದರ ಬೃಂಹಿತವನ್ನು ದೂರದಿಂದ ಕೇಳಿದ್ದಂತೂ ನಿಜ. ನಮ್ಮ ಗಾಡಿಯ ಸಪ್ಪಳ ಎತ್ತುಗಳ ಕೊರಳಲ್ಲಿ ಕಟ್ಟಿದ ಹುರುಗೆಜ್ಜೆ ಸರ, ಬಿದಿರುಗಂಟೆಗಳ ಸಪ್ಪಳಕ್ಕೆ ಅವು ಘೀಂಕಾರ ಮಾಡುತ್ತ ದೂರ ಓಡಿಹೋಗಿರಬೇಕು. ಆದ್ದರಿಂದಲೇ ಕಣ್ಣಿಗೆ ಬೀಳದಿರಬಹುದು. ರಮ್ಯವಾದ ಆ ಅರಣ್ಯ ನಿಜವಾಗಿ ಇಂದ್ರನ ನಂದನವನವೇ. ವಿಯೋಗಿ ಜನಕ್ಕೆ ಬೇಟವನ್ನುಂಟುಮಾಡಿದ್ದು ಕೂಡ ನಮ್ಮ ಅನುಭವಕ್ಕೆ ಬರಲಿಲ್ಲ. ನಾವು ಅದನ್ನು ಅರಸಿ ಹೊರಟವರಲ್ಲವಲ್ಲಾ! ಪಂಪ ಕವಿಗೆ ಬಹುಶಃ ಆ ಅನುಭವವಾಗಿರಬೇಕು. ಇಲ್ಲದಿದ್ದರೆ ಹಾಗೆ ಬರೆದಿರಲಾರ ಎನಿಸುವಂತಿತ್ತು ಆ ರಮ್ಯಾರಣ್ಯ. ಎತ್ತೆತ್ತ ಹೂ-ಹಣ್ಣುಗಳ ವಿಚಿತ್ರ ಪತ್ರಭರಿತ ಗಿಡಮರಗಳೇ! ಅಂತೂ ಇಂಥ ಅರಣ್ಯ ಪ್ರದೇಶದ ಮಧ್ಯದಲ್ಲಿ ಬನವಾಸಿಗೆ ಅತಿ ಸಮೀಪವಿರುವ ಚಂದ್ರಗುತ್ತಿಯೆಂಬ ಪ್ರಖ್ಯಾತ ಐತಿಹಾಸಿಕ ಸ್ಥಳದಲ್ಲಿ ನಮ್ಮ ಇಂದಿನವರೆಗಿನ ಇತಿಹಾಸದಲ್ಲಿ ಕಂಡರಿಯದ ಗಂಧಸಾಲಿ ಅಕ್ಕಿಯ ಸಮೃದ್ಧ ಊಟ ಮಾಡಿದ್ದಂತೂ ನಿಜ. ಆ ಅಕ್ಕಿಯ ಅನ್ನದ ಮಾರ್ದವ, ರುಚಿ-ರೂಪ-ಸುವಾಸನೆಗೆ ನಾವೆಲ್ಲ ಮನಸೋತು ಹೋದೆವು. ಇದೆಂದೂ ಮರೆಯಲಾಗದ ಅನುಭವ. ಮುಕ್ಕಾಲು ಘಂಟೆಯವರೆಗೆ ನಗುತ್ತ ಮಾತನಾಡುತ್ತ ಅನೇಕ ಪರಿಕರ ವಿಶಿಷ್ಟ ಸುಗ್ರಾಸ ಭೋಜನಾಂತ್ಯದಲ್ಲಿ ಸ್ವಲ್ಪ ಸ್ವಲ್ಪ ಕೊಬ್ರಿ, ಗಸಗಸೆ, ಯಾಲಕ್ಕಿ, ಜಾಕಾಯಿ, ಕೇಸರಿ, ದ್ರಾಕ್ಷಿ, ಗೇರುಬೀಜ, ಗೋಡಂಬಿ ಬೀಜಗಳನ್ನು ಹಾಲಿನಲ್ಲಿ ಹಾಕಿ ದೇಶಪಾಂಡೆಯವರ ಮನೆಯಲ್ಲಿಯೇ ಮಾಡಿದ ಪಾಯಸವನ್ನು ಮನೆಯ ಯಜಮಾನಿ ನಗುನಗುತ್ತ 'ಇದರ ರುಚಿಯನ್ನು ಸ್ವಲ್ಪ ನೋಡಿರಿ' ಎಂದು ಬಡಿಸಿದಾಗ ನಾವು 'ಅಯ್ಯೋ! ಇಂಥ ಪಾಯಸ ಕೊನೆಯಲ್ಲಿ ಉಂಟು ಅಂತಾ ಹೇಳಿದ್ದರೆ ನಾವು ಕಂಠಪೂರ್ತಿ ಊಟ ಮಾಡುತ್ತಿರಲಿಲ್ಲ; ಹೊಟ್ಟೆಯಲ್ಲಿ ಇನ್ನಷ್ಟು ಸ್ಥಳ ತೆರವಾಗಿರುವಂತೆ ನೋಡಿಕೊಳ್ಳುತ್ತಿದ್ದೆವು" ಎನ್ನುತ್ತಲೇ ಪಾಯಸದ ರುಚಿ ನೋಡಿದಾಗ ಅದು ಪಾಯಸವಲ್ಲ, ಅಮೃತ ಎನ್ನಿಸಿತು. ಹಿಂದಿನಿಂದ ದೇಶಪಾಂಡೆಯವರು ಜೇನುತುಪ್ಪದ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ಬಂದು 'ಈ ಪಾಯಸದ ಮೇಲೆ ಸ್ವಲ್ಪ ಸ್ವಲ್ಪ ಜೇನುತುಪ್ಪ ಬಡಿಸುತ್ತೇನೆ' ಎಂದಾಗ ನಮಗೆ ಆಶ್ಚರ್ಯದ ಮೇಲೆ ಆಶ್ಚರ್ಯವಾಗಿ 'ದೇಶಪಾಂಡೆರಾಯರೇ. ಇದಕ್ಕೆ ಒಳ್ಳೆ ಬೆಲ್ಲ ಹಾಕಿಯೇ ಮಾಡಿರುವಾಗ ಪುನಃ ಜೇನುತುಪ್ಪದ ಅವಶ್ಯಕತೆ ಏನು' ಎಂದಾಗ ಅವರು "ಹಾಗಲ್ಲ, ಬೆಲ್ಲದ ಈ ಸಿಹಿಯ ಜೊತೆಗೆ ಜೇನಿನ ಸಿಹಿಯ ರುಚಿ ಸೇರಿದಾಗ ಅದೊಂದು ಬಗೆಯ ವಿಚಿತ್ರ ಸಿಹಿಯ ಸ್ವಾದವನ್ನು

ಸವಿಯುವುದಕ್ಕೂ ಪುಣ್ಯಬೇಕು" ಎನ್ನುತ್ತಲೇ ಒಂದೊಂದು ದೊಡ್ಡ ಸೌಟಿನ ತುಂಬ ಜೇನು ಸುರಿದರು. ನಾವು ಈ ವಿಚಿತ್ರ ಪಾಯಸವನ್ನು ಉಂಡು ಅಡಕೆ ಎಲೆಯನ್ನು ಪಟ್ಟಾಗಿ ಅಗಿದು ಒಂದೊಂದು ಬೀಡಿ ಎಳೆದು ಪಡಸಾಲೆಯಲ್ಲಿ ಹಾಸಿದ್ದ ದೊಡ್ಡ ಹೆಬಸೂರು ಗುಡಾರದ ಮೇಲೆ ಒರಗಿಬಿಟ್ಟೆವು. ಪುಷ್ಕಳವಾದ ಊಟದ ಅಮಲು ನೆತ್ತಿಗೇರಿ ಗಾಢನಿದ್ರೆಯ ತೋಳತೆಕ್ಕೆಯಲ್ಲಿ ದೇಹ ಮನಗಳನ್ನು ಚೆಲ್ಲಿ ಎಚ್ಚರಗೊಂಡಾಗ ಸಾಯಂಕಾಲ ಆರು ಘಂಟೆಯಾಗಿತ್ತು.

ಆಮೇಲೆ ಗಾಡಿ ಏರಿದೆವು. ಜೋಗದ ಕಡೆಗೆ ನಮ್ಮ ಗಾಡಿ ಹೊರಡಲು ಸಿದ್ಧವಾಗಿ ನಿಂತವು. ದೇಶಪಾಂಡೆರಾಯರಿಗೆ ನಮಸ್ಕಾರ ಹೇಳಿದೆವು. ಲೋಕನಗೌಡ ಉಂಡು ಉಳಿದ ಗಂಧಸಾಲಿ ಅನ್ನಕ್ಕೆ ಮೊಸರು ಸುರಿದು ಹಸಿಶುಂಠಿ, ಬೆಳ್ಳುಳ್ಳಿ, ಉಪ್ಪು ಹಾಕಿ ಬುತ್ತಿ ಕಟ್ಟಿ ಬೆಳಗಿನ ನ್ಯಾರಿಗೆ ಸಿದ್ಧಪಡಿಸಿಕೊಂಡೇ ಹೆಗಲ ಮೇಲಿಟ್ಟುಕೊಂಡು ಬಂದು ಗಾಡಿಯನ್ನೇರಿದ. ಗಾಡಿಗಳು ನಿಧಾನವಾಗಿ ಹೊರಟವು. ಚಂದ್ರ ಮೂಡಿ ಅರಣ್ಯ ಪ್ರದೇಶದ ಮೇಲೆ ತನ್ನ ಅಮೃತಕಿರಣಗಳನ್ನು ಚೆಲ್ಲಿ ಅಪೂರ್ವ ಸೌಂದರ್ಯ ಶೋಭೆಗಳುಳ್ಳದ್ದನ್ನಾಗಿ ಮಾಡಿದ್ದ. ಅಕ್ಕಪಕ್ಕದ ಗುಡ್ಡಗಳು ಮಸಮಸಕಾಗಿ ಕಪ್ಪಾಗಿ ಕಾಣುತ್ತಿದ್ದವು. ಗೊರವಂಕಗಳ ಸಾಲು ಆಕಾಶದಲ್ಲಿ ಸಾಲುಗಟ್ಟಿ ಕೊರಕ್ ಕೊರಕ್ ಧ್ವನಿ ಮಾಡುತ್ತ ನಡೆದಿದ್ದವು. ಅರಣ್ಯ ಮಧ್ಯದಿಂದ ಆಗೊಮ್ಮೆ ಈಗೊಮ್ಮೆ ಆನೆಗಳ ಬೃಂಹಿತ ಬೆರಗುಗೊಳಿಸುತ್ತಿತ್ತು. ಹುಲಿಯ ಆಕಳಿಕೆಯ ಕರ್ಕಶ ಧ್ವನಿ ಒಮ್ಮೊಮ್ಮೆ ನಮ್ಮ ಎತ್ತುಗಳನ್ನು ಮುಂದಕ್ಕೆ ಹೆಜ್ಜೆಯಿಡದಂತೆ ಮಾಡುತ್ತಿತ್ತು. ಇಂಥ ದುರ್ಗಮಾರಣ್ಯ ಮಾರ್ಗದಲ್ಲಿ ಸಾಗುತ್ತಿದ್ದ ನಮ್ಮ ಗಾಡಿಗಳಲ್ಲಿ ನಮ್ಮೆಲ್ಲರುಗಳ ಉತ್ಸಾಹಪೂರ್ಣ ವಿವಿಧ ಕಟು-ಮಧುರ-ಮಂತ್ರಧ್ವನಿ ವಿಶೇಷಗಳು ಮಾತಿನ ಮಾಲೆಗೆ ನಗೆಯ ಒಪ್ಪವಿಡುತ್ತಿದ್ದವು. ನಿದ್ರೆ ಜಾರಿತು. ದಾರಿ ಅತ್ಯಂತ ಅಪಾಯಕಾರಿ ಎನ್ನುವ ಭಾವನೆಯೇ ನಿದ್ರೆ ಜಾರಲು ಕಾರಣವಾಗಿತ್ತು. ಬೀಡಿಗಳ ಮೇಲೆ ಬೀಡಿಯನ್ನೆಳೆಯುತ್ತ ಲೋಕಾಭಿರಾಮವಾಗಿ ಮಾತಾಡುತ್ತ ನಗುತ್ತ ಕೆಲೆಯುತ್ತ ಹೊರಟಿದ್ದ ನಮ್ಮ ಧ್ವನಿಗಳಿಗೂ, ಎತ್ತುಗಳ ಕೊರಳ ಬಿದಿರು ಗಂಟೆ ಧ್ವನಿಗೂ ಯಾವ ಕಾಡುಪ್ರಾಣಿಗಳೂ ನಮ್ಮ ಚಕ್ಕಡಿಗಳ ಸನಿಹಕ್ಕೂ ಬರುವಂತಿರಲಿಲ್ಲ. ಸಿದ್ದಾಪುರ ದಾಟಿ ಚುಮುಚುಮು ಬೆಳಕು ಹರಿಯುವ ಹೊತ್ತಿಗೆ ಜೋಗದ ಗುಂಡಿಯ ಸಮೀಪದಲ್ಲಿದ್ದ ಬ್ರಿಟಿಷ್ ಬಂಗ್ಲೆಯ ಹತ್ತಿರಕ್ಕೆ ಬಂದುಬಿಟ್ಟೆವು. ಸಿದ್ದಾಪುರದಿಂದ ಜೋಗದವರೆಗೆ ಭಯಂಕರವಾದ ಮಾರ್ಗದಲ್ಲಿ ನಮ್ಮ ಗಾಡಿಗಳು ಸುರಕ್ಷಿತವಾಗಿ ಬಂದುದಕ್ಕೆ ದೇವರಿಗೆ ಕೈಮುಗಿದೆವು. ಅದರ ಪಕ್ಕದಲ್ಲೇ ರುದ್ರರಮಣೀಯತೆಯಿಂದ ಶರಾವತಿ ಭೋರ್ಗರೆದು ಹರಿಯುತ್ತಿತ್ತು.

ಶರಾವತಿ ನದಿಯೇ ಬ್ರಿಟಿಷ್ ಸರ್ಕಾರದ ಗಡಿಗೂ ಮೈಸೂರು ನಾಡಿನ ಗಡಿಗೂ ಮಧ್ಯದ ಗೆರೆಯಾಗಿತ್ತು. ಬ್ರಿಟಿಷರು ಸಿದ್ದಾಪುರ ತಾಲೂಕಿನ ನಮ್ಮ ಗಡಿಯಲ್ಲಿ ಶರಾವತಿಯ ದಂಡೆಯ ಮೇಲೆ ಜೋಗದ ಜಲಪಾತದ ಹತ್ತಿರವೇ ಒಂದು ಪ್ರವಾಸೀ ಮಂದಿರ ಕಟ್ಟಿಸಿದ್ದರು. ಅದಕ್ಕೆ ಬ್ರಿಟಿಷ್‌ಬಂಗ್ಲೆ ಎಂಬ ಹೆಸರಿತ್ತು. ಈ ಬಂಗ್ಲೆಯಿಂದ ದಕ್ಷಿಣಕ್ಕೆ ಶರಾವತಿಯ ಆಚೆಯ ದಡದಲ್ಲಿ ಮೈಸೂರು ಅರಸರೂ ನೀರು ಧುಮುಕುವ ಸ್ಥಳಕ್ಕೆ ಎದುರಾಗಿಯೇ ಒಂದು ರಮ್ಯ ಸ್ಥಳದಲ್ಲಿ ಪ್ರವಾಸಿ ಮಂದಿರ ಕಟ್ಟಿಸಿದ್ದರು. ಅದಕ್ಕೆ ಮೈಸೂರು ಬಂಗ್ಲೆ ಎಂದು ಕರೆಯುತ್ತಿದ್ದರು.

ನಾವು ಎತ್ತುಗಳ ಕೊರಳು ಬಿಚ್ಚಿ ಮೇವು ಹಾಕಿ ಬೆಳಗಾಗುತ್ತಲೇ ಮೊದಲು ನಾವು ನೋಡಬೇಕಾಗಿದ್ದ ಜನತ್ಪ್ರಸಿದ್ಧ ಜೋಗದ ಜಲಪಾತವನ್ನು ಸೂರ್ಯೋದಯವಾಗುತ್ತಲೇ

ನೋಡಲು ಹೊರಟೆವು. ಕಿವಿ ಗಡಚಿಕ್ಕುವ ಅದರ ಅಬ್ಬರ - ಆರ್ಭಟಗಳ ಶಬ್ದವನ್ನು ಗಾಡಿಬಿಟ್ಟ ಸ್ಥಳದಿಂದಲೇ ಕೇಳುತ್ತ ಎದೆ ನಡುಗುತ್ತಿತ್ತು. ನದಿಯ ಪಾತ್ರ ಪ್ರದೇಶವನ್ನು ಇಳಿಯುತ್ತ ಇಳಿಯುತ್ತ ಹೋದಂತೆಲ್ಲ ನಮ್ಮ ಎದೆಯ ನಡುಕ ಇನ್ನೂ ಅಧಿಕವಾಗತೊಡಗಿತು. ಕಾಲು ನಡುಗುತ್ತಿದ್ದವು. ದೊಡ್ಡದಾದ ಆ ನದಿ ಆಧಾರ ತಪ್ಪಿ ಪ್ರಪಾತಕ್ಕೆ ಬೀಳುವ ಆ ಗುಂಡಿಯ ಆಳ ಅಗಲಗಳನ್ನು ಸಮೀಪಕ್ಕೆ ಹೋಗಿ ನೋಡುವ ಧೈರ್ಯವೂ ನಮಗೆ ಬೇಗ ಉಂಟಾಗಲಿಲ್ಲ. ಸಮೀಪಕ್ಕೆ ಹೋದಾಗಲಂತೂ ನನಗೆ ಕಾಲೇ ನಡುಗಿ ಮುಂದಕ್ಕೆ ಹೆಜ್ಜೆ ಇಡದವನಾದೆ. ಲೋಕನಗೌಡ ನನ್ನ ಕೈ ಹಿಡಿದುಕೊಂಡು ಕರೆದುಕೊಂಡು ಹೊರಟ. ನೀರು ಬೀಳುವ ಸ್ಥಳದಿಂದ ಗುಂಡಿಯನ್ನು ನೋಡಿದರೆ ಕಣ್ಣು ತಿರುಗಿದಂತಾಗುತ್ತಿತ್ತು. ಅಲ್ಲಿ ನೆಲ ಕಚ್ಚಿ ಮಲಗಿಯೇ ನಾನು ದೂರದಿಂದಲೇ ನೋಡಿದೆ. ಸ್ವಲ್ಪ ಸ್ವಲ್ಪ ಧೈರ್ಯ ಬಂದ ಮೇಲೆ ಸುತ್ತಮುತ್ತಣ ರಮ್ಯ , ವನ ಪರ್ವತ, ನದಿಯ ಇಕ್ಕೆಲಗಳು ಸ್ವರ್ಗಸುಖವನ್ನೇ ನನ್ನ ಕಣ್ಣುಗಳಿಗುಂಟು ಮಾಡಿದವು. ನದಿಯು ಅನೇಕ ಕವಲುಗಳಿಂದ ಹರಿಯುತ್ತ ಬಂದು ನಾಲ್ಕಾರು ಕಡೆಯಿಂದ ಪ್ರಪಾತಕ್ಕೆ ಧುಮುಕುತ್ತಿತ್ತು. ನಾವು ನದಿ ಬೀಳುವ ಸ್ಥಳದಿಂದ ಮೇಲ್ಭಾಗಕ್ಕೆ ಹೋಗಿ ಬಂಡೆಯಿಂದ ಬಂಡೆಗೆ ಹಾರುತ್ತ, ಚಿಕ್ಕಪುಟ್ಟ ಪ್ರವಾಹಗಳಲ್ಲಿ ಇಳಿದು ದಾಟುತ್ತ, ಮೈಸೂರು ಬಂಗ್ಲೆಯ ಕಡೆಗೆ ಹೋದೆವು. ಆ ಭಾಗ ಜನಗಳಿಂದ ಕಿಚಿಕಿಚಿ ಎನ್ನುತ್ತಿತ್ತು. ಬ್ರಿಟಿಷ್ ಬಂಗ್ಲೆಯ ಕಡೆಗೆ ನರಪಿಳ್ಳೆಯೂ ಇಲ್ಲದೆ ಪ್ರಶಾಂತವಾಗಿತ್ತು.

'ಗಾಂಧಿ ಹೈಡ್ರೊ ಎಲೆಕ್ಟ್ರಾನಿಕ್' ಎಂಬ ಹೆಸರಿನ ವಿದ್ಯುಚ್ಛಕ್ತಿ ಯೋಜನೆಯ ಕಾರಣವಾಗಿ ಮಾರ್ಗ ನಿರ್ಮಿಸುವುದು, ಬಂಡೆಗಳನ್ನು ಸೀಳುವುದು, ಮುಗಿಲೆತ್ತರಕ್ಕೆ ಬೆಳೆದಿದ್ದ ಕಾಡು ಮರಗಳನ್ನು ಕಡಿಯುವುದು, ಕಾಲುವೆ ಮಾಡುವುದು, ಏನೆಲ್ಲಾ ಅನೇಕ ಬಗೆಯ ಕಾರ್ಯಕ್ರಮಗಳು ಸಹಸ್ರ ಸಹಸ್ರ ಸಂಖ್ಯೆಯ ಜನಗಳಿಂದ ಊಹಾತೀತವಾಗಿ ಸಾಗಿತ್ತು. ಅದೇ ದಿನ ಮೈಸೂರು ಮಹಾರಾಜರು ಗಾಂಧಿ ಹೈಡ್ರೊ ಎಲೆಕ್ಟ್ರಾನಿಕ್ ವಿದ್ಯುದಾಗಾರದ ಶಂಕುಸ್ಥಾಪನೆ ಮಾಡುವ ದಿನವಾದ್ದರಿಂದ ನೂರಾರು ಹಸಿರು..... ವಿವಿಧ ರೀತಿಯಲ್ಲಿ ಕಟ್ಟಿದ ಚಪ್ಪರಗಳು ನಮ್ಮನ್ನು ಬಹಳವಾಗಿ ಆಕರ್ಷಿಸಿದವು. ಅರಣ್ಯದ ವಿವಿಧ ಹೂಕುಚ್ಚುಗಳು ಅದಕ್ಕೆ ತೆಂಗುಗಳ ........ಹೂಗುಚ್ಛಗಳು ಅವುಗಳನ್ನು ಕಟ್ಟಿರುವ ರೀತಿ, ಸಂವಿಧಾನ, ಅವುಗಳ ವೈವಿಧ್ಯಮಯವಾದ ಸುಗಂಧ ಇವೆಲ್ಲ ನಮ್ಮ ಕಣ್ಣುಗಳನ್ನು ತುಂಬಿ ಮೂಕವಿಸ್ಮಿತರನ್ನಾಗಿಸಿದವು. ಇಂಥ ಚಪ್ಪರಗಳನ್ನು ನಮ್ಮ ಜೀವಮಾನದಲ್ಲಿ ಮೊದಲು ಕಂಡದ್ದೇ ಇಲ್ಲ. ಮೈಸೂರಿನ ಶ್ರೀ ಜಯಚಾಮರಾಜ ಒಡೆಯರು ಬಂಗ್ಲೆಯಲ್ಲಿ ಬಂದು ಇಳಿದುಕೊಂಡದ್ದರಿಂದ ಅತ್ತ ಕಡೆ ಯಾರನ್ನೂ ಬಿಡುತ್ತಿರಲಿಲ್ಲವಾಗಿ ನಾವು ಅತ್ತ ಇತ್ತ ಸುಳಿದಾಡುವ ಸಮಯದಲ್ಲಿಯೇ ಮಹಾರಾಜರು ಅವರ ಹವ್ಯಾಸಗಳಲ್ಲಿ ಒಂದಾಗಿದ್ದ ಬೇಟೆಗಾಗಿ ಹೊರಟುದನ್ನು ಸಮೀಪದಿಂದಲೇ ನೋಡಿ ಜೈಕಾರ ಮಾಡಿದೆವು. ಮಹಾರಾಜರು ನಮ್ಮ ಪೇಟಾ ಮೊದಲಾದ ಉಡಿಗೆ ತೊಡಿಗೆಯನ್ನು ಕಂಡು ಕಾರು ನಿಲ್ಲಿಸಿ ಮಾತನಾಡಿಸಿ, ನಮ್ಮ ಊರುಗಳ ವಿಚಾರ ತಿಳಿದುಕೊಂಡ ಸನ್ನಿವೇಶ ನಮ್ಮನ್ನು ಪುಳಕಿತ ಗಾತ್ರರನ್ನಾಗಿಸಿತು. ಕುಸ್ತಿಯ ಪೈಲ್ವಾನನಂತೆ ಕಾಣುವ ಅವರು ಆಗ ಮಿಲಿಟರಿಯ ಕಮ್ಯಾಂಡರ್‌ರಂತೆ ವೇಷಭೂಷಿತರಾಗಿ ಕಂಡರು. ಅದೊಂದು ಎಂದೂ ಮರೆಯಲಾಗದ ಘಟನೆ. ಕೇವಲ 8-10 ಸೆಕೆಂಡುಗಳಷ್ಟು ಕಾಲ ನಮ್ಮನ್ನು, ಕಾರಿನಲ್ಲಿಯೇ ಕುಳಿತುಕೊಂಡು ಮಾತನಾಡಿ ಅವರು ಅತ್ತ ಹೋದ ಮೇಲೆ ನಾವು ಕೃತಾರ್ಥರಾದಂತೆ ಭಾವಿಸಿ ಪುನಃ ಬ್ರಿಟಿಷ್ ಬಂಗಲೆಗೆ ಬಂದು ಅಡಿಗೆಯ ಸನ್ನಾಹದಲ್ಲಿ ಮುಳುಗಿದೆವು. ಬೇಗಬೇಗ ಅಡಿಗೆ

ಮಾಡಿ ಉಂಡು ಶಂಕುಸ್ಥಾಪನೆಯ ಸಮಾರಂಭಕ್ಕೆ ಹೋಗಬೇಕಾಗಿತ್ತು. ಅಲ್ಲದೆ ಆ ರಾತ್ರಿ ಜೋಗದ ಗುಂಡಿಯ ಆ ಪಾತಾಳ ಬಿಲದಲ್ಲಿ ಮದ್ದು ಸುಡುವ ಮತ್ತು ಬೆಂಕಿ ಉಂಡೆಗಳನ್ನೂ, ಹಾರುವ ಉರಿಯನ್ನೂ ಉರಿಸುವ ವಿವಿಧ ಕಾರ್ಯಕ್ರಮಗಳು ಮಹಾರಾಜರ ಮನರಂಜನೆಗಾಗಿ ಪ್ರಕಟವಾಗಿದ್ದವು. ಮೈಸೂರು ಮಹಾರಾಜರು ಜೋಗ ಜಲಪಾತ ನೋಡಲು ಬಂದಾಗಲೆಲ್ಲ ಇಂಥ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳುತ್ತಾರೆಂದು ತಿಳಿದುಬಂತು. ಇಂಥ ಒಂದು ಅಪರೂಪದ ಕಾರ್ಯಕ್ರಮವನ್ನು ನೋಡುವ ಸುವರ್ಣಾವಕಾಶ ಕರ್ಮಧರ್ಮಸಂಯೋಗದಿಂದ ಒದಗಿತ್ತು. ಮೈಸೂರುಬಂಗ್ಲೆಯ ಎದುರು ಭಾಗದಲ್ಲಿ ಜಲಪಾತದ ನಾಲ್ಕೂ ಝರಿಗಳು ಪ್ರವಾಸಕ್ಕೆ ಧುಮುಕುವಿಕೆ ಕಾಣುವಂತಹ ಸ್ಥಳದಲ್ಲಿ ಮಹಾರಾಜರು ಕುಳಿತು ನೋಡಲು ಅಂದವಾದ ಒಂದು ತಾಣ ಕಟ್ಟಲ್ಪಟ್ಟಿತ್ತು. ಮಹಾರಾಜರು ಇಲ್ಲದ ಕಾಲದಲ್ಲಿ ಸಾರ್ವಜನಿಕರು ಅಲ್ಲಿ ಹೋಗಿ ಕುಳಿತು ಜೋಗಜಲಪಾತದ ರುದ್ರರಮಣೀಯ ದೃಶ್ಯವನ್ನು ನೋಡಬಹುದಿತ್ತು.

ನಾವು ಬೇಗಬೇಗ ಊಟ ಮುಗಿಸಿಕೊಂಡು ಹೊಳೆಯನ್ನು ದಾಟಿ ಸಮಾರಂಭಕ್ಕೆ ಹೋದೆವು. ಬನವಾಸಿ-ಚಂದ್ರಗುತ್ತಿ-ಸಾಗರ-ತಾಳಗುಪ್ಪ-ಸಿರಸಿ-ಸಿದ್ದಾಪುರ ಭಾಗದ ಅಸಂಖ್ಯಾತ ಜನರು ಸಮಾರಂಭ ನೋಡಲು ಬಂದಿದ್ದರು. ಆ ಘೋರಾರಣ್ಯ ಪ್ರದೇಶ ಇಷ್ಟೊಂದು ಸಂಖ್ಯೆಯ ಜನರ ಕಾಲ್ತುಳಿತಕ್ಕೆ ಸಿಕ್ಕಿದ್ದು ಬಹುಶಃ ಅಂದೇ ಮೊದಲಾಗಿರಬಹುದು. ಗುಡ್ಡ ದಿಣ್ಣೆಗಳನ್ನು ಕಡಿದು ಹೊಸಹೊಸ ಮಾರ್ಗಗಳನ್ನು ಮಾಡಿದ್ದರಿಂದ ನಿರಾಯಾಸವಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಓಡಾಡಲು ಅನುಕೂಲವಾಗಿತ್ತು. ಸಮಾರಂಭದಲ್ಲಿ ಮಹಾರಾಜರನ್ನು ಕಂಡು ಅವರ ಭಾಷಣವನ್ನು ಕೇಳುವ ಅವಕಾಶ ನಮಗಾದುದು ಅಂದಿನ ಕಾಲದಲ್ಲಿ ನಮ್ಮ ಪುಣ್ಯವೆಂದು ಭಾವಿಸಿದೆವು. ಅದು 'ರಾಜಾ ಪ್ರತ್ಯಕ್ಷದೇವತಾ' ಎಂಬ ಆರ್ಷೇಯ ನುಡಿ ಇನ್ನೂ ಹಳಸಿ ಹೋಗಿರದ ಕಾಲವಲ್ಲವೆ? ಆದ್ದರಿಂದ ಮಹಾರಾಜರು ನಮ್ಮ ಕಣ್ಣಿಗೆ ಪ್ರತ್ಯಕ್ಷ ದೇವರಾಗಿಯೇ ಕಂಡರು. ಅಸಂಖ್ಯಾತ ಜನರು ಜಯಜಯಕಾರ ಮಾಡಿದುದು ಇನ್ನೂ ಕಿವಿಯ ಪಟಲದ ಮೇಲೆ ಪ್ರತಿಧ್ವನಿಸುವಂತೆ ಇದೆ. ಸಮಾರಂಭ ಮುಗಿದು ಕತ್ತಲಾಗುತ್ತಲೇ ಜಲಪಾತದ ಗುಂಡಿಯಲ್ಲಿ ಅನೇಕ ಮನರಂಜನಾ ಕಾರ್ಯಕ್ರಮಗಳು ಪ್ರಾರಂಭವಾದವು.

ಶರಾವತಿಯ ಆಚೆಯ ದಡದಲ್ಲಿ ಅಂದರೆ ಬ್ರಿಟಿಷ್ ಬಂಗಲೆಯ ಹತ್ತಿರ ನೀರು ಧುಮುಕುವ ಕಡೆ ಒಂದು ಕಡೆ ಹದಿನೈದು ಇಪ್ಪತ್ತು ಗಾಡಿ ಸೌದೆಯ ರಾಶಿಯನ್ನು ಸುಟ್ಟು ನಿಗಿನಿಗಿ ಎನ್ನುವಂತೆ ಬೆಂಕಿಯನ್ನು ಮಾಡಿದ್ದರು. ದೊಡ್ಡದೊಡ್ಡ ಬಿದಿರು ಬಂಬುಗಳಿಂದ ಆ ಬೆಂಕಿಯ ಉಂಡೆಗಳನ್ನು ಜಲಪಾತಕ್ಕೆ ದೂಡುತ್ತಿದ್ದರು. ಆ ಬೆಂಕಿಯ ಉಂಡೆಗಳು ಚಿಕ್ಕಚಿಕ್ಕ ಬೆಂಕಿಯ ತುಣುಕುಗಳು ಸುಮಾರು ಒಂಭೈನೂರು ಅಡಿ ಆಳದವರೆಗೆ ಇಳಿದು ಬೀಳುತ್ತಿರುವ ದೃಶ್ಯ ಅತ್ಯಂತ ಮನೋಹರ. ಜ್ಯೋತಿರ್ಲೋಕದಿಂದ ಏಕಕಾಲದಲ್ಲಿ ಲಕ್ಷೋಪಲಕ್ಷ ನಕ್ಷತ್ರಗಳು ಆಧಾರ ತಪ್ಪಿ ಭೂಮಿಗುರುಳುವಂತೆ ಭಾಸವಾಗುತ್ತಿದ್ದವು. ಮಧ್ಯಮಧ್ಯದಲ್ಲಿ ದೊಡ್ಡದೊಡ್ಡ ಆನೆಪಟಾಕಿ, ಗರ್ನಾಲುಗಳನ್ನು ಹಚ್ಚಿ ಬಿಸಾಡುತ್ತಿದ್ದರು. ಅವುಗಳ ಸಪ್ಪಳ ಆ ಗುಂಡಿಯಲ್ಲಿ ಪ್ರತಿಧ್ವನಿಸುತ್ತಾ ಏಕಕಾಲದಲ್ಲಿ ನೂರೆಂಟು ಸಿಡಿಲುಗಳ ಅಬ್ಬರ ಮನುಷ್ಯಲೋಕವನ್ನೇ ಭಯಭ್ರಾಂತರನ್ನಾಗಿಸಿ ಕಕ್ಕಾಬಿಕ್ಕಿಗೊಳಿಸುವಂತೆ ಕಿವಿಗಳು ಗಡಚಿಕ್ಕುವ ಆ ಅಬ್ಬರದ ಭಯಂಕರ ಧ್ವನಿಯಿಂದ ಕ್ಷಣಕಾಲ ಸ್ತಂಭೀಭೂತರಾಗಿಬಿಡುತ್ತಿದ್ದೆವು. ಮತ್ತೊಂದು ಕಡೆಯಲ್ಲಿ ಸಣ್ಣ ಸಣ್ಣ ಕಂತೆಗಳನ್ನಾಗಿ ಕಟ್ಟಿ ಸೇರಿಸಿದ್ದ ಹುಲ್ಲಿನ ಬಣವೆಗಳಿಂದ ಕಂತೆಗಳನ್ನು ಹಿಡಿಹಿಡಿದು ಬೆಂಕಿ ಹಚ್ಚಿ

ಗುಂಡಿಯಲ್ಲಿ ಬಿಸಾಡುತ್ತಿದ್ದರು. ಉರಿಯುತ್ತ ಉರಿಯುತ್ತ ನಿಧಾನವಾಗಿ ತಳದವರೆಗೂ ಇಳಿಯುತ್ತಿರುವ ಆ ದೃಶ್ಯ ಉರಿಯ ಮಳೆ ಭೂಮಿಗೆ ಸುರಿದರೆ ಹೇಗೆ ಸುರಿದೀತು? ಎಂಬ ಚಿತ್ರವನ್ನು ಕಣ್ಮನಗಳ ಮುಂದೆ ಉಂಟುಮಾಡುತ್ತಿತ್ತು. ಎಂದೂ ಕಾಣದ ಈ ಭಯಂಕರವೂ, ರುದ್ರಮನೋಹರವೂ ಆದ ದೃಶ್ಯಾವಳಿಗಳನ್ನು ಕಾಣುತ್ತ ನಿಂತ ನನಗೆ ಅರಿವಿಲ್ಲದೆಯೇ ಯಾವುದೋ ಬೇರೊಂದು ಲೋಕದಲ್ಲಿರುವಂತೆ ಭಾಸವಾಗಿ ಭೂತಕಾಲದ ನನ್ನ ಅಸ್ತಿತ್ವವನ್ನೇ ಮರೆಸಿಬಿಟ್ಟಿತು. ಈ ಎಲ್ಲ ದೃಶ್ಯಾವಳಿಗಳು ನಿಂತ ಮೇಲೆಯೇ ನಾನು ಪುನಃ ನನ್ನ ವಾಸ್ತವಿಕ ಜೀವನ ಸ್ಥಿತಿಗೆ ಮರಳಿದ್ದು. ಒಟ್ಟಿನಲ್ಲಿ ಈ ಪ್ರವಾಸ ನನ್ನ ಮಟ್ಟಿಗಂತೂ ಅಭೂತಪೂರ್ವವಾದ ನೂರಾರು ನವ್ಯ ದಿವ್ಯಾನುಭವಗಳ ಸಂಸ್ಕಾರವನ್ನುಂಟುಮಾಡಿತು. ರಾತ್ರಿ ಬಹಳ ಹೊತ್ತಿನ ಮೇಲೆ ಹೊಳೆ ದಾಟಿ ನಮ್ಮ ತಂಗುದಾಣವಾದ ಬ್ರಿಟಿಷ್‌ಬಂಗ್ಲೆ ಹತ್ತಿರಕ್ಕೆ ಬಂದುಬಿಟ್ಟೆವು. ಬೆಳಗಾಗುತ್ತಲೆ ಎಲ್ಲರೂ ಶರಾವತಿಯಲ್ಲಿ ಸ್ನಾನ ಮಾಡಿ, ಬಟ್ಟೆ-ಬರೆಗಳನ್ನು ಮಡಿ ಮಾಡಿಕೊಂಡು ನದಿಗೆ ನಮ್ಮ ಅನಂತ ನಮನ ಸಲ್ಲಿಸಿ ಅಡಿಗೆ ಮಾಡಿ ಊಟ ಮಾಡಿ ಮಲಗಿ ಎರಡು ಮೂರು ದಿನಗಳಿಂದ ಅರೆಕೊರೆಯಾಗಿದ್ದ ನಿದ್ರೆಗೆ ಸಾಕಷ್ಟು ಕಾಲಮಿತಿಯನ್ನು ಒದಗಿಸಿದೆವು. ಪುನಃ ಸ್ನಾನ ಮಾಡಿ ಚೆನ್ನಾಗಿ ಅವಲಕ್ಕಿ ಹಚ್ಚಿ ತಿಂದು ಚಹಾ ಕುಡಿದು ಗಾಡಿ ಹೂಡಿಕೊಂಡು ಸಿದ್ದಾಪುರಕ್ಕೆ ಬಂದೆವು.

ಸಿದ್ದಾಪುರದಲ್ಲಿ ನನ್ನ ಸೋದರತ್ತೆಯ ಮಗ ಮಲ್ಲಪ್ಪ ಸೆಟ್ರರ ಮನೆಗೆ ಹೋದೆವು. ಅವನ ನಮ್ಮೂರಿನ ಹೆಸರು 'ಎಲ್ಲಪ್ಪ' ಎಂದು. ಸಿದ್ಧಾಪುರದಲ್ಲಿ ಲಗ್ನವಾಗಿ ಅಲ್ಲಿಯೇ ವ್ಯಾಪಾರ ವ್ಯಾಪಾರ ಮಾಡಿಕೊಂಡಿದ್ದ. ಅವನು ಎಲ್ಲಪ್ಪ ಎಂಬ ಹೆಸರಿನ ಮೇಲೆ ಕೋಪಗೊಂಡು ಅದನ್ನು ಕೈಬಿಟ್ಟು ಮಲ್ಲಪ್ಪ ಸೆಟ್ಟರು ಆಗಿದ್ದ. ಈ ಮಲ್ಲಪ್ಪ ಒಂದು ರೀತಿಯಲ್ಲಿ ಸಾಹಸಿ. ಹತ್ತು ವರ್ಷ ವಯಸ್ಸಿನವರೆಗೂ ಮನೆಯ ಮೇಕೆಗಳನ್ನು ಕಾಯ್ದುಕೊಂಡು ಇದ್ದು, ಹನ್ನೆರಡನೇ ವಯಸ್ಸಿನಲ್ಲಿ ಅಆಇಈ ಕಲಿಯಲು ಮೊದಲು ಮಾಡಿ ಮುಲ್ಕೀ ಪರೀಕ್ಷೆಯವರೆಗೆ ಎಂಟು ವರ್ಷ ಓದಿ, ಒದ್ದಾಡಿಕೊಂಡು ಪಾಸಾಗಿದ್ದ. ಆಮೇಲೆ ಅಲ್ಪ ಸ್ವಲ್ಪ ಎಬಿಸಿಡಿ ಓದಿ ಸಿರಸಿಯಲ್ಲಿ ಯಾವುದೋ ಒಂದು ಅಂಗಡಿಯಲ್ಲಿ ಗುಮಾಸ್ತನಾಗಿ ಅಷ್ಟು ಇಷ್ಟು ಗಳಿಕೆ ಮಾಡಿದರೂ ಅತ್ಯಂತ ಬಡತನವಿದ್ದ ಹುಟ್ಟಿದ ತನ್ನ ಮನೆ-ಅಣ್ಣ ತಮ್ಮಂದಿರನ್ನು ಹೊರಳಿ ನೋಡಿದವನಲ್ಲ. ಸಿದ್ಧಾಪುರದಲ್ಲಿ ಅಷ್ಟು ಇಷ್ಟು ಹೊಲಮನೆ ದುಡ್ಡು ಕಾಸು ಇದ್ದ ಮನೆತನ ಒಂದಕ್ಕೆ ಅಳಿಯನಾಗಿಬಿಟ್ಟ. ಆ ಮನೆಗೆ ಗಂಡು ಸಂತಾನವಿರಲಿಲ್ಲ. ಇವನೇ ಮಗನೂ ಹೌದು, ಅಳಿಯನೂ ಹೌದು ಆಗಿದ್ದ. ಮಲ್ಲಪ್ಪನ ಹೆಂಡತಿ ಹೆಸರು ಶಾಂತವ್ವ; ಸ್ವಭಾವ ಮಾತ್ರ ಉಗ್ರ. ಶಾಂತವ್ವನ ಅಕ್ಕ ಮತ್ತು ಅಕ್ಕನ ಗಂಡ 'ಅರಮನೆ'ಯವರೆಂಬ ಅಡ್ಡ ಹೆಸರಿನ ಪ್ರಸಿದ್ಧ ಮನೆತನದ ವ್ಯಾಪಾರಿಗಳು. ಇವರಿಬ್ಬರೂ ಮಲೇರಿಯಾ ಬೇನೆಯಿಂದ ಚಿಕ್ಕ ಎರಡು ಹೆಣ್ಣು, ಒಂದು ಗಂಡು - ಈ ಮೂರು ಮಕ್ಕಳನ್ನೂ ಬಿಟ್ಟು ಸತ್ತು ಹೋದರು. ಆ ಮಕ್ಕಳ ಆರೈಕೆಯ ಹೊಣೆ ಮಲ್ಲಪ್ಪ ದಂಪತಿಗಳ ಮೇಲೆ ಬಿದ್ದುದರಿಂದ ಇವರು ತಮ್ಮ ಮನೆಯನ್ನು ಅನ್ಯರಿಗೆ ಬಾಡಿಗೆ ಕೊಟ್ಟು ಸಿದ್ಧಾಪುರ ಪೇಟೆಯಲ್ಲಿರುವ ಅರಮನೆಯವರ ಮನೆಯಲ್ಲಿಯೇ ಬಂದು ಇದ್ದರು. ಸಿದ್ಧಾಪುರದಲ್ಲಿ ಮತ್ತು ಪಕ್ಕದ ಸೀರಳಿಗಿ ಹಳ್ಳಿಯಲ್ಲಿ ಅರಮನೆಯವರ ಹೊಲ-ಗದ್ದೆಗಳು ಇದ್ದವು. ಮಲ್ಲಪ್ಪನ ಮನೆತನಕ್ಕೂ ಹೊಲಗದ್ದೆಗಳಿದ್ದವು. ಮಾವಿನತೋಪು ವಗೈರೆ ಏನೆಲ್ಲ ಎರಡೂ ಮನೆತನಗಳಿಗೆ ಇದ್ದರೂ ಸರಿಯಾಗಿ ರೂಢಿಸದೆ ಇದ್ದುದರಿಂದಲೂ ಮಲೇರಿಯಾ ಹಾವಳಿಯಿಂದ ಮಾಡುವವರು

ಇಲ್ಲದ್ದರಿಂದಲೂ ಅಷ್ಟು ಇಷ್ಟು ಬತ್ತ ಬರುತ್ತಿತ್ತು. ಇಷ್ಟೆಲ್ಲ ಪುರಾಣ ಹೇಳುವುದಕ್ಕೆ ಕಾರಣವಿ
ಏನು ಕಾರಣ ಎನ್ನುವಿರೋ? ಇವರು ಜೋಪಾನ ಮಾಡಿದ್ದ ಮಕ್ಕಳಲ್ಲಿ ದೊಡ್ಡವಳಾದ ಇನ್ನ
12 ವರ್ಷ ವಯಸ್ಸಿನ ಐದೋ ಆರೋ ಇಯತ್ತೆಯಲ್ಲಿ ಓದುತ್ತಿದ್ದ ಏನೂ ಅರಿಯದ ಹುಡು
ಹೊಳೆಬಸಮ್ಮ ಎಂಬುವಳನ್ನು ನನಗೆ ಕೊಟ್ಟು ಲಗ್ನ ಮಾಡಬೇಕೆಂದು ನಿಶ್ಚಯಿಸಿಬಿಟ್ಟಿದ್ದರಂ
ಇದೇನೂ ನನಗೆ ಕನಸು ಮನಸಿನಲ್ಲೂ ಗೊತ್ತಿರಲಿಲ್ಲ. ಇದೆಲ್ಲ ನನಗೆ ಗೊತ್ತಾದದ್ದು ಆಮೇ
ನನ್ನೊಡನೆ ಪತ್ರ ವ್ಯವಹಾರವನ್ನಿಟ್ಟುಕೊಂಡಿದ್ದ ಮಲ್ಲಪ್ಪನಿಗೆ ನಾನು 'ಜೋಗ್‌ಫಾಲ್ಸ್' ಹತ್ತಾ
ಜನಗಳೊಡನೆ ಬರುತ್ತೇನೆಂದು ತಿಳಿಸಿದ್ದೆ. ಅದಕ್ಕೆ ಅವನು ಜೋಗಕ್ಕೆ ಬಂದಾಗ ಮುದ್ದಾ
ಸಿದ್ಧಾಪುರಕ್ಕೆ ಬರಬೇಕೆಂದೂ, ಎಲ್ಲರೊಡನೆ ನಮ್ಮಗಳ ಆತಿಥ್ಯ ಸ್ವೀಕರಿಸಬೇಕೆಂದೂ ಬರೆದಿದ್ದನ
ನಾವು ಸಿದ್ಧಾಪುರಕ್ಕೆ ಮಲ್ಲಪ್ಪನವರ ಮನೆ ಮುಂದೆ ಗಾಡಿಗಳನ್ನು ತಂದು ನಿಲ್ಲಿಸಿದಾಗ ಹಾರ್ದಿ
ಸ್ವಾಗತ ಸಿಕ್ಕು ತಕ್ಕಷ್ಟು ಆದರೋಪಚಾರ, ಊಟ-ತಿಂಡಿ ಎಲ್ಲವೂ ಆಯಿತು ಎನ್ನಿ. ನ
ಆದರೋಪಚಾರ ಸಮಯದಲ್ಲಿ 12 ವರ್ಷದ ಹೊಳೆಬಸಮ್ಮ ನಮಗೆಲ್ಲ ಉಪಚಾರ ಮಾಡಿಸುವ
ಉತ್ಸಾಹ ತೋರಿಸುತ್ತಿತ್ತು.... ಇಷ್ಟೆಲ್ಲ ಆಗುತ್ತಿದ್ದಂತೆ ಆ ಹೊಳೆಬಸಮ್ಮ ಬಿಕ್ಕಿ ಬಿಕ್ಕಿ ಅಳುತ್ತಿದ್ದುದ
ಕಂಡೆ. ಆಗ ನಾನು "ಯಾಕೆ ಈ ಹುಡುಗಿ ಅಳುತ್ತಿದೆ, ಏನು ಸಮಾಚಾರ?" ಎಂದೆ. 'ಏನಿಲ್ಲ
ಏನಿಲ್ಲ, ಅವರ ಅಪ್ಪ ಅಮ್ಮಗಳನ್ನು ನೆನೆಸಿಕೊಂಡಿರಬೇಕು' ಎಂಬ ಹಾರಿಕೆಯ ಉತ್ತರ ಕೊಟ್ಟರು
ನಿಜ ವೃತ್ತಾಂತವೆಂದರೆ ಆ ಹುಡಿಗೆಗೆ ನನ್ನನ್ನು ತೋರಿಸಿ 'ಇವನಿಗೇ ನಿನ್ನನ್ನು ಕೊಡಬೇಕೆಂ
ತೀರ್ಮಾನಿಸಿದ್ದೇವೆ. ಇವನು ಬಹು ಬುದ್ಧಿವಂತ, ಹಿರೇಕಾಂಶಿಯಲ್ಲಿ ಮಾಸ್ತರನಾಗಿದ್ದಾ
ಎಂದು ತಾರೀಫ್ ಮಾಡಿದ್ದರಂತೆ. ಇಷ್ಟಕ್ಕೇ ಆ ಹುಡುಗಿ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಪ್ರಾರಂಭಿ
ಬಿಟ್ಟಿತಂತೆ. ಆಗ ನಾನು ಮನಸ್ಸಿನಲ್ಲಿ ತಿಂಗಳಿಗೆ ಒಂಬತ್ತು ರೂಪಾಯಿ ಸಂಬಳದ ನಾನೆಲ್ಲಿ
ನಮಗಿಂತ ಸಾಮಾನ್ಯವಾಗಿ ಶ್ರೀಮಂತರೂ ಇದ್ದುದರಲ್ಲಿ ನಮಗಿಂತ ಸುಖವಾಗಿರುವವರೂ
ಪಟ್ಟಣನಿವಾಸಿಗಳೂ ಆದ ಇವರೆಲ್ಲಾ ನನಗೆ ಈ ಹುಡಿಗಿಯನ್ನು ಕೊಡುತ್ತೇನೆಂ
ನಿಶ್ಚಯಿಸಿರುವುದು ಏಕೆ? ಎಂದು ಚಿಂತಿಸಿದೆ. ಆದರೆ ಇವಳನ್ನು ನಾನು ಮದುವೆಯಾಗುವುದ
ಬಹುದೂರದ ಮಾತಲ್ಲವೆ? ನೋಡೋಣ ಎಂದು ಮನದಲ್ಲೇ ಅಂದುಕೊಂಡೆ. ಆದ
ಕರ್ಮಧರ್ಮ ಸಂಯೋಗದಿಂದ ಮುಂದೆ ಅವಳೇ ನನ್ನ ಬಾಳಸಂಗಾತಿಯಾಗಿಯೂ ಒಂದೂವ
ವರ್ಷವಿದ್ದು ಮೊದಲ ಹೆರಿಗೆಯಲ್ಲೇ ಮೈಯಿಳಿದು ಮರಣ ಹೊಂದಿದ ದುರ್ಭಾಗ್ಯವಂ
ಅದೊಂದು ದೊಡ್ಡ ಕಥೆ. ಅದನ್ನು ಮುಂದೆ ವಿವರಿಸುತ್ತೇನೆ. ಸಿದ್ದಾಪುರದ ಕತೆಯನ್ನು ಇಷ
ವಿವರಿಸಿರುವುದು ಇದೇ ಉದ್ದೇಶಕ್ಕಾಗಿ. ಆದರೆ ಈ ಹುಡಿಗಿಯನ್ನು ಲಗ್ನವಾಗುವ ಹೊತ್ತಿಗಾಗ
ನನ್ನ ಸ್ಥಿತಿ ಎತ್ತರಕ್ಕೆ ಹೋಗಿತ್ತು. ನಮ್ಮ ಸೋದರಮಾವನು ಮಾಡಿದ ಅಷ್ಟು ಇಷ್ಟು ಆದರೋಪಚಾ
ಸ್ವೀಕರಿಸಿ ನಾವು ಗಾಡಿ ಹೂಡಿಕೊಂಡು ಚಂದ್ರಗುತ್ತಿಯಲ್ಲಿ ವಸತಿಯನ್ನು ಮಾಡಬೇಕೆಂ
ನಿರ್ಧರಿಸಿ ಅಲ್ಲಿಗೆ ಹೊರಟೆವು. ಸಿದ್ಧಾಪುರ ಬಿಟ್ಟು ನಮ್ಮ ಗಾಡಿಗಳು ನಾಲ್ಕೈದು ಮೈ
ಹೋದುವು. ಅಲ್ಲಿ ಒಂದು ಮಹಾದುರಂತವೇ ನನ್ನಿಂದ ನಡೆದು ಹೋಯಿತು. ಅದರ ಕ
ನೆನಪು ನನ್ನ ಮನಸ್ಸಿನ ಮುಂದೆ ಆಗಾಗ ಬಂದು ಕಿರಿಕಿರಿಗೊಳಿಸುತ್ತಿದೆ.

**ಇಂದಿಗೂ ಮನಕ್ಕೆ ಕಿರಿಕಿರಿಗೊಳಿಸುವ ಪ್ರಮಾದ ಮಾಡಿಬಿಟ್ಟೆ**

ಅರಣ್ಯ ಮಧ್ಯದಲ್ಲಿ ಒಂದು ವಿಸ್ತಾರವಾದ ಹುಲ್ಲುಗಾವಲು ಪ್ರದೇಶ. ಅದರ ವ್ಯಾ
ಸುಮಾರು ನೂರಿನ್ನೂರು ಎಕರೆಗಳಷ್ಟು ಆದೀತು. ಆಳೆತ್ತರ ಬೆಳೆದ ಹುಲ್ಲೆಲ್ಲ ಒಣಗಿ ನಿಂತಿತ್ತ

ಆದರಲ್ಲಿ ದನಗಳೂ ಅಲ್ಲಲ್ಲಿ ಮೇಯುತ್ತಿದ್ದವು. ಅಲ್ಲಿರುವ ಒಣಗಿದ ಕರಡವನ್ನು ಕೊಯ್ದು ಗುಡಿಸಲುಗಳ ಮೇಲೆ ಹೊಚ್ಚಲು ಉಪಯೋಗಿಸುತ್ತಿದ್ದರಂತೆ. ಲೋಕಾಭಿರಾಮವಾಗಿ ಮಾತಾಡುತ್ತ, ನಗುತ್ತ, ತೂಲೆಯುತ್ತ ಚೇಷ್ಟೆ ಪ್ರತಿಚೇಷ್ಟೆಯನ್ನು ಮಾಡುತ್ತ, ಆಗಾಗ ಬೀಡಿಗಳನ್ನು ಎಳೆಯುತ್ತ, ಅಡಿಕೆ ಎಲೆಯನ್ನು ಹಾಕುತ್ತ, ನಮ್ಮ ಪರಿವಾರ ಎಂದಿನಂತೆ ನಡೆದಿತ್ತು. ಆಗ ನಾನೂ ಎಲ್ಲರಂತೆ ಒಂದು ಬೀಡಿ ಹೊತ್ತಿಸಿದೆ. ಬೆಂಕಿಯ ಕಡ್ಡಿಯನ್ನು ಹೊರಗೆ ಎಸೆದುಬಿಟ್ಟೆ. ಕಿಡಿ ಆರಿರಲಿಲ್ಲವೆಂದು ತೋರುತ್ತದೆ. ನನಗೆ ಅದು ಲಕ್ಷಕ್ಕೆ ಬರಲಿಲ್ಲ. ಕೆಳಗಿದ್ದ ಒಣಗಿದ ಕರಡಕ್ಕೆ ಬೆಂಕಿ ಹತ್ತಿಬಿಟ್ಟಿತು. ಹತ್ತಾರು ಮಾರು ನಮ್ಮ ಗಾಡಿ ಮುಂದಕ್ಕೆ ಹೋದ ಮೇಲೆ ಬೆಂಕಿಯನ್ನು ಕಂಡೆವು. ಎದೆ ದುಡಬಡಿಸತೊಡಗಿತು. ಚಟಚಟ ಎಂದು ಧ್ವನಿ ಮಾಡುತ್ತ ಒಂದೆರಡು ನಿಮಿಷದಲ್ಲಿ ವಿಸ್ತಾರವಾಗಿ ಬೆಂಕಿ ಹರಡಿಬಿಟ್ಟಿತು. ನಮ್ಮ ಗಾಡಿಯನ್ನು ಸ್ವಲ್ಪ ಮುಂದೆ ನಿಲ್ಲಿಸಿ ಬೆಂಕಿಯನ್ನು ಆರಿಸಲು ಪ್ರಯತ್ನಿಸತೊಡಗಿದೆವು. ಸಮೀಪದಲ್ಲಿ ಗಿಡಮರಗಳಿಲ್ಲದ್ದರಿಂದ ಬೆಂಕಿಯನ್ನು ಬಡಿದು ಆರಿಸಲು ನಮಗೆ ಸೊಪ್ಪಿನ ಬರಲು ಸಿಗದಾಯಿತು. ಆಗ ಹನೀಫ್ "ಗೌಡರೆ, ನಾವು ಏನು ಮಾಡಿದರೂ ಈ ಬೆಂಕಿ ಆರಿಸಲು ಶಕ್ಯವೇ ಇಲ್ಲ. ಈ ಬೆಂಕಿ ವಿಸ್ತಾರವಾಗಿ ಹಬ್ಬಿ ಗಾಡಿಗಳನ್ನು ಸುತ್ತುವರಿಯಬಹುದು. ಗಾಳಿಯೂ ಬಹಳಷ್ಟು ಇದೆ. ಈಗ ನಾವು ಇಲ್ಲಿಂದ ಪಾರಾಗಿ ಹೋಗಿ, ಅರಣ್ಯ ಬೀಳುವುದೇ ಕ್ಷೇಮ. ಸುತ್ತಮುತ್ತಲ ಹಳ್ಳಿಯವರೇನಾದರೂ ಸೇರಿದರೆ ನಮ್ಮ 'ಮಗ್ಗಲು ಮೂಳೆ ಮುರಿದು ಕೈಗೆ ಕೊಡುತ್ತಾರೆ" ಎಂದು ಹೆದರಿಸಿದ. ಅದು ಕೇವಲ ಹೆದರಿಕೆಯಾಗಿರದೆ ಸತ್ಯವೂ ಆಗಿತ್ತು. ನಾವು ಗಾಡಿಹತ್ತಿ ಕೇವಲ ಒಂದೆರಡು ಫರ್ಲಾಂಗು ದೂರದಲ್ಲಿದ್ದ ದಟ್ಟ ಅರಣ್ಯದವರೆಗೆ ಗಾಡಿಗಳನ್ನು ನಾಗಾಲೋಟದಿಂದ ಓಡಿಸಿಕೊಂಡು ಹೋಗಿ ಅರಣ್ಯದಲ್ಲಿ ಯಾರ ಕಣ್ಣಿಗೂ ಕಾಣದಂತಾದೆವು. ಆಗ ಸಂಜೆ ಆರುಗಂಟೆಯ ಸಮಯ. ಇನ್ನೂ ಬೆಳಕು ಇತ್ತು.

ಇಷ್ಟರಲ್ಲಿ ಭಯಂಕರವಾಗಿ ಮೇಲೆದ್ದ ಹೊಗೆಯನ್ನು ಕಂಡು ಸುತ್ತಮುತ್ತಣ ಹಳ್ಳಿಯ ಜನ ಕೇಕೆ ಹಾಕತೊಡಗಿದ್ದು, ಕೂಗಾಡ ತೊಡಗಿದ್ದು ಕಿವಿಗೆ ಕೇಳಿತು. ನಾವು ಗಾಬರಿಗೊಂಡೆವು. ಈ ಬೆಂಕಿಯ ಮುಂದೆ ಏನೇನು ಪ್ರಮಾದ ಮಾಡುವುದೋ ಎಂದು ನಾನಂತೂ ಜಂಘಾಬಲವಡಗಿದವನಂತೆ ಆಗಿಹೋದೆ.

ಅರಣ್ಯಕ್ಕೆ ಹುಲ್ಲುಗಾವಲಿಗೆ ಬೆಂಕಿಬಿದ್ದಾಗ ಜನಗಳನ್ನೆಲ್ಲ ಎಚ್ಚರಿಸಿ ಬೆಂಕಿ ಆರಿಸಲು ಎಲ್ಲರೂ ಬರಬೇಕೆಂಬ ಸಂಕೇತದ ಕೇಕೆಯಂತೆ ಅದವು ಆಗ ಹಾಕುತ್ತಿದ್ದ ಕೇಕೆ. ಇಂಥ ಕರಡಬೆಳೆಯ ಹುಲ್ಲುಗಾವಲುಗಳನ್ನು ಸುತ್ತಮುತ್ತಣ ಹಳ್ಳಿಯ ಜನ ಜಾಗರೂಕತೆಯಿಂದ ನೋಡಿಕೊಳ್ಳುತ್ತಾರಂತೆ. ಅದೇ ಅವರ ಸೂರಿಗೆ ನೆರಳು ಮಾಡುವ ವಸ್ತು. ಹಾಗೇನಾದರೂ ಬೆಂಕಿ ಬಿದ್ದರೆ ಅವರೆಲ್ಲ ಒಟ್ಟಾಗಿ ಸೇರಿ ಕಷ್ಟಪಟ್ಟು ನಂದಿಸುತ್ತಾರಂತೆ. ನಾನು ವಿಷಣ್ಣವದನನಾದೆ. ಮೂರು ನಾಲ್ಕು ದಿನಗಳಿಂದ ಪಟ್ಟ ಸಂತೋಷ, ತೋರಿಸಿದ್ದ ಜಾಣ್ಮೆ ಎಲ್ಲವೂ ಈ ವಿಷಾದದ ಉರಿಯಲ್ಲಿ ಸುಟ್ಟುಬೂದಿಯಾಗಿ ಮುಖ ಕಪ್ಪಿಟ್ಟುಹೋಯಿತು. ಆ ಅರಣ್ಯದ ಸುಟ್ಟ ನೆಲದಂತೆ ಉಳಿದವರು ನನಗೆ ಸಮಾಧಾನ ಮಾಡುತ್ತ "ಯಾರೇನು ಮಾಡಲಾಗುತ್ತದೆ. ಬೇಕೆಂದು ಯಾರು ತಾನೇ ಅಂಥ ಕೆಲಸ ಮಾಡುತ್ತಾರೆ. ಹೋಗಲಿ ಬಿಡಿ. ನೀವೇಕೆ ಹೀಗೆ ಮುಖ ಇಳಿಬಿಟ್ಟಿದ್ದೀರಿ" ಎಂದು ಹೇಳಿದರೂ ನನ್ನ ಮನಸ್ಸು ಮಾತ್ರ 'ಎಲಾ! ಆ ಕೆಟ್ಟ ಒಂದು ಬೀಡಿ ಸೇದುವ ಹವ್ಯಾಸದ ಕಾರಣವಾಗಿ ಸಾವಿರಾರು ದನಕರುಗಳು ಮೇಯುತ್ತಿದ್ದ ಅನ್ನಕ್ಕೆ ಬೆಂಕಿ ಇಕ್ಕಿದೆಯಾ! ನೂರಾರು

ಬಡಜನರ ಗುಡಿಸಲು ಸೂರುಗಳ ಹೊದಿಕೆಯಾಗುತ್ತಿದ್ದ ಹುಲ್ಲನ್ನು ಸುಟ್ಟುಹಾಕಿಬಿಟ್ಟೆಯಾ!" ಎಂದು ಪದೇ ಪದೇ ಚುಚ್ಚತೊಡಗಿತು. ಅಷ್ಟರಲ್ಲಿ ಚಂದ್ರಗುತ್ತಿ ಬಂತು. ದೇಶಪಾಂಡೆಯವರ ಮನೆಯ ಮುಂದೆ ಗಾಡಿಗಳನ್ನು ನಿಲ್ಲಿಸಿದೆವು. ಅರಣ್ಯದ ಈ ಬೆಂಕಿಗೆ ನಾವೇ ಕಾರಣರೆಂಬುದನ್ನು ಚಂದ್ರಗುತ್ತಿಯಲ್ಲಿ ಯಾರು ಯಾರಿಗೂ ಹೇಳಕೂಡದೆಂದು ಮಾತಾಡಿಕೊಂಡಿದ್ದೆವಾಗಿ ಆ ಬಗ್ಗೆ ಯಾರೂ ಬಾಯಿಬಿಡಲೇ ಇಲ್ಲ.

ಪುನಃ ದೇಶಪಾಂಡೆಯವರ ಆದರಾತಿಥ್ಯ ನಡೆಯಿತು. ನನಗೆ ಮಾತ್ರ ಯಾವುದೂ ಬೇಡವಾಗಿತ್ತು. ಅಲ್ಲಿಗೆ ಹೋದವನೇ ದೇಶಪಾಂಡೆಯವರು ನಮಗೆ ಮೊದಲೇ ಬಿಟ್ಟುಕೊಟ್ಟಿದ್ದ ಮನೆಯಲ್ಲಿ ಗುಡಾರ ಹಾಸಿಕೊಂಡು ಒಂದು ಮೂಲೆಯಲ್ಲಿ ತುಂಬ ಹೊದ್ದುಕೊಂಡು ಮಲಗಿಬಿಟ್ಟೆ. ಅರಣ್ಯಕ್ಕಿಟ್ಟ ಬೆಂಕಿಯ ನೆನಪು ಮನಸ್ಸನ್ನು ಕ್ಷತವಿಕ್ಷತಗೊಳಿಸುತ್ತಿತ್ತು. ಇಂಥ ಮೂರ್ಖ ವ್ಯವಹಾರ ಮಾಡುವವರಿಗೆ ಬುದ್ಧಿ ಹೇಳಲು ನನಗೆ ಅಧಿಕಾರ ಇದೆಯೋ ಎಂದು ನನಗೆ ನಾನೇ ಪ್ರಶ್ನೆ ಹಾಕಿಕೊಳ್ಳುತ್ತಿದ್ದೆ. ಗಿಣಿವಾಲದ ಈರಪ್ಪ ನನ್ನ ವ್ಯಥೆಯನ್ನು ಅರ್ಥ ಮಾಡಿಕೊಂಡು ಪಕ್ಕದಲ್ಲಿ ಕುಳಿತು ಒತ್ತಾಯ ಮಾಡಿ ಎಬ್ಬಿಸಿ ಚಹಾ ತಿಂಡಿ ಮಾಡಿಸಿದ. ಚಂದ್ರಗುತ್ತಿ ಬೆಟ್ಟವನ್ನು ರಾತ್ರಿ ಬೆಳದಿಂಗಳಲ್ಲಿ ಏರಿ ರೇಣುಕಾದೇವಿ ದರ್ಶನ ಮಾಡಲು ಹೋಗಿದ್ದ ಉಳಿದವರು ಬಂದು ಉರಿಯುತ್ತಿದ್ದ ಕಾಡ್ಗಿಚ್ಚಿನ ಬಗ್ಗೆ ವಿವರಣೆ ಮಾಡುತ್ತಿದ್ದಾಗ ನಾನು ಕ್ಷಣಕ್ಷಣಕ್ಕೂ ಮಾನಸಿಕವಾಗಿ ಸತ್ತು ಹೋಗುತ್ತಿದ್ದೆ. ಆ ಬೆಂಕಿ ಹುಲ್ಲುಗಾವಲನ್ನು ಆಹುತಿ ತೆಗೆದುಕೊಂಡು ಅರಣ್ಯಕ್ಕೂ ಬಿದ್ದಿತೆಂದು ಚಂದ್ರಗುತ್ತಿಯಲ್ಲಿ ಜನ ಮಾತಾಡಿಕೊಳ್ಳುತ್ತಿದ್ದುದು ಆಮೇಲೆ ನಮ್ಮಗಳೆಲ್ಲರ ಕಿವಿಗೆ ಬಿತ್ತು. ಆ ರಾತ್ರಿಯನ್ನು ಚಂದ್ರಗುತ್ತಿಯಲ್ಲಿ ಕಳೆದ ನಾವು ನಸುಕಿನಲ್ಲಿ ಗಾಡಿ ಹೂಡಿಕೊಂಡು ಹಿರೇಕಾಂಶಿಗೆ ಸಾಯಂಕಾಲಕ್ಕೆ ಬಂದು ತಲುಪಿದೆವು. ಈ ಪ್ರವಾಸ ನನ್ನ ಮನಸ್ಸಿನ ಮೇಲೆ ಬಹು ದೊಡ್ಡ ಪರಿಣಾಮ ಬೀರಿತು. ನನ್ನ ಭಾವನೆಯಲ್ಲಿ ಅನೇಕ ವ್ಯಕ್ತಿಚಿತ್ರ, ಭೂಚಿತ್ರ, ಜನಜೀವನ ಚಿತ್ರಣದ ಸಂಸ್ಕಾರ ಭಾವಕೋಶದಲ್ಲಿ ಅಡಗಿ ನಿಲ್ಲುವಂತೆ ಮಾಡಿತು. ಅಲ್ಲದೆ ಒಂದು ಘೋರ ಪ್ರಮಾದದ ಕಹಿಯೂ ಭಾವದಲ್ಲಿ ಭೂತವಾಗಿ ಇಂದಿಗೂ ಕುಳಿತಿದೆ. ಮನುಷ್ಯನ ಭಾವಕೋಶ ಈಶ್ವರದತ್ತವಾದ ಬಹುದೊಡ್ಡ ಕಣಜ. ಇದು ಹುಟ್ಟಿದಂದಿನಿಂದ ಸಾಯುವವರೆಗೆ ಸಂಸ್ಕಾರಗಳನ್ನು ತನ್ನಲ್ಲಿ ತುಂಬುತ್ತಲೂ ಕೆಲವನ್ನು ಸ್ಥಿರೀಕರಿಸುತ್ತಲೂ ಇರುತ್ತದೆ. ಇಲ್ಲಿ ಸಂಗ್ರಹವಾಗಿರುವ ಶಬ್ದಚಿತ್ರ, ವ್ಯಕ್ತಿಚಿತ್ರ, ದೇಶ, ಕಾಲ, ಜನ-ಜೀವನ, ಸಿಹಿ-ಕಹಿ, ಸುಖ-ದುಃಖ, ಆಮೋದ-ಪ್ರಮೋದ ಕಳವು ಸುಳ್ಳು ಹಾದರ ಪುಣ್ಯ-ಪಾಪ ಮೊದಲಾದ ಅನುಭವಗಳನ್ನು ಸಂಸ್ಕಾರರೂಪವಾಗಿ ಹಿಡಿದಿಟ್ಟುಕೊಂಡು ಬಿಡುತ್ತದೆ. ಸನ್ನಿವೇಶ ಬಂದಾಗ ಆಯಾಯ ಭೂತಗಳನ್ನು ಹೊರಹಾಕುತ್ತದೆ. ಭಾವದಲ್ಲಿ ಸಂಗ್ರಹವಾದ ಸಂಸ್ಕಾರಗಳೇ ಬಹುಮಟ್ಟಿಗೆ ಸ್ವಭಾವಗಳಾಗಿ ಮಾನವನನ್ನು ರೂಪಿಸುತ್ತವೆ. "ಅವನ ಸ್ವಭಾವ ಚೆನ್ನಾಗಿಲ್ಲ" ಎಂದರೆ ಆತನ ಭೂತಕೋಶ ಸಂಗ್ರಹೀತ ಸಂಸ್ಕಾರಗಳು ಬಹುಮಟ್ಟಿಗೆ ಕೆಟ್ಟವು ಎಂದೇ ಅರ್ಥ. ಆದ್ದರಿಂದ ಉತ್ತಮವಾದ ಜನಾಂಗವನ್ನು ಕಟ್ಟಬೇಕೆನ್ನುವವರು ರಾಷ್ಟ್ರದ ಮುಂದಿನ ಪ್ರಜೆಗಳಾಗಲಿರುವ ಮಕ್ಕಳನ್ನು ಕಟ್ಟಬೇಕು. ಹೀಗೆಂದರೆ ಮಕ್ಕಳ ಭಾವ ಜೀವನದ ಬೆಳವಣಿಗೆಗೆ ಯೋಗ್ಯ ಸಂಸ್ಕಾರ, ಸನ್ನಿವೇಶಗಳನ್ನು ಒದಗಿಸಬೇಕು ಎನ್ನುವುದು. ನಾನು ಇದನ್ನರಿತೇ ಮುಂದಿನ ನನ್ನ ಜೀವಮಾನದ ಮೂಲವೃತ್ತಿಯಾದ ಉಪಾಧ್ಯಾಯ ವೃತ್ತಿಯಲ್ಲಿ ಬಹುಮಟ್ಟಿಗೆ ವಿದ್ಯಾರ್ಥಿಗಳ ಭಾವಜೀವನದ ಬೆಳವಣಿಗೆಗೆ ಏನೆಲ್ಲ ಮಾಡಬೇಕೊ ಅದನ್ನು ಪ್ರಾಮಾಣಿಕತೆಯಿಂದ ಮಾಡಿದ್ದೇನೆಂಬ ತೃಪ್ತಿಯಿದೆ.

ಈ ವೃತ್ತಿಯಲ್ಲಿ ನನಗೆ ಯಶಸ್ಸೂ ಸಿಕ್ಕಿದೆ ಎಂಬ ಸಮಾಧಾನವಿದೆ. ಶಿಕ್ಷಣ ಇಲಾಖೆ ನನ್ನನ್ನು
ಬಹಳ ಗೌರವಿಸಿದೆ, ಕೊನೆಗೆ ಸನ್ಮಾನ ಮಾಡಿ ಮನೆಗೆ ಕಳಿಸಿದೆ. ನನ್ನ ಉಪನ್ಯಾಸ, ಪುರಾಣ
ಪಠಣ, ಕೀರ್ತನೆ ಮುಂತಾದ ಹಲವು ಮುಖಕಾರ್ಯಗಳಲ್ಲಿ ನನ್ನ ಕೇಂದ್ರ ವಿಷಯ ಭಾವಕೋಶದ
ಜನತೆ ಮನಸ್ಸಿನ ಬುದ್ಧಿಯಹಂಕಾರ ಶುದ್ಧಿ. ಅದರಿಂದೊದಗುವ ಸಿದ್ಧಿಯಾಗಿತ್ತು. ಇದೇನೇ
ಇರಲಿ, ನನ್ನ ಹಿರೇಕಾಂಶಿಯ ಜೀವನದ ಬಗೆಗೆ ಇನ್ನೂ ಕೆಲವು ಮಾತುಗಳು ಹೇಳುವಂಥವಿವೆ.

## ಅರಣ್ಯ ಮಧ್ಯದ ಮನಸ್ವೀ ತಿರುಗಾಟ

ಬಾಲ್ಯದಿಂದಲೂ ನಾನು ಅಡವಿ-ಅರಣ್ಯಗಳಲ್ಲಿ ತಿರುಗಾಡಿ ಗಿಡ-ಮರಗಳನ್ನು ಹತ್ತಿ
ಹಣ್ಣು-ಕಾಯಿಗಳನ್ನು ತಿಂದು ತಿರುಗಾಡುವ ಪ್ರವೃತ್ತಿಯನ್ನು ಬೆಳೆಸಿಕೊಂಡವನೇ. ಹೊಲದಾರಿಯಲ್ಲಿ
ನಮ್ಮದು ಬೇರೆಯವರದೆಂದು ಭೇದಮಾಡಿದವನೇ ಅಲ್ಲ. ಬಿಡುವಿದ್ದಾಗ ನಮ್ಮೂರು ಮೆಳ್ಳಿ,
ಹಲಸೂರು ಹೊಲಹೊಲಗಳಲ್ಲಿ, 'ಕೂಡಿದ ಹೊಳೆ ಮೂಲಿ' (ನಮ್ಮೂರ ಪಕ್ಕದಲ್ಲಿಯೇ
ವರ್ಮಾ-ವರದಾ ನದಿಗಳ ಸಂಗಮಸ್ಥಳಕ್ಕೆ 'ಕೂಡಿದ ಹೊಳೆ ಮೂಲಿ' ಎಂಬುದು ರೂಢಿ.)
ಯಲ್ಲಿ ಮಿತ್ರರನ್ನು ಕಟ್ಟಿಕೊಂಡು ಬಾಲ್ಯದಲ್ಲಿ ಮನಸ್ವೀ ತಿರುಗಾಡಿದ ಅಭ್ಯಾಸವುಳ್ಳವನೆಂಬುದನ್ನು
ಹಿಂದೆ ಸೂಚ್ಯವಾಗಿ ಅಲ್ಲಲ್ಲಿ ವಿವರಿಸಿದ್ದೇನೆ. ಹೊಸೂರಿನಲ್ಲಿದ್ದಾಗ ಹೊಸೂರು ಸುತ್ತಮುತ್ತಣ
ಅರಣ್ಯದಲ್ಲಿ ತಿರುಗಾಡಿದುದೂ ಸೂಚ್ಯವಾಗಿ ಈ ಹಿಂದೆ ಬಂದಿದೆ.

ಹಿರೇಕಾಂಶಿಗೆ ಬಂದಾಗಿನಿಂದ ನನ್ನ ಈ ಅರಣ್ಯ ತಿರುಗಾಡುವ ಬಯಕೆಗೆ ಬಣ್ಣವೇರಿ
ಹೋಯಿತು. ಗಿಣಿವಾಲ ಈರಪ್ಪ ಹಿರೇಕಾಂಶಿಯ ಬಹುದೊಡ್ಡ ರೈತ. ಅವನಿಗೆ ನನ್ನ ವಯಸ್ಸಿನ
ಮಕ್ಕಳೇ ಆಗ ಇದ್ದರು. ಅಷ್ಟು ಹಿರಿಯನಾದ ವೀರಪ್ಪನಿಗೆ ನನ್ನಲ್ಲಿ ಬಹಳ ಭಕ್ತಿ ಅನ್ನಿ ಅಥವಾ
ಮಮತೆ ಅಂತಾದರೂ ಅನ್ನಿ, ಅದನ್ನಿಟ್ಟುಕೊಂಡು ಸದಾ 'ಮಾಸ್ತರ' 'ಮಾಸ್ತರ' ಅಂತ
ಮಾರ್ದನಿಸುತ್ತಿದ್ದ. ಇದಕ್ಕೆಲ್ಲ ಕಾರಣ ನಾನು ಬರೆದು ಆಡಿಸಿದ ರಾಮಾಯಣ ಯಕ್ಷಗಾನ ಆಟ.
ಈ ಆಟದಲ್ಲಿ ಅವರ ಮನೆಯವರಿಗೆ ಪಾತ್ರದಲ್ಲಿ, ಭಾಗವತಿಗೆಯಲ್ಲಿ ಸಿಂಹಪಾಲು. ಮೂರುಜನ
ವೀರಪ್ಪನ ಮಕ್ಕಳಿಗೇ ಪಾರ್ಟು. ಭಾಗವತ್ತಣ್ಣ ಈ ವರ್ಷ ತಮ್ಮ ಬಂಗಾರೆಪ್ಪ. ರಾಮನ
ಪಾರ್ಟು ಈರಪ್ಪನ ಹಿರಿಯ ಮಗ ಬಸವಣ್ಣೆಪ್ಪನದು. ಇದರಿಂದ ಈರಪ್ಪ ತನ್ನ ಮನೆತನದ
ಕೀರ್ತಿ ಸುತ್ತ ಹತ್ತು ಹಳ್ಳಿಯಲ್ಲಿ ಪ್ರಸಿದ್ಧಿ ಎಂಬ ಕಾರಣದಿಂದ ಬೀಗಿಹೋಗಿದ್ದ. ಈ ಕಾರಣವಾಗಿ
ಅವನಿಗೆ ನನ್ನಲ್ಲಿ ಮಮತೆ ಬೆಳೆದಿತ್ತು. ಅವನ ಹೆಂಡತಿ ಪಾರ್ವತಮ್ಮಗೂ ಅಂಥದೇ ಮಮತೆ,
ಆತ್ಮೀಯತೆ. ಅವಳು ನನ್ನನ್ನು ತಾಯಿಯಂತೆ ನೋಡಿಕೊಂಡಳು. ಅವರ ಬೀಗರು ಬಿಜ್ಜರ
ಮನೆಗೆ ಹೋಗುವಾಗ ಈರಪ್ಪನಿಗೆ ನಾನು ಬೇಕು. ಆಮೋದ ಪ್ರಮೋದಗಳ ಅನುಭವದಲ್ಲಿ
ನಾನಿರಬೇಕು. ಆಲೂರು ಹಾನಗಲ್ಲಿಗೆ ನಾಟಕವನ್ನು ನೋಡಲೋ ಅಥವಾ ಸಂತೆಪೇಟೆ
ಮಾಡಿಕೊಂಡು ಬರಲೋ ಹೋಗಬೇಕಾದಾಗ ಅವನಿಗೆ ನಾನಿರುವುದಾದರೆ ಚತುರ್ಭುಜ
ಬಂದಷ್ಟು ಸಂತೋಷ. ಗಾಡಿ ಕಟ್ಟಿ ಅದರಲ್ಲಿ ನನ್ನನ್ನು ಕುಳ್ಳಿರಿಸಿಕೊಂಡು ದಾರಿಯುದ್ದಕ್ಕೂ
ಅಡಕೆ ಎಲೆ ಕೊಟ್ಟು ಜಗಿಸುತ್ತ ಆ ಮಾತು, ಈ ಮಾತು ಮಾತಾಡುತ್ತ ಹೋದರೆ ಅವನಿಗೊಂದು
ಸಂತೋಷ. ಶೇಷಗಿರಿಯಲ್ಲಿ ಶ್ರೀ ಟಿ.ಆರ್. ನೆಸ್ವಿಯವರ ಭಾಷಣ ಕಾರ್ಯಕ್ರಮವಿದ್ದುದು
ಗೊತ್ತಾಯಿತು; ಸರಿ, ಗಾಡಿ ಕಟ್ಟಿ ನನ್ನನ್ನು ಕುಳ್ಳಿರಿಸಿಕೊಂಡು ಎದ್ದುಬಿಟ್ಟ. ಆರೇಳು ಮೈಲುದೂರದ
ಊರನ್ನು ಒಂದೂವರೆ ತಾಸಿನಲ್ಲಿ ತಲುಪಿದ್ದಾಯಿತು. ಅವನ ಪ್ರೀತಿಯ ಜವಾರಿ ಗಿಡ್ಡೆತ್ತುಗಳ

ನಡಿಗೆ ಅಂಥಾದ್ದು; ಕುದುರೆಯ ಕುಣಿತದಂತೆ. ಭಾಷಣವನ್ನೇನೋ ಹತ್ತರೊಡನೆ ಹನ್ನೊಂದಾ
ಕೇಳಿದೆವು. ಆ ಕಾಲ ಸ್ವಾತಂತ್ರ್ಯ ಚಳುವಳಿಯ ಅತ್ಯಂತ ಉದ್ವೇಗದ ಕಾಲ. ಗಾಂಧಿ ಮುದು
ಭಾರತದ ಎಲ್ಲಾ ವರ್ಗದ ಜನರಲ್ಲೂ ಸ್ವತಂತ್ರ ಭಾರತದ ಹುಚ್ಚನ್ನು ನೆತ್ತಿಗೇರಿಸಿಬಿಟ್ಟಿದ್ದ
'ವಂದೇ ಮಾತರಂ.....' ಪದ್ಯ ಹಾಡಿದಾಗ, 'ಬೋಲೋ ಭಾರತ್ ಮಾತಾಕೀ ಜೈ...ಮಹಾತ್
ಗಾಂಧೀಕೀ ಜೈ....' ಎಂದಾಗ ಎಂಥವನ ಮಯ್ಯೂ ರೋಮಾಂಚನಗೊಳ್ಳುತ್ತಿದ್ದ ಕಾಲ. ನೆಪ್ಪಿಯವ
ಭಾಷಣ ಕೇಳುತ್ತ ಕೇಳುತ್ತ ನಾವೂ ಮೈಮರೆತುಬಿಟ್ಟೆವು. ಅಭ್ರಭೇದಿಯಾಗುವ ಹಾಗೆ ಇಡಿ
ಶೇಷಗಿರಿ 'ಬೋಲೋ ಭಾರತ್ ಮಾತಾಕೀ ಜೈ...', 'ಮಹಾತ್ಮಾ ಗಾಂಧೀಕಿ ಜೈ
ಉದ್ಘೋಷಣೆಯಿಂದ ಅದಿರುಗೊಂಡಿರಬೇಕು. ಆ ಘೋಷಣೆಯನ್ನು ಕೇಳಿ ಶೇಷಗಿರಿಯ
ಅಡಗಿ ಕುಳಿತಿರಬಹುದಾದ ದೆವ್ವಗಳೂ ಹೆದರಿ ಕಾಡು ಸೇರಿರಬೇಕು. ಈರಪ್ಪ ಈ ಒಂದ
ಉದ್ದೇಶದಿಂದ ಶೇಷಗಿರಿಗೆ ನನ್ನನ್ನು ಕರೆದುಕೊಂಡು ಬಂದವನಲ್ಲ ಎಂಬುದು ನನಗೆ ಆಮೇ
ಹೊಳೆಯಿತು. ಆಲೂರಿನಲ್ಲಿ ದಂಪತಿಗಳಿಬ್ಬರು ಎಷ್ಟೋ ದಿನಗಳ ಹಿಂದೆ ಅನೇಕ ಬಣ್ಣಬಣ್ಣ
ಬಟ್ಟೆಗಳನ್ನು ತಂದು ವಿವಿಧಾಕಾರಗಳಲ್ಲಿ ಕತ್ತರಿಸಿ ಎರಡು ಕೌದಿ ಹೊಲಿದು, ಅವು ಮುಗಿ
ದಿನವೇ ಅವರಿಬ್ಬರೂ ಏಕಕಾಲದಲ್ಲಿ ಸತ್ತುಹೋದರಂತೆ. ಅವು ಎಲ್ಲರೂ ನೋಡಬೇಕಾ
ಅಪರೂಪದ ಕೌದಿಗಳಂತೆ. ಅದರಲ್ಲಿ ಆ ದಂಪತಿಗಳು ಭಾರತ ರಾಮಾಯಣದ ದೃಶ್ಯಗಳನ್ನ
ಕತ್ತರಿಸಿ ಸೇರಿಸಿ ಹೊಲಿದಿರುವರಂತೆ. ವಿವಿಧ ಬಣ್ಣದ ಹೂವು, ಬಳ್ಳಿ, ಗಿಡ, ಮರ ಏನೆಲ್ಲವನ
ಬಟ್ಟೆಯಲ್ಲಿ ಕತ್ತರಿಸಿ ಹೊಲಿದಿದ್ದರಂತೆ. ಈ ಅಪರೂಪದ ಕೌದಿಗಳನ್ನು ಹೊಲಿದವರಿಗೆ ಮೋ
ಸಿಕ್ಕಿತೋ ಇಲ್ಲವೋ! ನೋಡುವವರಿಗಂತೂ ಪುಣ್ಯ ಲಭ್ಯವಾಗಿ, ಆ ಪುಣ್ಯದ ಬಲದಿಂ
ಅಷ್ಟು ಇಷ್ಟು ಮೋಕ್ಷಫಲ ದಕ್ಕೀತೆಂದು ನಂಬಿಕೆ. ಅವನ್ನು ನೋಡಿದರೆ ಅನೇಕ ದೇವತೆಗ
ದರ್ಶನಾಶೀರ್ವಾದ ಪಡೆದ ಹಾಗೆ ಎಂಬ ಪ್ರಚಾರ ಆಗಿತ್ತು. ಅದನ್ನು ನೋಡಿಕೊಂಡು ಕೈಮುಗಿ
ಬರೋಣ ಬನ್ನಿ ಎಂದು ಕರೆದುಕೊಂಡು ಹೋದರು. ನಾವು ಹೋದ ದಿನ ಕೌದಿಗಳ ಪ್ರದರ್ಶ
ಮನೆಯಲ್ಲಿ ನಡೆದಿತ್ತು. ಕೌದಿಗಳನ್ನು ದಿನವೂ ಅವರು ಪ್ರದರ್ಶಿಸುವುದಿಲ್ಲ. ಪಾರಣೆ ಪ
ದಿನಗಳಲ್ಲಿ, ಹಬ್ಬಹುಣ್ಣಿಮೆಗಳಲ್ಲಿ ಮಡಿಹುಡಿಯಿಂದ ಪ್ರದರ್ಶಿಸುತ್ತಿದ್ದರು. ಉಳಿದ ದಿನಗಳ
ಅವನ್ನು ಮಡಚಿ ಪೆಟ್ಟಿಗೆಯಲ್ಲಿಟ್ಟು, ದಿನವೂ ಆ ಪೆಟ್ಟಿಗೆಯನ್ನು ಪೂಜಿಸುತ್ತಾರೆಂದು ತಿಳಿಯಿ

ನಿಜವಾಗಿ ಕೌದಿಗಳು ನೋಡಬೇಕಾದ ವಸ್ತುಗಳೆನ್ನಿಸಿತು ನನಗೆ. ಇದುವರೆಗೆ ಕೌದಿ
ಬಗೆಗಿದ್ದ ನನ್ನ ಭಾವನೆಯೇ ಬದಲಾಗಿ ಹೋಯಿತು. ಮನೆಯ ಹಳೆಯ ಬಟ್ಟೆಗಳನ್ನೆಲ್ಲ ಎಸೆಯ
ಹಾಳುಮಾಡದೆ ಸಂಗ್ರಹಿಸಿಟ್ಟು, ಬಿಡುವಾದಾಗ ಹೆಂಗಸರು ಆ ಚಿಂದಿಗಳನ್ನೆಲ್ಲ ವಿವಿಧಾಕಾರಗಳ
ಕತ್ತರಿಸಿ ದಪ್ಪನಾಗಿ ಹೊಲಿದು, ಹೊದೆಯಲು ಹಾಸಲು ಉಪಯೋಗಿಸುವ ಒಂದು ಬಟ್ಟೆ
ನಾನು ಬಾಲ್ಯದಿಂದಲೂ ನಮ್ಮ ಮನೆಯಲ್ಲಿ ಹೊದೆದದ್ದುಂಟು. ಆದರೆ 'ಹಳೆಯ ಮೈಲಿಗೆ
ಬಟ್ಟೆ' ಎಂಬ ತಾತ್ಸಾರ ಮನಸ್ಸಿನಲ್ಲಿದ್ದುದಂತೂ ನಿಜ. ನಮ್ಮ ಕನ್ನಡ ನಿಘಂಟಿನ
ಸಾಹಿತ್ಯದಲ್ಲಿಯೂ 'ಕೌದಿ' ತನ್ನ ಹೆಸರನ್ನು ಉಳಿಸಿರುವುದು ಇತ್ತೀಚೆಗೆ ಅರಿವಾಯಿತು.

ಇದಕ್ಕೆ 'ಬೊಂತೆ' ಎಂಬ ಇನ್ನೊಂದು ಹೆಸರೂ ಉಂಟು. ಅಂತೆಯೇ 'ಕಂತೆಗೆ
ಬೊಂತೆ' ಎಂಬ ಗಾದೆಯ ಬಾಯಿಗೂ ಕೌದಿ ಸಿಕ್ಕು ತನ್ನ ಖ್ಯಾತಿಯನ್ನುಳಿಸಿಕೊಂಡಿತು. ಎ
ಕಂಟಲಿಗಳನ್ನು ಕೌದಿಯಲ್ಲೇ ಮಾಡುತ್ತಿದ್ದುದನ್ನು ನಮ್ಮ ಮನೆಗೆ ಬರುತ್ತಿದ್ದ ಹೆಳವರ ಕಂಟಲಿಗಳ
ಅವರ ಎತ್ತು ಕತ್ತೆಗಳನ್ನು ನಾನು ನೋಡಿದ್ದೆ. ಕೆಲವು ಅಲೆಮಾರಿ ಜನಗಳ ಜೀವನದಲ್ಲಂ

ೌದಿ ಹಾಸುಹೊಕ್ಕು. ಅವರಿಗೆ ಹೊದೆಯಲು, ಹಾಸಲು ಕೌದಿಗಳದ್ದೇ ಯಾಜಮಾನ್ಯ. ಜನರು ದಾನವಾಗಿ ಕೊಟ್ಟ ಹಳೆಯ ಬಟ್ಟೆಗಳೆಲ್ಲ ಇವರ ಕೌದಿಗಳು. ಹಿಂದೆ ಕಾಶ್ಮೀರದಿಂದ ಕಲ್ಯಾಣಕ್ಕೆ ರಾಜದೇವಿ ಎಂಬುವಳು ಶಿವನು ಕೊಟ್ಟ ಬೊಂತೆ (ಕೌದಿ)ಯನ್ನು ಹೊದ್ದುಕೊಂಡು ಕಲ್ಯಾಣಕ್ಕೆ ಬಂದಳಂತೆ. ಈ ಕಾರಣವೇ ಅವಳಿಗೆ 'ಬೊಂತಾದೇವಿ' ಎಂಬ ಹೆಸರು ಕಲ್ಯಾಣದಲ್ಲಿ ಪ್ರಸಿದ್ಧವಾಯಿತಂತೆ. ನಮ್ಮ ಮನೆಯಲ್ಲೂ ನಮ್ಮ ತಾಯಿ ಆಗಾಗ ಪಿಂಜಾರ ಮೋದಿಗವ್ವನನ್ನು ಕರೆದುತಂದು ಕೌದಿ ಹೊಲಿಸುತ್ತಿದ್ದುದನ್ನು ಕಂಡಿದ್ದೆ. ಆದರೆ ನನಗಿದ್ದ ತಾತ್ಸಾರವೆಂದರೆ ಹಳೆಯ ಸೀರೆ ಕುಪ್ಪಸ ಇನ್ನಿತರ ಚೂರು ಚೂರು ಬಟ್ಟೆಗಳಿಂದ ಹೊಲಿದದ್ದೆಂಬುದು. ಶೇಷಗಿರಿಯ ಕೌದಿಯ ಹಿಂದಿನ ಕಥೆ ಪುರಾಣ ಎಲ್ಲ ಕೇಳಿದ ಮೇಲೆ ತಾತ್ಸಾರ ಸ್ವಲ್ಪ ಕಡಿಮೆಯಾಗಿ ಗೌರವ ಮೂಡಿತು. ಮುಂದೆ ಹಿರೇಕಾಂಶಿಯಲ್ಲಿ ಕೌದಿಯನ್ನು ಧಾರಾಳವಾಗಿ ಬಳಸಿದ್ದುಂಟು. ಬೊಂತೆಯ ಈ ಕಥೆ ಎಂತಾದರೂ ಇರಲಿ.

ಶೇಷಗಿರಿಯಿಂದ ಮರಳಿ ಗಾಡಿ ಕಟ್ಟಿಕೊಂಡು ವೀರಪ್ಪ ಹಾಗೇ ಊರಿಗೆ ಬರಲಿಲ್ಲ. ಮಕರವಳ್ಳಿಯ ಸುತ್ತಣ ಕಾಡಿನ ಮಾರ್ಗವಾಗಿ ಗಾಡಿಯನ್ನು ಹೊಡೆದುತಂದ. ಆಗಲೆ ಸಾಯಂಕಾಲದ ಸಮಯವಾಗಿತ್ತು. ಆ ಕಾಡು ಗೇರುಮರಗಳ ಆಗರ. ಎಲ್ಲೋ ಒಂದು ಕಡೆ ಮಡಿವಾಳ ಹಾಗಲಬಳ್ಳಿಯ ಸ್ಥಳವಂತೆ. ಅಲ್ಲಿ ಮಡಿವಾಳ ಹಾಗಲು (ಕಾಸಿನ ಹಾಗಲುಕಾಯಿ) ಸಿಗಬಹುದೋ ಹೇಗೆ? ಇದ್ದರೆ ಅವನ್ನೆಲ್ಲ ಸಂಗ್ರಹಿಸಿಕೊಂಡು ಹೋಗಬೇಕೆಂದು ಅಲ್ಲಿಗೆ ಬಂದಿದ್ದ. ಮಡಿವಾಳ ಹಾಗಲಕ್ಕೂ ಈರಪ್ಪನಿಗೂ ಬಲುನಂಟು. ಅಲ್ಲಿ ಒಂದು ಮಂಟೆಯ ಬಳಿ ಗಾಡಿಯ ಕೊರಳು ಬಿಚ್ಚಿ ಎತ್ತುಗಳನ್ನು ಕಟ್ಟಿ ನನ್ನನ್ನು ಕರೆದುಕೊಂಡು ಸ್ವಲ್ಪದೂರ ದಟ್ಟ ಅರಣ್ಯದಲ್ಲಿ ನಡೆದ. ಗೇರುಮರಗಳಲ್ಲಿ ಕೆಂಡದಂತೆ ಕಾಣುವ ಗೇರುಹಣ್ಣುಗಳ ಸಮೃದ್ಧ ಸಂಪತ್ತೇ ಇತ್ತು. ಷಡಕ್ಷರ ಕವಿ ಗೇರುಹಣ್ಣಿನ ಬಗೆಗೆ ಸುಂದರ ಉತ್ಪ್ರೇಕ್ಷೆ ಮಾಡಿದ್ದಾನೆ. ಚಳಿಗಾಲದಲ್ಲಿ ಕೋತಿಗಳು ಚಳಿಯ ಕೊರೆತ ತಡೆಯಲಾಗದೆ ಗೇರುಮರದ ಕೆಳಗೆ ಬಿದ್ದ ಹಣ್ಣುಗಳನ್ನು ಬೆಂಕಿಯ ಕೆಂಡವೆಂದು ಭಾವಿಸಿ ಮೈ ಕೈ ಕಾಸಿಕೊಳ್ಳಲು ಒಣಗಿದ ಹುಲ್ಲು ತಂದು, ಅದರ ಮೇಲೆ ಹಾಕಿ ಉಫ್ ಉಫ್ ಎಂದು ಊದಿ ಉರಿ ಮಾಡಲು ಯತ್ನಿಸುತ್ತಿದ್ದವಂತೆ. ಒಳ್ಳೆಯ ದಪ್ಪನಾಗಿ ಬೆಳೆದ ಗೇರುಹಣ್ಣಿನ ಸ್ವರೂಪ ಹಾಗೆ ಕೆಂಡದಂತೆ. ಗೇರುಹಣ್ಣು ಕಂಡು ನನ್ನ ಬಾಯಲ್ಲಿ ನೀರೂರಿತು. ನಾನೂ ಗೇರುಮರ ಹತ್ತುವ ಸಾಹಸ ಮಾಡಿ, ಒಂದು ಉಡಿ ಭರ್ತಿ ಗೇರುಹಣ್ಣು ಕಿತ್ತೆ. ಹಣ್ಣು ಹರಿಯುವಾಗಲೇ ಚೆನ್ನಾಗಿ ಪಕ್ವವಾದವುಗಳನ್ನು ಬಾಯಿಯಲ್ಲಿ ತುಂಬುತ್ತಲೇ ಇದ್ದೆ. ಡೋರೆಹಣ್ಣು ತಿನ್ನಬೇಡಿ, ಗಂಟಲಲ್ಲಿ ಸಿಕ್ಕುತ್ತೆ. ಅದನ್ನು ಮನೆಗೆ ಒಯ್ದು ಬೆಂಬೂದಿಯಲ್ಲಿ ಹಾಕಿ ಒಂದು ದಿನ ಇಟ್ಟರೆ ಮರುದಿನ ಬಹು ರುಚಿಯಾಗಿರುತ್ತವೆಂದ. ಈರಪ್ಪನಂತೂ ಒಯ್ದ ಒಂದು ಚೀಲದ ತುಂಬ ಹಣ್ಣು ಹಿರಿದು ತುಂಬಿದ. ಅನಂತರ ನನ್ನನ್ನು ಗಾಡಿಯ ಹತ್ತಿರ ನಿಲ್ಲಹೇಳಿ, ತಾನು ನೋಡಿದ ಗುಪ್ತಸ್ಥಳಕ್ಕೆ ಹೋಗಿ ಅಲ್ಲಿದ್ದ ಮಡಿವಾಳ ಹಾಗಲುಕಾಯಿಯನ್ನು ಕಿತ್ತುತಂದು ನನಗೆ ತೋರಿಸುತ್ತ "ಇದು ಒಳ್ಳೆಯ ಕಾಯಿಪಲ್ಯ. ಈ ಒಂದು ಕಾಯಿಪಲ್ಯ ತಿನ್ನುವುದೂ ಒಂದೇ, ಒಂದು ಸೇರು ತುಪ್ಪಸಕ್ಕರೆ ತಿನ್ನುವುದೂ ಒಂದೇ" ಎಂದು ವರ್ಣನೆ ಮಾಡಿದ. ಈ ತರಕಾರಿಯನ್ನು ಪ್ರಥಮತಃ ಇಲ್ಲಿ ನೋಡಿದೆ. ಮುಂದೆ ಹಿರೇಕಾಂಶಿಯನ್ನು ಬಿಟ್ಟಮೇಲೆ ಈ ತರಕಾರಿಯನ್ನು ಪಡೆಯಲು ಪ್ರಯತ್ನಿಸಿದೆ, ಸಾಧ್ಯವಾಗಲಿಲ್ಲ. ಇದು ಮಲೆನಾಡಿನ ಕಾಡಿನ ಉತ್ಕೃಷ್ಟ ತರಕಾರಿ. ಈಗ ಇದರ ರುಚಿಯು ಎಷ್ಟು ಜನಕ್ಕಿದೆಯೋ ದೇವರೇ ಬಲ್ಲ. ಮಕರವಳ್ಳಿ ಎಂದು ಹೇಳಿದೆ.

ಈ ಹಳ್ಳಿಯಲ್ಲಿ ಗೇರುಬೀಜ ಸಂಗ್ರಹಿಸಿ ಎಣ್ಣೆ ತೆಗೆದು ಮಾರಾಟ ಮಾಡುವ ಗ್ರಾಮೀಣ
ಕೈಗಾರಿಕೆ ಪ್ರಸಿದ್ಧವಾಗಿತ್ತು. ಈಗ ಗೇರುಮರಗಳೂ ಇಲ್ಲ. ಈ ಕೈಗಾರಿಕೆಯೂ ಇಲ್ಲ. ಅರಣ್ಯವು
ಸರ್ವನಾಶ.

ಮಬ್ಬು ಕತ್ತಲಾಗುತ್ತ ಬಂದಿತ್ತು. ನಮ್ಮ ಕಾಡಿನ ದಾರಿಯ ಪಕ್ಕಕ್ಕೆ ಸುಮಾರು ಅರ್ಧ
ಎಕರೆ ಮುಕ್ಕಾಲು ಎಕರೆಯಷ್ಟು ಭೂಮಿಯ ತುಂಬ ಹರಡಿ ಬೆಳೆದುನಿಂತ ಪುರಾತನ ಆಲದ
ಮರ ಕಂಡೆ. ಅದರಲ್ಲಿ ರೆಂಬೆ ಕೊಂಬೆ ಬಿಳಿಲು ಗಿಳಿಲು ಎಂದು ನೋಡದೆ ಗೂಡುಕಟ್ಟಿದ
ನೂರಾರು-ಸಾವಿರಾರು ಹೆಜ್ಜೇನು ಗೂಡು ಕಂಡೆ. ಈ ಜೇನುಗಳ ಕಾರಣವಾಗಿ ಮರವೆ
ಕಪ್ಪಗೆ ಕಾಣುತ್ತಿತ್ತು. 'ಮಾಸ್ತರೆ, ನೋಡಿ ನನ್ನ ಒಳ್ಳೆ ಪ್ರಾಯದಲ್ಲಿ ಇಲ್ಲಿ ಬಹಳಷ್ಟು ಜೇನು
ಮುರಿದು ಡಬ್ಬ ಡಬ್ಬಗಳ ತುಂಬ ಜೇನುತುಪ್ಪ ಒಳಿದುಕೊಂಡು ಹೋಗಿದ್ದುಂಟು. ಇಲ್ಲಿ ಸದಾ
ಕಾಲ ಜೇನು ಇರುತ್ತವೆ. ಈ ಮರಗಳನ್ನು ಸರಕಾರದವರು ಲಿಲಾವು (ಹರಾಜು) ಮಾಡುತ್ತಾರೆ.
ಜೇನು ಮುರಿದು ಸಿಕ್ಕರೆ ಆಯಿತು. ನಾವು ಜೇಲುಮನಿ ಕಂಬಿ ಎಣಿಸಬೇಕು. ಕದ್ದು ಮುಚ್ಚಿ
ಜೇನು ಮುರಿದುಕೊಂಡು ಹೋಗಬೇಕು. ಈಗ ಕದ್ದು ಜೇನು ಮುರಿಯಲು ಹೆದರಿಕೆ. ಇಲ್ಲಿ
ಮಧ್ಯಾಹ್ನದ ಬಿಸಿಲಲ್ಲಿ ಬಂದು ಪಾರಾಗಿ ಹೋಗಿ ಮನೆ ಬೀಳುವುದೂ ಕಷ್ಟ. ಹುಳುಗಳು
ಎದ್ದು ಬೆನ್ನು ಹತ್ತಿದವೆಂದರೆ ನೀರು ಮುಳುಗಿದರೂ ಬಿಡುವುದಿಲ್ಲ" ಎಂದ. ಈ ಜೇನಿನ
ಸಹವಾಸ ಬಾಲ್ಯದಿಂದ ಸಾಕಷ್ಟು ಆಗಿದ್ದ ನನಗೆ ಆತನ ಮಾತಿನಲ್ಲಿ ಉತ್ಪ್ರೇಕ್ಷೆಯೇನೂ ತೋಚಲಿಲ್ಲ.

ಈರಪ್ಪ ಎಲ್ಲಿಗೇ ಹೋಗಲಿ, ನನ್ನನ್ನು ಹಿಂಬಾಲಿಸಿಕೊಂಡು ಹೋಗುತ್ತಿದ್ದ. ಒಂದು
ದಿನ ದಶರಥಕೊಪ್ಪ ಎಂಬ ಊರಿಗೆ ಹೋದ. ಅಲ್ಲಿ ಅವನ ಸೋದರ ಮಾವನ ಮನೆ ಇತ್ತು.
ಅವನು ಸೋದರ ಮಾವನನ್ನು ನೋಡಲು ಹೋಗುತ್ತಿದ್ದನೋ ಹೇಳುವುದು ಕಷ್ಟ. ರುಚಿಕಟ್ಟಾಗಿ
ಅಡಿಗೆ ಮಾಡಿ ಊಟಕ್ಕೆ ಬಡಿಸುವುದರಲ್ಲಿ ಆ ಮುದುಕಿಯ ಹೆಸರು ಪ್ರಸಿದ್ಧ. ಈರಪ್ಪ ತನ್ನ
ಬಾಯಿ ಕೆಟ್ಟಾಗಲೆಲ್ಲ ಅಲ್ಲಿಗೆ ಹೋಗುತ್ತಾನಂತೆ. ಹಾನಗಲ್ಲಿನ ಸಮೀಪದಲ್ಲಿದ್ದ ಆಲೂರ
ಕೊಮರಸಿಕೊಪ್ಪ (ಕಪ್ಪರಸಿಕೊಪ್ಪ)ದ ಸಮೀಪದಲ್ಲಿ ಸಹ್ಯಾದ್ರಿಯ ದಟ್ಟ ಕಾಡಿನ ಮಧ್ಯದಲ್ಲಿತ್ತು.
ದಶರಥ ಬೇಟೆಗೆ ಬಂದು ತೀರ್ಥಯಾತ್ರೆಗೆ ತಂದೆ-ತಾಯಿಯರನ್ನು ಕಾವಡಿಯಲ್ಲಿ ಹೊತ್ತುಕೊಂಡು
ಬಂದಿದ್ದ. ಋಷಿಪುತ್ರನನ್ನು ಮೃಗಭ್ರಾಂತಿಯಿಂದ ಕೊಂದು ಶಾಪಗ್ರಸ್ತನಾದುದು ಇಲ್ಲಿಯೇ ಎಂದು
ಊರಜನ ಆಡಿಕೊಳ್ಳುತ್ತಿದ್ದಾರೆ. ಈ ಅಂತೆಕಂತೆ ಏನಾದರೂ ಇರಲಿ, ಈರಪ್ಪ ಇಲ್ಲಿಗೆ ಬರುವುದು
ಇದಾವುದಕ್ಕೂ ಅಲ್ಲ. ರುಚಿರುಚಿಯಾದ ಊಟವನ್ನು ದಿನಕ್ಕೆ ಮೂರು ಹೊತ್ತೂ ಪಟ್ಟಾಗಿ
ಉಂಡು, ತನ್ನ ನಾಲಿಗೆ ಚಾಪಲ್ಯ ತೀರಿಸಿಕೊಳ್ಳುವುದು ಪ್ರಧಾನ ಉದ್ದೇಶವೆಂದು ಹಿರೇಕಾಂಶಿಗೆ
ಗೊತ್ತು. ಅಂಥ ಅತ್ತೆ ಅವನ ಪುಣ್ಯಕ್ಕೆ ಇದ್ದಳು.

ಮನೆಗೆ ಬಂದ ಕೂಡಲೇ ವೃದ್ಧ ಸೋದರಮಾವ ಹೆಂಡತಿಗೆ "ಏಯ್ ಹಿರೇಕಾಂ
ಈರ ಬಂದಾನ ನೋಡು" ಎಂದೊಡನೆ ಸಾಕಷ್ಟು ವಯಸ್ಸಾದ ಮುದುಕಿ "ಯಾವಾಗ ಬಂದೆಪ್ಪ
ತಮ್ಮಾ ಬಾರಪ್ಪಾ!" ಎಂದು ಪ್ರೀತಿಸುವ ಧ್ವನಿಯಲ್ಲಿ ಕರೆದು, ಉಪಚಾರೋಕ್ತಿ ಆಡಿ ಮುಂ
...ಬೆಲ್ಲ ನೀರು ತಂದಿಟ್ಟು, 'ತಿಂದು ನೀರು ಕುಡಿದು ವಿಶ್ರಮಿಸಿಕೊ. ಅನ್ನ ಅಕ್ಕಿರೊಟ್ಟಿ ಮಾ
ಪಲ್ಯ ಮಾಡ್ತೀನಿ' ಎಂದವಳೇ, "ಅಯ್ಯೋ ಮರತೇ ಬಿಟ್ಟೆ. ಇವರ್ಯಾರೋ ತಮ್ಮಾ!" ಎಂದು
ಕೇಳಿದ್ದಕ್ಕೆ ಈರಪ್ಪ ನನ್ನ ಪರಿಚಯವನ್ನು ನಭೂತೋ ನಭವಿಷ್ಯತಿ ಎನ್ನುವಂತೆ ಮಾಡಿಬಿಟ್ಟ

ಮುದುಕಿ "ಅಯ್ಯೋ ನಮ್ಮಪ್ಪ ಬಡವರ ಮನೆಗೆ ಭಾಗ್ಯದೇವತೇನೇ ಬಂದಂಗಾಯ್ತು ನೋಡು" ಎನ್ನುತ್ತಲೆ ಒಳಗೆ ಹೋಗಿ ಊಟದ ಪರಿಕರ ಸಿದ್ಧಪಡಿಸುತ್ತಿದ್ದಳು. ನಾನು ರುಚಿರುಚಿಯಾದ ಹುಲುಗಟ್ಟಿನ ಮಳಲಿನ ಮುದ್ದೆಯಂತಹ ಬೆಲ್ಲವನ್ನು ಚೆನ್ನಾಗಿಯೇ ತಿಂದು ನೀರು ಕುಡಿದೆ. ಹೊಟ್ಟೆಯ ಚುರುಗುಟ್ಟುವಿಕೆ ಕಡಿಮೆಯಾಯಿತು. ಊರ ಸುತ್ತಮುತ್ತ ರಮ್ಯವಾದ ವನಪ್ರದೇಶವಿದ್ದುದನ್ನು ಈರಪ್ಪನಿಗೆ ಜ್ಞಾಪಿಸಿ 'ಸ್ವಲ್ಪ ಹೊತ್ತು ತಿರುಗಾಡಿಕೊಂಡು ಬರೋಣ' ಎಂದೆ. 'ನಡಿ ಹೋಗೋಣ ಇಲ್ಲಿ ನೋಡೋದು ಬಹಳ ಇದೆ. ಹಿಂದೆ ದಶರಥ ಮಹಾರಾಜ ಋಷಿಪುತ್ರನನ್ನು ಕೊಂದ ಜಾಗಾ ತೋರಸ್ತೇನೆ" ಎಂದು ಹೊರಟ. ಊರಿಗೇ ಅಂಟಿದಂತೆಯೇ ಇದ್ದ ಅರಣ್ಯದ ಮಾರ್ಗ ಹಿಡಿದು ಮುಂದೆ ಹೋದೊಡನೆ ನಮ್ಮ ಮನವನ್ನೆಲ್ಲ ಸೆರೆಹಿಡಿದದ್ದು ಮೈತುಂಬ ಕಮಲದ ಹೂಗಳನ್ನು ಹೊತ್ತುನಿಂತ ಕೆರೆ, ಆಗಿನ ಅದರ ಸೌಂದರ್ಯ ಎಲ್ಲ ಮುಖಗಳನ್ನೂ ಈಗ ವರ್ಣಿಸಲಾಗುವುದಿಲ್ಲ. ಶಬ್ದಶಕ್ತಿಗೆ ಸಿಕ್ಕದ ಅಪೂರ್ವಾನಂದಾನುಭೂತಿ ಮನಸ್ಸಿನಾಳದಲ್ಲಿ ಇಳಿದು ಅಲೌಕಿಕಾನಂದವನ್ನುಂಟುಮಾಡಿತು. 'ಮಾಸ್ತರ. ಈ ಕೆರ್‍ಯಾಗಿನ ನೀರು ಯಾವಾಗಲೂ ಬತ್ತಿದ್ದ ಗೊತ್ತಿಲ್ಲೋಡ್ರೀ. ದಶರಥ ಮಹಾರಾಜ ಪೆಳೆಮರೆಯಲ್ಲಿ ನಿಂತು ಕೆರೆಯಲ್ಲಿ ನೀರು ತುಂಬುತ್ತಿದ್ದ ಋಷಿಮಗನನ್ನ ಬಾಣಬಿಟ್ಟು ಕೊಂದ ಜಾಗ ಇಲ್ಲಿಯೇ ಐತಿ ನೋಡ್ರೀ" ಎಂದು ಒಂದು ಸ್ಥಳ ತೋರಿಸಿದ. ನೀರು ತುಂಬುವಾಗ ಕೊಡ ಗುಡುಗುಡು ಅನ್ನುತ್ತಲ್ಲವೇ. ಅದಕ್ಕೆ ಆ ಪಕ್ಕದಲ್ಲಿ ಗುಡುಗುಡಿ ಎಂಬ ಊರಾಯಿತು. ಇದು ದಶರಥ ಕೊಪ್ಪ ಆಯಿತು ಎಂದು ತನ್ನ ಇತಿಹಾಸ ವಿಜ್ಞಾನ ಉಪನ್ಯಾಸ ಕೊಟ್ಟ. ಬೇಸಿಗೆಯಲ್ಲಿ ಎಲ್ಲೆಲ್ಲೂ ನೀರು ಸಿಗದ ಈ ಕೆರೆನೀರು ಕುಡ್ಯಾಕ ರಾತ್ರಿ ಹುಲಿ, ಕಾಡುಮಿಕ, ನರಿ, ಸೀಳ್ನಾಯಿ ಇಲ್ಲಿಗೆ ಬರ್‍ತಾವ. ಒಮ್ಮೊಮ್ಮೆ ಆನಿನೂ ಬರ್‍ತಾವ. ಅದಕ್ಕ ಒಮ್ಮೊಮ್ಮೆ ಗಾಜಿಪುರ ಇನಾಮ್ದಾರ್‍ರು ಬ್ಯಾಟಿಗೆ ಇಲ್ಲಿ ಬರ್‍ತಾರ. ಒಂದು ದಿನ ಅವರು ಹುಲಿ ಬ್ಯಾಟಿಗೆ ಬಂದರು. ದಂಡಿ ಮ್ಯಾಲ ಒಂದು ದುಂಡನ್ನ ತೆಗ್ಗುಮಾಡ್ಸಿ ತೆಗ್ಗಿನ ಮ್ಯಾಲ ಒಂದು ದೊಡ್ಡ ಕೊಪ್ಪರಿಗೆ ಮುಚ್ಚಿಸಿ ಒಳಗ ಕುಂತುಬಿಟ್ರು. ಸುತ್ತೂ ತಮ್ಮ ಕೋವಿ ತೂರುವಷ್ಟು ಏಳೆಂಟು ಕಿಂಡಿ ಮಾಡಿಕೊಂಡು ಕಣ್ಣಾಗ ಎಣ್ಣಿ ಹಾಕ್ಕೊಂಡು ಕಿಂಡ್ಯಾಗ ನೋಡ್ತಾ ಕುಂತುಬಿಟ್ರು. ಬೆಳದಿಂಗಳ ಬೆಳ್ಕು ಇತ್ತು. ಒಂದು ದೊಡ್ಡ ಹಂದಿ ಬಂತು. ಅದೇ ಹೊತ್ತಿಗೆ ಒಂದು ಹುಲೀನು ಬಂತು. ಎರ್‍ಡೂ ಎದರಾಬದರಾಗಿಬಿಟ್ವು. ಗರ್‌ಗುರ್ ಸುರುವಾತು. ಇನಾಮದಾರ್‍ರ ಈ ಎರಡೂ ಬ್ಯಾಟೀನೂ ಒಂದೇ ಗುಂಡಿಗೆ ಹ್ಯಾಂಗ ಕೆಡವಬೇಕು ಅನ್ನೋ ಚಿಂತೆ ಶುರುವಾಯ್ತು. ಬುದ್ಧಿ ಉಪಯೋಗಿಸಿಬಿಟ್ಟ. ಅವು ಎದರಾಬದರಾ ಒಂದನ್ನೊಂದು ಗುರುಗುಟ್ಟುತ್ತ ಹ್ಯಾಂಗ ಮ್ಯಾಲ ಬೀಳಬೇಕು ಅನ್ನೋದನ್ನ ಯೋಚಿಸುವಾಗಲೇ ಒಮ್ಮೆಗೆ ಮಿಗಕ್ಕೆ ಗುರಿಯಿಟ್ಟು ಗುಂಡು ಹಾರ್‍ಸಿಬಿಟ್ಟ. ಹಂದಿಗೆ ಗುಂಡು ಬಿದ್ದುಬಿಟ್ತು. ತಕ್ಕೊ ಎಲ್ಲಿತ್ತೋ ಅದಕ್ಕ ಕೋಪಾ ಒಮ್ಮೆಲೆ ಹುಲೀನ ತನ್ನ ಕ್ವಾರಿ ದಾಡಿಯಿಂದ ಅನಾಮತ್ತಾಗಿ ಎತ್ತಿಬಿಟ್ತು. ಹಂದಿಯ ಎರಡೂ ಕ್ವಾರಿ ಹುಲಿಹೊಟ್ಟೆ ಹೊಕ್ಕಬಿಟ್ವು. ಅತ್ಲಾ ಕಡೆ ಹುಲಿ ಒದ್ದಾಡಿಕೊಂಡು ಸತ್ತು ಹೋತು; ಇತ್ಲಾ ಕಡೆ ಹಂದೀನೂ ಸತ್ತುಬಿತ್ತು". ಈ ಕಥೆ ಕೇಳುತ್ತ ಕೇಳುತ್ತ ನನಗೆ ಭಯವೇ ಆವರಿಸಿದಂತಾಯಿತು.

"ಕೇಳ್ರಿ ಒಮ್ಮೆ ಇದಃ ಅಡವಿಗೆ ಒಬ್ಬ ಯುರೋಪಿಯನ್ ಸಾಹೇಬ ಬ್ಯಾಟಿಗೆ ಬಂದ. ಹಾನಗಲ್ ಬಂಗ್ಲೆದಾಗ ಉಳಕಂಡಿದ್ದ. ಅವರ್‍ದು ಯಾವುದೋ ಹಬ್ಬಂತ. ಆವತ್ತ ಬ್ಯಾಟಿಗೆ ಇಲ್ಲಿಗೇ ಬಂದಿದ್ದ. ಬಂದವ ಒಬ್ಬನಃ ಬರಬೇಕೋ ಬ್ಯಾಡವೋ ಜತೆಗೆ ಇಬ್ರು ಮಕ್ಕನ್ನಾ

ಕರಕೊಂಡು ಬಂದ. ಒಂದೆರಡು ದಿನ ಮುಂಚಿತವಾಗೇ ಬಂದು ಗಿಡದ ಮ್ಯಾಲ ಎರಡು ಮಂಚಿಕೆ ಕಟ್ಟಿಸಿದ್ವ. ಇಬ್ಬರೂ ಮಕ್ಕಳನ್ನು ಒಂದು ಮಂಚಿಕೆ ಮ್ಯಾಲ ಕುಂಡರಿಸಿದ್ದ; ಇನ್ನೊಂದು ಪಕ್ಕದ ಗಿಡದ ಮ್ಯಾಲ ತಾನು ಕುಂತು ಗುಂಡು ಹಾರ್‍ಸಾಕ ಅನುಕೂಲ ಆಗೋಹಾಗೆ ಕಟ್ಟಿಸಿದ ಮಂಚಿಕೆ ಮ್ಯಾಲ ಕುಂತ. ಹತ್ತಾರು ಜನ ಹುಲಿ ಎಬ್ಬಿಸಿಗೊಂಡು ಬಂದ್ರು. ಹದಿನಾರು ಮೆಟ್ಟಿನ ಹುಲಿ ಬಂತು. ಭಯಂಕ್ರಾಗಿತ್ತು. ಗಡ್ ಗಡ್ ಅಂದಕೋತಾನೇ ಬಂತು. ತುಂಬಾ ಹೆದರಿ ಹೋಗಿತ್ತು. ಸಾಹೇಬ ಕುಂತ ಗಿಡದ ಮುಂದಕ ಭಯದಿಂದ ಅತ್ತ ಇತ್ತ ನೋಡ್ತಾ ಬರ್‍ತಾ ಇತ್ತು. ಸಾಹೇಬ ಗುರಿಯಿಟ್ಟ; ಧಡಂ ಎಂದು ಗುಂಡು ಹಾರಿಸಿಬಿಟ್ಟ. ಹೊಡ್ತಾಬಿತ್ತು. ಎಲ್ಲಿತ್ತೋ ಸಿಟ್ಟು ಮುಂದೆ ನೋಡಿದಾಗ ಅದಕ್ಕ ಫಕ್ಕನೆ ಕಣ್ಣಿಗೆ ಬಿದ್ದವನು ಸಾಹೇಬಲ್ಲ ಆತನ ಮಕ್ಳು; ಟಣ್ಣನೆ ಮಂಚಿಕೆ ಮ್ಯಾಲಿನ ಮಕ್ಕಳ ಕಡೆಗೆ ಹಾರಿ ತನ್ನ ಎರ್‍ಡೂ ಮುಂಗಾಲು ಪಂಜರದಿಂದ ಮಕ್ಳನ್ನ ಎಳ್ಕೊಂಡೇ ನೆಲದ ಮ್ಯಾಲ ಬಿತ್ತು. ತಾನು ಸತ್ತು ಮಕ್ಳನ್ನೂ ಕೊಂದುಬಿಟ್ತು. ಇವೆಲ್ಲಾ ಅರಣ್ಯದ ಬ್ಯಾಟಿ ಕತೆಗಳು". ಒಂದೊಂದು ಕಥೆಯೂ ನನಗೆ ಮೈಗೆ ಮುಳ್ಳು ಹಚ್ಚಿದಂತಾಗುತ್ತಿತ್ತು. ಭಯವಾದರೂ ಇಂಥ ಕತೆ ಕೇಳುವ ಕುತೂಹಲ ವ್ಯಕ್ತಪಡಿಸಿದೆ.

"ಅರಣ್ಯದಾಗ ಯಾವುದರ ಕೈಗಾದರೂ ಸಿಕ್ಕು ಉಪಾಯದಿಂದ ಪಾರಾಗಬಹುದು ಮಾಸ್ತರ! ಈ ಹಾಳಾದ್ದು ಸೀಳ್ನಾಯಿ ಕೈಗೆ ಸಿಕ್ಕು ಪಾರಾಗೋದು ಭಾಳಾ ಕಷ್ಟ. ಅವು ಅಡವ್ಯಾಗ ಒಂಟೊಂಟಿಯಾಗಿ ತಿರ್‍ಗೋದಿಲ್ಲ. ಹಿಂಡು ಹಿಂಡಾಗೇ ತಿರುಗುತಾ ಇರ್‍ತಾವ. ನೋಡಾಕೆ ಚಿಕ್ಕವಾಗಿದ್ರೂ ಅವಕ್ಕ ಸಿಟ್ಟು ಅಂದ್ರ ಸಿಟ್ಟು. ಹುಲೀನು ಕೂಡ ಬೆನ್ನತ್ತಿ ಎಲ್ಲವೂ ಒಮ್ಲೇ ಮುತ್ತಿ ಕಚ್ಚಿ ಕಡ್ದು ಸಾಯಿಸಿಬಿಡ್ತಾವ. ಅಂಥಾ ಕೆಟ್ಟಪ್ರಾಣಿ. ಒಮ್ಮೆ ಹತ್ತಿಪ್ಪತ್ತು ಸೀಳ್ನಾಯಿಗಳು ಒಂದು ಹುಲಿ ಬೆನ್ನಹತ್ತಿ ಬಿಟ್ವು. ಹುಲಿ ಭಯಭೀತಿಯಿಂದ ಗುಡುಗುತ್ತ ಅರಣ್ಯದಲ್ಲಿ ಓಡಾಡ ಹತ್ತಿದರೆ ನಾಯಿಗಳು ಸುತ್ತುವರಿದು ಬೆನ್ನುಹತ್ತಿ ಬಿಟ್ವು. ಹುಲಿಗೆ ಓಡಿಓಡಿ ಸಾಕಾಗಿ ಉಪಾಯ ಕಾಣದೆ ಒಂದು ಗಿಡದ ಮೇಲೆ ಟಣ್ಣನೆ ಹಾರಿಬಿಟ್ತು. ಅಲ್ಲಿ ಅದರ ಗುರಿ ತಪ್ಪಿತು. ಹಿಡಿದುಕೊಳ್ಳಲಿಕ್ಕೆ ಪಾಟಾಗಲಿಲ್ಲ. ಅಲ್ಲಿಂದ ಕೆಳಗೆ ಬೀಳುವಷ್ಟರಲ್ಲಿ ಒಂದು ಚೂಪಾಗಿ ಮ್ಯಾಲ ಮುಖಮಾಡಿಕೊಂಡಿದ್ದ ಒಣಗಿದ್ದ ಕೊಂಬೆತುದಿ ಮೇಲೆ ಬಿತ್ತು. ಚೂಪಾಗಿದ್ದ ಒಣಗಿದ ಕೊಂಬೆ ಹುಲಿ ಹೊಟ್ಟೆಗೆ ನಾಟಿ ಹುಲಿ ಮರದ ಮೇಲೆ ಸತ್ತುಹೋಯಿತು. ಆದರೂ ಒಂದೆರಡು ದಿನ ಸೀಳ್ನಾಯಿ ಆ ಗಿಡದ ಸುತ್ತಲೇ ಅದು ಇಳಿಯುತ್ತದೆ ಅಂತಾ ಕಾಯ್ದು ಕಾಯ್ದು ಬೇಸತ್ತು ಹೋದ್ವು" ಎಂದು ಈ ಕಥೆ ಹೇಳುತ್ತ ಹೇಳುತ್ತ ಅರಣ್ಯದಲ್ಲಿ ಹೊಕ್ಕ ನನಗೆ ಭಯ. ಆದರೂ ನೋಡಬೇಕೆಂಬ ಆಸೆ.

ಅರಣ್ಯದಲ್ಲಿ ಹೊಕ್ಕು ತಿರುಗುವಾಗ ನನಗೆ ಅನೇಕ ವನಸ್ಪತಿಗಳ ಕಡೆಗೇ ಲಕ್ಷ್ಯ. ಈರಪ್ಪ ಒಂದು ಪೆಳೆ ಹತ್ತಿರ ಹೋಗಿ 'ಮಾಸ್ತರ, ಇದ ಇಸರೀ (ಈಶ್ವರೀ) ಬೇರಿನ ಬಳ್ಳಿ' ಎಂದ. ಎಲೆ ಹರಿದು ಮೂಸಿ ನೋಡಿದೆ. ಇಸರೀ ಬೇರಿನ ವಾಸನೆ ಹತ್ತಿತು. ಅವನ ಕೈಯಲ್ಲಿದ್ದ ಕುಡಗೋಲಿನಿಂದ ಬೇರು ಎಬ್ಬಿಸಿ ಕೈಯಲ್ಲಿ ಹಿಡಿದೆ. ನಮ್ಮೂರ್‍ನಲ್ಲಿ ಹಾವು ಕಡಿದ ಮನುಷ್ಯರಿಗೆ, ದನಗಳಿಗೆ ಇಸರಿ ಬೇರನ್ನು ಲಿಂಬೆಹಣ್ಣಿನ ರಸದಲ್ಲಿ ನಮ್ಮ ದೊಡ್ಡಪ್ಪ ತೆಯ್ದು ಗಂಧಮಾಡಿ ನೆಕ್ಕಿಸಿ ಕಳಿಸುತ್ತಿದ್ದ. ಎಷ್ಟು ಜನ ಬದುಕಿದರೋ ಸತ್ತರೋ ದೇವರೇ ಬಲ್ಲ. ಹಾವು ಕಡಿಸಿಕೊಂಡವರು, ಹಾವು ಕಡಿದಿದೆ ಎಂದು ನಂಬಿ ಹೆದರಿಕೊಂಡು ಬಂದವರುಗಳಿಗೆಲ್ಲ ನಮ್ಮ ದೊಡ್ಡಪ್ಪ ಈ ಬೇರಿನ ಔಷಧ ಕೊಡುತ್ತಿದ್ದುದು ಸುತ್ತ ಹತ್ತು ಹಳ್ಳಿಗೆ ಪ್ರಸಿದ್ಧವಾಗಿತ್ತು. ನಮ್ಮಜ್ಜನ ಕಾಲದಿಂದ ನಡೆದುಬಂದ ಪದ್ಧತಿಯಂತೆ ಇದು. ನಮ್ಮ ಅಜ್ಜ ಸಾಯುವಾಗ ನನ್ನ ದೊಡ್ಡಪ್ಪನಿಗೆ ಇದರ ರಹಸ್ಯಗಳನ್ನೆಲ್ಲ

ಹೇಳಿ ಚಾರ್ಜುಕೊಟ್ಟು ಸತ್ತಿದ್ದನಂತೆ. ನಾನು ಕಿತ್ತುಕೊಂಡ ಬೇರನ್ನು ನಮ್ಮ ದೊಡ್ಡಪ್ಪನಿಗೆ ಕೊಡೋಣ ಎಂದೇ ಇಟ್ಟುಕೊಂಡದ್ದು. ಈ ಬೇರನ್ನು ನಾನೊಮ್ಮೆ ಊರಿಗೆ ಹೋದಾಗ ನಮ್ಮ ದೊಡ್ಡಪ್ಪನಿಗೆ ಕೊಟ್ಟೆ. ಆತನ್ನು ಅದನ್ನು ಹೊರಳಿಸಿ ನೋಡಿ "ಬಿಳೇ ಇಸರಿ" ಎಂದುಬಿಟ್ಟ. ಬಿಳೆ ಇಸರಿ ಬೇರು ಅಷ್ಟು ಒಳ್ಳೆಯದಲ್ಲವಂತೆ. "ಕರೇ ಇಸರೀ ಬೇರು ನಮ್ಮ ಮನೆಯಲ್ಲಿ ಇರೋದು. ಅದೇ ಹಾವಿನ ಔಷಧಿ. ಅಲ್ಲಿ ಹೀಗೆಲ್ಲ ಎಲ್ಲೆಂದರಲ್ಲಿಯದನ್ನು ಹ್ಯಾಗೆ ಬೇಕೋ ಹಾಗೆ ಕಿತ್ತುಕೊಂಡು ಬಂದರೆ ಔಷಧಿಗೆ ಬರೋದಿಲ್ಲ. ಈ ಬೇರನ್ನು ನಾನು ತರುವುದು ಯುಗಾದಿಯ ಅಮಾಸಿ, ದೀಪಾವಳಿ ಅಮಾಸಿ - ಈ ಎರಡೇ ದಿನ. ಆ ದಿನ ಮಡಿಹುಡಿಯಿಂದ ಹೋಗಿ ಬಳ್ಳಿ ಹುಡುಕಿ, ಅದಕ್ಕೆ ಪೂಜೆಮಾಡಿ, ಗುದ್ದಲಿಯಿಂದ ಅಗಿಯಬೇಕು. ಅಗಿಯುವಾಗ ಮೈಲಿ ಬಟ್ಟೆ ಇರಲೇಕೂಡದು. ದಿಗಂಬರನಾಗಿರಬೇಕು. ಬೇರು ಅಗಿದು ಮುಗಿದ ಮೇಲೆ ಮಡಿಬಟ್ಟೆಯಲ್ಲಿ ಕಟ್ಟಿ ಅನಂತರ ಬಟ್ಟೆ ಉಟ್ಟುಕೊಂಡು ಮನೆಗೆ ತಂದು ಪುನಃ ಪೂಜಿಸಿ ಮನೆಯಲ್ಲಿ ಅಟ್ಟು ಮಾಡಿದ ಹರಳೆಣ್ಣೆಯಲ್ಲಿ ಹಾಕಿ ಬಾಯಿಕಟ್ಟಿ ಇಡಬೇಕು. ಹಾವು ಕಡಿದವರು ಬಂದರೆ ಪೂಜಿಸಿ ಬಾಯಿ ತೆರೆದು ಬೇರನ್ನು ನಿಂಬೆಹಣ್ಣಿನ ರಸದಲ್ಲಿ ತೆಯ್ದು ನೆಕ್ಕಿಸಬೇಕು. ಸಕಾಲಕ್ಕೆ ಲಿಂಬೆಹಣ್ಣು ಸಿಗದಿದ್ದರೆ ಮಜ್ಜಿಗೆಯಲ್ಲಾದರೂ ತೆಯ್ದು ಕುಡಿಸಬೇಕು" ಎಂದುಬಿಟ್ಟ.

ಹೀಗೆ ನಾನು ಗಿಣಿಮಾಲ ಈರಪ್ಪನ ಸಹವಾಸದಿಂದ ತಿರುಗಾಡುವಾಗ ವನಸ್ಪತಿಗಳ ಬಗ್ಗೆ ಬಹಳಷ್ಟು ತಿಳಿದೆ. ಚಿತ್ತಮೂಲ ಕಾಲಿನ ಇಸಬು ಮೊದಲಾದವಕ್ಕೆ ಸಿದ್ಧೌಷಧಿ ಎಂದು ತಿಳಿದಿದ್ದೆ. ಅದರಲ್ಲಿ ಕರಿಯ ಚಿತ್ರಮೂಲವೇ ಶ್ರೇಷ್ಠವಂತೆ. ನಮಪ್ಪ ನಾನು ಸಣ್ಣವನಿರುವಾಗ ನನ್ನ ಕಾಲಿಗಾದ ಇಸಬನ್ನು ಕಳೆಯಲು ಲಿಂಬೇರಸದಲ್ಲಿ ಚಿತ್ರಮೂಲದ ಬೇರು, ಮುತ್ತುಗದ ಬೀಜ ಎರಡನ್ನೂ ತೆಯ್ದು ಗಂಧಮಾಡಿ ಹಚ್ಚಿದ್ದು ಜ್ಞಾಪಕ. ಅದರಿಂದಾದ ಅನಾಹುತ ಅಷ್ಟಿಷ್ಟಲ್ಲ. ಕಾಲೆಲ್ಲ ಬಾತುಕೊಂಡು, ಹುಣ್ಣಾಗಿ ಪಡಬಾರದ ಬವಣೆ ಪಟ್ಟುಬಿಟ್ಟೆ. ಅದಕ್ಕಾಗಿಯೇ ವನಸ್ಪತಿಗಳನ್ನು ಔಷಧವಾಗಿ ಪ್ರಯೋಗಿಸುವಾಗ ಪೂರ್ಣ ತಿಳಿಸಿದಿದ್ದರೆ ಪ್ರಯೋಗಿಸಬೇಕೇ ವಿನಾ ತಿಳಿಯದೆ ಪ್ರಯೋಗಿಸಬಾರದು. ತಿಳಿಯದೆ ತಿಳಿದವನಂತೆ ಔಷಧ ಕೊಟ್ಟು ಚನ್ನಬಸಪ್ಪನನ್ನು ಸುಸ್ತಾಗುವಂತೆ ಭೇದಿ ಮಾಡಿಸಿ ಕೈಸುಟ್ಟುಕೊಂಡಿದ್ದ ನನಗೆ ಔಷಧ ಕೊಡಲು ಹೆದರಿಕೆಯಿದ್ದರೂ ವನಸ್ಪತಿಗಳ ಮೇಲಿನ ಮಮತೆ ಮಾತ್ರ ಇದ್ದೇ ಇತ್ತು. ಇದು ಹಾವೇರಿ ಸ್ವಾಮಿಗಳ ಪ್ರಭಾವವೇ ಹೊರತು ಬೇರೆ ಅಲ್ಲ. ನವಿಲುಮೆಟ್ಟು ಸೊಪ್ಪು, ಬ್ರಹ್ಮದಂಡೆ, ನೆಲಗುಳ್ಳ, ನೆಗ್ಗಿಲು, ಜಾಪಾಳ, ಸೋನಾಮುಖಿ, ತಂಗಡಿ, ಎಕ್ಕ ಲೆಕ್ಕಿ, ಕುಪ್ಪೆ ಗರಗ, ವಿಷ್ಣುಕಾಂತಿ. ಹೊರಮುಚ್ಚುಗ, ಒಳಮುಚ್ಚುಗ, ಹರಿಮುಹಚ್ಚುಗ, ಗರಿಗೆ, ಕಿರುಬೇವು, ನೆಲಬೇವು, ಕರಿಕಾಕೆ, ಕೆಂಪುಕಾಕೆ, ಹಿರೇಮದ್ದು (ಅಶ್ವಗಂಧಿ), ಅಮೃತಬಳ್ಳಿ, ಎಲೂರಿ, ತತ್ತೂರಿ ಇತ್ಯಾದಿ ನೂರಾರು ವನಸ್ಪತಿಗಳನ್ನು ಸಂಗ್ರಹಿಸುವುದೂ ಒಂದು ಹವ್ಯಾಸವಾಗಿತ್ತು. ಅವು ಸಿಕ್ಕಾಗ ತಂದು ಕಾಗದದಲ್ಲಿ ಪೊಟ್ಟಣಕಟ್ಟಿ ಮೇಲೆ ಹೆಸರು ಬರೆದಿಡುವುದು. ಸ್ಟಾಂಪುಗಳ ಸಂಗ್ರಹ ಮಾಡುವ ಹವ್ಯಾಸದವರಂತೆ ಇದು ನನ್ನದೇ ಆದ ಒಂದು ಹುಚ್ಚಾಗಿತ್ತು ಅಂತಾ ಬೇಕಾದರೆ ತಿಳಿದುಕೊಳ್ಳಿ. ನಮ್ಮೂರಲ್ಲಿ ಬಾಣದ ಸಿದ್ಧಲಿಂಗವ್ವ ಎಂಬ ಮುದುಕಿಯೊಂದಿತ್ತು. ಹೊಟ್ಟೆ ಬಾತುಕೊಂಡು ಗಡ್ಡೆಗಟ್ಟಿದ್ದ ರೋಗಿಗಳು ಎಲ್ಲೆಲ್ಲಿಂದಲೋ ಇವಳ ಹತ್ತಿರ ಬರುತ್ತಿದ್ದರು. ಹೊಟ್ಟೆಗಟ್ಟೆ ಯಾವ ಕಾರಣದಿಂದಲೇ ಆಗಿರಲಿ ಮುದುಕಿ ಮಾತ್ರ ಅಡ್ಡಗೈ ಎಂದು ಬಿಡುತ್ತಿತ್ತು. ಅವರನ್ನು ಅಂಗಾತ ಮಲಗಿಸಿ ಹೊಟ್ಟೆಯ ಮೇಲೆ ಸೆಗಣಿ ಕಟ್ಟೆ ಕಟ್ಟಿ ಅದರ ತುಂಬ ನವಿಲುಮೆಟ್ಟು ಸೊಪ್ಪನ್ನು ಸೈಂಧವ ಲವಣದಲ್ಲಿ ಅರೆದು ತುಂಬಿ ಮೇಲೊಂದು

ಬಟ್ಟೆ ಮುಚ್ಚಿ ನಾನು ಬರುವವರೆಗೂ ತೆರೆಯಬೇಡಿರೆಂದು ಹೇಳಿ ಹೊಲಕ್ಕೋ ಮತ್ತೆಲ್ಲಿಗೋ ಹೋಗಿ ಬಿಡುತ್ತಿತ್ತು. ಅರ್ಧ ಗಂಟೆ ಕಳೆಯುತ್ತಿದ್ದಂತೆ ರೋಗಿಯ ಬೊಬ್ಬೆ ಪ್ರಾರಂಭವಾಗುತ್ತಿತ್ತು. ಉರಿ ಉರಿ ಎಂದು ಬಾಯಿ ಬಾಯಿ ಬಡಿದುಕೊಳ್ಳುತ್ತಿದ್ದರು. ಕೆಲವರು ರೋಗವಿದ್ದರೂ ಚಿಂತೆಯಿಲ್ಲವೆಂದು ಹೊಟ್ಟೆಯ ಮೇಲಿನ ಸೆಗಣಿ ಕಟ್ಟೆ ಕಿತ್ತು ಓಡಿ ಹೋದುದನ್ನು ಕಂಡಿದ್ದೆ. ಹ. ರೇಕಾಂಶಿಯಲ್ಲಿ ನಾನು ಈ ಔಷಧ ಮಾಡಲು ಪ್ರಯತ್ನಿಸಿದೆ. ಆದರೆ ಧೈರ್ಯ ಬರಲಿಲ್ಲ. ಬೇಡವೆಂದು ಕೈ ಬಿಟ್ಟೆ. ನವಿಲುಮೆಟ್ಟು ಸೊಪ್ಪು ಅಥವಾ ಪ್ರಚಂಡ ಸೊಪ್ಪು, ಕಂಡಾಗಲೆಲ್ಲ ಸ್ವಲ್ಪ ಹೊತ್ತು ನಿಂತು ನೋಡಿ ಕೈ ಮುಗಿಯುತ್ತಿದ್ದೆ. ನಿನ್ನ ಸಹವಾಸ ಬೇಡಪ್ಪಾ ಎಂದು. ಒಮ್ಮೆ ಯಾರೋ ಹೇಳಿದ್ದು ಕೇಳಿ ಅಶ್ವಗಂಧಾದಿ ಲೇಹ್ಯ ಮಾಡ ಹೋಗಿ ಏಳು ದಿನ ಆಕಳ ಹಾಲಿನಲ್ಲಿ ಆ ಬೇರನ್ನು ಬೇಯಿಸಿ ದುರ್ವಾಸನೆ ಬರುವಂತೆ ಮಾಡಿ ಕೆಡಿಸಿ ತಿಪ್ಪೆಗೆ ಬಿಸಾಡಿದ್ದೂ ಉಂಟು. ಅಂತೂ ಔಷಧ ಮಾಡುವ ಹುಚ್ಚು ನನಗೆ ಇದ್ದೇ ಇತ್ತು ಅನ್ನಿ. ಒಂದೆರಡು ಘಂಟೆ ಅರಣ್ಯದಲ್ಲಿ ತಿರುಗಾಡುತ್ತಿದ್ದ ಹಾಗೆ ನಮ್ಮಿಬ್ಬರಿಗೂ ಹೊಟ್ಟೆ ಚುರ್ರೆಂದು ಹೋಯಿತು. ಧಾವಿಸಿ ಮನೆಗೆ ಬಂದೆವು. ಅಷ್ಟರಲ್ಲಿ ಅಡಿಗೆಯನ್ನು ಸಿದ್ಧಮಾಡಿದ್ದ ಮುದುಕಿ ನಮ್ಮ ದಾರಿಯನ್ನೇ ಕಾಯುತ್ತ ನಿಂತಿತ್ತು. ಆಗೊಮ್ಮೆ ಈಗೊಮ್ಮೆ ಅಪರೂಪವಾಗಿ ಬರುವ ಪ್ರೀತಿಯ ಅಳಿಯನಿಗಾಗಿ ಮುದುಕಿ ಬಹುಸ್ವಾರಸ್ಯಕರ ಅಡಿಗೆ ಮಾಡಿದೆ ಎಂಬುದನ್ನು ಘಮಘಮ ಎನ್ನುವ ವಾಸನೆಯಿಂದಲೇ ಕಂಡುಹಿಡಿದೆವು. ನಾವು ಬಂದು ಊಟಕ್ಕೆ ಅಡಿಗೆಮನೆಯಲ್ಲೆ ಕುಳಿತೆವು. ಇದಕ್ಕೆ ಕಾರಣವೂ ಇತ್ತು. ನಾವು ಊಟಕ್ಕೆ ಕುಳಿತ ಮೇಲೆಯೇ ರೊಟ್ಟಿಯನ್ನು ಸುಟ್ಟು ಬಿಸಿಬಿಸಿ ರೊಟ್ಟಿ ಕೊಡಬೇಕೆಂಬುದೇ ಮುದುಕಿಯ ಉದ್ದೇಶವಾಗಿತ್ತು. ನಮ್ಮ ತಟ್ಟೆಗೆ ಬದನೇಕಾಯಿ ಇಡಿಗಾಯಿ, ನುಗ್ಗೇಕಾಯಿ ಹುಳಿಪಲ್ಯ, ಕಾರದ ಚಟ್ನಿ, ಕರಿಂಡಿ, ಬಿದಿರು ಕಳಲೆ, ಅಮಟೆ, ನೆಲ್ಲಿಕಾಯಿಗಳ ಉಪ್ಪಿನಕಾಯಿ, ಮಾವು ಕಂಚಿಕಾಯಿ ಉಪ್ಪಿನಕಾಯಿ, ಕೆನೆಮೊಸರಿನಿಂದ ತುಂಬಿದ ಪ್ರತ್ಯೇಕ ಬಟ್ಟಲು ಇಟ್ಟು ರೊಟ್ಟಿ ಸುಡತೊಡಗಿತು. ನಿಮಿಷ ನಿಮಿಷಕ್ಕೊಂದು ರೊಟ್ಟಿಯನ್ನು ಬೇಯಿಸಿಕೊಡುತ್ತಿದ್ದ ಮುದುಕಿಯ ಚಾಕಚಕ್ಯತೆ ನಮಗೆ ಆಶ್ಚರ್ಯವನ್ನುಂಟು ಮಾಡುತ್ತಿತ್ತು. ಸಾರು, ಪಲ್ಯ, ಹುಳಿಪಲ್ಯ, ಕಾರದ ಚಟ್ನಿಯ ಸೊಗಸು ಅನ್ವಾದೃಶ. ಆ ಚಟ್ನಿಯನ್ನು ನೋಡಿದರೆ ಮೈ ಉರಿ ಬರುವಷ್ಟು ಕೆಂಪು. ಬಾಯಲ್ಲಿ ಷಡ್ರಸೋಪೇತವಾಗಿತ್ತು. ಆ ಹದ ಎಲ್ಲ ಹೆಂಗಸರಿಗೂ ಬರುವುದಿಲ್ಲ. ಈ ಮುದುಕಿ ಮಾಡಿದ ಸಾರು, ಹುಳಿಪಲ್ಲೆ, ಚಟ್ನಿ, ಉಪ್ಪಿನಕಾಯಿಗಳ ರುಚಿಕಟ್ಟುಗಳಿಗೆ ತಲೆದೂಗುತ್ತ ಈರುಳ್ಳಿ ಪೊರೆಯಂತಹ ಆರೇಳು ರೊಟ್ಟಿಗಳನ್ನು ಒಬ್ಬೊಬ್ಬರೂ ಆಗೆದುಬಿಟ್ಟೆವು. ನಾಲಿಗೆ ಚಪ್ಪರಿಸುತ್ತ ಎಲ್ಲ ಪರಿಕರಗಳೊಡನೆ ಆರೇಳು ರೊಟ್ಟಿ ತಿನ್ನುತ್ತಿದ್ದಾಗ ಆ ರುಚಿಗೆ ಮಾರುಹೋಗಿ ನಮ್ಮನ್ನೇ ನಾವು ಮರೆತುಬಿಟ್ಟೆವು. ಈ ನೆನಪು ಎಂದೂ ಉಳಿಯುವಂತಹುದು. ಆಮೇಲೆ ಕರಿದಡಿ ಮುಳ್ಳುಬತ್ತದ ಮಲ್ಲಿಗೆ ಹೂವಿನಂತಹ ಅನ್ನಸಾರು, ಅನ್ನಮೊಸರು ಊಟವಂತೂ ಅಪ್ಯಾಯಮಾನವಾಗಿತ್ತು. ಆಗ ಮಲೆನಾಡಿನವರು ಕರಿಪಡಿಮುಳ್ಳುಬತ್ತ ಎಂಬ ಜವಾರಿ ಜಾತಿಯ ಬತ್ತ ಹೆಚ್ಚಾಗಿ ಬೆಳೆಯುತ್ತಿದ್ದರು. ಆ ಬತ್ತದ ಅಕ್ಕಿ ಸ್ವಲ್ಪ ದಪ್ಪ ಮತ್ತು ಉದ್ದ. ಅಕ್ಕಿ ನುಚ್ಚಾಗುವುದೂ ಕಡಿಮೆ. ಇದರ ಅನ್ನ ಮಾತ್ರ ಬಹು ಮೃದು ಮತ್ತು ರುಚಿಕಟ್ಟು. ಈಗ ಅದನ್ನು ಬೆಳೆಯುತ್ತಿಲ್ಲ. ಇದರ ಇಳುವರಿ ಕಡಿಮೆಯಂತೆ. ಒಳ್ಳೆಯ ಫಲದ ಇಳುವರಿ ಯಾವಾಗಲೂ ಕಡಿಮೆಯೇ ತಾನೆ. ಹುಳಿ ಮಾವಿನ ಮರ ಎಲೆಗೊಂದು ಕಾಯಿ ಬಿಟ್ಟಂತೆ ಒಳ್ಳೇ ಕೊಬರಿ ಮಾವಿನ ಮರದಲ್ಲಿ ಕಾಯಿಗಳಿರುತ್ತವೆಯೇ? ನೀವೇ ಹೇಳಿ.

ಲೋಕದಲ್ಲಿ ಒಳ್ಳೆಯದೆನ್ನುವುದು ಏನುಂಟೋ ಅದೆಲ್ಲ ಕಡಿಮೆಯೇ. ಕೆಟ್ಟದ್ದು ಹುಲುಸಾಗಿ ಬೆಳೆಯುವಂತೆ ಒಳ್ಳೆಯದರ ಹುಲುಸು ಕಡಿಮೆ. ಕರಿದಡಿ ಮುಳ್ಳುಬತ್ತಕ್ಕೂ ಇದೇ ಗತಿಯಾಗಿತ್ತು ಮಲೆನಾಡಿನಲ್ಲಿ. ಈಗ ಅಂಥ ಒಳ್ಳೆ ಬತ್ತದ ಬದಲಾಗಿ ಅಧಿಕ ಇಳುವರಿಯ ಹೈಬ್ರಿಡ್ ತಳಿಗಳು ಬಂದು ಬಿಟ್ಟವು. ಇದರ ಅನ್ನ ಉಂಡುಂಡು ಮಲೆನಾಡಿನ ಜನ ನರಪೇತಲ ನಾರಾಯಣರಾಗಿ ಹೋಗಿದ್ದಾರೆ. ಬೈಲು ಸೀಮೆಯಲ್ಲೂ ಅಷ್ಟೆ. ಹೈಬ್ರಿಡ್ ಜೋಳ, ಗೋಧಿ ಬಂತು. ಅಲ್ಲಿಯ ತರತರ ಆಹಾರದ ವೈಭವವೂ ಮೂಲೆಗುಂಪಾಗಿ ಹೋಯಿತು. ಹೈಬ್ರಿಡ್ ಜೋಳದ ರೊಟ್ಟಿ, ಗೋದಿಯ ರೊಟ್ಟಿ, ಅಂಬಲಿ ಉಂಡ ಜನರು, ಅದರ ಮೇವು ತಿಂದ ದನದ ಗತಿ ದೇವರಿಗೇ ಪ್ರೀತಿ. ಒಳ್ಳೇ ಗೋದಿ ತಳಿಯ ಸೇವನೆ ಎಲ್ಲೋ ಅಡಗಿತು. ಅಂತೂ ನಮ್ಮನಾಡಿನ ಆಹಾರ ಸತ್ವ ಅಡವಿ ಸೇರಿಹೋಯಿತು ಎನ್ನಿಸುತ್ತದೆ ನನಗೆ. ಕರಿದಡಿಮುಳ್ಳುಬತ್ತ ನಾಶವಾದದ್ದೂ ಒಂದು ದೊಡ್ಡ ಹಾನಿಯೆನಿಸುತ್ತದೆ. ಈ ಬತ್ತಕ್ಕೆ ನೀರೂ ಕೂಡ ಸಮೃದ್ಧವಾಗಿ ಇರಬೇಕಂತೆ. ಸಮೃದ್ಧವಾದ ನೀರಿನ ಅಭಾವದಿಂದ ಮತ್ತು ಕಡಿಮೆ ಇಳುವರಿ ಕಾರಣವಾಗಿ ಈಗ ಇದನ್ನು ಬಿತ್ತುವುದನ್ನೇ ಕೈಬಿಟ್ಟಿದ್ದರಿಂದ ಇದರ ಬೀಜ ಕೂಡ ಈಗ ಸಿಗುವುದು ಅಪರೂಪವಾಗಿದೆ. ಇನ್ನೂ ಕೆಲವು ದಿನಗಳ ನಂತರ ಈ ತಳಿಯ ಹೆಸರು ಕೇವಲ ಹಿಂದಿನ ಬರವಣಿಗೆಗಳಲ್ಲಿ ಸಿಗಬಹುದೇ ವಿನಾ ನೋಡಲು ಮಾತ್ರ ಅಪರೂಪವಾಗಿ ಹೋಗಿ ಬಿಡುತ್ತದೆ. 'ಗಂಧಸಾಲಿ' ಬತ್ತದ ರಾಶಿಯೂ ಹೀಗೆಯೇ ಆಗಿದೆ. ಇದರ ಇಳುವರಿಯೂ ಬಹಳ ಕಡಿಮೆ. ಆದ್ದರಿಂದ ಇದನ್ನು ಕೂಡ ಯಾರೂ ಈಗ ಬೆಳೆಯುತ್ತಿಲ್ಲ. ಪಂಪ, ಷಡಕ್ಷರಿ, ಹರಿಹರ ಮೊದಲಾದ ಕವಿಗಳ ಕಾವ್ಯಗಳಲ್ಲಿ ಮೂಡಿರುವ ಇವುಗಳ ವರ್ಣನೆಗಳಿಂದ ನಾಲಗೆ ಚಪ್ಪರಿಸುವ ಚಪಲ ತೀರಿಸಿಕೊಂಡು ಹಿಂದೆ ನಮ್ಮನಾಡು ಹಾಗಿತ್ತು, ಹೀಗಿತ್ತು ಎಂದು ಭಾಷಣ ಬಿಗಿಯುವಷ್ಟರ ಮಟ್ಟಿಗೆ ನಾವು ಆಗುತ್ತೇವೆ ವಿನಾ ಅನುಭವಿಸುವ ಮಾತು ದೂರೇ ಉಳಿಯಿತು. ಅನುಭವವಾದರೂ ಏಕೆ ಬೇಕು? ನಾವೆಲ್ಲ ಮಾತಿನ ಮಲ್ಲರು ತಾನೆ? ಮಾತಾಡಿ ಕೇಳುವವರ ಬಾಯಲ್ಲೂ ನೀರು ತರಿಸಿದರೆ ಸಾಕಲ್ಲವೆ? ಈಗ ನಾವು ಮಾಡುತ್ತಿರುವುದು ಅದೇ ಕೆಲಸವನ್ನು. ನಮ್ಮ ಹಿಂದಿನ ವೈಭವವನ್ನು ಹೇಳುವುದು, ಕೇಳುವುದು ಒಂದು ಫ್ಯಾಷನ್ ಆಗಿದೆ. ನಾವು ಮಾತ್ರ........?

-

ಹೋಗಲಿ ಬಿಡಿ ದಶರಥಕೊಪ್ಪದ ನಮ್ಮ ಗಿಣಿಮಾಲ ಈರಪ್ಪನ ಅತ್ತೆಯ ಕೈಯ ಏಭೋಗದ ಊಟ ಮುಗಿಸಿಕೊಂಡು ಹಿರೇಕಾಂಶಿಗೆ ಬಂದ ನನಗೆ ಅನೇಕ ದಿನಗಳು ಆ ಊಟದ ರುಚಿಯ ನೆನಪು ಹಾರಲೇ ಇಲ್ಲ. ಪುನಃ ಪುನಃ ಅಲ್ಲಿಗೆ ಹೋಗಿಬರಬೇಕೆಂಬ ಬಯಕೆ ಮನದಲ್ಲಿ ಮೊಳೆಯುತ್ತಿತ್ತಾದರೂ ಆ ಬಯಕೆ ಕೈಗೂಡಲು ಹೇಗೆ ಸಾಧ್ಯ? ಅತಿ ಪರಿಚಯಾತ್ ಅವಜ್ಞಾ ಅಲ್ಲವೆ?

ಈರಪ್ಪನೊಡನೆ ಮಲೆನಾಡಿನ ಅರಣ್ಯ ತಿರುಗಾಟದ ನನ್ನ ಚಟ ಇಷ್ಟಕ್ಕೇ ಮುಗಿಯಲಿಲ್ಲ. ಹಿರೇಕಾಂಶಿಯಲ್ಲಿ ನಾನಿದ್ದ ಅವಧಿಯಲ್ಲಿ ಮತ್ತೆ ಎಷ್ಟೋ ಸಲ ತಿರುಗಿದ್ದೇನೆ. ನಾನಾ ರೀತಿಯ ಅನುಭವ ನನಗೆ ಆಗಿದೆ. ಮಾವಿನಕಾಯಿ ಇಳುಹುವ ಸುಗ್ಗಿ ಬಂದಾಗ ಈರಪ್ಪ ಕೈಯಲ್ಲಿ ಕಾಯಿ ಇಳುಹುವ ಕಲ್ಲಿಯನ್ನು ಹೆಗಲ ಮೇಲೆರಡು ಚೀಲ ಹಾಕಿಕೊಂಡು ಹೊರಟನೆಂದರೆ ಏಳೆಂಟು ಬಗೆಯ ಮಾವಿನಕಾಯಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ತಂದು ಮನೆಯಲ್ಲಿ ಒತ್ತಿ ಹಾಕುತ್ತಿದ್ದ. ಅವರ ಮನೆ ಅಟ್ಟ ಆ ಸುಗ್ಗಿಯಲ್ಲಿ ಹತ್ತಾರು ಬಗೆಗೆ ವಿವಿಧ ರುಚಿಯ, ವಿವಿಧ ವಾಸನೆಯ

ಮಾವಿನ ಹಣ್ಣಿನಿಂದ ಘಮಘಮಿಸುತ್ತಿತ್ತು. ಊಟಕ್ಕೆ ಕುಳಿತಾಗ ಎಡಗಡೆ ಭಾಗದಲ್ಲಿ ಒಂದು ಚಿಕ್ಕ ಬಿದಿರು ಬುಟ್ಟಿಯಲ್ಲಿ ಏಳೆಂಟು ಬಗೆಯ ಮಾವಿನ ಹಣ್ಣನ್ನು ಇಡುತ್ತಿದ್ದುದು ಇಂದಿಗೂ ಜ್ಞಾಪಕ. ಎರಡು ಮೂರು ತುತ್ತು ಅನ್ನವನ್ನು ನುಂಗಿ ಒಂದೊಂದೇ ಬಗೆಯ ಹಣ್ಣನ್ನು ಸೀಪಿ, ಓಟೆಯ ಮೇಲಿನ ತಿರುಳನ್ನು ಹೀರಬೇಕು. ಅದೊಂದು ಬಗೆಯ ಸೊಗಸಿನ ಊಟವೇ ಆಗುತ್ತಿತ್ತು ನನಗೆ. ಒಂದು ಹಣ್ಣು ಮಿಶ್ರ ಮಧುರವಾದರೆ, ಇನ್ನೊಂದು ಅನಿರ್ವಾಚ್ಯ ಮಾಧುರ್ಯದ್ದು; ಮಗುದೊಂದು ಜೀರಿಗೆ ವಾಸನೆಯನ್ನು ಬೀರುತ್ತ ನಾಲಗೆಯ ಚಾಪಲ್ಯವನ್ನು ನಿವಾರಿಸುವಂತಹದು, ಮತ್ತೊಂದು ಹಲ್ಲುಗಳ ಸಂದಿಯಲ್ಲೆಲ್ಲ ನಾರು ತುಂಬಿದರೂ ಜೇನಿನ ಮಾಧುರ್ಯದ್ದು. ಇನ್ನೊಂದು ಆಹ್ಲಾದಕರ ರಸದ ರುಚಿಯುಳ್ಳದ್ದು. ಊಟ ಮುಗಿಯುವ ಹೊತ್ತಿಗೆ ಏಳೆಂಟು ಹಣ್ಣಾದರೂ ಹೊಟ್ಟೆ ಸೇರಿ ಹೋಗುತ್ತಿದ್ದವು. ಆಗ ಮಾವಿನ ಫಸಲಿಗೆ ಬರವಿರಲಿಲ್ಲ. ತಿನ್ನುವವರಿಗೇ ಬರವಿತ್ತು. ಎಷ್ಟೋ ಮಾಮರಗಳ ಕಾಯಿ ನೆಲಕ್ಕೆ ಬಿದ್ದು ಹಾಳಾಗುತ್ತಿದ್ದವು.

ಒಂದು ಸಲ ಮಾವಿನಕಾಯಿ ತರಲು ಈರಪ್ಪ ಗಾಡಿಕಟ್ಟಿಕೊಂಡು ಅರಣ್ಯಕ್ಕೆ ನನ್ನನ್ನೂ ಜೊತೆಗೆ ಕರೆದುಕೊಂಡು ಹೊರಟ. ಸಮೃದ್ಧವಾಗಿ ಮಾವಿನಕಾಯಿಗಳಿರುವ ಗಿಡಮರಗಳು ಎಲ್ಲಿವೆಯೆಂಬುದನ್ನು ಅವನು ಸರ್ವೇ ಮಾಡಿದ್ದ ಮನುಷ್ಯ. ಗಿಡಗಳು ಯಾರವೇ ಆಗಿರಲಿ ಅವರನ್ನು ಕೇಳಿ ಕಾಯಿ ತಂದು ಮನೆಯಲ್ಲಿ ಒತ್ತಿಹಾಕಿ ಒಂದೆರಡು ತಿಂಗಳು ಮನೆಮಂದಿಗೆಲ್ಲ ಸಮೃದ್ಧ ಹಣ್ಣು ಒದಗಿಸುವುದರಲ್ಲಿ ಈರಪ್ಪ ನಿಪುಣ. ಒಳ್ಳೆಯ ಗೃಹಸ್ಥ ಆತ.

ವಿಶಾಲವಾಗಿ ಹರಡಿ, ಭವ್ಯವಾಗಿ ದಿವ್ಯವಾಗಿ ಬೆಳೆದುನಿಂತ ಆ ಮಾವಿನ ಮರವಿರುವ ಸ್ಥಳಕ್ಕೆ ಬಂದೆವು. ನಾನಂತೂ ಆ ಮರಗಳನ್ನು ಕಂಡು ಕಂಡು ಮೈಮರೆತು ನಿಂತೆ. ಸೌಂದರ್ಯವನ್ನು ಕಂಡು ಅನುಭವಿಸುವುದಕ್ಕೂ ಪುಣ್ಯಬೇಕು. ನಾನು ಮಾವಿನ ಮರ ಕಾಣದವನೇನೂ ಅಲ್ಲ, ಕಂಡಿದ್ದೆ. ಭವ್ಯವಾದ, ದಿವ್ಯವಾದ ಸಮೃದ್ಧ ಫಲಭರಿತ ಮರ ಕಂಡದ್ದು ಈಗಲೇ. ಕವಿ ಕಲ್ಪನೆಯ ಭವ್ಯವಾದ ಮಾವಿನ ಮರಗಳನ್ನು ಕಾವ್ಯದಲ್ಲಿನ ವರ್ಣನೆಗಳಲ್ಲಿ ಕಂಡಿದ್ದೆ. ಷಡಕ್ಷರಿಯ ಶಬರ ಶಂಕರ ವಿಳಾಸದಲ್ಲಿ ಬರುವ ಋಷಿಗಳ ತಪೋವನದಲ್ಲಿನ ಮಾಮರಗಳ ಸೊಗಸಾದ ವರ್ಣನೆ ನನ್ನ ಹೃನ್ಮಂದಿರದಲ್ಲಿ ಉಳಿದಿದ್ದವೇ ವಿನಾ ಪ್ರತ್ಯಕ್ಷವಾಗಿ ಅಂಥ ಭವ್ಯಮರಗಳನ್ನು ಕಾಣುವ ಸೌಭಾಗ್ಯ ಸಂಪೂರ್ಣವಾಗಿದ್ದಿಲ್ಲ. ಈ ಅರಣ್ಯ ಪ್ರವಾಸದಲ್ಲಿ ಅದು ಪೂರ್ಣಗೊಂಡಿತು. ಹಿಂದಿನ ಋಷಿಗಳು ಅರಣ್ಯದಲ್ಲಿ ತಾವು ವರ್ಣನೆ ಮಾಡಿದಂಥ ಮಾಮರಗಳಿದ್ದವೋ ಅಥವಾ ಷಡಕ್ಷರಿ ತಾನು ನೋಡಿ ಅನುಭವಿಸಿದ್ದ ನಾಡಿನಲ್ಲಿನ ಮಾಮರದ ಸೊಗಸಿನ ಅನುಭವವೇ ಕಾವ್ಯವಾಗಿ ಹೊರಹೊಮ್ಮಿತ್ತೋ ದೇವರೇ ಬಲ್ಲ ಎನ್ನುವಂತೆ ಇತ್ತು. ಬಹುಶಃ ಷಡಕ್ಷರಿಯ ಅನುಭವವೇ ಇದಾಗಿರಬೇಕೆಂದು ಈಗ ಊಹಿಸುತ್ತೇನೆ. ಅವನು ಕೆಳದಿ ಅರಸರ ಆಹ್ವಾನದ ಮೇರೆಗೆ ಕೆಳದಿಗೆ ಬಂದು ಅನೇಕ ದಿನ ಇದ್ದು ಆ ನಾಡಿನ ಸಮೃದ್ಧ ಮಾಮರಗಳನ್ನು ಕಂಡವನು. ಆತನು ಹುಟ್ಟಿ ಬೆಳೆದ ದನಗೂರು, ಎಳಂದೂರು ಭೂಭಾಗವೂ ಸಮೃದ್ಧವಾದ ಮಾಮರಗಳ ಆಗರವೇ ಆಗಿತ್ತಲ್ಲವೇ? ಅಲ್ಲಿನ ವಿವಿಧ ಹಣ್ಣಿನ ರುಚಿಗಂಡವನು, ಮರಗಳ ವೈಭವ ಕಂಡವನು ಅನುಭವವೇ ಕಾವ್ಯವಾಗಿ ಹೊರಹೊಮ್ಮಿದ್ದಾಗ ಆಸ್ವಾದನ ಯೋಗ್ಯ ಕಾವ್ಯರಸ ಸಿಗುತ್ತದೆ. ಅನುಭವವೇ ಇಲ್ಲದ ಕಾವ್ಯರಸದಲ್ಲಿ ಸೊಗಸು ಸಿಗುವುದಿಲ್ಲ. ಅಲ್ಲಿ ಕೃತಕತೆ ಬೇಸರಗೊಳಿಸಿ ಸಾಕಪ್ಪ ಈ ಪೆದಸು ಮಾತು ಎನ್ನಿಸುತ್ತದೆ. ಒಮ್ಮೊಮ್ಮೆ ಇರುವ ಮರಗಳಿಗಿಂತ ಇರಬೇಕಾದ ಮರದ ಬಗ್ಗೆ ಕವಿ ಹೇಳುವುದೂ ಉಂಟು. ಭೂಮಿಯಿಂದ ಹತ್ತು ಹದಿನೈದಡಿ ಎತ್ತರವಾಗಿ

ನೆಗೆದು ನಿಂತ ದಪ್ಪನಾದ ಕಾಂಡ, ಅದರಿಂದ ಮೇಲೆದ್ದ ಹತ್ತು ಹನ್ನೆರಡು ತೋರ ಕೊಂಬೆಗಳು, ಆ ಕೊಂಬೆಗೆ ರೆಂಬೆಗಳು, ರೆಂಬೆಗೆ ಟಿಸಿಲುಗಳು, ಬಿಸಿಲಿನ ಮುಂದೆ ಸಮೃದ್ಧವಾಗಿ ತುಂಬಿದ ಹಸುರೆಲೆಗಳ ಕುಚ್ಚು, ಆ ಕುಚ್ಚುಗಳ ಮಧ್ಯದಲ್ಲಿ ಅಡಗಿ ನಿಂತ ಮಾವಿನಕಾಯಿ ದೋರೆಹಣ್ಣುಗಳನ್ನುಳ್ಳ ಭವ್ಯ ಮಾವಿನ ಮರಗಳನ್ನು ನಾನು ನೋಡುತ್ತ ಹುಚ್ಚನಾಗಿ ಬಿಡುತ್ತಿದ್ದೆ.

"ನನ್ನ ಕೋಗಿಲೆಗಳ ಕಂಠವನ್ನು ಚಿಗುರಿನ ರಸದಿಂದ ಕಳಕಂಠಗಳನ್ನಾಗಿ ಈ ಮಾಮರ ಮಾಡಿತು; ರಸಭರಿತ ಹಣ್ಣುಗಳಿಂದ ನನ್ನ ಸೈನ್ಯವಾದ ಗಿಳಿಗಳನ್ನೂ ತೃಪ್ತಿಪಡಿಸಿ ಮಂಜುಳ ಮಧುರೋಕ್ತಿಗಳನ್ನುಂಟು ಮಾಡಿತು; ಹೂಗಳಿಂದ ನನ್ನ ದುಂಬಿಗಳನ್ನು ತೃಪ್ತಪಡಿಸಿತು; ಎಲ್ಲಕ್ಕೂ ಹೆಚ್ಚಾಗಿ ತನ್ನ ಚಿಗುರೆಲೆಗಳನ್ನು ನನ್ನ ಬಾಣಗಳನ್ನಾಗಿಸಿಕೊಂಡು ಮನಸ್ಥನು ಭವ್ಯವಾದ ಮಾಮರಗಳ್ನು ನಿರೀಕ್ಷಿಸುತ್ತಿದ್ದನಂತೆ. ನಾನೂ ತನ್ಮಯನಾಗಿ ಏನೇನೋ ಚಿಂತೆ ಮಾಡುತ್ತ ನಿಂತು ಬಿಡುತ್ತಿದ್ದೆ. ಈರಪ್ಪ ಕೂಗಿ "ಮಾಸ್ತರ, ಈ ಹಣ್ಣು ತಿನ್ನಿ ಜೀರಿಗೆಮಾವು; ಬಹಳ ರುಚಿ" ಎಂದು ಮಾಮರದ ಮೇಲಿಂದ ದೋರೆಹಣ್ಣು ಬಿಸಾಡಿದಾಗಲೇ ನನಗೆ ಎಚ್ಚರ ಬರುತ್ತಿತ್ತು. ಹಣ್ಣಿನಲ್ಲಿನ ಹುಳಿ ಪೂರ್ಣವಾಗಿ ಮಧುರಗೊಳ್ಳದ ದೋರೆಹಣ್ಣುಗಳದ್ದೂ ಒಂದು ಸೊಗಸೇ. ಮಧುರಾಮ್ಲದ ಮಿಶ್ರ ಕೆಲವರಿಗೆ ಹಿತವೂ ಆದೀತು. ನಾನು ಮುಖವನ್ನು ಅರ್ಧಮರ್ಧ ಸೊಟ್ಟ ಮಾಡಿಕೊಂಡು ಆ ದೋರೆ ಹಣ್ಣನ್ನು ಸೀಪಿ ಬಿಸಾಡುತ್ತಿದ್ದೆ. ನನಗೆ ಮಧುರಾಮ್ಲ ಮೇಲೆ ಪ್ರೀತಿ ಹೆಚ್ಚು. ಬಾಲ್ಯದಲ್ಲಿ ಹುಣಿಸೇಹಣ್ಣಿನ ಚಿಗಳಿ ತಿನ್ನುತ್ತ ಸಂತೋಷ ಪಡುತ್ತಿದ್ದವನಲ್ಲವೇ? ಹುಣಸೀಕಾಯಿಯನ್ನು ಉಪ್ಪುಕಾರ ಹಚ್ಚಿಕೊಂಡು ಹಲ್ಲು ಚಳಿತರೂ ಬಿಡದೆ ಮುಖ ಸೊಟ್ಟ ಮಾಡಿಕೊಂಡು ತಿಂದ ನನಗೆ ಹುಳಿಯ ಮೇಲೂ ಅಧಿಕ ಪ್ರೀತಿಯಿತ್ತು. ಮನುಷ್ಯರಸವೇ ಷಡ್ರಸಾತ್ಮಕ ಅಲ್ಲವೆ? ಅದಕ್ಕಾಗಿಯೇ ಕೆಲವರಿಗೆ ಕೆಲವು ರಸಗಳ ಮೇಲೆ ಪ್ರೀತಿ ಅಧಿಕ. ಆದರೆ ಬಹಳ ಜನ ಮಧುರಕ್ಕೆ ಬಾಯಿ ಬಾಯಿ ಬಿಡುವಂತೆ ತಿಕ್ತ, ಕಟುಗಳಿಗೆ ಬಾಯಿ ಬಿಡುವುದಿಲ್ಲ. ಅದಿಲ್ಲದೆ ಆಗುವುದೂ ಇಲ್ಲ. ಸೃಷ್ಟಿ ತನ್ನ ಗರ್ಭದಲ್ಲಿ ಈ ಷಡ್ರಸಗಳನ್ನು ವಿವಿಧ ಸಸ್ಯಗಳಿಗೆ ಹಂಚಿದೆ. ಕೆಲವಕ್ಕೆ ಮಧುರ ರಸವನ್ನು ಹೆಚ್ಚು ಇಟ್ಟಿದ್ದಾನೆ. ಮಧುರ ಒಗರು, ಹುಳಿಗಳಿಂದ ಮಾರ್ಪಡಿಸಿದ ಮಾಮರ ಮೂರು ರಸಗಳ ತೌರು. ಅಂತೆಯೇ ಲೋಕ ಅದಕ್ಕಾಗಿ ಬಾಯಿ ಬಾಯಿ ಬಿಡುತ್ತ ವರ್ಣಿಸಿಬಿಟ್ಟಿದೆ. ಮತ್ತೆ ಏನೇನೋ ಯೋಚನೆಗೆ ತೊಡಗುತ್ತಿದ್ದೆ. ಮಾಮರದ ಸೊಗಸನ್ನು ನೂರ್ಮಡಿ ಸಾಸಿರ್ಮಡಿಗೊಳಿಸುವಲ್ಲಿ ಸುತ್ತಮುತ್ತಣ ಪ್ರಕೃತಿ ಪರಿಸರದ ರಮ್ಯತೆಯ ಪಾಲೂ ಅಧಿಕವಾಗಿತ್ತು ಆ ಅರಣ್ಯದಲ್ಲಿ. ಕೆಲ ಮಾವಿನ ಮರಗಳು ಕಾಯಿಕಸರು ಏನೂ ಇಲ್ಲದೆ ಸಮೃದ್ಧವಾಗಿ ಚಿಗಿತು ದಟ್ಟವಾದ ನೆಳಲನ್ನು ನೆಲಕ್ಕೆ ಚೆಲ್ಲಿ, ತಾಮ್ರವರ್ಣದಿಂದ ಕಂಗೊಳಿಸುತ್ತಿದ್ದುದೂ ಒಂದು ಅನೂಹ್ಯ ಸೌಂದರ್ಯದ ರಾಶಿಯಾಗೇ ನನ್ನ ಕಣ್ಣಿಗೆ ಕಾಣುತ್ತಿತ್ತು. ಆ ನೆಳಲಲ್ಲಿ ಕುಳಿತಾಗ ತಾಯಿಯ ವಾತ್ಸಲ್ಯಭರಿತ ತೊಡೆಯ ಮೇಲೆ ಕುಳಿತು ಪೋಷಣೆಗೊಳಗಾದ ಮಗುವಿನಂತಾಗಿಬಿಡುತ್ತಿದ್ದೆ. ಚಿಗಿತು ಮೈ ತುಂಬ ಹೂಬಿಟ್ಟು ನಿಂತ ಕಾಡು ಮೆಲ್ಲನೆ ಹೂವಿನ ನರುಗಂಪನ್ನು ಹೊತ್ತು ಮೈಮೇಲೆ ಹಾದು ಹೋಗುತ್ತಿದ್ದ ಚಂಡಮಾರುತ, ಗೊಂಚಲು ಗೊಂಚಲು ಹೂಬಿಟ್ಟು ತನ್ನದೇ ಆದ ನರುಗಂಪಿನಿಂದ ಮಾಡಿದ ಸುಗಂಧ ಬೀರುತ್ತಿದ್ದ ಗೊರವಿ ಗಿಡಗಳ ಮನಮೋಹಕ ನೋಟ, ಹಳೆ ಎಲೆಗಳನ್ನೆಲ್ಲ ಉದುರಿಸಿ ಚಿಗುರ್ಗೊಂಡು ಸುಗಂಧಕ್ಕೆ ಕಾಡಿನಲ್ಲೆಲ್ಲ ಹೆಸರುವಾಸಿಯಾಗಿ ಶೋಭಿಸುವ ಸುರಗಿ ಮರಗಳ ಸೊಬಗಿನ ಸೂರೆ, ಮೈತುಂಬ ಸಣ್ಣ ಸಣ್ಣ ಚಿಗುರೆಲೆಗಳ ಮಧ್ಯದಲ್ಲಿ ಕೆಂಡದಂತೆ ಕಾಣುವ ಹೂಗೊಂಚಲು ಹೊತ್ತು ನಿಂತ ಮುತ್ತುಗದ

ಭವ್ಯ ಸೊಬಗು, ನೆಲದಿಂದ ಏಳೆಂಟು ಆಳುಗಳೆತ್ತರಕ್ಕೆ ನೇರವಾಗಿ ಮುಳ್ಳಿಡಿದ ಕಾಂಡದಿಂದ ಕೂಡಿ ವನಲಕ್ಷ್ಮಿಯ ರಕ್ಷಕನೋ ಎನ್ನುವಂತೆ ತಲೆಯೆತ್ತಿ ಎದ್ದುನಿಂತು ಹೂಬಿಟ್ಟು ರಂಜಿಸುತ್ತಿರುವ ಭೂರುಗ (ಶಾಲ್ಮಲೀ) ಮರಗಳ ಸೌಂದರ್ಯ, ಅನತಿ ದೂರದಲ್ಲಿ ಗದ್ದೆಯ ಹುದಿಗಳಲ್ಲಿ ಗುಂಪುಗುಂಪಾಗಿ ಸೊಂಪಾಗಿ ಬೆಳೆದು ನಿಂತ ಹೊಂಗೆ ಮರಗಳ ಸಮೂಹದ ಸೊಬಗು, ಹೂವಿಂದ ಹೂವಿಗೆ ಹಾರಿ ಮಕರಂದವನ್ನು ಹೀರುತ್ತ ಹಾರಾಡುತ್ತಿರುವ ಜೇನ್ದುಂಬಿಗಳ ಅವ್ಯಕ್ತ ಮಧುರ ಝೇಂಕಾರನಿನಾದ, ಆಗೊಮ್ಮೆ ಈಗೊಮ್ಮೆ ಅರಣ್ಯ ಮಧ್ಯದಲ್ಲಿ ಸಂತಸಗೊಂಡು ಕೂಗಾಡುತ್ತಿದ್ದ ನವಿಲಿನ ಕೇಕೆ, ಕೋಗಿಲೆಯ ಕಳಸ್ವರ, ಕ್ಷಣಾಕ್ಷಣಕ್ಕೂ ಚೀತ್ಕಾರ ಮಾಡುತ್ತ ಮಾವಿನ ಮರಕ್ಕೆ ಹಿಂಡುಹಿಂಡಾಗಿ ಬಂದು ಮುತ್ತಿಗೆ ಹಾಕುತ್ತಿದ್ದ ಗಿಳಿವಿಂಡು, ಗಿಡಮರಕ್ಕಡರಿ ಬೆಳೆದಿದ್ದ ಲತೆಗಳು ಸುಯ್‌ಗಾಳಿಗೆ ಬಳುಕಾಡುವ ರಮಣೀಯತೆ. ಈ ಎಲ್ಲ ಸನ್ನಿವೇಶಗಳು ಮಾಮರದ ಸೌಂದರ್ಯಾಧಿಕ್ಯಕ್ಕೆ ಸಹಕಾರಿಯಾಗಿದ್ದುದನ್ನು ನಾನು ಮೈಮರೆತು ನನ್ನ ಕಣ್ಣು ಪುಣ್ಯ ಮಾಡಿದವುಗಳೆಂದು ಮನದಲ್ಲಿಯೇ ಅನ್ನುತ್ತ ಅನುಭವಿಸುತ್ತಿದ್ದ ಸಮಯದಲ್ಲಿ ಈರಪ್ಪ ಗಿಡದಿಂದ ಗಿಡಕ್ಕೆ ಹರಿದಾಡಿ ಕಾಯಿ ಸಂಗ್ರಹಿಸುವ ಕಾರ್ಯದಲ್ಲಿ ಮಗ್ನನಾಗಿ ಒಳ್ಳೆ ಜಾತಿಯ ಮಾವಿನ ಹಣ್ಣು ಸಿಕ್ಕಾಗ "ಮಾಸ್ತರೇ, ಓಡಿಬನ್ನಿ! ಈ ಹಣ್ಣು ತಿನ್ನಿ. ಇದೇ ಕೊಬರಿಮಾವು, ಇದು ಮಗಿ ಮಾವು, ಇದು ಸೀಮಾವು, ಇದು ಗಿಣಿಕಚ್ಚಿದ್ದ ಹಣ್ಣು ಇದು ಗುಂಗಿಮಾವು....."ಇತ್ಯಾದಿ ಹೇಳುತ್ತ ಕರೆದು ಕೈಗೆತ್ತಿಟ್ಟಾಗ ಸಮಾಧಿಯಿಂದ ಎಚ್ಚರಗೊಂಡವನಂತೆ ಓಡಿ ಹೋಗಿ ಅವನು ಕೊಟ್ಟ ಹಣ್ಣು ತಿನ್ನುವುದರಲ್ಲಿ ಮಗ್ನನಾಗಿಬಿಡುತ್ತಿದ್ದೆ. 'ಈ ಹಣ್ಣು ಕೊಳ್ಳಿ, ಇದರ ರುಚಿಯ ಮುಂದೆ, ಈಗ ಕಸಿಮಾವು ಆ ಮಾವು ಈ ಮಾವು ಅಂತಾರಲ್ಲ! ಆ ಹಣ್ಣುಗಳನ್ನು ಇಳಿ ತೆಗೆದು ಎಸೆಯಬೇಕು ನಾಲ್ಕು ದಾರಿ ಕೂಡಿದಲ್ಲಿ" ಎನ್ನುತ್ತ, ಒಳ್ಳೊಳ್ಳೆ ರಸಭರಿತ ಹಣ್ಣು ಕೊಡುತ್ತಿದ್ದ. 'ಈ ಹಣ್ಣು ತಿನ್ನಿ! ಈ ಒಂದು ಹಣ್ಣಿನ ರುಚಿಗೆ ನೂರು 'ಮಲಗೋಬಾ' ಸರಿ ಬಾರದು' ಎನ್ನುತ್ತಿದ್ದ. 'ನಡಿರಿ ಇವತ್ತಿಗೆ ಸಾಕು. ಇವನ್ನೆಲ್ಲ ಒತ್ತೆಹಾಕಿ ಹಣ್ಣು ಮಾಡಿ ಕೊಡುತ್ತೇನೆ. ಆಗ ನೋಡುತೀರಿ ಇದರ ರುಚಿಕಟ್ಟು ಎಂಥಾದ್ದು ಅನ್ನೋದನ್ನ' ಎಂದು ಎರಡು ಮೂರು ಸಾವಿರ ಕಾಯಿಗಳನ್ನು ಚೀಲದಲ್ಲಿ ತುಂಬಿ ಗಾಡಿಯಲ್ಲಿಟ್ಟು ಕಾಡಿನಿಂದ ನಾಡಿನ ದಾರಿ ಹಿಡಿಯುತ್ತಿದ್ದ. ಬಿಡಲಾರದ ಮನಸ್ಸಿನಿಂದ ಅರಣ್ಯ ಬಿಟ್ಟು ಬಸವನ ಹಿಂದಿನ ಬಾಲದಂತೆ ನಾನೂ ನಡೆಯುತ್ತಿದ್ದೆ. ಭಾರವಾದ ಹೆಜ್ಜೆಯಿಕ್ಕುತ್ತ ಇಂಥ ವನಶ್ರೀಯ ಸೌಂದರ್ಯರಾಶಿಯನ್ನು ನೋಡಿ ಆನಂದಿಸಲೂ ಪುಣ್ಯಬೇಕು. ನನಗೆ ಆ ಪುಣ್ಯ ಸಿಕ್ಕಿದೆ ಎನ್ನಿಸುತ್ತಿತ್ತು ನನಗೆ. ಈರಪ್ಪನಿಗೆ ಈ ಪುಣ್ಯವಿಲ್ಲದ್ದು ಗೊತ್ತಾಗುತ್ತಿತ್ತು. ವನಶ್ರೀ ಮಧ್ಯದಲ್ಲಿ ಹುಟ್ಟಿದ ಅವನಿಗೆ ನೋಡಿ ನಲಿಯುವ ಕಣ್ಣಾದರೂ ಏಕೆ?

ಬೈಲುಸೀಮೆಯಲ್ಲಿ ಹುಟ್ಟಿದ ಬೆಳೆದಿದ್ದ ನನಗೆ ಮಾವಿನ ಹಣ್ಣು ಅಪರೂಪದ ವಸ್ತುವೇ ಅಲ್ಲವೆ? ಮಾವಿನ ಹಣ್ಣು ತಿನ್ನದವನೇನೂ ಅಲ್ಲ ನಾನು. ತಿಂದಿದ್ದೆ. ಆದರೆ ವೈವಿಧ್ಯಮಯವಾದ ಹಣ್ಣನ್ನು ಸಮೃದ್ಧವಾಗಿ ತಿಂದವನಲ್ಲ. ಆಗಾಗ ನಮ್ಮ ದೊಡ್ಡಪ್ಪನೋ, ಅಪ್ಪನೋ ಆಲೂರು, ಬೆಳಗಾಲಪೇಟೆಗಳಂಥ ಊರಿಗೆ ಹೋಗಿ ತರುತ್ತಿದ್ದುದೂ ಉಂಟು. ಹುಲ್ಲಾಳ ಎಂಬ ಹಳ್ಳಿಯ ಸಂತೆ ಮಾವಿನ ಹಣ್ಣಿಗೆ ಪ್ರಸಿದ್ಧವಾದ ಊರು. ಮೂರಾಣೆ ನಾಲ್ಕಾಣೆ ಕೊಟ್ಟು ನೂರು ಹಣ್ಣು ತಂದು ವರ್ಷಕ್ಕೊಮ್ಮೆ ಸೀಕರಣೆ ಮಾಡಿ ತಿಂದರೆ ಮಾವಿನ ಹಣ್ಣಿನ ಸುಗ್ಗಿ ಮುಗಿದಂತೆಯೇ. ಒಮ್ಮೊಮ್ಮೆ ಊರಲ್ಲಿ ಮಾರಲಿಕ್ಕೆ ಹಣ್ಣು ಬಂದಾಗ ಜೋಳ ಸುರುವಿ ನಮ್ಮ ತಾಯಿ ಮಾವಿನಹಣ್ಣು ಕೊಂಡು ಒಂದೋ ಎರಡೋ ಕೊಟ್ಟ ಹಣ್ಣು ತಿಂದರೆ ಆಯಿತು. ಮಾವಿನ ಹಣ್ಣಿನ ಸುಗ್ಗಿಯ

ಸಡಗರ. ನಮ್ಮೂರ್ರ ಪಕ್ಕದ ಕೂಡಲದಲ್ಲಿ ಓಬಿರಾಯನ ಕಾಲದಲ್ಲಿ ಹಾಕಿದ ಮಾವಿನ ತೋಪೊಂದು ಇತ್ತು. ನಮಗೆ ಮಾವಿನಕಾಯಿಯನ್ನೇ, ಮರದಲ್ಲಿಯೇ ಆಗಿದ್ದ ದೋರೆಹಣ್ಣನ್ನೇ ತಿನ್ನುವ ಚಟವಾದರೆ, ನಾಲ್ಕಾರು ಜನ ಮಿತ್ರರೊಡನೆ ಕದ್ದು ಹೋಗಿ ನಾಲ್ಕಾರು ಕಲ್ಲುಬೀರಿ ಹುಳಿಗಾಯಿಯಾಗಲಿ ದೋರೆಗಾಯಾಗಲಿ ಉದುರಿಸಿ ಉಡಿತುಂಬಿಕೊಂಡು ಹಿಡಿಯಲು ಬರುವವರ ಕೈಗೆ ಸಿಗದೆ ಓಡಿಹೋಗಿ ಹೊಳೆದಂಡೆಯಲ್ಲಿ ಉಪ್ಪುಕಾರದೊಡನೆ ತಿಂದು ಹಲ್ಲು ಚಳಿಸಿಕೊಂಡು ಬಂದ ಪ್ರಸಂಗಗಳು ಬಾಲ್ಯದಲ್ಲಿ ಜರುಗುತ್ತಿದ್ದವು. ಇಷ್ಟರಮಟ್ಟಿಗೆ ನಮಗೆ ಮಾವು ಸಂಬಂಧ. ನಾನೂ ಮಾವಿನ ಹಣ್ಣು ಬಲ್ಲೆ ಎಂದು ಹೇಳುವಷ್ಟರಮಟ್ಟಿಗೆ ಅಂತಾ ಬೇಕಾದರೆ ಇಟ್ಟುಕೊಳ್ಳಿ.

ನಮ್ಮ ಸೀಮೆ ಮಾವುಪ್ರಧಾನವಾದ ಸೀಮೆಯಲ್ಲ; ಬೇವುಪ್ರಧಾನವಾದದ್ದು. ಮಲೆನಾಡು ಮಾವು ಪ್ರಧಾನವಾಗಿ, ಬೇವಿಗೆ ಬರಬಂದ ಸೀಮೆ, ಮಾವು - ಬೇವು ಎರಡೂ ಜೀವನದಲ್ಲಿ ಹಾಸುಹೊಕ್ಕಾದ ವೃಕ್ಷಗಳು. ಒಂದು ಸಿಹಿ, ಇನ್ನೊಂದು ಕಹಿ. ಎರಡೂ ಪೂಜ್ಯವಸ್ತುಗಳೇ. ಎರಡೂ ದಿವ್ಯೌಷಧಿ ಗುಣದವೇ. ಹಬ್ಬಹುಣ್ಣಿಮೆ, ಮದುವೆ ಮುಂಜಿ, ಶುಭ ಶೋಭನಗಳಲ್ಲಿ ಹಸಿರುವಾಣಿ ಚಪ್ಪರಕ್ಕೆ ಎರಡರ ತಳಿರಿನ ತೊಂಗಲು ತೂಗಾಡುತ್ತಿದ್ದರೇ ಹಬ್ಬ ಪೂರ್ಣವಾದಂತೆ. ಬೇವು ಉದರಕ್ಕೆ ಸಿಹಿಯಾದಂತೆ ಅಧರಕ್ಕೆ ಸಿಹಿಯಾಗದೆ ಕಹಿ ಆದದ್ದೇ ಅದರ ದೋಷ. ಮಾವು ಅಧರಕ್ಕೆ ಸಿಹಿ ಉದರಕ್ಕೂ ಸಿಹಿಯಾಗಿ ಎಲ್ಲರ ಪ್ರೀತಿಗೆ ಕಾರಣವಾಗಿದ್ದೇ ದೊಡ್ಡ ಕವಿಗಳ ವರ್ಣನೆಗೆ ಕಾರಣವಾಯಿತು. ಬೇವು ಅತ್ಯಂತ ಪ್ರಯೋಜನಕಾರಿ ವಸ್ತುವಾದರೂ ಮರೆತೂ ಕೂಡ ವರ್ಣಿಸಲು ಯಾರೂ ಮುಂದೆ ಬರಲಿಲ್ಲ. ಆದರೂ ಯುಗಾದಿಯ ಮೊದಲ ದಿನ ಅದಕ್ಕೆ ಸಿಕ್ಕ ಮನ್ನಣೆ ಯಾವ ವೃಕ್ಷಕ್ಕೂ ಸಿಗಲಿಲ್ಲ ಅನ್ನಿ. ಪುರಂದರ ದಾಸರಂತೂ ದೇವರ ಪಾದಗಳನ್ನು ಎಳೆಯ ಮಾವಿನ ತಳಿರನ್ನು ಹೋಲುವ ದಿವ್ಯಪಾದ ಎಂದು ಹಾಡಿ ಹರಸಿದರು. ದಟ್ಟಹಸಿರು, ಮೃದುತ್ವ, ಕೋಮಲತೆಗೆ ಮಾವಿನ ತಳಿರು ಹೇಳಿ ಮಾಡಿಸಿದ್ದು. ಬೇವಿನ ಚಿಗುರು ಸೊಪ್ಪು ಕಣ್ಣಿಗೆ ಹಬ್ಬವನ್ನುಂಟು ಮಾಡುವಂತಹುದೇ! ಗುಣ ಕಹಿ. ಸಿಹಿಗೆ ಲೋಕ ಮರುಳಾಗುವಂತೆ ಕಹಿಗೆ ಮರುಳಾದೀತೆ? ಮಾವು ಬೇವನ್ನು ಹಿಂದೆ ಸರಿಸಿ ತಾನೇ ತಾನಾಗಿ ಜೀವನದುದ್ದಕ್ಕೂ ಮನುಷ್ಯನ ಪ್ರಯೋಜಕ ವಸ್ತುವಾಗಿಬಿಟ್ಟಿತು. ಪಂಪ ಕವಿ ಇದರ ಮಾಧುರ್ಯಕ್ಕೆ ಮಾರುಹೋಗಿ ಆದಿಪುರಾಣದಲ್ಲಿ ವಿಕ್ರಮಾರ್ಜುನವಿಜಯದಲ್ಲಿ ಹೊಗಳಿದ್ದೂ ಹೊಗಳಿದ್ದೇ. ಈ ಹೊಗಳಿಕೆ ಕೇಳಿ ಇತರ ಗಿಡಮರಗಳು ತಲೆತಗ್ಗಿಸಿಬಿಟ್ಟಿರಬೇಕು.

> ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ ನೀರನೈ ಪುಷ್ಪ ಸಂ
> ಕುಳದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಚಲ್ವನೈ ಪಣ್ತ ಪ
> ಣ್ಗಳಿನೋವೋ ಪೆರತೇನೊ ನೀನೆ ಭುವನಕ್ಕಾಧಾರನೈ ಭೃಂಗ ಕೋ
> ಕಿಳ ಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ

ಎಂದು ಮಾಮರವನ್ನು ವರ್ಣಿಸಿದ್ದು ಅತಿಯಾಯಿತೇನೋ ಎನಿಸುತ್ತದೆ. ಉಳಿದ ಮರಗಳು ಈ ಮಾತು ಕೇಳಿ ಅದೆಷ್ಟು ಹೊಟ್ಟೆ ಉರಿದುಕೊಂಡವೋ ದೇವರೇ ಬಲ್ಲ. ಇದು ಹಣ್ಣಿನ ರುಚಿಗೆ ಮಾರು ಹೋಗಿ ಹೇಳಿದ್ದಂತೂ ನಿಜ ಅನ್ನಿಸುತ್ತದೆ ನನಗೆ. "ತಳಿರಿನಲ್ಲಿ ನೀನೇ ಬೆಡಂಗನೈ" ಇವನ್ನೇನೋ ಒಪ್ಪಬಹುದು. 'ಪುಷ್ಪಸಂಕುಳದೊಳ್ ನೀನೆ ವಿಲಾಸಿ" ಎನ್ನುವುದಾಗಲಿ, ಮಿಡಿಗಳಲ್ಲಿ ನೀನೆ ಚೆಲುವನೆಂದದ್ದಾಗಲಿ, "ಪಣ್ತ ಪಣ್ಗಳಿನೋವೋ ನೀನೆ ಭುವನಕ್ಕಾಧಾರ"

ಎಂಬವು ದೊಡ್ಡವಾದುವು. ಬೇವಿನ ಚಿಗುರು, ಹೊಂಗೆಯ ಚಿಗುರು ಕೂಡ ಅತ್ಯಂತ ಮನೋಹರ. ಆದರೆ ಮನ್ಮಥ ತನ್ನ ಬಾಣಕ್ಕೆ ಇವನ್ನು ಸ್ವೀಕರಿಸಲಿಲ್ಲವೆಂದೋ ಇನ್ನಾವ ಕಾರಣಕ್ಕೋ ಅಗ್ರಪಟ್ಟ ಮಾವಿನ ಚಿಗುರಿಗೇ ಬಂತು. ಬರಲಿ ಎನ್ನೋಣ. ಆದರೆ ಹೂ ಸಮೂಹದಲ್ಲಿ ನೀನೇ ಚೆಲುವನೆಂಬ ಮಾತಿಗೆ ಮಲ್ಲಿಗೆ ಸಂಪಿಗೆ ಮುನಿದುಕೊಳ್ಳಲಿಕ್ಕಿಲ್ಲವೆ? ಮಿಡಿಗಳಲ್ಲಿ ನೀನೇ ಚೆಲುವನೆಂದು ಒಪ್ಪಿಬಿಟ್ಟರೆ ಬೇವಿನ ಮಿಡಿ, ಅಮಟೆ, ನೆಲ್ಲಿಗಳಿಗೆ ಕೋಪ ಬರಲಿಕ್ಕಿಲ್ಲವೆ? ಬಂದೀತು; ಆದರೂ ಅವು ಸಿಟ್ಟುಮಾಡಿಕೊಂಡು ಮಾಡುವದೇನು? ಭುವನಕ್ಕೆ ನೀನೇ ಆಧಾರ ಎನ್ನಬಹುದೇ? ಕವಿಯ ಲೆಕ್ಕಣಿಕೆಯನ್ನು ಹಿಡಿದು ಹೀಗೆ ಬರೆ ಎಂಬ ಕಟ್ಟುಪಾಡು ಮಾಡಲುಂಟೇನು? ಆದ್ದರಿಂದ ಮಾವಿನ ಪರಿಕರಗಳೆಲ್ಲಕ್ಕೂ ಅಗ್ರಪಟ್ಟ ಸಂದಿದೆ. ಅದು ಭೂಮಿಯ ಕಲ್ಪವೃಕ್ಷವೇ ಆಗಿಹೋಯಿತು. ಆಗಲಿಬಿಡಿ. ಷಡಕ್ಷರ ಕವಿಯಂತೂ ಹುಚ್ಚೆದ್ದು ಮಾವನ್ನು ಹಾಡಿ ಹರಸಿ ಅಟ್ಟಕ್ಕೇರಿಸಿಬಿಟ್ಟ. ಅಷ್ಟೇ ಅಲ್ಲ. "......ಈ ಮರಮಲ್ತೆ ಮಾಮರಂ" ಎನ್ನುತ್ತ ಅಜನೊರಲ್ದು ನಾಮವಿತ್ತಂ.." ಎಂದು ಇದಕ್ಕೆ ಬ್ರಹ್ಮನೇ ಕೂಗಿ 'ಮಾಮರ' ಎಂಬು ಒದರಿ ಹೆಸರಿಟ್ಟುಬಿಟ್ಟನಂತೆ. ಮಾಮರವನ್ನು ಷಡಕ್ಷರಿ ಒಮ್ಮೆ ನರ್ತಕಿಯನ್ನಾಗಿ ಕಂಡರೆ, ಇನ್ನೊಮ್ಮೆ ಮಧುಮಾಸಪ್ರಯಾಣದ ಕಾಂತೆಯನ್ನಾಗಿ ಕಂಡ; ಮತ್ತೊಮ್ಮೆ 'ರಸಾಲಭೈರವ' ಎಂದುಬಿಟ್ಟ. ಕಾಳಿದಾಸ ಮೊದಲ್ಗೊಂಡು ಭಾರತದ ಕವಿಪರಂಪರೆಯೇ ಮಾವನ್ನು ವಿವಿಧ ದೃಷ್ಟಿಯಿಂದ ಕಂಡು ವರ್ಣಿಸಿಬಿಟ್ಟಿದ್ದಾರೆ. ಹೀಗೆ ಹಾಗೆ ಎಂದು ಹೇಳಿ ನಾವಾದರೂ ಏಕೆ ನಿಷ್ಠುರ ಕಟ್ಟಿಕೊಳ್ಳೋಣ ಹೇಳಿ. ಅವರು ಹೇಳಿದ್ದನ್ನು ನಾವೂ ಒಪ್ಪಿಕೊಂಡುಬಿಡುವುದೇ ಕ್ಷೇಮವಲ್ಲವೆ? ಅವರ ಕಣ್ಣಿಗೆ ಕಂಡ ಅದರ ವಿರಾಡ್ ವರ್ಣನೆಯ ಬೆನ್ನುಹತ್ತಿ ನಾವೂ ನಮ್ಮ ದೃಷ್ಟಿಯನ್ನು ಅವರ ದೃಷ್ಟಿಯೊಡನೆ ಹೊಂದಿಸಿ ನೋಡುವ ಅಭ್ಯಾಸ ಮಾಡಿದರಾಯಿತು. ನಮ್ಮ ಕಣ್ಣಿಗೂ ಹಾಗೇ ಕಂಡೀತು.

ನಮ್ಮ ಮನಸ್ಸಿನಲ್ಲಿ ತುಡಿಯುವ ಒಂದೇ ಒಂದು ಸಂಕಟವೆಂದರೆ ಹಲಸಿನ ಮರದ ಬಗೆಗೆ ಈ ಕವಿಗಳೆಲ್ಲಾ ಮಾಡಿದ ವರ್ಣನೆ ತೀರಾ ಕಡಿಮೆ ಎನಿಸುತ್ತದೆ. ಹಲಸಿನ ಮರ ಸೌಂದರ್ಯದಲ್ಲಿ, ಪ್ರಬುದ್ಧತೆಯಲ್ಲಿ, ಸೊಬಗಿನಲ್ಲಿ ಕಡಿಮೆಯೇನಲ್ಲ. ಬೇರಿನಿಂದ ತುದಿಯವರೆಗೆ ಕಾಣುವ ಅದರ ಪ್ರಬುದ್ಧತೆ ಆಢ್ಯತೆ ಎಂಥವರನ್ನೂ ಮುಗ್ಧಗೊಳಿಸಿಬಿಡುವುದಿಲ್ಲವೆ? ನನಗಂತೂ ಆ ಮರ ಕಂಡಾಗಲೆಲ್ಲ ದಿಟ್ಟಿಸಿ ನೋಡಿದ್ದೇ ನೋಡಿದ್ದು. ನೆರಳಿನಲ್ಲಿ ಅದು ಮಾಮರಕ್ಕೆ ಸಮಾನ. ದಟ್ಟವಾದ ತುಂಬ ಎಲೆಗಳಿಂದ ದಟ್ಟವಾಗಿ ಬೆಳೆದು ನಿಂತ ಹಲಸಿನ ಮರ. ಬಿಗಿದು ನಿಲ್ಲಿಸಿದ ತೇರಿನಂತೆ ಮನೋರಂಜಕ. ಬಹುಕಾಲದಿಂದಲೂ ಕನ್ನಡಿಗರಿಗೆ ಭಾರತೀಯರಿಗೆ ಅತಿ ಪರಿಚಿತವಾದ ಮರವೇ ಅದು. ಹಲಸಿನ ಮರದ ಚಕ್ಕೆಯ ಕಷಾಯವೇ ಪ್ರಾಚೀನ ಬೌದ್ಧರ ಕಾಷಾಯ ವಸ್ತ್ರಗಳಿಗೆ ಬಣ್ಣವಾಗುತ್ತಿದ್ದಿಲ್ಲವೆ? ಹಲಸು ಕಾಯಿ ಬಿಟ್ಟರಾಯಿತು, ಕಾಯುತ್ತ ಕುಳಿತ ಹೆಂಗಸರು ಸಾರಿಗೆ, ಪಲ್ಯಕ್ಕೆ, ಹುಳಿಗೆ ಕಿತ್ತು ತಂದು ಮಾಡಿ ಉಂಡು ತಮ್ಮ ನಾಲಿಗೆಯ ಬರವನ್ನು ಹಿಂಗಿಸಿಕೊಳ್ಳುವುದಿಲ್ಲವೆ? ದೋರೆಗಾಯಿ ಕಿತ್ತುತಂದು ಹಪ್ಪಳ ಸಂಡಿಗೆಗಳನ್ನು ಮಾಡಿ ಇಂದಿಗೂ ತಿನ್ನುತ್ತಿಲ್ಲವೆ? ಅದರ ಬೀಜಗಳನ್ನು ಹುರಿದುಕೊಂಡು ಜಿಟಿ ಜಿಟಿ ಮಳೆ ಹತ್ತಿದ ಕಾಲದಲ್ಲಿ ಕುಟುಕುಟು ಎಂದು ಕಡಿಯುತ್ತ ತಿಂದು ಜನ ಚಳಿಯನ್ನು ಇಂದಿಗೂ ಕಳೆದುಕೊಳ್ಳುತ್ತಿಲ್ಲವೆ? ಬೀಜಗಳನ್ನು ಹುಳಿಮಾಡಿಕೊಂಡು ತಿನ್ನುತ್ತಿಲ್ಲವೆ? ಈ ಮರದ ಹಣ್ಣಿನ ರುಚಿಗೆ ಮಾರುಹೋಗಿ ಬಾಯಿ ಇಲ್ಲದ ಕರಡಿಯೂ ಕೂಡ ಇದರ ಹಣ್ಣನ್ನು ಜೇನುತುಪ್ಪದಲ್ಲಿ ಅದ್ದಿ ಇಂದಿಗೂ ಮಲೆಪ್ರದೇಶದಲ್ಲಿ ತಿನ್ನುತ್ತವಂತೆ. ಮನುಷ್ಯನ ಪಾಡೇನು? ಕರಡಿಯಂಥ ಪ್ರಾಣಿ ಮಾವಿನಹಣ್ಣನ್ನು

ತಿಂದ ಉದಾಹರಣೆ ತೋರಿಸಬಲ್ಲಿರಾ? ಇಂದಿಗೂ ತಂಜಾವೂರಿನ ವೀಣೆ-ತಂಬೂರಿ-ಮೃದಂಗ ತಯಾರಕರು ಈ ಮರವನ್ನು ಬಿಟ್ಟು ಇನ್ನಾವ ಮರಕ್ಕೆ ಶರಣು ಹೊಕ್ಕಿದ್ದಾರೆ ಹೇಳಿ? ಸಂಗೀತ ಸುಮಧುರ ಸ್ವರ ಈ ಮರದಿಂದಲೇ ಚೆನ್ನಂತೆ. ಕೇರಳದ ಮರಗೆತ್ತನೆ ಕೈಗಾರಿಕೆಯವರಿಗೆ ಹಲಸಿನ ಮರವೇ ಕಚ್ಚಾ ವಸ್ತುವಲ್ಲವೆ? ಹಲಸಿನ ಮರದಿಂದ ಮಾಡಿದ ಮನೆಯ ಕದ ಬಾಗಿಲು ಚೌಕಟ್ಟುಗಳು ಭದ್ರವೆಂದೂ, ಮಂಗಳಕರವೆಂದೂ ತಿಳಿದು ಅದನ್ನು ಹುಡುಕಿ ತಂದು ಉಪಯೋಗಿಸುತ್ತಿಲ್ಲವೆ? ಈ ದೃಷ್ಟಿಯಿಂದ ನೋಡಿದರೆ ಮಾವಿನ ಮರವನ್ನೂ ಈ ಮರದ ಮುಂದೆ ನಿವಾಳಿಸಿ ಚಲ್ಲಬೇಕು ಎನಿಸುತ್ತದೆ ನನಗೆ. ಹೇಗೆ ಹೇಳಿದರೂ ಲೋಕದ ನಿಷ್ಠುರವ ಕಟ್ಟಿಕೊಳ್ಳಬೇಕು. ಹತ್ತರೊಡನೆ ಹನ್ನೊಂದು ..........ಗೋವಿಂದಾ ಅಂದು ಮುಂದೆ ಹೋಗುವುದೇ ಒಳ್ಳೆಯದಲ್ಲವೆ? ಹೀಗೆ ಹೇಳಿದ ನನಗೆ ಮಾವಿನಲ್ಲಿ ಭಕ್ತಿ ಇಲ್ಲವೆಂದಲ್ಲ, ನಾಲಗೆ ಚಾಪಲ್ಯಕ್ಕೊಳಗಾದ ಎಲ್ಲರೂ ಮಾವಿಗೆ ಶರಣು ಹೋಗಲೇಬೇಕು. ಅದರ ಮಾಧುರ್ಯ ಅಂಥಾದ್ದು. ಭೂಲೋಕವೇ ಅದರ ರುಚಿಗೆ ಮಾರುಹೋಗಿದೆ. ಅಂತೆಯೆ ಅದರ ಸ್ವರೂಪ ಬೃಹದ್ಭಾವದಲ್ಲಿ ಹಿಂದಿನಿಂದಲೂ ಲೋಕ ಕಾಣುತ್ತ ಬಂದಿರುವುದರ ರಹಸ್ಯ. ದೊಡ್ಡದೊಡ್ಡ ಕವಿಗಳು ಈ ಮರಕ್ಕೆ ಮಾರುಹೋಗಿ ತಮ್ಮ ಪ್ರತಿಭೆಯನ್ನು ಅದರ ಮೇಲೆ ಚೆಲ್ಲಿ ವಿವಿಧ ರೂಪದಲ್ಲಿ ಅದನ್ನು ಕಂಡಿದ್ದಾರೆ.

**ಕನಸೆಲ್ಲ ಮಾಮರವೇ ಆಗುತ್ತಿತ್ತು**

ಅರಣ್ಯದ ಮಾಮರದ ಸೊಗಸನ್ನು ಕಂಡು ಹಿಂದಿರುಗಿದ ದಿನವೆಲ್ಲ ನನಗೆ ಮಾಮರದ ಭವ್ಯ ದಿವ್ಯ ಸೌಂದರ್ಯದ ಕನಸೇ ಕನಸು. ಕನಸಿನಲ್ಲಿ ನಾನೂ ಕೂಡ ಕವಿಗಳಂತೆ ವಿವಿಧ ರೂಪ ಲಾವಣ್ಯಗಳಲ್ಲಿ ಮರವನ್ನು ಕಂಡು ಕುಣಿದಾಡಿದ್ದೇನೆ. ಮಾವಿನ ಮರದ ಜೊತೆ ಜೊತೆಯಾಗಿ ಹಲಸಿನ ಮರವೂ ಭವ್ಯವಾಗಿ ಎದುರಿಗೆ ಬಂದು ನಿಂತುದನ್ನು ಕಂಡು ಕುಣಿದಾಡಿದ್ದೇನೆ. ಒಮ್ಮೊಮ್ಮೆ ಬಾಲ್ಯದಿಂದ ಅತಿ ಪರಿಚಿತ ಮರಗಳಾದ ಹುಣಿಸೆ, ಬೇವಿನ ಮರಗಳೂ ಕನಸಿನ ಕತೆಯಲ್ಲಿ ಒಂದೆರಡು ಪಾತ್ರಧಾರಿಗಳಾಗಿ ಮಧ್ಯದಲ್ಲಿ ನುಸುಳಿ ಬಂದು ಕಾಣಿಸಿಕೊಳ್ಳುತ್ತಿದ್ದುದೂ ಉಂಟು. ಹಲಸು ಮಾತ್ರ ಪ್ರಧಾನವಾಗಿ ಕಾಣಿಸಿಕೊಂಡಿತು. ಇದಕ್ಕೆ ಕಾರಣ ಹಲಸಿನ ಬಗ್ಗೆ ನನಗೆ ಬಾಲ್ಯದಿಂದಲೂ ಬೆಳೆದುಬಂದ ನಂಟು. ಸಂಸ್ಕಾರ ರೂಪವಾಗಿ ಭಾವದಲ್ಲಿ ಅಡಗಿ ಕುಳಿತು ಕನಸಿನಲ್ಲಿ ಹೊರಹೊಮ್ಮಲು ಕಾರಣವಾಗಿರಬಹುದು. ಸಂಸ್ಕಾರಕ್ಕೆ ಅನುಗುಣವಾಗಿ ಕನಸುಗಳು ಹೊರಹೊಮ್ಮುತ್ತವೆಂದು ಕೇಳಿದ್ದೇನೆ. ನಾನಿನ್ನೂ ಬಾಲಕ. ಹಲಸಿನ ಮರವನ್ನೇ ಕಾಣದಂತಹ ಕಾಲ. ಆಗ ಹಲಸಿನ ಹಣ್ಣು - ಅದರ ರುಚಿಗೆ ಮಾರುಹೋಗಿ ಇಂಥ ವಿಚಿತ್ರವಾದ ಭವ್ಯ ಹಣ್ಣನ್ನು ಹೊತ್ತ ಮರ ಇನ್ನೆಷ್ಟು ಭವ್ಯವಾಗಿರಬೇಕು? ಎಂದು ಮನಸ್ಸಿನಲ್ಲೇ ಕೂಡಿ-ಕಳೆದು; ಗುಣಿಸಿ-ಭಾಗಿಸಿ ಲೆಕ್ಕಾಚಾರ ಮಾಡುವ ಕಾಲದಲ್ಲಿ ಹಲಸಿನ ಬೀಜವೊಂದನ್ನು ನಮ್ಮ ಹಿತ್ತಿಲಿನಲ್ಲಿ ಗುಣಿ ತೆಗೆದು ಹಾಕಿ, ನೀರೆರೆದು, ದಿನದಿನವೂ ಬೆಳಿಗ್ಗೆ ಎದ್ದು ನನ್ನ ಬೀಜ ಗಿಡವಾಗಿದೆಯೇ ಎಂದು ಕುತೂಹಲದಿಂದ ನಿರೀಕ್ಷೆ ಮಾಡುತ್ತಿದ್ದೆ. ಅದು ಗೇಣುದ್ದ ಗಿಡವಾಗಿ ಎರಡು ಮೂರು ಎಲೆಗಳಿಂದ ಹೊರಹೊಮ್ಮಿದ್ದಾಗ ಆದ ಆನಂದವನ್ನು ವರ್ಣಿಸಲು ನನಗೆ ಶಬ್ದ ಸಾಲವು. ನಾನೇ ಹಾಕಿದ್ದು; ಇನ್ನೇನು ದೊಡ್ಡದಾಗಿ ಹಣ್ಣು ಬಿಡುತ್ತದೆ - ಎಂದು ಕನಸು ಕಂಡವನು ಆ ಗಿಡ ನಮ್ಮ ಎಮ್ಮೆಯ ಬಾಯಿಗೆ ತುತ್ತಾದ ದಿನ ನನಗಾದ ಸಂಕಟವನ್ನು ಈಗ ವರ್ಣಿಸಲಾರೆ. ಕನ್ನಡ ಐದನೇ ತರಗತಿಯಲ್ಲಿ ಓದುತ್ತಿದ್ದಾಗ ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದಲ್ಲಿಯ ಒಂದು ಪದ್ಯದಲ್ಲಿನ "ಬೇರ್ವೆರಸಿ ತುದಿವರಂಕಾತ

ಪನಸಂಗಳ್...." ಮಾತಿನ ಅರ್ಥವನ್ನು ನಮ್ಮ ಉಪಾಧ್ಯಾಯರಿಂದ ಕೇಳಿ ಬೇರಿನಿಂದಲೇ ಕಾಯಿ ಬಿಡುವುದು ಹೇಗೆ? ಎಂಬುದು ಬಿಡಿಸಲಾರದ ಸಮಸ್ಯೆಯೇ ಆಗಿತ್ತು. ಭೂಮಿಯಲ್ಲಿಯೇ ಕಾಯಿ ಬಿಡುತ್ತವೆಂದ ಉಪಾಧ್ಯಾಯರ ಮಾತಿನಲ್ಲಿ ನಂಬುಗೆ ಬರಲಿಲ್ಲ. ಇದೊಂದು ಹಸಿಸುಳ್ಳಿನ ಕಂತೆಯಾಗಿರಬೇಕೆಂದು ಮನದಲ್ಲಿಯೇ ಅಂದುಕೊಂಡೆ. 11 ವರ್ಷದವನಾಗುವವರೆಗೂ ಹಲಸಿನ ಮರ ನೋಡಿದವನೇ ಅಲ್ಲ. ಮುಂದೆ ನಾನು ಆರನೇ ತರಗತಿಗಾಗಿ ಓದಲು ಹಾನಗಲ್ಲಿಗೆ ಹೋದಾಗಲೇ ಅಲ್ಲಿನ ಮಠದ ತೋಟದಲ್ಲಿ ಭವ್ಯ ಹಲಸಿನ ಮರ ಕಂಡು ಪ್ರಭಾವಿತನಾದೆ. ಅದರ ಬೃಹತ್ ಕಾಂಡ ಆಕಾಶದಲ್ಲಿ ಬಿತ್ತರಗೊಂಡು ವಿಶಾಲಾಕಾಶದಲ್ಲಿ ಹರಡಿರುವ ರೆಂಬೆಕೊಂಬೆ ಟಿಸಿಲುಗಳು, ಸಮೃದ್ಧವಾದ ದಟ್ಟ ಹಸಿರಿನ ಎಲೆಗಳು, ಕಾಂಡದಲ್ಲೆಲ್ಲ ಇಳಿದಿದ್ದ ದೊಡ್ಡದೊಡ್ಡ ಹಲಸಿನ ಕಾಯಿಗಳು ನನ್ನನ್ನು ಮೂಕವಿಸ್ಮಿತನನ್ನಾಗಿ ಮಾಡಿದವು. ನೆಲದ ಮೇಲೆ ಹಬ್ಬಿದ್ದ ಬೇರಿನ ಮೇಲೂ ಕಾಯಿಗಳಾಗಲು ಮುಗುಳೊಡೆದುದನ್ನು ಕಂಡು ಕವಿಯ 'ಬೇರ್ವೆರಸು ತುದಿವರಂ ಕಾತ ಪನಸಂಗಳ್' ಎಂಬ ವಾಣಿಯ ಬಗ್ಗೆ ವಿಶ್ವಾಸ ಹುಟ್ಟಿತು. ಆದರೆ ನೆಲದಲ್ಲಿನ ಬೇರಿನಲ್ಲೂ ಕಾಯಿ ಬಿಡುತ್ತವೆಂದು ಜನರು ಹೇಳುತ್ತಿದ್ದರಾದರೂ ಅದನ್ನು ಮಾತ್ರ ನಾನು ಕಾಣಲಿಲ್ಲ. ಕಾಣಬೇಕೆನ್ನುವ ಮನೋಭಾವವೂ ಉಳಿಯಲಿಲ್ಲ. ಬಹುಶಃ ಬಿಟ್ಟಿರಲೂಬಹುದು ಎನಿಸಿತು. ಈಶ್ವರಸೃಷ್ಟಿಯ ರಹಸ್ಯ ನಮ್ಮ ಸೀಮಿತ ಬುದ್ಧಿಗೆ ನಿಲುಕದ್ದು ಎಂಬ ಅರಿವು ಮೂಡಿದ್ದು ಆಗಲೇ. ನಮ್ಮ ಬುದ್ಧಿಗೆ ನಿಲುಕದ ಯಾವುದೇ ವಿಷಯ ಸುಳ್ಳು ಎನ್ನುವ ದಾರ್ಷ್ಟ್ಯ ಆಗ ಕಡಿಮೆಯಾಯಿತು ಅನ್ನಿ. ಹಲಸಿನ ಬಗ್ಗೆ ಹಗಲುಗನಸು ಕಾಣುತ್ತಿದ್ದ ಬಾಲ್ಯದ ನನ್ನ ಭಾವ ಜೀವನವೇ ಭಾವಕೋಶದಲ್ಲಿ ಸಂಸ್ಕಾರ ರೂಪವಾಗಿ ಉಳಿದಿರಬಹುದು. ಅವು ಈಗ ತನ್ನ ಇನ್ನೊಂದು ಪ್ರೀತಿಯ ಮರವಾದ ಮಾವಿನ ಕನಸನ್ನು ಕಾಣುವ ಸಮಯದಲ್ಲಿ ಹೊರಹೊಮ್ಮಿರಬಹುದೆಂದು ಊಹಿಸುತ್ತೇನೆ. ಈ ಊಹೆ ಎಷ್ಟು ಸರಿಯೊ ಎಷ್ಟು ತಪ್ಪೋ ಮನಃಶಾಸ್ತ್ರಜ್ಞರೇ ಉತ್ತರಿಸಬೇಕು. ಹೋಗಲಿ, ಈಗ ನಾನು ಹೇಳುವುದು ಈ ಕಂತೆ ಪುರಾಣವನ್ನಲ್ಲ. ಕನಸಿನಲ್ಲಿ ನಾ ಕಂಡ ಮಾವಿನ ಮರ ಕವಿಯ ಕಲ್ಪನೆಗಳ ಮಿಕ್ಕಿದ್ದೇ. ಶುಷ್ಕ ಶಬ್ದಚಿತ್ರವನ್ನು ಮೆಲುಕು ಹಾಕುತ್ತಿದ್ದ ನನ್ನ ಮನಸ್ಸಿನ ಭಾವಗಳೇ ಕನಸಿನ ಮರವಾಗಿ ಕಾಣತೊಡಗಿದವು. ಕನಸು ಎಚ್ಚರವಾಗುವವರೆಗೆ ಸತ್ಯವೇ ತಾನೆ! ಆದರೆ ಕನಸಿನ ಸತ್ಯ ನೈಜ ಸತ್ಯಕ್ಕಿಂತ ಭಿನ್ನ ಇಲ್ಲ. ಸತ್ತವರೂ ಎದ್ದು ಬಂದಾರು. ಹಾಲೆಲ್ಲ ಬೆಣ್ಣೆಯೆಂದೇ ಕಂಡೀತು. ಪ್ರತ್ಯಕ್ಷ ಕಂಡ ಯಾವುದೋ ಶಬ್ದ ಚಿತ್ರವನ್ನು ವಿರೂಪಗೊಳಿಸಿಯೋ, ವಿಕಾರಗೊಳಿಸಿಯೋ ಬ್ರಹ್ಮಸೃಷ್ಟಿಗೆ ಪ್ರತಿಯಾದ ಸೃಷ್ಟಿಯನ್ನೇ ಮನಸ್ಸಿನ ಮುಂದೆ ಚಲನಚಿತ್ರದ ತೆರೆಯ ಮೇಲಿನ ಗೊಂಬೆಗಳಂತೆ ಕುಣಿಸಿ ನಗಿಸಿ ಎಚ್ಚರಗೊಳಿಸಿ ನಾನು ಇದುವರೆಗೆ ಕಂಡದ್ದು ಭ್ರಾಂತಿಲೋಕದ ಮೆಲುಕನ್ನು ಸ್ಪಷ್ಟಗೊಳಿಸುತ್ತದೆ. ಇದಕ್ಕೆ ಹಿಂದಿನ ನಮ್ಮ ಸಂಸ್ಕಾರಗಳನ್ನೂ ಮಿಕ್ಕಿದ ಇನ್ನಾವುದೋ ಸಂಸ್ಕಾರ ಕಾರಣವೇನೋ ಎನಿಸುತ್ತದೆ. ಇದನ್ನು ನೋಡಿದರೆ ಜನ್ಮಾಂತರ ಸಂಸ್ಕಾರ ಎನ್ನುತ್ತಾರಲ್ಲ ಅದು ಸತ್ಯವಿರಬಹುದೇ? ಎನ್ನಿಸುತ್ತದೆ. ಕನಸಿನ ಮಾಮರದ ಹೂಗಳಸುತ್ತ ಝೇಂಕರಿಸುತ್ತ ಹಾರಾಡುವ ದುಂಬಿಗಳು ರೆಕ್ಕೆ ಬಂದ ನೀಲಮಣಿಗಳಾಗಿ ಕಂಡವು. ಪಚ್ಚೆರತ್ನದ ಹರಳುಗಳು ಮಿಡಿಗಳಾಗಿ ಕಂಡವು. ಮರಕ್ಕೆ ಹಬ್ಬಿದ ಮಲ್ಲಿಗೆಬಳ್ಳಿಗಳಲ್ಲಿ ಮೂಡಿದ ಬಿಳಿಯ ಮೊಗ್ಗುಗಳು ಹೊಸ ಮುತ್ತುಗಳನ್ನು ಮರಕ್ಕೆ ಬಿಗಿದಂತೆ ಕಂಡವು. ಹವಳಮಣಿಗಳನ್ನು ಚಿಗುರಿನಂತೆ ಕೆತ್ತಿ ತೊಂಗಲುಗಳನ್ನಾಗಿ ಮಾಡಿ ಮಾಮರಕ್ಕೆ ಜೋಡಿಸಿದಂತೆ ಕಂಡವು. ಹೀಗೆ ರತ್ನಸಂಕುಲಗಳನ್ನೊಳಗೊಂಡ ಈ ಮಾವಿನ ಮರ ನನಗೆ

ಕಂಡದ್ದು ಭೂಲೋಕದ ಅರಣ್ಯ ಮಧ್ಯದಲ್ಲೂ ಅಲ್ಲ. ಬೇರಾವ ಮಾವಿನ ತೋಪಿನಲ್ಲೂ ಅಲ್ಲ. ದೇವೇಂದ್ರನ ನಂದನವನದಲ್ಲಿ ದೇವಲೋಕದ ನಂದನವನದ ವರ್ಣನೆಯನ್ನು ಎಲ್ಲೆಲ್ಲೋ ಕೇಳಿದ್ದುಂಟು. ಈಗ ಮಾಮರ ನನ್ನನ್ನು ಸ್ವರ್ಗಕ್ಕೂ ಕರೆತಂದಿತಲ್ಲಾ! ಎಂಬ ಸಂತೋಷದ ಹಿಂದೆ ವಿಷಾದವೂ ಇತ್ತು. ದೇವೇಂದ್ರನ ನಂದನವೆಂದರೆ ಇದೆಯೋ? ನಮ್ಮ ಲಾಲ್‌ಬಾಗ್ ಇದಕ್ಕಿಂತ ಎಷ್ಟೋ ಮೇಲು! ಕಬ್ಬನ್‌ಪಾರ್ಕ್‌ನ ಸೌಂದರ್ಯ ಇದಕ್ಕುಂಟೆ? ಎಷ್ಟೊಂದು ಜನ ದೇವೇಂದ್ರ, ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ ಎಂದು ಏನೇ ಮೇಲುತ್ಪ್ರೇಕ್ಷೆ ಮಾಡಿ ಹೊಗಳಿದ್ದಾರಲ್ಲ! ಅವನ ನಂದನವನ ಇನ್ನು ಹೇಗೆ ಹೇಗೋ ಇರಬಹುದೆಂಬ ಊಹೆಯಿತ್ತು. ನೋಡಿದ ಮೇಲೆ ನಂದನವನ ಎಂದರೆ ಇಷ್ಟೇನೇ. ನಮ್ಮ ಬನವಾಸಿ ನಾಡಿನ ಕಾಡಿನ ಮುಂದೆ ನಂದನವನ್ನು ನಿವಾಳಿಸಿ ಬಿಸಾಡಬೇಕು. ನಮ್ಮ ಭಾರತದ ಕವಿಪ್ರಪಂಚ ಇದನ್ನು ನೋಡಿದ್ದರೆ ನಮ್ಮ ಕಾವ್ಯಗಳಲ್ಲಿ ದೊಡ್ಡದು ಮಾಡಿ ಹೊಗಳಿ ಹೊಗಳಿ ಹೊನ್ನಶೂಲಕ್ಕೇರಿಸುತ್ತಿದ್ದರೋ ಇಲ್ಲವೋ. ಕಲ್ಪವೃಕ್ಷಕ್ಕಾಗಿ ಅಲ್ಲಿ ಹುಡುಕಾಡಿದೆ, ಸಿಗಲಿಲ್ಲ. ಕಾಮಧೇನು, ಚಿಂತಾಮಣಿಗಳಿಗಾಗೂ ಹುಡುಕಾಡಿದೆ, ಅವೂ ಕಣ್ಣಿಗೆ ಬೀಳಲಿಲ್ಲ. ಬಹುಶಃ ದೇವೇಂದ್ರ ಸಾಮಾನ್ಯ ಜನ ಇವುಗಳಿಂದ ಬೇಡಬಾರದ್ದನ್ನು ಬೇಡಿ, ಕಾಮಿಸಬಾರದ್ದನ್ನು ಕಾಮಿಸಿ, ಕಲ್ಪಿಸಬಾರದ್ದನ್ನು ಕಲ್ಪಿಸಿಕೊಟ್ಟು ಹಾಳಾಗಿ ಹೋಗಬಾರದೆಂದು ಎಲ್ಲೋ ಮುಚ್ಚಿಟ್ಟುಕೊಂಡಿರಬೇಕೆಂದು ಭಾವಿಸಿ ಸುಮ್ಮನಾದೆ. ಕನಸು ಮುಂದುವರಿಯಿತು.

ಕಳಕಂಠನ ಬಗ್ಗಣೆಯಾದ ಕುವ್ವೌ ಕುವ್ವೌ ಎಂಬ ಧ್ವನಿ ತಳಿರಿನ ಮಧ್ಯದಿಂದ ಹೊರಹೊಮ್ಮುತ್ತಿತ್ತು; ಪಳದಿ ಬಣ್ಣದ ತನಿವಣ್ಣಿನ ಮಧ್ಯದಲ್ಲಿ ಗಿಳಿ ಬಾಯಿ ಚಪ್ಪರಿಸುತ್ತಿದ್ದುದು ಕೇಳಿಸಿತು. ಸುಮಕುಲಮಧ್ಯದಲ್ಲಿ ಭ್ರಮರಗಳ ಝೇಂಕಾರ ಧ್ವನಿ ಕೇಳಿಸಿತು. ಆದರೆ ಕೋಗಿಲೆ, ಗಿಳಿ, ದುಂಬಿಗಳು ಕಣ್ಣಿಗೆ ಬೀಳಲೇ ಇಲ್ಲ. ತಳಿರು, ಹೂವು, ಹಣ್ಣು ಮೂರೂ ಏಕಕಾಲದಲ್ಲಿ ಒಂದೇ ಮರದಲ್ಲಿ ಇರಲು ಹೇಗೆ ಸಾಧ್ಯ? ಎಂಬ ವಿವೇಕ ನನ್ನ ವಿಮರ್ಶಾಜ್ಞಾನವನ್ನು ಎಚ್ಚರಿಸಿತು. ಹೇಗಿದ್ದರೂ ಹೇಳಿಕೇಳಿ ದೇವಲೋಕದ ನಂದನವನವಲ್ಲವೆ? ಹೀಗೂ ಇದ್ದೀತು? ಎಷ್ಟೇ ಆಗಲಿ ಕವಿಗಳು ಬ್ರಹ್ಮಸೃಷ್ಟಿಯ ನಿಯಮಗಳನ್ನು ಮಿಕ್ಕಿ ಶಬ್ದಗಳಿಂದಲೇ ನೂತನವಾದ ತಮ್ಮದೇ ಆದ ಬ್ರಹ್ಮಾಂಡವನ್ನು ನಿರ್ಮಿಸ ಬಲ್ಲರಲ್ಲವೆ? ಅವರ ಸೃಷ್ಟಿಯಲ್ಲಿ ತಳಿರು, ಹೂವು, ಮಿಡಿ, ಕಾಯಿ, ಹಣ್ಣು ಏಕಕಾಲದಲ್ಲಿ ಇರಬಲ್ಲವು. ಅಕಾಲದಲ್ಲಿ ಒಮ್ಮಿಂದೊಮ್ಮಿಗೆ ವಸಂತ ಮಾಸ ಹುಟ್ಟಿ ಇದ್ದಕ್ಕಿದ್ದಂತೆ ಗಿಡ ಮರ ಬಳ್ಳಿಗಳೆಲ್ಲ ಚಿಗಿತು ಹೂಬಿಟ್ಟು ಕಾಯಿ ಹಣ್ಣುಗಳೂ ಆಗಿಬಿಡಬಹುದು. ಅಯ್ಯೋ ನಿಜವಾಗಿ ಒಮ್ಮಿಂದೊಮ್ಮೆ ಮನುಷ್ಯ ಹುಟ್ಟಿಯೂ ಬರಬಹುದು. ಎಲೆಯ ಮೇಲೆ ಮಲಗಿಸಿ ತೇಲಿಬಿಟ್ಟ ಮಗು ಮುಳುಗದೆ ಜೀವಂತವಾಗಿ ದಡಕ್ಕೆ ಬಂದೀತು! ಕಪಿಸಂತತಿ ಕಡಲಿಗೇ ಸೇತುವೆಯನ್ನು ಕಟ್ಟಿ ದಾಟಿ ಹೋದೀತು!! ನರನು ಹರನ ಗಂಟಲನ್ನೇ ಒತ್ತಿ ಗಾಸಿಗೊಳಿಸಿಯಾನು! ವಾಮನ ತ್ರಿವಿಕ್ರಮವಾಗಿ ಒಮ್ಮೆಲೆ ಆಕಾಶದುದ್ದಕ್ಕೂ ಬೆಳೆದು ನಿಂತು ಬಿಟ್ಟಾನು! ಇವೆಲ್ಲ ಕವಿಲೋಕದ ಅದ್ಭುತಗಳೇ ಅಲ್ಲವೆ? ಚಾದಗೆ ಮಳೆಕಾಲದಲ್ಲಿ ಭೂಮಿಗೆ ಮಳೆಯ ಹನಿಗಳು ಬೀಳುವ ಮೊದಲೇ ಆಕಾಶದಲ್ಲಿಯೇ ಆ ನೀರಿನ ಹನಿಗಳನ್ನು ಕುಡಿದು ಮುಂದೆ ಎಂಟು ತಿಂಗಳು ಉಪವಾಸ ಇದ್ದೀತು! ಚಕೋರಪಕ್ಷಿ ಮೂಡಿಬರುತ್ತಿರುವ ಪೂರ್ಣಚಂದ್ರನ ಕಿರಣಗಳಲ್ಲಿರುವ ಅಮೃತವನ್ನೇ ಕುಡಿದು ಬದುಕೀತು! ಚಕ್ರವಾಕ ರಾತ್ರಿಯಾಗುತ್ತಲೇ ತನ್ನ ನಲ್ಲೆಯನ್ನಗಲಿ ವಿರಹತಾಪದಿಂದ ರಾತ್ರಿಯೆಲ್ಲ ಸಂಕಟಪಟ್ಟು ಬೆಳಗಾಗುತ್ತಲೆ ತನ್ನ ನಲ್ಲೆಯೊಡನೆ

ಕೂಡಿ ನಲಿದೀತು! ಇವೆಲ್ಲ ಕವಿಲೋಕದ ನೂತನ ಸೃಷ್ಟಿಗಳೇ ಅಲ್ಲವೆ? ಎಂದುಕೊಂಡು ಮಾಮರವನ್ನೇ ದಿಟ್ಟಿಸಿ ನೋಡುತ್ತ ನಿಂತಂತೆಯೇ ಒಮ್ಮಿಂದೊಮ್ಮೆಗೆ ಭಯಂಕರ ಕೋಲ್ಮಿಂಚು ಕಣ್ಣನ್ನೇ ಕುರುಡಾಗಿಸಿತು. ಜೊತೆಗೆ ಕಿವಿಗಳನ್ನು ಕುರುಡುಗೊಳಿಸುವ ಸಿಡಿಲಿನ ಆರ್ಭಟ ಕೇಳಿಬಂತು. ಹೆದರಿ ಸತ್ತೆನೆಂದು ನಡುಗುತ್ತ ನಿಂತಲ್ಲೇ ಮೆಟ್ಟಿ ಬಿದ್ದು, ಆ ಬರಡು ನಂದನವನದಲ್ಲಿ ಅಡಗಿಕೊಳ್ಳಲು ಓಡಾಡಿದೆ. ಆಮೇಲೆ ತಿಳಿಯಿತು. ಭೂಮಿಗೆ ಮಳೆಯನ್ನು ಸುರಿಸುವ ದೇವೇಂದ್ರನ ಕ್ರಿಯೆಗೆ ಅಡ್ಡಲಾಗಿ ನಿಂತ ದುಷ್ಟ ವೃತಾಸುರನನ್ನು ತನ್ನ ವಜ್ರಾಯುದದಿಂದ ಹೊಡೆದಾಗ ಉಂಟಾದ ಮಿಂಚು-ಗುಡುಗು ಎಂದು. ಒಮ್ಮೆಲೆ ಕಣ್ಣುಬಿಟ್ಟೆ. ನಾನಿರುವುದು ಇಂದ್ರನ ನಂದನವನದಲ್ಲೂ ಅಲ್ಲ, ಎಲ್ಲೂ ಅಲ್ಲ. ಹಿರೇಕಾಂಶಿಯ ನನ್ನ ಕೊಠಡಿಯಲ್ಲಿ. ಸಮಾಧಾನವಾಯಿತು. ಆಗ ಹೊರಗೆ ಮುಂಗಾರಿನ ಘೋರಮಳೆ ಸಿಡಿಲಿನ ಘೋರ ಆರ್ಭಟದಿಂದ ಸೋಯೆಂದು ಸುರಿಯ ತೊಡಗಿತ್ತು. ನಾನೆಂಥ ಕನಸನ್ನು ಕಂಡೆನಲ್ಲಾ! ಇದಕ್ಕೆ ಜ್ಯೋತಿಷ್ಯ ಏನು ಹೇಳುತ್ತದೆಯೆಂದು ಪಂಚಾಂಗದ ಹಾಳೆಗಳನ್ನು ತಿರುತಿರುವಿ ಹಾಕತೊಡಗಿದೆ. ಅದು ಹೇಳಿತು. ನನಗುಂಟಾದ ಈ ಕನಸೆಲ್ಲ ಹಿಂದೆ ನಾನು ನನ್ನ ಜೀವನದಲ್ಲಿ ಓದಿಕೊಂಡು ಬಂದಿದ್ದ ಸಾಹಿತ್ಯ ಕೃತಿಗಳ ಸಂಸ್ಕಾರ ಫಲ. ಅದೆಲ್ಲಾ ಹೊರಗೆ ಬಂದು ಮನಸ್ಸು ಹಗುರಾಯಿತು. ಚಿಂತೆಯಿಲ್ಲ ಎಂದು ಇದಕ್ಕೆ ಯಾವ ಶಾಂತಿ ಗೀಂತಿ ದಾನ ಧರ್ಮಗಳ ಅವಶ್ಯಕತೆಯಿಲ್ಲವೆಂದು ಅದರಲ್ಲಿ ಬರೆದಿತ್ತು. ಮನಸ್ಸನ್ನು ಹಗುರಮಾಡಿಕೊಂಡು ನನ್ನ ದಿನದಿನದ ಕಾಯಕವಾದ ಶಾಲೆಯ ಕೆಲಸಕ್ಕೆ ಅವಸರವಸರವಾಗಿ ಪ್ರಾತಃವಿಧಿ ಮುಗಿಸಿ ಓಡಿಹೋದೆ.

***ಶಾಲೆಗೆ ಇನ್‌ಸ್ಪೆಕ್ಟರರ ಅನಿರೀಕ್ಷಿತ ಭೇಟಿ***

ನಾನು ಉಳಿದ ಕೆಲಸವೇನೇ ಇರಲಿ, ಶಾಲೆಯ ಕೆಲಸಗಳಿಗೆ ಮಾತ್ರ ಔದಾಸೀನ್ಯವನ್ನಾಗಲಿ, ಉತ್ಸಾಹರಾಹಿತ್ಯವನ್ನಾಗಲಿ ಎಂದೂ ತೋರಿಸಿದವನೇ ಅಲ್ಲ. ಬಿಡುವಿನಲ್ಲಿ ಮಾತ್ರ ನನ್ನ ಉಳಿದ ಚಟುವಟಿಕೆಗಳು ನಡೆಯುತ್ತಿದ್ದುವು. ಶಾಲೆಯೇ ನನ್ನ ದೇವರೆಂದು ಶ್ರದ್ಧಾಭಕ್ತಿ ವಿಶ್ವಾಸದಿಂದ ಕೆಲಸಮಾಡಿದ್ದರಿಂದ ಸುತ್ತುಮುತ್ತೆಲ್ಲ ಕೀರ್ತಿತನಾಗಿದ್ದೆ. ಇಷ್ಟೇ ಅಲ್ಲ, ನನ್ನ ಮೂವತ್ತೆಂಟು ವರ್ಷಾವಧಿಯ ಉಪಾಧ್ಯಾಯ ವೃತ್ತಿಯಲ್ಲೇ ಪೂರ್ಣ ಯಶಸ್ಸು ಗಳಿಸಿದೆನೆಂಬ ಆತ್ಮವಿಶ್ವಾಸ ಈಗಲೂ ನನಗೆ ತೃಪ್ತಿಯನ್ನುಂಟುಮಾಡಿದೆ. ಕೆಲಸ ಯಾವುದೇ ಆಗಿರಲಿ, ಅದನ್ನು ಶ್ರದ್ಧೆಯಿಂದ ಮಾಡಿ ಮುಗಿಸಬೇಕೆಂಬ ಒಂದು ಗುಣ ನನಗೆ ನನ್ನ ಹುಟ್ಟಿನೊಂದಿಗೆ ಬಂದಿರಬಹುದು. ಬಾಲ್ಯದಲ್ಲಿ ನನಗೆ ಈ ಗುಣಮೂಡಿದ್ದು ನನ್ನ ತಾಯಿಯಿಂದ. ಅವಳ ಬಗ್ಗೆ ಈ ಹಿಂದೆ ನಾನು ಅನೇಕ ಕಡೆ ಉಲ್ಲೇಖಿಸಿದ್ದೇನೆ. ಅವಳ ಕ್ರಿಯಾಯೋಗ ದೊಡ್ಡದು. ಅದು ನನಗೆ ವರ್ತನೋಪದೇಶವಾಗಿ ಹೋಗಿತ್ತು. ನಾನು ಮೈಸೂರು, ಬೆಂಗಳೂರು, ತಿಪಟೂರು, ಚಿತ್ರದುರ್ಗ ಮೊದಲಾದ ಊರುಗಳಲ್ಲಿ ಕೆಲಸಮಾಡುತ್ತಿದ್ದಾಗ ದೀರ್ಘಕಾಲ ಅವಿಶ್ರಾಂತ ಶ್ರಮವಹಿಸಿದವಳು ಸ್ವಲ್ಪಕಾಲ ವಿರಾಮವಾಗಿರಲಿ ಎಂದು ಕರೆದುಕೊಂಡು ಬರುತ್ತಿದ್ದೆ. ಈ ವಿರಾಮ ಜೀವನ ಅವಳಿಗೆ ಹಿಡಿಸುತ್ತಲೇ ಇರಲಿಲ್ಲ. "ಅಪ್ಪಾ, ಇಲ್ಲಿ ಸುಮ್ಮನೆ ಕುಂತು ಕುಂತು ಮೈ ನೋವಾಗಿ ಹೋಗೇತಿ. ನಾನು ಊರಿಗೆ ಹೋಗ್ತೇನಪಾ. ಅಲ್ಲಿ ಹೊಲದ ಮುಂದ ಯಾರು? ಮನೆ, ದನಕರದ ಗತಿ ಏನ್ಯಾಗೇತ್ಯೋ ದೇವರೇ ಬಲ್ಲ. ಕಳ್ಳಿ ಬಿಡು ಊರ್‍ಗೆ ಹೋಗಿಬಿಡ್ತಿನಿ" ಎಂದು ಗಲಾಟೆಯನ್ನೆಬ್ಬಿಸಿ ಬಿಡುತ್ತಿದ್ದಳು. ನಾನು "ನಾಲ್ಕು ದಿನ ಸುಖವಾಗಿರು. ಇಷ್ಟು ದಿನ ಮಾಡಿದ್ದು ಸಾಲದೇ? ಇನ್ನು ದುಡಿಯ ಬೇಕೇನು? ಮನೆಯವರು ಮಾಡಿಕೊಳ್ಳುತ್ತಾರೆ. ಅಲ್ಲಿ ಎರಡು

ಮೂರು ಜನ ಸೊಸೆಯಂದಿರಿಲ್ಲವೆ? ಎಂದರೆ "ಹೋಗಪ್ಪಾ ಹೋಗು! ಇದೆಂಥ ಸುಖ? ಹೊಲಕ್ಕ ಹೋಗಂಗಿಲ್ಲ, ಮನೆಗೆ ಬರಂಗಿಲ್ಲ, ಜೇಲಿನಾಗ ಕುಂತಂಗ ಮನ್ಯಾಗ ಕುಂತಗಂಡ್ರೇ ನಮಗೆ ಮೈ ನೋವು. ಮೈಮುರಿದು ಕೆಲ್ಸಾ ಮಾಡಿದರೆ ಮೈ ಹಳಾದ್ದು ತಿಂದ ಕೂಳು ಹೊಟ್ಗೆ ನೆತ್ಕೆ ಹತ್ತೋದು ನಮ್ಗ" ಎಂದು ದುಂಬಾಲು ಬಿದ್ದು ಬಿಡುತ್ತಿದ್ದಳು. ನಾನು ನಾಳೆ ನಾಡಿದು ಎಂದು ಕಾಲ ತಳ್ಳುತ್ತಿದ್ದೆ. ಆ ಕಾಲದಲ್ಲಿ ಅವರು ನಮ್ಮ ಮನೆಯಲ್ಲೂ ಸುಮ್ಮನೆ ಕೂಡುತ್ತಿದ್ದಿಲ್ಲ. ಗವಲಿ, ಗವಳಿಗೆ, ಶಾವಿಗೆ, ಹಪ್ಪಳ, ಸಂಡಿಗೆ, ಬಾಳಕದ ಮೆಣಸಿನ ಕಾಯಿ ಏನೆಲ್ಲ ವರ್ಷಕ್ಕಾಗುವಷ್ಟು ಮಾಡುತ್ತಿದ್ದಳು. ನಸುಕಿನಲ್ಲಿ ಎದ್ದು ಮನೆ ಅಂಗಳ ಮುಂಚೆ ಹಿತ್ತಿಲು ಸ್ವಚ್ಛ ಮಾಡುವುದು, ಏನೇನೊ ಕೆಲಸ ಹೊಂದಿಸಿಕೊಂಡು ಮಾಡಿದ್ದೇ ಮಾಡಿದ್ದು. ನಾನು ಹೆಂಡತಿಯನ್ನು ಅವಳಿಗೇಕೆ ಕೆಲಸ ಮಾಡಲು ಬಿಡುತ್ತೀಯೆ ಬಂದಾಗಲಾದರೂ ನಾಲ್ಕು ದಿನ ಅತ್ತೆಯ ಸೇವೆಮಾಡಿ ಧನ್ಯತೆ ಪಡೆ ಎಂದರೆ ಅವಳು 'ಸೈ! ಸೈ! ಸದ್ಯ ಅವರಿಂದ ನಾವೇ ಸೇವೆಮಾಡಿಸಿಕೊಳ್ಳಬೇಕು. ನಾನೆಲ್ಲ ಮಾಡಿಕೊಳ್ಳುತ್ತೇನೆ. ನೀವು ಸುಮ್ಮನೆ ಕುಳಿತುಕೊಳ್ಳಿ. ಸಾಕಾದರೆ ಮಲಗಿ ಕೊಳ್ಳಿ' ಎಂದು ಹೇಳಿ ಹೇಳಿ ಸಾಕಾಗಿದೆ. ನಾನು ಮಾಡುವ ಕೆಲಸವನ್ನು ಕಿತ್ತುಕೊಂಡು ತಾವೇ ಮಾಡುತ್ತ 'ನಾನು ಊರಿಗೆ ಹೋದ ಮೇಲೆ ನಿನಗೆ ಮಾಡಿಕೊಳ್ಳೋದು ಐತೇ ಐತಿ. ನಾನಿರುವಷ್ಟು ದಿನಾನಾದ್ರೂ ನೀನು ವಿಶ್ರಾಂತಿ ತೊಗೊ' ಎಂದು ಹೇಳಿ ನನ್ನನ್ನೇ ವಿಶ್ರಾಂತಿಗೆ ಕಳಿಸಿಕೊಡೋ ಅವರೆದುರು ಏನು ಮಾತಾಡಾಕಾಗುತ್ತೆ ಹೇಳಿ. ಬೆಳಿಗ್ಗೆ ಎದ್ದು ಒಲೆ ಮುಂದೆ ಅವರೇ ಬಂದು "ನಿನ್ನ ಗಂಡಗೆ ಬಿಸಿರೊಟ್ಟಿ ಬದನೇ ಕಾಯಿ ಪಲ್ಯ, ಸೊಪ್ಪಿನ ಪಲ್ಯ ಅಂದ್ರ ಬಾಳಾ ಇಷ್ಟ. ನಾನೇ ರೊಟ್ಟಿ ಮಾಡ್ತಿನಿ ಸರಿ ಅಂತಾ ತಾವೇ ರೊಟ್ಟಿ ಮಾಡಲು ಕುಳಿತುಕೊಂಡು ಬಿಡುತ್ತಾರೆ. ಮಧ್ಯಾಹ್ನ ಮಲಗೋದಂತೂ ಅವರಿಗೆ ಗೊತ್ತೇ ಇಲ್ಲಂತೆ. ಅದು ಮೈ ಕೈ ನೋವಿನ ನಿದ್ರೆಯಂತೆ. ಸ್ವಲ್ಪ ಗೋದಿಹಿಟ್ಟು ಕಲಸಿಕೊಂಡು ಬಾಗಿಲು ಹತ್ತಿರ ಕುಳಿತು ಗವಲಿ, ಸವತೇಬೀಜ ಅದೇನೇನೋ ಹೇಳ್ತಾರಲ್ಲ, ಅವನ್ನೆಲ್ಲ ಮಾಡ್ತಾ ಕುಳಿತುಕೊಂಡು ಬಿಡುತ್ತಾರೆ. ಶಾವಿಗೆ ಹೊಸೆಯೋ ಮಣೆ ಇಲ್ಲ ಅಂತ ಊಟದ ಮಣೆಯ ಮೇಲೇ ಶಾವಿಗೆ ಹೊಸೆದು ದಿನಕ್ಕೆ ಎರಡೆರಡು ಕಂತೆ ಮಾಡಿದರೂ ಸಾಕು. ಹದಿನೈದು ದಿನ ಮಾಡಿದರೆ ನನ್ನ ಮೊಮ್ಮಕ್ಕಳು ವರ್ಷವೆಲ್ಲ ಹಬ್ಬ ಹುಣ್ಣಿಮ್ಯಾಗ ಶಾವಿಗೆ ಉಂಡಾವು ಎಂದು ಹೇಳುತ್ತ ಮಾಡುತ್ತ ಕುಳಿತುಕೊಳ್ಳುತ್ತಾರೆ. ಕೆಲಸದಿಂದ ಅವರನ್ನು ಬೇರ್ಪಡಿಸುವುದು ಯಾರಿಂದಲೂ ಸಾಧ್ಯವಿಲ್ಲ" ಎಂದು ಹೇಳುತ್ತಿದ್ದಳು. ಇಂಥ ಕ್ರಿಯಾಶೀಲ ಅಥವಾ ಕ್ರಿಯಾಯೋಗ ಅನ್ನಿ, ಅದನ್ನು ಮೈಮನಕ್ಕಂಟಿಸಿಕೊಂಡಿದ್ದ ನನ್ನ ತಾಯಿಯ ಕ್ರಿಯಾಯೋಗವನ್ನು ಬಾಲ್ಯದಿಂದ ಅಂಟಿಸಿಕೊಂಡು ಬಂದಿದ್ದ ನನಗೆ ಕೆಲಸದಲ್ಲಿ ತಾರತಮ್ಯವೇ ಇರಲಿಲ್ಲ. ಕೈಮುಟ್ಟಿ, ಮನಮುಟ್ಟಿ ಎಲ್ಲ ಕೆಲಸಗಳನ್ನು ಮುಖ ಸೊಟ್ಟಮಾಡಿಕೊಳ್ಳದೆ ಮಾಡುವುದು ಒಂದು ನನ್ನ ಅಭ್ಯಾಸವೇ ಆಗಿತ್ತು. 'ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ' ಎಂದು ಅರ್ಜುನನಿಗೆ ಕೃಷ್ಣ ಬಾಯಿಬಿಟ್ಟು ಹೇಳಿರುವುದು ನನ್ನ ತಾಯಿ ತನ್ನ ಕ್ರಿಯೆಯಲ್ಲಿ ನನಗೆ ಬಾಯಿ ಬಿಟ್ಟು ಹೇಳುತ್ತಿತ್ತು. ಒಂಬತ್ತು ರೂಪಾಯಿ ಸಂಬಳದ ಮಾಸ್ತರ ಕೆಲಸವೆಂಬ ತಾತ್ಸಾರವಾಗಲಿ ಪ್ರತಿಫಲಾಪೇಕ್ಷೆಯ ಭಾವನೆಯನ್ನು ಮನಸ್ಸಿಗೆ ತರದೆ ಮುಂದಿದ್ದ ಕೆಲಸವನ್ನು ಪೂರ್ಣಮನಸ್ಸಿನಿಂದ ಮುಗಿಸುತ್ತಿದ್ದ ನನ್ನ ಕ್ರಿಯೆ ನನಗೆ ತಕ್ಕಷ್ಟು ಫಲವನ್ನು ಎಳೆದು ತಂದು ಕೊಡುತ್ತಿದ್ದವು. "ಕರ್ಮಣ್ಯೇವಾಧಿಕಾರಸ್ತೇ...." ಈ ಶ್ಲೋಕ ನನಗೆ ಗೊತ್ತಿರಲಿಲ್ಲ. ನಿಜ ಇದರ ಅರ್ಥ ನನ್ನ ವ್ಯವಹಾರದಲ್ಲಿತ್ತು ಎಂದು ಆತ್ಮವಿಶ್ವಾಸದಿಂದ ಹೇಳಬಲ್ಲೆ. ಇದೇ ನನ್ನ

ಪರಮಭಾಗ್ಯವೆಂದು ಈಗ ಅಂದುಕೊಳ್ಳುತ್ತಿದ್ದೇನೆ. ಈ ಬುದ್ಧಿಗೆ ದೇಹದ ಸಹಕಾರ ಸಿಕ್ಕು ಮನುಷ್ಯ ಸಹಜ ಕ್ರಿಯೆಯಲ್ಲಿ ಮಗ್ನನಾಗಿದ್ದ ಕಾರಣವೇ ನನಗೆ ಎಂದೂ ಬಡತನ ಬರಲಿಲ್ಲ; ಶ್ರೀಮಂತನೂ ಆಗಲಿಲ್ಲ. ಅಂದಂದಿನದು ಅಂದಂದು ನಡೆದು ಹೋಯಿತು. ಭಾವುಕರು ಇಂಥ ಜೀವನ ಕ್ರಿಯೆಯನ್ನು ಈಶ್ವರ ಕೃಪೆಯೆಂದು ಹೇಳುತ್ತಾರಲ್ಲವೆ? ಹಾಗೆ ಹೇಳಲು ನನಗೆ ಇಚ್ಛೆಯಿಲ್ಲ. ಈಶ್ವರ ಕೃಪೆ ನಮ್ಮ ಮೇಲೆ ಯಾವಾಗ ಇಲ್ಲ ಹೇಳಿ? ನಾವೇ, ನಮ್ಮ ಅಸ್ತಿತ್ವವೇ ನಯನಾಧಾರವಾದ ಈ ಭೂತತತ್ತ್ವ ಏನೆಲ್ಲವೂ ಈಶ್ವರ ಕೃಪೆಯೇ ಅಲ್ಲವೆ? ಈಶ್ವರ ಕೃಪೆ ದುಃಖವಾಗಿಯೂ ಬರಬಹುದು. ಆಗ ಭಾವುಕರು ದೇವರ ಕೃಪೆ ಜಾರಿತು ಅನ್ನುತ್ತಾರೆ. ಸುಖ ದುಃಖಗಳೆಲ್ಲವೂ ಈಶ್ವರ ಕೃಪೆಯೆ. ಇದ್ದಕ್ಕಿದ್ದಂತೆ ಭೂಕಂಪನಗೊಂಡರೆ ಮಾಡುವುದೇನಿದೆ? ಅನುಭವಿಸುವ ಮನದ ಮಟ್ಟ ಏರಬೇಕು ಅಷ್ಟೆ. ಮನದ ಮಟ್ಟ ಏರುವುದು ಕ್ರಿಯಾಯೋಗದಿಂದಲೇ. ಕ್ರಿಯೆಯಿಲ್ಲದ ಮನುಷ್ಯನ ಮನಸ್ಸು ಭೂತ. ಅದರ ಚೇಷ್ಟೆಗಳು ಲೆಕ್ಕವಿಲ್ಲದಷ್ಟು. ಜಗತ್ತಿನ ಅನೇಕ ರಾಷ್ಟ್ರಗಳು ಕ್ರಿಯಾಯೋಗದಿಂದಲೇ ಮೇಲೆ ಏರಿವೆ. ಭಾರತದಲ್ಲಿ ಕ್ರಿಯಾಯೋಗ - ಯೋಗ - ಏನೇನೋ ದೊಡ್ಡ ಶಬ್ದ ಬಳಸುತ್ತಾರೆ. ಕ್ರಿಯೆಯೊಡನೆ ಅವರಿಗೆ ಯೋಗವೇ ಕಡಿಮೆ. ವಿಯೋಗ ಬೇಕಾದಷ್ಟಿದೆ. ಎಲ್ಲರೂ ದೇವರ ಹತ್ತಿರ ಹೋಗಿ ಅರ್ಥವನ್ನು ಕೇಳುವವರೇ! ಭಾಗ್ಯದ ಲಕ್ಷ್ಮಿ ಬಾರಮ್ಮ ಅನ್ನುವವರೇ! ಲಕ್ಷ್ಮಿಗಾಗಿ ನೀನೇಕೆ ಯೋಚನೆ ಮಾಡಬೇಕು. ನಿನ್ನ ಕ್ರಿಯೆಯ ಪ್ರಾಬಲ್ಯ ಲಕ್ಷ್ಮಿಯ ತಲೆಗೂದಲನ್ನು ಹಿಡಿದು ಎಳೆದು ಬರುವಂತಾದರೆ ಸಾಕು. ದೇವರಲ್ಲೇ ಆಗಲಿ ಯಾರಲ್ಲೇ ಅಗಲಿ ಯಾಚನೆ ಅತ್ಯಂತ ಲಘುತಮ. ಮತಿಗೆಟ್ಟು ಅನ್ಯರನ್ನು ಮೊಗಳುವುದಾಗಲಿ ಧೃತಿಗೆಟ್ಟು ಅನ್ಯರ ಹೊಗಳುವುದಾಗಲಿ ಸಲ್ಲದು. ದೇವರಿಗೆ ನೀನಾರೆಂಬುದು ಗೊತ್ತಿಲ್ಲವೆ? ಅವನು ನಿನ್ನ ಕ್ರಿಯೆಗೆ ತಕ್ಕ ಪುಟವನ್ನು ಕೊಟ್ಟೇ ಕೊಡುತ್ತಾನೆ ಕ್ರಿಯೆಗೆ ತಕ್ಕ ಫಲ ಸಿಕ್ಕಲಿಲ್ಲ ಅಂದರೂ ಅದು ಶಿವಕೃಪೆಯೇ! ಅದನ್ನು ಅನುಭವಿಸಲು ಮನಸ್ಸು ಹದಗೊಂಡಿರಬೇಕು ಮಾತ್ರ. ಈಗ ದೇವರನ್ನು ಬಿಟ್ಟಿದ್ದಾನೆ ಮನುಷ್ಯ! ಯಾಚನೆಯನ್ನು ಸರಕಾರದಲ್ಲಿ ಮಾಡುತ್ತಿದ್ದಾನೆ. ಸರಕಾರದ ಮುಂದೆ ಯಾಚಿಸಿದರೂ ಅದು ಮನುಷ್ಯರ ಮನೆಮನೆಗೆ ಹೋಗಿ ಯಾಚಿಸಿದ ಯಾಚನೆಯೇ! ಯಾವ ಸ್ಥಿತಿಗೆ ಮನುಷ್ಯ ಬಂದಿದ್ದಾನೆಂದರೆ ಸರಕಾರದಿಂದ ಕೇವಲ ಹಾಲನ್ನು ಕೇಳುತ್ತಿಲ್ಲ, ಕೆಚ್ಚಲನ್ನು ಕೊಯ್ದು ಕೊಡಲು ಕೇಳುತ್ತಿದ್ದಾನೆ. ಅಯ್ಯೋ! ನನ್ನ ಹಿರೇಕಾಂಶಿ ಶಾಲೆಗೆ ಶಾಲಾ ತನಿಖಾದಿಕಾರಿ ಬಂದ ಒಂದು ಕಥೆ ಹೇಳ ಹೊರಟ ನಾನು ಏನೇನೋ ಹಲವು ಹೇಳುತ್ತ ಒಂದ ಹೇಳ ಹೋಗಿ ಒಂಬತ್ತನಾಡುವವನಂತಾಗಿ ಹೋದೇನೋ ಅನ್ನುವ ಭಯ. ಈ ತತ್ತ್ವಶಾಸ್ತ್ರವೊ ಸಮಾಜ ಶಾಸ್ತ್ರವೋ ಅಥವಾ ಧರ್ಮಶಾಸ್ತ್ರವೋ ಏನಾದರೂ ಅನ್ನಿ, ಈ ಶುಷ್ಕಪುರಾಣ ಸಾಕು. ಮುಂದಿನ ಒಂದು ಸ್ವಾರಸ್ಯದ ಕಥೆ ಕೇಳಿ.

ಶರತ್ಕಾಲದ ಸಮಯದಲ್ಲಿ ಶಾಲಾ ತನಿಖಾಧಿಕಾರಿ ಹಿರೇಕಾಂಶಿಗೆ ಇದ್ದಕ್ಕಿದ್ದಂತೆ ಭೇಟಿ ಕೊಟ್ಟರು. ಅವರಿಗೆ ಬನವಾಸಿ ಪ್ರಾಂತದ ಶರತ್ಕಾಲದ ರಮ್ಯ ಪ್ರಕೃತಿಯ ಅನ್ಯಾದೃಶ ಸೊಬಗು ಮನಸ್ಸಿಗೆ ಮುಟ್ಟಿತೋ ಇಲ್ಲವೋ! ಹಿರೇಕಾಂಶಿಯ ಸುತ್ತಮುತ್ತಣ ಆ ಕಾಲದ ಅನ್ಯಾದೃಶವಾದ ಭೂದೇವಿಯ ಮನೋಹರ ದೃಶ್ಯ ಶುಷ್ಕಹೃದಯದಲ್ಲೂ ಆನಂದದ ರಸಬುಗ್ಗೆಯನ್ನೇ ಚಿಮ್ಮಿಸುವಂತಹುದು. ಧಾರಣಿದೇವಿ ಆಗಸವಸನ ಧಾರಿಣಿ. ಕಾಳಿದಾಸ ಕವಿ ಕುಸುಮೋದ್ಗಮ ಶ್ರೀಃ ಎನ್ನುತ್ತಾನೆ. ಶರತ್ಕಾಲದ ವನಶ್ರೀಯನ್ನು ತನ್ನ ಋತುಸಂಹಾರದಲ್ಲಿ ಈ ಮಹಾಕವಿ ಶರದೃತುವಿನ ಸುಂದರ ಸೊಬಗಿಗೆ ಮಾರುಹೋದದ್ದು ಭಾರತದ ಇನ್ನಾವ ಪ್ರದೇಶದ್ದೋ

ಸ್ಪಷ್ಟವಾಗಿ ಹೇಳಿಲ್ಲ. ಅವನ ವರ್ಣನೆಯ ಸೊಬಗು ಇಡೀ ಭಾರತಕ್ಕೆ ಸಂಬಂಧಿಸಿದ್ದರೂ ಬನವಸೆ ಪ್ರಾಂತಕ್ಕೆ ಸಂಪೂರ್ಣ ಅನ್ವಯವಾಗುವಂತಹುದೆಂದು ನನ್ನ ಊಹೆ. ಋತುಸಂಹಾರ ಜಗತ್ತಿನ ಮೊದಲ ಋತುವರ್ಣನೆಯ ಗ್ರಂಥವೆನ್ನಲಾಗುತ್ತಿದೆ. ಇದನ್ನು ಭೂಸೊಬಗಿನ ಭಾವಗೀತೆ ಯಾದರೂ ಎನ್ನಿ. ಶರತ್ಕಾಲದ ಬಗೆಗೆ ಈ ಮಹಾಕವಿ ಮಾಡಿರುವ ವರ್ಣನೆಯೆಲ್ಲ ಅಕ್ಷರಶಃ ಹಿರೇಕಾಂಶಿಯ ವನಶ್ರೀಗೆ ಅನ್ವಯಿಸುವಂತಹುದೆಂದು ಹೇಳುವಲ್ಲಿ ಉತ್ಪ್ರೇಕ್ಷೆಯೇನೂ ಇಲ್ಲ. ಈ ಮಹಾಕವಿಯ ಕಾಲದಲ್ಲಿ ಭಾರತದಲ್ಲೇ ಪ್ರಸಿದ್ಧವಾಗಿದ್ದ ಬನವಸೆ ನಾಡು ಉತ್ತರ ಭಾರತದವರ ಮನವನ್ನೆಲ್ಲ ಸೆಳೆದಿತ್ತು. ಕವಿ ಈ ನಾಡನ್ನು ನೋಡಿರಲೂ ಶಕ್ಯ. ಗುಪ್ತವಂಶೀಯರು ನಮ್ಮ ಬನವಸೆ ನಾಡಿನ ಹೆಮ್ಮೆಯ ದೊರೆಗಳಾದ ಕದಂಬರ ಬೀಗರಾಗಿದ್ದಿಲ್ಲವೆ? ಅವರ ನಿಕಟ ಸಂಪರ್ಕದಲ್ಲಿದ್ದ ಕಾಳಿದಾಸನಿಗೆ ನಮ್ಮ ಹೆಮ್ಮೆಯ ಬನವಸೆ ಪ್ರಾಂತದ ಪರಿಚಯ ಸಾಕಷ್ಟಾಗಿತ್ತೆಂದು ಊಹಿಸಿದರೆ ತಪ್ಪೇನಿಲ್ಲ.

ಶರದೃತುವಿನಲ್ಲಿ ಮಂದಮಾರುತಗಳು ಹೂವಿನ ಸುಗಂಧ ಹೊತ್ತು ಮೆಲ್ಲಮೆಲ್ಲನೆ ಬೀಸುತ್ತವೆ, ಮಳೆಗಾಲದ ಮೋಡಗಳಿಲ್ಲ, ನದಿಗಳು ಮತ್ತು ಸರೋವರಗಳ ನೀರು ತಿಳಿಗೊಂಡಿದೆ. ನೆಲದ ಕೆಸರೆಲ್ಲ ಒಣಗಿದೆ. ಚಂದ್ರ ಶುಭ್ರಕಿರಣಗಳಿಂದ ಕೂಡಿದ್ದಾನೆ. ಗಗನ ಮಂಡಲ ನಕ್ಷತ್ರ ವೈಚಿತ್ರ್ಯದಿಂದ ಸುಂದರವಾಗಿದೆ. ಸಮಸ್ತ ಭೂದೇವಿ ಆಗ ಅರಳಿದ ಕಮಲ ಮುಖ, ಪ್ರಫುಲ್ಲ ನೀಲೋತ್ಪಲ ಸುಂದರ ನೇತ್ರೆ, ನವ ಕಾಶಪುಷ್ಪವಸ್ತ್ರಧಾರಿಣಿ, ಕುಮುದ ರುಚಿರ ಕಾಂತಿಮಯಿ. ಉತ್ಕಟ ಮದದ ಕಾಮಿನಿಯಂತೆ ಶೋಭಿಸುವಂತವಳಾಗಿ ಕಣ್ಣಿಗೆ ಕಾಣುತ್ತಾಳೆಂದು ಕವಿಯ ಆಶಯ. ಈ ದೃಶ್ಯ ಬಹುದಿನ ಇರುವುದಿಲ್ಲ. ಹಿಂದಿನ ಋಷಿಗಳೆಲ್ಲ ಈ ಸೊಬಗಿಗೆ ಮಾರು ಹೋಗಿಯೊ ಏನೋ ಜೀವೇಶು ಶರದಶ್ಶತಂ ಎಂದು ಬಿಟ್ಟರು. ಇನ್ನಾವ ಋತುವಿನ ಹೆಸರನ್ನು ಅವರು ಎತ್ತದಿದ್ದುದು ಆಶ್ಚರ್ಯ. ನೂರು ವರ್ಷ ಶರದೃತುವನ್ನು ನೋಡುವಂತಾಗಲೆಂದೇ ಇದರ ಹಾರೈಕೆ. ಇಂಥ ಶರದೃತುವಿನ ಕಾಲ ಹಿರೇಕಾಂಶಿಯ ಸುತ್ತಮುತ್ತಣ ಸೌಂದರ್ಯ ನೋಡಲು ನನ್ನ ಕಣ್ಣಂತೂ ಪುಣ್ಯ ಮಾಡಿದ್ದವೆನ್ನಬೇಕು.

ಧೋ! ಎಂದು ಹಗಲು ರಾತ್ರಿಯೆನ್ನದೆ ಸುರಿಯುತ್ತಿದ್ದ ಮಳೆಗಾಲ ಜಾರಿ ಹೊಳೆಹಳ್ಳ ಕೆರೆಯ ಹೊರಳುಗಟ್ಟೆಗಳು ಶಾಂತವಾಗಿದ್ದವು. ಮಳೆಗಾಲದ ಪ್ರಭೂತ ನೀರಿನಲ್ಲಿ ಹಿಂಡಿಹಾಕಿದ ಶುಭ್ರವಸ್ತ್ರಗಳಂತೆ ಮೋಡಗಳು ಬೆಳ್ಳಗಾಗಿ ಆಕಾಶಮಂಡಲದಲ್ಲಿ ತಿರುಗುತ್ತಿರುತ್ತವೆ. ಶುಭ್ರವಾದ ಬಿಸಿಲು ಭೂಮಿಯ ಮೇಲೆ ಪಸರಿಸಿ ಮಳೆಗಾಲದ ಕೊಚ್ಚೆಕೆಸರನ್ನೆಲ್ಲ ಒಣಗಿಸಿದೆ. ಪಕ್ಷಿ ಸಂಕುಲ ಮಳೆಗಾಲದ ಕೀಸರುಗಟ್ಟಿದ ಸನ್ನಿವೇಶದಿಂದ ಪಾರಾಗಿ ಗಿಡಮರಗಳಲ್ಲಿ ಕುಳಿತು ಆನಂದದಿಂದ ಕಿಚುಗಟ್ಟುತ್ತಿದೆ. ಬೆಳದಿಂಗಳ ರಾತ್ರಿಗಳು ಮನೋಹರವಾಗಿವೆ. ದಶದಿಕ್ಕುಗಳು ಪ್ರಸನ್ನ ಶುಭ್ರಮುಖಮಂಡಲ ಧರಿಸಿವೆ. ಕೆರೆ, ಕುಂಟೆ, ಹೊಂಡ, ಹೊಳೆಯ ಮಡುಗಳಲ್ಲಿ ಕಮಲಗಳು, ಕನ್ನೈದಿಲೆಗಳು ಮೇಲೆ ಬಂದು ಸುಂದರ ಹೂವುಗಳನ್ನು ಅರಳಿಸಿ ಭೂದೇವಿಯನ್ನೇ ಪುಷ್ಪಮುಖಿಯೆಂಬಂತೆ ಮಾಡಿವೆ. ಹಕ್ಕಲು ಹೊಲಗಳಲ್ಲಿ ಗುರೆಳ್ಳೂ ಸಾಸಿವೆ ಹೂಗಳಿಂದ ಮೈತಾಂಬಿ ಅರಳಿ ಹಳದಿಯನ್ನು ಹೊಮ್ಮಿಸಿವೆ. ಬಯಲು ಸ್ಥಳಗಳಲ್ಲಿ ತಂಗಡಿ ಗಿಡಗಂಟೆಗಳು ಹೂದೊಂಗಲಿನಿಂದ ನಿಸರ್ಗ ರಮಣೀಯ ಸೊಬಗುಗೊಂಡು ರಾರಾಜಿಸುತ್ತಿವೆ. ಗದ್ದೆಯಲ್ಲಿ ಹೊಂಬಣ್ಣಕ್ಕೆ ತಿರುಗುತ್ತಿದ್ದ ಬತ್ತದ ಪೈರು ಕಾಳಿನ ಭಾರದಿಂದ ಬಾಗಿದ ತೆನೆಗಳುಳ್ಳದ್ದಾಗಿ ಸಲಹಿದ ಭೂದೇವಿಗೆ ತಲೆವಾಗಿ ನಮಸ್ಕರಿಸುವಂತೆ ಕಂಗೊಳಿಸಿವೆ. ಕಬ್ಬಿನ ಹೊಲಗಳು

ಉದ್ದಂಡತೆಯ ಬಿರುದುಗೊಂಡಂತೆ ಸೋಗೆ ಹಾಯ್ದು ಕೆಳಗೆ ಹಚ್ಚ ಹಸಿರು ಗರಿಗಳಿಂದಲೂ ಮೇಲ್ಭಾಗದಲ್ಲಿ ಅಚ್ಚ ಶುಭ್ರ ಸೋಗೆಯ ಸೊಬಗಿನಿಂದಲೂ ವಿರಾಜಿಸುತ್ತಿವೆ. ಹೊಲದ ಸುತ್ತಮುತ್ತ ಹಾಕಿದ ಚಪ್ಪರಕ್ಕೆ ಹಬ್ಬಿದ ಹೀರೆ, ಸವತೆ, ತೊಂಡೆ, ಪಡುವಲ ಬಳ್ಳಿಗಳು ಸಮೃದ್ಧವಾದ ಹೂ ಹೀಚು ಕಾಯಿಗಳಿಂದ ಎಂಥವರ ಮನಸ್ಸನ್ನೂ ಸೂರೆಗೊಳ್ಳುತ್ತಿವೆ. ಅಲ್ಲಲ್ಲಿ ಸಾಲುಸಾಲಾಗಿ ಹಚ್ಚಿದ ಮೆಣಸಿನ ಗಿಡಗಳು ಗೊಂಚಲು ಗೊಂಚಲು ಕಾಯಿಗಳ ಭಾರದಿಂದ ಬಳುಕಿ ಸುಳಿಗಾಳಿಗೆ ಅಲ್ಲಾಡುತ್ತಿವೆ. ತೋಟಪಟ್ಟಿಯಲ್ಲಿ ಅಡಿಕೆ ತೆಂಗುಗಳ ಹಿಂಗಾರ (ಹೊಂಬಾಳೆ)ಗಳ ಸುಮಧುರ ಸುಗಂಧ ಹೊತ್ತ ಗಾಳಿ ಎಲ್ಲರ ಘ್ರಾಣೇಂದ್ರಿಯಕ್ಕೆ ಅವ್ಯಕ್ತ ತೃಪ್ತಿಯ ನಿಟ್ಟುಸಿರು ಬರುವಂತೆ ಮಾಡಿವೆ. ಅರಣ್ಯದ ನಾನಾವಿಧವಾದ ತರುಲತೆ ಗುಲ್ಮಗಳು ವಿವಿಧ ವರ್ಣದ ಹೂಗಳಿಂದ ರಂಜಿತಗೊಂಡು ನೋಡವವರ ಕಣ್ಣ ಬರವನ್ನೇ ಹಿಂಗಿಸುವಂತೆ ಕಾಣುತ್ತಿವೆ. ಹೊಲದ ಬದುಗಳಲ್ಲಿ ಒಡ್ಡುಗಳಲ್ಲಿ ಎಲ್ಲೆಂದರಲ್ಲಿ ತಂತಾನೆ ಹುಟ್ಟಿ ಬೆಳೆದ ಅಜವಾನ, ಬಡೇ ಸೋಪಿನ ಚಿಕ್ಕ ಚಿಕ್ಕ ಗಿಡಗಂಟೆಗಳು ಶುಭ್ರವರ್ಣದ ಹೂಗಳಿಂದ ವೃತ್ತಾಕಾರವಾಗಿ ಹೊಮ್ಮಿನಿಂತು ಭೂದೇವಿಗೆ ಶ್ವೇತಛತ್ರಿಯನ್ನು ಹಿಡಿದಂತಿವೆ. ಕಾಡುಬೆಂಡೆ ಮೆಕ್ಕಾಬಳ್ಳಿಗಳು ಮೈ ತುಂಬ ಕಾಯಿ ತುಂಬಿ ತಮ್ಮನ್ನು ಚೂಟಿ ತೆಗೆದು ಕೊಂಡು ಹೋಗಿ ತಿನ್ನುವವರಿಗಾಗಿ ದಾರಿ ಕಾಯುತ್ತವೆ.

ಇಂಥ ಅಟ್ಟಹಾಸದ ಪ್ರಕೃತಿದೇವಿಯ ಮಧ್ಯದಲ್ಲಿ ಮೂಡೂರಿನಿಂದ ಹಿರೇಕಾಂಶಿಗೆ ನಡೆದು ಕೊಂಡು ಬಂದ ನಮ್ಮ ಇನ್‌ಸ್ಪೆಕ್ಟರ್ ಸಾಹೇಬರು ಮುದಗೊಂಡು ಹರ್ಷಪುಳುಕಿತ ಗಾತ್ರರಾಗಿ ಶಾಲೆಗೆ ಬರಬೇಕಾಗಿತ್ತು. ಅದಕ್ಕೆ ಬದಲಾಗಿ ಬುಸುಗುಡುತ್ತಲೇ ಬಂದರು. ಆಗ ಶಾಲೆಯಲ್ಲಿ ನಾನು ನನ್ನ ನಿತ್ಯದ ಪಾಠಪ್ರವಚನದಲ್ಲಿ ಗಾಢವಾಗಿ ತಲ್ಲೀನನಾಗಿದ್ದೆ. ಬಾಲಬೋಧೆ ಒಂದರಿಂದ ನಾಲ್ಕರವರೆಗೆ ನಾಲ್ಕು ತರಗತಿಗಳು ಹೀಗೆ ಒಮ್ಮೆ ಐದು ತರಗತಿಗಳಲ್ಲಿ ಕೆಲವರಿಗೆ ಓದಲು ಕೆಲವರಿಗೆ ಬರೆಯಲು ಕೊಟ್ಟು ನಾಲ್ಕನೆಯ ತರಗತಿಯವರೆಗೆ ಗದ್ಯವನ್ನೋ ಪದ್ಯವನ್ನೊ ಪಾಠ ಮಾಡುತ್ತಿದ್ದೆ. ನನ್ನ ಶಾಲೆ ನಡೆಯುತ್ತಿದ್ದುದೇ ಬಸವಣ್ಣ ದೇವರ ಗುಡಿಯಲ್ಲಿ. ಸುತ್ತಲೂ ಅದಕ್ಕೆ ಮಣ್ಣಿನಿಂದ ಮಾಡಿದ ಕಟ್ಟೆಯಿತ್ತು. ದನಕರುಗಳು ರಾತ್ರಿ ಹೊಗದಿರಲೆಂದು ಕಿರಿಯಗಲದ ಮಣ್ಣಿನಿಂದಲೇ ಮಾಡಿದ ಹಾಯ್ಬಾಗಿಲು. ಅದಕ್ಕಿಂತ ಮುಂದೆ ಒಂದು ವಿಶಾಲವಾದ ಪಡಸಾಲೆ. ಹಿಂಭಾಗದಲ್ಲಿ ವೃಷಭವಿಗ್ರಹ. ಹೀಗಿರುವ ಶಾಲೆಯ ಬಾಗಿಲಿಗೆ ಬಂದವರೇ ಮೊದಲು ಉರಿದುಬಿದ್ದದ್ದು ಶಾಲೆಯ ಸುತ್ತಣ ಕಟ್ಟೆಯ ಒಂದು ಭಾಗದಲ್ಲಿ ಶಾನುಭೋಗರ ಕೃಷ್ಣಪ್ಪ ಎಂಬುವರು ಕುಳಿತದ್ದು ನೋಡಿ. ಹೊರಗೆ ನಿಂತು ಕೊಂಡೇ "ಏನ್ರಿ ಇದು! ಶಾಲೆ ನಡೆಯುವಾಗ ಶಾಲೆಯ ಕಟ್ಟೆಯ ಮೇಲೆ ಬೇರೆಯವರು ಬಂದು ಕುಳಿತುಕೊಳ್ಳಲು ಅವಕಾಶ ಕೊಟ್ಟಿದ್ದೀರಿ!" ಎಂಬುದು. ಎರಡನೆಯ ಅವರ ಸಿಟ್ಟೆಂದರೆ ಕಿರಿಯಗಲದ ಬಾಗಿಲಲ್ಲಿ ಅವರು ಬರುವಂತೆ ಇಲ್ಲದುದು. ಅದಕ್ಕಾಗಿ ಸ್ವಲ್ಪ ಹೊತ್ತು ಬಾಗಿಲಲ್ಲೇ ನಿಂತು ಬಿಟ್ಟು ಇಷ್ಟೆಲ್ಲ ಮಾತಾಡಲು ಪ್ರಾರಂಭಿಸಿದ್ದರು. ಅವರು ಕುಳ್ಳರು ಎಂದರೆ ತೀರಾ ಕುಳ್ಳರು. ಆದರೆ ಅಡ್ಡಗಲ ಬೆಳೆದ ದೇಹ, ಹೊಟ್ಟೆ ದಪ್ಪ. ಕಿರಿಯಗಲದ ಈ ಬಾಗಿಲಿಂದ ಸಹಜವಾಗಿ ಒಳಗೆ ಬರುವಂತಿರಲಿಲ್ಲವೆಂಬುದನ್ನು ನಾನು ಥಟ್ಟನೆ ಗಮನಿಸಿದೆ. ಬರಲು ಪ್ರಯತ್ನಿಸುತ್ತಿದ್ದರೆ ಅವರ ಹೊಟ್ಟೆ ಸಿಕ್ಕಿಹಾಕಿಕೊಳ್ಳುವ ಸಂಭವವಿತ್ತು. ಇದಕ್ಕೂ ಮೊದಲು ಇಂಥ ಒಂದು ಸಂಕಟದಿಂದ ಪಾರಾಗಿ ಬಂದಿದ್ದರೆಂದು ಆಮೇಲೆ ನನಗೆ ತಿಳಿಯಿತು. ಮೂಡೂರಿನಿಂದ ಹಿರೇಕಾಂಶಿಗೆ ಗಾಡಿಯ ವಿಶಾಲವಾದ ದಾರಿಯಿತ್ತು. ಆ ದಾರಿಯಿಂದ ಅವರು ಬರದೆ ಹೊಲವಾರಿಯ ದಾರಿಯಿಂದಲೇ ಬಂದಿದ್ದರು.

ಬಹುಶಃ ಅವರು ಆಹ್ಲಾದಕರ ಪ್ರಕೃತಿಯ ಸೊಬಗನ್ನನುಭವಿಸಲೆಂದೇ ಹೊಲವಾರಿ ದಾರಿಯಲ್ಲಿ ಬಂದಿರಬೇಕು ಎಂದು ಅನ್ನಿಸಿತು. ಊರ ಸಮೀಪಕ್ಕೆ ಬಂದಾಗ ಆ ದಾರಿ ಮುಸ್ಲಿಮರ ಒಂದು ದೊಡ್ಡ ಹಿತ್ತಿಲಲ್ಲಿ ಹಾದು ಅವರ ಮನೆ ಸಂದಿಯಿಂದ ಊರೊಳಗೆ ಹೋಗುವಂತಹುದು. ಹೊಲಕ್ಕೂ ಹಿತ್ತಿಲಿಗೂ ಮಧ್ಯದಲ್ಲಿ ದನಕರುಗಳ ಬಾಧೆಯಾಗಬಾರದೆಂದು ಕವೆಗೋಲಿನಾಕಾರದ ಒಂದು ಮರವನ್ನು ನೆಟ್ಟಿದ್ದರು. ಆ ಕವೆಮರದಲ್ಲಿ ಹಾಯ್ದು ಬರಬೇಕು. ಅತ್ತ ಇತ್ತ ಮುಳ್ಳು ಬೇಲಿ ಮಧ್ಯದಲ್ಲಿ ಕವೆಮರ. ಸಾಹೇಬರು ಆ ಕವೆಮರದಲ್ಲಿ ಹಾಯ್ದು ಬರಲಾಗದೆ ತೊಂದರೆಯನ್ನನುಭವಿಸಿ ಬಿಟ್ಟರಂತೆ. ನೇರವಾಗಿ ದಾಟಿ ಹೋದರೆ ಹೊಟ್ಟೆ ಸಿಕ್ಕಿಕೊಂಡು ಬಿಡುತ್ತಿತ್ತು. ಅಡ್ಡಲಾಗಿ ಹಾಯೋಣವೆಂದರೆ ದಪ್ಪನಾದ ಹಿಂಭಾಗ ಸಿಕ್ಕಿಹಾಕಿಕೊಳ್ಳುತ್ತಿತ್ತು. ಹೀಗಾಗಿ ಪೇಚಾಡುತ್ತ ಈ ಹಳ್ಳಿಹೈದರಿಗೆ ಬುದ್ಧಿಯೆಂಬುದೇ ಇಲ್ಲ ಎಂದು ಗುಡುಗಾಡ ತೊಡಗಿದರಂತೆ. ಇದನ್ನು ಕೇಳಿಸಿಕೊಂಡ ಹನೀಫ ಬಂದು "ಸಾಹೇಬರೇ ತಾವು ಓಣಿಗುಂಟ ಬಂದಿದ್ರ ಚೆಲೋ ಆಗ್ತಿತ್ರಿ. ಈ ದಾರಿಂದ ಬಂದು ಈಗ ದಾಟಾಕ ಬರದಂಗಾಯ್ತಿ" ಎಂದು ಹುಸಿನಗೆಯಿಂದಲೇ ನಗುತ್ತ ಅಂದಾಗ ಸಾಹೇಬರ ಸಿಟ್ಟು ನೆತ್ತಿಗೇರಿ ಮಾತಾಡಿದರು. "ಕೇಳಯ್ಯ ಇದ್ನ ಮೊದಲು. ಒಳ್ಳೆ ಚೆನ್ನಾಗಿದೆ! ಇದನ್ನು ಯಾಕಯ್ಯ ಜನ ಬರೋದಾರಿಗೆ ಹುಗಿದಿರೋದು". ಹೀಗೆ ಮಾತಾಡಿದಾಗ ಹನೀಫ "ಸಾಹೇಬ್ರ ತಾವು ಯಾರೊ ಗೊತ್ತಾಗಲಿಲ್ಲ?" ಎಂದನಂತೆ. "ನಾವು ಸಾಲಿ ಸಾಹೇಬ್ರು. ನಿಮ್ಮೂರ ಸಾಲಿ ತಪಾಸಣೆಗೆ ಬಂದೇವಿ. ತೆಗೆಯಯ್ಯಾ" ಎಂದರಂತೆ ಸಾಲಿ ತಪಾಸಣೆಗೆ ಎಂದೊಡನೆ ನನ್ನಲ್ಲಿ ಅತ್ಯಂತ ಭಕ್ತಿಯಿಂದ ವ್ಯವಹರಿಸುತ್ತಿದ್ದ ಹನೀಫ್ ಗುದ್ದಲಿ ತಂದು ಮರವನ್ನು ಕಿತ್ತು ಅವರಿಗೆ ದಾರಿ ಮಾಡಿ ಕಳಿಸಿಕೊಟ್ಟನಂತೆ. ಈ ಕಥೆಯನ್ನು ಹನೀಫ ನನಗೆ ಆಮೇಲೆ ಬಂದು ಹೇಳಿ ನಗಿಸಿ ಸುಸ್ತುಗೊಳಿಸಿಬಿಟ್ಟ. ಸಾಹೇಬರು ಬುಸುಗುಡುತ್ತ ಶಾಲೆಬಾಗಿಲಿಗೆ ಬಂದು ರಾದ್ಧಾಂತ ಎಬ್ಬಿಸಿದ್ದು ಇದೇ ಕಾರಣಕ್ಕಾಗಿ ಎಂಬುದು ನನಗೆ ಆಮೇಲೆ ತಿಳಿಯಿತು. ಅಲ್ಲದೆ ಶಾಲೆಯಲ್ಲೂ ಅವರು ಸಹಜವಾಗಿ ದಾಟಲು ಬರುವಂತೆ ಇಲ್ಲದುದೂ ಕಾರಣವಾಗಿತ್ತು. ನಾನು ಸಮಯಪ್ರಜ್ಞೆಯಿಂದ ಕಟ್ಟೆಯ ಬಲಭಾಗದಲ್ಲಿ ಅವರನ್ನು ಕರೆದು ಕೊಂಡು ಬಂದು ಕಟ್ಟೆಯನ್ನು ಸುಲಭವಾಗಿ ಹತ್ತಿ ಶಾಲೆಯೊಳಗೆ ಇಳಿದು ಬರುವಂತೆ ಮಾಡಿದೆ. ಬಾಗಿಲಲ್ಲಿ ಬರಲು ಅವರಿಗೆ ಸಾಧ್ಯವೇ ಇರಲಿಲ್ಲವೆಂಬುದನ್ನು ಗಮನಿಸಿದುದು ನನ್ನ ಸಮಯೋಚಿತ ಪ್ರಜ್ಞೆಯಾಗಿತ್ತು. ಇಷ್ಟು ಹೊತ್ತಿಗಾಗಲೆ ನಮ್ಮ ಬಸನಗೌಡ, ಬಾಳಿಹಳ್ಳಿ ಬಸವಣ್ಣಪ್ಪ ಶಾಲೆಗೆ ಬಂದು ಇನ್‌ಸ್ಪೆಕ್ಟರರಿಗೆ ಶರಣು-ಶರಣಾರ್ಥಿಶಾಸ್ತ್ರ ಮುಗಿಸಿದರು. ಬುಸುಗುಡುತ್ತಿದ್ದ ಸಾಹೇಬರು ಅವರೊಡನೆಯೂ ಸರಿಯಾಗಿ ಆಗ ಮಾತಾಡಲೇ ಇಲ್ಲ. ಅತ್ತೆಯ ಮೇಲಿನ ಸಿಟ್ಟು ಕೊತ್ತಿಯ ಮೇಲೆ ಅನ್ನುವಂತೆ ನನ್ನ ಮೇಲೆ ಬುಸುಗುಡತೊಡಗಿದರು. ಬೆಣ್ಣೆಯಲ್ಲೂ ಕಲ್ಲು. ಕೃಷ್ಣಪ್ಪ ಅಷ್ಟು ಹೊತ್ತಿಗೆಗಾಗಲೇ ಕಟ್ಟೆಯ ಮೇಲಿಂದ ಬುಸುಗುಡುತ್ತಿದ್ದ ಇವರಿಗೆ ಅಂಜಿ ಪರಾರಿ ಆಗಿದ್ದ. "ಶಾಲೆಯ ಕಟ್ಟೆಯ ಮೇಲೆ ಕಂಡ ಕಂಡವರೆಲ್ಲ ಬಂದು ಕುಳಿತುಕೊಳ್ಳಲಿಕ್ಕೆ ಅವಕಾಶ ಕೊಟ್ಟರೆ ಶಾಲೆಯ ಕೆಲಸ ಹೇಗೆ ಸಾಗಬೇಕು. ಮಕ್ಕಳೆಲ್ಲ ಅವರನ್ನು ನೋಡುತ್ತ ಕುಳಿತು ಕೊಳ್ಳುವುದಿಲ್ಲವೆ? ಏನಿಮ?" ಹಾಗೆ ಹೀಗೆ ಗುಡುಗಾಟವೇ ಗುಡುಗಾಟ. ನಾನು ಅವರಿಗೆ "ಸ್ವಾಮಿ ಇದು ಹೇಳಿ ಕೇಳಿ ಬಯಲು ಗುಡಿ. ಬಂದು ಕುಳಿತವರೂ ಈ ಊರ ಶಾನುಭೋಗ" ಇತ್ಯಾದಿ ಮಾತಿಗಳೆಯಬಹುದಿತ್ತು. ಹಾಗೆ ಮಾಡದೆ ಮೌನವನ್ನು ಧರಿಸಿದ್ದು ಅವರ ಮಾತಿಗೆ ಮೆಚ್ಚಿನ ಧ್ವನಿ ಬಂದಿತ್ತು. ಅದನ್ನೆಲ್ಲ ತಡೆದುಕೊಂಡೆ.

ಎಲ್ಲಿ ಅಟೆಂಡೆನ್ಸ್? ಒಂದನೇ ನಂಬರ್ ರಿಜಿಸ್ಟರ್... ಕೊಡಿ ಅಂದರು. ಶಾಲೆಯಲ್ಲಿ ಅವನ್ನಿಡಲು ಪೆಟ್ಟಿಗೆಯಾಗಲಿ,ಭದ್ರವಾಗಿ ಆ ಪೆಟ್ಟಿಗೆಯನ್ನು ಇಡಲು ಸ್ಥಳವಾಗಲಿ ಇರಲಿಲ್ಲ. ಅದೊಂದು ಬಯಲು ದೇವಾಲಯ. ಯಾವ ಸಮಯದಲ್ಲಾಗಲಿ, ಯಾರೇ ಆಗಲಿ ಆ ಗುಡಿಯಲ್ಲಿ ಹೋಗಲು ಬರಲು ಅವಕಾಶವಿದ್ದ ಸ್ಥಳವಾಗಿತ್ತು. ಅದಕ್ಕೆ ಬೀಗಮುದ್ರೆ ಹಾಕಲು ಸಾಧ್ಯವಿರಲಿಲ್ಲವಾಗಿ ನಾನು ರಿಜಿಸ್ಟರು, ನಕ್ಷೆಗಳು ಮೊದಲಾದವನ್ನು ನನ್ನ ಕೊಠಡಿಯಲ್ಲಿಟ್ಟುಕೊಂಡದ್ದೆ. ಆದ್ದರಿಂದ ಸಾಹೇಬರಿಗೆ "ಅವನ್ನು ನನ್ನ ಕೊಠಡಿಯಲ್ಲಿ ಇಟ್ಟುಕೊಂಡಿದ್ದೇನೆ. ಇಲ್ಲಿ ಸುರಕ್ಷಿತವಾಗಿ ಇಡಲು ಸ್ಥಳವಿಲ್ಲ" ಎಂದೆ. "ಇಲ್ಲಿಗೆ ಕೊಠಡಿ ಎಷ್ಟುದೂರ?" ಎಂದರು. ಒಂದು ಫರ್ಲಾಂಗು ದೂರ ಆಗಬಹುದು ಎಂದೆ. ಯಾರನ್ನಾದರೂ ಕಳಿಸಿ ತರಿಸಿ ಎಂದರು. "ಅದಕ್ಕೆ ನಾನೇ ಹೋಗಬೇಕಲ್ಲದೆ ಬೇರೆಯವರನ್ನು ಕಳಿಸುವಂತಿಲ್ಲ" ಎಂದೆ.

ನಾನು ಹೋದೆ, ನಿಜವಾಗಿ ನಾನು ದಿನನಿತ್ಯದ ಹುಡುಗರ ಹಾಜರಾತಿಯನ್ನು ಶಾಲೆ ಬಿಟ್ಟ ಮೇಲೆಯೇ ಎಳೆದು ಬಿಡುತ್ತಿದ್ದೆ. ನಾಲ್ವತ್ತೂ ನಾಲ್ವತ್ತೈದು ಹುಡುಗರ ಎಲ್ಲ ಮುಖಗಳೂ ಸಹಜವಾಗಿ ನನ್ನ ಜ್ಞಾಪಕದಲ್ಲಿರುತ್ತಿದ್ದವಾಗಿ ಮನೆಗೆ ಹೋದ ಮೇಲೆಯೇ ಹಾಜರಿಗುರ್ತ ಎಳೆಯುತ್ತಿದ್ದೆ. ಕೆಲವೊಮ್ಮೆ ಎರಡು ಮೂರು ದಿನಗಳ ಹಾಜರಿಕಾರ್ಡನ್ನು ಒಮ್ಮೆಲೆ ಎಳೆಯುತ್ತಿದ್ದುದೂ ಉಂಟು. ಶಾಲಾ ಕೆಲಸದಲ್ಲಿ ಕೆಲವರು ರಿಕಾರ್ಡ್‌ನ್ನು ಅಪ್‌ಟುಡೇಟ ಆಗಿ ಇಟ್ಟಿರುತ್ತಾರೆ. ಶಾಲೆ ಕೆಲಸ ಮಾತ್ರ ಸೊನ್ನೆ. ಇನ್ನು ಕೆಲವರು ರಿಕಾರ್ಡ್ ಬಗ್ಗೆ ಅಸಡ್ಡೆ, ಕೆಲಸವನ್ನು ಮಾತ್ರ ಗುರಿಮೀರಿ ಸಾಧಿಸಿರುತ್ತಾರೆ. ನಾನು ಎರಡನೇ ಗುಂಪಿನ ಮನುಷ್ಯ. ಎಲ್ಲ ರಿಕಾರ್ಡನ್ನು ಸರಿಯಾಗಿಟ್ಟಿದ್ದೆ. ಅಟೆಂಡೆನ್ಸ್‌ನಲ್ಲಿ ಸ್ವಲ್ಪ ಔದಾಸೀನ್ಯ. ಶಾಲೆ ಕೆಲಸಕ್ಕಂತೂ ಸೂರ್ಯ ಹುಟ್ಟುವುದು ಮುಳುಗುವುದು ಇವೆರಡೇ ಗಡಿಯಾರ ನನಗೆ. ಮಧ್ಯಾಹ್ನ ಎಲ್ಲ ಪಾಠ ಮುಗಿಯುವುದಕ್ಕೇ ಹನ್ನೊಂದು ಹನ್ನೊಂದೂವರೆ ಆಗುತ್ತಿತ್ತು. ಒಬ್ಬನೇ ಉಪಾಧ್ಯಾಯನಿರುವ ಶಾಲೆಗಳ ಹಣೆಬರಹವೇ ಇಷ್ಟು. ಪ್ರಾಮಾಣಿಕವಾಗಿ ಕೆಲಸ ಮಾಡುವವನಿಗೆ ಬೆಳಗಿನ ಏಳುಘಂಟೆಯಿಂದ ಹನ್ನೊಂದರವರೆಗೆ, ಒಮ್ಮೊಮ್ಮೆ ಹನ್ನೊಂದುವರೆಯವರೆಗೂ ಕಾಲ ಬೇರೆ ಬೇಕಾಗುತ್ತಿತ್ತು. ನಮ್ಮ ಶಾಲೆ ನಡೆಯುತ್ತಿದ್ದುದು ಹೀಗೆ. ಎಷ್ಟೋಸಲ ಮಕ್ಕಳ ಪಾಲಕರೇ ಶಾಲೆಗೆ ಬಂದು "ನಮ್ಮ ಹುಡುಗ ಬೆಳಿಗ್ಗೆ ಏನೂ ತಿಂದಿರಲಿಲ್ಲ, ಹೊಟ್ಟೆ ಹಸಿದಿರಬಹುದು, ಕಳಿಸಿಕೊಡುತ್ತೀರಾ! ಉಂಡು ಬರುತ್ತಾನೆ" ಎಂದು ನನ್ನ ಹತ್ತಿರ ಕೇಳಬೇಕಾದ ಪ್ರಸಂಗಗಳೂ ಇದ್ದವು. ಮಧ್ಯಾಹ್ನ ಎರಡು ಘಂಟೆಯಿಂದ ಐದು - ಐದೂವರೆಯವರೆಗೆ ಶಾಲೆ ಕೆಲಸ ನಡೆಯುತ್ತಿತ್ತು. ಐದು ಘಂಟೆಗೆ ಪಾಠವನ್ನೆಲ್ಲ ಮುಗಿಸಿ ಏದೂವರೆವರೆಗೆ ಪುರೋಟಿ ಹೇಳಿಸಬೇಕಾಗುತ್ತಿತ್ತು. ಪುರೋಟಿ (ಬಾಯಿ ಪಾಠ ಹೇಳಿಸುವುದು) ಪ್ರಾಥಮಿಕ ಶಾಲೆಗಳಲ್ಲಿ ಒಂದು ಒಳ್ಳೆಯ ಅಭ್ಯಾಸ. ಅದರಿಂದ ಮಕ್ಕಳ ಉಚ್ಚಾರಣಾ ಶಕ್ತಿ ಹೆಚ್ಚುತ್ತಿತ್ತು. ಕಂಠಪಾಠ ಶಕ್ತಿ ಒದಗುತ್ತಿತ್ತು. ಕಂಠಪಾಠಕ್ಕೆ ಆಧುನಿಕ ಮನಶಾಸ್ತ್ರ ಒಪ್ಪುವುದಿಲ್ಲವಾದರೂ ಮಗ್ಗಿಯಂಥ ವಿಷಯಗಳು ಕಂಠಪಾಠವಾಗದಿದ್ದರೆ ಹೇಗೆ? ಕಾಗುಣಿತ ಮೊದಲಾದವು ಕೇವಲ ಉಚ್ಚಾರಣಾ ಶುದ್ಧಿಗಾಗಿ ಪ್ರಾಥಮಿಕ ಹಂತದಲ್ಲಿ ಅನಿವಾರ್ಯ. ಯಾರು ಏನೇ ಹೇಳಲಿ, ಈ ಪ್ರಾಥಮಿಕ ತರಗತಿಯಲ್ಲಿ ಮಕ್ಕಳಲ್ಲಿ ಕೆಲವು ಶಕ್ತಿಗಳನ್ನುಂಟು ಮಾಡಬೇಕೆನ್ನುವ ಪ್ರಾಮಾಣಿಕ ಉಪಾಧ್ಯಾಯ ಮಾಡುವ ಕೆಲಸಗಳಿವು. ಇದನ್ನು ಅಂದಿನ ಶಿಕ್ಷಣತಜ್ಞರೂ ಒಪ್ಪುತ್ತಿದ್ದರು. ಅಂಥ ಕೆಲವು ಶಿಕ್ಷಣ ಪದ್ಧತಿಗಳು ಮಾಯವಾದ ಮೇಲೆ ಮಕ್ಕಳಲ್ಲಿ ಉಚ್ಚಾರಣಾದೋಷಗಳು ಅಶುದ್ಧ ಶ್ರವಣ ಜ್ಞಾನಗಳು ಹೋಗಿವೆ

ಏನ್ನಲಡ್ಡಿಯಿಲ್ಲ. ನಾನು ಶ್ರದ್ಧೆಯಿಂದ ಇಷ್ಟೊಂದು ಕೆಲಸ ಮಾಡುತ್ತಿದ್ದನಾಗಿ ನಾಲ್ಕನೇ ತರಗತಿಗೆ ಸರಳ ಬಡ್ಡಿ, ಅಪೂರ್ಣಾಂಕಗಳು ಸರಳಚಕ್ರಬಡ್ಡಿ ಲೆಕ್ಕ ಮಾಡಿಸುತ್ತಿದ್ದೆ. ಬಾಯಿಲೆಕ್ಕದ ಅಭ್ಯಾಸದಲ್ಲಂತೂ ನಮ್ಮ ಶಾಲೆಯ ಮಕ್ಕಳು ಬಹಳ ಮುಂದಿದ್ದರು.

ನಾನು ಅಟೆಂಡೆನ್ಸ್ ರಿಜಿಸ್ಟರ್ ತೆಗೆದು ನೋಡಿದಾಗ ಒಟ್ಟು ಹತ್ತು ಹನ್ನೆರಡು ದಿನಗಳ ಹಾಜರಿ ಗುರುತು ಮಾಡದಿರುವುದು ಗೊತ್ತಾಯಿತು. ಗಡಿಬಡಿಯಿಂದ ಹಾಜರಿ ಗುರುತು ಮಾಡುವುದಕ್ಕೆ ಪ್ರಾರಂಭಿಸಿ ಬಿಟ್ಟೆ. ಗಡಿಬಿಡಿಯಲ್ಲಿ ಆದಿತ್ಯವಾರ, ವಾರದ ಅರ್ಧದಿನವಾದ ಸೋಮವಾರದ ಎರಡೂ ಹೊತ್ತೂ ಹಾಜರಿ ಎಳೆದು ಬಿಟ್ಟೆ. ಅಷ್ಟು ಹೊತ್ತಿಗೆ ಶಾಲೆಯ ಹತ್ತಿರ ಅನೇಕ ಜನರು ಸೇರಿದು ಇನ್ಸ್‌ಸ್ಪೆಕ್ಟರರಿಗೆ 'ನಮ್ಮೂರ ಪುಣ್ಯಕ್ಕೆ ಇಂಥ ಮಾಸ್ತರರು ಸಿಕ್ಕಿದ್ದಾರೆ. ಮಾಸ್ತರ ಅಂದರೆ ಮಾಸ್ತರು. ನಮ್ಮೂರ ಮಕ್ಕಳಿಗೆ ಬೆಳಿಗ್ಗೆ ಸೂರ್ಯ ನಮಸ್ಕಾರ ಮಾಡಿಸಿ ದೃಢಕಾಯರನ್ನಾಗಿಸಿದ್ದಾರೆ. ಪಾಠ ಪ್ರವಚನ ಏನೆಲ್ಲ ಕಷ್ಟಪಟ್ಟು ಮಾಡಿ ಮಕ್ಕಳನ್ನು ಬಹುಬುದ್ಧಿವಂತರನ್ನಾಗಿ ಮಾಡಿದ್ದಾರೆ, ಹಾಗೇ ಹೀಗೆ' ಏನೆಲ್ಲ ಹೇಳಿ ಇನ್‌ಸ್ಪೆಕ್ಟರರ ಅರ್ಭಟ ಕಡಿಮೆಮಾಡಿದ್ದರು. ಅವರ ಸಿಟ್ಟೆಲ್ಲ ಇಳಿದಿತ್ತು. ಉಪಾಧ್ಯಾಯರ ಮೇಲೆ ಇಷ್ಟು ಜಬರ್ದಸ್ತ್ ಮಾಡದಿದ್ದರೆ ಹೇಗೆ? ಆ ಕಾಲದ ಕೆಲವು ಇನ್‌ಸ್ಪೆಕ್ಟರರ ವರ್ತನೆ ಹಾಗೆ ಇತ್ತು. ವಿನಾಕಾರಣ ಉಪಾಧ್ಯಾಯರ ಮೇಲೆ ಗುರ್ ಎಂದು ಅವರು ಹೆದರಿ ಕೊಳ್ಳುವಂತೆ ಮಾಡುವುದು ಕೆಲವರ ಚಟವಾಗಿತ್ತು. ಅವರ ಸಿಟ್ಟಿಗೆ ನಿಜವಾದ ಕಾರಣವೇನೆಂಬುದನ್ನು ಮೊದಲೇ ತಿಳಿಸಿದ್ದೇನೆ. ಇವರು ಹೊಸದಾಗಿ ವರ್ಗವಾಗಿ ಬಂದ ಇನ್‌ಸ್ಪೆಕ್ಟರ್ ಬೇರೆ. ಸೌಮ್ಯವಾಗಿ ಒಳ್ಳೆಮಾತಿನಿಂದ ವರ್ತಿಸಿದರೆ ಉಪಾಧ್ಯಾಯರು ತಲೆಯ ಮೇಲೆ ಏರಿ ನಿಲ್ಲುತ್ತಾರೆಂದು ಕೆಲವರ ತರ್ಕ. ಇದೇನೇ ಇರಲಿ ನಾನು ಅಟೆಂಡೆನ್ಸ್ ರಿಜಿಸ್ಟರ್ ಸಹಿತ ಎಲ್ಲ ರಿಕಾರ್ಡ್ ಗಂಟನ್ನು ಹೊರಿಸಿಕೊಂಡು ಬಂದೆ. ಅಟೆಂಡೆನ್ಸ್ ಮೊದಲು ನೋಡಿ, "ಏನ್ರೀ ಆದಿತ್ಯವಾರವೂ ಅಂಟೆಂಡೆನ್ಸ್ ಹಾಕಿದ್ದೀರಲ್ಲ ಏನಿದು?" ಅಂದೇ ಬಿಟ್ಟರು, ನಗುತ್ತ. ಅವರು ನಗುವುದನ್ನು ಕಂಡು ನನಗೆ ಸ್ವಲ್ಪ ಧೈರ್ಯ ಬಂತು. "ಪಾಠ ಪ್ರವಚನ ಮುಗಿಯುವುದಿಲ್ಲ. ಅದಕ್ಕೆ ಕಲವು ಆದಿತ್ಯವಾರ ಗಣಿತ, ಭೂಗೋಳ ಇತ್ಯಾದಿ ಪಾಠ ಮಾಡಬೇಕಾಗುತ್ತದೆ ಅದಕ್ಕಾಗಿ ಪಾಠಮಾಡಿದ ದಿನ ಹಾಗೆ ಅಟೆಂಡೆನ್ಸ್ ಗುರುತು ಮಾಡುತ್ತೇನೆ" ಎಂದೆ. ಅದಕ್ಕವರು" ಆದಿತ್ಯವಾರವೂ ಪಾಠಮಾಡಿದರೆ ಮಕ್ಕಳಿಗೆ ವಿರಾಮ ಬೇಡವೆನ್ನುತ್ತೀರೇನು?". "ಇಲ್ಲ ಇಲ್ಲ! ಹಾಗಲ್ಲ ಸಾಕಷ್ಟು ನನ್ನ ಸಮಕ್ಷಮವೇ ಹೆಚ್ಚು ಕಾಲ ಆಟಗಳನ್ನು ಆಡಿಸಿ ಒಂದೆರಡು ತಾಸು ಮಾತ್ರ ಪಾಠಪ್ರವಚನ ಮಾಡುತ್ತೇನಷ್ಟೆ."

ಅಷ್ಟರಲ್ಲಿ ಗೌಡರ ಮನೆಯಿಂದ ಮೊಸರು ಗಡಿಗೆ, ಅವಲಕ್ಕಿ, ಬಿಸಿ ಬಿಸಿ ಉಪ್ಪಿಟ್ಟು ಟೀ ಮತ್ತು ಹಾಲು ಮೊದಲಾದ ಪರಿಕರಗಳು ಮಗ್ಗಳವಾಗಿ ಬಂದುದನ್ನು ಗಮನಿಸಿದ ಇನ್‌ಸ್ಪೆಕ್ಟರ್ "ಇನ್ನು ಮೇಲೆ ಆದಿತ್ಯವಾರ ಅಟೆಂಡೆನ್ಸ್ ಮಾರ್ಕ ಮಾಡುವುದೇನೂ ಬೇಡ. ಆಯಿತು ನಾನೆಲ್ಲ ನೋಡಿಕೊಳ್ಳುತ್ತೇನೆ. ಒಳಗೆ ಅದೇನು ವ್ಯವಸೆ ಮಾಡಬೇಕೋ ಮಾಡು ಹೋಗಿ. ಹುಡುಗರನ್ನು ಮನೆಗೆ ಕಳಿಸಿ ಬಿಡಿ. ನಾಳೆ ಶಾಲೆಗೆ ಸೂಟಿ ಹೇಳಿ ಬಿಡಿ" ಇತ್ಯಾದಿ ಹೇಳಿ ಬಿಟ್ಟರು. ಬಹುಶಃ ಮೂಡೂರಿನಿಂದ ಬರುವಾಗ ಅವರಿಗೆ ಚಹಾದ ಹೊರತು ಏನೂ ದೊರೆತಿರಲಿಲ್ಲ. ಗೌಡರು ತಂದ ಪರಿಕರಗಳನ್ನು ಗಮನಿಸಿ ಅವರ ಬಾಯಲ್ಲೂ ನೀರೂರಿರಬೇಕೆಂದು ತೋರುತ್ತದೆ

ಇದೇ ಹೊತ್ತಿಗೆ ಅಹಮ್ಮದ್ ಸಾಹೇಬ ಬಂದು 'ಸಲಾಂ ಮಾಸ್ತರ್, ಸಾವಿ ಸಾಹೇಬ್ರು

ಬಂದ್ರು ಅಂದ್ರು. ಬಂದೆ, ನಮ್ಮ ಲಗ್ಗಸ್ ಸಾಹೇಬರೋ' ಎಂದು ಹುಬ್ಬಿನ ಮೇಲೆ ಕೈಯಿಕ್ಕಿ ಇನ್‌ಸ್ಪೆಕ್ಟರರನ್ನು ನೋಡಿದ. ನಾನು "ಲಗ್ಗಸ್ ಸಾಹೇಬರಲ್ಲ. ಅವರಿಗೆ ವರ್ಗವಾಗಿದೆ. ಬೇರೇ ಪಾಟೀಲ್ ಸಾಹೇಬರು ಅಂತಾ" ಎಂದೆ. ಅವನು ಮರವನ್ನು ಮಾತನಾಡಿಸುವ ಮನುಷ್ಯ. ಸಲಾಂ ಸಾಬ್ ಎಂದು ಹಣೆಗೆ ಕೈ ಹಚ್ಚಿ ಇನ್‌ಸ್ಪೆಕ್ಟರರಿಗೆ ನಮಸ್ಕರಿಸಿ, ನನ್ನ ವಿಷಯವಾಗಿ ತಾರೀಫ್ ಮಾಡುತ್ತ "ಹಿಂದೆ ಲಗ್ಗಸ್ ಸಾಹೇಬರು ಅನ್ನೋರು ಬರುತ್ತಿದ್ದರು. ಅವರು ಬಂದರೆ ಅವರಿಗೆ ಇಲ್ಲೆಲ್ಲ ಸರಿ ಹೋಗೋದಿಲ್ಲಾಂತ ನಮ್ಮ ಮನೆಗೆ ಕರಕೊಂಡು ಹೋಗಿ ಒಳ್ಳೇ ಮೇಜವಾನಿ ಮಾಡ್ಸಿಕಳಿಸುತ್ತಿದ್ದೆ ಸಾಹೇಬರ್ರೆ. ಈಗ ತಾವು ಬಂದಿದ್ದೀರಿ. ನಮ್ಮ ಮನೆಯಲ್ಲಿ ಉಣ್ಣೋರಲ್ಲಾ ಏನಲ್ಲ! ತಾವು ಹುಕುಂ ಮಾಡಿದರೆ ಮನೆಯಿಂದ ಹಾಲು ಸಕ್ಕರಿ ತರ್ಸಿ ಬಿಡ್ತೇನೆ" ಎಂದು ತಾನೇ ಮೇಲುಬಿದ್ದು ಮಾತನಾಡಿದ. ಆಗ ಬಸವನಗೌಡರು "ಇಲ್ಲೆಲ್ಲ ಏರ್ಪಾಡು ಮಾಡಿದ್ದೇವಪ್ಪಾ ಅಹ್ಮದ್‌ಸಾಬ್. ನೀನು ಬೇಕಾದರೆ ಇಲ್ಲಿ ಫಲಾರಾ ಮಾಡಬಹುದು" ಎಂದರು. "ತಾವು ಊರಧಣಿ, ದೊಡ್ಡಗೌಡರು. ತಾವು ಏರ್ಪಾಡು ಮಾಡಿದರೆ ಊರೂ ಕೇಳೋ ಹಾಂಗೆ ಇಲ್ಲ. ಮೊದ್ಲು ಸಾಹೇಬರ ಫಲಾರಾ ಆಗಲಿ. ಆಮೇಲೆ ನಾವು ನೀವೂ ಸೇರಿ ಮಾಡೋದೈತೇ ಐತಿ. ಸಾಹೇಬರೇ, ಏಳ್ರಿ ಪರಸ್ಥಳ. ಯಾವಾಗ ಚಾ-ಕಾಫಿ ಆಗಿತ್ತೋ ಏನೋ. ಮೊದಲು ಮುಗಿಸಿಕೊಂಡು ಬಂದು ನೋಡೀವಂತ್ರಿ. ಅದರಲ್ಲಿ ನಮ್ಮ ಮಾಸ್ತರ ಸಾಲಿಕೆಲ್ಸ ಯಾರೂ ಬೆಳ್ಳು ಮಡಚೋಂಗೆ ಇಲ್ಲ. ಸುತ್ಲ ಹತ್ತು ಹಳ್ಳಿ ಜನ ಹಿರೇಕಾಂಶಿ ಮಾಸ್ತರು ಅಂದ್ರ ಕೈ ಎತ್ತಿ ಮುಗಿತ್ಯಾರು ಸಾಹೇಬ್ರ. ಅಪರೂಪಕ್ಕೆ ಈ ಕಾಡುಹಳ್ಳಿಗೆ ದಾರಿತಪ್ಪಿ ಬಂದಿರೋ ಪುಣ್ಯಾತ್ಮರು! ಪುಣ್ಯಾತ್ಮರು" ಎಂದು ಒಂದಕ್ಕೆ ಹತ್ತರಷ್ಟು ವರ್ಣನೆ ಮಾಡಿ ಇನ್‌ಸ್ಪೆಕ್ಟರರನ್ನು ಸುಸ್ತುಗೊಳಿಸಿಬಿಟ್ಟ.

ಅಷ್ಟರಲ್ಲಿ ಶಾಲೆಯನ್ನು ಬಿಟ್ಟು ದಫ್ತರ್ ಗಂಟು ಕಟ್ಟಿದೆ. ಕಾಫಿ ತಿಂಡಿಗೆ ಗುಡಿಯ ಒಳಗೆ ದೇವರ ವಿಗ್ರಹವಿರುವ ಕಡೆ ಇರುವ ವಿಸಾಲ ಸ್ಥಳದಲ್ಲಿ ಇನ್‌ಸ್ಪೆಕ್ಟರ್‌ರನ್ನು ಕುಳ್ಳಿರಿಸಿದೆ. ಅವಲಕ್ಕಿ ಮೊಸರು, ಉಪ್ಪಿಟ್ಟು ಮೊಸರು ನೀಡಿದೆ. ಕಂಠ ಪೂರ್ತಿ ಬಿಗಿದು ಒಬ್ಬರು ಒಳ್ಳೆ ಹಾಲಿನಲ್ಲೇ ಮಾಡಿದ ಚಹಾವನ್ನು ಕಪ್‌ನಷ್ಟು ಕುಡಿದು ಮೀಸೆ ತಿಕ್ಕಿಕೊಳ್ಳುತ್ತ ಹೊರಗೆ ಬಂದು ಕುಳಿತರು. ನಮ್ಮ ಊಹೆ ಸರಿಯಾಯಿತು. ಕಳೆದ ರಾತ್ರಿ ಅವರಿಗೆ ಸರಿಯಾಗಿ ಊಟೋಪಚಾರವಾಗಿಲ್ಲವೆಂದೂ, ಮೂಡೂರ ಊಟ ಸೇರಲಿಲ್ಲವೆಂದು ಬೆಳಿಗ್ಗೆ ಕೇವಲ ಒಂದು ಕಪ್ ಚಹಾ ಕುಡಿದು ಬಂದುದಾಗಿಯೂ ಈ ಊಟದಿಂದ ಪ್ರಸನ್ನಚಿತ್ತರಾಗಿ ಬಿಟ್ಟರು. ಆಮೇಲೆ ನಾವೆಲ್ಲ ನಾಲ್ಕೈದು ಜನ ಒಳಗೆ ಹೋಗಿ ಅವಲಕ್ಕಿ ಮೊಸರು-ಉಪ್ಪಿಟ್ಟು- ಚಹಾ ವಗೈರೆ ಅಹಮ್ಮದ್ ಸಾಬ್ ಸಹಿತ ತಿಂದುಬಿಟ್ಟೆವು. ಆಗ ಇನ್‌ಸ್ಪೆಕ್ಟರ್ ಪಾಟೀಲ ಸಾಹೇಬರು ಬಸವನಗೌಡರಿಗೆ 'ಗೌಡರೇ, ನಾನು ಸುತ್ತಮುತ್ತಣ ಇನ್ನೊಂದೆರಡು ಶಾಲೆಗಳ ತಪಾಸಣೆ ಕೆಲಸ ಮಾಡಬೇಕಾಗಿದೆ. ಮೂಡೂರಿನಲ್ಲಿ ಅನುಕೂಲ ಸಾಲದು. ಇಲ್ಲಿಯೇ ಒಂದು ಗುಡಾರ ಕಟ್ಟಿಸಿ ಮರೆಮಾಡಿಬಿಡಿ. ಇಲ್ಲಿದ್ದೂ ಆ ಕೆಲಸ ಮುಗಿಸಿ ಧಾರವಾಡಕ್ಕೆ ಹೋಗುತ್ತೇನೆ. ಮೂಡೂರಿನಲ್ಲಿ ನನ್ನ ಹಾಸಿಗೆ ಮತ್ತೂ ಒಂದು ರೆಕಾರ್ಡ್ ಇಟ್ಟಿರುವ ಬ್ಯಾಗ್ ಇದೆ. ತರಿಸಿಕೊಡಿರೆಂದು ಕೇಳಿಕೊಂಡರು ಗೌಡರು ಹಾಗೆ ಮಾಡಿ ತರಿಸಿಕೊಟ್ಟರು. ಸರಿಗೊಂದಿ, ಶಿರಗೋಡು, ಮಕರವಳ್ಳಿ ಮೊದಲಾದ ಊರುಗಳ ವಿಜಿಟ್ ಕಾರ್ಯಕ್ರಮಕ್ಕೆ ನನ್ನನ್ನು ಕರೆದುಕೊಂಡು ಹೋದರು. ಗೊಂದಿ, ಶಿರಗೋಡು ಶಾಲೆಗಳು ಗೌರ್ನಮೆಂಟ್ ಸ್ಕೂಲುಗಳಾಗಿದ್ದು ಅವು ಗಾವಠಿ ಶಾಲಾ

ಮಾಸ್ತರನಾಗಿದ್ದ ನನ್ನೊಡನೆ ಆಯಾ ಶಾಲೆಗಳ ಇನ್‌ಸ್ಪೆಕ್ಷನ್‌ಗೆ ಬಂದುದಕ್ಕಾಗಿ ಮನದಲ್ಲೇ ಅಸಮಾಧಾನಗೊಂಡರು. ಗಾವಠಿ ಶಾಲಾ ಮಾಸ್ತರರೆಂದರೆ ಅವರ ದೃಷ್ಟಿಯಲ್ಲಿ ಕೀಳು ತಾನೆ! ಕೇವಲ ಒಂಬತ್ತು ರೂಪಾಯಿ ಸಂಬಳದವರು. ಅವರೆಲ್ಲ ಬಹಳ ಸಂಬಳ ಪಡೆಯುವವರು, ನಾವಲ್ಲ? ಎಂಬ ಕೀಳುಭಾವನೆ. ಈ ಗಾವಠಿಶಾಲೆ ಮಾಸ್ತರನಿಗೆ ಇಷ್ಟೊಂದು ಬೆಲೆ ಕೊಡಬಹುದೇ? ನಾವೇನಾಗಿದ್ದೆವು. ನಮ್ಮಂಥ ಸರಕಾರಿ ಶಾಲೆಯ ಇನ್‌ಸ್ಪೆಕ್ಷನ್ ಮಾಡಲು ಬರಬಹುದೇ? ಅದರಲ್ಲೂ ಹುಡುಗರಿಗೆ ಈ ಗಾವಠಿ ಶಾಲಾ ಮಾಸ್ತರದಿಂದ ಶುದ್ಧ ಬರಹ (ಡಿಕ್ಟೇಷನ್) ಬರೆಸಲು ಹೇಳಿ ಅವರು ಅದನ್ನು ತಪಾಸು ಮಾಡಬಹುದೇ!" ಇತ್ಯಾದಿ ನನ್ನ ಮೇಲೆ ಕೆಂಡಕಾರುವಂತಾಯಿತು. ಅದಕ್ಕೆ ನಾನೇನೂ ಹೆದರುತ್ತಲೂ ಇರಲಿಲ್ಲ. ಈ ಸರ್ಕಾರೀ ಶಾಲಾ ಮಾಸ್ತರರ ಹಣೇಬರಹ ನನಗೆ ಗೊತ್ತಿತ್ತು.

ಎಲ್ಲ ಶಾಲೆಗಳ ಇನ್‌ಸ್ಪೆಕ್ಷನ್ ಮುಗಿಸಿ ಇನ್‌ಸ್ಪೆಕ್ಟರು ಧಾರವಾಡಕ್ಕೆ ತೆರಳಿದರು. ಅವರು ಹಿರೇಕಾಂಶಿ ಸುತ್ತಮುತ್ತಣ ಪರಿಸರ, ಇಲ್ಲಿನ ಜನರ ಔದಾರ್ಯ ಆದರಾತಿಥ್ಯದ ಬಗೆಗೆ ಮನಸಾರ ಕೊಂಡಾಡಿದರು. ನಿಮ್ಮೂರಿನ ಅವಲಕ್ಕಿ ಮೊಸರಿನ ನೆನೆಪು ಸದಾ ಇರುವಂತಹುದೆಂದು ನನಗೆ ಹೋಗುವಾಗ ತಿಳಿಸಿದ್ದು ಜ್ಞಾಪಕ. ನನ್ನ ಕಾಗದ ಪತ್ರಗಳನ್ನೆಲ್ಲ ನೋಡಿ Good ಎಂದು ಬರೆದು ಸಹಿ ಹಾಕಿಬಿಟ್ಟಿದ್ದರು. ಷರಾಬುಕ್ಕಿನಲ್ಲಿ ಷರಾ ಬರೆದಿದ್ದರು. ಏನು ಬರೆದರೇನು? ನಮಗೆ ಸಿಗುವ ಒಂಬತ್ತು ರೂಪಾಯಿಗಳಿಗಿಂತ ಹೆಚ್ಚಿಗೆ ಏನೂ ಸಿಗುವಂತಿರಲಿಲ್ಲ. ಅಷ್ಟೇ ನಮ್ಮ ಹಣೇಬರಕ್ಕೆ ಸಿಗುವ ಸಂಬಳವಾಗಿತ್ತು. ಇನ್ನು ಬೇಕಾದರೆ ಕಡಿಮೆ ಸಂಖ್ಯೆಯ ಹಾಜರಾತಿ ಸಮರ್ಪಕ ಕಾರ್ಯಗಳ ಬಗೆಗೆ ಬರೆದು ಒಂದೆರಡು ರೂಪಾಯಿ ಕಡಿಮೆ ಮಾಡಬಹುದಿತ್ತು.

### *ಗಾಂಜಾ ಅಮಲಿನಲ್ಲಿ*

ಧರಣಪ್ಪನವರ ಚನ್ನಬಸಪ್ಪನವರ ಬಗೆಗೆ ಈ ಪೂರ್ವದಲ್ಲಿ ಅನೇಕ ಕಡೆ ಹೆಸರಿಸಿದ್ದೇನೆ. ಅವರ ಮನೆತನ, ಆ ಮನೆತನದಲ್ಲಿ ನನಗೆ ಸಿಗುತ್ತಿದ್ದ ಮಾನ ಮನ್ನಣೆ ಉಪಚಾರ.. ಏನೆಲ್ಲ ಬರೆದಿದ್ದೇನೆ. ಇನ್ನೊಂದು ಅತಿ ಮಹತ್ವದ ಅನುಭವವನ್ನು ಹೇಳಲೇಬೇಕು. ಅದೊಂದು ನನ್ನ ಜೀವನದಲ್ಲೇ ಅತ್ಯಂತ ಹೊಸ ಅನುಭವ.

ಚನ್ನಬಸಪ್ಪನ ಮನೆತನ ವರ್ಷಕ್ಕೆ ಏನಿಲ್ಲೆಂದರೂ 200-400 ಪಲ್ಲ ಬತ್ತ ಬೆಳೆಯತಕ್ಕ ದೊಡ್ಡ ಅವಿಭಕ್ತ ಕೃಷಿಕ ಕುಟುಂಬ. ಮನೆಯಲ್ಲಿ ಆಳುಕಾಳು ಸೇರಿ 24-25 ಜನರು. ಕಬ್ಬು, ಅಡಿಕೆ, ಎಲೆ ಬಳ್ಳಿಗಳಿಂದಲೂ ತಕ್ಕಷ್ಟು ಉತ್ಪತ್ತಿ ಬರುತ್ತಿತ್ತು. ಅವರ ಕೊಟ್ಟಿಗೆಯಲ್ಲಿ ಸುಮಾರು ಇನ್ನೂರು ದನಕರುಗಳು. ಆ ಮನೆತನದ ಔದಾರ್ಯ ದೊಡ್ಡದು. ಆದರೋಪಚಾರದಲ್ಲಿ ಎತ್ತಿದ ಕೈ. ಚೆನ್ನಬಸಪ್ಪ ಸ್ವಲ್ಪ ನಿಷ್ಠುರಿ. ಹೀಗಾಗಿ ಊರಿನವರ ಕೋಪಕ್ಕೆ ಅವಿಶ್ವಾಸಕ್ಕೆ ಪಾತ್ರನಾಗಿದ್ದ. ನಾನು ಹೋದ ಮೇಲೆ ಊರಿನ ಎಲ್ಲ ಜನಗಳ ವಿಶ್ವಾಸ ಗಳಿಸಿದ್ದೆನಾಗಿ ಚನ್ನಬಸಪ್ಪನವರು ಊರಿನವರೊಡನೆ ಹೊಂದಿಕೊಳ್ಳುವಂತೆ ಬಹು ಪ್ರಯತ್ನದಿಂದ ಮಾಡಿದ್ದೆ. ಊರಿನವರಿಗೂ ಚನ್ನಬಸಪ್ಪನ ನಿಷ್ಠುರ ಬೇಡವಾಗಿತ್ತು, ಚನ್ನಬಸಪ್ಪನಿಗೂ ಊರಿನವರ ವಿರೋಧ ಬೇಡವಾಗಿತ್ತು. ಹೇಗಾದರೂ ಕೂಡಿಕೊಳ್ಳಲು ಪ್ರಯತ್ನಿಸುತ್ತಿದ್ದ. ಶ್ರಾವಣಮಾಸದಲ್ಲಿ ಪುರಾಣ ಓದಿಸಲೇ ಬೇಕೆಂದು ಊರಿನವರೆಲ್ಲರನ್ನು ಸೇರಿಸಿ ಚರ್ಚಿಮಾಡುವ ದಿನ ಪ್ರಧಾನವಾಗಿ ಚನ್ನಬಸಪ್ಪನವರನ್ನೇ ಮುಂದೆ ಮಾಡಿ ಇವರಿಂದ ಹೆಚ್ಚಾಗಿ ಪಟ್ಟಿ ಹಾಕಿಸುವುದರಲ್ಲಿ ಕೃತಕೃತ್ಯನಾಗಿದ್ದೆ. ಬೆಂಚುಹಳ್ಳಿಗೆ ಹೋಗಿ

ಒಬ್ಬ ಶಾಸ್ತ್ರಿಯನ್ನು ಕರೆಸಿ ಪುರಾಣಮಾಡಿಸಿ. ಊರಿನವರೆಲ್ಲ ಒಬ್ಬರಿಗೊಬ್ಬರು ವಿಶ್ವಾಸಿಗಳಾಗಿ ಬಾಳುವಂತೆ ಮಾಡಿದ್ದೆ. ಇದೇ ಕಾಲವಲ್ಲಿಯೇ ಊರಿನ ಪ್ರಚಂಡ ವ್ಯಕ್ತಿಯಾದ ಮಟ್ಟಿಮನಿ ಶಿವಪ್ಪನೂ ಊರಿನವರೊಡನೆ ಹೊಂದಿಕೊಳ್ಳುವಂತಾಗಿತ್ತು. ಮಟ್ಟಿಮನಿ ಶಿವಪ್ಪ ಎಂದರೆ ಇಡೀ ಊರಿಗೇ ಭಯ, ಕ್ರಿಮಿನಲ್ ಬುದ್ಧಿಯ ಮನುಷ್ಯ. ಏಕಾಂಗಿಯಾಗೇ ಇಡೀ ಊರನ್ನು ಎದುರಿಸಿದ್ದ. ಆತನ ಭಯ ಎಲ್ಲರಿಗೂ ಇತ್ತು. ಹೀಗಿದ್ದರೂ ಆತ ನನ್ನನ್ನು ಬಹಳ ಗೌರವಿಸುತ್ತಿದ್ದ. ಅವನ ಮನೆತನದ ಮಕ್ಕಳು ಮರಿಗಳಾವುವೂ ಶಾಲೆಗೆ ಬರುವವುಗಳಿಲ್ಲದಿದ್ದರೂ ಅವನು ನನ್ನನ್ನು ಆಗಾಗ ಮನೆಗೆ ಕರೆದೊಯ್ದು ಜೊತೆಯಾಗಿ ಕುಳ್ಳಿರಿಸಿಕೊಂಡು ಊಟೋಪಚಾರ ಮಾಡಿಸಿ ಕಳಿಸುತ್ತಿದ್ದ. ನಾನೂ ಅವನನ್ನು ಒಲಿಸಿಕೊಂಡು ಪುರಾಣಕ್ಕೆ ನಾನೇ ಖುದ್ದಾಗಿ ಹೋಗಿ ಕರೆತಂದು ಪ್ರಧಾನ ಸ್ಥಾನದಲ್ಲಿ ಕುಳ್ಳಿರಿಸಿ ಪುರಾಣಕೇಳಿಸಿ ಕಳಿಸುತ್ತಿದ್ದೆ. ಹೀಗಾಗಿ ಊರ ಪಾರ್ಟಿ ಪಂಗಡಗಳೆಲ್ಲಾ ಮಾಯವಾಗಿದ್ದುವು. ಇದೊಂದು ನಾನು ಸಾಧಿಸಿದ ದೊಡ್ಡಸಾಧನೆಯಾಗಿತ್ತು. ಇಂಥ ಸಂದರ್ಭದಲ್ಲೇ ಮಟ್ಟಿಮನಿ ಶಿವಪ್ಪನನ್ನು ಮುಂದಿಟ್ಟುಕೊಂಡು ಊರಿನಲ್ಲಿ ಜಾತ್ರೆಮಾಡಿಸಿ ಕುಸ್ತಿ ಆಖಾಡವೂ ಜರುಗುವಂತೆ ಮಾಡಿದ್ದೊಂದು ಪವಾಡ ಸದೃಶಕಾರ್ಯ. ಈ ಎಲ್ಲ ಕಾರಣಗಳ ಫಲವಾಗಿ ಉತ್ತರೋತ್ತರ ನನ್ನ ಪ್ರತಿಷ್ಠೆ ಗೌರವಗಳು ಬಹುಮೇಲೇರಿ ಹೋದವು. ಇಷ್ಟಾದರೂ ನಾನು ಊರಜನಗಳಲ್ಲಿ ಅತ್ಯಂತ ವಿಧೇಯತೆಯಿಂದಲೇ ವರ್ತಿಸಿ ಅವರ ಮನವೊಲಿಸುವ ಕಾರ್ಯದಲ್ಲಿ ಸ್ವಲ್ಪ ಮಟ್ಟಿಗೆ ಕುಶಲನೇ ಆಗಿದ್ದೆನೆಂಬುದನ್ನು ಆತ್ಮ ಪ್ರಶಂಸೆಯೆಂದು ಯಾರೂ ದಯಪಿಟ್ಟು ಭಾವಿಸಬೇಡಿ. ಜನಮನವನ್ನು ಓರ್ವ ಹಳ್ಳಿ ಶಿಕ್ಷಕನಾಗುವವನಿಗೆ ಈ ವಿಧೇಯತೆ ಇಲ್ಲದಿದ್ದರೆ, ಊರಲ್ಲಿ ಪಾರ್ಟಿ ಸಂಗಡ ಜಾತೀಯತೆಯೇ ಮೊದಲಾದ ಕಾರ್ಯದಲ್ಲಿ ಮನಸ್ಸು ಮಾಡಿದರೆ ಕಂಡವರ ಕಡೆಯಿಂದ ಹೊಡೆಸಿಕೊಂಡು ಹೊಟ್ಟೆಗೆ ಕೂಳಿಲ್ಲದೆ ಬರಬೇಕಾಗುತ್ತದೆ. ಹಳ್ಳಿಯಲ್ಲಿ ಉಪಾಧ್ಯಾಯ ವೃತ್ತಿಯನ್ನು ಮಾಡಿ ಯಶಸ್ವಿಗೊಳ್ಳಬೇಕಾದವನು ಮೊದಲು ಕಲಿಯಬೇಕಾದುದು ವಿಧೇಯತೆ. ಅನಂತರ ಕಚ್ಚೆಯ ಶುದ್ಧಿ. ಆ ಮೇಲೆ ಅವ್ವಾ ಅಕ್ಕಾ, ಅಮ್ಮಾ ಅಪ್ಪಾ ಎಂಬುವ ಮೃದುನುಡಿ, ಅನಿಮಿತ್ತ ಬಾಂಧವ್ಯ, ಕೆಲಸದಲ್ಲಿ ಶ್ರದ್ಧೆ ಈ ಗುಣಗಳಿದ್ದರೆ ಅವನಿಗೆ ಹಳ್ಳಿ ಕಾಮಧೇನುವಾದೀತು. ಇಲ್ಲವಾದರೆ ಅದೇ ಕಾಲು ಜಾಡಿಸಿ ಒದ್ದು ಹಲ್ಲು ಮುರಿದು ಹಾಕುವ ತುಂಟ ಹಸುವಾಗಿ ಹಾಯ್ದು ಊರು ಬಿಟ್ಟೋಡಿಸೀತು.

ಚನ್ನಬಸಪ್ಪನ ಸ್ನೇಹ ದಿನೇ ದಿನೇ ವೃದ್ಧಿಗೊಂಡು ಏಕದೇಹನ್ಯಾಯವೇರ್ಪಡುವುದಕ್ಕೆ ಮೇಲೆ ಹೇಳಿದ ಪುರಾಣ, ಜಾತ್ರೆಗಳ ಪ್ರಸಂಗಗಳು ಮೂಲ ಕಾರಣಗಳಾದುವು. ಸಿಕ್ಕಾಗಲೆಲ್ಲ ಮನೆಗೆ ಬಾರಪ್ಪಾ, ಏನನ್ನಾದರೂ ಮಾಡಿಸಿಕೊಡು ತಿನ್ನೋಣ ಎಂದು ಮನೆಗೆ ಎಳೆದು ಕೊಂಡು ಹೋಗಿ ಅವಲಕ್ಕಿಯೋ, ಬಾಳೆಕಾಯಿ ಬೋಂಡಾನೋ, ಗಾರಿಸಿಯೋ, ತೋಟದಿಂದ ತಂದ ಪಪ್ಪಾಯಿ ಹಣ್ಣೋ, ಎಳನೀರೋ, ಕೊನೆಗೆ ಅವಲಕ್ಕಿ ಮೊಸರಿಗೆ ಇನ್ನೊಂದೋ ತಿಂದು ಸ್ವಲ್ಪ ಹೊತ್ತು ಅಂಗಳದಲ್ಲಿದ್ದ ಹೊಂಚಿನ ಮೇಲೆ ಕುಳಿತು ಹರಟೆ ಹೊಡೆದು ನಕ್ಕು ನಲಿದು ಬರಬೇಕಾಗುತ್ತಿತ್ತು. ಅವನ ವಿಶ್ವಾಸ ಯಾವಜ್ಜೀವವೂ ನೆನೆಯುವಂತಹುದು. ಚನ್ನಬಸಪ್ಪನಂಥ ಕಠಿಣಮನುಷ್ಯನನ್ನು ಪಳಗಿಸಿದ್ದ ನನ್ನನ್ನು ಊರ ಜನವೆಲ್ಲ ಶ್ಲಾಘಿಸುತ್ತಿತ್ತು. 'ಎಂಥಾ ಒರಟ ಮನುಷ್ಯನನ್ನು ಪಳಗಿಸಿ ಬಿಟ್ಟಿಯಲ್ಲೋ ನಮ್ಮಪ್ಪಾ, ನಿಮಗೆ ತಗ್ಗಿ ಬಗ್ಗಿದಂಗ ಆ ಮನುಷ್ಯ ಯಾರಿಗೂ ಬಗ್ಗಿದ್ದಿಲ್ರೀಪಾ' ಎಂಬುದೇ ಶ್ಲಾಘನೆ ಮತ್ತು 1982ನೆಯ ಇಸ್ವಿಯೆಂದು ತೋರುತ್ತದೆ. ಆ ವರ್ಷ ಚನ್ನಬಸಪ್ಪನ ಗದ್ದೆಗಳು ಹುಲುಸಾಗಿ ಬೆಳೆದು ಕಣದಲ್ಲಿ ಸುಮಾರು 350-400

ಚೀಲಗಳಷ್ಟು ಬತ್ತದ ರಾಶಿ ಬಿತ್ತು. ಬೈಲುಸೀಮೆಯಿಂದ ಕೂಲಿಮಾಡಲು ಬಂದ ಜನಗಳಿಂದ 25 ಸೇರು ಒಳ್ಳೆಯ ಜಾಪುರ ಕಡೆಯ ಗೋದಿಯ ಹುಗ್ಗಿ ತಿರುಪಿಸಿ ಬಿಟ್ಟ. ಈ ಮಲೆನಾಡಿನಲ್ಲಿ ಗೋದಿ ಹುಗ್ಗಿ ಮಾಡುವುದು ಕಡಿಮೆ. ಹುಗ್ಗಿ ತಿರುವಿದವರೂ ಬೈಲುಸೀಮೆಯವರೇ. ಮಲೆನಾಡಿನ ಹೆಂಗಸರಿಗೆ ಈ ಹುಗ್ಗಿ ತಿರುವುವುದು ಗೊತ್ತಿಲ್ಲ. ಬೈಲುಸೀಮೆಯ ಈ ಜನ 25 ಸೇರು ಗೋದಿಯ ಹುಗ್ಗಿಗೆ ಎರಡು ಧಡೆ ಕೊಬ್ರಿ ತುರಿ, ಒಂದು ಸೇರು ಬಡೇ ಸೋಪು, ಶುಂಠಿ, ಯಾಲಕ್ಕಿ, ಜಾಪತ್ರೆ, ಜಾಜಿಕಾಯಿ, ಲವಂಗಗಳನ್ನು ಸಾಕಷ್ಟು ತರಿಸಿ ಪುಡಿಮಾಡಿ ಹಾಕಿ ಮಾಡಿದ್ದರು.

'ನನಗೆ ಮುಂಚಿತವಾಗಿಯೇ ಚನ್ನಬಸಪ್ಪ 'ಇವತ್ತ ರಾತ್ರಿ ಕಣಬ್ಬ . ತಪ್ಪಿಸಬ್ಯಾಡವೋ ಮಾರಾಯ' ಎಂದು ಹೇಳಿಹೋಗಿದ್ದ. ಆ ದಿನ ನನಗೇಕೋ ಸ್ವಲ್ಪ ಜ್ವರ ಬಂದಂತಾಗಿ ಗಿಣಿವಾಲದವರ ಮನೆಯಲ್ಲಿಯೇ ಸಾಯಂಕಾಲ ಚಹಾಕುಡಿದು ತುಂಬ ಹೊದ್ದುಕೊಂಡು ಮಲಗಿಬಿಟ್ಟಿದ್ದೆ. ಚನ್ನಬಸಪ್ಪ ಅವರ ಮನೆ ಕಡೆ ಹೋಗಲೇ ಇಲ್ಲ. ಅವನು ಬಿಡಬೇಕಲ್ಲ! ರಾತ್ರಿ ಏಳು ಘಂಟೆ ಸುಮಾರಿಗೆ ಕೊಠಡಿಗೆ ಹಾಜರಾಗೇ ಬಿಟ್ಟ.

"ಏಳಪಾ ಮಾರಾಯಾ, ಯಾಕ ಇನ್ನೂ ಮಲಗೇ ಬಿಟ್ಟಲ್ಲ. ಮೊದ್ಲು ಹೇಳಿದ್ದಿಲ್ಲೇನು ಕಣಬ್ಬಕ ಹೋಗನಂತೆ ಏಳೇಳು" ಎಂದ ನಾನು ನರಳುತ್ತ "ನನಗೆ ಮಯ್ಯಲ್ಲಿ ಚೆನ್ನಾಗಿಲ್ಲ, ತಲೆನೋವು. ಮೈಯೆಲ್ಲ ಭಾರ, ಚಳಿ ಚಳಿ. ಈ ಸ್ಥಿತಿಯಲ್ಲಿ ಕಣಬ್ಬವೂ ಬೇಡ, ಆ ಊಟವೂ ಬೇಡ. ನೀವೇ ಹೋಗಿ ಮುಗಿಸಿಕೊಂಡು ಬನ್ನಿ. ನಾಳೆ ಬೆಳಿಗ್ಗೆ ಮನೆ ಕಡೆ ಬರುತ್ತೇನೆ" ಎಂದೆ. "ಏಳೋ ಮಾರಾಯಾ ಇದೇನಾಡ್ತೈತಿ. ಇಂಥ ಜ್ವರಾ ನಮಗೆ ಎಷ್ಟು ಬಂದು ಹೋಗ್ಯಾವ. ಇಷ್ಟಕ್ಕೆಲ್ಲ ಹೆದರಿಕೊಂಡು ಕುಂತ್ರ ಹ್ಯಾಂಗಾದೀತು ಏಳೇಳು". "ಚನ್ನಬಸಪ್ಪನವರೇ, ಈ ಜ್ವರದಲ್ಲಿ ಆ ಊಟ ಗೀಟ ಮಾಡಿದರೆ ನಾಳೆ ಬೆಳಿಗ್ಗೆ ನಾನು ನೆಲ ಹಿಡಿದೇ ಮಲಗಬೇಕಾದೀತು. ಮೇಲಾಗಿ ಚಳಿ ಬೇರೆ. ಈ ಚಳಿಯಲ್ಲಿ ಕೆರೆಕೆಳಗಳ ಹೊಲಕ್ಕೆ ಹೋಗಿಯುಂಡು ಕಣಬ್ಬ ಮುಗಿಸಿಕೊಂಡರು ಸರುರಾತ್ರಿಗೆ ಬಂದು ಮಲಗಿದರೆ ದೇವರೇ ಗತಿ. ಬೇಡ ನೀವೇ ಹೋಗಿ ಬನ್ನಿ". " ಇಲ್ಲ ಇಲ್ಲ! ಬಿಟ್ಟು ಬರಬಾರ್ದೆಂತ ಮನ್ಯಾಗೆಲ್ಲ ಹೇಳ್ಯಾರ. ಈಗಾಗಲೆ ಅಡಿಗಿ ಸಾಮಾನು ಎಲ್ಲ ಹೇರಿಕೊಂಡು ಎರಡು ಬಂಡಿ ಹೋಗ್ಯಾವ. ಮನೆಯಲ್ಲಿ ಗಿಡ್ಡಹೋರಿ ಕರಗಳ್ನ ಗಾಡಿಗೆ ಕಟ್ಕೊಂಡು ನಾನು ನೀನೂ ಇಬ್ಬರ ಕುಂತಗಂಡು ಹೋಗನು. ಬೇಗ ಏಳೇಳು ಸುಮ್ನ ಹೊತ್ತಾಗ್ತೈತಿ ದೂರದ ಗದ್ದಿ ಅಂತ ಬೇಗನ ಪೂಜಿ ಗೀಜಿ ಮುಗ್ಸಿ, ಊಟ ಮುಗ್ಸಿಕೊಂಡು ಬಂದು ಬಿಡಬೇಕಾಗ್ತೈತಿ. ಏಳೇಳು ಹೊತ್ತಾಡ್ತಾವ. ಈ ಜ್ವರಕ್ಕ ಒಂದು ಔಷಧ ಮಾಡ್ತೀನಿ ಏಳು" ಎಂದು ದುಂಬಾಲು ಬಿದ್ದು ಎಬ್ಬಿಸಿಕೊಂಡು ನಡೆದೇ ಬಿಟ್ಟ. ಅವರ ಮನೆಗೆ ಬಂದು ಅವರ ವಿಶಾಲ ಅಂಗಳದಲ್ಲಿ ಹಾಕಿದ್ದ ಹೊರಸಿನ ಮೇಲೆ ಕುಳ್ಳಿರಿಸಿದ. ಹುಣ್ಣಿಮೆಯ ಚಂದ್ರ ಮಾರುದ್ದ ಮೇಲೇರಿ ತನ್ನ ಪ್ರಶಾಂತ ಅಮೃತಕಿರಣಗಳನ್ನು ಸುತ್ತಮುತ್ತಲಿದ್ದ ಹೂಗಿಡ ಬಾಳೆ ಮೊದಲಾದವುಗಳ ಮೇಲೆ ಚೆಲ್ಲಿ ಅಪೂರ್ವ ಶೋಭೆಗೊಳಿಸಿದ್ದ. ಆಕಾಶಮಂಡಲದಲ್ಲಿ ಸಾಲು ಗೊರವಂಕಗಳು ಅತ್ತಿಂದಿತ್ತ ಇತ್ತಿಂದತ್ತ ಸಾಗಿದ್ದವು. ಚೆನ್ನಬಸಪ್ಪ ಗಾಂಜಾ ಮಿದ್ದಿ ಹೊಗೆಸೊಪ್ಪು ಬೆರೆಸಿ ಚಿಲುಮೆಗೆ ಒದ್ದೆ ಬಟ್ಟೆ ಸುತ್ತಿಕೊಂಡು ಒಳಗಿಂದ ಮೇಲೊಂದು ಕೆಂಡ ಹೇರಿಕೊಂಡೇ ಬಂದ. "ಮಾಸ್ತರ ತೊಗೊಳ್ರಿ ಸೇದ್ರಿ" ಎಂದ. "ಏನು! ಗಾಂಜಾನೇ?" "ಹೂಂ ಸೇದು ಮಾರಾಯಾ, ಜ್ವರಗಿರವೆಲ್ಲ ಬಿಟ್ಟು ಹೋಗ್ತಾವ. ಸೇದೇಳು" ಎಂದು ಒತ್ತಾಯಮಾಡಿ ಎಬ್ಬಿಸಿ

ಕುಳ್ಳಿರಿಸಿದ. ನನಗೆ ಹಿಂದೆ ಯಾರೋ ಹೇಳಿದ್ದ ಒಂದು ಶ್ಲೋಕ ಜ್ಞಾಪಕಕ್ಕೆ ಬಂತು. ಗಾಂಜಾ ಸೇದಿದವರಿಗೆ ಏಳು ಗುಣಸ್ವಭಾವಗಳು ಒಂದರ ನಂತರ ಒಂದು ಉಂಟಾಗುತ್ತವಂತೆ :

ಶುಕಪಿಕಬಕಶ್ಚೆಲ್ವ ಹನೂಮಾನ್‌ಶ್ಚ ವಿಭೀಷಣಃ।
ಕರ್ಣಶ್ಚ ಕುಂಭಕರ್ಣಶ್ಚ ಸಪ್ತೈತೇ ಬಂಗಿ ಲಕ್ಷಣಂ।

ಬಂಗಿ ಸೇದಿದವನು ಸೇದಿದೊಡನೆ ಮೊದಲು ಗಿಳಿಯಂತೆ ಮಾತಾಡುತ್ತಾನಂತೆ; ಕೋಗಿಲೆಯಂತೆ ಹಾಡು ಪ್ರಾರಂಭಿಸುತ್ತಾನಂತೆ. ಹನುಮಂತ ರಾಮಭಕ್ತನಾಗಿ ವರ್ತಿಸುವಂತೆ ವರ್ತಿಸುತ್ತಾನಂತೆ. ವಿಭೀಷಣನಂತೆ ಅನ್ಯರಿಗೆ ನೀತಿಬೋಧಕನಾಗುತ್ತಾನಂತೆ. ಕುಳಿತಲ್ಲಿಯೇ ಏಕಾಏಕಿ ಕರ್ಣನಂತೆ ಶೌರ್ಯಶಾಲಿಯಾಗಿ ಬಿಡುತ್ತಾನಂತೆ. ಅನಂತರ ಮಲಗಿಬಿಟ್ಟನೆಂದರೆ ಕುಂಭಕರ್ಣನೇ ಆಗಿ ಬಿಡುತ್ತಾನಂತೆ. ಬ್ರಹ್ಮ ಬಂದು ಎಬ್ಬಿಸಿದರೂ ಏಳುವುದೇ ಇಲ್ಲವಂತೆ. ಈ ಅರ್ಥ ಮನಸ್ಸಿನ ಮುಂದೆ ಬಂದು ನಿಂತಿತು. ಗಾಂಜಾವನ್ನು ನಾನು ಎಂದೂ ಸೇದಿರದಿದ್ದರೂ ಸೇದಿದವರನ್ನು ಕಂಡು ನಗೆಯಾಡಿದ್ದೆ. ಹೋದ ವರ್ಷವೇ ನಮ್ಮ ಇದ್ಲಿ ಕಂಟ್ರಾಕ್ಟ ಕಾರ್ಯದಲ್ಲಿ ನನಗೆ ಟೋಪಿ ಹಾಕಿದ್ದ ಬಸ್ಯನನ್ನು ಹುಡುಕಿಕೊಂಡು ಕೇಳೂರಿಗೆ ಹೋದಾಗ ಅವನು ಸಿಗದೆ ಕರಜಗಿ ಸ್ಟೇಷನ್ನಿನಿಂದ ಹಾವೇರಿಗೆ ಹೋಗುವ ರೈಲು ಹಿಡಿಯಲು ಧಾವಿಸಿ ಬಂದೆ. ರೈಲು ಹೊರಟು ಹೋಗಿತ್ತು. ಅಲ್ಲಿ ಅಷ್ಟರಲ್ಲಿ ಮೊಕಾಶಿ, ಸಿಕಾಸಿ ಅಂತ ಕೆಲವರ ಪರಿಚಯ ಆಯ್ತು. ಅವರೆಲ್ಲ ಕೇಳೂರು ಬಸ್ಯಾನನ್ನು ಬಲ್ಲವರು. ನನಗೇ ಮೋಸಮಾಡಿ ಬಂದ ಅವನನ್ನು ಬೈಯುವವರೇ. ಪದೇ ಪದೇ ಅವನನ್ನು ಹುಡುಕಿಕೊಂಡು ಬರಬೇಡಿ ಎಂದು ಎಚ್ಚರಿಸಿದವರೂ ಇವರೇ. ನನಗೂ ಮುಂದಿನ ರೈಲು ಬರುವವರೆಗೆ ಬೇರೆ ಕೆಲಸವೂ ಇರಲಿಲ್ಲವಾಗಿ ಇವರ ಗುಂಪನ್ನು ಹಿಂಬಾಲಿಸಿದೆ. ಬಹುಶಃ ಇವರೂ ಗಾಂಜಾ ಮಿದ್ದಿ ಸೇದುವವರೇ ಎಂಬುದು ನನಗೆ ಆಮೇಲೆ ತಿಳಿಯಿತು. ಹುಬ್ಬಳ್ಳಿಯ ಸಿದ್ಧಾರೂಢರ ಶಿಷ್ಯರೊಬ್ಬರು ಒಂದು ಬೇವಿನ ಮರದ ಕೆಳಗೆ ಕಂಠಪೂರ್ತಿ ಗಾಂಜಾ ಸೇದಿ ನಿಜಗುಣರ ತತ್ತ್ವ ಹೇಳುತ್ತ ಕುಳಿತಿದ್ದರು. ಅಲ್ಲಿಗೆ ಅವರೆಲ್ಲ ಹೋಗಬೇಕಾಗಿತ್ತು. ನನ್ನನ್ನು ಅಲ್ಲಿಗೆ ಕರೆದೊಯ್ದರು. ಅವರೇನೋ ನನ್ನನ್ನು ಗೌರವದಿಂದಲೇ ಕರೆದೊಯ್ದರೆನ್ನಿ. ಏಕೆಂದರೆ ನಾನು ಹಿರೇಕಾಂಶಿಯ ಪ್ರಸಿದ್ಧ ಮಾಸ್ತರನೆಂದು ಅವರೂ ಬಸ್ಯಾ ಮತ್ತು ಗಣಜೂರುಗೂಡು ಸಾಬನಿಂದ ಕೇಳಿದ್ದರಂತೆ. ಅದಕ್ಕಾಗಿ ಎಲ್ಲಿಲ್ಲದ ಗೌರವ. ಕಣ್ಣು ಕೆಂಪಗೆ ಮಾಡಿಕೊಂಡು ತೇಲುಗಣ್ಣು ಮೇಲುಗಣ್ಣು ಮಾಡಿಕೊಂಡು ಮಾತು ಮಾತಿಗೆ ಸಿದ್ಧಾರೂಢ ಸಮರ್ಥ ಎಂದು ಅನ್ನುತ್ತ ವೇದಾಂತ ಹೇಳುತ್ತಿದ್ದ. ಗಾಂಜಾ ಮಿದ್ದುವವರು ಮಿದ್ದುತ್ತಿದ್ದರು. ಕಿಂಡ ಹೇರುವವರು ಹೇರುತ್ತಿದ್ದರು. ಸೇದುವುದಕ್ಕೆ ಮೊದಲು ಸಿದ್ಧರೂಢ ಭಕ್ತನಿಗೇ ಕೊಡುತ್ತಿದ್ದರು. ಅವನು ಒಲ್ಲೆನ್ನದೆ ಎಲ್ಲರ ಚಿಲುಮೆಗಳನ್ನು ತೆಗೆದುಕೊಂಡು ಸೇದಿ ಮುಂದಿನವರಿಗೆ ಕೊಡುತ್ತ ಕೈ ಮುಗಿಯುತ್ತಿದ್ದ. ಅದಕ್ಕೆ ಅವರು ಸಿದ್ಧಪತ್ರೆ ಎಂಬ ಗೌರವಾರ್ಹ ಹೆಸರಿನಿಂದ ಕರೆಯುತ್ತಿದ್ದುದನ್ನು ಕೇಳಿದೆ. ಅವರೂ ಕೈ ಮುಗಿದೇ ತೆಗೆದುಕೊಂಡು ರೈಲ್ವೆ ಎಂಜಿನ್ ಉಗುಳುವ ಧೂಮದಂತೆ ಹೊಗೆ ಎಳೆದು ಬಿಡುತ್ತಿದ್ದರು. ಅವರ ಆ ಕೂಟ ನನ್ನ ಕಣ್ಣಿಗೆ ಆಗ ಹುಚ್ಚರ ಕೂಟದಂತೆ ಕಂಡದ್ದಂತೂ ನಿಜ. ಆಗ ನನಗೂ ಕೊಡಬಂದರು. ನಾನು ಕೈಮುಗಿದೆ. ಒಬ್ಬನು "ಬ್ಯಾಡ ಬ್ಯಾಡ ಮಾಸ್ತರಿಗೆ ಬ್ಯಾಡ ಪಾಪ! ಇನ್ನು ಬಹಳ ಚಿಕ್ಕವರು" ಎಂದು ಕೃಪೆ ತೋರಿದ. ನಿಜಗುಣರ ಪದ್ಯಗಳನ್ನು ತಂಬೂರಿ ಮೀಟುತ್ತ ಹೇಳತೊಡಗಿದ ಆ ಸಿದ್ಧಾರೂಢ ಭಕ್ತ :

ಮನವೆಂಬ ಗಿಳಿಯನೊಯ್ಯಾರದಲೋವಿ
ಮೆಲ್ಲನೆ ಮುದ್ದುನುಡಿಗಲಿಸೆಲೆ ಮಾನಿನೀ॥

- ಈ ಪದ್ಯ ನನಗೆ ಸ್ಪಷ್ಟವಾಗಿ ಜ್ಞಾಪಕದಲ್ಲಿದೆ. ಇದರ ಅರ್ಥ ಹೇಳುತ್ತ ಹೇಳುತ್ತ ಸಾಗಿದ್ದ. ಆಗ ನನಗನಿಸಿತು. ಗಿಳಿಯಂತೆ ಮಾತಾಡುತ್ತಾನೆ. ಕೋಗಿಲೆಯಂತೆ ಸ್ವರ ತೆಗೆಯುತ್ತಾನೆ. ವಿಭೀಷಣನಂತೆ ತತ್ತ್ವೋಪದೇಶ ಮಾಡುತ್ತಾನೆ. ಹನುಮನಂತೆ ಕಂಡ ಕಂಡವರಿಗೆಲ್ಲ ಕೈಮುಗಿದು ವಿನಯ ಭಕ್ತಿ ತೋರಿಸುತ್ತಾನೆ. ಒಮ್ಮೊಮ್ಮೆ ಶೌರ್ಯಬಂದಾಗ ನಾನು ಮೂರು ಲೋಕಕ್ಕೂ ಹೆದರುವುದಿಲ್ಲ. ಆಸೆ ಇದ್ದವಗೆ ತಾನೇ ಅಂಜಿಕೆ. ನನಗೆ ಆಶೆಯಿಲ್ಲ. ಅಂಜಬೇಡೆಂದು ಕರ್ಣನ ಅಪ್ಪನಂತೆ ನುಡಿಯುತ್ತಿದ್ದ; ತತ್ತ್ವ ಹೇಳಿ ಮೀನಿಗಾಗಿ ಕೆರೆದಂಡೆಯಲ್ಲಿ ಮೌನವಾಗಿ ಕುಳಿತ ಬಕಪಕ್ಷಿಯಂತೆ ಕಣ್ಣು ಮುಚ್ಚಿ ಓಂ ನಮಃ ಶಿವಾಯ ಎನ್ನುತ್ತ ಕುಳಿತು ಬಿಡುತ್ತಿದ್ದ. ಉಳಿದವರೆಲ್ಲ ಸ್ವಾಮಿಗಳು ಸಮಾಧಿಗೋಗಿದ್ದಾರೆಂದು ಕೈಮುಗಿಯುತ್ತಿದ್ದರು. ನಾನು ಮನಸ್ಸಿನಲ್ಲಿ ಇದು ಸಮಾಧಿಯೂ ಅಲ್ಲ ಏನೂ ಅಲ್ಲ. ಗಾಂಜಾದ ಅಮಲೆಂದು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತ ಇವರ ಹುಚ್ಚಿಗಾಗಿ ನಗುತ್ತಿದ್ದೆ. ಆದರೆ ಅವನು ಕುಂಭಕರ್ಣನ ಅವತಾರ ಸ್ವೀಕರಿಸಿದ್ದನ್ನು ನೋಡಲಾಗಲಿಲ್ಲ. ಅಷ್ಟರಲ್ಲಿ ರೈಲು ಬಂತಾಗಿ ಓಡಿಹೋಗಿ ಟಿಕೆಟ್ ಕೊಂಡು ರೈಲು ಹತ್ತಿ ಹಾವೇರಿಗೆ ಬಂದೆ. ಗಾಂಜಾದ ಅಮಲು ಇಂಥಾದ್ದು. ಆದರೆ ಗಾಂಜಾ ಸೇದಿ ನಿರ್ವಿಕಾರದಿಂದ ಇರುವವರನ್ನು ಕಂಡಿದ್ದೆ. ಇವು ಬಹಳ ಹಳೇತಲೆಗಳು. ಈ ಮೊದಲು ನಮ್ಮಜ್ಜನ ಗಾಂಜಾ ಸೇದೋ ಚಟದ ಬಗ್ಗೆ ವಿವರಿಸಿದ್ದೇನೆ. ಅವನ ವಾರ್ಷಿಕ ತಿಥಿ ಮಾಡುತ್ತಿದ್ದ ಅವನ ಮಕ್ಕಳಾದ ನಮ್ಮಪ್ಪ ದೊಡ್ಡಪ್ಪಂದಿರು ತಿಥಿಯ ದಿನ ಅವನ ಪೂಜಾ ಕಾಲದಲ್ಲಿ ಒಂದಾಣೆ ಕೊಟ್ಟು ತಂದ ಗಾಂಜವನ್ನು ಕಾಗದದಲ್ಲಿ ಕಟ್ಟಿ ಇಡುತ್ತಿದ್ದರು. ಊಟ ಮುಗಿದ ಮೇಲೆ ಆ ಗಾಂಜಾವನ್ನು ಎರಡು ಮೂರು ಜನ ಸೇದಿ ಮುಗಿಸಿ ಚಿಲುಮೆ ಕೊಡವಿ ಹೋಗಿ ಮುಗಿಸಿ ಬಿಡುತ್ತಿದ್ದರು. ಇವರಾರೂ ವೇದಾಂತ ಗೀದಾಂತ ಹೇಳುತ್ತಿರಲಿಲ್ಲ. ಹೇಳಲು ಬಂದರೆ ತಾನೇ ಹೇಳೋದು. ಯಾವ ಗಲಾಟೆ ಮಾಡದೆ ಮಲಗುತ್ತಿದ್ದ ಇವರು ಗಾಂಜಾವನ್ನು ಸ್ವಲ್ಪ ಕಡಿಮೆ ಸೇದಿ ಮನುಷ್ಯ ಕುಲದಲ್ಲೇ ಇರುತ್ತಿದ್ದರೆಂದು ಈಗ ಊಹಿಸುತ್ತೇನೆ.

ಈ ಚಿತ್ರಗಳು ಗಾಂಜಾ ಸೇದುವವರನ್ನು ಕಂಡಾಗಲೆಲ್ಲ ನನ್ನ ಜ್ಞಾಪಕಕ್ಕೆ ಬರುತ್ತವೆ. ಈಗ ನನ್ನ ಎದುರಿಗೇ ಚನ್ನಬಸಪ್ಪ ಚಿಲುಮೆ ಹಿಡಿದು ಒತ್ತಾಯ ಮಾಡುತ್ತ ನಿಂತಿದ್ದಾನೆ. ಒಂದು ಕೈ ನೋಡೇ ಬಿಡೋಣವೆಂದರೆ ಕಪಿ ಕ ಬಕಜೀವ ಶ್ಲೋಕ ಎದುರಿಗೇ ಬರುತ್ತದೆ. ಅದರಲ್ಲೋ ಚನ್ನಬಸಪ್ಪ ನನ್ನ ಜ್ವರ ಕಳೆಯುವ ಡಾಕ್ಟರ್ ಬೇರೆ ಆಗಿ ಹೋಗಿದ್ದಾನೆ. ಜ್ವರ ಹೋಗುತ್ತೆ ಸೇದು ಸೇದು ಎಂದು ದುಂಬಾಲು ಬಿದ್ದಿದ್ದನೆಂದು ಕೈಗೆ ತೆಗೆದುಕೊಂಡೆ. ಮಾದಕವಸ್ತು ಸೇವನೆ ಮಾನವನಿಗೆ ಪ್ರವೃತ್ತಿ ಸಹಜವಾಗಿ ಆಗುತ್ತದೆ. ಆದರೆ ನಿವೃತ್ತಿ ಎಂದರೆ ಅದರ ತಿರಸ್ಕಾರವೇ ಮಹಾಫಲ ಎಂದು ಮನು ಎಂದೋ ನುಡಿದಿದ್ದಾನೆ. ಮನು, ವ್ಯಾಸ, ಗಾಂದಿ, ಬಸವ ಇವರ ಮಾತನ್ನು ನಾವೇಕೆ ಕೇಳಬೇಕು? ಪ್ರವೃತ್ತಿ ಮುಂದೆ ಬಂದು ನಿಂತೇ ಬಿಟ್ಟಿತು. ನಾನು ಸೇದಿಯೇ ಬಿಟ್ಟೆ. ಆದರೆ ನಾನು ಭಾವಿಸಿದಂತಾಗಲಿಲ್ಲ. ಸೇದಿದ್ದೊಂದೇ ಗೊತ್ತು. ಐದು ಹತ್ತು ನಿಮಿಷ ಮೈಮೇಲೆ ಎಚ್ಚರವಿಲ್ಲದೆ ಹೊರಸಿನ ಮೇಲೆ ಬಿದ್ದುಬಿಟ್ಟೆ. ಮೇಲೆ ಕಾಣುವ ಆಕಾಶದ ನಕ್ಷತ್ರಗಳು, ಹುಣ್ಣಿಮೆಯ ಚಂದ್ರ ಇವೆಲ್ಲ ನನ್ನ ಸುತ್ತ ತಿರುಗಾಡುವಂತಹ ಭ್ರಮೆ. ಏನೇನೋ ವಿಚಿತ್ರ ಪರಿಸ್ಥಿತಿ ಸಮಗ್ರ ದೇಹದ ಮೇಲೆ ಉಂಟಾಗಿ ಹೋಯಿತು. ಚನ್ನಬಸಪ್ಪ 'ಹೆದರ ಬ್ಯಾಡೋ

ಮಾರಾಯ. ಹೊಸದಾಗಿ ಸೇದಿದರೆ ಹಾಗೇ ಆಗೋದು' ಎಂಬ ಮಾತು ಕಿವಿಗೇನೊ ಬೀಳುತ್ತಿತ್ತು. ಮೇಲೇಳಲಾಗುತ್ತಿರಲಿಲ್ಲ ನಾಲಗೆಯೆಲ್ಲ ಅಂಟುಂಟು. ತಲೆಯೆಲ್ಲ ಗಿಮಿಗಿಮಿ! ಧಿಮಿ ಧಮಿ! ಚರ್ಮದಲ್ಲೆಲ್ಲ ಜುಮುಜುಮು. ಮನುಷ್ಯ ಸ್ವಭಾವವೇ ವಿಚಿತ್ರ. ಒಮ್ಮೊಮ್ಮೆ ಆಪ್ತವಾಕ್ಯದಲ್ಲೂ ನಂಬಿಕೆಯಿಡುವುದಿಲ್ಲ. ಸ್ವತಃ ಪ್ರಮಾಣಿಸಿ ನೋಡಬೇಕೆಂದೋ, ಮದ್ಯ ಮೊದಲಾದವುಗಳಲ್ಲಿ ಸಹಜಪ್ರವೃತ್ತಿ ಉಂಟಾಗುವ ಕಾರಣವೋ ಏನೋ ಕೊಚ್ಚೆ ಕೆಸರಿಗಿಳಿದೇ ಬಿಡುತ್ತಾನೆ. ಸಂಸ್ಕಾರಿಯಾದರೆ ಕೊಚ್ಚೆನೀರು ತೊಳೆದುಕೊಂಡು ಇನ್ನೊಮ್ಮೆ ಇಳಿಯದಂತೆ ಎಚ್ಚರಗೊಳ್ಳುತ್ತಾನೆ. ಮತ್ತೆ ಕೆಲವರು ಅಲ್ಲಿ ಇಳಿಯುವುದರಲ್ಲೂ ಸೊಗಸನ್ನು ಕಂಡು ಪದೇ ಪದೇ ಇಳಿದು, ಅದರಲ್ಲಿರುವ ಹೊಲಸಿನಲ್ಲೇ ಕೊನೆಗೊಳ್ಳುತ್ತಾರೆ. ನನಗೆ ಪ್ರವೃತ್ತಿಯುಂಟಾದದ್ದು ಚನ್ನಬಸಪ್ಪನ ಒತ್ತಾಯಕ್ಕೇ ಮಣಿದೋ ಅಥವಾ ಪರೀಕ್ಷಿಸುವ ಪ್ರವೃತ್ತಿ ಗರಿಗೆದರಿಯೋ ಸೇದಿಯೇ ಬಿಟ್ಟೆ. ಚನ್ನಬಸಪ್ಪನ ಸಹಕಾರದಿಂದ ಗಾಡಿ ಹತ್ತಿ ಕುಳಿತೆ. ಬೆಳದಿಂಗಳ ಪ್ರಶಾಂತ ಗಂಭೀರ ರಾತ್ರಿಯಲ್ಲಿ ಗಾಡಿ ತುಂಬಿದ ಕೆರೆಯನ್ನು ಸುತ್ತುವರೆದು ಒಂದು ಮೈಲು ದೂರದ ಕಣಕ್ಕೆ ಬಂತು. ನನ್ನ ಮೈಯಲ್ಲಿ ಗಾಂಜಾದ ಸೊಕ್ಕು ಇನ್ನು ಅರ್ಧಕ್ಕರ್ಧ ಇತ್ತು. ನಾಲಿಗೆ ಒಂದು ಬಗೆಯ ಅಂಟಂಟು. ಅದಕ್ಕೆ ಏನು ತಿನ್ನಲಿ ಏನು ಬಿಡಲಿ ಎನ್ನುವ ಕೂಳುಬಕ್ಕನ ಪ್ರವೃತ್ತಿ. ನನ್ನ ಸ್ಥಿತಿಯನ್ನು ಕಂಡು ಚನ್ನಬಸಪ್ಪನ ಹೆಂಡತಿ ತಿಪ್ಪಮ್ಮ, ಗದಿಗೆಕ್ಕ ಹತ್ತಿರಕ್ಕೆ ಬಂದು "ನಮ್ಮ ಕಣಹಬ್ಬದ ದಿನವೇ ಮಾಸ್ತರಿಗೆ ಜ್ವರಾ ಬರಬೇಕೇ ದೇವ್ರೇ?" ಎದು ಮರುಗಿದರಾದರೂ ಜ್ವರದಲ್ಲಿ ಚೆನ್ನಬಸಪ್ಪ ಕುಡಿಸಿದ ಮದ್ದಿನ ವಿಷಯ ಗುಟ್ಟಾಗಿಯೇ ಇತ್ತು.

ಚನ್ನಬಸಪ್ಪ ಆಗಾಗ ಗಾಂಜಾ ಸೇದುತ್ತಿದ್ದನಂತೆ. ಅದನ್ನು ಬಿಡಿಸಲು ತಿಪ್ಪಮ್ಮ ಬಹಳಷ್ಟು ಪ್ರಯತ್ನ ಮಾಡಿ ಸೋತಿದ್ದಳಂತೆ. ಒಮ್ಮೆ ಮನೆಯಲ್ಲಿ ತಂದು ಇಟ್ಟಿದ್ದ ಒಂದು ಸೇರಿನಷ್ಟು ಗಾಂಜಾವನ್ನು ತಿಪ್ಪಮ್ಮ ಒಲೆಗೆ ಹಾಕಿ ಹೊಡೆಸಿಕೊಂಡಿದ್ದಳಂತೆ. ಚನ್ನಬಸಪ್ಪ ಗಾಂಜಾವನ್ನು ಕೊಂಡು ತರುತ್ತಿರಲಿಲ್ಲವಂತೆ. ದುರ್ಗಮವಾದ ದೊಡ್ಡ ಅರಣ್ಯದ ಸೀಗೆಮೆಳೆಗಳ ಮಧ್ಯದಲ್ಲಿ. ಯಾರೋ ಹಾಕಿದ್ದ ಗಿಡಗಳನ್ನು ಇವನು ನೋಡಿಕೊಂಡಿದ್ದು ಅವು ಕಲ್ಲಿಗಳಾದಾಗ ಅವುಗಳಿಂದ ಅಷ್ಟು ಇಷ್ಟು ಗಾಂಜಾವನ್ನು ಬಿಡಿಸಿ ತಂದು ಮನೆಯಲ್ಲಿ ಸಂಗ್ರಹಿಸಿಟ್ಟುಕೊಂಡು ಆಗಾಗ ಸೇದುತ್ತಿದ್ದನಂತೆ. ಈ ಗುಟ್ಟನ್ನು ಅವನು ಯಾರಿಗೂ ಬಿಟ್ಟುಕೊಟ್ಟಿದ್ದಿಲ್ಲ. ನನಗೊಬ್ಬನಿಗೆ ಮಾತ್ರ ಬಿಟ್ಟುಕೊಟ್ಟಿದ್ದ ಅಷ್ಟೆ. ಅವರ ಹೆಂಡತಿ ತಿಪ್ಪಮ್ಮನಿಗೂ ಹೇಳಿದ್ದಿಲ್ಲ. "ಹೆಂಗಸರಿಗೆ ಗುಟ್ಟು ಏನೂ ಹೇಳಬಾರದ್ರೀ ಮಾಸ್ತರ, ಹೇಳಿದರ ಸಾಕು ಊರಿಗೆಲ್ಲ ಡಂಗುರಾ ಹೊಡ್ದು ಬಿಡ್ತಾವು" ಎನ್ನುತ್ತಿದ್ದ.

ಆ ದಿನ ನಾಲಿಗೆ ಸಪ್ಪೆಗೊಂಡು ಏನು ತಿನ್ನಲಿ ಏನು ಬಿಡಲಿ ಎಂಬ ಅದರ ಚಾಪಲ್ಯಕ್ಕೆ ಕಟ್ಟುಬಿದ್ದು ಕಂಠಪೂರ್ತಿ ಗೋದಿಹುಗ್ಗಿ, ಅನ್ನಸಾರು, ಪಲ್ಯ, ಉಪ್ಪಿನ ಕಾಯಿಗಳ ಊಟವನ್ನು ಉಂಡೇ ಬಿಟ್ಟೆ. ಊಟ ಮಾಡಿದ ಮೇಲೆ ಗಾಂಜಾದ ಗುಂಗು ಬಹಳ ಮಟ್ಟಿಗೆ ಕಡಿಮೆಯಾದರೂ ಏನೋ ಒಂದು ಬಗೆಯ ಹೇಡಿತನ, ಆಲೋಚನಾರಾಹಿತ್ಯ ನನ್ನನ್ನು ಆವರಿಸಿದಂತೆ ಭಾಸವಾಗುತ್ತಿತ್ತು. ಉತ್ತಮ ಚಟುವಟಿಕೆಯುಳ್ಳ ಕ್ರಿಯಾಶಾಲಿ ಈ ಹೊಲಸು ಮದೋನ್ಮತ್ತತೆ ಗೊಳಿಸುವ ಗಾಂಜಾವನ್ನು ಮುಟ್ಟಬಾರದೆಂದುಕೊಂಡೆ. ಚೆನ್ನಬಸಪ್ಪನಿಗೆ ಇನ್ನೊಮ್ಮೆ ಇದನ್ನು ಸೇದಿಸುವ ಕಟ್ಟಿಗೆ ನನ್ನನ್ನು ಒಳಪಡಿಸಬೇಡವೆಂದು ತಿಳಿಸಿದೆ. ರಾತ್ರಿ ಬಹಳ ಹೊತ್ತಿಗೆ ಬಂದು ಚನ್ನಬಸಪ್ಪನ ಮನೆಯಲ್ಲಿಯೇ ಅಟ್ಟದ ಮೇಲೆ ಮಲಗಿದೆ. ಜ್ವರ ಮಾತ್ರ ಇಳಿದಂತಿರಲಿಲ್ಲ. ಆದರೆ ಗಾಂಜಾದ ಮಬ್ಬಿನಲ್ಲಿ ಜ್ವರವಿದೆ ಎಂಬುದರ ಅರಿವಾಗಲಿಲ್ಲ. ಕಂಠಪೂರ್ತಿ ಅತಿ ಜಡ ಪದಾರ್ಥಗಳನ್ನು ತಿಂದ

ಕಾರಣವೋ ಏನೋ ಸುಮಾರು ನಾಲ್ಕು ಘಂಟೆ ರಾತ್ರಿಯ ಹೊತ್ತಿಗೆ ಹೊಟ್ಟೆ ಜಾಡಿಸಿ ದೇಹ ಹಗುರಾಯಿತು. ಐದು ಘಂಟೆಯಿಂದ ಬೆಳಗಿನ ಏಳು ಘಂಟೆಯ ವರೆಗೆ ಎರಡು ತಾಸು ಗಡದ್ದಾಗಿ ನಿದ್ರೆ ಮಾಡಿ ಬೆಳಿಗ್ಗೆ ಮತ್ತೆ ಶಾಲೆಗೆ ಓಡಿದೆ.

ಕೆಲವು ತಿಂಗಳುಗಳ ನಂತರ ಎಂದೂ ಗಾಂಜಾ ಮುಟ್ಟಬಾರದೆಂಬ ಶಪಥವನ್ನು ಮುರಿದು ಇದೇ ಚನ್ನಬಸಪ್ಪ ಸಹವಾಸದಿಂದ ಮತ್ತೊಮ್ಮೆ ಗಾಂಜಾ ಸೇದಿಬಿಟ್ಟೆ. ಆ ದಿನ ಸೇದಿದುದು ಸಾಯಂಕಾಲ ಐದುಘಂಟೆಯ ಸಮಯದಲ್ಲಿ. ಅಷ್ಟರಲ್ಲಿ ಹೊಸೂರಿನ ಶಿವಬಸಪ್ಪ ಸೆಟ್ಟರು ಒಂದು ಆಳನ್ನು ನನ್ನ ಹತ್ತಿರ ಕಳಿಸಿದರು. ಅರ್ಧ ಎಚ್ಚರ ಅರ್ಧ ಮಬ್ಬು ಸ್ಥಿತಿಯಲ್ಲೇ ಕಂಠಪೂರ್ತಿ ಹೆಂಡ ಕುಡಿದವರಂತೆ ತೊದಲುತ್ತ ಏನು ಸಮಾಚಾರ ಎಂದೆ. ಸೆಟ್ಟರು ಈ ಕೂಡಲೆ ಬರಬೇಕೆಂದು ಹೇಳಿಕಳಿಸಿದ್ದಾರೆ ಎಂದ. ಎದೆ ಬಡಿದುಕೊಳ್ಳತೊಡಗಿತು. ಏಕೆಂದರೆ ಈ ಸ್ಥಿತಿಯಲ್ಲಿ ನಾನು ಹೊಸೂರ ಮನೆಗೆ ಹೇಗೆ ಹೋಗುವುದೆಂಬುದೇ ಭಯಕ್ಕೆ ಕಾರಣವಾಗಿತ್ತು. ಸೆಟ್ಟರ ಆದೇಶವನ್ನು ಮಿಕ್ಕುವಂತೆಯೂ ಇರಲಿಲ್ಲ. ಆತ "ಯಾಕ್ರಿ ಮಾಸ್ತರ ಮೈಯಲ್ಲಿ ಚೆನ್ನಾಗಿಲ್ಲವೆ?" ಎಂದ. "ಇಲ್ಲ, ನಿನ್ನೆಯಿಂದ ಜ್ವರ, ತಲೆಯೆಲ್ಲ ಭಾರ"ಎಂದು ತೊದಲುತ್ತಲೆ ಅರೆಗಣ್ಣು ತೆರೆತೆರೆದು ಹೇಳುತ್ತಿದ್ದೆ. "ಅದೇನು ಮಾಡುತ್ತೆ ಏಳಿ ಮಾಸ್ತರ, ಹೊಸೂರಾಗ ಸೆಟ್ರ ಅಂಗ್ಡ್ಯಾಗ ಗುಳಿಗೆಗಳು ಅದಾವ. ಅವನ್ನ ಒಂದೆರಡು ನುಂಗಿದರ ಜ್ವರ ಓಡಿಹೋಗ್ತೈತಿ. ಹ್ಯಾಂಗಿದ್ರೂ ನಾನಿದ್ದೇನಲ್ಲಾ ಜೊತೆಗೆ ಏಳೇಳ್ರಿ" ಎಂದು ಕೈಹಿಡಿದು ಹೊರಸಿನ ಮೇಲೆ ಕೂರಿಸಿದ. ನಾನು ತೇಲುಗಣ್ಣು ಮೇಲುಗಣ್ಣು ಹಾಕುತ್ತ ಜೋಲಿ ಹೊಡೆಯುತ್ತ ತಿಪ್ಪಮ್ಮನಿಂದ ನೀರು ತರಿಸಿಕೊಂಡು ಕುಡಿದು ಸಮಾಧಾನ ಮಾಡಿಕೊಂಡೆ. ತಿಪ್ಪಮ್ಮ ಗುಟ್ಟಾಗಿ ಒಳಗೆ ಕರೆದು ನಾನು ಬಾಯಿ ಬಿಡದಿದ್ದರೂ ನಿಜವೃತ್ತಾಂತವನ್ನು ಅರ್ಥಮಾಡಿಕೊಂಡು ಚೆನ್ನಾಗಿ ಛೀಮಾರಿ ಹಾಕೇಬಿಟ್ಟಳು. "ನೀವು ಅವರ ಕೂಡ ಆಟಾ ಆಡಿ, ಆ ಹಾಳು ಗಾಂಜಾ ಸೇದಿದ್ದೀರೋ ಇಲ್ವೋ! ನಂಗೆಲ್ಲ ಗೊತ್ತಾಗ್ತೈತ್ರೀ ಮಾಸ್ತರ. ಇನ್ಮ್ಯಾಲ ಅದ್ನ ಮುಟ್ಟೆ ಗೀಟ್ಟೇರಿ ನನ್ನಾಣೆ" ಎಂದು ಬಿಟ್ಟಳು. ತಿಪ್ಪಮ್ಮ ನನ್ನನ್ನು ಮಗನನ್ನು ಕಂಡಷ್ಟು ವಾತ್ಸಲ್ಯದಿಂದ ಕಂಡ ಹೆಣ್ಣುಮಗಳು. ಅವಳ ಕಕ್ಕುಲತೆ ನನ್ನ ಮನಸ್ಸನ್ನು ಕಲಕಿತು. ಅಲ್ಲಿ ನಾನು ಇನ್ನೂ ಸಾಯುವವರೆಗೆ ಈ ಹೇಡಿ ಗಾಂಜಾ ಮುಟ್ಟುವುದಿಲ್ಲವೆಂದು ಮನದಲ್ಲಿಯೇ ಶಪಥ ಮಾಡಿ ದೇವರು ಮಾಡಿದ್ದಾಗಲೆಂದು ಆಳಿನ ಜೊತೆಗೆ ಹೊಸೂರಿಗೆ ಹೊರಟೇ ಬಿಟ್ಟೆ.

ಆ ದಿನ ರಾತ್ರಿ ಶಿವಬಸಪ್ಪ ತನ್ನ ಇಬ್ಬರು ತಮ್ಮಂದಿರಿಗೆ ಕನ್ಯೆ ನೋಡಲು ಹೋಗಬೇಕಾಗಿತ್ತು. ಆ ಕಾರ್ಯಕ್ಕೆ ನನ್ನ ಹಾಜರಾತಿ ಅವಶ್ಯಕವಾಗಿತ್ತು. ಆದ್ದರಿಂದಲೇ ನಾನು ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲದ ಧರ್ಮಸಂಕಟದ ಸನ್ನಿವೇಶವಾಗಿತ್ತಾಗಿ ಹೊರಡಲೇ ಬೇಕಾಗಿ ಹೊರಟೆ. ಮನಸ್ಸಿನ ಯಾವ ಭಾವನೆಗಳೂ ಕೆಲಸ ಮಾಡದೆ, ಸಂಕಲ್ಪವಿಕಲ್ಪಗಳೂ ಉಂಟಾಗದೆ ಒಂದು ರೀತಿಯಲ್ಲಿ ಮನಸ್ಸೇ ಇಲ್ಲದ ಹೇಡಿಯಾಗಿ ಹೋಗಿದ್ದ ನನ್ನ ಕಾಲುಗಳು ಮಾತ್ರ ಥಕ್ ಥಕ್ ಎಂದು ಭೂಮಿಯ ಮೇಲೆ ನಡೆಯುತ್ತಿದ್ದವಾಗಲಿ ಮನೋವ್ಯಾಪಾರ ಶೂನ್ಯಗೊಳಿಸಿ ಬಿಡುವ ಈ ಹಾಳು ಗಾಂಜಾದ ಮೇಲೆ ನನಗೆ ಕೋಪವುಂಟಾದರೂ ಆಗಲೇ ಅದೂ ಮಾಯವಾಗಿ ಬುದ್ಧಿಯ ಮೇಲೆ ಕತ್ತಲು ಕವಿದಷ್ಟು ಹೇಡಿಯಾಗಿದ್ದೆ. ಹೊಸೂರಿಗೆ ಮೂರು ಮೈಲು ಹೇಗೆ ಹೋದೆನೋ ಗೊತ್ತಿಲ್ಲ. ಊರೊಳಗೆ ಹೋಗಲಿಲ್ಲ. ಊರ ಹೊರಗಿನ ಸೆಟ್ಟರ

ಬೇಸಿಗೆಯ ಹಂಗಾಮಿ ಅಂಗಡಿಗೆ ಹೋದೆ. ಅಲ್ಲಿಗೆ ಹೋದದ್ದೇ ತಡ ಸುಸ್ತಾಗಿ ಅಲ್ಲಿ ಹಾಸಿದ್ದ ಚೀಲಗಳ ಹಾಸಿಗೆಯ ಮೇಲೆ ಧೊಪ್ಪೆಂದು ಬಿದ್ದುಬಿಟ್ಟೆ. ಅಲ್ಲದ್ದವರೆಲ್ಲ ಗಾಬರಿಗೊಂಡರು. ಏನು ಏನು ಎಂದು ಕೇಳುವವರೇ. ನಾನು ನಿಜವೃತ್ತಾಂತವನ್ನು ಮುಚ್ಚಿ ಹಾಕಿ ನಿನ್ನೆಯಿಂದ ಜ್ವರ ಹಾಗೆ ಹೀಗೆ ಎಂದು ಒಂದು ಹಸಿಸುಳ್ಳು ಹೊಡೆಯುವಷ್ಟರಲ್ಲಿ ನೀಲಗಿರಿ ತೈಲವನ್ನು ಆ ಸೆಟ್ಟರ ಹುಡುಗರು ತಂದು ಅಂಗಾಲು, ಎದೆ, ಬೆನ್ನು, ನೆತ್ತಿಗೆಲ್ಲ ಹಾಕಿ ತಿಕ್ಕತೊಡಗಿದರು. ಮೀನಗಂಡಕ್ಕೂ ಹಚ್ಚಿ ತಿಕ್ಕತೊಡಗಿದರು. ಮೈ ಹಗುರಾಗಿ ಏನೋ ಸ್ವಲ್ಪ ಉತ್ಸಾಹ ಬಂದಂತಾಯಿತು. ಆಗ ಶಿವಬಸಪ್ಪ ಸೆಟ್ಟರು ತಾವೇ ಬಂದು 'ಅರ್ಕುಶಫಾ' ಎಂದು ಕರೆಲಾಗುತ್ತಿದ್ದ ಸರ್ವರೋಗ ಪರಿಹಾರವೆಂದು ಬಹಳ ನಂಬಿಕೊಂಡಿದ್ದ ತನ್ನ ಔಷಧ ಪ್ರಯೋಗ ಮಾಡಿಬಿಟ್ಟ. ಅದರಿಂದ ಕಿಂಚಿತ್ ಗುಣ ಕಂಡಂತಾಯಿತು. ಆಮೇಲೆ ಅವರ ಮನೆಗೆ ಹೋಗಿ ಮಲ್ಲಿಗೆಯಂತೆ ಮೃದುವಾಗಿದ್ದ ಕರೆದಡಿ ಮುಳ್ಳುಬತ್ತದ ಅನ್ನಕ್ಕೆ ಹಾಲುತುಪ್ಪ ಹಾಕಿಕೊಂಡು ನಂಜಿಕೆಗೆ ಕಡ್ಲಿ ಕೊಬ್ರಿ ಚಟ್ನಿ, ಕಣ್ಣು ಮೂಗುಗಳಲ್ಲಿ ನೀರು ಬರುವಂತೆ ಸಾಸ್ವೆ ಎಣ್ಣೆ ಹಾಕಿ ತಯಾರಿಸಿದ ಉಪ್ಪಿನ ಕಾಯಿಯೊಡನೆ ಕಂಠಪೂರ್ತಿ ಅನ್ನ ಉಂಡು ಬಿಟ್ಟೆ. ನಂಜಿಕೆಗೆ ಹೆಸರುಹಿಟ್ಟಿನ ಸಂಡಿಗೆ ಬೇರೆ ಇತ್ತು. ಗಾಂಜಾದಿಂದ ಹಾಳಾಗಿ ಹೋಗಿದ್ದ ನಾಲಗೆಗೆ ಈ ಎಲ್ಲ ಪರಿಕರಗಳು ಅಮೃತಪ್ರಾಯವಾದ್ದರಿಂದ ಬಹುಶಃ ಬಹಳಷ್ಟು ಅನ್ನವನ್ನು ಊಟ ಮಾಡಿಬಿಟ್ಟೆ. ಅಲ್ಲಿಗೆ ನನ್ನ ಗಾಂಜಾದ ಅಮಲು ಇಳಿದು ಸಹಜಸ್ಥಿತಿಗೆ ಬಂದೆ. ಶಿವಬಸಪ್ಪ ಮಾತ್ರ ತನ್ನ ಅರ್ಕುಶಫಾ ಔಷಧದಿಂದಲೇ ಮಾಸ್ತರರ ಜ್ವರ ಕಳೆಯಿತೆಂದು ಭಾವಿಸಿ ತಾನು ಬಹಳ ನಂಬಿದ್ದ ಆ ಔಷಧದ ಬಗ್ಗೆ ಇನ್ನೂ ಹೆಚ್ಚಿನ ವಿಶ್ವಾಸ ತಾಳಿದ. ನನಗೆ ಜ್ವರ ಬಂದಿದ್ದರೆ ತಾನೆ ಅದು ಹೋಗೋದು. ನನ್ನದು ಬೇರೆ ಜ್ವರ. ಆ ಗುಟ್ಟನ್ನು ಮಾತ್ರ ಅವರಿಗೆ ಎಂದೂ ಬಿಟ್ಟುಕೊಡಲಿಲ್ಲ ಅನ್ನಿ. ರಾತ್ರಿ ಕೊಲ್ಲಾರಿಗಾಡಿಯಲ್ಲಿ ನಾವು ಐದಾರು ಜನರು ಸೇರಿ ಸವಣೂರು ಬಂಕಾಪುರಗಳ ಕಡೆ ಕನ್ಯಾನ್ವೇಷಣೆಗಾಗಿ ತೆರಳಿಬಿಟ್ಟೆವು. ಮುಂದೆ ಜೀವನದುದ್ದಕ್ಕೂ ಈ ದುಷ್ಟ ಗಾಂಜಾದ ಹೆಸರು ಕಿವಿಗೆ ಬೀಳದಂತೆ ಕರುಣಿಸೆಂದು ಮನಸ್ಸಿನಲ್ಲಿಯೇ ದೇವರನ್ನು ಪ್ರಾರ್ಥಿಸಿದೆ. ನನ್ನ ಅಭಿಪ್ರಾಯದಲ್ಲಿ ಗಾಂಜಾ ಮನುಷ್ಯನ ಮನಸ್ಸನ್ನು ದುರ್ಬಲಗೊಳಿಸುವ, ಬುದ್ಧಿಶಕ್ತಿಯನ್ನು ಕುಂಠಿತಗೊಳಿಸುವ, ಉತ್ಸಾಹಶಕ್ತಿಯನ್ನು ಹಾಳು ಮಾಡುವ ಅಪಾಯಕಾರಿ ಧೂಮಮದ್ಯವೆಂದು ಹೇಳಬಲ್ಲೆ. ಎಪ್ಪತ್ತರ ಹೊಸ್ತಿಲಲ್ಲಿರುವ ನಾನು ಇಂದಿಗೂ ಅದನ್ನು ಕಣ್ಣಿಂದ ನೋಡಲಿಲ್ಲ; ಕೈಯಿಂದ ಮುಟ್ಟಲಿಲ್ಲ. ನಮ್ಮಜ್ಜ ಗಾಂಜಾ ಸೇದುತ್ತಿದ್ದನೆಂದೂ ಅವನ ಹೆಸರಿಟ್ಟ ನನಗೆ ನಾಮಬಲದ ಬಳಿವಿಡಿದೋ ಅಥವಾ ವಂಶವಾಹಿನಿಯ ವಾಸನಾಬಲದ ಕಾರಣದಿಂದಲೋ ಎರಡು ಸಲ ನನ್ನ ಹತ್ತಿರ ಸುಳಿದುದಂತೂ ಸತ್ಯ. ಅದರಿಂದ ಬಹುದಿನ ಜಿಗುಪ್ಸೆಗೊಳಗಾದೆ; ಹೇಸಿಕೆ ಪಟ್ಟೆ. ವಿವೇಕವು ಗಟ್ಟಿಗೊಳ್ಳದ ಕಾಲದಲ್ಲಿ ದಾಕ್ಷಿಣ್ಯಕ್ಕೆ ಕಟ್ಟುಬಿದ್ದೋ ಅಥವಾ ಪ್ರವೃತ್ತಿಯ ಪ್ರಬಲ ಸೆಳೆತಕ್ಕೆ ಸಿಕ್ಕೋ ಗಾಂಜಾ ನನ್ನ ಹತ್ತಿರಕ್ಕೆ ಸುಳಿಯಿತು. ಒಮ್ಮೆ ಅಲ್ಲ, ಎರಡು ಸಲ. ಮೂರನೆಯ ಸಲ ಸುಳಿಯಲು ಅವಕಾಶಕೊಡಲಿಲ್ಲ. ಶಿವ ಬದುಕಿಸಿದ ಎನ್ನುತ್ತೇನೆ. ಕೆಲವು ಜನ ಅವಧೂತರು ಅದು ಮನಸ್ಸನ್ನು ಏಕಾಗ್ರಗೊಳಿಸುವುದೆಂದು ಹೇಳುವ ಸುಳ್ಳುಕಂತೆ ಮಾತು ಯಾರ ನಂಬಿಕೆಗೂ ಅರ್ಹವಲ್ಲ. ಹೆಂಡ ಕುಡಿದು ಭಂಡಬಾಳು ಮಾಡುವವರಂತೆ ಭಂಗಿ ಸೇದುವವನದೂ ಭಂಡ ಬಾಳುವೆ ಅನ್ನುವುದೇ ಯುಕ್ತ. ಹೀಗಲ್ಲದಿದ್ದರೆ-

ಅಂಗಿ ಅರಿವೆಯ ಮಾರಿ ಬಂಗಿಯನು ತಾ ಸೇದಿ।
ಮಂಗನಂದದಿ ಕುಣಿವಾತ ಭವ ಭಯದಿ
ಭಂಗಗೊಳ್ಳುತಿಹನು ಸರ್ವಜ್ಞ॥

ಬಂಗಿಯನು ಸೇದುವನ ಭಂಗವನು ಏನೆಂಬೆ ।
ಬಂಗಿಯ ಗುಂಗು ತಲೆಗೇರಲಾಡುತಿಹ
ಮಂಗನಂತಿಹನು ಸರ್ವಜ್ಞ॥

- ಹೀಗೆ ಬಂಗಿಯ ಬಗೆಗೆ ನುಡಿಯುತ್ತಿದ್ದವನೇ. ಬಂಗಿಯನ್ನು ಸೇದಿ ವೇದಾಂತ ಹೇಳುವವರು ನಿಜವಾಗಿ ಈ ಕವಿ ಹೇಳುವಂತೆ ಮಂಗಗಳೇ ಎಂಬುದನ್ನು ನಾನು ಕೇಳೂರು ರೈಲ್ವೆ ಸ್ಟೇಷನ್‌ನಲ್ಲಿ ಸಿದ್ಧಾರೂಢಶಿಷ್ಯನ ಮುಖದಿಂದ ಎಂದೋ ಗಮನಿಸಿದ್ದೇನೆ. ಅದೊಂದು ಬಗೆಯ ಪಲಾಯನವಾದ. ಜೀವನ ಸಮೃದ್ಧಿಗೆ ಸಹಾಯಕವಾದ ತರ್ಕಬದ್ಧ ವೇದಾಂತವಂತೂ ಅಲ್ಲ. ದೇಹವೆಂಬುದು ಅಶುದ್ಧಿಯ ಆಗರ, ಜೀವನ ಮೂರು ದಿನದ ಸಂತೆ. ದೇಹವನ್ನು ನಂಬಿ ಕೆಡಬೇಡ ಇತ್ಯಾದಿ ಮಾತುಗಳು ಜೀವನ ಸಮೃದ್ಧಿಯ ಸುದೇಶಗಳು ಆಗುವುದು ಶಕ್ಯವೇ. ದೇಹವೆಂಬುದು ಈಶ್ವರನನ್ನು ಒಲಿಸಬಂದ ಪ್ರಸಾದಕಾಯ, ಲಿಂಗತನು. ಈ ದೇಹವಿಡಿದೇ ಸತ್ಯ ಶುದ್ಧ ಕ್ರಿಯೆಯ ಮೂಲಕ ಸಾಧಿಸಬೇಕಾದುದನ್ನು ಮನುಷ್ಯ ಸಾಧಿಸಬೇಕಲ್ಲವೆ? ಕ್ಷಣಕ್ಷಣಕ್ಕೂ ಕೊಲುವೆನೆಂಬ ದೇವನ ಭಾಷೆಯನ್ನು ಹುಸಿಗೊಳಿಸುತ್ತ ಸತ್ಯವೆಂಬ ಕೂರಲಗು ಹಿಡಿದು ಈ ಜೀವನದಲ್ಲಿ ಹೋರಾಡಿ ನಡೆಯಬೇಕೆಂದು ಹೇಳುವ ಬಸವಣ್ಣನ ಸಂದೇಶವೆಲ್ಲಿ? ಅವಧೂತರ ಈ ಸಂದೇಶವೆಲ್ಲಿ? ನಮ್ಮ ದೇಶದಲ್ಲಿ ಬಹು ಅಗ್ಗವಾಗಿ ಸಿಗುವ ಒಂದೇ ಒಂದು ವಸ್ತುವೆಂದರೆ ಏನೂ ಗೊತ್ತಿಲ್ಲದವರು ಏನೂ ಗೊತ್ತಿಲ್ಲದವರಿಗೆ ಏನೂ ಗೊತ್ತಾಗದಂತೆ ಹೇಳುವ ವೇದಾಂತವೆಂದು ಧೈರ್ಯವಾಗಿ ಹೇಳಬಹುದು. ಇಂಥ ವೇದಾಂತವನ್ನು ಗಾಂಜಾ ಸೇದುವವರೂ ಸೇದಿದ ಅಮಲಿನಲ್ಲಿ ಮಾಡುತ್ತಾರೆಂಬುದೇ ಆಶ್ಚರ್ಯದ ಸಂಗತಿ. ಅದಕ್ಕೆಂದೇ ಬಹುಶಃ ವೇದಾಂತ ತೀರ ಅಗ್ಗದ ವಸ್ತುವಾಗಿರಬಹುದು.

### *ಸಂಗೀತ ನಾಟಕದ ಗೀಳು*

ಬಾಲ್ಯದ ಆರೇಳು ವರ್ಷಗಳಿಂದಲೇ ನನಗೆ ಅಂಟಿಕೊಂಡು ಬಂದಿದ್ದ ನಾಟಕದ ಗೀಳು ಹಿರೇಕಾಂಶಿಗೆ ಬಂದ ಮೇಲೆ ಚಿಗಿತು ಮರವಾಗಿತ್ತು. ಈಗ ಓರ್ವ ಸ್ವತಂತ್ರನೂ ಜವಾಬ್ದಾರಿ ಮನುಷ್ಯನೂ ಆಗಿದ್ದೆ. ಅಲ್ಲದೆ ಶ್ರೀಮಂತರಾದ ಮಿತ್ರರ ಸಹಕಾರ ಸಹವಾಸ - ಸಾಹಚರ್ಯ ಅಧಿಕಗೊಂಡ ಕಾರಣವಾಗಿ ಗೌರವಾರ್ಹ ಸ್ಥಾನದಲ್ಲಿ ಕುಳಿತು ನಾಟಕ ನೋಡುವಷ್ಟು ಮಟ್ಟಿಗೆ ನನ್ನ ಘನತೆ ಬೆಳೆದಿತ್ತು. ಹೀಗೆಂದು ನಾನೇ ದುಡ್ಡು ತೆತ್ತು ನಾಟಕ ನೋಡುವಂತೆಯೂ ಇರಲಿಲ್ಲ. ಯಾರೂ ಕಯ್ಯಿಂದ ಬಿಲ್ಲಿಯನ್ನು ಖರ್ಚು ಮಾಡುವುದಕ್ಕೇ ಬಿಡುತ್ತಿರಲಿಲ್ಲ. ಒಂದು ಥರಾ ನಾನು ಮಕ್ಕಳ ಆಟದಲ್ಲಿ ಹಾಲುಂಡಿ ಅನ್ನುತ್ತಾರಲ್ಲ ಹಾಗೆ ಟಿಕೆಟ್ ಕೇಳಿ ತೆಗೆಸಿ ಖುರ್ಚಿಯ ಮೇಲೆಯೇ ಕುಳಿತು ನೋಡುವಷ್ಟರಮಟ್ಟಿಗೆ ನಮ್ಮ ಜನಗಳೂ ಆಧ್ಯರು. ಚಾಪೆ, ನೆಲ ಕೊನೆಗೆ ಬೆಂಚು ಕೂಡ ನಮ್ಮ ಘನತೆಗೆ ಕಡಿಮೆಯೇ ಅನ್ನಿಸಿದ್ದವು. ಚಹಾ, ಕಾಫಿ, ಫಳಾರ ವಗೈರೆ ಯಾವುದರ ಭಾರವೂ ನನಗಿರಲಿಲ್ಲ. ಎಲ್ಲವನ್ನೂ ಅವರೇ ನೋಡಿಕೊಳ್ಳುವಂಥ ಮಿತ್ರರು, ಹಿತೈಷಿಗಳು. ಇದೊಂದು ಭಾಗ್ಯ ನನಗಿತ್ತು. ಬಾಲ್ಯದಲ್ಲಿ ದುಡ್ಡಿನ ಅಭಾವದಿಂದ ಎಲ್ಲಕ್ಕೂ

ಹಿಂದೆ ದೂರದಲ್ಲಿಯೇ ಕುಳಿತು. ಕಂಡಷ್ಟು ಕೇಳಿದಷ್ಟು ಚಾಪಲ್ಯ ತೀರಿಸಿಕೊಂಡು ಅವರು ಹಾಡುವ ಹಾಡುಗಳನ್ನು ತಪ್ಪು ತಪ್ಪಾಗಿ ಕೇಳಿ ಮನಸ್ಸಿಗೆ ಬಂದಂತೆ ತಪ್ಪುತಪ್ಪಾಗಿಯೇ ಚಿಕ್ಕಮಕ್ಕಳು 'ಜಣಮಣ ಗಣ ಅಧಿಣಾಯಕ ಜೇಹೇ..' ಎಂದು ರಾಷ್ಟ್ರಗೀತೆ ಹೇಳುವುದಿಲ್ಲವೆ ಹಾಗೆ ಕಲಿತುಕೊಂಡಿದ್ದೆ. ಪಳ್ಳಿಯ ಸಭೆಗಳಲ್ಲಿ ಅವನ್ನೇ ಹಾಡಿ ಶಬಾಸ್‌ಗಿರಿ ಪಡೆಯುತ್ತಿದ್ದೆ. ಸಂಗೀತದ ಪ್ರಸಂಗಗಳು ನಡೆವಲ್ಲೆಲ್ಲ ಜನ ನೀವೂ ಒಂದೆರಡು ಹಾಡಿರೆಂದರೆ ಅವನ್ನೇ ತಪ್ಪಾಗಿ ಹೇಳುತ್ತಿದ್ದೆ. ಒಮ್ಮೆ ಯೊಂಕಣದ ಜಾತ್ರೆಗೆ ಹೋಗಿದ್ದೆ. ಆ ಜಾತ್ರೆ ನಡೆಸುತ್ತಿದ್ದ ಹುಬ್ಬಸ್ವಾಮಿ ಅನ್ನುವವರು ನನಗೆ ತೀರಾ ಪರಿಚಿತರು. ಹಿರೇಕಾಂಶಿಗೆ ಪಟ್ಟಿ ಎತ್ತಲು ಬಂದಾಗ 'ಈ ವರ್ಷ ಜಾತ್ರೆಗೆ ಬಂದೇ ತೀರಬೇಕು, ತಪ್ಪಿಸಬೇಡಿ' ಎಂದು ಕಟ್ಟಪ್ಪಣೆ ಮಾಡಿ ಹೋಗಿದ್ದ ಕಾರಣ ಹೋಗಲೇಬೇಕಾಗಿತ್ತು, ಹೋಗಿದ್ದೆ. ಅಷ್ಟು ಕಾಲಕ್ಕಾಗಲೆ ಆ ನಾಡಿನಲ್ಲಿ ಬಹಳ ಪ್ರಸಿದ್ಧನಾಗಿ ಹೋಗಿದ್ದ ನನ್ನನ್ನು ಸಂಗೀತ ಕಚೇರಿ ನಡೆಯುವಲ್ಲಿ ಮುಂದೇ ಹೋಗಿ ಕುಳ್ಳಿರಿಸಿಬಿಟ್ಟರು. ಆ ದಿನದ ಅಧಿಕೃತ ಸಂಗೀತಗಾರ ಹುಕ್ಕೇರಿ ಬಾಳಪ್ಪ, ಆತ ಬಹಳ ಚೆನ್ನಾಗಿ ಹಾಡಿ ಜನಮನವನ್ನು ಗೆದ್ದ ಮನುಷ್ಯ. ನನಗೆ ಸರಿಗಮ ಪದನಿಸ ಕೂಡ ಗೊತ್ತಿದ್ದಿಲ್ಲ. ಬಾಳಪ್ಪ ಒಂದೆರಡು ಹಾಡು ಹಾಡಿ ಚಪ್ಪಾಳೆಗಳ ಮೇಲೆ ಚಪ್ಪಾಳೆ ಗಿಟ್ಟಿಸಿಕೊಂಡು ಬಿಟ್ಟ. ಅವನ ಶೈಲಿ, ಹಾವಭಾವ, ಮಧ್ಯ ಮಧ್ಯದಲ್ಲಿ ನಗೆ ತರಿಸುವ ಹಾಸ್ಯ ಚಟಾಕಿಗಳಿಂದ ಜನಮನವನ್ನೆಲ್ಲ ಗೆದ್ದು ಬಿಟ್ಟಿದ್ದ.

ನನಗೆ ಹಾಡಬೇಕೆಂದು ಅನೇಕರು ಒತ್ತಾಯ ಮಾಡತೊಡಗಿದರು. ಸಾಕ್ಷಾತ್ ಗುಬ್ಬಿ ಸ್ವಾಮಿಗಳೇ "ಹಿರೇಕಾಂಶಿ ಮಾಸ್ತರೂ ಚೆನ್ನಾಗಿ ಹಾಡ್ತಾರೆ ಕಣ್ರೀ. ಅವರೂ ಒಂದೆರಡು ಹಾಡು ಹಾಡಲೇಬೇಕು" ಎಂದು ಬಿಟ್ಟರು. ನನ್ನ ಎದೆ ಬಡಿದುಕೊಳ್ಳತೊಡಗಿತು. ಶಾಸ್ತ್ರೀಯವಾಗಿ ರಾಗ ತಾಲಲಯ ಬದ್ಧವಾಗಿ ಹಾಡುವ ಕಸಬುದಾರ ಹುಕ್ಕೇರಿ ಬಾಳಪ್ಪನೆಲ್ಲಿ ನಾನೆಲ್ಲಿ? ಮೇಲಾಗಿ ನನ್ನ ಹಾಡುಗಳೂ ಕೂಡ ತಪ್ಪು ತಪ್ಪಾದಂಥವು. ಇದನ್ನೆಲ್ಲ ಈ ಕಸಬುದಾರನಾದ ಬಾಳಪ್ಪ ಬಲ್ಲವ. ಲೋಕಸಂಚಾರಿ ಆತ. ಎಲ್ಲ ನಾಟಕ ಕಂಪನಿಗಳನ್ನು ತಿರುವಿ ಹಾಕಿದವನು; ನಾಟಕದ ಹಾಡನ್ನೆಲ್ಲ ಕಲಿತವನು. ನನ್ನದು ತರಲೆ ಸಂಗೀತ. ರಾಗ-ಗೀಗ, ತಾಳ-ಗೀಳ, ಲಯ-ಗಿಯ ಅನ್ನುತ್ತಾರಲ್ಲ, ಅದೆಲ್ಲ ನನ್ನದು ತರಲೆಯೇ ಎಂಬುದು ನನಗೆ ಗೊತ್ತಿರುವಷ್ಟು ಮಂದಿಗೆ ಗೊತ್ತಿದ್ದಿಲ್ಲ. ನನ್ನದು ಏನೂ ಗೊತ್ತಿಲ್ಲದವರ ಮುಂದೆ ಹಾಡಿ ಸೈ ಎನ್ನಿಸಿಕೊಳ್ಳುವ ಸಂಗೀತ. ಸ್ವಲ್ಪ ಧ್ವನಿಯನ್ನು ನಲುಗಿಸಿ ಹಹಹಹ! ಹಿಹಿಹಿಹಿ! ಅನ್ನುವುದು ಅಭ್ಯಾಸ ಬಲದಿಂದ ಬಂದದ್ದೇ ಹೊರತು ಕ್ರಮವಾಗಿ ಕಲಿತು ರಾಗತಾಳಲಯ ಬದ್ಧವಾದದ್ದಲ್ಲ. ನನ್ನ ಹಾಡು ತಬಲಾ ಹಾರ್ಮೋನಿಯಂದವರಿಗೂ ತಬ್ಬಿಬ್ಬುಗೊಳಿಸುವಂತಹುದು. ಇಷ್ಟು ಗೊತ್ತಿದ್ದರೂ ಜನರ ಒತ್ತಾಯಕ್ಕೆ ಮಣಿದೋ ಅಥವಾ ನನಗೇ ಹಾಡಬೇಕೆಂಬ ಮೊಂಡುಧೈರ್ಯದ ತಿಕ್ಕಲು ಹೆಚ್ಚಾಗಿಯೋ ನನ್ನ ಅತಿ ಪ್ರೀತಿಯ ರಾಗ ಯಮನ ಕಲ್ಯಾಣದ ಛಾಯೆಯಲ್ಲಿ ಆಲಾಪ ಶುರು ಮಾಡಿದೆ. ಯಮನ ಕಲ್ಯಾಣಿ ಅನ್ನುವುದನ್ನು ನನಗೆ ಹೇಳಿ ಕೊಟ್ಟವರು ಇಂಗಳಿಗಿ ವಿರೂಪಾಕ್ಷ ಶಾಸ್ತ್ರಿ. ಹಿರೇಕಾಂಶಿಯ ಜಾತ್ರೆಸಮಯದಲ್ಲಿ ಅವನಿಂದ ಕಥೆ ಮಾಡಿಸಿದಾಗ ಬಹು ಸುಂದರವಾದ ವರದಾಯಕ ರೇಣುಕಾರ್ಯ ಎಂಬ ಒಂದು ಪದ್ಯವನ್ನು ಹಾಡುತ್ತಿದ್ದ. ಅದರ ಛಾಯೆಯನ್ನು ನಾನೂ ಕಲಿತುಕೊಂಡು ಆ ಹಾಡನ್ನು ಹಾಡುತ್ತಿದ್ದೆ. ಈ ರಾಗ ಯಾವುದು ಎಂದು ಆ ಶಾಸ್ತ್ರಿಯನ್ನು ಕೇಳಿದಾಗ ಅವನು ಇದು ಯಮನ ಕಲ್ಯಾಣಿ ಎಂದಿದ್ದ. ನಾನು ಅದೇ ರಾಗವನ್ನು ಸ್ವಲ್ಪ ಆಲಾಪಗಿಲಾಪ ಮಾಡಿ ಹಾಡುತ್ತಿದ್ದೆ. ಹಾನಗಲ್ಲು ಮಠದಾಗಿದ್ದಾಗ ಪಂಚಾಕ್ಷರಿ ಗವಾಯಿಗಳ ತಂಡದವರಿಂದ ಕೇಳಿ ತಿಳಿದ ಭೀಮಪ್ಲಾಸ್.

ಪಟದೀಪ. ಜೇವನ್ಪುರಿ, ಭಾಗೇಶ್ರೀ ಇತ್ಯಾದಿ ರಾಗಗಳ ಪದ್ಯಗಳನ್ನು ಮೆಲುಕು ಹಾಕುತ್ತ ಗುಂಯ್‌ಗುಡುತ್ತಿದ್ದೆ. ಆದರೆ ಯಾವುದನ್ನೂ ಶಾಸ್ತ್ರೀಯವಾಗಿ ಹಾಡಲು ಬರುತ್ತಿರಲಿಲ್ಲ. ನನಗೆ ತಿಳಿದ ಹಾಗೆ ಹೇಗೆ ಹೇಗೋ ಹಾಡುತ್ತಿದ್ದೆ. ಈಗ ಯಮನ ಕಲ್ಯಾಣಿ ರಾಗಾಲಾಪನೆ ಮಾಡಿ ವರದಾಯಕ ರೇಣುಕಾರ್ಯ... ಪದ್ಯವನ್ನೇ ಹಾಡಿದೆ. ಆರೋಹಣ ಅವರೋಹಣದಲ್ಲಿ ಅಷ್ಟೊಂದು ನಿಖರವಾಗಿ ಸ್ವರಗಳು ಹೊಂದದೆ ಸ್ವಲ್ಪ ಆಭಾಸವಾದುದು ನನಗೆ ಮತ್ತು ಬಾಳಪ್ಪನಂಥವರು ಕೆಲವರಿಗೆ ಗೊತ್ತಾದರೂ ಉಳಿದ ಜನ ಜಂಗುಳಿಗೆ ಅದೆಲ್ಲ ಏಕೆ ಬೇಕು. ಹಾಡು ಅಂದರೆ ಹಾಡೇ. ಅವರು ಬೆಣ್ಣೆಯಲ್ಲಿ ಕಲ್ಲನ್ನೇಕೆ ಹುಡುಕಿಯಾರು! ಪಾಪ!! ಚಪ್ಪಾಳೆ ತಟ್ಟಿಬಿಟ್ಟರು. ಜನ ಮರುಳೋ ಜಾತ್ರೆ ಮರುಳೋ ಅನ್ನುವರಲ್ಲಾ ಹಾಗೆ. ಅವರು ಚಪ್ಪಾಳೆಯನ್ನು ಎಲ್ಲದಕ್ಕೂ ತಟ್ಟುವವರೇ. ಅದೊಂದು ಸಾಂಕ್ರಾಮಿಕವಿದ್ದ ಹಾಗೆ. ಚಪ್ಪಾಳೆ ಗಲಾಟೆ ಕಡಿಮೆ ಆದ ಮೇಲೆ ಗುಬ್ಬಿ ಸ್ವಾಮಿಗಳು 'ಇನ್ನೊಂದೇ ಹಾಡು ಹಾಡಿಬಿಡಿ. ಆಮೇಲೆ ಬಾಳಪ್ಪ ಹಾಡ್ತಾನೆ ಹುಂ-ಮಾಸ್ತರೇ ಹಾಡ್ರಿ' ಅಂದುಬಿಟ್ಟರು. ಏತನ್ಮಧ್ಯೆ ಬಾಳಪ್ಪ ಸುಮ್ಮನಿರಬೇಕೋ ಇಲ್ಲವೊ ಹಾಸ್ಯಭರಿತ ಧ್ವನಿಯಲ್ಲಿ 'ಹುಂ ಗವಾಯಿಗಳೇ ಬರ್ರಿ ಮುಂದ್ಕ. ಹಂಗ್ಯಾಕ್ ಓಂದ್ಕ ಸರಿತೀರಿ. ಗಂಟ್ಲಾಗಿಂಟ್ಲಾ ಸರಿಮಾಡ್ಕೆಂಡು ಇನ್ನೊಂದು ಹೇಳ್ರಲ್ಲಾ! ಅಪ್ಪಗುಳು ಅಪ್ಪಣೆ ಮಾಡ್ತಾರ' ಅಂದು ಬಿಟ್ಟ. ಅದರಲ್ಲಿ ಗವಾಯಿಗಳೇ ಎಂದ ಮಾತೇ ಸ್ವಲ್ಪ ವ್ಯಂಗ್ಯವಾಗಿತ್ತೆಂಬುದನ್ನು ಜಾತ್ರೆಯ ಅಸಂಖ್ಯ ಜನ ಗಮನಿಸದಿದ್ದರೂ ಆಲೂರಿನಿಂದ ಬಂದಿದ್ದ ಕೆಲವು ಬತ್ತದ ವ್ಯಾಪಾರಿಗಳು ಗಮನಿಸಿ ನನ್ನನ್ನು ನೋಡಿ ನಕ್ಕಾಡಿದ್ದನ್ನು ಗಮನಿಸಿದೆ. ಅನಂತರ ನನ್ನ ಮಿತ್ರ ವ್ಯಾಪಾರಿಯೊಬ್ಬ "ಹುಕ್ಕೇರಿ ಬಾಳಪ್ಪ ಇಂದು ನಿಮ್ಮ ಹಾಡನ್ನು ಕೇಳಿ ಚೇಷ್ಟೆ ಮಾಡಿ ಬಿಟ್ಟ. ಕಲಾವಂತರೇ ಹೀಗೆ ಇನ್ನೊಬ್ಬ ಕಲಾವಂತರ ಕಲೆಗೆ ಗುರ್ ಗುರಾಯಿಸ್ತೇ ಅಲ್ಲವೆ?" ಎಂದು ಅಂದ. ನನಗೂ ಆ ವ್ಯಂಗ್ಯ ಅರಿವಾಗಿ ಸ್ವಲ್ಪ ತಬ್ಬಿಬ್ಬುಗೊಂಡೆನಾದರೂ ಮೊಂಡತನದಲ್ಲಿ ನಾನೇನೂ ಕಡಿಮೆಯವನಲ್ಲ. ಸ್ವಲ್ಪ ಅಪ್ರತಿಭನಾದರೂ ಧೈರ್ಯ ತಕ್ಕೊಂಡು ಗಂಟಲು ಸರಿಪಡಿಸಿಕೊಂಡು ಯಾವುದನ್ನು ಹಾಡಬೇಕೆಂದು ಯೋಚಿಸತೊಡಗಿದೆ. ಒಂದೂ ನೆನಪಿಗೆ ಸರಿಯಾದ ಹಾಡು ಬರಲಿಲ್ಲ. ನನ್ನ ಒಂದೊಂದು ಹಾಡಿನಲ್ಲಿ ಒಂದೊಂದು ಐಬು ಇದ್ದದ್ದು ನನಗೇ ಗೊತ್ತಿತ್ತು. ಅದೋ ಇದೋ ಎಂದು ಬಹಳ ಹೊತ್ತು ಯೋಚನೆ ಮಾಡುವಂತೆಯೂ ಇರಲಿಲ್ಲ. "ಹುಂ! ಹೊತ್ತಾಗುತ್ತೆ ಬೇಗ ಒಂದು ಆನ್ರೀ ಮಾಸ್ತರ" ಎಂಬ ಗುಬ್ಬಿ ಸ್ವಾಮಿಯ ಅವಸರ ಬೇರೆ ನನ್ನನ್ನು ಕಾಡುತ್ತಿದೆ. ಎಲ್ಲವನ್ನು ಬಿಟ್ಟು ಬಸವರಾಜಮನ್ಸೂರ ಅವರ ಕಂಪನಿಯ ಅಕ್ಷಯಾಂಬರ ನಾಟಕದಲ್ಲಿ ದ್ರೌಪದಿ ಹಾಡುತ್ತಿದ್ದ ಟುಮರಿಯೋ ಏನೋ ಹೇಳುತ್ತಾರಲ್ಲ ಆ ಒಂದು ಪದ್ಯ ಥಟ್ಟನೇ ಜ್ಞಾಪಕ್ಕೆ ಬಂತು "ಸಾನಂದ ಕಾರಿ ಮಾಧವ ತವ ಲೀಲಾ....." ಎಂಬುದೇ ಆ ಪದ್ಯ. ಈ ಪದ್ಯದ ಪೂರ್ಣ ಸಾಹಿತ್ಯ ಬಾಯಿಗೆ ಬರುತ್ತಿರಲಿಲ್ಲ ಆದರೆ ಹಾಡಿನ ಛಾಯೆಯನ್ನೆ ತರಾನಾದಲ್ಲಿ ಹಾಡುತ್ತಿದ್ದೆ. ಪಲ್ಲವಿ ಅನುಪಲ್ಲವಿಗಳನ್ನೇನೋ ಎರಡೆರಡು ಸಲ ಹಾಡಿದೆ. ಉಳಿದುದನ್ನು ಹಾರ್ಮೋನಿಯಂ ಧ್ವನಿಯಲ್ಲಿ ಸಾಹಿತ್ಯವನ್ನು ಕದ್ದು ಹೇಳಿ, ತರಾನಾ ಪ್ರಾರಂಭಿಸಿದ್ದನ್ನು ಬಾಳಪ್ಪ ಗಮನಿಸಿ ಒಳಗೊಳಗೇ ಚೇಷ್ಟೆಯ ನಗು ನಗುತ್ತಿದ್ದುದನ್ನು ಗಮನಿಸಿದೆ. ಸಂಗೀತ ಹಾಡುವಾಗ ಮುಂದಿನವರು ಮೆಚ್ಚುಗೆ ಸೂಚಿಸುವ ಮುಖಭಂಗಿ ಶಾರೀರಿಕ ಚೇಷ್ಟೆಯುಳ್ಳವರಾಗಿದ್ದರೆ, ಹಾಡುವವನ ಉತ್ಸಾಹ ಇಮ್ಮಡಿಸುತ್ತದೆ. ಚೇಷ್ಟೆಯ ಅಸಮ್ಮತಿಸೂಚಕ ಮುಖಭಂಗಿ, ಚೇಷ್ಟೆಯ ನಗೆ ಇವು ಹಾಡುವವರಿಗೆ ಗೊತ್ತಾದರೆ ಉತ್ಸಾಹಕುಂದಿ ಅವನ ಸಂಗೀತ ಕಳೆಗಟ್ಟುವುದೇ

ಇಲ್ಲ. ಇದಕ್ಕಾಗಿಯೇ ಏನೋ ಅನೇಕ ಸಂಗೀತಗಾರರು ಎದುರಿಗಿರುವ ಈ ಭೂತ ಪ್ರಾಣಿಗಳನ್ನು ನೋಡುವುದೇ ಬೇಡವೆಂದೋ ಏನೋ ಕಣ್ಣುಮುಚ್ಚಿಯೋ ಅಥವಾ ಮುಂದೆ ಇರುವವರನ್ನು ನೋಡಿಯೂ ನೋಡದಂತೆ ಮೇಲ್ಮುಖ ಮಾಡಿಯೋ, ಪಾರ್ಶ್ವಗಳ ಕಡೆಗೆ ನೋಡುತ್ತಲೋ ಸಂಗೀತ ಕಛೇರಿಯನ್ನು ಮುಗಿಸುವುದುಂಟು. ಇನ್ನು ಕೆಲವರು ಕುಳಿತವರ ಅಂಗಚೇಷ್ಟೆಗಿಂತ ಹತ್ತು ಪಟ್ಟು ತಮ್ಮ ಅಂಗಚೇಷ್ಟೆಯನ್ನು ಮಾಡಿ ಅವರನ್ನು ನಾಚಿಸಿ ಬಿಡುವರೋ ಏನೋ. ಈ ವಿದ್ಯೆಯಲ್ಲಿ ಹುಕ್ಕೇರಿ ಬಾಳಪ್ಪ ಎತ್ತಿದ ಕೈ. ಅಂತೂ ನನ್ನ ಸಂಗೀತ ಹೇಳುವ ಚಟ ತೀರಿತು. ಬಹುಜನರ ಮಧ್ಯದಲ್ಲಿ ಸ್ವಲ್ಪ ಹೊತ್ತು ತಪ್ಪೋ ಒಪ್ಪೋ ಹಾಡುವಷ್ಟಾದರೂ ಶಕ್ತಿಯಿದೆಯಲ್ಲಾ! ಎಂಬ ಮೊಂಡುಧೈರ್ಯ ಮಾತ್ರ ಚಿಗಿತೇ ಹೋಯಿತು. ನನ್ನದು ಮೊಂಡುಧೈರ್ಯವೇ. ಸಂಗೀತದ ಎಲ್ಲ ಲಕ್ಷಣವನ್ನು ಲಕ್ಷ್ಯದಲ್ಲಿಟ್ಟುಕೊಂಡ ಮೇಲೆಯೇ ಹಾಡಬೇಕೇನು? ಹಾಡುತ್ತ ಹಾಡುತ್ತ ಹೋದಂತೆ ಹಾಡಿಗೆ ಶಾಸ್ತ್ರೀಯತೆ ಏಕೆ ಬರಬಾರದು? ಉಪಾಧ್ಯಾಯತ್ವವೆಂಬುದು ಅಳವಟ್ಟ ಮೇಲೆಯೇ ಉಪಾಧ್ಯಾಯನಾಗಬೇಕೇನು? ಉಪಾಧ್ಯಾಯ ವೃತ್ತಿಯನ್ನು ಮಾಡುತ್ತ ಮಾಡುತ್ತ ಹೋದಂತೆ ಉಪಾಧ್ಯಾಯತ್ವ ಅಳವಟ್ಟೇ ಅಳವಡುವುದಲ್ಲವೆ? ಈ ತರ್ಕ ನನ್ನದು. ಬಹಳ ಹೇಳುವುದೇನು? ಅಂದಿನ ನಾಟ್ಯ ಸಂಗೀತ ನನಗೆ ಹುಚ್ಚು ಹಿಡಿಸಿತ್ತು ಆ ಹುಚ್ಚಿನ ಬೆನ್ನು ಹತ್ತಿಯೇ ನಾನು ಅಷ್ಟು ಇಷ್ಟು ಹಾಡಿ ಆತ್ಮಸಂತೋಷ ಪಡುತ್ತಿದ್ದುದಂತೂ ಸತ್ಯ. ಹಳೆಕಾಲದ ನಾಟ್ಯ ಸಂಗೀತ ಕೇಳುವ ಹುಚ್ಚು ಇಂದೂ ನನ್ನಲ್ಲಿ ಮಾಯವಾಗಿಲ್ಲ. ಬೊಂಬಾಯಿ, ಪುಣೆ, ನಾಗಪುರ, ಸಾಂಗ್ಲಿ ಆಕಾಶವಾಣಿಯಿಂದ ಬಿತ್ತರಗೊಳ್ಳುವ ನಾಟ್ಯಗೀತೆಗಳನ್ನು ಇಂದೂ ಕೇಳುತ್ತೇನೆ. ಬೆಂಗಳೂರು ಆಕಾಶವಾಣಿಯ ನಾಟ್ಯ ಗೀತಗಳನ್ನು ಕೇಳುತ್ತಿದ್ದೇನೆ. ನಾಟ್ಯ ಗೀತೆಗಳನ್ನೂ ಮರಾಠಿಯವರು ಸಂಗ್ರಹಿಸಿದ ಹಾಗೆ ಕನ್ನಡಿಗರು ಸಂಗ್ರಹಿಸಲಿಲ್ಲ. ಆದ್ದರಿಂದ ಒಳ್ಳೊಳ್ಳೆ ಚೀಜುಗಳು ಈಗ ಮಾಯವಾಗಿ ಹೋದವು. ಹಿಂದೆ ನಾನು ಹುಬ್ಬಳ್ಳಿಯ ಕಲಬುರ್ಗಿ ಮಠದಲ್ಲಿ ಒಂದು ಮಂಗಳ ಪದ್ಯವನ್ನು ಹಾಡಿದ್ದನ್ನು ಕೇಳಿ ಹಾವೇರಿ ಹುಕ್ಕೇರಿ ಮಠದ ಶಿವಬಸವ ಸ್ವಾಮಿಗಳು "ಏ ಚನ್ನಾ, ನಿನಗೆ ಗಂಧರ್ವನ ಅಂಶ ಇದೆ. ನೀನು ಚಲೋ ಹಾಡ್ತೀಯೆ. ನಿನ್ನನ್ನು ಪಂಚಾಕ್ಷರಿ ಗವಾಯಿ ಹತ್ತಿರ ಸಂಗೀತ ಕಲಿಯಲು ಸೇರ್ಸಿಬಿಡುತ್ತೇನೆ. ಗವಾಯಿ ಆಗಿ ಬಿಡು" ಎಂದಿದ್ದರು. ಅಂದು ಸೇರಿಬಿಟ್ಟಿದ್ದರೆ ಈ ಹೊತ್ತಿಗಾಗಲೆ ಅರ್ಧಮರ್ಧ ಗವಾಯಿ ಆಗಿಬಿಡುತ್ತಿದ್ದೆನೋ ಏನೋ ಎಂಬ ಭಾವ ಮನಸ್ಸಿನ ಮುಂದೆ ಧೀಂಕಿಟ್ಟಿತು. ಅದೇ ಮನಸ್ಸೇ ಅಯ್ಯೋ! ಆಗ ನೀನು ಅದಕ್ಕೆ ಮನಸ್ಸು ಮಾಡಿದಿದ್ದುದೇ ಒಳ್ಳೆಯದಾಯಿತು. ಸಂಗೀತಾಭ್ಯಾಸ ಮಾಡಿ ಸೈ. ಎನ್ನಿಸಿಕೊಳ್ಳುವುದು ಒಂದು ಬಗೆಯ ಹೆಡ್ಡದ ಆಟ ಆಡಿದಂತೆ. ಶಾರೀರ ಸೌಷ್ಠವವೊದಗಿ, ಕ್ರಮಬದ್ಧವಾದ ಶಾಸ್ತ್ರಿಯತೆಯಳವಟ್ಟು ಸಂಗೀತದಲ್ಲಿ ತಂದೆತಾಯಿಯರಂತಿರುವ ಶ್ರುತಿ-ಲಯಗಳು ಕೈಗೂಡಿಬಂದರೇನೋ ಸೈ. ಶಾರೀರ ಶುದ್ಧಿ ಇಲ್ಲದೆ ಶಾಸ್ತ್ರದಲ್ಲಿ ಬಲ್ಲಿದನಾದರೇನು ಬಂತು? ಅವರ ಒಣ ಶಾಸ್ತ್ರ ಯಾರು ಕೇಳುತ್ತಾರೆ? ಅವರೆಲ್ಲ ಜೀವನದುದ್ದಕ್ಕೂ ಕಂಡ ಕಂಡವರ ಮನೆಹೊಚ್ಚಲು 'ಮೆಟ್ಟಿ ಸಾನಿಧಾ ತಮಪಗಮಪ.......' ಎಂದು ಕಿರಿಚಿಕೊಳ್ಳುತ್ತ ಸಂಗೀತ ಪಾಠ ಇಟ್ಟುಕೊಂಡು ಜೀವನ ನಿರ್ವಹಣೆ ಮಾಡಬೇಕು ಅಷ್ಟೆ. ಪಂಚಾಕ್ಷರಿ ಗವಾಯಿಗಳಲ್ಲಿ ಸಾವಿರಾರು ಜನ ಸಂಗೀತಾಭ್ಯಾಸ ಮಾಡಿದರು. ಅದರಲ್ಲಿ ನಾಲ್ಕಾರು ಜನ ಮಾತ್ರ ಉತ್ತಮ ಶಾರೀರ ಸಂಪತ್ತು ಗಳಿಸಿ ಹಾಡಿ ಜನಮನ ಗೆದ್ದು ಹೆಸರು ವಾಸಿಯಾಗಿ ಅಷ್ಟು ಇಷ್ಟು ಸಂಪಾದಿಸಿಕೊಂಡು ಜೀವನಮಾರ್ಗ ಕಲ್ಪಿಸಿಕೊಂಡು ಸುಖಪಟ್ಟಿರಬಹುದು. ಉಳಿದವರದೆಲ್ಲ

ತರಲೆ ಬಾಳ್ವೆಯೇ ಅಲ್ಲವೆ? ಯಾರು ಅವರ ಸಂಗೀತ ಕೇಳುತ್ತಾರೆ? ಅದಕ್ಕಾಗಿ ಹತ್ತು ಹನ್ನೆರಡು ವರ್ಷ ಮನೆ ಮಠಬಿಟ್ಟು ಅಭ್ಯಾಸ ಮಾಡಿ ಕೊನೆಗೆ ಕಿಸುಬಾಯಿ ದಾಸ ಅಂತ ಅನ್ನಿಸಿಕೊಳ್ಳುದಿದ್ದುವೇ ಒಳ್ಳೆಯದಾಯಿತು. ಒಂದು ವೇಳೆ ಅಷ್ಟು ಇಷ್ಟು ಕಲಿತಿದ್ದರೆ ನಾಟಕ ಕಂಪನಿಗೆ ಸೇರಿ ಬಣ್ಣ ಬಳಿದುಕೊಂಡು ರಾತ್ರಿಯೆಲ್ಲ ಸ್ಟೇಜಿನಲ್ಲಿ ಕುಣಿದಾಡಿ, ಕಂಪನಿಯ ಮೋತಿಖಾನೆಯಲ್ಲಿ ಮಾಡಿದ್ದ ಅನ್ನವುಂಡು. ಹಗಲೆಲ್ಲ ನಿದ್ದೆಮಾಡಿ ಕಲಿಯಬಾರದ ಚಟಗಳನ್ನು ಕಲಿತು ಕಂಪನಿಯಿಂದ ಕಂಪನಿಗೆ ಜಿಗಿಯುವ ಹನುಮಂತನಾಗಿ ಹೋಗಬೇಕಾಗಿತ್ತು. ಎಲ್ಲರಿಗೂ ಈ ಮನೋಧರ್ಮ ಒಗ್ಗುವುದಿಲ್ಲ. ಕಲಿತರೆ ಬರುವುದೂ ಇಲ್ಲ. ನಾಟಕ ಕಂಪನಿ ಮನುಷ್ಯ ಎಂದರೆ ಎಲ್ಲರೂ ಮೂಗು ಮುರಿದರೂ ನಾಟಕ ನೋಡುವುದಕ್ಕೆ ಕಿಕ್ಕಿರಿದು ಜನ ಸೇರುತ್ತಿದ್ದಾರೆ ಏಕೆ? ನಾಟಕ ಕಂಪನಿ ಒಂದು ಊರಿಗೆ ಬಂದರೆ 'ನಾಟಕ ಕಂಪನಿ ಬಂತು' ಎಂಬ ಉತ್ಸಾಹ ಎಲ್ಲರಲ್ಲೂ ಮೊಳೆಯುತ್ತದೆ. ಆದರೆ ಆ ಕಂಪನಿಯವರಿಗೆ ಬಾಡಿಗೆ ಮನೆಯನ್ನು ಕೂಡ ಕೊಡಲು ಯಾರೂ ಮುಂದೆ ಬರುವುದಿಲ್ಲ. ನೋಡುವುದಕ್ಕೆ ನಾಟಕ ಕಂಪನಿ ಬೇಕೇ ಬೇಕು. ಕಂಪನಿಯ ಜನಗಳನ್ನು ಹತ್ತಿರ ಸೇರಿಸುವುದು ಮಾತ್ರ ಬೇಡ. ಇದೇ ಸ್ವಾರಸ್ಯವಾದ ವಿಚಾರ. ನಾಟಕದಲ್ಲಿ ವಾಸ್ತವತೆ ಇದ್ದಂತೆ ಅವರ ನಿಜ ಜೀವನದಲ್ಲಿ ವಾಸ್ತವತೆ ಇರುವುದಿಲ್ಲ ಎಂಬ ಹೆದರಿಕೆಯೇ ಜನಕ್ಕೆ ಕಾರಣವಿರಬೇಕು. ಆದರೆ ಇದು ಎಷ್ಟು ಸತ್ಯವೋ ಎಷ್ಟು ಸುಳ್ಳೋ ದೇವರೇ ಬಲ್ಲ. ಕೆಲವರು ಹಾಗಿರಬಹುದು. ಅಂಥವರನ್ನು ನೋಡಿ ಎಲ್ಲರೂ ಹಾಗೇ ಅನ್ನಲಾದೀತೇ? ಅದೇನೇ ಇರಲಿ, ನಾಟ್ಯಶಾಸ್ತ್ರ, ಭರತಮುನಿಯಿಂದ ಹುಟ್ಟಿದ ಕಾಲದಿಂದಲೂ ಸಾಧಾರಣವಾಗಿ ಇತರ ಶೀಲದ ಬಗ್ಗೆ ಎಲ್ಲರಿಗೂ ಶಂಕೆಯೇ ಇದ್ದ ಹಾಗೆ ಕಂಡು ಬರುತ್ತಿದೆ. ಇವರಿಗೆ ಶೈಲೂಷರೆಂದೇ ಕರೆದಿದ್ದಾರೆ. ಈ ಕಾರಣವಾಗಿ ನಾಟಕ ಜನಪ್ರಿಯಗೊಂಡಂತೆ ನಾಟಕದ ಜನ ಸಾಮಾಜಿಕರಿಗೆ ಪ್ರಿಯರಾಗಿರಲಿಲ್ಲ. ನಮ್ಮಂಥವರಿಗೆ ನಾಟಕ ನೋಡುವುದಕ್ಕೆ ವಿನಾ ಆಡುವುದಕ್ಕಲ್ಲ. ನಾಟಕದವರ ಸ್ನೇಹ ಮಾಡಬಹುದು ಆದರೆ ಅವರನ್ನು ಮನೆಗೆ ಕರೆತರಬಾರದು! ಎಂಬ ಗಾದೆಯುಂಟು. ನಾಟಕ ಆಡುವುದಕ್ಕೂ ಅದರಲ್ಲಿ ಪಾತ್ರಧಾರಿಯಾಗುವುದಕ್ಕೂ ಕೆಲವು ವಿಶೇಷ ಅರ್ಹತೆಗಳಿರಬೇಕು. ಆ ಅರ್ಹತೆ ಕಂಡ ಕಂಡವರಿಗೆಲ್ಲ ಬಾ ಎಂದರೆ ಬರುವುದಿಲ್ಲ. ಆ ಜೀವನ ನಿನ್ನ ಜಾಯಮಾನಕ್ಕೆ ಒಗ್ಗಿ ಬರುವಂತಹುದಲ್ಲವೆಂದು ನನ್ನ ಮನಸ್ಸೇ ನನಗೆ ಬುದ್ಧಿ ಹೇಳಿತು. ಹೊಂಕಣ ಜಾತ್ರೆ ಮುಗಿಸಿಕೊಂಡು ಹಿರೇಕಾಂಶಿಗೆ ಬಂದೆ.

ನಾಟಕದ ಜೀವನದ ಬಗ್ಗೆ ನನಗೆ ತಿರಸ್ಕಾರವಿದ್ದರೂ ನಾಟಕದ ಬಗ್ಗೆ ತಿರಸ್ಕಾರವಿರಲಿಲ್ಲ. ಹಿಂದಿನ ಪುಟಗಳಲ್ಲಿ ನನ್ನ ನಾಟಕದ ಗೀಳಿನ ಬಗೆಗೆ ಬೇಕಾದಷ್ಟು ಹೇಳಿದ್ದೇನೆ. ಆಲೂರು ಹಾನಗಲ್ಲುಗಳಿಗೆ ಬಸವರಾಜ ಮನ್ಸೂರರ ಕಂಪನಿ ಬಂದರೆ ಮನಸ್ಸು ನೋಡಲು ಅತ್ಯಂತ ತವಕಗೊಳ್ಳುತ್ತಿತ್ತು. ಆ ನಾಟಕದಲ್ಲಿ ವಿಷಯವೇನೇ ಇರಲಿ, ಅದೆಲ್ಲ ಬೇಕಾಗಿರಲಿಲ್ಲ. ಅಕ್ಷಯಾಂಬರದಲ್ಲಿ ದ್ರೌಪದಿಯಾಗಿ, ಕಡ್ಲಿಮಟ್ಟಿ ಸ್ಟೇಷನ್‌ಮಾಸ್ತರಲ್ಲಿ ಕಾಸಿಬಾಯಿಯಾಗಿ, ಉಷಾ ಸ್ವಯಂವರದಲ್ಲಿ ಉಷೆಯಾಗಿ ಪಾತ್ರ ನಿರ್ವಹಿಸುತ್ತಿದ್ದ ಸುಶೀಲಾ ಎಂಬ ಬಸರೂರು ಕುಂದಾಪುರ ಕಡೆಯ ಹೆಣ್ಣುಮಗಳ ಸಂಗೀತ ಮತ್ತು ಅಭಿನಯ ವೈಶಿಷ್ಟ್ಯವಷ್ಟೇ ನನಗೆ ಬೇಕಾದದ್ದು. ಆ ಸಂಗೀತದ ಮಾಧುರ್ಯ, ಲಯ, ಭಾವದ ತೀವ್ರತೆ ಈ ಮೊದಲು ನಾನು ನೋಡಿದ ನೂರಾರು ನಾಟಕಗಳಲ್ಲಿ ಯಾವ ಸ್ತ್ರೀ ಪುರುಷ ಪಾತ್ರಧಾರಿಗಳ ಬಾಯಿಂದಲೂ ಕೇಳಿದ್ದಿಲ್ಲ. ನನ್ನ ಪಾಲಿಗಂತೂ ಅವಳ ಸಂಗೀತ ಹುಚ್ಚು ಹಿಡಿಸಿಬಿಟ್ಟಿತ್ತು. ಅದೊಂದನ್ನು ಕೇಳಲು ನಾನು ಎಷ್ಟು ದೂರವಾದರೂ

ಪ್ರಯಾಣಿಸಲು ಸಿದ್ಧನಾಗಿದ್ದೆ. ಒಮ್ಮೆ ಆಲೂರಿಗೆ, ಮತ್ತೊಮ್ಮೆ ಹಾನಗಲ್ಲಿಗೆ 14-15 ಮೈಲುಗಳಷ್ಟು ದೂರ ರಾತ್ರಿ ಸೈಕಲ್ ಮೇಲೆ ಹೋಗಿ ಪ್ರಾಣಾಪಾಯಕ್ಕೂ ಗುರಿಯಾದ ನೆನಪನ್ನು ಮಾತ್ರ ನಿಮಗೆ ಈಗ ಹೇಳಬಯಸುತ್ತೇನೆ. ಉಳಿದ ವಿಚಾರ ಅಲ್ಲಲ್ಲಿ ಬಂದಿರುವುದರಿಂದ ಆ ಬಗ್ಗೆ ಹೆಚ್ಚಿಗೆ ಹೇಳಲಾರೆ. ನೂರಾರು ನಾಟಕ ನೋಡಲು ಅತ್ತ ಇತ್ತ ರಾತ್ರಿ ಬಹಳಷ್ಟು ಸುತ್ತಾಡಿದರೂ ನಾಲ್ವತ್ತೈದು - ನಾಲ್ವತ್ತಾರು ವರ್ಷ ಕಳೆದರೂ ಈ ಎರಡು ನೆನಪುಗಳನ್ನು ನೆನೆಸಿಕೊಂಡರೆ ಮಾತ್ರ ಈಗಲೂ ಮೈ ಮುಳ್ಳು ಹಿಡಿದಂತಾಗುತ್ತದೆ.

**ಆಲೂರು ನಾಟಕ ನೋಡಲು ಹೋದದ್ದು**

ಬಸವರಾಜ ಮನ್ಸೂರರ ಕಂಪನಿ ಆಲೂರಿನಲ್ಲಿ ಒಂದು ವಾರದಿಂದ ನಾಟಕವಾಡ ತೊಡಗಿದ್ದರೂ ಅನಾನುಕೂಲ ನಿಮಿತ್ತ ಹೋಗಲಾಗಲೇ ಇಲ್ಲ. ನಮ್ಮ ಹೊಸೂರು ವಿರೂಪಾಕ್ಷಪ್ಪನನ್ನು ಹುರಿದುಂಬಿಸಿ ಅಕ್ಷಯಾಂಬರ ನಾಟಕ ನೋಡಲು ಎರಡು ಸೈಕಲ್ ಮೇಲೆ ಹೊರಟೆವು. ರಾತ್ರಿಯಾದ್ದರಿಂದ ಒಳದಾರಿಯಲ್ಲಿ ಹೋಗುವಂತಿರಲಿಲ್ಲ. ಅಂದು ಸೋಮವಾರವಾದ್ದರಿಂದ ಸಂತೆಯಲ್ಲಿ ಎಣ್ಣೆ ಅಂಗಡಿ ಹೂಡುತ್ತಿದ್ದ ವಿರೂಪಾಕ್ಷಪ್ಪ ಸಂತೆ ಮುಗಿಸಿ ಮೈಗೆ ಮೆತ್ತಿದ ಎಣ್ಣೆ ಜಿಡ್ಡನ್ನು ತೊಳೆದುಕೊಂಡು ಊಟಮಾಡಿ ಹೊರಡುವುದಕ್ಕೆ ಎಂಟು ಘಂಟೆಯೇ ಆಯಿತು. ರಸ್ತೆಯ ಮೇಲೆ ಹೋದರೆ 16-17 ಮೈಲು ದೂರವಾಗುತ್ತಿತ್ತು. ಆಲೂರು ತಲುಪಲು ಸುಮಾರು ಎರಡು ತಾಸಾದರೂ ಬೇಕಾಗುತ್ತಿತ್ತು. ಅತ್ಯಂತ ಪರಿಚಯದ ಮಾರ್ಗವಾದ್ದರಿಂದ ಎಲ್ಲೆಲ್ಲಿ ತಗ್ಗುಉಬ್ಬುಗಳಿವೆ ಎಂಬುದರ ಅರಿವಿತ್ತು, ಹೊರಟೆವು. ಮಕರವಳ್ಳಿ ಕತ್ತರಿವರೆಗೆ ಐದು ಮೈಲು ರಸ್ತೆ ಓಬಿರಾಯನ ಕಾಲದಲ್ಲಿ ಕಲ್ಲು ಜಲ್ಲಿ ಹಾಕಿದ್ದು. ಅಲ್ಲಿ ಮೋಟಾರುಗಳೂ ಆಗ ಓಡಾಡುತ್ತಿರಲಿಲ್ಲವಾಗಿ ಕುಮಟಾ ಸಾರಿಗೆಯವರ ತೆರಪಿಲ್ಲದ ಚಕ್ಕಡಿಗಳ ಓಡಾಟದಿಂದ ದಾರಿ ಕುಲಗೆಟ್ಟು ಹೋಗಿತ್ತು. ಆ ಕಾಡುದಾರಿಯಲ್ಲಿ ಬಿದ್ದೆದ್ದು ನಮ್ಮ ಸೈಕಲ್ ಪ್ರವಾಸ ಪಾರಾಗಿ ಹೋಗಲು ಬಹಳಷ್ಟು ಕಾಲ ಕಳೆಯಿತು. ಉಳಿದ ಹನ್ನೆರಡು ಮೈಲು ದಾರಿ ಸ್ವಲ್ಪ ಗುದ್ದು ಗೊಟಾರಗಳು ಕಡಿಮೆಯಾದ್ದರಿಂದ ಅಲ್ಲಿ ನಮ್ಮ ವೇಗವನ್ನು ಹೆಚ್ಚಿಸಿಕೊಂಡು ಹತ್ತು ಘಂಟೆಯ ಸಮಯಕ್ಕಾದರೂ ಆಲೂರು ತಲುಪಿದರೆ ಮುಂದಿನ ಸಾಲಿನ ಖುರ್ಚಿಯಲ್ಲಿಯೇ ಕುಳಿತು ನೋಡಬಹುದೆಂಬ ನಮ್ಮ ಎಣಿಕೆಗೆ ಅನುಗುಣವಾಗಿ ಮಕರವಳ್ಳಿ ಕತ್ತರಿಯಿಂದ ಸೈಕಲ್ ತುಳಿತವನ್ನು ವೇಗಗೊಳಿಸಿ ಬಿಟ್ಟೆವು. ನಮ್ಮ ಸೈಕಲ್ಲುಗಳು ದೀಪವುಳ್ಳವುಗಳಲ್ಲ. ಮೇಲಾಗಿ ಕೈಯಲ್ಲಿ ಬ್ಯಾಟರಿ ಮೊದಲಾದ ಸಾಧನಗಳನ್ನು ಇಟ್ಟುಕೊಂಡವರಲ್ಲ. ನಮ್ಮ ಸೈಕಲ್ ಸವಾರಿ ನಮಗಿಂತಲೂ ಒರಟುತನದ್ದಾಗಿತ್ತು. ಬೀಳುವುದಕ್ಕೂ ಲೆಕ್ಕವಿಲ್ಲ, ಏಳುವುದಕ್ಕೂ ಲೆಕ್ಕವಿಲ್ಲ, ಅಂಥಾದ್ದು. ಆರು ಮೈಲು ದೂರದ ಮಾಕೊಪ್ಪಕ್ಕೆ ಬರುವಷ್ಟರಲ್ಲಿ ಬೆವರು ಕಿತ್ತು ನೀರು ಹರಿಯಲಾರಂಭಿಸಿತು. ಮಾಕೊಪ್ಪದ ಕೆರೆ ಏರಿ ದಾಟಿ ಸ್ವಲ್ಪ ದಿಬ್ಬದಿಂದ ಕೂಡಿದ ದಾರಿಯನ್ನು ಏರುತ್ತ ಏರುವಾಗ ದಾರಿಯ ಮಧ್ಯದಲ್ಲಿ ಸಣ್ಣ ಎರಡು ಮಿನಿಮಿನಿದೀಪಗಳಂತೆ ಕಾಣುವ ಹುಲಿಯದೋ, ಚಿರ್ಚನದೋ ಗೊತ್ತಿಲ್ಲ. ಎರಡು ಕಣ್ಣು ಅಲ್ಲಾಡದೆ ನಿಂತುದು ಕಾಣಿಸಿತು. ಮಲೆನಾಡಿನಲ್ಲೆ ಬೆಳೆದಿದ್ದ ವಿರೂಪಾಕ್ಷಪ್ಪನಿಗೆ ಇದರ ರಹಸ್ಯವೆಲ್ಲ ಗೊತ್ತು. ನನ್ನನ್ನು ಕೂಗಿ, "ಮಾಸ್ತರೇ, ಸೈಕಲ್ ಇಳಿರಿ, ಮುಂದೆ ಹೋಗಬೇಡಿ" ಎಂದು ಸ್ವಲ್ಪ ಮುಂದೆ ಇದ್ದ ನನಗೆ ಕೂಗಿ ಹೇಳಿದ. ಆವನ ಕೂಗಿನಲ್ಲಿ ಭಯಗೊಂಡವನ ಧ್ವನಿಯ ಛಾಯೆಯಿತ್ತು. ನಾನು ಗಪ್ಪನೆ ಸೈಕಲ್ ಇಳಿದೆ. "ಈ ಮಾಕೊಪ್ಪದ ಕಾಡಿನಲ್ಲಿ ಒಂದು ಭಾರಿ ಹುಲಿ ಇದ್ದು, ಅದು ಆಗಾಗ ಈ

ರಸ್ತೆಯಲ್ಲಿ ಕಾಣಿಸಿಕೊಂಡದ್ದನ್ನು ಅನೇಕರು ಹೇಳುವುದನ್ನು ಕೇಳಿದ್ದೇನೆ. ನಾವು ಈಗ ಮುಂದೆ ಹೋದರೆ ಅಪಾಯಕ್ಕೆ ಸಿಗಬಹುದು. ಸ್ವಲ್ಪ ಹೊತ್ತು ಇಲ್ಲಿಯೇ ನಿಲ್ಲೋಣ. ಎಲ್ಲಿ ನಿಮ್ಹತ್ತಿ ಬೆಂಕಿಪೊಟ್ಟಣ ಇದ್ದರೆ ಕೊಡಿ" ಎಂದ. ಸದಾ ಬೆಂಕಿಪೊಟ್ಟಣವನ್ನು ಜೇಬಿನಲ್ಲಿ ನನ್ನ ತಲಬಿಗೋಸುಗ ಇಟ್ಟುಕೊಂಡಿರುತ್ತಿದ್ದ ನಾನು ಬೆಂಕಿ ಪೊಟ್ಟಣ ಕೊಟ್ಟೆ. ಅವನು ಅಕ್ಕಪಕ್ಕದಲ್ಲಿ ಬೆಳೆದಿದ್ದ ಹುಲ್ಲು ಕಸಕಡ್ಡಿ, ತರಗೆಲೆಗಳನ್ನು ಬಳಿದು ಗುಡ್ಡೆ ಹಾಕಿ ಅದಕ್ಕೆ ಬೆಂಕಿಹಚ್ಚಿ ಒಂದೆರಡು ಕಾಕು ಹಾಕಿಬಿಟ್ಟ. ಬೆಂಕಿಯನ್ನು ನೋಡಿದಾ, ಕಾಕು ಹಾಕಿದ್ದನ್ನು ಕೇಳಿದ ಹುಲಿ ಒಮ್ಮೆಗಡಲ್ ಎಂದು ಗುಡುಗು ಹಾಕಿದ್ದು ಕಿವಿಗೆ ಸ್ಪಷ್ಟವಾಗಿ ಕೇಳಿಸಿತು. ಅನಂತರ ಅದರ ಹೊಳೆಯುವ ಕಣ್ಣು ಕಾಣಲಿಲ್ಲ. ವಿರೂಪಾಕ್ಷಪ್ಪ ಮಾಸ್ತರ, 'ಅದು ಹುಲಿಯೇ! ಕೇಳಿದಿರೋ ಗರ್ಜನೆಯನ್ನು. ಇನ್ನು ಭಯವಿಲ್ಲ. ಅದು ಓಡಿತು. ಹತ್ರಿ ಸೈಕಲ್ನ" ಅಂದ. ನನಗೆ ಭಯ ಬಂದು ಕಾಲು ನಡುಗತೊಡಗಿದ್ದವು. "ಹೇಗೆ ಆ ಸ್ಥಳ ದಾಟುವುದು?" ಎಂದೆ. "ಹೆದರಬೇಡಿ ದೂರದಿಂದ ಬೆಂಕಿಯನ್ನು ಕಂಡರೆ ಸಾಮಾನ್ಯವಾಗಿ ಕಾಡುಪ್ರಾಣಿಗಳು ಹೆದರಿ ಓಡುತ್ತವೆ. ನಾನು ಮುಂದಿರುತ್ತೇನೆ. ನೀವು ನನ್ನ ಹಿಂದೆಯೇ ಬನ್ನಿ" ಎಂದು ಸೈಕಲ್ ಹತ್ತಿ ಗಂಟೆ ಬಾರಿಸುತ್ತ, ನನಗೂ ಗಂಟೆ ಬಾರಿಸಲು ಹೇಳಿ ಹೊರಟ. ನಾನು ಅವನ ಹಿಂದೆ ಹಿಂದೇ ನಡೆದಿದ್ದೆ. ಹುಲಿ ಇರಬಹುದಾದ ಸ್ಥಳದ ಹತ್ತಿರ ಹತ್ತಿರಕ್ಕೆ ಹೋದಂತೆ ಅಧೈರ್ಯಗೊಂಡಿದ್ದ ನಾನು ಆ ಸ್ಥಳ ದಾಟಿದೆನೆಂಬ ನಂಬುಗೆ ಬಂದ ಮೇಲೆ ಪುನಃ ಮುಂದಾದೆ. ಮುಂದಾಗಲು ಕಾರಣ ನನಗೆ ಇದ್ದ ಅರಣ್ಯಭಯವೇ, ಮತ್ತೇನೂ ಅಲ್ಲ. ಹಿಂದೆ ವಿರೂಪಾಕ್ಷಪ್ಪ ಇರುವುದು ನನಗೆ ಹತ್ತು ಜನರ ಬೆಂಬಲ ಹಿಂದೆ ಇದೆ ಅನ್ನುವ ಆತ್ಮವಿಶ್ವಾಸ ಮೂಡಿಸುತ್ತಿತ್ತು. ಮಾಕೊಪ್ಪದ ಏರಿ ಹತ್ತಿ ಬಲಗಡೆ ಆಲೂರು ಕಡೆಗಿರುವ ಸುಮಾರು ಒಂದು ಮೈಲು ಉದ್ದದ ಇಳುಕಲಿನಲ್ಲಿ ಸೈಕಲ್ಲನ್ನು ಚೆನ್ನಾಗಿ ತುಳಿದು ಕೈಬಿಟ್ಟೆ. ಸೊಂಯ್ ಎಂದು ಇಳುಕಲಿನಲ್ಲಿ ಗಾಡಿ ಹೋಗುತ್ತಿತ್ತು. ಆಚೆ ಈಚೆ ಗಗನಚುಂಬಿಗಳಾದ ಮರಗಳು. ಕೆಲವು ಗಿಡಗಳಲ್ಲಿ ಮಿಂಚು ಹುಳುಗಳು ಕ್ಷಣಕ್ಷಣಕ್ಕೂ ಮಿಂಚಿ ಮಿಂಚಿ ಮಾಯವಾಗುತ್ತಿದ್ದುದು ಕೋಟಿ ಕೋಟಿ ಮಿಣುಕು ದೀಪಗಳನ್ನು ಆಕಾಶಮಂಡಲ ಭೂಮಿಗೆ ಆಗಾಗ ಸುರಿಯುತ್ತಿರುವಂತೆ ಭಾಸವಾಗುತ್ತಿತ್ತು. ಆಗೊಮ್ಮೆ ಈಗೊಮ್ಮೆ ಕಾಡುಪ್ರಾಣಿಗಳ ವಿಚಿತ್ರವಾದ ಅಸ್ಪಷ್ಟ ಕೂಗು ಕೇಳಿ ಬರುತ್ತಿತ್ತು. ಅದು ಯಾವ ಪ್ರಾಣಿಯದೆಂಬುದರ ತಳಬುಡ ನನಗೆ ಗೊತ್ತಾಗುತ್ತಿರಲಿಲ್ಲ. ಮೊಂಡುಧೈರ್ಯದಿಂದ ಬೇಗ ಆಲೂರು ತಲುಪುವ ಕಾತರದಿಂದ ನನ್ನ ಸೈಕಲ್ ಬರ್ರೋ ಎಂದು ಓಡುತ್ತಿತ್ತು. ವಿರೂಪಾಕ್ಷಪ್ಪ ಸುಮಾರು ಕಾಲುಫರ್ಲಾಂಗಿನಷ್ಟು ದೂರ ಇದ್ದಿರಬಹುದು.

ಶಿರ್ಶಿಯ ಕಡೆಗೆ ಆಲೂರಿನಿಂದ ಹೊರಡುವ ಸಾರಿಗೆ ಗಾಡಿಗಳು ನಮ್ಮೆದುರಿಗೆ ಬರುತ್ತಿದ್ದುದು ನನ್ನ ಗಮನಕ್ಕೇ ಬರಲೇ ಇಲ್ಲ. ಕರ್ಮಧರ್ಮ ಸಂಯೋಗವೋ, ನಾನು ಇನ್ನು ಕೆಲವು ಕಾಲ ಭೂಮಿಯ ಮೇಲೆ ಇರಬೇಕೆಂಬ ಈಶ್ವರನ ಆಜ್ಞೆಯೇ ಕಾಣೆ ನನ್ನ ಸೈಕಲ್ ಗಾಡಿಯ ಪಕ್ಕಕ್ಕೆ ಹರಿದು ಎರಡು ಗಾಡಿಗಳನ್ನು ದಾಟಿ ಬಿಟ್ಟಿತು. ಅದೂ ಕೂಡ ಒಂದು ಸಣ್ಣ ನೂಲಿನ ಮೇಲೆ ನನ್ನ ಸೈಕಲ್ ಗಾಡಿಯ ನೊಗಕ್ಕೇ ಬಡಿದರಾಗಲಿ, ಎತ್ತಿಗೇ ಬಡಿದರಾಗಲಿ, ಅಥವಾ ಪೂಲಿನ ಕಟ್ಟೆಗೇ ಬಡಿದರಾಗಲಿ ಜೀವ ಉಳಿಯಲು ಸಾಧ್ಯವೇ ಇರಲಿಲ್ಲ. ಏಕೆಂದರೆ ಆ ಪೂಲಿನ ಕೆಳಗೆ ಸುಮಾರು ಇಪ್ಪತ್ತು ಇಪ್ಪತ್ತೈದು ಅಡಿಗಳ ಪ್ರಪಾತ. ಪ್ರಪಾತದ ಕೆಳಗೆ ಬಂಡೆಗಲ್ಲು. ಒಂದು ವೇಳೆ ಗಾಡಿಯ ನೊಗಕ್ಕೇ ನೇರವಾಗಿ ಬಡಿದಿದ್ದರಂತೂ ಸ್ಥಳವಲ್ಲೇ

ಮೃತ್ಯು. ಮೈನಡುಗಿ ಹೋಯಿತು. ವಿರೂಪಾಕ್ಷಪ್ಪ, ಚಕ್ಕಡಿ ಚಕ್ಕಡಿ! ಎಂದು ಚೀರಿ ಹೇಳಿದ. ವಿರೂಪಾಕ್ಷಪ್ಪ ಬ್ರೇಕ್ ಹಾಕಿ ಸೈಕಲ್ಲನ್ನು ಚಕ್ಕಡಿಯ ಮುಂದೆಯೇ ನಿಲ್ಲಿಸಿ ಪಕ್ಕಕ್ಕೆ ಸರಿದ. ಎರಡು ಗಾಡಿಗಳು ಅವನನ್ನು ದಾಟಿ ಹೋದ ಮೇಲೆ ನನ್ನನ್ನು ಕೂಗಿದ. ನಾನು ಹಿಂದಕ್ಕೆ ಬಂದೆ. ಆ ಸ್ಥಳವನ್ನು ಹಗಲು ಹೊತ್ತು ಎಷ್ಟೋ ಸಲ ನೋಡಿದ್ದ ನನಗೆ ಎದೆ ಒಡೆದು ಹೋಗುವ ಭಯವಾಗಿ, ಎಂಥ ಘೋರ ಅಪಾಯಸ್ಥಳದಲ್ಲಿ ಪಾರಾದೆನಲ್ಲ! ಎಂದು ಮನದಲ್ಲೆ ಪರಮಾತ್ಮನಿಗೆ ವಂದನೆ ಸಲ್ಲಿಸಿದೆ. ವಿರೂಪಾಕ್ಷಪ್ಪನಿಗೆ ನಾನು ಗಾಡಿಗಳನ್ನು ದಾಟಿದ ಸ್ಥಳ ತೋರಿಸಿದೆ. ಅವನೂ ಭಯಗೊಂಡ. ಗಾಡಿಗೂ ಪೂಲಿಗೂ ಮಧ್ಯದಲ್ಲಿ ಎರಡು ಎರಡುವರೇ ಅಡಿ ಅಗಲದ ಸ್ಥಳದಲ್ಲಿ ನನ್ನ ಸೈಕಲ್ ಅಪಾಯವಿಲ್ಲದೆ ಪಾರಾಗಿ ಹೋಗಿತ್ತು. ಅರ್ಧ ಅಡಿ ಎಡಕ್ಕೆ ಹೋಗಿದ್ದರೂ ಪ್ರಾಣಾಪಾಯ, ಬಲಕ್ಕೆ ಹೋಗಿದ್ದರೂ ಪ್ರಾಣಾಪಾಯವೇ! ಘೋರ ಕಂಟಕವೊಂದು ಕೂದಲನ್ನು ಕೊಂಕಿಸದೆ ಹೋಯಿತಲ್ಲಾ, ಇದೇ ನನ್ನ ಭಾಗ್ಯವೆಂದುಕೊಂಡೆ. ಬಹುದಿನಗಳವರೆಗೆ ಈ ಘಟನೆ ನನ್ನ ಮೈ ನಡುಗಿಸಿದ್ದುಂಟು. ಅಲ್ಲಿಂದ ನಾವು ಮುಂದೆ ಉಳಿದಿದ್ದ ಮೂರು ಮೈಲು ದಾರಿಯನ್ನು ನಿಧಾನವಾಗಿ ಸೈಕಲ್ ಓಡಿಸಿಕೊಂಡು ಹೋದೆವು. ನಾಟಕ ಅದೇ ತಾನೆ ಪ್ರಾರಂಭವಾಗಿತ್ತು.

ನಾವು ಯೋಚಿಸಿದಂತೆ ಮೊದಲ ಸಾಲಿನ ಕುರ್ಚಿಗಳೆಲ್ಲ ಭರ್ತಿಯಾಗಿದ್ದವು. ಎರಡನೆಯದೋ ಮೂರನೆಯದೋ ಸಾಲಿನಲ್ಲಿನ ಕುರ್ಚಿಯಲ್ಲಿ ಕುಳಿತು ನಾಟಕ ನೋಡಿದೆವು. ದ್ರೌಪದಿ ಪಾತ್ರಧಾರಿಣಿಯಾದ ಸುಶೀಲಾ ಹಾಡಿದ "ದೇವಾ ಯದುನಂದನ....." ಎಂಬುದೂ, ಕೃಷ್ಣನ ಪಾತ್ರದಲ್ಲಿ ಬಸವರಾಜ ಮನ್ಸೂರ್ ಅವರು ಹಾಡಿದ "ಶ್ಯಾಮಾ ನೀ ಕೋಮಲೆ...." ಎಂಬ ಪದ್ಯವೂ ನಮ್ಮನ್ನು ಆನಂದ ಸಾಗರದಲ್ಲಿ ಮುಳುಗಿಸಿದವು. ದ್ರೌಪದಿ ಪಾತ್ರದಲ್ಲಿ ಸುಶೀಲ ಅಭಿನಯ ಅನ್ಯಾದೃಶ. ಬಸವರಾಜನ ಈ ಕಂಪನಿಗೆ ಅವಳೇ ಶಿರೋರತ್ನ ಪ್ರಾಯ ಅಭಿನೇತ್ರಿ. ಅವಳ ಅಭಿನಯ, ಸಂಗೀತ ಅನ್ಯಾದೃಶಗಳು, ಅಪೂರ್ವ. ಅಭಿನೇತ್ರಿಯರಲ್ಲಿ ಅವಳಿಗೆ ಸರಿಸಮನಾದವರು ಇನ್ನೊಬ್ಬಳು ಇದ್ದಿಲ್ಲ. ಬಹುಶಃ ಇಂದೂ ಅವಳಂತೆ ಸಂಗೀತ - ಅಭಿನಯಗಳೆರಡನ್ನೂ ಹೊಂದಿರುವ ಗಂಭೀರ ಹೆಂಗಸನ್ನು ಕಂಡಿಲ್ಲ. ಶೀಲದಲ್ಲೂ ಅವಳು ಮೇಲಟ್ಟದವಳೆಂದು ಕೇಳಿದ್ದೇನೆ. ಅವಳ ಪಾತ್ರ ನೋಡಲೆಂದೇ ಜನ ಕಿಕ್ಕಿರಿದು ಸೇರುತ್ತಿದ್ದುದು. ಬಸವರಾಜನ ಪಾತ್ರ ಅಭಿನಯಕ್ಕಿಂತ ಸಂಗೀತ, ಶಾಸ್ತ್ರೀಯತೆ ಇಂಪು, ಮಾಧುರ್ಯಗಳದ್ದೇ ಒಂದು ಕೈ. ವಾಮನರಾವ್ ಕಂಪನಿಯಲ್ಲಿ ತಯಾರಾದ ಈ ನಟಶ್ರೇಷ್ಠನ ಘನತೆ ಆ ಕಾಲದ ನಾಟಕ ಪ್ರಪಂಚದಲ್ಲಿ ಹೆಸರುವಾಸಿ. ದ್ರೌಪದಿ ಪಾತ್ರ ಮಾಡಿದ ಸುಶೀಲಾ ದೇವಿಯ ಅಣ್ಣ ತಮ್ಮಂದಿರೇ ತಬಲಾ, ಹಾರ್ಮೋನಿಯಂ ನುಡಿಸುವವರೆಂದು ಕೇಳಿದ್ದೆ. ಅದು ಹೇಗೋ ಅಂತೂ ಅವಳೊಬ್ಬ ಆ ಕಾಲದ ಶ್ರೇಷ್ಠ ನಟಿಯೆಂಬುದಂತೂ ನಿಶ್ಚಯ.

ದುಶ್ಯಾಸನ ಸೀರೆ ಸೆಳೆಯಲು ಕೈಯಿಕ್ಕಿದಾಗ ಅಳುತ್ತ ಶ್ರೀ ಕೃಷ್ಣನನ್ನು ನೆನೆಯುವ ಸನ್ನಿವೇಶ ಹೃದಯ ವಿದ್ರಾವಕ. ಧಾರಾಕಾರವಾಗಿ ಕಣ್ಣೀರು ಸುರಿಸುತ್ತ ಬಿಕ್ಕಿ ಬಿಕ್ಕಿ ಅಳುವುದು ಕೃತಕವಾಗಿ ಯಾರಿಗೂ ಕಾಣುತ್ತಿರಲಿಲ್ಲ. ಅಂಥ ತನ್ಮಯತೆಯನ್ನು ನಾಟಕದಲ್ಲಿ ದಿಟ್ಟೀರನೆ ತೋರಿಸುವುದು ಶ್ರೇಷ್ಠವರ್ಗದ ನಟಿಯರಿಗಲ್ಲದೆ ಉಳಿದವರಿಗೆ ಸಾಧಿಸುವ ಸಾಧನೆಯಲ್ಲಾ ಎನ್ನಿಸಿತು. ದಾರಿಯಲ್ಲಿ ನಮಗಾದ ಎಲ್ಲ ಕಹಿ ನೆನಪುಗಳು ಮಾಯವಾಗಿ ಹೋದವು. ಆ ಕಾಲದಲ್ಲಿ ಇಂದಿನಷ್ಟು ಸಿನಿಮಾ ಹಾವಳಿ ಇರಲಿಲ್ಲವಾಗಿ ಸಿನಿಮಾ ಪ್ರಪಂಚಕ್ಕೆ ಅವಳು ಕಾಲಿಡಲಾಗಲಿಲ್ಲವೆಂದು

ತೋರುತ್ತದೆ. ಅಲ್ಲದೆ ಅಂಥ ಗಂಭೀರವಾಗಿ ಪಾತ್ರ ನಿರ್ವಹಿಸುವವರಿಗೆ ಇಂದಿನ ಹೊಲಸು ದೃಶ್ಯಗಳನ್ನು ಸಮಾಜದೆದುರು ಯಾವ ಭಯವೂ ಇಲ್ಲದೆ ತೋರಿಸುವ ಮನಸ್ಸು ಮಾಡುತ್ತಿದ್ದಳೊ ಇಲ್ಲವೊ? ಇಂದಿನ ಸಿನಿಮಾಗಳಲ್ಲಿ ಎತ್ತ ನೋಡಿದರೂ ಕಾಮ-ಕಾಮ-ಕಾಮ! ಕಾಮನ ಹಾವಳಿಗೆ ಸಿನಿಮಾ ತುತ್ತಾಗಿ ತನ್ನ ಅಭಿನಯ ಗಾಂಭೀರ್ಯ ಕಳೆದುಕೊಂಡು ಚರ್ವಿತ ಚರ್ವಣವಾಗುತ್ತಿದೆ; ಗಾಂಭೀರ್ಯ ಕಳೆದುಕೊಳ್ಳುತ್ತಿದೆ; ನಾಟ್ಯಶಾಸ್ತ್ರಕ್ಕೇ ಅಪಚಾರವಾಗುತ್ತಿದೆ. ಮನಸ್ಸಿಗೆ ಬಂದಂತೆ ಕುಣಿಯುವ ದೊಂಬಿದಾಸರಿಗಿಂತ ಕಡೆಯಾಗುತ್ತಿದೆ. ಶ್ರೇಷ್ಠವರ್ಗದ ಗಂಭೀರ ಅಭಿನಯಶೀಲ ಅಭಿನೇತ್ರಿಯರು ಮಾಯವಾಗುತ್ತಿದ್ದಾರೆ. ಓರ್ವ ಗಂಡನು ಓರ್ವ ಹೆಂಗಸನ್ನು ಎಳೆದಾಡಿ ಮುದ್ದಿಕ್ಕುವ ನೂರಾರು ಮುಖಗಳನ್ನು ಲೋಕಕ್ಕೆ ಪರಿಚಯ ಮಾಡಹೊರಟಿರುವ ಕಾಮಪ್ರಚೋದಕರಿಂದ ಸಿನಿಮಾ ಪ್ರಪಂಚ ತುಂಬ ಹೊಲಸಾಗಿ ಹೋಗಿದೆ. ಹೀಗೆ ಮಾಡದಿದ್ದರೆ ಅವರ ಗಲ್ಲಾಪೆಟ್ಟಿಗೆ ತುಂಬುವುದಿಲ್ಲವಂತೆ. ಗಲ್ಲಾ ಪೆಟ್ಟಿಗೆ ತುಂಬಲು ಇಷ್ಟು ಕೀಳುಮಟ್ಟದ ಅಭಿನಯಕ್ಕಿಳಿಯ ಬೇಕೇನು? ಮನರಂಜನೆಯ ಹೆಸರಿನಲ್ಲಿ ಮನೋಭಂಜನ ಕಾರ್ಯ ಅವ್ಯಾಹತವಾಗಿ ಸಾಗಿದೆ. ಕ್ಯಾಮರಾದ ಎದುರಿನಲ್ಲಿ ಸ್ತ್ರೀ ಪುರುಷರು ಹುಚ್ಚು ಕಾಮಪ್ರೇಮ ದೃಶ್ಯಗಳನ್ನು ಚಿತ್ರೀಕರಿಸಲು ಸಜ್ಜಾಗಿ ನಿಂತು ಚಿತ್ರಿತವಾಗುವುದು ಅವರ ಉಚ್ಛೃಂಖಲ ಮನಸ್ಸಿನ ಸಿದ್ಧತೆಯನ್ನು, ಮನ ತೆರೆದ ಕಾಮ ಪ್ರಚೋದನೆಯನ್ನು ಅಭಿವ್ಯಕ್ತಿಗೊಳಿಸುತ್ತದೆ. ಇದರಿಂದ ಸಮಾಜದ ಜೀವನದಲ್ಲಿ ತರುಣ ಮತ್ತು ತರುಣಿಯರು ಸಂಯಮ ಕಳೆದುಕೊಳ್ಳುತ್ತಿದ್ದಾರೆ. ಅಪ್ರಾಪ್ತ ವಯಸ್ಸಿನ ಸ್ತ್ರೀಪುರುಷರಿಬ್ಬರಲ್ಲೂ ಉನ್ಮತ್ತಕಾಮ, ವಿಕೃತ ಕಾಮಜೀವನ ಅಭಿವೃದ್ಧಿಗೊಳ್ಳಲು ಕಾರಣವಾಗುತ್ತಿದೆ. ಇದನ್ನು ತಡೆ ಹಿಡಿಯುವವರು ಯಾರು? ಇದು ಸಮಾಜಶುದ್ಧಿಯನ್ನು, ನಿಯಮಬದ್ಧ ಸಮಾಜದ ರೀತಿನೀತಿಗಳನ್ನು ರಕ್ಷಿಸುವ ಕ್ರಮವೇನೂ ಅಲ್ಲ. ಬದಲಾಗಿ ಮಾರಕ ಅವ್ಯವಸ್ಥಿತ ಸಮಾಜ ಏನನ್ನು ಸಾಧಿಸಲಾರದು. ಇದೇನೇ ಇರಲಿ. ನಾವು ನಾಟಕ ನೋಡಿ ರಾತ್ರಿ ಅಲ್ಲಿಂದ ಹೊರಡಲು ಭಯವಾಗಿ ಅಲ್ಲೇ ಉಳಿದು ಬೆಳಿಗ್ಗೆ ಸೈಕಲ್ ಹತ್ತಿ ರಾತ್ರಿಯ ಅಪಾಯಸ್ಥಾನಗಳನ್ನು, ಹುಲಿ ಕುಳಿತ ಸ್ಥಳವನ್ನು ವೀಕ್ಷಿಸಿದೆವು. ಬೆಳಕಿನಲ್ಲಿ ನಾನು ಅಪಾಯಕ್ಕೊಳಗಾಗಬೇಕಾಗಿದ್ದ ಸ್ಥಾನವನ್ನು ನೋಡಿದಾಗ ಎದೆ ಬಡಿದುಕೊಳ್ಳತೊಡಗಿತು. ಅದೊಂದು ಘೋರ ಪ್ರಪಾತ ಸ್ಥಳ. ಬ್ರೇಕ್ ಹಾಕಿದ ನನ್ನ ಸೈಕಲ್‌ಗಾಲಿಯ ಗುರುತು ಇನ್ನೂ ಅಲ್ಲಿ ಇತ್ತು.

### ಇನ್ನೊಮ್ಮೆ ಘೋರ ಅಪಾಯದಿಂದ ಪಾರಾದೆ

ಸಂಗೀತ ಮತ್ತು ಸಂಗೀತನಾಟಕದ ಗೀಳು ನನ್ನನ್ನು ಬೆನ್ನುಹತ್ತಿ ಬಂದ ಭೂತವಾಗಿ ಕಾಡುತ್ತಿತ್ತು. ಚೆನ್ನಾಗಿ ರಾಗತಾಳ ಲಯ ಬದ್ಧತೆಯಿಂದ ಹಾಡುವವರನ್ನು ಕಂಡಾಗ ನಾನೂ ಶಾಸ್ತ್ರೀಯವಾಗಿ ಹಾಡುವುದನ್ನು ಕಲಿಯಬಾರದಿತ್ತೇ ಎನ್ನಿಸುತ್ತಿತ್ತು. ನಾನು ತಲಕು ಮಲಕು ಹಾಕಿ ಹಾಡುತ್ತಿದ್ದೆನಾದರೂ, ಕಲಿತು ಸಾಧನೆ ಮಾಡಿ ಹಾಡುವವರ ಹಾಡಿನಂತೆ ಇರುತ್ತಿರಲಿಲ್ಲವೆಂಬುದು ಅನ್ಯರಿಗಿಂತ ನನಗೇ ಚೆನ್ನಾಗಿ ಗೊತ್ತಾಗುತ್ತಿತ್ತು. ಓರ್ವ ಚಿಕ್ಕ ಹುಡಗನನ್ನೋ ಹುಡಿಗಿಯನ್ನೋ ಮುಂದೆ ಮಾಡಿಕೊಂಡು ಕೊರಳಿಗೊಂದು ಹಾರ್ಮೋನಿಯಂ ಕಟ್ಟಿಕೊಂಡು ಬಾರಿಸುತ್ತ ಹುಡುಗರನ್ನು ಹಾಡಿಸಿ ಮನೆ ಮನೆಗೆ ಬಂದು ಭಿಕ್ಷೆಯೆತ್ತುತ್ತಿದ್ದವರನ್ನು ತಡೆದು ನಿಲ್ಲಿಸಿ ನಿಮ್ಮ ಎಲ್ಲಾ ಹಾಡುಗಳನ್ನು ಹೇಳಿ. ಕೇಳೋಣ ಎಂದು ಹಾಡಿಸಿ ಒಂದೆರಡೇ ಹಾಡಿನಲ್ಲಿ

ಅವರ ಯೋಗ್ಯತೆಯನ್ನು ಅರ್ಥಮಾಡಿಕೊಂಡು ಚೆನ್ನಾಗಿದ್ದರೆ ಘಂಟೆ ಘಂಟೆಯವರೆಗೆ ಹಾಡಿಸುತ್ತ, ನಾಲ್ಕು ಜನ ಸೇರಿಸಿ ಬಿಡುತ್ತಿದ್ದೆ. ಅವರಿಂದ ಪಟ್ಟೆಯ್ನೆತ್ತಿ ಕೆಲವು ಪುಡಿಗಾಸನ್ನು ಅವರ ಕೈಗೆ ಕೊಟ್ಟು ಕಳಿಸಿದ್ದ ಪ್ರಸಂಗಗಳೆಷ್ಟೋ. ವೇಷ ಹಾಕಿಕೊಂಡು ಊರಲ್ಲಿ ಕುಣಿಯುತ್ತ ಬರುವವರನ್ನು ತಡೆದು ನಿಲ್ಲಿಸಿ ಅವರ ಹಾಡುಗಳೆಲ್ಲ ಮುಗಿಯುವವರೆಗೆ ಕೇಳಿದ್ದೂ ಉಂಟು. ಇವೆಲ್ಲಾ ಚೆನ್ನಾಗಿರುತ್ತಿದ್ದವೆಂದೇನೂ ಅಲ್ಲ. ಆಯಾಯ ಕಾಲದಲ್ಲಿ ಹಾಡು ಕೇಳಬೇಕೆಂದುಂಟಾಗುತ್ತಿದ್ದ ಮನದ ತುಡಿತಕ್ಕೆ ತಾತ್ಕಾಲಿಕ ಶಾಂತಿ ದೊರೆಯುತ್ತಿತ್ತು. ಒಮ್ಮೊಮ್ಮೆ ಅಪರೂಪದ ಹಾಡನ್ನು ಇಂಥವರು ಹೇಳುತ್ತಿದ್ದುದುಂಟು.

ಹಿರೇಕಾಂಶಿಯ ಪಕ್ಕದಲ್ಲಿಯೇ ಸಾಬಾರ ಎಂಬ ಗ್ರಾಮವಿದೆ. ಅಲ್ಲಿ ಅಸಾದಿಗಳು ರಾಣಿಗರು ಅನ್ನಿಸಿಕೊಳ್ಳುವ ಜನಾಂಗದವರಿದ್ದರು. ಅವರಲ್ಲಿ ಒಂದಷ್ಟು ಸಂಗೀತ-ನೃತ್ಯ.ದ ಕಲೆಯಿತ್ತು. ಗಾನ ನೃತ್ಯಮಾಡುವ ಅವರ ಹೆಂಗಸರಿಗೆ ಗಾಣಗಿತ್ತಿಯರು ಎಂಬ ಹೆಸರೂ ಇತ್ತು. ಗಾನ ಶಬ್ದವೇ ಗಾಣ ಆಗಿ ಗಾಣಗಿತ್ತಿಯರು ಆಗಿರಬಹುದು. ಈ ಜನಾಂಗದವರ ಗಾಣದ ಪ್ರಸಂಗವಾಗದಿದ್ದರೆ ಗ್ರಾಮದೇವತೆ ಯಾರಿಗೂ ವರವನ್ನೇ ಕೊಡುತ್ತಿದ್ದಿಲ್ಲ. ಗ್ರಾಮದೇವತೆಯ ಉಡಿ ತುಂಬುವ ದಿನ ಇವರು ದೇವತೆಯ ಮುಂದೆ ಕುಣಿದು ಹಾಡಿ ದೇವರಿಗೂ ತೃಪ್ತಿ ಪಡಿಸಬೇಕು. ಜನಮನವನ್ನು ಸೂರೆಗೊಳ್ಳಬೇಕು. ಹಾಸ್ಯವನ್ನು ಮೆರೆಯಬೇಕು. ಇವರ ಹಾಡುಗಳೆಲ್ಲಾ ಸಾಮಾನ್ಯವಾಗಿ ಶೃಂಗಾರ ಪ್ರಚೋದಕಗಳು ಮತ್ತು ಸಾಮಾಜಿಕ ವಿಡಂಬನೆಯವು. ಒಳ್ಳೆಯ ಚೀಜುಗಳನ್ನು ಇವರು ಹಾಡುತ್ತಿದ್ದುದುಂಟು. ಜನಗಳ ಮಧ್ಯದಲ್ಲಿ ಇವರು ಹಾಡುತ್ತ ಹಾಡುತ್ತ, ಎದುರಿಗೆ ಕುಳಿತ ಮುದುಕನನ್ನೋ ಇನ್ನಾರನ್ನೋ ಬೆರಳು ಮಾಡಿ ತೋರಿಸುತ್ತ - ಕುಣಿಯುತ್ತ ಕುಣಿಯುತ್ತ ಅವನ ಹತ್ತಿರವೇ ಬಂದು,

ಈ ಮುದುವಾ ನನಗೆ ಸರಿಗೀ ಕೊಡತೇನಂತೈತೆ
ಸರಿಗಿ ವಂಕಿಯೇನೂ ಬೇಡ ಸುಂಕ ಕೊಟ್ಟು ಮುಂದಕೆ ಹೋಗು

ಇತ್ಯಾದಿ ಅನೇಕ ಬಗೆಯ ಹಾಡುಗಳನ್ನು ಹಾಡಿ ಹಾಸ್ಯಮಾಡಿ ಅವರಿಂದ ಕಾಣಿಕೆ ವಸೂಲು ಮಾಡಿ ಬಿಡುತ್ತಿದ್ದರು. ಹತ್ತಿರಕ್ಕೆ ಬಂದಿದ್ದ ಅವರಿಗೆ ಮುದುಕನೂ ಉಳಿದವರೂ ಜೇಬಿನಲ್ಲಿದ್ದಷ್ಟು ದುಡ್ಡು ಕಾಸು ಕೊಟ್ಟು ಬಿಡುತ್ತಿದ್ದರು. ಇದೊಂದು ಬಗೆಯ ಹಾಸ್ಯವಾಗಿರುತ್ತಿತ್ತು. ಎಲ್ಲ ಕಾಲದಲ್ಲೂ ಹಾಸ್ಯ ಮನುಷ್ಯನಿಗೆ ಬೇಕಾದ ಒಂದು ರಸವೇ ತಾನೆ? ಈಗ ತಮ್ಮ ನೃತ್ಯಗಾನಗಳಿಂದ ಜನರಲ್ಲಿ ಹಾಸ್ಯದ ಹೊನಲನ್ನು ಶೃಂಗಾರ ಮಜಲನ್ನು ಉಂಟುಮಾಡುತ್ತಿದ್ದ ಇವರ ಗಂಡಸರು ತಕ್ಕಷ್ಟು ಹಾರ್ಮೋನಿಯಂ ತಬಲಾ ವಾದನದಲ್ಲಿ ಬಲ್ಲಿದರು. ಈ ಹೆಂಗಸರಾಗಲಿ ಗಂಡಸರಾಗಲಿ ಶಾಸ್ತ್ರೀಯವಾಗಿ ದೀರ್ಘಕಾಲ ಅಭ್ಯಾಸ ಮಾಡಿ ಹಾಡುವ ವಾದ್ಯಗಳನ್ನು ನುಡಿಸುವ ಕಲೆಯನ್ನು ಕಲಿತವರಾಗಿರದಿದ್ದರೂ ಪರಂಪರಾಗತವಾಗಿ ಮನೆತನದಲ್ಲಿ ಬಂದ ಕಲೆಯನ್ನು ಹಾಗೂ ಹೀಗೂ ಉಳಿಸಿಕೊಂಡು ಬಂದವರು. ಪ್ರತಿವರ್ಷ ಯುಗಾದಿಯ ಮೊದಲೇ ವಿಜಯ ದಶಮಿಯ ಮೊದಲೇ ಸುತ್ತಮುತ್ತಣ ಊರುಗಳಿಗೆ ಭಿಕ್ಷೆ ಬೇಡಲು ಬರುತ್ತಿದ್ದರು ಎನ್ನುವುದು ಸಣ್ಣಮಾತಾಯಿತು. ಇವರು ಭಿಕ್ಷುಕರೂ ಅಲ್ಲ. ಹೊಲ, ಮನೆಮಾಡಿಕೊಂಡು ಕೃಷಿಕಾರ್ಯನಿರತರಾದವರು. ಆದ್ದರಿಂದ ಭಿಕ್ಷುಕರೇನೂ ಅಲ್ಲ. ಹಾಗಾದರೆ ಇವರು ಬರುತ್ತಿದ್ದುದು ಬಾರಾಬಲೂತಿ ಆಯಗಾರರಂತೆ. ಇವರನ್ನು ಹದಿಮೂರನೇ ಆಯಗಾರರ ಗುಂಪಿನಲ್ಲಿ ಸೇರಿಸಿ ಆಯ ಕೇಳಲು ಬರುತ್ತಿದ್ದರು ಎಂದು ಬೇಕಾದರೆ ಹೇಳಬಹುದು ಅಥವಾ ಸಮಾಜದಿಂದ

ಗೌರವಧನ ಪಡೆಯಲು ಬರುತ್ತಿದ್ದರೆಂದೂ ಬೇಕಾದರೆ ಹೇಳಬಹುದು. ಇವರು ಅಷ್ಟೊಂದು ಉತ್ತಮ ಕಲೆಗಾರರು ಎಂದು ಅನ್ನದಿದ್ದರೂ ಕಲೆ ಇವರಲ್ಲಿ ಇತ್ತು ಎನ್ನಬಹುದು. ಇವರ ಕಲೆಗೆ ರಾಣ ಎಂದು ಕರೆಯಲಾಗುತ್ತಿತ್ತು. ರೂಢಿಯಲ್ಲಿ ರಾಣರಂಪ ಮಾಡುತ್ತಾರೆ ಎಂದು ಹೇಳುವುದುಂಟು. ರಾಣ ಎಂದರೆ ಸಂಸ್ಕೃತದಲ್ಲಿ ಪ್ರಕಾಶ ಎಂಬ ಬೇರೊಂದು ಅರ್ಥವುಂಟು. ಆದರೆ ಇವರ ರಾಣ ಆ ಅರ್ಥದ್ದಂತೂ ಅಲ್ಲ. ಹಾಡಿ, ಕುಣಿದು, ನಗಿಸಿ ನಕ್ಕು ಸಮಾಜದಲ್ಲಿ ಒಂದು ಬಗೆಯ ಸಂತೋಷವನ್ನುಂಟು ಮಾಡುವವರು ಅಂತಾ ಬೇಕಾದರೆ ಇಟ್ಟುಕೊಳ್ಳಬಹುದು. ಈ ಜನ ತಮ್ಮನ್ನು ಹಿಂದೆ ಹರಿಶ್ಚಂದ್ರ ಮಹಾರಾಜನು ಅರಣ್ಯ ಮಧ್ಯದಲ್ಲಿ ಬೇಟೆಯಾಡಿ ಬಳಲಿ ವಿರಾಮ ತೆಗೆದುಕೊಳ್ಳುತ್ತಿದ್ದ ಕಾಲದಲ್ಲಿ ಆತನ ಎದುರಿನಲ್ಲಿ ಗಾನ, ನೃತ್ಯಮಾಡಿ ಅವನ ಬಳಲಿಕೆಯನ್ನು ಹೋಗಲಾಡಿಸಿ ಅವನನ್ನೇ ಮದುವೆಯಾಗೆಂದು ಕೇಳಿದ ಧೈರ್ಯಶಾಲಿನಿಯರಾದ ವಿಶ್ವಾಮಿತ್ರ ಸೃಷ್ಟಿಯ ಜನರೆಂದು ಹೇಳಿಕೊಳ್ಳುತ್ತಾರೆ. ಹಿಂದೂಗಳೆಲ್ಲ ಹೀಗೆಯೇ ಅಲ್ಲವೆ? ಕೆಲವರು ವಿಶ್ವಾಮಿತ್ರ ಸೃಷ್ಟಿಯಲ್ಲಾದವರು. ಕೆಲವರು ತ್ರಿಶಂಕುಸೃಷ್ಟಿಯಲ್ಲಿ ಜನಿಸಿದವರು, ಕೆಲವರು ಸಪ್ತರ್ಷಿಗಳ ವಂಶಜರು, ಕೆಲವರು ಸೂರ್ಯವಂಶದವರು, ಚಂದ್ರವಂಶದವರು, ಅಗ್ನಿ ವಂಶದವರು, ಇನ್ನು ಕೆಲವರು ಪ್ರಸಿದ್ಧ ರಾಜವಂಶದವರು. ಕೆಲವರು ನಂದಗೋಕುಲದಲ್ಲಿದ್ದ ಗೊಲ್ಲರ ವಂಶಜರು ಕೆಲವರು ಗಂಗೆಯ ಮಕ್ಕಳು, ಕೆಲವರು ವಾಲ್ಮೀಕಿಯಿಂದ ಬಂದ ಪರಂಪರೆಯವರು. ಕೆಲವರಂತೂ ರಾವಣ ಕುಂಭಕರ್ಣನ ವಿಭೀಷಣರ ಉತ್ತರಾಧಿಕಾರಿಗಳೇ. ಕೆಲವರು ದೇವೇಂದ್ರನ ಅಮರಾವತಿಯಲ್ಲಿ ಇದ್ದರೆಂದು ಹೇಳುವ ರಂಭೆ ಗಿಂಭೆ ಅನ್ನುವ ನಿತ್ಯ ಮುತ್ತೈದೆಯರ ಪರಂಪರೆಯವರಂತೆ ನೂರಾರು ಪರಂಪರೆಯಿಂದ ಹರಿದು ಬಂದ ನೂರಾರು ಜಾತಿ ಕುಲಗೋತ್ರ ಸೂತ್ರ ಗೀತ್ರಗಳಿಂದ ಭಿನ್ನ ಭಿನ್ನರಾಗಿಯೇ ಬಂದು ಭಿನ್ನ ಭಿನ್ನರಾಗಿಯೇ ಬದುಕಿ ಪರಸ್ಪರ ತಾಳಮೇಳತಪ್ಪಿ ದೇಶವನ್ನೇ ಕಳಕೊಂಡ ಜನರಲ್ಲವೇ? ಈ ರಾಣರಂಪಕ್ಕೆಲ್ಲ ಇತಿಹಾಸದ ಬೆಂಬಲವೆಷ್ಟೋ ಭೌಗೋಳಿಕ ಸತ್ಯವೆಷ್ಟೋ, ವಂಶವಾಹಿನಿಯ ವಿಜ್ಞಾನ ಏನು ಉತ್ತರ ಕೊಡುತ್ತದೋ ದೇವರೇ ಬಲ್ಲ. ಅಂತು ಹೀಗೆ ಹೇಳಿಕೊಳ್ಳುವಲ್ಲಿ ಹಿಂದೂಗಳು ಉತ್ಸಾಹಿಗಳು. ಈ ಆಸಾದಿಗಳು ಹರಿಶ್ಚಂದ್ರನ ಎದುರಿಗೆ ಹಾಡಿದ ರಾಣಗಿತ್ತಿಯರೆಂದೇ ಸದ್ಯಕ್ಕೆ ಇಟ್ಟುಕೊಳ್ಳೋಣ. ಹಿರೇಕಾಂಶಿಗೆ ಇವರೊಮ್ಮೆ ಬಂದಾಗ ಈ ಜನರಲ್ಲಿ ವಿಶೇಷ ಸಲುಗೆ ಬೆಳೆಸಿದ್ದ ಮಾದಣ್ಣವರ ಪುಟ್ಟಪ್ಪ ಮಾಸ್ತರ ಸಾಬಾರದ ಆಸಾದಿಗಳು ಬಹಳ ಚೆನ್ನಾಗಿ ಹಾಡ್ತಾರೆ. ಇವರ ಸಂಗೀತ ಕಚೇರಿ ಇಟ್ಟು ಬಿಡೋಣ. ಎಷ್ಟು ಹಾಡ್ತಾರೋ ಹಾಡ್ಲಿ ಅಂದ, ಸಂಗೀತ ಎಂದರೆ ಸರಿ. ಸಾಯಂಕಾಲ ಪುಟ್ಟಪ್ಪನೇ ಗ್ಯಾಸ್ ಲೈಟ್ ವ್ಯವಸ್ಥೆಮಾಡಿ ಕರೆದುಕೊಂಡು ಬಂದ. ಗೌಡರು, ಶಾನುಭೋಗರ ವೀರಪ್ಪ, ಮೊದಲಾದವರೆಲ್ಲ ಸೇರಿ ಹಾಡಿಸಿಯೇ ಬಿಟ್ವು. ಇವರ ಸಂಗೀತದಲ್ಲಿ ಸಾಮಾಜಿಕ ವಿಡಂಬನೆ, ಶೃಂಗಾರ ಇದೇ ಬಹಳ ಇತ್ತು. ಶೃಂಗಾರ ವಿಷಯದಲ್ಲಿ ಇವರದು ಮುಕ್ತ ಮನಸ್ಸು. ಆದರೂ ಇಂದಿನ ಸಿನಿಮಾದಷ್ಟು ಅಗ್ಗದ ಹಾಡೇನೂ ಆಗಿರಲಿಲ್ಲ. ತಿಳಿಹಾಸ್ಯ ಬೆರೆತ ಶೃಂಗಾರ ಪ್ರಚೋದಕ ಹಾಡುಗಳು. ಇವು ಉತ್ತಮಮಟ್ಟದ ಸಂಗೀತವಲ್ಲದಿದ್ದರೂ ಸಂಗೀತಲೋಲನಾದ ನನಗೆ ಸ್ವಲ್ಪಮಟ್ಟಿಗೆ ಖುಷಿಕೊಟ್ಟದ್ದಂತೂ ನಿಜ. ಊರಲ್ಲಿ ಮದುವೆ ಮುಂಜಿಗಳಾಗುವಾಗ ಕೊರಗರು (ವಾಲಗದವರು) ಬರುತ್ತಿದ್ದರು. ಅವರಲ್ಲಿಯೂ ಕೆಲವರು ಸಂಗೀತಗಾರರಿರುತ್ತಿದ್ದರು. ನಾನು ಅವರ ಲಾಭವನ್ನು ತೆಗೆದುಕೊಳ್ಳದೆ ಬಿಡುತ್ತಿರಲಿಲ್ಲ. ಮಕ್ಕಳ ಎದುರಿನಲ್ಲಿ ಹಣ್ಣಿನ ರಾಶಿ ಹಾಕಿದಾಗ ಒಂದೊಂದನ್ನೇ ಕಚ್ಚಿ ಹುಳಿಹಣ್ಣನ್ನು ಬಿಸಾಡಿ ಮತ್ತೊಂದನ್ನು ಕಚ್ಚಿ ರುಚಿಯೆಂದು ಕಂಡು ಬಂದರೆ ತಿನ್ನುವಂತೆ ಇವರೆಲ್ಲರ ಸಂಗೀತದಲ್ಲಿ ಸ್ವಲ್ಪ ಸಿಹಿಯಾದದ್ದನ್ನು

ಮಾತ್ರ ಸ್ವೀಕರಿಸುತ್ತ ತೃಪ್ತಿಪಡುತ್ತಿದ್ದುದುಂಟು. ಹಾನಗಲ್ಲು ಹಾವೇರಿಗಳಂಥ ಪಟ್ಟಣಗಳ ಮಠದಲ್ಲಿ ದೊಡ್ಡ ದೊಡ್ಡ ಸಂಗೀತಗಾರರು ಬರುತ್ತಿದ್ದರು. ಅವರ ವೈಭವಪೂರ್ಣ ಸಂಗೀತ ಕೇಳಿ ಸಂತೋಷ ಪಟ್ಟ ನಾನೀಗ ಮಾಸ್ತರನಾಗಿ ಕೈಕಾಲು ಕಟ್ಟಿ ಬಿಸಾಕಲ್ಪಟ್ಟಿದ್ದರಿಂದ ಅಲ್ಲಿಗೆ ಹೋಗಿ ಕೇಳುವ ಭಾಗ್ಯವೆಲ್ಲಿ! ಈಗ ಆಲೂರು ಹಾನಗಲ್ಲುಗಳಿಗೆ ಬರುವ ದೊಡ್ಡ ದೊಡ್ಡ ಸಂಗೀತ ನಾಟಕ ಕಂಪನಿಗಳಲ್ಲಿನ ಸಂಗೀತ ಕೇಳಿಯೇ ತೃಪ್ತಿ ಪಡಬೇಕಾಗಿತ್ತು. ಒಮ್ಮೆ ಅಪರೂಪಕ್ಕೆ ಹಾನಗಲ್ಲಿಗೆ ಬಸವರಾಜ ಮನ್ಸೂರರ ಕಂಪನಿ ಬಂದುದು ತಿಳಿದು ಬಂತು. ಅವರ ಮೊದಲ ನಾಟಕವೇ ಕಡ್ಲಿಮಟ್ಟಿ ಸ್ಟೇಷನ್ ಮಾಸ್ತರ ಎಂಬುದು. ಅದೊಂದು ಸಾಮಾಜಿಕ ವಸ್ತು. ಪೌರಾಣಿಕ, ಐತಿಹಾಸಿಕಕ್ಕೆ ಅಲ್ಲಿ ಸ್ಥಾನವಿರಲಿಲ್ಲ. ಓರ್ವ ಸ್ಟೇಷನ್ ಮಾಸ್ತರ ರೈಲು ತಪ್ಪಿಸಿಕೊಂಡು ಪರಿತಪಿಸುತ್ತಿದ್ದ ಸಾಧ್ವಿಯ ಬಗೆಗೆ ಮೋಹಗೊಂಡು ಅವಳನ್ನು ಪಡೆಯುವಲ್ಲಿ ವಿಫಲನಾಗಿ ಅವಳ ಒಂದು ಕೂಸನ್ನು ಕೂಡ ಕೊಂದು ಘೋರ ಶಿಕ್ಷೆಗೊಳಗಾದ ಒಂದು ಕಥೆ. ಈ ಕಥೆ ಇತರ ವಿಷಯಗಳ ಕೈಕಾಲು ಮೂಡಿಸಿಕೊಂಡು ನಾಟಕವಾಗಿತ್ತು. ವಿಜಾಪುರ ಜಿಲ್ಲೆಯ ಕಡ್ಲಿಮಟ್ಟಿ ಊರಿನ ಸ್ಟೇಷನ್‌ಮಾಸ್ತರನಾಗಿದ್ದ ಆವನೋ ಒಬ್ಬ ಆಯೋಗ್ಯ ಈ ವರ್ತನೆಯನ್ನು ಎಂದೋ ಮಾಡಿದ್ದನಂತೆ. ನಾಟಕಕಾರ ಬಹು ಸ್ವಾರಸ್ಯವಾದ ಸನ್ನಿವೇಶಗಳನ್ನು ಈ ನಾಟಕ್ಕೆ ಜೋಡಿಸಿ ಉತ್ತಮ ದೃಶ್ಯಕಾವ್ಯವನ್ನಾಗಿಸಿದ್ದ. ಈ ನಾಟಕವನ್ನು ಆಗ ಅನೇಕ ಕಂಪನಿಯವರು ಆಡುತ್ತಿದ್ದರೂ ಬಸವರಾಜ ಮನ್ಸೂರರ ಕಂಪನಿಯಲ್ಲಿ ಇದ್ದು ಸಿದ್ಧಿಯ ಚರಮಸ್ಥಾನಕ್ಕೇರಿದ ಉತ್ತಮ ನಾಟಕವಾಗಿತ್ತು. ಇದು ಭವ್ಯಸ್ಥಾನಕ್ಕೇರಲು ರೈಲು ತಪ್ಪಿಸಿಕೊಂಡ ಹೆಂಗಸಾದ ಕಾಶೀಬಾಯಿಯ ಪಾತ್ರ ಮಾಡುತ್ತಿದ್ದ ಸುಶೀಲಾ ಎಂಬ ಅಭಿನೇತ್ರಿಯೇ ಮುಖ್ಯ ಕಾರಣವಾಗಿತ್ತು. ಅವಳ ಭಾವಾಭಿನಯದ ತೀವ್ರತೆ ನೋಡುವವರ ಸಾತ್ವಿಕವನ್ನು ಎಚ್ಚರಿಸಿ ಕಣ್ಣೀರು ತರಿಸುವಂತಹುದಾಗಿತ್ತು. ಸ್ತ್ರೀಯರಂತೂ ಗಳಗಳ ಅಳುತ್ತಿದ್ದರು. ಈ ನಾಟಕವನ್ನು ಹಾವೇರಿಯಲ್ಲಿದ್ದಾಗಲೇ ನಾನು ಅನೇಕ ಸಲ ನೋಡಿದರೂ ಇನ್ನು ನೋಡಬೇಕೆಂಬ ಚಪಲ ಮಾತ್ರ ಕಡಿಮೆಯಾಗಿರಲಿಲ್ಲ. ಅದರಲ್ಲಿ ಅಳವಡಿಸಿದ ಸಂಗೀತ ಮೋಹಕವಾಗಿತ್ತು. ನಮ್ಮ ಹೊಸೂರಿನ ಉಳಿವೆಪ್ಪನನ್ನು ಹುರಿದುಂಬಿಸಿದೆ. ನನ್ನ ವರ್ಣನೆಗೇ ಅವನು ಬಾಯ್ನೀರು ಸುರಿಸಿ ಹೋಗಿ ನೋಡಿಕೊಂಡು ಬರೋಣವೆಂದು ಹೇಳಿದ.

ಸರಿ, ಎರಡು ಸೈಕಲ್ ತೆಗೆದುಕೊಂಡು 15 ಮೈಲು ದೂರದ ಹಾನಗಲ್ಲಿಗೆ ರಾತ್ರಿ ಎಂಟು ಘಂಟೆಗೆ ಹೊರಟೆವು. ದಾರಿಯಲ್ಲಿ ಯಾವ ವಿಘ್ನಗಳೂ ಹಿಂದೆ ಆಲೂರಿಗೆ ಹೋದಾಗಿನ ಹಾಗೆ ಜರುಗಲಿಲ್ಲ. ದಾರಿ ಮಕರವಳ್ಳಿಯ ಕತ್ತರಿಯವರೆಗೆ ಮಾಮೂಲಿ ಗುದ್ದು, ಗೊಟಾರ ಅವನ್ನು ಬಿಟ್ಟರೆ ಹಾನಗಲ್ಲುವರೆಗೆ ಉತ್ತಮ ಜಲ್ಲಿಕಲ್ಲು ಹಾಕಿ ನೇರ್ಪುಗೊಳಿಸಿದ್ದು. ಒಂಬತ್ತುವರೆ ಘಂಟೆಗೆಲ್ಲ ಹಾನಗಲ್ಲಿಗೆ ಹೋಗಿ ಬಿಟ್ಟೆವು. ಅಲ್ಲಿ ಮಲ್ಲಮ್ಮನ ಖಾನಾವಳಿಗೆ ಹೋಗಿ ಎರಡೆರಡಾಣೆ ಕೊಟ್ಟು ಅಕ್ಕಿರೊಟ್ಟಿ ತರಕಾರಿ. ಚಟ್ನಿ ತುಪ್ಪ ಮೊಸರು ಹಾಲು ಸಹಿತ ತಿಂದು ಅನ್ನವನ್ನು ಪಟ್ಟಾಗಿ ಬಿಗಿದು ಪಾನಬೀಡಾ ಜಗಿಯುತ್ತ, ಒಳ್ಳೆ ಡೌಲಿನಿಂದ ಬೀಡಿಗಳ ಮೇಲೆ ಬೀಡಿಗಳನ್ನೆಳೆಯುತ್ತ ಬಂದು ಮೊದಲು ಸಾಲು ಕುರ್ಚಿಗೆ ಟಿಕೇಟ್ ತೆಗೆಸಿಕೊಂಡು ಹೋಗಿ ಕುಳಿತೆವು. ಇದರ ಉದ್ದೇಶ ಸಮೀಪದಿಂದಲೇ ಸುಶೀಲ ಅಭಿನೇತ್ರಿಯ ಸಂಗೀತ ಸವೆಯುವುದರ ಜೊತೆಗೆ ಅವಳ ಆಂಗಿಕಾಭಿನಯದ ಸೊಗಸನ್ನು, ಮಾರ್‍ವಾಡಿಯ ಪಾತ್ರ ನಿರ್ವಹಿಸುತ್ತ ಇನ್ನೊಬ್ಬ ಕಲಾವಂತನ ಹಾಸ್ಯದ ಹೊನಲಿನಲಿ ತೇಲಿ ಮುಳುಗಬೇಕಾಗಿತ್ತು. ಆದ್ದರಿಂದ ಆ ಕುರ್ಚಿಗಳು

ಭರ್ತಿಯಾಗುವ ಮೊದಲೇ ಹೋಗಿ ಜಾಗ ಹಿಡಿದುಬಿಟ್ಟೆವು. ಸಾಮಾನ್ಯವಾಗಿ ಆ ಜಾಗ ಸಿಗುವುದು ಕಷ್ಟ. ಮುಂಚಿತವಾಗಿಯೇ ಬುಕ್ ಮಾಡಿಸಿದವರೂ ಇರುತ್ತಾರೆ. ಅಲ್ಲದೆ ಕಾಂಪ್ಲಿಮೆಟರಿಯವರ ಹಾವಳಿಯೂ ಬಹಳ ತಾನೆ! ನಾಟಕದವರು ಊರ ಗಣ್ಯರೆದುರು ಆಡಿ, ಅವರ ಮೂಲಕ ಒಳ್ಳೆಯ ಪ್ರಚಾರ ಗಿಟ್ಟಿಸುವುದೂ ಒಂದು ಸಂಪ್ರದಾಯವಾಗಿತ್ತು ಆಗ. ಈಗಲೂ ಈ ವ್ಯಾಧಿ ಉಂಟೇ ಉಂಟು.

ಆ ದಿನ ಕಾಶಿಬಾಯಿಯ ಪಾತ್ರಮಾಡಿದ ಸುಶೀಲ ದೇವಿಯ ಬಾಯಿಂದ ಅದ್ಭುತ ಅಭಿನಯ ಅನ್ಯಾದೃಶ ಸಂಗೀತ ಕೇಳಿ ಮೈ ಮರೆತೆ.

'ಕ್ಷಣ ಭಂಗುರಾ ಸಂಸಾರಾ । ಕ್ಷಣಿಕಾ ಸುಖ.....' ಎಂಬ ಟುಮರಿಯನ್ನು, 'ಧವಲಯಾ ಕೀರುತಿ ಆಸತಿ,......' ಎಂಬ ಟುಮರಿಯನ್ನು ಕೇಳಿ ಬಹಳ ತೃಪ್ತಿಗೊಂಡೆ. ಸ್ಟೇಷನ್ ಮಾಸ್ತರನ ದೌರ್ಜನ್ಯದಿಂದ ತನ್ನ ಮಗ ಸತ್ತಾಗ ಶೋಕರಸದ ಕೋಡಿಯನ್ನೇ ಹರಿಸಿದ ಅಭಿನಯ ಶ್ರೇಷ್ಠ ಮಟ್ಟದ್ದಾಗಿತ್ತು. ಆಗ ಸ್ತ್ರೀಯರ ಕಡೆಗೆ ನನ್ನ ದೃಷ್ಟಿ ಹೊರಳಿದಾಗ ಕಂಡದ್ದು ಅಳುತ್ತಿರುವ ಹೆಂಗಸರ ದೃಶ್ಯವೇ. ಆಮೇಲೆ ಮಾರವಾಡಿ ಪಾತ್ರ ನಿರ್ವಹಿಸಿದಾತನು ಅಭಿನಯಿಸಿದ ಹಾಸ್ಯಪ್ರಸಂಗ ಬಿದ್ದು ಬಿದ್ದು ನಗುವಂತೆ ಮಾಡಿತು. ಮನ್ಸೂರರ ಕಂಪನಿ ಅಂಥ ದೊಡ್ಡ ಕಂಪನಿಯಾಗಿರಲಿಕ್ಕಿಲ್ಲ. ಆ ಕಂಪನಿಯಲ್ಲಿ ಪಾತ್ರ ನಿರ್ವಹಿಸುತ್ತಿದ್ದ ಕೆಲವೇ ಜನದ ನಾಟ್ಯಕಲಾಚತುರಮತಿಗಳ ಅಭಿನಯ, ಸಂಗೀತ ಮತ್ತು ಸಾಕ್ಷಾತ್ ಅಭಿಜಾತ ಸಂಗೀತಗಾರರೇ ಆದ ಮನಸೂರ ಬಸವಣ್ಣೆಪ್ಪ ಅವರ ಶ್ರೇಷ್ಠದರ್ಜೆಯ ಸಂಗೀತದ ಕಾರಣವಾಗಿ ಆ ಮಂಡಳಿಯ ಕೀರ್ತಿಗೌರವಗಳು ಕರ್ನಾಟಕದ ಸೀಮಿತ ಭಾಗದಲ್ಲಿ ಜನರ ಮನೆಮಾತಾಗಿದ್ದವು. ನಾನು ಹಾನಗಲ್ಲಿನಲ್ಲಿ ಆ ಕಂಪನಿಯಿರುವವರೆಗೂ ನಾಲ್ಕೈದು ಸಲ ಇತರರೊಡನೆ ಹೋಗಿ ನೋಡಿ ನಾಟಕ ನೋಡುವ ಬರ ಹಿಂಗಿಸಿಕೊಂಡೆನು. ಮುಂದೆ ಈ ಕಂಪನಿ ಶಿರಹಟ್ಟಿ ನಾಟಕ ಮಂಡಳಿ, ವಾಮನರಾವ್ ಕಂಪನಿ, ಹಲಗೇರಿ ಜಟ್ಟೆಪ್ಪನ ಕಂಪನಿಗಳಂತೆ ಬಹುದಿನ ಅಸ್ತಿತ್ವದಲ್ಲಿರಲಿಲ್ಲ ಮತ್ತು ಪ್ರಚಾರವೂ ಅವರಷ್ಟಿರಲಿಲ್ಲವಾಗಿ ಬೇಗ ಮುರಿದು ಮೂಲೆಗುಂಪಾಯಿತು. ಕಾರಣ ಜನಮನದಲ್ಲಿ ಇದರ ನೆನಪು ಉಳಿಯಲಿಲ್ಲವೆಂದು ನನ್ನ ತರ್ಕ. ಅಲ್ಲದೆ ಇಷ್ಟು ಹೊತ್ತಿಗಾಗಲೇ ಧ್ರುವ, ಮಾರ್ಕಂಡೇಯ, ವಸಂತಸೇನೆ, ಸಾವಿತ್ರಿ, ಸುಭದ್ರ ಅನೇಕ ಸಿನಿಮಾಗಳು ಬಂದು ಜನಮನವನ್ನು ಸೂರೆಗೊಂಡುಬಿಟ್ಟವು. ರಂಗಭೂಮಿ ಕಳಾಹೀನವಾಗುತ್ತ ಬಂತು. ಅಲ್ಲದೆ ಸಿನಿಮಾ ಚಾರ್ಜು ಕೂಡ ಜನಕ್ಕೆ ಎಟಕುವಂತೆ ಇರುತ್ತಿತ್ತು ಎಂಬುದು ಜ್ಞಾಪಕದಲ್ಲಿರಬೇಕು. ಇತ್ತೀಚೆಗೆ ಒಮ್ಮೆ ಮನಸೂರು ಬಸವಣ್ಣೆಪ್ಪನವರು ಸಿಕ್ಕಾಗ ಅವರೆದುರು ಅವರ ಕಂಪನಿಯ ಪ್ರಸ್ತಾಪವೆತ್ತಿದೆ. ಅವರು ಸಿನಿಮಾ ಹಾವಳಿಗಳಿಂದ ಮುಂದೆ ನಮಗೆ ಬಹುದುರ್ಧರ ಪ್ರಸಂಗಗಳು ಬಂದವೆಂದೂ ನಾನು ಅದನ್ನುಳಿಸಲು ಪ್ರಯತ್ನಿಸಿದರೂ ಸನ್ನಿವೇಶ ನನ್ನ ಮಂಡಳಿಯನ್ನು ನುಂಗಿಹಾಕಿತು. ಇದರಿಂದ ನಾನು ಬಹು ಮೈನೋವು ಮಾಡಿಕೊಂಡು ನರಳಿದೆ ಎಂದು ವ್ಯಥಿತ ಹೃದಯರಾಗಿ ನುಡಿದರು. ಕೇವಲ ಇದೊಂದೇ ಕಂಪನಿಯೇಕೆ ಭವ್ಯವಾದ ಕನ್ನಡ ರಂಗಭೂಮಿಯಲ್ಲಿ ಬಹುದೊಡ್ಡ ಹೆಸರು ಮಾಡಿದ್ದ ಹಿರಿಯರಾದ ಗುಬ್ಬಿ ಕಂಪನಿಯೂ ಸಿನಿಮಾ ಪ್ರಪಂಚದೆದುರು ತಲೆಯೆತ್ತಿ ನಿಲ್ಲಲಾಗಲೇ ಇಲ್ಲ. ವೀರಣ್ಣನವರು ಕನ್ನಡ ರಂಗಭೂಮಿಯ ಇತಿಹಾಸದಲ್ಲೇ ಅದ್ಭುತಗಳನ್ನು ಮಾಡಿದವರಲ್ಲವೆ? ಅಂಥವರ ಪಾಡೇ ಶೋಚನೀಯ ಸ್ಥಿತಿಗಿಳಿದಾಗ ಉಳಿದ ಕಂಪನಿಗಳ ಪಾಡೇನು ಹೇಳಿ!

ಈ ನಾಟಕ ಕಂಪನಿಗಳ ಇತಿಹಾಸವೇನೇ ಇರಲಿ. ಉಳಿವೆಪ್ಪ ಮತ್ತು ನಾನು ಎರಡು ಘಂಟೆಗೆ ನಾಟಕ ಬಿಟ್ಟ ಕೂಡಲೆ ಸೈಕಲ್ ಹತ್ತಿ ಊರಿಗೆ ಹೊರಟೇ ಬಿಟ್ಟೆವು. ನಾನು ಹಾನಗಲ್ಲಿನಲ್ಲಿ ಉಳಿದು ಬೆಳಿಗ್ಗೆ ಹೋಗೋಣ ಎಂದು ಹೇಳಿದೆ. ಉಳಿವೆಪ್ಪ ಸ್ವಲ್ಪ ಒರಟು ಧೈರ್ಯದ ಹುಡುಗ. ನಡೀರಿ ಏಕೆ ಹೆದರುತ್ತೀರಿ, ನಾ ಇದ್ದೇನೆ ಎಂದು ಧೈರ್ಯ ಹೇಳಿದ್ದರ ಮೇರೆಗೆ ನಾನು ಮುಂದೆ ಮುಂದೆ ಹೋದಂತೆ ಉಳಿವೆಪ್ಪ ಹಿಂದೆ ಹಿಂದೆ ಬರುವ ಕರಾರಿನ ಮೇಲೆ ಸೈಕಲ್ ತುಳಿಯುತ್ತಾ ಹೊರಟೆವು. ಉಳಿವೆಪ್ಪನ್ನನ್ನು ಮುಂದೆ ಬಿಟ್ಟರೆ ಸೈಕಲ್ ತುಳಿತದಲ್ಲಿ ಪಳಗಿದ ಅವನು ಮುಂದೆ ಹೋಗುತ್ತಿದ್ದ. ನನಗೆ ದಟ್ಟಕಾಡಿನ ಅಕ್ಕಪಕ್ಕ ನೋಡಿದರೇ ಹೆದರಿಕೆ ಬರುತ್ತಿತ್ತು. ಈ ಕಾರಣವಾಗಿ ನನ್ನ ಬೆನ್ನ ಹಿಂದೇ ಕಾವಲುಗಾರನಾಗಿ ಉಳಿದು ಬರಲು ಒಪ್ಪಿಕೊಂಡ. ಕೇವಲ ಒಂದುವರೆ ತಾಸಿನಲ್ಲಿ ರಾತ್ರಿ ಸೈಕಲ್ ತುಳಿದುಕೊಂಡು ಹಿರೇಕಾಂಶಿಯ ಬಳಿಗೆ ಬಂದು ಬಿಟ್ಟೆವು. ಊರ ಹತ್ತಿರ ಬಂದಾಗ ಬಲಕ್ಕೆ ತಿರುಗಿ ಎಡಕ್ಕೆ ಆ ಕೂಡಲೆ ಹೊರಳಿ ಊರೊಳಗೆ ಪ್ರವೇಶಿಸಬೇಕಾಗಿತ್ತು. ನನಗೆ ಗ್ರಹಚಾರ ಕಡಿಮೆಯಾಗಿ ವೇಗದಲ್ಲಿಯೆ ಬಲಕ್ಕೆ ತಿರುಗಿ ಗಾಡಿಯನ್ನು ಹಾಗೇ ಮುಂದಕ್ಕೆ ತುಳಿದು ಬಿಟ್ಟೆ ಒಂದು ಘೋರವಾದ ಭರ್ಜಿಯಂತಹ ಮುಳ್ಳಿನಿಂದ ಕೂಡಿದ ಡಬಗಳ್ಳಿ (ಪಾಪಾಸುಕಳ್ಳಿ)ಯ ಮೇಲೆ ಸೈಕಲ್ ಹತ್ತಿ ಮುಂದಿನ ಗಾಲಿ ಮೇಲೆ ಹತ್ತಿಬಿಟ್ಟಿತು. ನನ್ನ ಪುಣ್ಯ ಚೆನ್ನಾಗಿತ್ತು. ಸೀಟಿನ ತುದಿ ಆಯಕಟ್ಟಿನ ಸ್ಥಳಕ್ಕೆ ಬಡಿದು ಹಿಂದಕ್ಕೆ "ಉಳಿವೆಪ್ಪ ಸತ್ತೆ" ಎಂದು ಚೀರಿಕೊಳ್ಳುತ್ತ ನೆಲಕ್ಕೆ ಬಿದ್ದು ಬಿಟ್ಟೆ. ನನ್ನ ಚೀರುವ ದನಿಯನ್ನು ಹತ್ತಾರು ಹೆಜ್ಜೆ ದೂರದಲ್ಲಿದ್ದ ಉಳಿವೆಪ್ಪ ಕೇಳಿಸಿಕೊಂಡು "ಮಾಸ್ತರ ಬಂದೆ, ಹೆದರಬೇಡಿ" ಎಂದು ಸೈಕಲ್ ಬ್ರೇಕ್ ಹಾಕಿ ನನ್ನ ತಲೆಗೇ ಅವನ ಸೈಕಲ್ ಮುಂದಿನ ಗಾಲಿ ತಾಕುತ್ತಿದ್ದಂತೆಯೇ ನಿಲ್ಲಿಸಿಬಿಟ್ಟ. ಇನ್ನೊಂದು ಸುತ್ತು ತುಳಿದಿದ್ರೆ ಸೈಕಲ್ ನನ್ನ ಮೇಲೆ ಹತ್ತಿ ಬಿಡುತ್ತಿತ್ತು. ಆಗ ನನ್ನ ಸ್ಥಿತಿ ಹೇಗಾಗುತ್ತಿತ್ತೋ ದೇವರೇ ಬಲ್ಲ. ಇದು ಹೋಗಲಿ. ನಾನು ಹಿಂದಕ್ಕೆ ಬೀಳದೆ ಡಬಗಳ್ಳಿಯಲ್ಲಿ ಬಿದ್ದಿದ್ದರೆ ನನ್ನ ಆಯುಷ್ಯವೇ ಮುಗಿಯುತ್ತಿತ್ತೋ ಅಥವಾ ವರ್ಷಗಟ್ಟಲೆ ಯಾವ ಆಸ್ಪತ್ರೆಯಲ್ಲಿ ನವೆಯಬೇಕಾಗಿತ್ತೊ! ಭರ್ಜಿಯಂತಹ ಆ ಮುಳ್ಳುಗಳು ಎಲ್ಲೆಲ್ಲಿ ನಡುತ್ತಿದ್ದವೋ ಈಗ ಹೇಳುವುದು ಕಷ್ಟ. ಅಂತೂ ಘೋರವಾದ ಈ ವಿಪತ್ತು ತಪ್ಪಿ, ಆಯಕಟ್ಟಿನ ಸ್ಥಳಕ್ಕಾದ ನೋವನ್ನು ತಿಂಗಳುಗಟ್ಟಲೆ ಅನುಭವಿಸಿದೆ. ಕೊನೆಗೆ ಅದು ತನ್ನಿಂದ ತಾನೇ ಕಡಿಮೆಯಾಗಿ ಗುಣವಾದೆ. ದೇಹದಲ್ಲಿ ಅನೇಕ ವರ್ಷ ಕಷ್ಟಪಟ್ಟು ದುಡಿದು ಶಕ್ತಿ ಸಂಪಾದನೆ ಮಾಡಿದ ಬಂಡವಾಳವಿತ್ತು. ಅದರ ಬಲದಿಂದ ಸಣ್ಣಪುಟ್ಟ ಇಂತಹ ನೋವುಗಳು ಲೆಕ್ಕಕ್ಕೆ ಬಾರದೆ ಅವಷ್ಟಕ್ಕವೇ ದೇಹವನ್ನು ಮೊದಲಿನ ಸ್ಥಿತಿಗೆ ತಂದವು. ಬಡಪೆಟ್ಟಿನ ಮನುಷ್ಯನಾಗಿದ್ದರೆ ಇಷ್ಟಕ್ಕೇ ಅನೇಕ ದಿನ ಆಸ್ಪತ್ರೆಯ ಡಗಲಿ ಅಂಗಿ ತೊಟ್ಟುಕೊಂಡು ಕಾಲೆಳೆಯುತ್ತ ತಿರುಗಾಡುತ್ತ ಬಿದ್ದಿರಬೇಕಾಗಿತ್ತು. ದೇವರು ತಪ್ಪಿಸಿದ. ಇದೆಲ್ಲ ನನ್ನ ನಾಟಕ ನೋಡುವ ತೀವ್ರಾಸಕ್ತಿ ನನಗೆ ಕೊಟ್ಟ ಬಳುವಳಿ ಅನ್ನಲೆ! ಆಕಸ್ಮಿಕ ಅನ್ನಲೇ!

ಮರುದಿನ ಈ ಕಥೆ ಕೇಳಿ ಊರಿನವರೆಲ್ಲ ನನಗೆ ಛೀಮಾರಿ ಹಾಕುವವರೇ. ಬಸನಗೌಡರ ತಾಯಿ ಬಸಮ್ಮಜ್ಜಿ ಬೈದು ಬೈದು ನನಗಿಂತಲೂ ಹೆಚ್ಚು ಸುಸ್ತಾಗಿ "ಇನ್ನ ಮ್ಯಾಲ ರಾತ್ರಿ ಸೈಕಲ್‌ಹತ್ತಿ ಹಾನಗಲ್ಲು, ಆಲೂರು ಅಂತ ತಿರುಗಿ ಗಿರಗಿದ್ರ ನನ್ನಿಂದ ಬಂತು ಅಂದಿಗಿಂದೀರಿ ಬುದ್ಧಿ ಎಲ್ಲಿಟ್ಟೀರಿ. ನಿಮಗೇನಾದರೂ ಆದ್ರ ನಿಮ್ಮಪ್ಪ ನಿಮ್ಮಮ್ಮಗಳಿಗೆ ಊರಗೌಡರಾಗಿ ನಾವೇನು ಉತ್ರ ಹೇಳಬೇಕು?" ಒಂದಲ್ಲ ಎರಡಲ್ಲ, ಬೈದು ಬೈದು ಆಮೇಲೆ "ಎಳು ಉಣ್ಣೇಳು, ಬಿಸಿ ಅಕ್ಕಿ ರೊಟ್ಟಿ, ಬದ್ನಿಕಾಯಿಪಲ್ಲೆ ಮಾಡೇತಿ. ತಿಂದು ಮಜ್ಜಿಗೀ ಸಾರು ಮಾಡೇತಿ, ಅನ್ನಾಉಂಡು ನಿನ್ನ

ಕೋಲ್ಯಾಗ ಹೋಗಿ ಎರ್ಡು ದಿನ ಸುಮ್ಮನೆ ಮಲಕೊಂಡು ಬಿಡು" ಎಂದು ಊಟಮಾಡಿಸಿ, ಅಡಿಕೆಎಲೆ ಕೊಟ್ಟು ಮತ್ತೆರಡು ಮೂರು ಬೈದು ಕಳಿಸಿ ಬಿಟ್ಟಿತು. ಇಂಥ ಆತ್ಮೀಯ ಹಿತಚಿಂತನ ಶೀಲ ಮುದುಕಿಯ ವಾತ್ಸಲ್ಯಮಯ ಮಾತುಗಳು ನನ್ನ ಭಾವಕೋಶದಲ್ಲಿ ಕುಳಿತು ಆಗಾಗ ನನಗೆ ಎಚ್ಚರಿಕೆ ಕೊಡುವಂತೆ ಆಗುತ್ತಿರುತ್ತದೆ. ಅವರೆಲ್ಲ ಈಗ ಇಲ್ಲ. ಇದ್ದಿದ್ದರೆ ಆಗಾಗ ಹೋಗಿ ಅವರ ಪಾದಗಳ ಮೇಲೆ ಹೊರಳಾಡಿ ಬರುತ್ತಿದ್ದೆ. ಹಿರೇಕಾಂಶಿಯ ನನ್ನ ಹಿತಚಿಂತಕರೆಲ್ಲ ಮಾಯವಾಗಿದ್ದರೂ ಅವರ ಮಕ್ಕಳು ಮರಿಗಳು ಐದು ದಶಕ ಕಳೆದರೂ ಆ ವಿಶ್ವಾಸವನ್ನೇ ನೆನೆದು ಆಗಾಗ ಕಾಗದ ಬರೆಯುತ್ತಿರುತ್ತಾರೆ; ಬಂದು ಮಾತನಾಡಿಸಿ ಹೋಗುತ್ತಾರೆ. ಇದೇ ನನ್ನ ಭಾಗ್ಯವೆಂದುಕೊಂಡಿದ್ದೇನೆ. ಹೀಗೆ ಹಿರೇಕಾಂಶಿ ನನ್ನನ್ನು ಯಥಾರ್ಥ ಮನುಷ್ಯನನ್ನಾಗಿಸಲು ಸರ್ವಮುಖದಲ್ಲಿ ತನ್ನ ಶಕ್ತಿಯನ್ನು ವಿನಿಯೋಗಿಸಿದೆ ಎಂದು ನಿಸ್ಸಂಕೋಚವಾಗಿ ಇಂದಿಗೂ ನಂಬಿದ್ದೇನೆ. ಲಿಂಗಭೇದ ಜಾತಿಭೇದವಿಲ್ಲದೆ ಅತ್ಯಂತ ವಿಶ್ವಾಸ ಭಕ್ತಿ ಭಾವದಿಂದ ಇದ್ದಷ್ಟು ಕಾಲ ನನ್ನನ್ನು ಕಂಡ ಎಲ್ಲರಿಗೂ ನನ್ನ ನಮನಗಳು ಸಲ್ಲಲೇ ಬೇಕಾದವುಗಳು.

ನನ್ನ ಜೀವಮಾನದಲ್ಲಿ ಐದು ಜೀವಾಪಾಯದ ಗಂಡಾಂತರಗಳಿಂದ ಪಾರಾಗಿ ಇಲ್ಲಿಯವರೆಗೆ ಬದುಕಿರುವುದು ದೇವರ ಕೃಪೆಯೇ ಎಂದು ನನಗನ್ನಿಸುತ್ತದೆ. ಬಾಲ್ಯದಲ್ಲಿ ಹೊಳೆಯಲ್ಲಿ ಮುಳುಗಿ ಸಾಯಬೇಕಾಗಿತ್ತು. ಅದನ್ನು ಹಿಂದೆಯೇ ಹೇಳಿದ್ದೇನೆ. ನಾಟಕ ನೋಡಲು ಹೋಗಿ ಎರಡು ಮಹಾ ಅಪಘಾತಗಳನ್ನು ಗೆದ್ದು ಬದುಕಿದ್ದನ್ನು ಈಗ ನೋಡಿದ್ದೀರಿ. ಮುಂದೆ ನಾನು ಶಿವಮೊಗ್ಗದಲ್ಲಿ ಓದುತ್ತಿದ್ದಾಗ, ಚಿತ್ರದುರ್ಗದ ಹೈಸ್ಕೂಲ್‌ನಲ್ಲಿ ಉಪಾಧ್ಯಾಯನಾಗಿದ್ದಾಗ ಎರಡು ಘೋರ ಅಪಘಾತಗಳಿಂದ ಪಾರಾದ ಬಗೆಗೆ ಸಂಕ್ಷೇಪವಾಗಿ ಇಲ್ಲಿಯೇ ಹೇಳಿಬಿಡುತ್ತೇನೆ.

### *ಸೌಳಂಗದ ಹತ್ತಿರ ಲಾರಿ ಅಪಘಾತ*

ಶಿವಮೊಗ್ಗದಲ್ಲಿ ನಾನು ವರ್ನಾಕ್ಯೂಲರ್ ಟೀಚರ್ಸ್ ಸರ್ಟಿಫಿಕೇಟ್ (V.T.C.) ಪರೀಕ್ಷೆಗಾಗಿ ಓದಿದುದರ ಸವಿಸ್ತೃತ ಮಾಹಿತಿಯನ್ನು ಮುಂದೆ ಒದಗಿಸುತ್ತೇನೆ. ಈಗ ಇಲ್ಲಿ ಹೇಳುವುದು ಅಲ್ಲಿ ಓದುವಾಗಿನ ಕಾಲದಲ್ಲೊದಗಿದ ಗಂಡಾಂತರ ಪ್ರಸಂಗವನ್ನು.

ನ್ಯಾಮತಿ ಸುರಹೊನ್ನೆಗಳು ಹತ್ತಿರಹತ್ತಿರದ ಎರಡು ಪ್ರಬುದ್ಧ ಊರುಗಳು. ನ್ಯಾಮತಿ ವ್ಯಾಪಾರ ಪ್ರಧಾನವಾದರೆ, ಸುರಹೊನ್ನೆ ವ್ಯವಸಾಯ ಪ್ರಧಾನವಾದದ್ದು. ಎರಡೂ ಅರ್ಧ ಮೈಲುಗಳ ಅಂತರದ ಊರುಗಳು. ಸುರಹೊನ್ನೆಯಲ್ಲಿ ನನ್ನ ಆತ್ಮೀಯ ಸ್ನೇಹಿತ ವೀರಭದ್ರಪ್ಪ ನನಗೆ ಆಪತ್ಕಾಲದಲ್ಲಿ ಮಿತಿಮೀರಿ ಸಹಾಯಮಾಡಿದ ಉದಾರಿ, ಸಜ್ಜನ, ಮಿಡಲ್‌ಸ್ಕೂಲ್ ಕನ್ನಡ ಉಪಾಧ್ಯಾಯ. ತನ್ನ ಊರಲ್ಲಿ ಕೀರ್ತನೆಮಾಡಲು ಬರಬೇಕೆಂದು ಕಾಗದ ಬರೆದ. ಕೀರ್ತನೆಯಿಂದ ಬರುವ ಧನದಿಂದಲೇ ನನ್ನ ಓದುವ ಖರ್ಚು ವೆಚ್ಚಗಳೆಲ್ಲ ಸಾಗಬೇಕು. ಬರುವ ಆರೇಳು ರೂಪಾಯಿ ಬಿಟ್ಟು ಮಾಡುವುದೇನು? ಮುಕ್ಕಾಲು ತಿಂಗಳು ನನ್ನ ಚರಿತಾರ್ಥ ಸಾಗೀತೆಂದು ಹೊರಟೆ. ಬಸ್ಸು ಸಕಾಲಕ್ಕೆ ಸಿಗದಿದ್ದರಿಂದ ಒಂದು ಲಾರಿಯಲ್ಲಿ ಕುಳಿತೆ. ಲಾರಿ ಸೌಳಂಗದ ಸಮೀಪಕ್ಕೆ ಬಂತು. ಅದೊಂದು ಅಪಾಯಕರ ಸ್ಥಳ. ಮಾರ್ಗದ ಎರಡೂ ಕಡೆ ದೊಡ್ಡ ಈಚಲು ಹಳ್ಳದ ಕೊಳ್ಳ. ಗ್ರಹಚಾರ ಕಡಿಮೆಯಾಗಿ ಅಲ್ಲಿ ಮೋಟಾರು, ಲಾರಿ ಬಿದ್ದರೆ ಪಳೆಂಟು ಆಳು ಪ್ರಮಾಣದ ಕೊಳ್ಳದಲ್ಲಿ ಪುಡಿ ಪುಡಿಯಾಗಿ, ಹೆಣ ಕೈಗೆ ಸಿಗದ ತಾಣದಲ್ಲಿಯೇ ಒಂದು ತಿರುವು. ತಿರುವಿನಲ್ಲೇ ಹಳ್ಳಕ್ಕೆ ಕಟ್ಟಿದ ದೊಡ್ಡ ಸೇತುವೆ. ನಮ್ಮ ಲಾರಿ ವೇಗವಾಗಿಯೇ

ಹೋಗುತ್ತಿತ್ತು. ಎದುರಿಗೆ ಜನಗಳನ್ನು ಹೊತ್ತು ಶಿವಮೊಗ್ಗಕ್ಕೆ ಹೋಗುವ ಬಸ್ಸು ಬರುತ್ತಿತ್ತು. ದೂರದಿಂದ ಅವು ಪರಸ್ಪರ ಕಾಣುವುದಕ್ಕೆ ಮರಗಳೆಲ್ಲ ಅಡ್ಡಿಯಾಗಿದ್ದ ಕಾರಣ ಅವು ನಿರಾತಂಕವಾಗಿ ಅಬ್ಬರಿಸಿ ಬರುತ್ತಿದ್ದವು. ಅವುಗಳ ಅಬ್ಬರ ಪರಸ್ಪರ ಡ್ರೈವರುಗಳಿಗೆ ಕೇಳಿಸಲಿಲ್ಲವೇನೊ! ಹುಸಿಬಿಸಿ ಡ್ರೈವರ್‌ಗಳೆಂದು ತೋರುತ್ತದೆ. ತಿರುಪಿನಲ್ಲಾದರೂ ಹಾರ್ನ್ ಮಾಡಬಾರದೇ? ಮಾಡಲಿಲ್ಲ. ವೇಗವಾಗಿ ತಿರುವಿನಲ್ಲಿ ಅತಿ ಸಮೀಪದಲ್ಲೇ ಬಂದು ಬಿಟ್ಟವು. ನಮ್ಮ ಲಾರಿಯ ಡ್ರೈವರ್ ಬಲಗಡೆ ತೀರ ದಂಡೆಗೇ ಹೋಗಿ ಬಿಟ್ಟ. ಕೇವಲ ಒಂದೆರಡು ಇಂಚಿನಷ್ಟು ಲಾರಿ ಬಲಕ್ಕೆ ಹೋಗಿದ್ದರೂ ಮುಗಿದೇ ಹೋಗಿತ್ತು. ಬಸ್ಸಿನವನೂ ಗಾಬರಿಗೊಂಡು ಸ್ಟೇರಿಂಗನ್ನು ಎಡ ಬಲಕ್ಕೆ ತಿರುವುತ್ತ ಸೇತುವೆ ಮೇಲಿನ ಕಟ್ಟೆಗೆ ಹೊಡೆಯುತ್ತಲೇ ಸೇತುವೆ ದಾಟಿ ಲಾರಿಯ ಎಡಭಾಗಕ್ಕೆ ಅಪ್ಪಳಿಸಿ ಗಕ್ ಎಂದು ನಿಲ್ಲಿಸಿಬಿಟ್ಟ. ಬಸ್ಸಿನಲ್ಲಿದ್ದವರು ಲೊಬೊ ಲೊಬೊ - ಎಂದು ಬಡಿದುಕೊಳ್ಳತೊಡಗಿದರು. ಕೆಲವರು ಹಿಂಬಾಗಿಲಿಂದ ಹಾರಿ ಕೈಕಾಲು ಮುರಿದು ಕೊಂಡರು. ಲಾರಿಗೆ ಬಡಿಯುತ್ತಲೇ ನಾನು ಇಂದಿಗೆ ಈ ಭೂಮಂಡಲದ ಅನ್ನ ನೀರಿನ ಋಣ ಮುಗಿಯಿತೆಂದುಕೊಂಡೆ. ಹಿಂಭಾಗದ ಒಂದು ಗಾಲಿ ಮಾತ್ರ ಹಳ್ಳದ ಪಕ್ಕದ ಈಚಲು ಮೋಟುಮರಕ್ಕೆ ಕೇವಲ ಒಂದು ಅಡಿ ಆಳದಲ್ಲಿ ಆತು ನಿಂತಿತು. ಇನ್ನೊಂದು ರಸ್ತೆಯಲ್ಲಿತ್ತು. ಮುಂಭಾಗದ ಎಡಪಾರ್ಶ್ವ ಕಿತ್ತು ಹೋಯಿತು. ಅಲ್ಲೇ ಮುಂಭಾಗದ ಎಡಪಾರ್ಶ್ವದಲ್ಲಿ ಕುಳಿತ ನಾನು ಮಾತ್ರ ಯಾವ ಅಪಾಯವಿಲ್ಲದೆ ಬದುಕಿದ್ದು ಹೇಗೆ? ಎಂದು ಇಂದಿಗೂ ಯೋಚಿಸುತ್ತಿದ್ದೇನೆ. ಬಸ್ಸಿನಲ್ಲಿದ್ದ ಅನೇಕರ ತುಟಿ ಸೀಳಿ, ಹಲ್ಲು ಮುರಿದು, ಮೂಗು ಜಜ್ಜಿ ಸುರಿಯುವ ರಕ್ತದಿಂದ ಶೂರ್ಪನಖಿ ಮುಖದಂತೆ ಆಗಿ ಲಾರಿಯವನನ್ನು ಶಪಿಸುತ್ತಿದ್ದರೆ. ಲಾರಿಯಲ್ಲಿದ್ದ ನಾನು ಮತ್ತು ಡ್ರೈವರ್‌ಗಳು ಕ್ಲೀನರ್ ಸಹಿತ ಬಸ್ಸಿನವನನ್ನು ಗದರಿಸುತ್ತ ನಿಂತೆವು. ಇಬ್ಬರೂ ಡ್ರೈವರ್‌ಗಳು ಕೂಗುದನಿ (ಹಾರ್ನ್) ಮಾಡದಿದ್ದುದು ತಪ್ಪು, ನಾನು ಮಾತ್ರ ಈ ಗಲಾಟೆಯಲ್ಲಿ ಕಾಲ ಕಳೆಯುವುದು ಬೇಡವೆಂದು ನುಸುಳಿಕೊಂಡೆ. ಇನ್ನು ಎಂದೂ ಲಾರಿಯಲ್ಲಿ ಪ್ರವಾಸ ಮಾಡಲೇ ಕೂಡದೆಂದು ನಿರ್ಣಯಿಸಿಕೊಳ್ಳುತ್ತ ಸ್ವಲ್ಪ ದೂರದಲ್ಲಿಯೇ ಇದ್ದ ಸೌಳಂಗಕ್ಕೆ ನಡೆದು ಬಂದು ಬಿಟ್ಟೆ. ಅಲ್ಲಿ ಸ್ವಲ್ಪ ಹೊತ್ತು ಕಾಯ್ದು ನ್ಯಾಮತಿಗೆ ಹೋಗುವ ಬಸ್‌ನಲ್ಲಿ ಕುಳಿತು ಹೋಗುತ್ತ ಮನಸ್ಸಿನಲ್ಲೇ ಈ ದಿನ ನಾನು ಬದುಕಿದ್ದು ಹೇಗೆ? ನಾನು ಕುಳಿತ ಲಾರಿಯ ಎಡಪಾರ್ಶ್ವ ಕಿತ್ತು ಪುಡಿಪುಡಿಯಾಯಿತು. ಎಡಪಾರ್ಶ್ವದಲ್ಲೇ ಕುಳಿತ ನನಗೆ ಮರದ ತುಂಡೋ, ಎದುರಿಗಿದ್ದ ಕನ್ನಡಿಯ ಚೂರೋ ಚುಚ್ಚದೆ ಇದ್ದುದು ಹೇಗೆ? ಯಾಕೆ? ಈ ಪ್ರಶ್ನೆಗೆ ಇನ್ನೂ ಉತ್ತರ ಸಿಕ್ಕೇ ಇಲ್ಲ. ರಾತ್ರಿ ಸುರಹೊನ್ನೆಯಲ್ಲಿ ಸಾಹುಕಾರ ರುದ್ರಪ್ಪನ ಮನೆಯ ಮುಂದೆ ಆದ ಶಿವಕಥೆಯಲ್ಲಿ ಶಿವಕೃಪೆಯೆಂದರೇನು ಎಂಬುದಕ್ಕೆ ನನ್ನ ಈ ಅಪಘಾತ ವಿವರಣೆಯೇ ಸೂಕ್ತ ದೃಷ್ಟಾಂತವಾದದ್ದು ನಿಜ. ಇಂಥದೇ ಇನ್ನೊಂದು ಪ್ರಸಂಗ ನಡೆದದ್ದು 1963ನೇ ಇಸ್ವಿಯೋ 64ನೇ ಇಸ್ವಿಯೋ ಸರಿಯಾಗಿ ಜ್ಞಾಪಕವಿಲ್ಲ. ಆಗ ನಾನು ಚಿತ್ರದುರ್ಗ ಗೌರ್ನಮೆಂಟ್ ಹೈಸ್ಕೂಲ್ ಶಿಕ್ಷಕನಾಗಿದ್ದ ಕಾಲ. ಇಷ್ಟು ಕಾಲಕ್ಕಾಗಲೆ ನಾನು ಬಹು ಪ್ರೌಢನಾಗಿ ಹೋಗಿದ್ದೆ. ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಕೀರ್ತನೆ, ಪುರಾಣ, ಪ್ರವಚನ, ಭಾಷಣ ಕಾರ್ಯಕ್ರಮಕ್ಕೆ ಹೋಗಿಬರುತ್ತಿದ್ದೆ. ಬೇಡವೆಂದರೂ ಜನ ಕೈ ಬಿಡುತ್ತಿರಲಿಲ್ಲ. ಈ ಬಗ್ಗೆ ದೀರ್ಘವಾಗಿಯೇ ಮುಂದೆ ವಿವರಿಸುತ್ತೇನೆ.

ಈಶ್ವರಪ್ಪ ಎಂಬ ನನ್ನ ಮಿತ್ರನ ಊರು ದೇವರ ಹೊಸಳ್ಳಿ. ಅದು ಚಿತ್ರದುರ್ಗ ನಾಯಕರ ಕಾಲದಲ್ಲಿ ಪ್ರಸಿದ್ಧವಾದ ಒಂದು ದೊಡ್ಡ ಊರು. ಅಲ್ಲಿ ಈ ನಾಯಕರೇ ಕಟ್ಟಿಸಿದ

ಒಂದು ಭವ್ಯದೇವಾಲಯವಿದೆ. (ಅಲ್ಲಿರುವ ದೇವರು ಯಾವುದೋ ನೆನಪಿಲ್ಲ) ಆದ್ದರಿಂದಲೇ ಆ ಊರು ದೇವರ ಹೊಸಳ್ಳಿ ಎನ್ನಿಸಿತ್ತು. ಅಲ್ಲಿ ಕಾರ್ತೀಕ ಮಾಸದಲ್ಲಿ ಆ ದೇವರ ಉತ್ಸವ ಭವ್ಯವಾಗಿ ನೆರವೇರುತ್ತದೆ. ಆ ಸಮಯದಲ್ಲಿ ಅಲ್ಲಿ ಒಂದು ಉಪನ್ಯಾಸ ನೀಡಬೇಕೆಂದು ಈಶ್ವರಪ್ಪ ನನ್ನನ್ನು ಒತ್ತಾಯ ಮಾಡಿ ಕರೆದುಕೊಂಡು ಹೊರಟ. ಬಸ್ಸು ಹೊರಟಿತು. ಬಸ್ಸಿನಲ್ಲಿ ಆಗ ಡ್ರೈವರ್ ಪಕ್ಕದಲ್ಲಿಯೇ ಎರಡು ಸೀಟ್ ಇರುತ್ತಿದ್ದವು. ಅಲ್ಲಿ ಪ್ರತಿಷ್ಠಿತರನ್ನು ಕೂಡಿಸಲಾಗುತ್ತಿತ್ತು. ಈಶ್ವರಪ್ಪ ನನ್ನನ್ನು ಮುಂದಿನ ಆ ಸೀಟ್‌ನಲ್ಲಿ ಕುಳ್ಳಿರಿಸಿ ಪ್ರತಿಷ್ಠಿತ ವ್ಯಕ್ತಿಯನ್ನಾಗಿಸಿದ. ಇನ್ನೊಂದು ಸೀಟ್ ಹಾಗೇ ಖಾಲಿಯಿತ್ತು. ಈಶ್ವರಪ್ಪ ಹಿಂದಿನ ಸೀಟ್‌ನಲ್ಲಿ ಕುಳಿತಿದ್ದ. ಬಸ್ ಹೊರಡುವ ಹೊತ್ತಿಗೆ ಬಸ್‌ಮಾಲಿಕನೂ ಎಲ್ಲಿಗೋ ಹೋಗಬೇಕೆಂದು ಮುಂದಿನ ಸೀಟ್‌ನಲ್ಲಿದ್ದ ನನ್ನನ್ನು ಡ್ರೈವರ ಪಕ್ಕಕ್ಕೆ ತಳ್ಳಿ ನಾನು ಕುಳಿತ ಸ್ಥಳದಲ್ಲಿ ಬಹುಠೀವಿಯಿಂದ ಕುಳಿತು ಬಿಟ್ಟ. ಬಸ್ ಹೊರಟಿತು.

ವೇಗವಾಗಿ ಬಸ್ಸು ಹೋಗುತ್ತಿದ್ದಂತೆ ಮುಂದೆ ಎಮ್ಮೆಗಳ ಹಿಂಡು ಮತ್ತು ಎಮ್ಮೆ ಕಾಯುವ ಓರ್ವ ಹುಡುಗ ಅಡ್ಡ ಬಂದು ಬಿಟ್ಟರು. ಕೇಳಬೇಕೆ? ವೇಗದಲ್ಲಿದ್ದ ಬಸ್ಸಿನ ಡ್ರೈವರ್ ಗಾಬರಿಗೊಂಡು ತನ್ನ ಸ್ಟೇರಿಂಗನ್ನು ಎಡಕ್ಕೂ ಬಲಕ್ಕೂ ತಿರುಗಿಸುತ್ತ ಕೊನೆಗೆ ಒಂದು ಎಮ್ಮೆಯ ಮೇಲೆ ಬಸ್ ಹತ್ತಿಸಿಯೇ ಬಿಟ್ಟ. ಬಸ್ಸು ಹತೋಟಿ ತಪ್ಪಿ ಎಡಗಡೆಯ ಹುಣಸೀಮರಕ್ಕೆ ಡಿಕ್ಕಿ ಹೊಡೆದೇ ಬಿಟ್ಟಿತು. ಬಸ್ಸಿನ ಜನಗಳು ಹೋ ಹೋ! ಎಂದು ಚೀರಾಡುತ್ತಿದ್ದಂತೆ ಬಸ್ಸಿನ ಮುಂಭಾಗ ಜಜ್ಜಿ ಬಸ್ಸಿನ ಮೇಲ್ಭಾಗವನ್ನು ಕಿತ್ತೆಸೆದು ಬಿಟ್ಟಿತು. ಮುಂದೆ ಎಡಗಡೆಯಲ್ಲಿ ಕೊನೆಗೆ ಕುಳಿತಿದ್ದ ಬಸ್ಸಿನ ಮಾಲೀಕನ ತಲೆ ಒಡೆದು ರಕ್ತಮಯವಾಗಿ ಎಚ್ಚರದಪ್ಪಿ ಬಿದ್ದುಬಿಟ್ಟ. ಎಡಗೈಯೂ ಮುರಿದು ಹೋಗಿದೆ ಎಂಬುದು ಆಮೇಲೆ ಗೊತ್ತಾಯಿತು. ಎಡಗಡೆಯ ಕಬ್ಬಿಣದ ಸರಳುಗಳೆಲ್ಲ ಕಿತ್ತು ಬಸ್ಸಿನಲ್ಲಿ ಕುಳಿತವರ ಮೇಲೆ ಹರಿಹಾಯ್ದು ಅವರನ್ನು ಗಾಯಗೊಳಿಸಿ ಅಲ್ಲೋಲ ಕಲ್ಲೋಲಗೊಳಿಸಿಬಿಟ್ಟವು. ಹಲ್ಲು ಮುರಿದವರು, ಹೊಟ್ಟೆ-ರಟ್ಟೆಗಳನ್ನು ಹರಿದುಕೊಂಡು ಬಾಯಿಬಾಯಿ ಬಡಿದುಕೊಳ್ಳುತ್ತ, ಡ್ರೈವರನನ್ನು ಶಪಿಸುತ್ತ ನೆಲದ ಮೇಲೆ ಉರುಳಾಡುತ್ತಿರುವ ದೃಶ್ಯ ಹೃದಯ ವಿದ್ರಾವಕವಾಗಿ ಹೋಗಿತ್ತು. ಎಂಜಿನ್ ಮರಕ್ಕೆ ಬಡಿದಿದ್ದರೆ ಆ ದಿನ ನಾನೂ ಪರಂಧಾಮಕ್ಕೆ ತೆರಳಬೇಕಾಗಿತ್ತು. ಯಾವ ಅಪಾಯವೂ ಇಲ್ಲದೆ ಈ ದುರಂತದಲ್ಲಿ ಪಾರಾದದ್ದು ಒಂದು ದೊಡ್ಡ ಪವಾಡವೇ ಆದಂತಾಯಿತು. ಈಶ್ವರಪ್ಪ ಚಿಕ್ಕಪುಟ್ಟ ಗಾಯಗಳಿಂದ ಪಾರಾದ. ನಾನೂ ಪಾರಾದೆ, ಹೇಗೆ ಪಾರಾದೆ? ಎಂಬುದು ಬಿಡಿಸಲಾಗದ ಸಮಸ್ಯೆ. ಬಸ್ಸಿನ ಮಾಲೀಕ ಬರದಿದ್ದರೆ ಅವನಿಗೆ ಮಾಡಿದ ಮಾನಮನ್ನಣೆಯನ್ನು ಗಿಡ ನನಗೇ ಮಾಡುತ್ತಿತ್ತು ಅಲ್ಲವೆ? ಇದೊಂದು ಭಾವುಕರ ತಿಳುವಳಿಕೆ ಎಂದರೂ ಸರಿ. ಇದೊಂದು ಈಶ್ವರ ಕೃಪೆಯೆಂದು ನನ್ನ ನಂಬಿಕೆ.

# ಅಧ್ಯಾಯ - 5

1938ನೆಯ ಇಸ್ವಿಯ ಅಕ್ಟೋಬರ್-ನವೆಂಬರ್ ತಿಂಗಳುಗಳಿಂದ 1943ನೆಯ ಇಸ್ವಿ ಏಪ್ರಿಲ್ ಅಂತ್ಯದವರೆಗೆ ಬನವಾಸಿಪ್ರಾಂತದಲ್ಲಿರುವ ಇದು 'ಸುಖದಾಗರಂ ಸಿರಿಯ ಪುಟ್ಟಿದ ತಾಣ' ವೆನ್ನುವಂತೆ ಇದ್ದು ಸರ್ವವಿಧದಲ್ಲೂ ನನ್ನೊಡನೆ ಸ್ಪಂದಿಸುತ್ತ ನನ್ನ ಪುರೋಭಿವೃದ್ಧಿಯ ತಳಪಾಯ ಹಾಕಿದ ಹಿರೇಕಾಂಶಿಯ ಉಪಾಧ್ಯಾಯತ್ವದ ಅವಧಿಯಲ್ಲಿ ನನ್ನ ಸುಪ್ತಪ್ರತಿಭೆಗಳೆಲ್ಲ ಹೊರಬರಲು ಯೋಗ್ಯ ಸನ್ನಿವೇಶವೊದಗಿದುದು ನನ್ನ ಪುಣ್ಯ. 'ಸಂಸಾರದೊಳಿನ್ನೆನ್ನವೊಲೇಂ ಸಯ್ಪಂ ಪಡೆದರೊಳರೇ' ಎಂದು ನನ್ನನ್ನು ಕುರಿತು ನಾನೇ ಹೇಳಿಕೊಳ್ಳುತ್ತ ಕಾಲ ಕಳೆದೆ. ಇದು ನನ್ನ ಜೀವನದ ಉದಯೋನ್ಮುಖವಾದ ಮೊದಲ ಅಧ್ಯಾಯ. ಈ ಜೀವನ ಹಸಿ-ಬಸಿ ಬೆರೆತದ್ದು ಇಲ್ಲಿ ವಿವೇಕವೂ ಇತ್ತು; ಅವಿವೇಕವೂ ಇತ್ತು. ವಿದ್ಯೆಯೂ ಇತ್ತು; ಅವಿದ್ಯೆಯೂ ಇತ್ತು. ಪರಿಪಕ್ವವಲ್ಲ. ಅದಕ್ಕೇ ಹಸಿ ಬಿಸಿ ಅಂದದ್ದು. ಕೇವಲ ಸಾಧನಾ ಹಂತ ಸಾಧಿಸುತ್ತಲೇ ಕ್ರಿಯಾಮಗ್ನನಾಗಿದ್ದ ಕಾಲ. ತನ್ನ ಬಗ್ಗೆ ತನಗಿಂತ ಹೆಚ್ಚು ಅನ್ಯರಿಗೆ ತಿಳಿಯುವುದಿಲ್ಲ. ಅವರವರ ಮನ ಅವರವರಿಗೆ ಸಾಕ್ಷಿ. ಅದನ್ನೇ ಮನಸ್ಸಾಕ್ಷಿ ಎನ್ನುವುದು. ನನ್ನ ಮನಸ್ಸು ಇನ್ನು ನನಗೆ ಹೇಳುತ್ತಿತ್ತು. ನೀನು ಈಗಿರುವಷ್ಟೇ ಅಲ್ಲ. ಇನ್ನೂ ಏನೇನೋ ಆಗಿದ್ದೀಯೆ. ನಿನ್ನ ವೃತ್ತಿಗೂ ಒಂದು ಗರುಡಿಯಿದೆ. ಶಾಶ್ವತವಾಗಿ ಆಚರಿಸಲು ನೀನೀಗ ಆರಿಸಿಕೊಂಡಿರುವ ವೃತ್ತಿಗೆ ತಕ್ಕ ಶಾಸ್ತ್ರೀಯತೆಯ ಸ್ಥಿತಿಗೇರಿಲ್ಲ. ಏನಿದ್ದರೂ ಇದುವರೆಗೆ ಬುಡುಬುಡಕಿಯಾಡಿದ್ದೀಯೆ. ಇದಿಷ್ಟೇ ವಸ್ತು ಸಿದ್ಧಿಗೆ ಸಾಲದು. ಈ ಮಾರ್ಗದಲ್ಲಿ ನೀನು ಏರುವುದು ಬಹಳ ಇದೆ. ಏರುವ ಶಕ್ತಿ ಸಾಮರ್ಥ್ಯಗಳನ್ನು ಈ ಊರೇ ನಿನಗೆ ಒದಗಿಸಿದೆ, ಮುಂದೆಯೂ ಒದಗಿಸೀತು. ಒದಗಿಸದಿದ್ದರೂ ಈಗ ಒದಗಿಸಿರುವುದೇನು ಕಡಿಮೆಯಲ್ಲ. ಏರಲು ಪ್ರಯತ್ನಿಸು. ಧೈರ್ಯಗುಂದುವ ಅವಶ್ಯಕತೆಯಿಲ್ಲ. ಏರಲು ಪ್ರಯತ್ನಿಸಿದರೆ ಯಶಸ್ಸು ಖಂಡಿತ. ಅದಕ್ಕಾಗಿ ಶ್ರಮಿಸು ಎಂದು ಪದೇ ಪದೇ ತಟ್ಟಿತಟ್ಟಿ ಎಚ್ಚರಿಸುತ್ತಿತ್ತು. ಇಷ್ಟು ಹೊತ್ತಿಗಾಗಲೆ, ಆತ್ಯಂತಿಕ ದಾರಿದ್ರ್ಯದ ದಳ್ಳುರಿಯಲ್ಲಿ ಬೆಂದು ಹೋಗಿದ್ದ ನನ್ನ ಮನೆಯ ದಾರಿದ್ರ್ಯಾನಲವನ್ನು ಹಿರೇಕಾಂಶಿಯಲ್ಲಿನ ನನ್ನ ಸಣ್ಣದೇ ಆದರೂ ಸತ್ವಪೂರ್ಣವಾದ ವೃತ್ತಿ ಲಭ್ಯ ಪ್ರತಿಫಲದ ನೀರಿನಿಂದ ಆರಿಸಿದ್ದೆ. ಪುನಃ ನಮ್ಮ ಮನೆತನ ವ್ಯವಸಾಯ ಜೀವನದಲ್ಲಿ ಚಿಗುರೊಡೆದು ಬೆಳೆಯ ತೊಡಗಿತು. ಕಂದಿ ಕುಂದಿ ಹೋದ ನಮ್ಮ ಮನೆ ಮಂದಿಯ ಮುಖದಲ್ಲಿ ಆನಂದದ ಹೊನಲು ಹರಿಯಲು ಪ್ರಾರಂಭಿಸಿತ್ತು. ಸಾಲಕ್ಕೆ ಒತ್ತೆ ಹಾಕಿದ್ದ ಐದು ಎಕರೆ ಮನೆ ಹೊಲವನ್ನು ಸಾಲ ತೀರಿಸಿ ಬಿಡಿಸಿದ್ದಾಯಿತು. ಜೊತೆಗೆ ಇನ್ನೂ ಐದಾರೆಕರೆ ಜಮೀನನ್ನು ಕೋರಿನಂತೆ ಮಾಡಲು ಹಿಡಿಯಲಾಯಿತು. ಎತ್ತು ಚಕ್ಕಡಿ ಕೊಂಡುಕೊಂಡದ್ದಾಯಿತು. ಕೊಟ್ಟಿಗೆ ದನ ಕರುಗಳಿಂದ ತುಂಬಿತು. ದನಕರುಗಳಿಂದ ಕೂಡಿದ ಕೊಟ್ಟಿಗೆಯೇ ವ್ಯವಸಾಯಗಾರರ ಲಕ್ಷ್ಮಿ ತಾನೆ! ಅದನ್ನವರು ಹಟ್ಟಿಲಕ್ಷ್ಮಿ ಎಂದು ವರ್ಷಕ್ಕೊಂದಾವರ್ತಿ ಕೊಟ್ಟಿಗೆಯಲ್ಲೇ ಪೂಜಿಸುವುದು ಉಂಟಲ್ಲವೆ? ಅವರ ಬಂಡಿಯೂ ಲಕ್ಷ್ಮಿಯೇ. ಒಟ್ಟಿನಲ್ಲಿ ವ್ಯವಸಾಯಗಾರರ ಪರಿಕರಗಳೆಲ್ಲ ಅವರ ದೇವರುಗಳೇ. ಪೂರ್ಣವಿಲ್ಲದಿದ್ದರೂ ತತ್ಕಾಲೋಚಿತವಾಗಿ ಎಲ್ಲ ಪರಿಕರಗಳನ್ನು ಮನೆಗೆ ಒದಗಿಸಿದ ಮೇಲೆ ನಾನು ಶಿಕ್ಷಣಕ್ಷೇತ್ರದಲ್ಲಿ ಇನ್ನಷ್ಟು ಬೆಳೆಯೋಣ ಎಂಬ ಮನದ ಆಸೆ ಚಿಗುರೊಡೆಯಿತು. ನಮ್ಮ ಮನೆತನಕ್ಕೆ ಇಷ್ಟೆಲ್ಲ ನನ್ನಿಂದಲೇ ಆಯಿತೆಂದಲ್ಲ. ಆಪತ್ಕಾಲದಲ್ಲಿ ಅವರಿಗೆ ಅಷ್ಟಿಷ್ಟು ನೆರವಾದುದೇ ಅವರು ಬೆಳೆಯಲು ಕಾರಣವಾಯಿತು. ಒಂಬತ್ತೂ ಹತ್ತೂ ವರ್ಷ ಕಾಲ ಆ ಕೆಲಸವನ್ನು ನಾನು ಅವಿಶ್ರಾಂತವಾಗಿ ಯುದ್ಧದಂತೆ ಮಾಡಿದೆನೆಂಬ ಹೆಮ್ಮೆ

ಇನ್ನು ಮುಂದೆ ಎಷ್ಟೇ ಖರ್ಚನ್ನಾದರೂ ಸ್ವತಃ ದುಡಿದು ಸಂಪಾದಿಸಿಕೊಂಡು ವಿದ್ಯಾಭ್ಯಾಸ ಮಾಡೇ ತೀರಬೇಕೆಂಬ ಹಟತೊಟ್ಟಿದ್ದಂತೂ ನಿಶ್ಚಯ.

ಹಿರೇಕಾಂಶಿ ಊರಿನವರಿಗೆ ನಾನು ಶಾಲೆಯನ್ನು ಬಿಟ್ಟು ವಿದ್ಯಾಭ್ಯಾಸಕ್ಕೆ ಹೋಗುತ್ತೇನೆಂಬ ಸುದ್ದಿ ತಿಳಿದು ಹೋಯಿತು. ನಿಜವಾಗಿ ಬಹುಜನ ಮನೆಮನೆಗೆ ಕರೆದುಕೊಂಡು ಹೋಗಿ ಏನಾಗಿದೆ ನಿನಗೆ? ಊರು ಬಿಡುವುದೇಕೆ? ಊರು ಚಂದವಾಗಿ ಕಲಕಲ ಅನ್ನುತ್ತಿದೆ. ನೀನು ಯಾವ ಮುಹೂರ್ತದಲ್ಲಿ ಊರಿಗೆ ಬಂದೆಯೋ ಏನೋ ಹೊಲಗದ್ದೆ ಚೆನ್ನಾಗಿ ಬೆಳೆಯ ತೊಡಗಿವೆ. ಏನೆಲ್ಲ ಪ್ರಶಂಸೆ ಅತ್ಯಂತ ವಾತ್ಸಲ್ಯಭರಿತ ದೃಷ್ಟಿಯಿಂದ ನೋಡುತ್ತಿದ್ದ ಸ್ತ್ರೀಯರು ನಾನಿದ್ದಲ್ಲಿಗೇ ಬಂದು ನಿಮಗೆ ನಾವೇನು ಕಡಿಮೆ ಮಾಡಿದ್ದೇವೆ? ಊರು ಬಿಡುವುದಕ್ಕೆ ಕಾರಣವೇನು? ಇತ್ಯಾದಿ ಕೇಳುವವರೇ. ಅವರಿಗೆ ನಾನು ಸಮಾಧಾನ ಪಡಿಸುವುದೇ ಸಮಸ್ಯೆಯಾಯಿತು. ಓದುವುದಕ್ಕೆ ಹೋಗುತ್ತೇನೆಂದಾಗ ಅವರೆಲ್ಲ ಅಪಹಾಸ್ಯ ಮಾಡುತ್ತ ನೀವೇನು ಚಿಕ್ಕಮಕ್ಕಳೇನ್ರೀ ಓದಾಕ? ಗಡ್ಡ ಮೀಸೆ ಬಿಟ್ಟುಕೊಂಡು ಓದಾಕ ಹೋಗ್ತಾರಂತ ಓದಾಕ! ಸುಮ್ನೆ ಮದುವೆ ಮುಂಜಿ ಮಾಡ್ಕೊಂಡು ಇಲ್ಲೇ ತುಸು ಗದ್ದೆ ಹೊಲ ಮಾಡಿಕೊಂಡು ಒಂದು ಮನೆ ಕಟ್ಕೊಂಡು ಸಾಲಿ ಓದಿಸ್ಕೊಂಡು ರಾಮಾಯಣ ಮಹಾಭಾರತದ ಆಟಾ ಕುಣಿಸಿಕೊಂಡು ಸುಮ್ನೆ ಇರ್ರಿ. ನಮ್ಮೂರ್ನಾಗ ಗದ್ದೆ ಹೊಲಕ್ಕೇನು ಬ್ಯಾನಿ. ಕೆರಿತೆಳಗ ಪಡಾದ್ದು ಕುಂತಾವ, ಹಪ್ತ ಕಟ್ಟಾಕ ಗತಿಯಿಲ್ಲ. ಇತ್ಯಾದಿ ಹೇಳುವವರೇ. ಅವರಿಗೆ ನಾನು 'ನಾನೆಲ್ಲಿ ಊರು ಬಿಟ್ಟಿದ್ದೇನೆ. ಇಲ್ಲೇ ಇದ್ದೇನಲ್ಲಾ! ಓದಲು ಹೋಗಬೇಕೆಂದು ಯೋಚಿಸಿದ್ದೇನೆ ಅಷ್ಟೆ' ಎಂದು ಮನದ ನಿಶ್ಚಯವನ್ನು ತಿಳಿಯಗೊಡದೆ ಹಾರಿಕೆ ಸಮಾಧಾನ ಹೇಳಿ ಬಿಡುತ್ತಿದ್ದೆ. ಆ ಊರಿನಲ್ಲಿ ಮಾತೃಸಮಾನರಾದ ಆರೇಳು ಜನರಾದರೂ ಸ್ತ್ರೀಯರಿದ್ದರು. ಅವರ ವಾತ್ಸಲ್ಯವನ್ನು ಎಷ್ಟು ನೆನೆದರೂ ಕಡಿಮೆಯೇ. ಆರ್ದ್ರಿ ಮಠದ ಶಿವಯ್ಯನವರಿಗೆ ಈ ಸುದ್ದಿ ಹೇಗೋ ಬಡಿಯಿತು. ಅವರು ನೇರವಾಗಿ ನರಳುತ್ತಲೇ ನನ್ನ ಕೊಠಡಿಗೆ ಬಂದರು. 'ಏನಾಸ್ತರ, ಒಂದು ಹೊಸ ಸುದ್ದಿ ಕೇಳಿದ್ಹಾಂಗಾಯ್ತಲ್ಲ! ಊರು ಬಿಡ್ತೀರಂತ? ಏನು ಸಮಾಚಾರ? ನಾವು ಊರಾಗ ನಿಮಗೇನು ಕಡ್ಮಿ ಮಾಡೇವಿ ಹೇಳ್ಯಾರ ಹೇಳ್ರೆಲ್ಲ?' ಎಂದು ಒಂದೇ ಉಸುರಿಗೆ ನಾಲ್ಕಾರು ಪ್ರಶ್ನೆ ಎಸೆದು ಬಿಟ್ಟರು. ನಾನು 'ಹಾಗಲ್ಲ ಶಿವಯ್ಯನವರೇ, ನೀವು ನನ್ನನ್ನು ಚೆನ್ನಾಗಿ ನೋಡಿಕೊಂಡಿಲ್ಲ ಅಂತ ಅಲ್ಲ. ನಿಮ್ಮ ಊರ ಉಪಕಾರವನ್ನು ಎಷ್ಟು ಜನ್ಮವೆತ್ತಿ ಬಂದರೂ ನನ್ನಿಂದ ತೀರಿಸಲು ಸಾಧ್ಯವಿಲ್ಲ. ನಾನು ಮುಂದೆ ಇನ್ನು ಸ್ವಲ್ಪ ಓದಬೇಕೆಂಬಾಸೆ. ಬಾಲ್ಯದಲ್ಲಿ ನಾನು ಓದುವ ಕಾಲಕ್ಕೆ ನಮ್ಮ ಮನೆತನ ಘೋರದಾರಿದ್ರ್ಯದ ದವಡೆಗೆ ಸಿಕ್ಕು ನನಗಾಗಿ ಹತ್ತು ರೂಪಾಯಿ ಖರ್ಚುಮಾಡುವ ಸಾಮರ್ಥ್ಯವನ್ನು ಕಳೆದುಕೊಂಡಿತು. ಹೈಸ್ಕೂಲಿಗೆ ಸೇರಬೇಕೆಂದು ಹಾವೇರಿಗೆ ಹೋಗಿ ಒಂದೇ ಒಂದು ದಿನ ಹೈಸ್ಕೂಲಿಗೆ ಹೋಗಿ ಅಲ್ಲಿ ನಾನು ಸೇರಿಕೊಳ್ಳುವುದಕ್ಕೇ ಮೊದಲು ಕೊಡಬೇಕಾದ ಫೀಜು ಕಟ್ಟಲು ಶಕ್ಯವಿಲ್ಲದೆ ಎಲ್ಲಿ ಎಲ್ಲಿಯೋ ಅಲೆದಾಡಿ ಒಂದೂ ಸರಿ ಹೋಗದೆ ಊರಿಗೆ ಬಂದು ನಾಲ್ಕೈದು ವರ್ಷ ವ್ಯವಸಾಯ ಮಾಡಿ ಇಗೋ ನಿಮ್ಮೂರಿಗೆ ಬಂದ ಸನ್ಮುಹೂರ್ತನದಿಂದ ಈಗ ಒಂದು ಸ್ಥಿತಿಗೆ ಮನೆತನ ನಿಲ್ಲುವಂತಾಯಿತು. ನಿಮ್ಮೆಲ್ಲರ ವಿಶ್ವಾಸ ದೊಡ್ಡದು. ಓದಬೇಕೆಂಬ ನನ್ನ ಬಯಕೆಗೆ ಇನ್ನೂ ಪೂರ್ಣವಿರಾಮ ಬಿದ್ದಿಲ್ಲ. ಅದಕ್ಕಾಗಿ ಮನೆಯವರು ಹಮ್ಮಿಕ್ಕೊಂಡ ಮದುವೆಯನ್ನು ತಿರಸ್ಕರಿಸಿ, ನನ್ನ ತಮ್ಮನಿಗೆ ಮದುವೆ ಮಾಡಿ ಬಂದೆ. ಇನ್ನೂ ನಿಮ್ಮ ಊರಿನಲ್ಲೇ ಇದ್ದೇನೆ. ಏನು ಓದಬೇಕು, ಎಲ್ಲಿ ಓದಬೇಕು ಎಂಬುದನ್ನು ಇನ್ನು ನಿರ್ಧರಿಸಿಲ್ಲ. ಅಂತೂ ನಾನು

ಇನ್ನಷ್ಟು ಮುಂದೆ ಓದಲೇಬೇಕು ಎಂಬಾಸೆ ಕೈಗೂಡಿದರೆ ಸಂತೋಷವೇ. ಇಲ್ಲದಿದ್ದರೆ ನಿಮ್ಮೂರು ಇದ್ದೇ ಇದೆಯಲ್ಲ' ಎಂದೆ.

"ಮಾಸ್ತರ, ಊರು ಬಿಡಬ್ಯಾಡಪಾ! ಊರು ಚೆಂದ ಮಾಡಿಬಿಟ್ಟೆ ಮಾರಾಯಾ! ನೀನು ಓದೋದೂ ಬ್ಯಾಡ, ಬರಿಯೋದೂ ಬ್ಯಾಡ. ನಿಮ್ಮೂರಿಂದ ನಿಮ್ಮ ಅಪ್ಪ, ಅಮ್ಮ ಅಣ್ಣಾ, ತಮ್ಮ ಅದಾರಂತೀಯಲ್ಲ. ಅವರನ್ನ ಇಲ್ಲಿಗೆ ಕರೆಸು. ನನ್ನದು ಎಪ್ಪತ್ತೈದು ಎಕರೆ ಒಂದೇ ಒಂದು ಹೊಲದ ಬಯಲು ಐತಿ. ಹೋದ ವರ್ಷದ ಹತ್ತೆ ಕಟ್ಟಾಕಾಗಲಿಲ್ಲ. ನಾನು ನನ್ನ ಮಗ ಹೆಂಡತಿ ಮೂರೇ ಜನಾ. ನಮ್ಮನ್ಯಾಗ ಮೂವರೂ ಈ ಹಾಳು ಚಳಿಜ್ವರದಿಂದ ಹೊಟ್ಟೆ ಬಾಯ್ಸಿಕೊಂಡು ಕುಂತೇನಿ. ಹೊಲದಾಗೆ ಹೆಜ್ಜೆ ಇಡಂಗಿಲ್ಲ. ಹೊಲ ಮಾಡಂಗಿಲ್ಲ. ಈ ವರ್ಷ ಹಪ್ತೆ ಕಟ್ಟೋ ಹೊತ್ತು ಬಂದೈತಿ. ಎಳ್ಡೂ ವರ್ಷದ ಹಪ್ತಿ ಕಟ್ಟಾಕ ನನ್ನ ಹಣ್ಯಾಗ ಬಿರ್ದಿಲ್ಲ. ನೀನು ಏನಾರಾ ಮಾಡಿ ಎಳೂ ವರ್ಷದ್ದು ಹಪ್ತೆ ಕಟ್ಟಿಬಿಡು. ಅದನ್ನೆಲ್ಲ ನಿನ್ನ ಹೆಸರ್ಗೆ ಖಾತೆ ಬದ್ಲಾಸಿ ಕಬ್ಜಾಕೊಟ್ಟಬಿಡ್ತಿನಿ. ಮುಂದ ಲಿಲಾವಿಗೆ ಬಂದೇ ಬರ್ತೈತಿ. ಆಗ ಗೊಂದಿಗಿಂದಿ ಜನ ಹಿಡ್ಕಂಡು ಬಿಡತಾರಪ. ಮನ್ನೆ ಮನ್ನೆ ನಮ್ಮ ಹೊಲದ ಕೆಳಗಿನ ಕೌರದ ಗದಿಗೆಪ್ಪನ ಕೆರಿ ಕೆಳಗಿನ ಗದ್ದೀನ ಸೇವ್ಯಾಗ ಗೊಂದಿಯವರು ಹೊಡ್ಕಂಡ್ಬಿಟ್ರು. ಇಪ್ಪತ್ತೆಕರೆ ಗಿಡ ಐತಿ ಮೂಪ್ಪತ್ತೆಕರೆ ರಾಗಿ ಬೆಳಿ ಹೊಲ ಐತಿ. ಹದಿನೈದೆಕ್ರೆ ಗದ್ದಿ ಎಲ್ಡೆಕರೆ ತ್ವಾಟ, ತ್ವಾಟದ ಬಾವಿ, ನಾಕಾರು ತೆಂಗಿನ ಗಿಡಾನು ಆದಾವು. ಉಳ್ದದ್ದೆಲ್ಲಾ ದನಾ ಮೇಯೋ ಹುಲ್ಲುಗಾವಲೈತಪ್ಪಾ! ಹೊಲಾ ಮಾಡರಿಗೆ ಎಲ್ಲ ಅನುಕೂಲ ಐತೆಪಾ! ನಮ್ಮ ಹಿರೋರ ಆಸ್ತಿ ಉಳಿಸಿಕೊಳ್ಳಕ ನನ್ಗೂ ಯೋಗ್ಯತಿಲ್ಲ, ನನ್ಮಗನಿಗೆ ಮೊದ್ಲು ಇಲ್ಲ. ರೋಗ್ದಾಗ ಸತ್ಗಂತಾ ನಿಮ್ಮ ಸಾಲಿಗೇ ಬರ್ತನಲ್ಲಾ! ಅದ್ಕ ನಾನು ಏನೂ ಗತಿಯಿಲ್ದ ಬೀಡಿ ಕಟ್ಕೊಂಡು ಕಾಲಾನೂಕಾಕ ಹತ್ತೆನಿ. ನಮ್ಮ ಹೆಂಗಸರ್ಗೂ ಮಯ್ಯಾಗ ಚೆನ್ನಾಗಿಲ್ಲ. ಅದರಲ್ಲೆ ಕೂಲಿ ಕಂಬಳಿಗೆ ಹೋಗಿ ಅಷ್ಟು ಇಷ್ಟು ದುಡಿತೈತಿ. ಅದರ ಮ್ಯಾಲಿಂದಾನ ಹ್ಯಾಂಗೋಹಾಂಗ ಬದ್ಕೈವೆಪಾ. ಆ ಹೊಲಾ ಮಾಡ್ಕೊಂಬಿಡು. ಬಡ್ತನ ಬರಲಾರ್ದು ಮಾಸ್ತರ" ಎಂದು ಹೇಳುತ್ತ ಗಳಗಳ ಅತ್ತ ದೃಶ್ಯ ನನ್ನ ಹೃದಯವನ್ನು ತಲ್ಲಣಗೊಳಿಸಿಬಿಟ್ಟಿತು. ಅಂದಿನ ಅವನ ವಾತ್ಸಲ್ಯಭರಿತ ಮಾತು, ನನ್ನ ಬಗೆಗಿನ ಕಕ್ಕುಲತೆ, ತನ್ನ ಹೀನಸ್ಥಿತಿಯ ಬವಣೆ, ಕಣ್ಣೀರು ಇಂದಿಗೂ ನೆನಪಾಗಿ ಬಡತನವನ್ನು ಕಂಡುಂಡ ನನ್ನ ಮನಸ್ಸನ್ನು ಕ್ಷತವಿಕ್ಷತಗೊಳಿಸಿಬಿಡುತ್ತದೆ.

ಈ ಪೂರ್ವದಲ್ಲಿ ಬಸನಗೌಡರು ಮತ್ತು ಅವರ ತಾಯಿ ಬಸಮ್ಮಜ್ಜಿಯವರು ನಿನಗೆ ಇಪ್ಪತ್ತು ಮೂವತ್ತೆಕರೆ ಕೆರೆ ಕೆಳಗಿನ ಗದ್ದೆಯನ್ನು ಕೊಡಿಸುತ್ತೇವೆ ಮಾಡುವಂತಿದ್ದರೆ ನೋಡು. ಬಹಳಷ್ಟು ಕೆರೆ ಕೆಳಗಿನ ಉತ್ಕೃಷ್ಟ ಗದ್ದೆಗಳು ಸರಕಾರದ ಪಡಾ ನಂಬರಾಗಿಬಿಟ್ಟಿವೆ. ಇನ್ನು ಬೇಕಾದರೆ ಹೇಳು. ಸಾಬರದ ದಾರಿಯಲ್ಲಿರುವ ನರಿಗುದ್ದಿನ ನಾಲ್ವತ್ತೆಕರೆ ಸರಕಾರೀ ಪಡ ಇದೆ. ಅದರಲ್ಲಿ ಹಕ್ಕಲ ಬೆಳೆ ಬೆಳೆಯಬಹುದು. ಶಕ್ತಿಯಿದ್ದರೆ ಅದನ್ನು ಗದ್ದೆ ಮಾಡಿಕೊಳ್ಳಬಹುದು ಇತ್ಯಾದಿ ಹೇಳಿದ್ದರು. ಆದ್ರ್ರೀ ಮಠದ ಶಿವಯ್ಯನವರ ಹೊಲದ ಸುದ್ದಿಯನ್ನು ಯಾರು ಯಾರೋ ನನಗೆ ಹೇಳಿದ್ದರು. ಈ ಎಲ್ಲ ವಿಷಯವನ್ನು ಊರಿಗೆ ಹೋಗಿ ನಮ್ಮ ತಂದೆತಾಯಿಯರಿಗೆ ದೊಡ್ಡಪ್ಪನಿಗೆ ಹೇಳಿದ್ದೆ. ಅಯ್ಯೋ! ಬ್ಯಾಡಪ್ಪಾ ಆ ಮಲ್ನಾಡಿಗೆ ಹೋದ್ರ ಸಾಯಕ ಹೋಗ್ಬೇಕು ನೋಡು! ಗದ್ದಿ ಹೊಲಾ ಮಾಡಾಕಲ್ಲ. ಹೀಗೆ ಸರ್ವಥಾ ನಿಷೇಧ ಮಾಡುತ್ತ ನಿನ್ನನ್ನು ಆಲೂರಾಗ ಮುಂದ ಬಿಡಾಕೂ ಮನಸಿಲ್ಲ. ಏನೋ ನಮ್ಮ ಬಡತನಕ ಕಳಿಸಿದ್ವಾಯ್ತು, ನೀನು ಚಳಿಜರದಿಂದ ಮುಖಾಯೆಲ್ಲ ಬಿಳ್ಚಿಗೆಂಡು ಒಂದು ಥರಾ ಆಗಿ ಹೋಗಿದ್ದಿಯಂತಾ! ಭೀಮ ಇದ್ದಂಗೆ ಇದ್ವಿ,

ಈಗ ಮೊದಲಿನ ಆಳು ಇಲ್ಲ. ನಮ್ಮ ಬಡ್ತನ ಬಂಗ ಇದ್ದ ಇರ್ರೈತಿ. ಆಲೂರು ಬಿಟ್ಟಿಟ್ಟು ಮದ್ದಿಗಿದ್ದಿ ಮಾಡಿಕೊಡು ಇಲ್ಲೆ ಹೊಲಾಗಿಲಾ ಮಾಡ್ಕೊಂಡು ಇದ್ರಾತು. ದೇವ್ರು ಮಾಡಿದಾಂಗ ಆಗಲಿ ಇತ್ಯಾದಿ ಹೇಳಿದ್ದರು. ನನಗೇನೋ ಜಮೀನು ಮಾಡುವ ಮನಸ್ಸಿತ್ತು. ಮಾಡುವರಿಲ್ಲದೆ ಜಮೀನು ಮಾಡಿಯಾದರೂ ಮಾಡುವುದೇನು? ಹಪ್ತೆ ಹೊಡೇಕೊಡೋದು ಹೇಗೆ? ವರ್ಷವೂ ಇಷ್ಟೆಲ್ಲ ಹೊಲ ಹಿಡಿದರೆ ನೂರು ನೂರಿಪ್ಪತ್ತು ರೂಪಾಯಿ ಕೊಡಬೇಕಾದರೆ ಇಪ್ಪತ್ತೈದು ಮೂವತ್ತು ಚೀಲ ಜೋಳ ಮಾರಬೇಕು, ಇಲ್ಲವೆ ಒಂದು ನಗ (ಒಂದು ನಗ ಅಂದರೆ 48 ಕ್ವಾರ್ಟರ್ ಅಥವಾ ಮಣ) ಅದಕ್ಕೂ ಹೆಚ್ಚು ಹತ್ತಿ ಮಾರಬೇಕು. ಎಲ್ಲಿಂದ ತರುವುದು? ಈಗ ನಮ್ಮ ಹೊಲದಲ್ಲಿ ಬೆಳೆಯುವ ಜೋಳ ನಮ್ಮ ಊಟಕ್ಕೆ ಆಗುತ್ತಿಲ್ಲ. ಮಳೆ ಇಲ್ಲದೆ ಅಥವಾ ಹೆಚ್ಚುಮಳೆಯಾಗಿ, ಬೆಳೆ ಒಂದಿಲ್ಲೊಂದು ರೀತಿಯಿಂದ ಕಡಿಮೆಯೇ. ಸರಿಯಾಗಿ ಮಳೆ ಬಂದು ಬೆಳೆ ಬೆಳೆದರೂ ಹುಳುಗಳ ಕಾಟ ಬೇರೆ. ಹತ್ತಿಯೂ ಏಕೋ ಏನೋ ಈಚಿನ ದಿನಮಾನದಲ್ಲಿ ಚೆನ್ನಾಗಿ ಬೆಳೆಯುತ್ತಿಲ್ಲ. ಬೆಳೆದರೂ ಹುಬ್ಬಳ್ಳಿಗೆ ನಾಲ್ಕು ಅಂಡಿಗೆ ಹೇರಿಕೊಂಡು ಹೋಗಿ ದಲಾಲಿ, ಹಮಾಲಿ, ಧರ್ಮಾದಾರ, ವಖಾರಬಾಡಿಗೆ ಖರ್ಚು ವೆಚ್ಚ ಎಲ್ಲಾ ಮುರಿದುಕೊಂಡು ಕೈಗೆ ಬರುವುದು ಅರವತ್ತೈದು, ಎಪ್ಪತ್ತು ರೂಪಾಯಿ ಮಾತ್ರ. ಈ ಹಣದಲ್ಲೆ ಎತ್ತಿಗೆ ಹತ್ತಿಕಾಳು, ಚಿಮಿಣಿ ಎಣ್ಣೆ ಡಬ್ಬ, ಉಪ್ಪು, ಬಟ್ಟೆ ಬರಿಗಳಿಗೇ ಸಾಲದು. ಮೇಲೆ ಹಪ್ತೆ ಹುಂಡೇ ಅಂತಾ ಬೇರೆ ಖರ್ಚು ಇದೆ. ವರ್ಷವೆಲ್ಲ ಸಂತೆಪೇಟೆ ಹಬ್ಬ ಹುಣ್ಣಿಮೆ 'ಮದುವೆ ಮುಂಜಿ ಇತ್ಯಾದಿಗಳುಂಟುಲ್ಲವೆ? ಕೊಳ್ಳುವುದು, ಕೊಡುವುದು ವ್ಯವಹಾರವಿದೆ. ಇದೆಲ್ಲವನ್ನು ಏತರಿಂದ ನಿರ್ವಹಿಸಬೇಕು? ಕೂಲಿಮಾಡಲು ಹೋದರೆ ಗಂಡಾಳಿಗೆ ದಿನವಿಡೀ ಎರಡಾಣೆ, ಹೆಣ್ಣಾಳಿಗೆ ಒಂದುವರೆ ಆಣೆ ಕೂಲಿ. ನೂರು-ನೂರಿಪ್ಪತ್ತು ರೂಪಾಯಿ. ಈ ಹೊಲಗಳಿಗೆ ಹತ್ತಿ ಕೊಡುವುದು ಏತರಿಂದ. ನನ್ನ ಸಂಬಳ ತಿಂಗಳಿಗೆ ಒಂಬತ್ತು ರೂಪಾಯಿ. ತಿಂಗಳಿಗೆ ಕನಿಷ್ಟ ನನ್ನ ಖರ್ಚಿಗೆ ಎರಡು ರೂಪಾಯಿಯಾದರೂ ಬೇಕು. ಅಷ್ಟು ಕಳೆದರೆ ಇಡೀ ವರ್ಷ ನಾನು ದುಡಿದರೂ ಎಂಬತ್ತು ನಾಲ್ಕು ರೂಪಾಯಿ. ಆ ಹಣ ಹತ್ತಿ ಕೊಡಲೂ ಸಾಲದು ಒಂದು ವರ್ಷ ಹತ್ತಿ ಕೊಡದಿದ್ದರೆ ಆಯಿತು. ಹೊಲಗಳನ್ನು ಲಿಲಾವಿಗೆ ಹಾಕಿ ಸರಕಾರ ಕಸಿದುಕೊಡು ಬಿಡುತ್ತದೆ. ರೈತರ ಬಾಳು ನಾಯಿ ಬಾಳು. ಅವನು ಸತ್ತರೂ ಹೊರಳಿನೋಡುವ ಸರಕಾರವೂ ಇಲ್ಲ, ಸ್ಥಳೀಯ ಸಂಸ್ಥೆಗಳೂ ಇಲ್ಲ. ಇಂಥ ಪರಿಸ್ಥಿತಿಯಲ್ಲಿ ಆಸೆಯಿಂದ ಭೂಮಿಮಾಡಿ ಪ್ರಯೋಜನವೇನು? ಹಿಂದೆ 1936ನೇ ಇಸ್ವಿಯಲ್ಲಿ ಶಿಕಾರಿಪುರ ತಾಲ್ಲೂಕು ಕಪನಹಳ್ಳಿ ಆಶ್ರಮಕ್ಕೆ ಹೋದಾಗ ಕಾಲುವೆ ಕೆಳಗಿನ ನೂರಾರು ಎಕರೆ ಜಮೀನನ್ನು ಪುಕ್ಕಟೆಯಾಗಿ ಕೊಡಿಸುತ್ತೇವೆ. ಬಂದು ಮನೆಕಟ್ಟಿ ಕೊಳ್ಳಿ ಎಂದು ಹೇಳಿರಲಿಲ್ಲವೆ? ಮಲೇರಿಯಾ ಹಾವಳಿಯ ಅಲ್ಲಿಗೆ ಸಾಯುವುದಕ್ಕೆ ಹೋಗಬೇಕಾಗುತ್ತದೆ ಎಂದು ಕೈಬಿಟ್ಟು ಬರಲಿಲ್ಲವೆ? ಮಲೇರಿಯಾ ಜ್ವರಕ್ಕೆ ಕ್ವಿನೈನ್ ಗುಳಿಗೆ ನುಂಗಿ ನುಂಗಿ ಏನೇನೋ ತೊಂದರೆಗಳೂ ಕೂಡ ಮನುಷ್ಯರಿಗೆ ಆಗಿ, ಕೆಲವೇ ದಿನಗಳಲ್ಲಿ ಗರ್ಭಿಣಿಯರಂತೆ ಹೊಟ್ಟೆ ಬಾಯಿಸಿಕೊಂಡು ಉಗುರೆಲ್ಲ ಬೆಳಗಾಗಿ ಕಣ್ಣನ್ನೆಲ್ಲ ಹಸುರುಗೊಳಿಸಿಕೊಂಡು ದುಡಿಯಲೂ ಶಕ್ತಿಯಿಲ್ಲದೆ ಬದುಕುವುದಕ್ಕೂ ಶಕ್ಯವಿಲ್ಲದೆ ಜನವೆಲ್ಲ ಪರಿತಪಿಸುತ್ತಿಲ್ಲವೆ? ಇವರನ್ನು ಸತ್ತೆಯಾ ಕೆಟ್ಟೆಯಾ ಎಂದು ಕೇಳುವವರೇ ಇಲ್ಲದೆ ಅನ್ನಾನ್ನ ಗತಿಯಾಗಿ ಈ ಶ್ರಮಜೀವಿಗಳೆಲ್ಲ ಮಣ್ಣು ಪಾಲಾಗುತ್ತಿಲ್ಲವೆ? ಇದು ಬ್ರಿಟಿಷರ ಕಾಲದ ಆಡಳಿತದ ಒಂದು ಕ್ರಮ. ಅವರು ದೊಡ್ಡದೊಡ್ಡ ಸಂಸ್ಥಾನಿಕರು ದೇಸಾಯಿ, ದೇಶಮುಖ, ದೇವಮುಕ, ಇನಾಂದಾರ್, ಜಮೀನ್ದಾರ್, ಶ್ರೀಮಂತ

ಸಾಹುಕಾರರನ್ನೆಲ್ಲ ತಮ್ಮ ಕೈಗೊಂಬೆಗಳನ್ನಾಗಿ ಮಾಡಿಕೊಂಡು ಅವರಿಗೆ ಬಿರುದು ಬಾವಲಿಗಳನ್ನು ಕೊಟ್ಟು ಅವರನ್ನು ಬಲಪಡಿಸಿ, ಶ್ರೀಮಂತರನ್ನಾಗಿಸಿ ಅವರ ಬಲದಿಂದ ಉಳಿದವರನ್ನಾಳುವ ಗತ್ತುಗಾರಿಕೆಯನ್ನು ಕಂಡವರು. ಸಾಮಾನ್ಯ ರೈತ ಅವರ ಕಾಲದಲ್ಲಿ ಕಂಗಾಲು. ಅವನು ಈತಿಬಾಧೆಗಳಿಂದ ಸಂಕಟಕ್ಕೊಳಗಾದರೆ ಸ್ವಲ್ಪಮಟ್ಟಿಗೆ ಹಪ್ತೆ ತಹಕೂಬನಲ್ಲಿಟ್ಟು ಅಥವಾ ಸ್ವಲ್ಪಸೂಟ್ ಬಿಟ್ಟಹಾಗೆ ಮಾಡಿಯೇ ಕಣ್ಣೊರಸುತ್ತ ಬಂದು ಕೊನೆಗೆ ರೈತ ಏನೂ ಇಲ್ಲದೆ ಕೈಕಟ್ಟಿಕೊಂಡು ಕುಳಿತರೆ ಅವನ ಜಮೀನನ್ನು ಹರಾಜಿಗೆ ಹಾಕುವುದನ್ನು ಬಿಟ್ಟು ಯಾವ ಕರುಣೆಯನ್ನು ತೋರಿಸುತ್ತಿರಲಿಲ್ಲ. ಸಾಹುಕಾರರುಗಳು ಸಾಲಕೊಟ್ಟು ಹೊಲ ಬರೆಸಿಕೊಂಡು ಸಕಾಲದಲ್ಲಿ ಸಾಲ ತೀರಿಸಲಾಗದಿದ್ದರೆ ನಿರ್ದಾಕ್ಷಿಣ್ಯವಾಗಿ ಹೊಲಗದ್ದೆಗಳನ್ನು ಹರಾಜು (ಲಿಲಾವು) ಹಾಕಿ ವಶಪಡಿಸಿಕೊಂಡು ಬಿಡುತ್ತಿದ್ದರು. ನಮ್ಮೂರ ದೇಸಾಯಿ ಮಹಾಲಿಂಗಪ್ಪನ ಎಂಟುಕೂರಿಗೆ (32ಎಕರೆ) ಜಮೀನನ್ನು ಹಾನಗಲ್ಲಿನ ಸವದತ್ತಿ ಬಸಪ್ಪ ಕೊಟ್ಟ ಸಾಲಕ್ಕೆ ಹರಾಜಿಗೆ ತಂದು ತಮ್ಮ ಅಳಿಯ ಆಲೂರು ಮಿರ್ಜಿ ಶಿವಪ್ಪ ಅನ್ನುವವರನ್ನು ಕರೆತಂದು ಕೂಗಿಸಿ ಅವರಿಗೆ ದೊರಕುವಂತೆ ಮಾಡಲಿಲ್ಲವೆ? ಮಹಾಲಿಂಗಪ್ಪ ಕಣ್ಣೀರ್ಗರೆದರೂ ಪ್ರಯೋಜನವಾಗದೆ ಹೊಲವೆಲ್ಲ ಹೋಗಿ ಮನೆಮಠ ಹಾಳಾಗಿ ಅವನ ಮಕ್ಕಳು ಅನ್ನಕ್ಕಾಗಿ ಪರದಾಡುವಂತೆ ಆಗಿ ಹೋಯಿತು. ಇವೆಲ್ಲ ಆಗ ಹೊಲಗದ್ದೆ ಇಟ್ಟುಕೊಂಡು ಜೀವಿಸುತ್ತಿದ್ದ ರೈತನು ಎದುರಿಸುವ ಸಮಸ್ಯೆಗಳು. ಸ್ಥಳೀಯ ಜನಗಳೇ ಮಾಡಲು ಶಕ್ಯವಿಲ್ಲದೆ ಕೈ ಕಟ್ಟಿಕೊಂಡು ಕುಳಿತು ಜಮೀನನ್ನು ಕಳೆದುಕೊಳ್ಳುವ ಇಂಥ ಸ್ಥಿತಿಯಲ್ಲಿ ಹೊರಗಿನ ಊರಿಂದ ಜಮೀನು ಸಿಗುತ್ತದೆ ಎದು ಬಂದು ಬರಿಗೈಯಿಂದ ಪಡೆಬಿದ್ದ ಜಮೀನು ಸಾಗುವಳಿ ಮಾಡಲಾಗುತ್ತದೆಯೆ? ಅದಕ್ಕೆ ತಕ್ಕ ಎತ್ತು, ಚಕ್ಕಡಿ ಇತರ ಮುಟ್ಟುಗಳು ಬೀಜ, ಬಗಡಿ, ಕಳೆ ಮಳೆ ಏನೆಲ್ಲ ಮೊದಲು ಹಣ ಸೂರೆ ಮಾಡಬೇಕಲ್ಲವೆ? ಹಣ ಖರ್ಚು ಮಾಡಿದ್ದಕ್ಕೂ ಸರಿಯಾಗಿ ಬೆಳೆ ಬಂದರೇನೋ ಸರಿ. ಬಾರದಿದ್ದರೆ ಮತ್ತೆ ಒಂದು ವರ್ಷ ಖರ್ಚಿಟ್ಟು ಶ್ರಮ ಮಾಡಬೇಕು.

ಈ ಎಲ್ಲ ವಿಚಾರಗಳು ಮನಸಿನ ಮುಂದೆ ಸುರುಳಿ ಸುರುಳಿಯಾಗಿ ಬಿಚ್ಚಿ ಬರಿಗೈಯಿಂದ ಹೊಲ ಹಿಡಿದು ರೂಢಿಸುವುದು ಒಬ್ಬಂಟಿಗನಾದ ನನ್ನಿಂದ ದುಸ್ಸಾಧ್ಯ. ಆಸೆಯಿಂದ ಈ ವ್ಯವಹಾರದ ಮಧ್ಯದಲ್ಲಿ ಸಿಕ್ಕು ನಾನು ಇದ್ದಿಲು ವ್ಯವಹಾರಕ್ಕೆ ಕೈ ಹಿಕ್ಕಿ ಮೈಮನಸ್ಸೆಲ್ಲವನ್ನು ಮಸಿ ಮಾಡಿಕೊಂಡಂತಾಗಬಾರದೆಂದು ಹೊಲಮಾಡುವ ಆಸೆಯನ್ನು ಕೈಬಿಟ್ಟೆ.

ಓದುವ ಆಸೆ ಪ್ರಬಲವಾಗಿ ದಿನ ದಿನಕ್ಕೂ ಮನ ಮನವೆಲ್ಲ ತುಂಬಿ ಅದೇ ಯೋಜನೆ ಯೋಚನೆಗಳಲ್ಲಿ ಮಗ್ನವಾಗಿ ಹೋಯಿತು. 2 ವರ್ಷಗಳ ಟ್ರೈನಿಂಗ್ ಮಾಡಿಕೊಳ್ಳೋಣವೆಂದರೆ ಅದಕ್ಕಾಗಿ ಪ್ರಯತ್ನಿಸಿ ಧಾರವಾಡದ ಶಿಕ್ಷಣ ಸಂಸ್ಥೆಯವರ ಟ್ರೈನಿಂಗ್ ಕಾಲೇಜು ಸೇರೋಣವೆಂದರೆ ಅಲ್ಲಿನ ಪ್ರಿನ್ಸಿಪಾಲ್ ವಾ.ರಾ. ಮುದೋಳಕರ ಅವರೊಡನೆ ಸೆಣಸಿ ಅಲ್ಲಿ ಸೇರಬಾರದೆಂಬ ತೀರ್ಮಾನಕ್ಕೆ ಬಂದಿದ್ದೆ. ಸರಕಾರೀ ಕಾಲೇಜಿನಲ್ಲಿ ನಮ್ಮನ್ನು ಸೇರಿಸುತ್ತಲೇ ಇರಲಿಲ್ಲ. ಅಲ್ಲಿಗೆ ಆರಿಸುವುದು ಸರಕಾರಿ ಶಾಲೆಯ ಉಪಾಧ್ಯಾಯರಾಗಿದ್ದರೆ ಮಾತ್ರ. ನಾನಾದರೋ ಗಾವಠಿ ಶಾಲಾ ಮಾಸ್ತರ. ಎರಡು ವರ್ಷ ಖಾಸಗಿ ಕಾಲೇಜುಗಳಲ್ಲಿ ಸೇರಿ ಟ್ರೈನಿಂಗ್ ಪಡೆದು ಬಂದರೆ ಆಮೇಲೆ ಸರಕಾರಿ ಶಾಲೆಯ ಉಪಾಧ್ಯಾಯನಾಗಲು ಹೆಣಗಬೇಕು. ಆದ್ದರಿಂದ ಇಲ್ಲಿನ ಎರಡು ವರ್ಷಗಳ ಶಿಕ್ಷಣವೇ ಬೇಡ ಎಂಬುದನ್ನು ನಿರ್ಧರಿಸಿ ಬಿಟ್ಟೆನಾಗಿ ಮೈಸೂರು ದೇಶಕ್ಕೆ ಹೋಗೋಣ ಎಂಬ ತೀರ್ಮಾನಕ್ಕೆ ಬಂದಿದ್ದೆ.

*ಹಾಗಾದರೆ ಮುಂದೇನು?*

ಒಮ್ಮೆ ಧಾರವಾಡಕ್ಕೆ ಹೋದಾಗ ಪಂಡಿತ ಮಹಾದೇವ ಪ್ರಭಾಕರ ಪೂಜಾರ ಅವರನ್ನು ಕಂಡು ಮಾತಾನಾಡಿ ಬರಬೇಕೆಂದು ಅವರ ಮನೆ ಹುಡುಕಿಕೊಂಡು ಹೋದೆ. ಅವರು ಹಿಂದೆ ಎಂದೋ ಮೈಸೂರು ನಗರದಲ್ಲಿರುವ ಟ್ರೈನಿಂಗ್ ಕಾಲೇಜಿನಲ್ಲಿ ಕನ್ನಡ ಪಂಡಿತ ಪರೀಕ್ಷೆ ಓದಿ ತೇರ್ಗಡೆ ಹೊಂದಿ ಧಾರವಾಡದ ಶಿಕ್ಷಕರ ಟ್ರೈನಿಂಗ್ ಕಾಲೇಜಿನ ಶಿಕ್ಷಕರಾಗಿ ಆದರ್ಶ ಶಿಕ್ಷಕರೂ ಮಹಾವಿದ್ವಾಂಸರೂ ಎಂಬ ಕೀರ್ತಿಗೆ ಪಾತ್ರರಾಗಿದ್ದರು ಅವರು ಪಂಡಿತ ತರಗತಿಗೆ ಸೇರಿದುದು ಓದಿದುದು ಅದರಿಂದ ಪ್ರಯೋಜನಗೊಂಡುದು ಎಲ್ಲವನ್ನು ಕೇಳಿ ತಿಳಿದುಕೊಂಡೆ. ಆದರೆ ಅವರಿಗೆ ಆ ಕಾಲದಲ್ಲಿ ಇದ್ದ ರಾವಬಹದ್ದೂರ್ ದೊಡ್ಡ ಶ್ರೀನಿವಾಸರಾಯರು ಮೈಸೂರು ಸರಕಾರದಲ್ಲಿ ಪ್ರಭಾವ ಬೀರಿ ಅಲ್ಲಿ ಓದಲು ಸ್ಥಾನ ದೊರಕಿಸಿಕೊಂಡು ಓದಿದ್ದೊಂದು ಸಾಹಸದ ಕೆಲಸವೇ ಆದ ಹಾಗೆ ತಿಳಿದು ಬಂತು. ಮತ್ತೊಮ್ಮೆ ಹಾವೇರಿಯ 2ನೆಯ ನಂಬರ್ ಶಾಲೆಯಲ್ಲಿ ಉಪಾಧ್ಯಾಯರಾಗಿ ಸೇವೆಸಲ್ಲಿಸುತ್ತಿದ್ದ ಪಂಡಿತ ಚೆನ್ನಬಸಪ್ಪ ಕವಲಿ ಅವರನ್ನು ಕಂಡು ಈ ವಿಷಯವಾಗಿ ಕೇಳಿ ತಿಳಿದುಕೊಂಡೆ. ಅವರು ಇನ್ನೊಂದು ವಿಷಯ ತಿಳಿಸಿದ್ದೇನೆಂದರೆ ನೀವು ಮೈಸೂರು ರಾಜ್ಯದಲ್ಲಿರುವ ಅಪ್ಪರ್ ಸೆಕಂಡರಿ ಪರೀಕ್ಷೆಯನ್ನಾಗಲಿ, ಈಗ ಈ ಪರೀಕ್ಷೆಗೆ ಬದಲಾಗಿ ವರ್ನ್ಯಾಕ್ಯುಲರ್ ಟೀಚರ್ಸ್ ಸರ್ಟಿಫಿಕೇಟ್ ಪರೀಕ್ಷೆ (VTC) ಯನ್ನಾಗಲಿ, ಅಲ್ಲಿನ ಮ್ಯಾಟ್ರಿಕ್ ಪರೀಕ್ಷೆ (SSLC) ಯನ್ನಾಗಲಿ ಪಾಸ್ ಮಾಡಿಕೊಂಡು ಅಲ್ಲಿಯೇ ಕೆಲಸಕ್ಕೆ ಸೇರಿ ಪಂಡಿತ ಪರೀಕ್ಷೆಗೆ ಸರಕಾರದಿಂದಲೇ ಆರಿಸಲ್ಪಟ್ಟರೆ ಮಾತ್ರ ಅಲ್ಲಿ ಓದಿ ಪಂಡಿತರಾಗಿ ಹೊರಬರಬಹುದೇ ವಿನಾ ಅನ್ಯಥಾ ನಿಮಗೆ ಪಂಡಿತ ಪರೀಕ್ಷೆಯಲ್ಲಿ ಓದುವುದು ಸಾಧ್ಯವಾಗಲಾರದು. ಈಗ ಏನೇನೋ ಅಲ್ಲಿ ನಿಬಂಧನೆಗಳಿವೆ. ಅಲ್ಲಿಯ ಜನರಿಂದಲೇ ಕೇಳಿ ತಿಳಿಯಬೇಕು. ಎಂದರು. ಕೊನೆಗೆ ಅವರು ನೀವು ಈಗ ಇನ್ನೊಂದು ಕೆಲಸಮಾಡಿ ಎಂದು ಹೇಳಿದರು ಅಲ್ಲಿ ಪಂಡಿತ ಪರೀಕ್ಷೆ ತೇರ್ಗಡೆ ಹೊಂದಿ ಇಲ್ಲಿ ಬ್ರಿಟಿಷ್ ಸರಕಾರದಲ್ಲಿ ಕೆಲಸಕ್ಕೆ ಸೇರುತ್ತೇನೆಂದರೆ ಸಾಧ್ಯವೇ ಇಲ್ಲ. ಏಕೆಂದರೆ ಆ ಪರೀಕ್ಷೆಯವರಿಗೆ ಇಲ್ಲಿ ಹೈಸ್ಕೂಲಿಗೆ ತೆಗೆದು ಕೊಳ್ಳುವ ಪರಿಪಾಠವಿಲ್ಲ. ಆ ಸ್ಕೇಲೂ ಕೂಡ ಇಲ್ಲ. ಇಲ್ಲಿಯ ಪ್ರಾಥಮಿಕ ಶಾಲಾ ಉಪಾಧ್ಯಾಯರಾಗಿ ಕೊಳೆಯಬೇಕಾಗುತ್ತದೆ. ಮೈಸೂರು ರಾಜ್ಯದಲ್ಲಿಯೇ ಕೆಲಸಕ್ಕೆ ಸೇರಿ ಅಲ್ಲಿಯೇ ಸೇವೆಸಲ್ಲಿಸುವುದಾದರೆ ಹೈಸ್ಕೂಲ್ ಟ್ರೈನಿಂಗ್ ಕಾಲೇಜುಗಳಲ್ಲಿ ಉಪಾಧ್ಯಾಯರಾಗಬಹುದು ಇತ್ಯಾದಿ ಹೇಳಿದರಲ್ಲದೆ ಅವರು ನನ್ನನ್ನು ನಿರಾಶನನ್ನಾಗಿಯೂ ಮಾಡುವ ಕೆಲವು ಮಾತಾಡಿದರು. ಆ ವಿಷಯ ಇಲ್ಲಿ ಅಪ್ರಕೃತ. ನಾನು ಕನ್ನಡ ಪಂಡಿತ ಪರೀಕ್ಷೆಯ ಬಗೆಗೇ ಏಕೆ ಇಷ್ಟೊಂದು ವಿಚಾರಿಸಿದೆನೆಂದರೆ ಯಾವುದಾದರೂ ದೊಡ್ಡ ಪರೀಕ್ಷೆಯಲ್ಲಿ ಪಾಸಾಗಬೇಕೆಂಬ ಮನಸ್ಸಿನ ತುಡಿತವೇ ಕಾರಣವಾಗಿತ್ತು. ಇಂಗ್ಲೀಷು ಓದೋಣವೆಂದರೆ ಇಷ್ಟು ದೊಡ್ಡವನಾದರೂ ಎ.ಬಿ.ಸಿ.ಡಿ. ಗೊತ್ತಿಲ್ಲ. ಅದನ್ನು ಈಗ ಪ್ರಾರಂಭಿಸಿ ಬಿ.ಎ, ಎಂ.ಎ., ಮುಂತಾದ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವುದು ನನ್ನ ಹಣೆಯಲ್ಲಿ ಬರೆದೇ ಇಲ್ಲ. ಅದೊಂದು ಗುಡ್ಡವಾಗಿ ಕಂಡಿತು ನನ್ನ ಮನಸ್ಸಿಗೆ. ಈ ಪರೀಕ್ಷೆಗಳೆಲ್ಲ ಶ್ರೀಮಂತರ ಸೊತ್ತು. ಅಷ್ಟು ಇಷ್ಟು ಕನ್ನಡದಲ್ಲಿ ಜ್ಞಾನವಿದ್ದು ಇದೇ ಭಾಷೆಯಲ್ಲೇ ಶಿಕ್ಷಣ ಮುಂದುವರಿಸುವುದು ಯೋಗ್ಯವೆಂದು ಮನಸ್ಸಿನಲ್ಲಿ ಅಳೆದು ಸುರುವಿ ಅದೇ ಕನಸಿನಲ್ಲಿ ಕೆಲ ದಿನ ನೂಂಕಿದೆ. ಮನಸ್ಸು ಎಲ್ಲೆಲ್ಲಿಯೋ ಹರಿದಾಡುತ್ತಿತ್ತು. ದೊಡ್ಡ

ದೊಡ್ಡ ಆಶಾಗೋಪುರಗಳನ್ನು ಕಟ್ಟಿ ಕಟ್ಟಿ ಸುಣ್ಣ ಬಣ್ಣ ಹಚ್ಚಿ ಸಿಂಗರಿಸುತ್ತಿತ್ತು. ಪುನಃ ಕೆಡವುತ್ತಿತ್ತು, ಕಟ್ಟುತ್ತಿತ್ತು.

### ಮದುವೆಯೊಂದರಲ್ಲಿ ನಲ್ಲೆಕೊಪ್ಪಕ್ಕೆ ಪ್ರಯಾಣ

ಇದೇ ಸಮಯದಲ್ಲಿ ಹಿರೇಕಾಂಶಿಯ ಒಂದು ಮದುವೆಯ ನಿಬ್ಬಣದ ಪ್ರಮುಖನಾಗಿ ಐದಾರು ಮೈಲು ದೂರದ ಮೈಸೂರು ದೇಶದ ಆಧಿಪತ್ಯಕ್ಕೆ ಒಳಪಟ್ಟಿದ್ದ ಸೊರಬ ತಾಲ್ಲೂಕಿನ ನೆಲ್ಲಿಕೊಪ್ಪಕ್ಕೆ ಮದುವೆಗೆ ಹೋದೆ. ಈ ಮೊದಲೇ ತಮಗೆ ಹಿರೇಕಾಂಶಿಯ ಮದುವೆಗಳಲ್ಲಿ ನನ್ನ ಪಾತ್ರವೆಂತಹುದೆಂಬ ಬಗ್ಗೆ ತಿಳಿಸಿದ್ದೇನೆ. ಇಲ್ಲಿನ ಮದುವೆಗಳಲ್ಲಿ ವೀಳ್ಯೆಶಾಸ್ತ್ರ ಮೊದಲ್ಗೊಂಡು ಮದುವೆ ಮುಗಿದು ನಾಗವಲ್ಲಿ ಕಾರ್ಯಕ್ರಮ ಮುಗಿಯುವವರೆಗೆ ನಾನು ಒಂದಿಲ್ಲೊಂದು ರೀತಿಯ ಯಾಜಮಾನ್ಯ ವಹಿಸಿಲೇಬೇಕಾಗಿತ್ತು. ಮದುವೆ ಮನೆಗಳಲ್ಲಿ ನನ್ನ ಹಾಜರಾತಿ ಅವಶ್ಯಕವೆಂದು ಅವರು ಭಾವಿಸಿ ಕರೆದುಕೊಂಡು ಹೋಗುತ್ತಿದ್ದರು, ಅಲ್ಲ, ಎಳೆದುಕೊಂಡು ಹೋಗುತ್ತಿದ್ದರು ಎನ್ನುವುದು ಮೇಲು. ಲಗ್ನ ಕಟ್ಟುವಾಗ ಲಗ್ನ ಪತ್ರಗಳನ್ನು ಬರೆಯುವಾಗ ಮದುವೆಯ ನಿಬ್ಬಣವನ್ನು ಎದುರ್ಗೊಳ್ಳುವಾಗ, ಇಲ್ಲಿಂದ ಹೆಣ್ಣಿನ ಮನೆಗೆ ನಿಬ್ಬಣ ಸಹಿತ ಗಂಡು ಹೋಗುವಾಗ ಹಸೆಮಣೆಗಳನ್ನು ಬರೆಯುವಾಗ, ಮನೋರಂಜನೆಗೊಳಿಸಬೇಕಾದಾಗ, ಬೀಗರೊಡನೆ ಮಾತುಕತೆ ಮಾಡುವಾಗ, ಊಟೋಪಚಾರ ಸಂದರ್ಭದಲ್ಲಿ ನನಗೇ ಯಾಜಮಾನ್ಯದ ಪಟ್ಟವನ್ನು ಆಲೂರ ಜನ ಕಟ್ಟಿದ್ದರಿಂದ ನನ್ನ ಹಾಜರಾತಿ ಎಷ್ಟು ಅವಶ್ಯಕವೆಂಬುದನ್ನು ನೀವೇ ಊಹಿಸಿ.

ನೆಲ್ಲಿಕೊಪ್ಪಕ್ಕೆ ನಿಬ್ಬಣದ ಯಾಜಮಾನ್ಯ ವಹಿಸಿಕೊಂಡು ಹೋದ ನನಗೆ ಮನೆಬಾಗಿಲಲ್ಲಿ ಬೀಗರ ಕಾಲು ತೊಳೆಯಲು ನೀರು ಕೊಡುವ ಪದ್ಧತಿ. ಎಲ್ಲಕ್ಕೂ ಮುಂದೆ ನಾನು ಹೋದೆ. ನನಗೆ ಕೈಕಾಲು ತೊಳೆಯಲು ನೀರು ಕೊಟ್ಟರು. ಮೂಗಿಗೆ ಏನೋ ಕೊಳಕು ವಾಸನೆ ಬಡಿಯಿತು. ದನಕರು ಕಟ್ಟಿದ ಮನೆ ದನಕ್ಕೆ ಕುಡಿಸಲು ಮುಸುರಿ ಬಾನಿಯೋ ಏನೋ ಇರಬಹುದು. ಅದರ ವಾಸನೆಯಿರಬೇಕೆಂದು ಕೊಟ್ಟ ನೀರನ್ನು ಕಾಲ ಮೇಲೆ ಸುರವಿಕೊಂಡೆ. ಸುರುವಿಕೊಂಡ ನೀರೇ ಮುಸುಬಾನಿಯ ಕೊಳಕು ನೀರು. ದುರ್ವಾಸನೆ ಕೈ ಮತ್ತು ಕಾಲುಗಳು ಕೊಳಕಾಗಿ ಹೊಲಸು ನಾರತೊಡಗಿದವು. ನನ್ನ ಮುಖ ಕಪ್ಪಿಟ್ಟಿತು. ಬೀಗರಿಗೆ ಚೇಷ್ಟೆ ಮಾಡಲು ಇಂಥ ನೀರನ್ನು ಕೆಲವರು ಕೊಡುತ್ತಾರೆಂದು ಆಮೇಲೆ ತಿಳಿಯಿತು. ಬಾಳೀಹಳ್ಳಿ ಬಸವಣ್ಣೆಪ್ಪ ನೀರು ಕೊಟ್ಟ ಹೆಂಗಸನ್ನು ಗದರಿಸುತ್ತ ನಿಮಗೇನಾದರೂ ಮಾನಮರ್ಯಾದೆ ಗೊತ್ತಿದೆಯೋ ಇಲ್ಲವೊ; ಯಾರಿಗೆ ಈ ನೀರು ಕೊಡಬೇಕು, ಕೊಡಬಾರದು ಗೊತ್ತಿಲ್ಲವೆ? ನಮಗೆ ಕೊಡಬೇಕಾಗಿತ್ತು? ಯಾರು ಬೇಡ ಅಂದರು! ಮಾಸ್ತರೊಡನೆ ಈ ಹುಡುಗಾಟ ಮಾಡಬಹುದೇ? ಎಂದು ಮನಸ್ವೀ ಗಲಾಟೆ ಮಾಡಿಬಿಟ್ಟ. ನನಗೆ ಆಮೇಲೆ ಬೇರೆ ಶುದ್ಧನೀರನ್ನು ತಂದು ಆ ಹೆಣ್ಣುಮಗಳೇ ಕಾಲಿಗೆ ಸೋಪು ಹಚ್ಚಿ ಕಾಲು ತೊಳೆದುಬಿಟ್ಟಳು. ನಾನು ಇಂಗುತಿಂದ ಮಂಗನಂತೆ ಹಿ ಹಿ - ಹುಹು! ಎಂದು ಹಲ್ಲುಕಿರಿದು ಅತ್ತ ಇತ್ತ ನೋಡುತ್ತ ನಿಂತೆ. ಇನ್ನೊಬ್ಬನಿಗೂ ಮುಸರೆ ನೀರು ಕೊಡಲು ಬಂದರಂತೆ, ಅವನು ಮುಸುರೆ ನೀರೆಂದು ಮೊದಲೇ ತಿಳಿಸಿದ್ದರಿಂದ ಅಲ್ಲಿ ಅವರ ಆಟ ನಡೆಯಲಿಲ್ಲ. ನಾನಾದರೋ ನಿಶ್ಶಂಕ ಮೃಗ ಈ ಮೋಸ ಗೊತ್ತಿಲ್ಲ. ನಿಶ್ಶಂಕೆಯಿಂದ ಅಡವಿಯಲ್ಲಿ ತಿರುಗಾಡುವ ಜಿಂಕೆ ಬೇಡನ ಮೋಸದ ಬಲೆಗೆ ಕಾಲುಸಿಕ್ಕಿಸಿಕೊಂಡು ಒದ್ದಾಡುವಂತೆ ಒದ್ದಾಡಿದೆ. ಕೈಗೆ ಸೋಪು ಕೊಟ್ಟರು. ಸೋಪಿನಿಂದ ಕೈತೊಳೆದುಕೊಂಡು ಅವರೇ ಮಾಸ್ತರರೆಂದು ಸ್ಪೆಷಲ್ ಆಗಿ

ಕೊಟ್ಟ ವಸ್ತ್ರದಿಂದ ಕೈಮುಖ ಒರೆಸಿಕೊಂಡೆ. ಇನ್ನು ನನ್ನ ಪುಣ್ಯ ಚೆನ್ನಾಗಿತ್ತು. ನೀರನ್ನು ಮೊದಲೇ ಮುಖಕ್ಕೆ ಹಾಕಿಕೊಂಡು ಮುಖ ತೊಳೆದುಕೊಂಡು ಬಿಟ್ಟಿದ್ದರೆ ಆಗ...? ಈ ಪದ್ಧತಿಯನ್ನು ಉಳಿದವರು ಬಲ್ಲರು. ಬೈಲು ಸೀಮೆಯ ಮುಕ್ಕನಾದ ನನಗೆ ಈ ಪದ್ಧತಿಗಳೆಲ್ಲ ಹೊಸವಲ್ಲವೆ? ಅಲ್ಲದೆ ಮಾಸ್ತರನಾದ ನನಗೆ ಉಳಿದ ಬೀಗರಿಗೆ ಮಾಡುವಂತೆ ಚೇಷ್ಟೆಗೀಷ್ಟೆ ಮಾಡಲಿಕ್ಕಿಲ್ಲವೆಂಬ ಊಹೆಯಿತ್ತು. ಆದರೆ ಓರ್ವ ಹೆಂಗಸು ಆ ಚೇಷ್ಟೆಯನ್ನು ಮಾಡಿ, ತಾನು ಬಹುದೊಡ್ಡ ಗೆಲುವನ್ನು ಸಂಪಾದಿಸಿದವಳಂತೆ ನಕ್ಕು ಆಮೇಲೆ ಜನಗಳಿಂದ ಬೈಸಿಕೊಂಡು ಪುನಃ ನನಗೆ ಮುಖ ತೋರಿಸಲಿಲ್ಲ. ಆಮೇಲೆ ಒಬ್ಬಿಬ್ಬ ಆಪ್ತರೊಡನೆ ವಿಷಯ ತಿಳಿದಾಗ ಅವಳೊಬ್ಬ ತರಲೆ ಹೆಂಗಸು ಎಂದು ಬಿಟ್ಟರು. ಈ ಮೊದಲು ಅವಳು ಅನೇಕ ಕಡೆಗಳಲ್ಲಿ ನನ್ನನ್ನು ನೋಡಿದ್ದಳಂತೆ. ಚೇಷ್ಟೆಮಾಡುವ ಪ್ರಸಂಗ ಬಂತು. ನನ್ನ ಮೇಲೆಯೇ ತನ್ನ ಚೇಷ್ಟೆಯ ಬಾಣ ಪ್ರಯೋಗಿಸಿಬಿಟ್ಟಳು.

ಊಟಕ್ಕೆ ಕುಳಿತಾಗಲೂ ಅವಳು ಚೇಷ್ಟೆ ಬಿಡಲಿಲ್ಲ. ಬೀಗರ ಊಟದ ದಿನ ಬೀಗರಿಗೆ ಚೇಷ್ಟೆಮಾಡಲೆಂದೇ ಕರಿಗಡಬಿನಲ್ಲಿ ಹತ್ತಿ ಕಾಳು, ಉಪ್ಪುಕಾರ.. ಇತ್ಯಾದಿಗಳನ್ನು ತುಂಬಿ ಕರಿದು ಬೇರೇ ಇಟ್ಟಿರುತ್ತಾರಂತೆ. ಈ ಪದ್ಧತಿ ಇಲ್ಲಷ್ಟೇ ಅಲ್ಲ, ನಮ್ಮ ಬೈಲುಸೀಮೆಯಲ್ಲೂ ಮಾಡುವುದುಂಟು. ನಮ್ಮ ಸೀಮೆಯಲ್ಲಿ ಲಗ್ನ ಕಾಲದಲ್ಲಿ ಬೀಗರ ಮನೆಗೆ ಹೋದವನೇ ಅಲ್ಲವಾಗಿ ಆ ಕಡಬಿನ ಬಗೆಗೆ ನನಗಿದ್ದುದು ಖಾಜು ಭಾವನೆಯೇ ಹೊರತು ಅನ್ಯಥಾ ಇರಲಿಲ್ಲ. ಬೀಗರು ಕರಿಗಡಬು, ಕರಚೀಕಾಯಿ, ಹೋಳಿಗೆ ಮೊದಲಾದವನ್ನು ನೀಡಿದಾಗ ಅವನ್ನು ಹರಿದು ನೋಡಿಯೇ ಆಮೇಲೆ ಬಾಯಲ್ಲಿಟ್ಟುಕೊಳ್ಳುವರಂತೆ. ಬೀಗರು ನೋಡದೆ ಕಾರದ್ದೋ - ಉಪ್ಪಿನದೋ ಅಥವಾ ಹತ್ತಿಕಾಳು ಇರುವ ಕಡುಬನ್ನು ತಿಂದರೆ ಸೋತ ಹಾಗೆಯೇ. ಎಲ್ಲರೂ ನಕ್ಕು ಬಿಡುತ್ತಿದ್ದರು. ನನ್ನದು ಖಾಜುಭಾವ. ಮುಸುರೇ ನೀರು ಕೊಟ್ಟು ಬೇಕಾದಷ್ಟು ಛೀ ಮಾರಿ ಹಾಕಿಸಿಕೊಂಡಿರುವಾಗ ಬೇರೆ ಇನ್ನಾವ ಮೋಸಗಳನ್ನೂ ನನಗೆ ಮಾಡಲಿಕ್ಕಿಲ್ಲವೆಂದು ಭಾವಿಸಿದ್ದೆ. ನೀಡಿರುವುದನ್ನೆಲ್ಲ ತುಪ್ಪ ನೀಡಿದ ಮೇಲೆಯೇ ಆ ಮನೆಯವರು ಬಂದು ಊಟ ಮಾಡಬಹುದೆಂದು, ಕರ್ಪೂರ ಹಚ್ಚಿ ನಮಸ್ಕಾರ ಹಾಕಿದ ಮೇಲೆಯೇ ಊಟ ಮಾಡಬೇಕಲ್ಲವೆ! ಆ ಶಾಸ್ತ್ರ ಮುಗಿದ ಮೇಲೆ ನಾನು ಗೊತ್ತಿಲ್ಲದೆ ಕಾರದ ಕರಿಗಡಬನ್ನು ತುಪ್ಪದಲ್ಲಿ ಅದ್ದಿ, ಅರ್ಧ ಕರಿಗಡಬನ್ನು ಕಡಿದು ದವಡೆಯ ಕಡೆಗೆ ಒಯ್ಯುತ್ತಿದ್ದಂತೆಯೇ ಬಾಯೆಲ್ಲ ಕಾರದಿಂದ ಏಕ ಕಾಲದಲ್ಲಿ ಬ್ರಹ್ಮಾಂಡಕ್ಕೇ ಬೆಂಕಿ ಹತ್ತಿದಂತಾಗಿ ಹೋಯಿತು. ಎಲ್ಲ ಹೆಂಗಸರು ಹಿಹಿ! ಎಂದುಕೊಂಡು ನಗುತ್ತ ಅಡಿಗೆಮನೆ ಕಡೆ ಓಡಲಾರಂಭಿಸಿದರು. ನನಗೆ ಕರಿಗಡಬನ್ನು ಮುರಿದು ನೋಡಿ ತಿನ್ನಬೇಕೆಂಬುದು ಹೊಳೆಯಲೇ ಇಲ್ಲ. ಅದು ಕಾರವನ್ನು ನೀರಿನಲ್ಲಿ ಕಲಸಿ ಮಿಜ್ಜಿ ಮಾಡಿ ತುಂಬಿದ್ದು; ಹೂರಣ ಗಡಬಿನಂತೆ ಮೆತ್ತಗೇ ಇತ್ತು. ಅದೇ ಕೈಗೆ ಸಿಗಬೇಕೇ ನನಗೆ! ಉಪ್ಪು, ಹತ್ತಿಕಾಳಿನ ಕಡುಬಾದರೆ ಬೆರಳಿಂದ ಹಿಸುಕಿದರೇ ಗೊತ್ತಾಗುತ್ತಿತ್ತು. ಇದು ಹಾಗಾಗಲಿಲ್ಲ; ಅಲ್ಲದೆ ಇನ್ನು ಮೇಲೆ ನನಗೆ ಬೀಗರು ಚೇಷ್ಟೆ ಮಾಡಲಿಕ್ಕಿಲ್ಲವೆಂಬ ನಂಬುಗೆಯೂ ಬಂದಿತ್ತು. ಮೊದಲು ಮುಸುರೆನೀರು ಕೊಟ್ಟಾಗಲೇ ಬಸವಣ್ಣೆಪ್ಪ ಗದರಿಸಿಬಿಟ್ಟಿದ್ದ. ಆದರೂ ಆ ಹೆಂಗಸರು ನನ್ನ ಮೇಲೆಯೇ ಚೇಷ್ಟೆಯ ಬಾಣ ಬಿಟ್ಟುಬಿಟ್ಟರು. ಹಿರೇಕಾಂಶಿ ಮಾಸ್ತರು ಎಷ್ಟರ ಮಟ್ಟಿಗೆ ಬುದ್ಧಿವಂತರು ಎಂಬುದನ್ನು ನೋಡಬೇಕೆಂದು ಹಾಗೆ ಮಾಡಿದರಂತೆ. ಅಂತೂ ಅವರಿಗೆ ನನ್ನ ಬುದ್ಧಿಮತ್ತೆಯ ಅಳತೆ ಈ ಒಂದು ಪ್ರಯೋಗದಿಂದ ಸಿಕ್ಕಂತಾಗಿರಬೇಕಲ್ಲ! ಇದೇ ಅವರು ಮನುಷ್ಯನನ್ನಳೆಯುವ ವಿಧಾನ!

ಇದೇನಾದರೂ ಆಗಲಿ. ಆ ಮದುವೆಯ ಸಂದರ್ಭದಲ್ಲಿ ಆ ಊರಿನವರೇ ಆದ ಮರ್ಸಿಲಿಂಗಪ್ಪ ಎಂಬ ಉಪಾಧ್ಯಾಯರು ನನ್ನನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ಎಷ್ಟೇ ಆಗಲಿ ನಾನೂ ಉಪಾಧ್ಯಾಯನೇ ಅಲ್ಲವೇ? 'ಸರ್ವಸ್ವಗಂಧೇಷು ವಿಶ್ವಸಂತಿ' ಗಾದೆ ಸುಳ್ಳೇನು? ಅವರು ಮೂರು ವರ್ಷ ಶಿವಮೊಗ್ಗ ನಾರ್ಮಲ್ ಸ್ಕೂಲಿನಲ್ಲಿ VTC ಪಾಸು ಮಾಡಿಕೊಂಡು ಅದೇ ಊರಲ್ಲಿ ಉಪಾಧ್ಯಾಯರಾಗಿದ್ದರು. ಪ್ರಖ್ಯಾತ ವ್ಯವಸಾಯಗಾರರ ಕುಟುಂಬದವರು. ಊರಲ್ಲೂ ಪ್ರತಿಷ್ಠೆ ಗಳಿಸಿದವರು, ಸಹೃದಯರು. ನನ್ನ ಪ್ರಖ್ಯಾತಿಯನ್ನು ಕೇಳಿದ್ದವರು. ಅವರ ಪರಿಚಯವಾದದ್ದು ಒಳ್ಳೆಯದೇ ಆಯಿತು. ಅವರು ನನಗೆ VTC (ವರ್ನ್ಯಾಕ್ಯುಲರ್ ಟೀಚರ್ಸ್ ಸರ್ಟಿಫಿಕೇಟ್) ಎಂದರೇನು? ಆ ಕೋರ್ಸಿಗೆ ಸೇರಿಕೊಳ್ಳುವ ಕ್ರಮ, ಇದನ್ನು ಮಾಡಿಕೊಂಡ ಮೇಲೆ ಮೈಸೂರಿನ ಟ್ರೈನಿಂಗ್ ಕಾಲೇಜಿನಲ್ಲಿರುವ ಕನ್ನಡ ಪಂಡಿತ ಪರೀಕ್ಷೆಗೆ ಸೇರುವ ಕ್ರಮ ಇವೇ ಮೊದಲಾದವುಗಳ ಬಗೆಗೆ ದೀರ್ಘ ವಿವರಣೆ ನೀಡದರು. ಈ ವಿವರಣೆ ನನಗೆ ಬಹು ಸಹಕಾರಿಯಾಯಿತು. ನಮ್ಮ ಶಿರಾಳಕೊಪ್ಪ ಚನ್ನ ಮಲ್ಲಿಕಾರ್ಜುನರ ನೆರವಿನಿಂದ ಏನಾದರೂ ಪ್ರಯತ್ನ ಮಾಡಿ ಆ ಟ್ರೈನಿಂಗ್ ಕೋರ್ಸಿಗೆ ಸೇರಿ ಚೆನ್ನಾಗಿ ಓದಿ ತೇರ್ಗಡೆ ಹೊಂದಿ ಮುಂದೆ ಪಂಡಿತ ಪರೀಕ್ಷೆಗೆ ಏನೇ ಅಡಚಣೆಗಳು ಬಂದರೂ ಎಲ್ಲವನ್ನು ಗೆದ್ದು ಓದಿಯೇ ತೀರಬೇಕೆಂಬ ಸಂಕಲ್ಪ ಪ್ರಬಲವಾಗಿ ಹೋಯಿತು.

# ಅಧ್ಯಾಯ - 6

## ಪೂರ್ವಭಾವಿ ಕಾರ್ಯಾರಂಭ

ಶಿವಮೊಗ್ಗ ನಾರ್ಮಲ್ ಸ್ಕೂಲ್ ಸೇರಬೇಕೆಂಬುದು ದೃಢಸಂಕಲ್ಪವಾಗಿ ಹೋಯಿತು. ಹಾವೇರಿಯಲ್ಲಿದ್ದು ಸದ್ಧರ್ಮದೀಪಿಕೆ ಎಂಬ ಮಾಸ ಪತ್ರಿಕೆಯನ್ನು ಹೊರಡಿಸುತ್ತಿದ್ದ ಶ್ರೀ ಚೆನ್ನಮಲ್ಲಿಕಾರ್ಜುನರನ್ನು ಕಂಡು ಅವರಿಗೆ ಈ ಎಲ್ಲ ವಿಷಯ ತಿಳಿಸಿ ಅವರ ಸಲಹೆಯನ್ನು ಸಹಕಾರವನ್ನು ಪಡೆಯಲು ಹಾವೇರಿಗೆ ಹೋಗುವುದನ್ನು ನಿಶ್ಚಯಿಸಿದೆ. ಇದೇ ಕಾಲಕ್ಕೆ ಅವರು ಶಿರಾಳ ಕೊಪ್ಪಕ್ಕೆ ತಮ್ಮ ಹೊಲದ ರೈತರಿಂದ ಬತ್ತ ಸಂಗ್ರಹಿಸಿಲು ಬಂದಿರುವರೆಂದು ಹಾನಗಲ್ಲು ಮಠದ ಮೂಲದಿಂದ ತಿಳಿಯಿತು. ಈ ಕಾರಣವಾಗಿ ಶಿರಾಳಕೊಪ್ಪಕ್ಕೆ ಹೊರಟೆ. ಶಿರಾಳ ಕೊಪ್ಪದಲ್ಲಿ ಶ್ರೀ ಚೆನ್ನಮಲ್ಲಿಕಾರ್ಜುನರು ಸಿಕ್ಕರು. ಅವರಿಗೆ ನನ್ನ ಸಂಕಲ್ಪವನ್ನೆಲ್ಲ ನಿವೇದಿಸಿಕೊಂಡೆ. ಅವರು ಅದು ಒಳ್ಳೇ ಕೆಲಸ. ಅಲ್ಲಿ ಓದುವ ಪ್ರೈವೇಟ್ ವಿದ್ಯಾರ್ಥಿಗಳಿಗೆ ಏಳು ರೂಪಾಯಿ ವಿದ್ಯಾರ್ಥಿವೇತನವೂ ಸಿಕ್ಕುತ್ತದೆ. ಫೀಜು ವಗ್ಯೆರೆ ತಂಟೆಯಿಲ್ಲ. ಮೂರು ವರ್ಷ ಓದಿ ಉಪಾಧ್ಯಾಯ ವೃತ್ತಿಗೆ ಸೇರಿಬಿಡಬಹುದು. ಶಿವಮೊಗ್ಗದಲ್ಲಿ ಓರ್ವ ಪ್ರಭಾವಿ ವ್ಯಕ್ತಿ ಬೆಳಗುತ್ತಿ ಲಿಂಗಪ್ಪ ಎಂಬ ವಕೀಲರಿದ್ದಾರೆ. ಅವರಿಗೆ ಕಾಗದ ಬರೆದು ಕೊಡುತ್ತೇನೆ. ಅವರನ್ನು ಕಂಡು ವಿಷಯ ತಿಳಿಸು. ಅವರು ನಾರ್ಮಲ್ ಸ್ಕೂಲಿನಲ್ಲಿ ನಿನಗೊಂದು ವಿದ್ಯಾರ್ಥಿ ಸ್ಥಾನ ಕೊಡಿಸಿಕೊಡುತ್ತಾರೆಂದು ಆಗಲೇ ಒಂದು ಕಾಗದ ಬರೆದುಕೊಟ್ಟರು. ಶಿವಮೊಗ್ಗೆಗೆ ಹೋಗಿ ಲಿಂಗಪ್ಪನವರನ್ನು ಕಂಡು ಕಾಗದ ಕೊಟ್ಟೆ. ಓದಿನೋಡಿಕೊಂಡು ಆ ಕೂಡಲೇ ಅವರೂ ಒಂದುಕಾಗದ ಬರೆದು ನಾರ್ಮಲ್ ಸ್ಕೂಲ್ ಹೆಡ್ ಮಾಸ್ತರ್ ಲಿಂಗಪ್ಪ (ಬಹುಶಃ ಲಿಂಗಣ್ಣ ಎಂದೋ ಏನೋ ಮಸಕಾದ ಜ್ಞಾಪಕ) ಅವರ ಹತ್ತಿರ ನನ್ನನ್ನು ಕಳಿಸಿಕೊಟ್ಟುಬಿಟ್ಟರು. ನಾರ್ಮಲ್ ಸ್ಕೂಲ್ ಇದ್ದುದು ಶಿವಮೊಗ್ಗ-ತೀರ್ಥಹಳ್ಳಿ ರಾಜಮಾರ್ಗದಲ್ಲಿ ಊರಹೊರಗೆ ಒಂದು ಗದ್ದೆ-ತೋಟದ ಬಯಲಿನಲ್ಲಿ. ಟ್ರೈನಿಂಗ್ ಕಾಲೇಜು, ವಿದ್ಯಾರ್ಥಿನಿಲಯ, ಪ್ರಾಕ್ಟಿಸಿಂಗ್ ಪ್ರೈಮರಿಸ್ಕೂಲ್, ಆಟದ ಮೈದಾನ ಇವೆಲ್ಲವುಗಳನ್ನೊಳಗೊಂಡಂತೆ ಒಂದೇ ಒಂದು ಪ್ರಾಕಾರ ಮಧ್ಯದಲ್ಲಿ, ಒಳ್ಳೆ ಪ್ರಶಾಂತ ಸ್ಥಳದಲ್ಲಿತ್ತು. ಅದನ್ನು ನೋಡಿಯೇ ನಾನು ಪ್ರಭಾವಿತನಾಗಿ ಹೋದೆ. ಮನಸ್ಸು "ಈ ಹಿಂದೆ ಕನಸು ಮನಸ್ಸಿನಲ್ಲೂ ಯೋಚಿಸದೆ ಇದ್ದ ಈ ಪ್ರಶಾಂತ ಸ್ಥಳದಲ್ಲಿ ನಿನ್ನ ವಿದ್ಯಾಭ್ಯಾಸದ ಯೋಗವಿರುವಂತೆ ತೋರುತ್ತದೆ" ಎಂದು ಹೇಳುತ್ತಿತ್ತು.

ಹೆಡ್ ಮಾಸ್ತರರನ್ನು ಕಂಡು ವಕೀಲರ ಪತ್ರ ಕೊಟ್ಟೆ. ಅವರು ಆ ಕಾಗದ ನೋಡಿ "ನಾನೇ ಅವರನ್ನು ನೋಡಿ ಮಾತನಾಡುತ್ತೇನೆ. ನಾಳೆ ಬಂದು ನನ್ನನ್ನು ನೋಡು" ಎಂದು ಹೇಳುತ್ತ ತಮ್ಮ ಸೈಕಲ್‌ಕಚ್ಚೆಯನ್ನು ಹಾಕುತ್ತ ಹೊರಗೆ ಬಂದು ಸೈಕಲ್ ಹತ್ತಿ ಎಲ್ಲಿಗೋ ಹೊರಟು ಬಿಟ್ಟರು. ನಾನು ಸಮೀಪದಲ್ಲೇ ಇದ್ದ ತುಂಗಾನದಿಗೆ ಹೋಗಿ ಬಟ್ಟೆಬರೆಗಳನ್ನು ಶುಭ್ರವಾಗಿ ತೊಳೆದು ಮಳಲವಾರೆಯ ಮೇಲೆ ಒಣಗಲು ಹಾಕಿ ವಿಶಾಲವಾದ ಮಳಲಿನ ರಾಶಿಯ ಮೇಲೆ ಏನೇನನ್ನೊ ಯೋಚಿಸುತ್ತ ಕುಳಿತೆ. ಈ ಪೂರ್ವದಲ್ಲಿ ನಾನು ತುಂಗಭದ್ರಾ ನದಿಯನ್ನು ನೋಡಿದ್ದೇನೆ ವಿನಾ ತುಂಗಾನದಿಯನ್ನು ನೋಡಿರಲಿಲ್ಲ. ಬೇಸಿಗೆಯಾದ್ದರಿಂದ ತಿಳಿಯಾಗಿ ಶುಭ್ರವಾಗಿ ತಳದ ಕಲ್ಲು ಕೂಡ ಗಾಜಿನ ಹಿಂದೆ ಕಾಣುವಂತೆ ಕಾಣುತ್ತಿದ್ದವು. ಆ ಸೊಬಗಿಗೆ ಮಾರು ಹೋಗಿ ಅಲೌಕಿಕಾನಂದವಾಗಿ ಪ್ರಭಾವಿತನಾದೆ. 'ತುಂಗಾಪಾನ ಗಂಗಾಸ್ನಾನ'

ಎಂದು ಆಡಿಕೊಳ್ಳುತ್ತಿರುವ ಜನವಾಣಿಯೊಂದು ಜ್ಞಾಪಕಕ್ಕೆ ಬಂತು. ಅನೇಕ ಸಲ ನಾನು ನೀರು ಕುಡಿದೆ. ಬಹಳ ಹೊತ್ತು ನದಿಯಲ್ಲಿ ಈಸಾಡಿದೆ. 'ಈ ನೀರಿನ ಋಣ ಇದ್ದ ಹಾಗಿದೆ' ಎಂದು ಮನದಲ್ಲೇ ಭಾವಿಸುತ್ತ ಮೈಮರೆಯುತ್ತಿದ್ದೆ. ಆಗ ನನ್ನ ಬಟ್ಟೆ ಬರೆಗಳ ಐಸಿರಿ ಎಂದರೆ ತಲೆಗೆ ಸುತ್ತುವ ಉಂಡಿ ರುಮಾಲು, ಮೈ ಮೇಲೆ ಒಂದು ದಪ್ಪನೆಯ ನೂಲಿನಿಂದ ಹುಬ್ಬಳ್ಳಿ ಭಾರತ ಮಿಲ್‌ನಲ್ಲಿ ತಯಾರಾದ ಬಟ್ಟೆಯ ಅಂಗಿ, ಮೇಲೊಂದು ಸಾಮಾನ್ಯ ದರ್ಜೆಯ ಕೋಟು, ತುಮ್ಮಿನ ಕಟ್ಟೆಯಲ್ಲಿ ನೆಯ್ಯುತ್ತಿದ್ದ ದಪ್ಪ ನೂಲಿನ ದಬ್ಬಣ ಕಡ್ಡಿ ಪಂಜೆ, ಇಷ್ಟರ ವಿನಾ ಹೆಚ್ಚಿನ ಬಟ್ಟೆ ಬರೆಗಳಿರಲಿಲ್ಲ. ಕಾಲಿನಲ್ಲಿ ಕೆರಗಳನ್ನು ನಾನು ಹಾಕುತ್ತಿರಲಿಲ್ಲ. ಬರಿಗಾಲಿನ ನಡಿಗೆಯೇ ನನಗೆ ಬಹುದಿನದ ಅಭ್ಯಾಸವಾಗಿ ಅಂಗಾಲು ಸಾಮಾನ್ಯ ಮುಳ್ಳೂ ಕೂಡ ಒಳಗೆ ನಾಟದ ಹಾಗೆ ಗಟ್ಟಿಯಾಗಿತ್ತು. ಮೈಯೂ ಕೂಡ ಹಾಗೆಯೇ ಯಾವುದಕ್ಕೂ ಜಗ್ಗದಂತೆ ಬಲಾಢ್ಯವಾಗಿತ್ತು. ಕೈಚೀಲದಲ್ಲಿ ಒಂದು ಪಂಜೆ - ಒಂದು ಸಾದಾ ವಸ್ತ್ರ ಬಿಟ್ಟರೆ ಬೇರೆ ಏನೂ ಇರಲಿಲ್ಲ. ಟವಲ್ ಸುತ್ತಿಕೊಂಡು ಎರಡೂ ಪಂಜೆ, ಅಂಗಿ ಕೋಟು, ರುಮಾಲು ಎಲ್ಲವನ್ನೂ ತೊಳೆದು ಹಾಕಿದ್ದೆ. ಉಂಡಿರುಮಾಲಿನ ಬೆಲೆ ಹನ್ನೆರಡಾಣೆ, ಪಂಜೆಗಳು ಒಂದು ರೂಪಾಯಿ ಹನ್ನೆರಡಾಣೆಗೆ ಜೊತೆ ಕಿಮತ್ತಿನವು. ಕೋಟಿನ ಬೆಲೆ ಎರಡು ರೂಪಾಯಿ (ಬಟ್ಟೆ ಹೊಲಿಯುವ ಕೂಲಿ ಸೇರಿ) ಆರಾಣೆ ಬಟ್ಟೆ ಹೊಲಿಗೂಲಿ ಸಹಿತ ತಯಾರಾದ ಅಂಗಿ. ಆಗಿನ ಹಳ್ಳಿಯ ಸಾಮಾನ್ಯ ಜನರೆಲ್ಲ ತೊಡುತ್ತಿದ್ದ ಬಟ್ಟೆಯ ಐಸಿರಿ ಇಷ್ಟೆ. ಇದ್ದ ಈ ಬಟ್ಟೆಯನ್ನು ಶುಭ್ರಗೊಳಿಸಿಕೊಂಡು ಶಿವಮೊಗ್ಗ ನಗರ ಜೀವನಕ್ಕೆ ಸ್ವಲ್ಪ ಮಟ್ಟಿಗಾದರೂ ಹೊಂದಿಕೊಳ್ಳಬೇಕೆಂಬ ಇಚ್ಛೆಯಿಂದಲೇ ಹೀಗೆ ಅವನ್ನೆಲ್ಲ ಅರ್ಧ ಆಣೆ ಸೋಪಿನಿಂದ ತೊಳೆದು ಶುಭ್ರಗೊಳಿಸಿಕೊಂಡುದರ ಉದ್ದೇಶ. ಬಟ್ಟೆಬರೆಗಳೆಲ್ಲ ಒಣಗಿದ ಮೇಲೆ ಬಟ್ಟೆ ತೊಟ್ಟುಕೊಂಡು ಬೆಳಗುತ್ತಿ ಲಿಂಗಪ್ಪನವರ ಮನಗೆ ಹೋದೆ. ಅವರು ನನಗೆ "ನಾರ್ಮಲ್ ಸ್ಕೂಲ್ ಹೆಡ್ ಮಾಸ್ತರರು ಬಂದಿದ್ದರು. ನಿನಗೆ ನಾರ್ಮಲ್ ಸ್ಕೂಲಿನಲ್ಲಿ ಓದಲು ಸ್ಥಾನ ಕೊಡುತ್ತಾರಂತೆ. ನೀನು ಧಾರವಾಡದ ಮುಲ್ಕೀ ಪರೀಕ್ಷೆಯಲ್ಲಿ ಪಾಸಾದವನಾದ್ದರಿಂದ ಮೇಲ್ಪಟ್ಟ ಆಫೀಸರರಿಗೆ ಬರೆದು ಅಪ್ಪಣೆ ತರಿಸಿಕೊಂಡು ಸೇರಿಸಿಕೊಳ್ಳುತ್ತಾರಂತೆ. ವಿದ್ಯಾರ್ಥಿವೇತನವನ್ನು ತರಿಸಿಕೊಡುತ್ತಾರಂತೆ. ಶಿರಾಳಕೊಪ್ಪದವನೇ ಎಂದು ಅಪ್ಲಿಕೇಷನ್‌ನಲ್ಲಿ ನಮೂದಿಸಿ ಸಕಾಲದಲ್ಲಿ ಅರ್ಜಿಹಾಕಿ ಸೇರಿಕೊಂಡು ವಿದ್ಯಾಭ್ಯಾಸ ಮುಂದುವರಿಸಿ ಬಿಡು. ಈ ವಿಷಯವನ್ನು ಚೆನ್ನಮಲ್ಲಪ್ಪನವರಿಗೆ ತಿಳಿಸು" ಎಂದು ಹೇಳಿ ಕಳಿಸಿದರು..

ನಾನು ಆ ರಾತ್ರಿಯೇ ಕಾಲೇಜಿನ ಆವರಣದಲ್ಲಿರುವ ವಿದ್ಯಾರ್ಥಿನಿಲಯಕ್ಕೆ ಹೋದೆ. ಅಲ್ಲಿನ ಉಪಾಧ್ಯಾಯರನ್ನು ಸಂಪರ್ಕಿಸಲು ಪ್ರಯತ್ನಿಸಿದೆ. ಅಪರಿಚಿತನೂ, ವೇಷಭೂಷಣಗಳಿಂದ ಅವರಿಗಿಂತ ಭಿನ್ನನೂ, ಶುದ್ಧ ಧಾರವಾಡದ ಭಾಷೆಯವನೂ ಆದ ನನ್ನನ್ನು ಯಾರೂ ನಂಬಲೇ ಇಲ್ಲ. ವಿಶ್ವಾಸದೋರಿ ಮಾತನಾಡಲೂ ಇಲ್ಲ. ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳ ವಿವಿಧ ಕಡೆಗಳಿಂದ ಬಂದ ನೂರಾರು ಜನ ಉಪಾಧ್ಯಾಯರಿಂದ ಆ ವಿದ್ಯಾರ್ಥಿನಿಲಯ ಗಿಜಿಗಿಜಿ ಎನ್ನುತ್ತಿತ್ತು. ಅಲ್ಲಿ ಜನರಲ್ ಹಾಸ್ಟಲ್ ಮತ್ತು ವೀರಶೈವರಿಗೆಗೊಂದು ಪ್ರತ್ಯೇಕ ಹಾಸ್ಟಲ್ ಹೀಗೆ ಎರಡು ಹಾಸ್ಟೆಲುಗಳಿದ್ದವು. ಅನೇಕ ಕೊಠಡಿಗಳಲ್ಲಿ ನೂರಾರು ಜನ ಉಪಾಧ್ಯಾಯರು ತಮ್ಮದ್ರೇ ಆದ ರೀತಿಯಿಂದ ತಮ್ಮ ತಮ್ಮ ಓದುಬರೆಹಗಳಲ್ಲಿ ನಿರತರಾಗಿದ್ದರು. ಎಲ್ಲ ಕೊಠಡಿಗಳೂ ವಿದ್ಯುದ್ದೀಪಗಳಿಂದ ಬೆಳಗುತ್ತಿದ್ದವು. ಇವರೆಲ್ಲ ಸಾಮಾನ್ಯವಾಗಿ ಲುಂಗಿ ಪಂಚೆ ಉಟ್ಟು ತಲೆಯ ಮೇಲೆ ಕ್ರಾಪ್ ಬಿಟ್ಟವರು. ರುಮಾಲು ಸುತ್ತುವವರು ಯಾರೂ ಇದ್ದಿಲ್ಲ. ಕಚ್ಚೆ ಪಂಚೆಯವರೆಲ್ಲ

ಸಾಮಾನ್ಯವಾಗಿ ಇವರ ದೃಷ್ಟಿಯಿಂದ ಓಬಿರಾಯನ ಕಾಲದವರು. ಕೆಲವರು ಇವರಲ್ಲಿ ಪಾಯಿಜಾಮದವರೂ, ಕೆಲವರು ಸೂಟುಧಾರಿಗಳೂ ಇದ್ದರು. ನನ್ನನ್ನು ಇವರು ಧಾರವಾಡದ ಸೀಮೆಯ ಯಾವುದೋ ಗಮಾರನಾಗಿರಬೇಕೆಂದು ವೇಷಭೂಷಣಗಳಿಂದಲೇ ತಪ್ಪು ನಿರ್ಣಯ ಮಾಡಿರಬೇಕು. ನನಗಿಂತಲೂ ಎಷ್ಟೋ ಪಾಲು ಬಟ್ಟೆಬರೆಗಳಿಂದ ಕೂಡಿ ಆಧುನಿಕತೆಯ ಗಾಳಿಯಲ್ಲಿ ತೇಲುತ್ತಿದ್ದ ಇವರು ಹಾಗೆ ನಿರ್ಣಯಿಸಿದ್ದು ತಪ್ಪೇನಲ್ಲ. ಆದರೂ ನಾನು ಬಿಡಬೇಕಲ್ಲ! ಮೊಂಡುಧೈರ್ಯದಿಂದ ಅವರನ್ನೆಲ್ಲ ಸಂಪರ್ಕಿಸುವುದರಲ್ಲಿ ನಿರತನಾಗಿ ಕೊಠಡಿಯಿಂದ ಕೊಠಡಿಗೆ ಹೋಗಿ ಪರಿಚಯಕ್ಕೆ ಹಾತೊರೆಯುತ್ತಿದ್ದೆ. ಯಾರೂ ಮುಖಕೊಟ್ಟು ಮಾತನಾಡುವವರೇ ಇಲ್ಲ. ನನಗೆ ಬೇಕಾದುದು ಮತ್ತೇನೂ ಅಲ್ಲ. ಈ ರಾತ್ರಿ ಯಾವುದಾದರೂ ಒಂದು ಕೊಠಡಿಯಲ್ಲಿ ಕಳೆಯಲು ಅವಕಾಶಬೇಕಾಗಿತ್ತು. ಹಾಗೇ ಅವಕಾಶ ಸಿಕ್ಕಾಗ ಈ ಕಾಲೇಜು ಇಲ್ಲಿನ ವಿದ್ಯಾಭ್ಯಾಸದ ರೀತಿ,ಹೊಸದಾಗಿ ಸೇರುವವರು ಅನುಸರಿಸಬೇಕಾದ ಕ್ರಮ ಮುಂತಾದುವನ್ನು ತಿಳಿದುಕೊಂಡು ಮುಂದಿನ ಸಿದ್ಧತೆ ಮಾಡಿಕೊಳ್ಳಲು ವಿಷಯ ಸಂಗ್ರಹಿಸಿಕೊಂಡು ಊರಿಗೆ ಹೋಗಬೇಕಾಗಿತ್ತು. ಅದಕ್ಕಾಗಿ ಇಷ್ಟೊಂದು ಪೇಚಾಡುತ್ತ ಕೊಠಡಿಯಿಂದ ಕೊಠಡಿಗೆ ಲಗ್ಗೆ ಹಾಕಿ ನನ್ನ ಪರಿಚಯವನ್ನು ನಾನೇ ಮಾಡಿಕೊಡುತ್ತ ನನಗೆ ಇದ್ದ ಬುದ್ಧಿಯನ್ನೆಲ್ಲ ವ್ಯಯಿಸಿದೆ. ನನ್ನ ಮಾತಿಗೆ ಅವರು ನಗುತ್ತಿದ್ದರು. ನಮ್ಮ ಮಾತು ಅವರಿಗೆ ಒಂದ ರೀತಿಯಲ್ಲಿ ಒರಟಾಗಿ ಕಾಣುತ್ತಿತ್ತೋ ಏನೋ! ಕನ್ನಡನಾಡಿನಲ್ಲಿ ಕೇವಲ ನೂರಾರು ಮೈಲುಗಳ ಅಂತರದಲ್ಲಿಯೇ ಭಾಷೆಯ ವಿಷಯದಲ್ಲಿ ಇಷ್ಟೊಂದು ತಾರತಮ್ಯವಿದೆಯಲ್ಲಾ! ಎಂಬುದು ನನಗೆ ಹೊಳೆದದ್ದೇ ಆಗ. ಕೆಲವರು ಎಷ್ಟು ಬೇಕೋ ಅಷ್ಟು ಮಾತಾಡಿ ನನ್ನನ್ನು ನಿರ್ಲಕ್ಷ್ಯ ಮಾಡಿಬಿಟ್ಟರು ಕೆಲವರು ಮಾತಾಡಲೂ ಹಿಂದು ಮುಂದು ನೋಡಿ ಮುಖ ತಿರುಗಿಸಿಕೊಂಡು ನಕ್ಕು ತಮ್ಮ ಕೆಲಸದಲ್ಲಿ ಮಗ್ನರಾಗಿ ಬಿಡುತ್ತಿದ್ದರು. ಅಷ್ಟರಲ್ಲಿ ಪ್ರತ್ಯೇಕವಾದ ಒಂದು ಚಿಕ್ಕಕೊಠಡಿಯಲ್ಲಿ ಒಬ್ಬನೇ ಇದ್ದ ವೀರಪ್ಪ ಎಂಬ ಉಪಾಧ್ಯಾಯನ ಕೊಠಡಿಗೆ ಹೋದೆ. ಅವನು ಕಳ್ಳರಲ್ಲೆಲ್ಲ ಒಳ್ಳೆಯಕಳ್ಳ ಎಂಬಂತೆ ಇಷ್ಟೆಲ್ಲ ಜನರಲ್ಲೆ ಒಳ್ಳೆಯವನೆನ್ನುವಷ್ಟರ ಮಟ್ಟಿಗೆ "ಬನ್ನಿ ಕುಳಿತುಕೊಳ್ಳಿ; ನಿಮ್ಮ ಊರಾವುದು? ಏಕೆ ಬಂದದ್ದು? ಹೆಸರು ದೆಸೆ.. ಇತ್ಯಾದಿ ಪ್ರವರಗಳನ್ನೆಲ್ಲ ಕೇಳಿ ನಗುನಗುತ್ತ ಮಾತನ್ನಾದರೂ ಆಡಿದ. ಅವನು 16-17 ವರ್ಷ ಅನೇಕ ಹಳ್ಳಿಗಳಲ್ಲಿ ಉಪಾಧ್ಯಾಯ ವೃತ್ತಿಯನ್ನು ಮಾಡಿ ಟ್ರೈನಿಂಗ್‌ಗೆ ಇಲಾಖೆಯಿಂದ ಚುನಾಯಿಲ್ಪಟ್ಟು ಬಂದು ಎರಡನೇ ವರ್ಷದ ಟ್ರೈನಿಂಗ್ ತರಗತಿಯಲ್ಲಿ ಓದುತ್ತಿದ್ದ ಓರ್ವ ಉಪಾಧ್ಯಾಯ ಎಂಬುದನ್ನು ಅವನ ಮುಖದಿಂದಲೇ ತಿಳಿದೆ. ಅವನೊಬ್ಬ ಹಳೆಯ ಶಾನುಭೋಗ ಎಂದು ಗುರುತಿಸಿದೆ. ಅವನಿಗೆ ಕಾನೂನು ಕಟ್ಟಳೆ, ಇಲಾಖೆಯ ನಿಯಮ ಹಾಳುಮೂಳು ಎಲ್ಲ ಗೊತ್ತಿರುವಂತೆ ತಿಳಿದು ಬಂತು. ಪ್ರಚಂಡ ಮನುಷ್ಯನೆಂಬುದೂ ಅರ್ಥವಾಯಿತು. ಸರಿ, ಇವನೇ ಸದ್ಯಕ್ಕೆ ಗುರು ಎಂದುಕೊಂಡು ಅವನೆದುರು ನನ್ನ ಬಂದ ಉದ್ದೇಶವನ್ನೆಲ್ಲ ಸವಿಸ್ತಾರವಾಗಿ ತಿಳಿಸಿದೆ. ಅವನು ಕಾಲೇಜಿಗೆ ಸೇರಿಕೊಳ್ಳಲು ಮಾಡಬೇಕಾದ ಪೂರ್ವಭಾವಿ ಕಾರ್ಯಗಳ ಬಗೆಗೆ ಏನೆಲ್ಲವನ್ನು ತಿಳಿಸುತ್ತ "ಹೊತ್ತಾಯಿತು, ಮಲಗಬೇಕು; ನೀವಿನ್ನು ಹೊರಡಿ"" ಎಂದು ಬಿಟ್ಟ. ನಾನು "ಈ ರಾತ್ರಿ ಇಲ್ಲಿಯೇ ಮಲಗಲು ಅವಕಾಶ ಕೊಡಿ" ಎಂದೆ. ಅದಕ್ಕೆ ಅವನು ನನ್ನನ್ನು ಕಂಡು ಹೆದರಿಕೊಂಡೋ ಅಥವಾ ಇನ್ನೇನು ಕಾರಣವೋ, "ಇದು ಗೌರ್ನಮೆಂಟ್ ಹಾಸ್ಟಲ್. ಹಾಗೆಲ್ಲ ಕಂಡ ಕಂಡವರನ್ನು ಸೇರಿಸೋ ಹಾಗಿಲ್ಲ. ಒಮ್ಮೊಮ್ಮೆ ರಾತ್ರಿಯೂ ವಾರ್ಡನ್‌ಗಳು ಬಂದು ನಮ್ಮನ್ನೆಲ್ಲ ತಪಾಸಣೆ ಮಾಡುವುದುಂಟು......" ಹಾಗೆ

ಹೀಗೆ ಏನೇನೋ ಹಸಿಸುಳ್ಳಿನ ಸುರುಳಿಯನ್ನೇ ಬಿಚ್ಚಿ ನನ್ನನ್ನು ಹೊರಗೆ ಹಾಕಿ ತಾನು ಬಾಗಿಲು ಹಾಕಿಕೊಂಡು ದೀಪ ಆರಿಸಿ ಮಲಗಿಕೊಂಡು ಬಿಟ್ಟ.

ನಾನು ಸುತ್ತ ಮುತ್ತ ನೋಡಿದೆ. ಅದೊಂದು ದೊಡ್ಡ ಕಾಂಪೌಂಡು. ಸುತ್ತಲೂ ಎತ್ತರಗೋಡೆಯಿತ್ತು. ನಾಲ್ಕಾರು ದೊಡ್ಡ ದೊಡ್ಡ ಮಾವಿನ ಮರಗಳೂ ಅಲ್ಲಿದ್ದವು. ಅಪರಿಚಿತವಾದ ಈ ಊರಿನಲ್ಲಿ ಬೇರಲ್ಲಿಯಾದರೂ ಹೋಗಿ ಮಲಗಿಕೊಳ್ಳುವುದಕ್ಕಿಂತ ಈ ಕಾಂಪೌಂಡಿನಲ್ಲಿರುವ ಒಂದು ಮಾವಿನ ಮರದ ಕೆಳಗೇ ಏಕೆ ಮಲಗಿಕೊಳ್ಳಬಾರದೆಂದು ನಿಶ್ಚಯಿಸಿ ಹಾಗೇ ಮಾಡಿಬಿಟ್ಟೆ. ನನಗೆ ನೆಲದ ಮೇಲೆಯ ಮಲಗಿ ನಿದ್ರೆ ತೆಗೆಯುವ ಅಭ್ಯಾಸ ಬಹಳ ದಿನದಿಂದ ಬಂದದ್ದು. ನಾನು ವ್ಯವಸಾಯ ಮಾಡುವ ಕಾಲದಲ್ಲಿ, ಹೊಲದಲ್ಲಿ ಕುರಿಹಿಂಡು ತರುಬಿಸಿದಾಗ ರಾತ್ರಿ ಕುರಿಗಳನ್ನು ಕಾಯಲು ನಾನೇ ಹೋಗಿ ಹೆಂಡೆಗಳಲ್ಲಿಯೇ ಮಲಗಿ ನಿದ್ರೆ ತೆಗೆದ ಮನುಷ್ಯ ನಾನು. ಸುಗ್ಗಿಯಲ್ಲಿ ಒಕ್ಕಲು ಕೆಲಸಕ್ಕೆ ಊರ ಹೊರಗೆ ಕಣಕಟ್ಟಿ ಮಾಡಿದಾಗ ಒಕ್ಕಲು ಕೆಲಸವೆಲ್ಲ ಮುಗಿಯುವವರೆಗೆ ಕಣದಲ್ಲಿ ಬಿಸಿಲು-ಚಳಿ ಯಾವುದನ್ನು ಲೆಕ್ಕಿಸದೆ ಕೆಲಸ ಮಾಡಿ, ಬತ್ತದ ಹುಲ್ಲನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡು ಬೆಳಗಿನವರೆಗೆ ಗಾಢನಿದ್ರೆ ಸುಖ ಅನುಭವಿಸಿದವನು. ಹತ್ತಿ ಸುಗ್ಗಿಯಲ್ಲಿ ಒಮ್ಮೊಮ್ಮೆ ಬಂಕಾಪುರದ ಕಡೆಯ ಕಳ್ಳರ ಹಾವಳಿಯಾಗುವ ಸುಳಿವು ಸಿಕ್ಕಾಗಿ ರಾತ್ರಿಯೆಲ್ಲ ಹೊಲದಲ್ಲಿಯೇ ಕಾಲಕಳೆದು ಎಲ್ಲೆಂದರಲ್ಲಿ ನಿದ್ರೆಮಾಡಿದ ಮನುಷ್ಯನಾದ ನನಗೆ ಇಲ್ಲಿನ ಕಾಂಪೌಂಡು ಮಾವಿನ ಮರದ ತಲ ಎಷ್ಟೋ ಮೇಲಿನದೆನಿಸಿತ್ತು. ಕೈಚೀಲದಲ್ಲಿದ್ದ ಪಂಜೆಯನ್ನು ಹೊದ್ದು ಸಮವಸ್ತ್ರ ಸಮೇತವಾಗಿ ಮಾವಿನ ಮರದ ಬೇರನ್ನೇ ತಲೆಗಿಂಬು ಮಾಡಿಕೊಂಡು ವಾಮಕುಕ್ಷಿಯಾಗಿ ಬಿಟ್ಟೆ. ಎಚ್ಚರವಾದಾಗ ಚುಮು ಚುಮು ಬೆಳಕು ಹರಿಯುತ್ತಿತ್ತು. ತುಂಗಾನದಿಗೆ ಹೋಗಿ ಪ್ರಾತರ್ವಿಧಿಗಳನ್ನು ಮುಗಿಸಿ ಸ್ನಾನ ಮಾಡಿ ದೊಡ್ಡ ಪೇಟೆಯಲ್ಲಿರುವ ಬಸವೇಶ್ವರ ದೇವಾಲಯಕ್ಕೆ ಬಂದು ಅಲ್ಲಿ ದೇವರಿಗೆ ಕೈಮುಗಿದು ಪೂಜಾರಿಯಿಂದ ಸ್ವಲ್ಪ ಭಸ್ಮ ಕೇಳಿ ಪಡೆದು ಹಣೆಗೆ ಧರಿಸಿ ಪುನಃ ಹಾಸ್ಟಲಿಗೆ ಬಂದು ವೀರಪ್ಪ ಮಾಸ್ತರರ ಎದುರಿಗೆ ನಿಂತೆ. ಅವನು "ಏನ್ರಿ, ರಾತ್ರಿ ಎಲ್ಲಿಗೆ ಹೋಗಿದ್ರಿ?". "ಎಲ್ಲೂ ಇಲ್ಲ. ಇಲ್ಲೇ ಆ ಮಾವಿನ ಮರದ ಕೆಳಗೆ ಸುಖವಾಗಿ ನಿದ್ರಿಸಿದೆ. ಬೇಸಿಗೆಯಾದ್ದರಿಂದ ತುಂಬಾ ಸುಖನಿದ್ರೆಯಾಯಿತು" ಎಂದೆ. "ಬಲು ಗಟ್ಟಿಗರಪ್ಪ ನೀವು! ನಿಮಗೆ ರಾತ್ರಿ ನಮ್ಮರೂಮಿನಲ್ಲೇ ಜಾಗಾ ಕೊಡುತ್ತಿದ್ದೆ. ನಮ್ಮ ಮೇಸ್ಟ್ರುಗಳು ಒಳ್ಳೆಯವರಲ್ಲ, ಚಾಡಿಕೋರರು. ನಮ್ಮಂಥ ಒಳ್ಳೆಯವರಿಗೆ ಅವರು ಸೇರುವುದಿಲ್ಲ. ವಾರ್ಡನ್‌ಗೆ ಹಾಸ್ಟಲಿನಲ್ಲಿ ಯಾರ್‍ಯಾರನ್ನೋ ಸೇರಿಸಿ ಗಲಾಟೆಮಾಡ್ತಾರೆ. ಹಾಗೆ ಹೀಗೆ ಒಂದಕ್ಕೆ ಹತ್ತು ಹೇಳಿಬಿಡುತ್ತಾರೆ ಕಣ್ರೀ! ಅದಕ್ಕಾಗಿ ನಿಮಗೆ ಹಾಗೆ ರಾತ್ರಿ ನಾನು ಹೇಳಿದ್ದು. ಪಾಪ ರಾತ್ರಿ ಅದೆಷ್ಟು ನಿಮಗೆ ತೊಂದ್ರೆ ಆಯ್ತೋ ಏನೋ! ಆದರೆ ಇಲ್ಲಿ ಕಳ್ರು ಗಿಳ್ರು ಅನ್ನೊ ಭಯ ಮಾತ್ರ ಇಲ್ಲ" ಎಂದು ಮೊದಲಿನ ಸುಳ್ಳು ಮುಚ್ಚಲು ಇನೊಂದು ಸುಳ್ಳನ್ನು ಹೇಳಿಬಿಟ್ಟ. ನಾನು ಮನಸ್ಸಿನಲ್ಲಿ ಉಳಿದ ಇಲ್ಲಿನ ಉಪಾಧ್ಯಾಯರಿಗೂ ಇವರಿಗೂ ವಿಶ್ವಾಸವಿಲ್ಲವೆಂಬುದನ್ನು ತಿಳಿದುಕೊಳ್ಳುವಂತೆ ಆದದ್ದೊಂದು ಲಾಭವೆನಿಸಿತು. ಆದರೂ ಮರಳುಗಾಡಿನಲ್ಲಿ ಓಯಸಿಸ್‌ನಂತೆ ಸಿಕ್ಕ ಇವರನ್ನು ಬಿಡಬಾರದೆಂದೂ, ಇವರನ್ನು ಪೇಟೆಗೆ ಕರೆದು ಕೊಂಡು ಹೋಗಿ ಚೆನ್ನಾಗಿ ತಿಂಡಿ ತಿನ್ನಿಸಿ ಕಾಫಿ ಕುಡಿಸಿ ವಿಶ್ವಾಸಕ್ಕೆ ತೆಗೆದುಕೊಳ್ಳಬೇಕೆಂದು ಮನಸ್ಸು ಮಾಡಿದೆ.

ಮೊದಲೇ ಉಪಾಧ್ಯಾಯರು ಇವರಿಗೆ 15-20 ರೂಪಾಯಿ ಹೆಚ್ಚೆಂದರೆ 25 ರೂಪಾಯಿ ಸಂಬಳ ಸಾರಿಗೆ. ಊರಲ್ಲಿ ಹೆಂಡಿರು ಮಕ್ಕಳನ್ನು ಬಿಟ್ಟು ಬಂದವರು. ಸಂಬಳದ ಹಣದಿಂದಲೇ

ಇಲ್ಲಿಯ ಇವರ ಖರ್ಚು ವೆಚ್ಚ ನಡೆಯಬೇಕು. ಊರಿನಲ್ಲೂ ತಮ್ಮ ಸಂಸಾರದ ಜೀವನ ನಿರ್ವಹಣೆ ಸಾಗಬೇಕು. ಇಂಥವರನ್ನು ಒಣಮಾತುಗಳಿಂದ ಬುಟ್ಟಿಗೆ ಹಾಕಿಕೊಳ್ಳಲಾಗುವುದಿಲ್ಲ. ಸ್ವಲ್ಪ ನಮ್ಮ ಕೈಯಿಂದಲೂ ಖರ್ಚುವೆಚ್ಚ ಮಾಡಿ ಮನವೊಲಿಸಿ ವಿಶ್ವಾಸಕ್ಕೆ ತೆಗೆದುಕೊಳ್ಳಬೇಕೆಂದು ಭಾವಿಸಿ, "ಮಾಸ್ತರೇ, ಬನ್ನಿ, ಚಹಾ ಫಳಾರಾ ಮುಗಿಸಿಕೊಂಡು ಬರೋಣ" ಎಂದೆ. ಚಾ ಫಳಾರಾ ಎಂಬ ಮಾತು ಆವನಿಗೆ ವಿಚಿತ್ರವೆನಿಸಿತು. "ಚಾ ಫಳಾರಾ ಎಂದರೇನ್ರೀ?" ಎಂದು ನಗುತ್ತಲೇ ಕೇಳಿದ. ಚಹಾ ಮತ್ತು ಫಲಾಹಾರ ಎನ್ನುವುದರ ಸಂಕ್ಷೇಪ ರೂಪ ಚಾ ಫಳಾರಾ ಎಂದೆ. ನಕ್ಕಬಿಟ್ಟ. "ಓಹೋ ಕಾಫಿ ತಿಂಡಿಗೆ ಕರೆದಿರಾ! ಆಗಲಿ ಸಂತೋಷ, ಹೋಗಿ ಬರೋಣ" ಎಂದು ಲುಂಗಿಯುಟ್ಟು ಅಂಗಿತೊಟ್ಟು ಹೆಗಲಮೇಲೊಂದು ಟವಲ್ ಹಾಕಿಕೊಂಡು ಹೊರಗೆ ಬಂದು ಕೊಠಡಿಗೆ ಬೀಗ ಹಾಕಿಯೇ ಬಿಟ್ಟ. ದಾರಿಯುದ್ದಕ್ಕೂ ಮಾತಾಡುತ್ತ ಹೊರಟೆವು. ನಾವು ಹೊರಟದ್ದನ್ನು ಕಂಡು ಉಳಿದ ಕೆಲವು ಉಪಾಧ್ಯಾಯರು ಹಾಸ್ಯ ಮಾಡುತ್ತಿದ್ದುದನ್ನು ಗಮನಿಸಿದರೆ, ಬಹುಶಃ "ನನ್ನನ್ನು ಕಂಡರೆ ಇಲ್ಲಿಯ ಉಪಾಧ್ಯಾಯರಿಗೆ ಕೆಲವರಿಗೆ ಆಗುವುದಿಲ್ಲ" ಎಂದು ಮೊದಲು ಈ ಉಪಾಧ್ಯಾಯರು ಹೇಳಿದ್ದ ಮಾತನ್ನು ಜ್ಞಾಪಿಸಿಕೊಂಡು ನಮ್ಮ ಪಾಡಿಗೆ ನಾವು ಮಾತನಾಡುತ್ತ ಹೊರಟೇ ಬಿಟ್ಟೆವು. 'ಚಾ ಫಳಾರಾ' ಎಂಬುದನ್ನು ನೆನೆಸಿಕೊಂಡೋ ಏನೋ - ವೀರಪ್ಪ

"ನಿಮ್ಮ ಧಾರವಾಡ ಕಡೆ ಭಾಷೆ ಬಹು ಒರಟು" ಎಂದ.

"ಹಾಗೇನೂ ಇಲ್ಲ. ಅಲ್ಲಿನವರ ಮಾತಿನ ಧ್ವನಿ, ಅಲ್ಲಿನ ರೂಢಿಯ ಮಾತು ಇಲ್ಲಿನವರಿಗೆ ಹೊಸದಾದ್ದರಿಂದ ಒರಟಾಗಿ ಕಾಣುತ್ತಿರಬಹುದು."

"ನಿಮ್ಮ ಚಾ ಫಳಾರಾ ಎಂಬ ಮಾತು ಕೇಳಿಯೇ ನಾನು ಹೆದರಿಬಿಟ್ಟೆ."

"ನಮ್ಮ ಕಡೆ ತಿಂಡಿಗೆ ಹೋಗೋಣ ಎಂದರೆ ಸಾಕು, ಏನೋ ಗ್ರಹಚಾರ ಕಾಡಿದ ಹಾಗೆಯೇ? ಜಗಳಕ್ಕೆ ಬಿದ್ದು ಬಿಡುವ ಸಂಭವ ಹೆಚ್ಚು.

'ಯಾಕೆ?'"

"ತಿಂಡಿ ಎಂದರೆ ಕೆಟ್ಟ ಅರ್ಥ ನಮ್ಮಲ್ಲಿದೆ. ತಿಂಡಿ ಶಬ್ದಕ್ಕೆ ಲಘು ಆಹಾರ ಸೇವನೆ ಎಂಬ ಅರ್ಥ ಯಾವ ನಿಘಂಟುವಿನಲ್ಲೂ ಇಲ್ಲ. ತಿಂಡಿ ಎಂಬುದು ಕಡಿತ, ನವೆ ಎಂಬರ್ಥದ್ದು ಅಲ್ಲವೆ?"

ಈ ಮಾತಿಗೆ ಆತ ಗಟ್ಟಿಯಾಗಿ ನಕ್ಕುಬಿಟ್ಟ. "ಹೋಗಲಿ ಬಿಡಿ ಮಾಸ್ತರ! ಇಲ್ಲಿ ಒಳ್ಳೇ ತಿಂಡಿ ಮಾಡುವ ಹೋಟಲ್ ಯಾವುದೋ ಅಲ್ಲಿಗೇ ಹೋಗೋಣ. ನಿಮಗೆ ಅದೆಲ್ಲ ಗೊತ್ತಾ" ಎಂದ. "ಇಲ್ಲಿ ಮಹಾಬಲಯ್ಯ ಅನ್ನುವವನ ಹೋಟೆಲ್ ಇದೆ. ಇಡೀ ಶಿವಮೊಗ್ಗದಲ್ಲೇ ಮಸಾಲೆ ದೋಸೆಗೆ ಪ್ರಸಿದ್ಧ. ಕಾಲಾಣೆ ಹೆಚ್ಚು ಅಷ್ಟೆ. ಆದರೂ ಚಿಂತೆಯಿಲ್ಲ. ಬಹಳ ಟೇಸ್ಟ್ ಆಗಿರುತ್ತೆ" ಎಂದ. ಟೇಸ್ಟ್ ಎಂದರೇನು ಎಂಬುದು ತಿಳಿಯದೆ ಮನದಲ್ಲೇ ಪೇಚಾಡುತ್ತ ಫಸ್ಟ ಅನ್ನುವುದಕ್ಕೆ ಬದಲಾಗಿ ಟೇಸ್ಟ್ ಎಂದಿರಬೇಕೆಂದು ಭಾವಿಸಿ "ಆ ಹೋಟೆಲ್ ದೋಸೆ ಫಸ್ಟ್ ಆಗಿದ್ದರೆ ಅಲ್ಲಿಗೇ ಹೋಗೋಣ ನಡೀರಿ" ಎಂದೆ. "ಫಸ್ಟ್ ಅಲ್ರೀ ಟೇಸ್ಟ್" ಎನ್ನುತ್ತ ನಕ್ಕು ಟೇಸ್ಟ್ ಅಂದರೆ ರುಚಿಕಟ್ಟು ಎಂದು ಅರ್ಥ. ನೀವು ಇಂಗ್ಲೀಷ್ ಎಷ್ಟು ಓದಿದ್ದೀರಿ?" ಎಂದ

"ನನಗೆ ಎ.ಬಿ.ಸಿ.ಡಿ ಗೊತ್ತಿಲ್ಲ. ಫಸ್ಟು - ಸೆಕೆಂಡು ಇತ್ಯಾದಿ ಶಬ್ದಗಳ ಪರಿಚಯ ಅಷ್ಟು ಇಷ್ಟು ರೂಢಿಯಿಂದ ಆದವು. ಅದಕ್ಕಾಗಿ ನಾನು ಫಸ್ಟ್ ಎಂದೆ" ಎಂದೆ ಬೆಪ್ಪನಗೆ ನಗುತ್ತ.

"ಹಾಗೆ ಹೇಳಿ, ಮತ್ತೆ ನೀವು ಅಚ್ಚಕನ್ನಡದ ಜನ. ಧಾರವಾಡದ ಕನ್ನಡ ಅಂದರೆ ಕನ್ನಡ! ಅಲ್ಲಿ ಜನ ಬಹಳ ಗಟ್ಟಿ." ಇತ್ಯಾದಿ ಹೊಗಳಿಕೆಗೆ ಪ್ರಾರಂಭಿಸಿಬಿಟ್ಟ. ಅವನ ಮಾತುಗಳ ಹಿನ್ನೆಲೆಯನ್ನು ನಾನು ಅರ್ಥಮಾಡಿಕೊಳ್ಳದಷ್ಟು ದಡ್ಡನೇನೂ ಆಗಿರಲಿಲ್ಲ. ಮಹಾಬಲಯ್ಯನ ಹೋಟಲಿನಲ್ಲಿ ಅವನಿಗೆ ಬೇಡಬೇಡವೆಂದರೂ ಎರಡು ದೋಸೆ ಮೇಲೆ ಬೆಣ್ಣೆ ಏನೆಲ್ಲ ಹಾಕಿಸಿದೆ. ನಾನೂ ಎರಡು ದೋಸೆ ಬೆಣ್ಣೆ ತಿಂದೆ. ಅವನು ಹೇಳಿದಂತೆ ದೋಸೆ ಬಹಳ ಚೆನ್ನಾಗಿ ಇದ್ದುದೇನೋ ನಿಜ. ನನಗೆ ನಿನ್ನೆಯಿಂದ ಗಡಿಬಿಡಿಯಲ್ಲಿ ಸರಿಯಾಗಿ ಊಟ ಮಾಡಿರಲಿಲ್ಲ. ನಾಲ್ಕು ದೋಸೆ ನಾಲ್ಕು ಬೆಣ್ಣೆ ಎರಡು ಕಾಫಿಗೆ ಎಂಟಾಣೆ ಆಯಿತು. ಅದು ಸ್ವಲ್ಪ ಜಾಸ್ತಿಯೇ ಎಂದು ನನಗನ್ನಿಸಿತು. ಆದರೂ ಅವನ ನಚ್ಚಿನ ಹೋಟೆಲ್‌ನಲ್ಲಿ ಅವನಿಗೆ ಕಾಫಿ ತಿಂಡಿ ಮಾಡಿಸಿದೆನಲ್ಲ! ಅದೇ ನನಗೆ ಬೇಕಾದದ್ದು. ಅನಂತರ ಅವನು "ನೀನೇನೂ ಭಯ ಪಡಬೇಡಿ. ಇಲ್ಲಿ ನಮ್ಮ ಸ್ಕೂಲಿಗೆ ಸೇರಿಕೊಂಡು ಬಿಡಿ. ಹಾಸ್ಟಲ್ ಸೌಲಭ್ಯ ಬಹಳ ಚೆನ್ನಾಗಿದೆ. ನಿಮಗೆ ಎಲ್ಲ ಅನುಕೂಲಮಾಡಿಸುತ್ತೇನೆ. ಸದ್ಯಕ್ಕೆ ನಮ್ಮ ರೂಂನಲ್ಲಿ ಇದ್ದು ಬಿಡಿ. ವಾರ್ಡ್‌ನ್ ಗೀರ್ಡನ್ ಕೇಳಿದರೆ ನನ್ನ ಗೆಸ್ಟ್ ಎಂದು ಹೇಳಿಬಿಡುತ್ತೇನೆ" ಎಂದು ಮತ್ತೊಂದು ಸುಳ್ಳು ಪೋಣಿಸಿದ. ನಾನು ಈ ಹಕ್ಕಿಯನ್ನು ಹಿಡಿದು ಹಾಕಿದೆನೆನ್ನಿಸಿತು. ಆ ದಿನ ಅವನಲ್ಲಿಯೇ ಇದ್ದೆ. ಸಾಯಂಕಾಲ ಅವರ ಕಾಲೇಜು ಬಿಟ್ಟ ನಂತರ "ಪೇಟೆಕಡೆ ಹೋಗಿ ಬೇಗ ಬರೋಣ. ಇನ್ನೆರಡು ದಿನಗಳಲ್ಲಿ ನಮ್ಮ ಪರೀಕ್ಷೆ ಪ್ರಾರಂಭ. ಓದಬೇಕು. ನಿಮಗೆ ಪೇಟೆ ಪಟ್ಟಣ ಎಲ್ಲಾ ತೋರಿಸಿಕೊಂಡು ಬರುತ್ತೇನೆ" ಎಂದ. "ಆಗಲಿ" ಎಂದೆ. ನೇರವಾಗಿ ಮೊದಲು ಮಹಾಬಲಯ್ಯನ ಹೋಟೆಲಿಗೇ ಬಂದ. ಪುನಃ ಹೋಟೆಲು ಹೊಕ್ಕೆವು. "ಈಗ ದೋಸೆ ಗೀಸೆ ಏನೂ ಬೇಡ. ಇಲ್ಲಿಯ ಉಪ್ಪಿಟ್ಟೂ ಚೆನ್ನಾಗಿರುತ್ತದೆ" ಎಂದ. ಉಪ್ಪಿಟ್ಟು ತಿಂದು ಕಾಫಿ ಕುಡಿದೆವು. ಮ್ಯೂರಾಣೆ ಬಿಲ್ ಆಯಿತು. ಸದ್ಯ ಬದುಕಿಕೊಂಡೆ. ಆ ದಿನ ರಾತ್ರಿ ಅವನ ಕೊಠಡಿಯಲ್ಲಿ ಮಲಗಿ ಅವನಿಂದ ಎಲ್ಲ ವಿಷಯ ಸಂಗ್ರಹಿಸಿಕೊಂಡು ಬೆಳಿಗ್ಗೆ ಪುನಃ ತುಂಗಾಸ್ನಾನ ಮಾಡಿ ಬಸ್ ಹಿಡಿದು ಶಿರಾಳಕೊಪ್ಪಕ್ಕೆ ಬಂದು ಬಿಟ್ಟೆ. ಶ್ರೀ ಚೆನ್ನಮಲ್ಲಿಕಾರ್ಜುನರು ಅಲ್ಲೇ ಇದ್ದರು. ಅವರಿಗೆ ವಿಷಯವನ್ನೆಲ್ಲ ತಿಳಿಸಿದೆ. ಸಂತೋಷಗೊಂಡು. "ಆಗಲಿ, ನಾರ್ಮಲ್ ಸ್ಕೂಲ್ ಸೇರಿಕೊಂಡು ಓದಿ ಬಿಡು" ಎಂದು ಹೇಳಿದರು. ಮೂರು ದಿನ ಅಲ್ಲೇ ಉಳಿದೆ. ಅವರ ಒಂದು ಹಂಚಿನ ಮನೆ ಸೋರುತ್ತಿತ್ತು. ಮಳೆಗಾಲ ಸಮೀಪಿಸಿದ್ದರಿಂದ ಅದನ್ನೆಲ್ಲ ಸರಿಪಡಿಸಬೇಕಾಗಿತ್ತು. ಅದರ ಆ ಹಂಚನ್ನೆಲ್ಲ ಒಂದು ಕಡೆಯಿಂದ ಕಿತ್ತು, ಒಡೆದ ಹಂಚನ್ನು ಬಿಸಾಡಿ, ಹೊಸ ಹಂಚನ್ನು ಜೋಡಿಸಿ ಚೊಕ್ಕಟಗೊಳಿಸಿಕೊಟ್ಟೆ. ಇಷ್ಟು ಹೊತ್ತಿಗೆ ನನ್ನಲ್ಲಿದ್ದ ದುಡ್ಡೆಲ್ಲ ಮುಗಿಯುತ್ತ ಬಂದು ಕೇವಲ ನಾಲ್ಕಾಣೆ ಉಳಿದಿದ್ದವು. ಶಿರಾಳಕೊಪ್ಪದಿಂದ ನಾನು ಹಿರೇಕಾಂಶಿಗೆ 20 ಮೈಲು ಬರಬೇಕಾಗಿತ್ತು. ಅವರಲ್ಲಿ ಬಸ್ಸಿಗೆ ದುಡ್ಡು ಕೇಳುವ ಮನಸ್ಸಾಗಲಿಲ್ಲ. ನಡೆದೇ ಹೋಗೋಣವೆಂದು ತೀರ್ಮಾನಿಸಿದೆ.

ಆದೇ ದಿನ ಕೃತ್ತಿಕಾಮಳೆ ಕೂಡಿ ಬೆಳಗಿನಿಂದ ಮೋಡ ಆವರಿಸಿ ಚಿಟಿಚಿಟಿ ಮಳೆ ಆಗೊಮ್ಮೆ ಈಗೊಮ್ಮೆ ಉದುರತೊಡಗಿತು. ಚಿಕ್ಕಪುಟ್ಟ ಮಳೆಗೆ ಹೆದರುವುದು ನನ್ನ ಜಾಯಮಾನವಾಗಿರಲಿಲ್ಲ. ಅಲ್ಲಿದ್ದ ಒಂದು ಖಾನಾವಳಿಗೆ ಹೋಗಿ ಎರಡಾಣೆ ಕೊಟ್ಟು ನಾಲ್ಕು ರೊಟ್ಟಿಯನ್ನು ಕಟ್ಟಿಸಿಕೊಂಡು ಕೈ ಚೀಲದಲ್ಲಿ ಹಾಕಿಕೊಂಡು ಎರಡಾಣೆ ಕೊಟ್ಟು ಊಟ ಮಾಡಿ

ಬೆಳಗಿನ ಹತ್ತು ಘಂಟೆ ಸುಮಾರಿಗೆ ಅನವಟ್ಟಿಯ ದಾರಿ ಓಡಿದೆ. ಮಳೆ ನಿಲ್ಲಲಿಲ್ಲ. ಘಂಟೆ ಘಂಟೆಗೂ ಹೆಚ್ಚಾಗುತ್ತಲೇ ನಡೆಯಿತು. ತೊಯ್ದು ತೊಪ್ಪೆಯಾಗಿ ಬಿಟ್ಟೆ. ಚೀಲದೊಳಗಿದ್ದ ಪಂಚೆ ಮತ್ತು ಟವಲ್ಲುಗಳನ್ನು ತೆಗೆದು ತಲೆಯ ಮೇಲೆ ಮಡಿಚಿ ಹಾಕಿಕೊಂಡು ಹೊರಟೇ ಬಿಟ್ಟೆ. ಮಳೆ ಮಧ್ಯಾಹ್ನದ ಸಮಯಕ್ಕೆ ಪರಮಾವಧಿಗೇರಿ ಸೋ ಎಂದು ಸುರಿಯ ತೊಡಗಿತು. ರಸ್ತೆಯೆಲ್ಲ ಬಿಕೋ ಎನ್ನುತ್ತಿತ್ತು. ಎತ್ತೆತ್ತಲೂ ಭೋರ್ಗರೆವ ನೀರೇ ನೀರು. ಹತ್ತು ಮಾರಿನ ಮುಂದಿನ ಮನುಷ್ಯರೂ ಸಹ ಕಾಣುವಂತಿರಲಿಲ್ಲ. ಅಕ್ಕಪಕ್ಕದಲ್ಲಿ ದಟ್ಟವಾದ ಕಾಡು ಮಳೆಯ ಹೊಡೆತದಿಂದ ಸೋಯೆಂದು ದನಿತೆಗೆದಿತ್ತು. ನೀರು ಹರಿದ ಕಾರಣ ಮೇಲೆದ್ದ ಚೂಪಾದ ಕಲ್ಲಿನ ಚೂರುಗಳು ನಟ್ಟವು. ಸಣ್ಣ ಸಣ್ಣ ಕೆಲವು ಚೂರುಗಳು ಕಾಲಲ್ಲಿ ಸೇರಿಕೊಂಡದ್ದೂ ಉಂಟು. ಹದಿನಾರು ಮೈಲು ದೂರ ಆನವಟ್ಟಿಗೆ ಬರುವವರೆಗೆ ಉಳ್ಳೇಗಡ್ಡಿ ಪೊರೆಯಂತಿರುವ ನಾಲ್ಕು ರೊಟ್ಟಿಗಳೂ ಹೊಟ್ಟೆಯಲ್ಲಿ ಭಸ್ಮವಾಗಿ ಹೋದವು. ಗದ್ದೆಯ ಹಾಳಿಗಳಲ್ಲಿ ಕೆರೆಯಂತೆ ನೀರು ನಿಂತು ಆಗ ತಾನೆ ಮೊಳಕೆಯೊಡೆದು ಮೇಲಕ್ಕೆ ಬಂದಿದ್ದ ಬತ್ತದ ಸಸಿಗಳೆಲ್ಲ ನೀರಲ್ಲಿ ಮುಳುಗಿ ಗದ್ದೆಯ ಬಯಲೆಲ್ಲ ಜಲಮಯವಾದ ಹಾಗೆ ಕಾಣುತ್ತಿದ್ದವು. ಆನವಟ್ಟಿಯ ಮುಶಾಫಿರ್‌ಖಾನೆಯ ಹತ್ತಿರ ಬಂದು ಬಟ್ಟೆಗಳನ್ನೆಲ್ಲ ಹಿಂಡಿ ಕೊಡವಿ ಸ್ವಲ್ಪ ಹೊತ್ತು ಅಲ್ಲೇ ಕುಳಿತೆ. ನಡೆಯುತ್ತ ಬಂದಿದ್ದರೆ ಚಳಿಯಾಗುತ್ತಿರಲಿಲ್ಲ. ಅಲ್ಲಿ ಕುಳಿತು ಬಟ್ಟೆಗಳನ್ನು ಹಿಂಡಿ ಪುನಃ ಅದನ್ನೇ ಹಾಕಿಕೊಂಡ ನಂತರ ಸ್ವಲ್ಪ ಚಳಿಯಾಗತೊಡಗಿತು. ಮಳೆ ಸಾಯಂಕಾಲದ ಹೊತ್ತಿಗಾದರೂ ನಿಂತೀತೆಂದು ಕಾದೆ. ಮಳೆ ನಿಲ್ಲಲಿಲ್ಲ. ಮೊದಲಿನ ವೇಗದಲ್ಲಿಯೇ ಸುರಿಯುತ್ತಿತ್ತು. ಮಬ್ಬುಗತ್ತಲಾಗುತ್ತ ಬಂತು. ಇನ್ನು ಐದು ಮೈಲು ದೂರದ ಹಿರೇಕಾಂಶಿಗೆ ಹೋಗುವುದರಲ್ಲಿ ಅರ್ಥವಿಲ್ಲ. ಬಹುಶಃ ಗೊಂಡಿ ಹೊಳೆ (ವರದಾ ನದಿ)ಯೂ ಬಂದಿರಬಹುದು. ದೋಣಿಗಳು ಇರುವುವೋ ಇಲ್ಲವೊ ದಾಟುವುದು ರಾತ್ರಿ ದುಸ್ತರವಾಗಬಹುದು. ಏನೇ ಆಗಲಿ ಆನವಟ್ಟಿಯಲ್ಲಿಯೇ ಈ ರಾತ್ರಿ ಕಳೆದು ಬಿಡೋಣ ಎಂದು ತೀರ್ಮಾನಿಸಿದೆ. ಅಷ್ಟು ಹೊತ್ತಿಗೆ ಹೊಟ್ಟೆ ಹಸಿದು ತಾಳಹಾಕುತ್ತಿತ್ತು. 16 ಮೈಲೂ ದಾರಿ ನಡೆದ ಶ್ರಮಕ್ಕೆ ಬೆಳಿಗ್ಗೆ ಉಂಡ ಸ್ವಲ್ಪ ಅನ್ನ ರೊಟ್ಟಿ, ಕಟ್ಟಿಸಿಕೊಂಡು ಬಂದ ಚಿಕ್ಕನಾಲ್ಕು ರೊಟ್ಟಿ ಸಾಕೇನು? ಏನಾದರೂ ಹಾಕು ಎನ್ನುತ್ತಿತ್ತು ಹೊಟ್ಟೆ. ಹತ್ತಿರ ಒಂದು ಕಾಸೂ ಇಲ್ಲ. ಚಳಿ ಬೇರೆ ಅಧಿಕವಾಯಿತು. ಏನು ಮಾಡಬೇಕೆಂಬುದು ತೋಚಲಿಲ್ಲ. ನನ್ನ ಹತ್ತಿರ ಇದ್ದುದು ಕೊರಳಲ್ಲಿ ಹಾಕಿಕೊಂಡ ಏಳು ತೊಲ ತೂಕದ ಬೆಳ್ಳಿ ಕರಡಿಗೆ ಮಾತ್ರ. ಮಾಡುವುದೇನು? ಲಿಂಗವನ್ನು ತೆಗೆದು ಜೇಬಿನಲ್ಲಿಟ್ಟುಕೊಂಡು ಕರಡಿಗೆಯನ್ನು ಚಿನಿವಾಲರ ಅಂಗಡಿಗೆ ಹೋಗಿ ಮಾರಾಟಕ್ಕೆ ಹಾಕಿಬಿಟ್ಟೆ. ಅವನು ಏನೇನು ಕಡಿತ ಮಾಡಬೇಕೋ ಅದನ್ನೆಲ್ಲ ಮಾಡಿ ಲೆಕ್ಕಹಾಕಿ ಕೂಡಿಸಿ ಕಳೆದಂತೆ ಪಿಟಿಪಿಟಿ ಎಂದು ಮೂರು ರೂಪಾಯಿ ಎರಡಾಣೆ ಕೈಗೆ ಕೊಟ್ಟ. ಅದನ್ನು ತೆಗೆದುಕೊಂಡು ಎಲ್ಲಿಯಾದರೂ ಮೊದಲು ಹೊಟ್ಟೆಗೆ ಏನಾದರೂ ಹಾಕೋಣವೆಂದು ಹೋಟೆಲ್ ಬೋರ್ಡ್ ಓದುತ್ತ ಬರುತ್ತಿದ್ದೆ. ಮಳೆಸುರಿಯುತ್ತಲೇ ಇತ್ತು. ಆಗ ಪಕ್ಕದ ಹಳ್ಳಿಯಾದ ನೀರಲಿಗೆಯ ಸಿಂಗಪ್ಪ ಅಕಸ್ಮಾತ್ ಮಳೆಯಲ್ಲಿ ನೆನೆಯುತ್ತ ಎದುರಿಗೇ ಬಂದು "ನಮಸ್ಕಾರ ಮಾಸ್ತರ" ಎಂದು ಬಿಟ್ಟ. ಆತ ಹಿರೇಕಾಂಶಿಯ ಗಿಣಿವಾಲದ ಈರಪ್ಪನವರ ಬೀಗ. ನನಗೆ ಅವನು ಎದುರಿಗೇ ಬಂದು ಮಾತನಾಡಿಸಿದ್ದು ಆಕಾಶವೇ ಭೂಮಿಗಿಳಿದು ಬಂದಷ್ಟು ಸಂತೋಷವಾಗಿ ಹೋಯಿತು. "ಇಲ್ಯಾಕ ಬಂದೀರಿ ಮಾಸ್ತರ? ಎಲ್ಲಿಗೆ ಹೋಗಿದ್ದೀರಿ, ಏನು ಸಮಾಚಾರ?" ಎಂದ. ನಾನು ನಡೆದ ನನ್ನ ಪೂರ್ವಾಪರ

ವಿಷಯವನ್ನೆಲ್ಲ ಅಲ್ಲೇ ಪಕ್ಕದಲ್ಲಿದ್ದ ಚಹಾದ ಅಂಗಡಿಯನ್ನು ಅವನೊಡನೆ ಹೊಕ್ಕು ಆಗ ತಾನೆ ಕರಿಯುತ್ತಿದ್ದ ಕಾರಾ ಸೇವಗಿ ಗುಳಿಗೆಗಳ ಘಮಘಮ ವಾಸನೆಗೆ ನೀರೊಡೆದು ಹೋದ ನಾಲಗೆಯನ್ನು ಸಂತೈಸುವ ಕಾರಣ ಇಬ್ಬರಿಗೂ ಎರಡು ಪ್ಲೇಟು ಕಾರ ತರಿಸಿ ಕುರುಕುರು ತಿನ್ನುತ್ತ ಎಲ್ಲ ಸಮಾಚಾರವನ್ನು ಸವಿಸ್ತಾರವಾಗಿ ಹೇಳತೊಡಗಿದೆ. ಅಯ್ಯೋ ಮಹಾರಾಯ ಎಂದು ಹಣೆ ಚಚ್ಚುತ್ತ "ಏನು ತೊಂದರೆ ತೊಗೊಂಡು ಶಿರಾಳಕೊಪ್ಪದಿಂದ ಈ ಭಯಂಕರ ಮಳ್ಯಾಗ ಬಂದ್ಬಿಟ್ಟಲ್ಲೋ ನಮ್ಮಪ್ಪಾ, ನಡಿನಡೀರಿ ಚಕ್ಕಡಿ ಏತಿ ಹತ್ಕೊಂಡು ಊರಿಗೆ ಹೋಗೋಣ. ಅಲ್ಲಿದ್ದು ಬೆಳಿಗ್ಗೆ ಹಿರೇಕಾಂಶಿಗೆ ಹೋದರಾತು" ಎಂದು ಬಿಟ್ಟ. ನನಗೆ ಬೇಕಾದದ್ದೂ ಅಷ್ಟೆ. ಬಿಸಿಬಿಸಿ ಕಾರಾ ತಿಂದು, ಪುನಃ ಇನ್ನು ಒಂದೊಂದು ಪ್ಲೇಟುತರಿಸಿ ತಿಂದು ಬಿಸಿಬಿಸಿ ಚಹಾ ಕುಡಿದು ಹೊಟ್ಟೆಯನ್ನು ಸಂತವಿಟ್ಟು, ಕೊಲ್ಲಾರಿ ಬಿಗಿದ ಗಾಡಿ ಹತ್ತಿಕೊಂಡು ನೇರಲಾಪುರಕ್ಕೆ ಹೋಗಿಬಿಟ್ಟೆ.

ಆ ಪುಣ್ಯಾತ್ಮ ನಿಂಗಪ್ಪ ಮಾಡಿದ ಅಂದಿನ ಸೇವೆ ಸ್ಮೃತಿಪಥದಲ್ಲಿ ಇಂದಿಗೂ ಉಳಿಯುವಂಥ ವಿಶಿಷ್ಟ ರೀತಿಯದು. ಮೈಮೇಲೆ ಇದ್ದ ಹಸಿಬಟ್ಟೆಯನ್ನೆಲ್ಲ ತೆಗೆಸಿ ಒಣಗಲು ಹಾಕಿದ. ಹೊದ್ದುಕೊಳ್ಳುವುದಕ್ಕೆ ದೊಡ್ಡದೊಂದು ಕಂಬಳಿಯನ್ನು ಕೊಟ್ಟ. ಕಂಬಳಿಯನ್ನು ತುಂಬ ಹೊದ್ದುಕೊಂಡು ಇನ್ನೊಂದು ಹಾಸಿದ ಕಂಬಳಿಯ ಮೇಲೆ ಸುಸ್ತಾಗಿ ಕುಳಿತು ಬಿಟ್ಟೆ. ಹೆಂಡತಿಗೆ ಹೇಳಿ ನೀರೊಲೆಗೆ ಉರಿಹಾಕಿಸಿ ನೀರು ಕಾಯಿಸಿದ. ಹರಳೆಣ್ಣೆ ತಂದು ಕಾಲಿಗೆ ಹಚ್ಚಿ ತಿಕ್ಕಿ ತಿಕ್ಕಿ ಕಾಲಿನಲ್ಲಿ ಸೇರಿದ ಚಿಕ್ಕಚಿಕ್ಕ ಕಲ್ಲನ್ನೆಲ್ಲ ತೆಗೆದು ಹಾಕಿದ. ಕೆಲವನ್ನು ಸೂಚಿತಕ್ಕೊಂಡು ದೀಪ ಹಿಡಿಹಿಡಿದು ನೋಡಿ ತೆಗೆದು ಹಾಕಿದ. ಪುನಃ ಮೀನುಕಂಡಕ್ಕೆಲ್ಲ ಎಣ್ಣೆ ಸವರಿ ತಿಕ್ಕಿ ತೀಡಿ ತಲೆ ತೋಳು ಬೆನ್ನುಗಳಿಗೆ ಎಣ್ಣೆ ಸವರಿ ತಿಕ್ಕಿ ತಿಕ್ಕಿ ನೀರೆರೆದು ದಾರಿಯ ದಣಿವನ್ನೆಲ್ಲ ಕಳೆದು ಬಿಟ್ಟ. ಇಷ್ಟು ಸೇವೆ ಮಾಡಲಿಕ್ಕೆ ನಿಂಗಪ್ಪ ಯಾವುದೋ ಜನ್ಮದಲ್ಲಿ ನನ್ನ ರಿಣದಲ್ಲಿ ಬಿದ್ದು ಇಂದು ತೀರಿಸಿ ಕೃತಾರ್ಥನಾದ ಎಂದು ಭಾವಿಸಿದರೆ ತಪ್ಪಾದೀತು. ನಿರ್ನಿಮಿತ್ತವಾದ ಈ ಉಪಚಾರವೇ ಆಪ್ಯಾಯಮಾನವಾದ್ದರಿಂದ ಸ್ಮೃತಿಪಥದಲ್ಲಿ ಇಂದಿಗೂ ಉಳಿಯಲು ಕಾರಣ.

ಅನಂತರ ಮೆಣಸಿನಪುಡಿ ಹಾಕಿ ಮಾಡಿದ ಬಿಸಿ ಮಜ್ಜಿಗೆ ಹುಳಿ, ಕರೇರಡಿ ಮುಳ್ಳುಬತ್ತದ ಮಲ್ಲಿಗೆ ಹೂವಿನಂತಹ ಬಿಸಿ ಅನ್ನವನ್ನು ತುಪ್ಪ ಹಾಕಿಸಿಕೊಂಡು ಉಪ್ಪಿನ ಕಾಯಿ ನಂಜಿಕೆಯೊಡನೆ ಕಂಠಪೂರ್ತಿ ಬಿಗಿದು, ಅಡಕೆಎಲೆ ಜಗಿಯುತ್ತಿದ್ದಂತೆ ಕಣ್ಣು ಮುಚ್ಚತೊಡಗಿದವು ಗಡದ್ದಾಗಿ ಹೊದ್ದುಕೊಂಡು ಮಲಗಿಬಿಟ್ಟೆ. ಬೆಳಿಗ್ಗೆ ಎಚ್ಚರವಾದಾಗ ಎಂಟು ಗಂಟೆ. ಸ್ವಲ್ಪ ಮಳೆ ಕಡಿಮೆ ಎನಿಸಿದರೂ ಉದುರುತ್ತಲೇ ಇತ್ತು. ಆ ವರ್ಷ ಕೃತ್ತಿಕಾಮಳೆ ಹದಿನೈದು ದಿನ ಏಕ ಪ್ರಕಾರವಾಗಿ ಸುರಿದು ಬತ್ತದ ಪೈರನ್ನೆಲ್ಲ ನೀರು ಮಣ್ಣು ಮಾಡಿಹಾಕಿತು. ಭರಣಿ ಮಳೆಯಲ್ಲಿ ಒಳ್ಳೆಹದದಲ್ಲಿ ಹಾಕಿದ ಬತ್ತ ಮೂರು ನಾಲ್ಕು ಇಂಚು ಬೆಳೆಯುವ ಹೊತ್ತಿಗೆ ಈ ಕುಂಭದ್ರೋಣ ಮಳೆಬಿದ್ದು ಗದ್ದೆ ಹಾಳೆಗಳೆಲ್ಲ ಕೆರೆಗಳಾಗಿ ಬತ್ತದ ನಾಟಿ ನಾಲಗೆ ಹಿರಿದು ಸತ್ತುಹೋಯಿತು. ಕಳೆದುಳಿದ ಕಾಲುಭಾಗ ಪೈರು ಗದ್ದೆಯಲ್ಲಿ ಕಾಣತೊಡಗಿತು. ಸ್ವಲ್ಪ ತಡವಾಗಿ ಬಿತ್ತಿದ ಬೀಜಗಳು ಮೊಳಕೆಯೊಡೆಯುವ ಹಂತದಲ್ಲಿ ಕೊಚ್ಚಿಕೊಂಡು ಹೋದವು. ಕೆಲವು ಬೀಜ ಭೂಮಿಯಿಂದ ಮೇಲೆ ಬರದಂತೆ ಆಗಿ ಹೋಯಿತೆಂದು ರೈತರೆಲ್ಲ ಬಾಯಿ ಬಾಯಿ ಬಡಿದುಕೊಂಡರು. ಈ ಮಳೆಯಿಂದಲೇ ಕೆರೆಕಟ್ಟೆಗಳೆಲ್ಲ ಭರ್ತಿಯಾಗಿ ಹೋದವು; ಹಳ್ಳ ಹೊಳೆಗಳು ಭೋರ್ಗರೆದವು

ಮರುದಿನ ಬೆಳಿಗ್ಗೆ ಆ ನಿಂಗಪ್ಪ ಪುನಃ ಬಿಸಿನೀರಿನ ಸ್ನಾನಮಾಡಿಸಿ ಬಿಸಿಬಿಸಿ ರೊಟ್ಟಿ ಕಾರದ ಚಟ್ನಿ ತುಪ್ಪ ಹಾಕಿಸಿ ತಿನ್ನಿಸಿದ. ಚಹಾ ಕುಡಿಸಿ ಕೊಡೆ ಕೊಟ್ಟು ಹಿರೇಕಾಂಶಿಗೆ ಕಳಿಸಿಕೊಟ್ಟ. ಒಣಗಿದ ಬಟ್ಟೆ ಹಾಕಿಕೊಂಡು ಹೊರಟೆ. ಇಷ್ಟು ಹೊತ್ತಿಗೆ ವರದಾ ಹೊಳೆಗೆ ನೆರೆಬಂದು ಭೋರ್ಗರೆಯುತ್ತಿತ್ತು. ದೋಣಿ ಇತ್ತು. ದೋಣಿಯಲ್ಲಿ ಹೊಳೆ ದಾಟಿ ಅವನಿಗೊಂದು ಆಣೆ ಬಡಿದು, ಬಿದ್ದು ಎದ್ದು ನಾಲ್ಕೈದು ಮೈಲು ದೂರದ ಹಿರೇಕಾಂಶಿ ತಲುಪಿದೆ. ಇದೊಂದು ಜೀವನದುದ್ದಕ್ಕೂ ಮರೆಯಲಾರದ ಘಟನೆ.ಇಪ್ಪತ್ತು ಮೈಲು ಹೀಗೆ ನಡೆದದ್ದು ದೊಡ್ಡದಲ್ಲ. ನನ್ನ ಜೀವನದಲ್ಲಿ ಇಷ್ಟು ದೂರದ ನಡಿಗೆ ಆಶ್ಚರ್ಯವೇ ಅಲ್ಲ, ಸಾಮಾನ್ಯ. ಹತ್ತು ಹನ್ನೆರಡು ಮೈಲುಗಳಂತೂ ಲೆಕ್ಕವೇ ಅಲ್ಲ ನನಗೆ. ಸೋ ಎಂದು ಗಗನದಿಂದ ಭೂಮಿಗೆ ಏಕಪ್ರಕಾರವಾಗಿ ಸುರಿಯುತ್ತಿರುವ ಮಳೆಯಲ್ಲಿ ಬಟ್ಟೆಬರೆಯನ್ನೆಲ್ಲ ತೋಯಿಸಿಕೊಂಡು ಹದಿನಾರು ಮೈಲು ನಡೆದುಬಂದ ದೈತ್ಯನಡಿಗೆಯೇ ಆಶ್ಚರ್ಯಕರವಾದ್ದು ಅಷ್ಟೆ. ಆಳ್ಳಿದೆಯಾಗಿದ್ದರೆ ಈ ಪ್ರಯಾಣ ಸಾಧ್ಯವಿರಲಿಲ್ಲ: ಕರಡಿಗೆಯನ್ನು ಮಾರಿದ್ದು ಮಾತ್ರ ಬಹುದಿನ ನನ್ನ ಮನಸ್ಸನ್ನು ಕೊರೆಯಿತು. ಆ ಕರಡಿಗೆ ನಮ್ಮ ದೊಡ್ಡಪ್ಪನ ಕೊರಳಲ್ಲಿತ್ತು. ನಾನು ಹಿರೇಕಾಂಶಿ ಶಾಲೆಯ ಮಾಸ್ತರನಾಗಿ ಹೊಸದಾಗಿ ಹೋಗುವಾಗ ಪರಸ್ಥಳಕ್ಕೆ ಹೋಗುವವನು ಎಂದು ನನಗೆ ಕೊಟ್ಟಿದ್ದ ಏಳು ತೊಲೆ ಬೆಳ್ಳಿಯ ಭವ್ಯವಾದ ಬಹುಹಿಂದಿನ ಕಾಲದ ಕರಡಿಗೆಯನ್ನು ಕಳೆದುಕೊಂಡೆ. ಮುಂದೆ 3 ರೂಪಾಯಿ ಕೊಟ್ಟು ಒಂದು ಕರಡಿಗೆ ಕೊಂಡೆನಾದರೂ ಹಳೆಯ ಕರಡಿಗೆಯ ಮೇಲಿನ ನನ್ನ ಪ್ರೀತಿ ನನ್ನನ್ನು ಬಾಧಿಸಿತು. ಹೊಸ ಕರಡಿಗೆಯನ್ನು ಬಹು ದಿನ ಹಾಕಿಕೊಂಡೆ. ಅದು ತೂತು ಬೀಳುವವರೆಗೂ ಬಳಸಿದೆ. ಕೊನೆಗೆ ಅದನ್ನು ಮೈಸೂರು ಯೂನಿವರ್ಸಿಟಿಯ ಶಾಶ್ವತ ಎಗ್ಜಿಬಿಷನ್ನಿನ ಕ್ಯೂರೇಟರಾದ ಪಿ.ಆರ್. ತಿಪ್ಪೇಸ್ವಾಮಿ ಕೇಳಿದ್ದರ ಮೇರೆಗೆ ಇತ್ತೀಚಿಗೆ 1968-69ನೆಯ ಇಸ್ವಿಯ ಸುಮಾರಿಗೆ ಅವರಿಗೆ ಕೊಟ್ಟೆ. ಅಲ್ಲಿ ನನ್ನ ಹಳೆಯ ಕರಡಿಗೆ ಇದೆ. ಆಮೇಲೆ 8 ರೂಪಾಯಿ ಕೊಟ್ಟು ಗಂಧದ ಕರಡಿಗೆ ಕೊಂಡು ಇಂದಿಗೂ ಧರಿಸಿಕೊಂಡಿದ್ದೇನೆ.

ನನ್ನ ಶಾಲೆಯ ಪರೀಕ್ಷೆಗಳನ್ನೆಲ್ಲ ಮುಗಿಸಿ ರಜೆಕೊಟ್ಟು ಬಿಟ್ಟೆ. ಇನ್ನು ಮುಂದೆ ಹಿರೇಕಾಂಶಿಯ ಋಣತೀರಿಹೋಯಿತು. ಓದುವುದಕ್ಕೆ ಹೋಗುವ ನನ್ನ ನಿರ್ಧಾರವನ್ನು ಹಿರೇಕಾಂಶಿಯಲ್ಲಿ ಎಲ್ಲರಿಗೂ ಸೂಚಿಸಿದೆ. ಇಡೀ ಹಿರೇಕಾಂಶಿಯ ಜನ ಬಿಡಲಾರದ ಮನಸ್ಸಿನಿಂದ ನನ್ನನ್ನು ಬಿಟ್ಟುಕೊಟ್ಟಿತು. ನನ್ನ ಖರ್ಚಿಗೆಂದು ಹದಿನಾಲ್ಕು ಚೀಲ ಬತ್ತವನ್ನು ಸಂಗ್ರಹಿಸಿ ಶಾಲೆಯಲ್ಲಿ ರಾಶಿ ಹಾಕಿತು. ಅವರ ತ್ಯಾಗದ ಫಲವಾದ ಆ ರಾಶಿಯನ್ನು ಕಂಡು ಕಣ್ಣಂಚಿನಲ್ಲಿ ನೀರು ತುಂಬಿ ಕಂಠ ಬಿಗಿದು ಬಂತು. ಆ ಬತ್ತವನ್ನೆಲ್ಲ ಮಾರಿದರು. ಅದೇ ವರ್ಷ ಬತ್ತದ ಧಾರಣೆ ಸ್ವಲ್ಪ ಮಿಸುಗಿತ್ತು. ಬತ್ತದ ಧಾರಣೆ ಸಾಮಾನ್ಯವಾಗಿ 1940ರವರೆಗೆ ಚೀಲಕ್ಕೆ ನಾಲ್ಕು ರೂಪಾಯಿ ಮಾತ್ರ ಇದ್ದದ್ದು ಮುಂದೆ ಪ್ರತಿ ವರ್ಷ ಚೀಲಕ್ಕೆ ಒಂದು ರೂಪಾಯಿಯೋ ಹನ್ನೆರಡಾಣೆಯೋ ಹೆಚ್ಚಾಗುತ್ತ ಬಂದಿತ್ತು. 1943ಕ್ಕೆ ಏಳು ರೂಪಾಯಿಯ ಹಂತಕ್ಕೆ ಬಂದಿತ್ತು. ಆ ಬತ್ತದ ಮಾರಾಟದಿಂದ ಬಂದ ನೂರು ರೂಪಾಯಿ ಕೈಗೆ ಕೊಟ್ಟರು. ಇತ್ತ ಹೊಸೂರಿನ ನಮ್ಮ ಶಿವಬಸಪ್ಪಸೆಟ್ಟರೂ, ಮಿತ್ರವರ್ಗವನ್ನೆಲ್ಲ ಸೇರಿಸಿ ನನ್ನ ಓದಿನ ಖರ್ಚಿಗೆಂದು ನೂರು ರೂಪಾಯಿ ಸಂಗ್ರಹಿಸಿಕೊಟ್ಟರು. ನನ್ನ ಉತ್ಸಾಹ, ಶಕ್ತಿ ಮುಗಿಲಿಗೇರಿತು. ದುಡ್ಡು ಮನುಷ್ಯನ ಉತ್ಸಾಹ ಶಕ್ತಿಯನ್ನಧಿಕಗೊಳಿಸುವ ವಸ್ತುವೆಂಬ ಅರಿವಾಯಿತು. ಒಟ್ಟು ಇನ್ನೂರು ರೂಪಾಯಿ ತೆಗೆದುಕೊಂಡು ಮೇ ತಿಂಗಳ ಕೊನೆಯ ವಾರದಲ್ಲಿ ಶಿವಮೊಗ್ಗೆಗೆ ಬಂದುಬಿಟ್ಟೆ. ವಿಶ್ವಾಸದಿಂದ ಕಷ್ಟಪಟ್ಟು ದುಡಿದು ಸಂಗ್ರಹಿ

ಸಿಕೊಟ್ಟ ಧನವನ್ನೆಲ್ಲ ವಿವೇಕಯುತವಾಗಿ ಬಳಸುತ್ತ ಬುದ್ಧಿ ಜಾಗೃತವಾಗಿ ಕಾಸು ಕಾಸನ್ನು ಇತಿಮಿತಿಯಿಂದ ಬಳಸತೊಡಗಿದೆ. ಬಟ್ಟೆ ಬರೆಗಳಲ್ಲಿ ಸನ್ನಿವೇಶಕ್ಕೆ ಹೊಂದಿಕೊಳ್ಳುವಂತೆ ಸುಧಾರಣೆ ಮಾಡಿಕೊಂಡೆ. ಉಂಡಿರುಮಾಲದ ಬದಲು ಟೊಪ್ಪಿಗೆ ತಲೆಗೆ ಬಂತು. ಕಬ್ಬಿಣ ಕಡ್ಡಿ ತುಮ್ಮಿನ ಕಟ್ಟೆ ಪಂಚೆಬಿಟ್ಟು ಕೆ.ಆರ್. ಮಿಲ್‌ನ ಸ್ವಲ್ಪ ನಾಜೂಕಾದ ಪಂಚೆ ಕೊಂಡೆ. ಹಳೆಯ ಕೋಟನ್ನು ಬಿಟ್ಟು ಹೊಸ ಒಂದು ಕೋಟು, ಎರಡು ಸಾಮಾನ್ಯ ದರ್ಜೆಯ ಅಂಗಿ ಹೊಲಿಸಿಕೊಂಡು ಎರಡು ರೂಪಾಯಿಯ ಚಪ್ಪಲಿಕೊಂಡು ಸ್ವಲ್ಪಮಟ್ಟಿಗೆ ನೂತನವಾಗಿ ಬಟ್ಟೆಬರೆಯ ದೃಷ್ಟಿಯಿಂದ ಶಿವಮೊಗ್ಗ ನಗರಜೀವನಕ್ಕೆ ಹೊಂದಿಕೊಂಡೆ. ಅದೂ ಅವಶ್ಯಕವೂ ಆಗಿತ್ತು.

**ಕಾಯ್ದು ಕುಳಿತ ವಿಘ್ನ**

ಶಿವಮೊಗ್ಗಕ್ಕೆ ಬಂದ ಮೇಲೆ ಈ ಮೊದಲೇ ಮಿತ್ರನನ್ನಾಗಿ ಮಾಡಿಕೊಂಡಿದ್ದ ವೀರಪ್ಪನ ಕೊಠಡಿಯಲ್ಲಿ ಬಂದು ಉಳಿದುಕೊಂಡೆನೆಂದು ಹೇಳುವ ಅವಶ್ಯಕತೆಯೇ ಇಲ್ಲ. ಇಷ್ಟು ಹೊತ್ತಿಗೆ ಹಿಂದೆ ಇದ್ದ ಹೆಡ್‌ಮಾಸ್ತರರು ವರ್ಗವಾಗಿ ರಾಮಾಚಾರ್ ಎಂಬುವರು ಹೆಡ್‌ಮಾಸ್ತರರಾಗಿ ಬಂದಿದ್ದರು. ವೀರಪ್ಪ ನನ್ನನ್ನು ಕರೆದುಕೊಂಡು ಹೋಗಿ ಮೊದಲೇ ತಯಾರಿಸಿದ ಅರ್ಜಿಯನ್ನು ನನ್ನ ಮುಲ್ಕಿಪರೀಕ್ಷೆ ಸರ್ಟಿಫಿಕೇಟಿನೊಂದಿಗೆ ಕೊಟ್ಟು ನಿಂತೆವು. ಅವರು ಎಲ್ಲವನ್ನು ನೋಡಿ ನೀವು ಔಟ್ ಆಫ್ ಸ್ಟೇಟ್‌ನವರಾದ್ದರಿಂದ ಈ ಕಾಲೇಜಿನಲ್ಲಿ ಪ್ರೈವೇಟ್ ಸ್ಟೂಡೆಂಟ್ಸ್‌ಗಳಿಗೆ ಕೊಡುವ ಸ್ಕಾಲರ್‌ಷಿಪ್ ಸೌಲಭ್ಯಗಳೊಡನೆ ಸೇರಿಸಿಕೊಳ್ಳಲಾಗುವುದಿಲ್ಲ ಎಂದು ಮುಖದ ಮೇಲೆ ಹೊಡೆದಂತೆ ಹೇಳಿ ಅಪ್ಲಿಕೇಷನ್‌ನ್ನು ವಾಪಸು ಕೊಟ್ಟುಬಿಟ್ಟರು. ನನ್ನ ಎದೆ ಬಡಿದುಕೊಳ್ಳಹತ್ತಿತು. ಧೈರ್ಯಮಾಡಿ "ಇಲ್ಲ ಸ್ವಾಮಿ, ಹಿಂದಿನ ಹೆಡ್ ಮಾಸ್ತರರನ್ನು ಕಂಡು ಈ ವಿಷಯ ಅರಿಕೆ ಮಾಡಿಕೊಂಡಿದ್ದೆ. ಅವರು ಸೇರಿಸಿಕೊಳ್ಳುತ್ತೇವೆಂದು ಹೇಳಿದ್ದರು" ಎಂದೆ. "ಅವರಾದರೂ ಡೈರೆಕ್ಟರವರ ಅನುಮತಿಯಿಲ್ಲದೆ ಹೇಗೆ ಸೇರಿಸಿಕೊಳ್ಳುತ್ತಾರೆ? ನೀವು ಬೊಂಬಾಯಿ ಸ್ಟೇಟಿನವರಲ್ಲವೆ?" ಎಂದರು. "ನಾನು ಹುಟ್ಟಿದ್ದು ಬೊಂಬಾಯಿ ಸ್ಟೇಟ್ ಆಗಿರಬಹುದು, ಆದರೆ ಈಗ ಇರುವುದು ಶಿರಾಳಕೊಪ್ಪದಲ್ಲಿ ಎಂದೆ ಹೆದರಿ ಹೆದರಿ. ಏಕೆಂದರೆ ನಿಜವಾಗಿ ನಾನು ಶಿರಾಳಕೊಪ್ಪದಲ್ಲಿ ಇರಲಿಲ್ಲ. ಸುಳ್ಳು ಹೇಳುವಾಗ ನಾಲಗೆ ಸ್ವಲ್ಪ ತೊಡರಿಸಿಕೊಂಡು ಮಾತು ನೇರವಾಗಿ ಬರುವುದಿಲ್ಲವಲ್ಲವೆ? ಸತ್ಯವನ್ನು ಮುಚ್ಚಲು ಮನುಷ್ಯ ಅನೇಕ ಸುಳ್ಳಿನ ಕಂತೆಗಳನ್ನೇ ಅದಕ್ಕೆ ಮೆತ್ತಬೇಕಾಗುತ್ತದೆ. ಹಾಗೆ ಮೆತ್ತಿದರೂ ಸತ್ಯ ಪುಟಿಪುಟಿದು ಏಳುತ್ತಿರುತ್ತದೆ. "ನೀವು ಅಪ್ಪಟ ಬೊಂಬಾಯಿ ಸ್ಟೇಟಿನವರೆನ್ನಲು ಇಲ್ಲಿ ಪುರಾವೆ ಇದೆ. ನೋಡಿ" ಎಂದು ಬೆಳಗುತ್ತಿ ಲಿಂಗಪ್ಪನವರು ಹಿಂದಿನ ಹೆಡ್ ಮಾಸ್ತರರಿಗೆ ಬರೆದ ಕಾಗದವನ್ನು ನಮ್ಮ ಮುಂದೆ ಓದಿದರು. ಹಿಂದಿನ ಹೆಡ್ಮಾಷ್ಟರರಿಗೆ ಬೆಳಗುತ್ತಿ ಲಿಂಗಪ್ಪನವರು ಇವರು ಬೊಂಬಾಯಿ ಪ್ರಾಂತದವರು. ಇಲ್ಲಿ ಓದಲು ಬಂದಿದ್ದಾರೆ. ಶಿರಾಳಕೊಪ್ಪದ ನಮ್ಮ ಗುರುಗಳಾದ ಚೆನ್ನಮಲ್ಲಪ್ಪನವರ ಹತ್ತಿರ ಬಹುದಿನ ಇದ್ದವರು, ಇತ್ಯಾದಿಯಾಗಿ ಬರೆದಿದ್ದರು. ಆ ಪತ್ರವನ್ನು ಅವರು ತಮ್ಮ ಆಫೀಸು ಫೈಲಿನಲ್ಲಿ ಇಟ್ಟು ಇಲ್ಲಿಂದ ವರ್ಗವಾಗಿ ಹೋಗಿದ್ದರು. ರಾಮಾಚಾರ್ ಇಲ್ಲಿಗೆ ಹೊಸದಾಗಿ ಬಂದು ಚಾರ್ಜು ತೆಗೆದುಕೊಂಡ ಮೇಲೆ ಅವರ ಕೈಗೆ ಆ ಪತ್ರ ಸಿಕ್ಕು ಹೋಯಿತು. ಆ ಪತ್ರವನ್ನು ನಮ್ಮೆದುರಿಗೆ ಹಿಡಿದು ಬಿಟ್ಟರು. ನಾನು ನಿರುಪಾಯನಾಗಿ ಹೋದೆ. ಏನೂ ತೋಚಲಿಲ್ಲ. ಮುಂದೇನು? ಮುಂದೇನು? ಎಂಬ ಯೋಚನೆ ಬಲವಾಗಿ ನೆಲವನ್ನು ಕಾಲಿನಿಂದ ಕೆರೆಯುತ್ತ ನಿಂತು ಬಿಟ್ಟೆ ತಲೆತಗ್ಗಿಸಿ. ಆಗ ವೀರಪ್ಪ ಮಾಸ್ತರರು. "ಏನೋ ನೋಡಿ

ಸರ್, ದೂರದಿಂದ ಈ ಕೋರ್ಸ್ ಮುಗಿಸಿ ಜೀವನೋಪಾಯ ಕಂಡುಕೊಳ್ಳಲು ಉತ್ಸಾಹಿತನಾಗಿ ಬಂದಿದ್ದಾನೆ" ಎಂದು ನನ್ನ ಪಕ್ಷವಹಿಸಿ ಮಾತಾಡಿದ ತನ್ನ ಜವಾಬ್ದಾರಿಯನ್ನು ಕಳೆದುಕೊಳ್ಳಲು. ಆಗ ಅವರು "ಇಲ್ಲ ಇಲ್ಲ ಹಾಗೆಲ್ಲ ಆಗೋದಿಲ್ಲ. ಬೇರೇ ಸ್ಟೇಟಿನವರನ್ನು ನೇರವಾಗಿ ಸೇರಿಸಿಕೊಳ್ಳಲು ಆಗುವುದಿಲ್ಲ. ಮೇಲಾಗಿ ಇವರು ಪಾಸಾಗಿರುವ ಈ ಪರೀಕ್ಷೆ ನಮ್ಮ ಮೈಸೂರು ಸ್ಟೇಟಿನ ಯಾವ ಪರೀಕ್ಷೆಗೆ ಸಮ ಎಂಬುದನ್ನು ನಾನು ಡೈರೆಕ್ಟರ್‌ರವರನ್ನೇ ಕೇಳಬೇಕು. ಡೈರೆಕ್ಟರವರು ಪರ್ಮಿಷನ್ ಕೊಟ್ಟರೆ ಸೇರಿಸಬಹುದು. ಇಲ್ಲವಾದರೆ ಖಂಡಿತ ಆಗುವುದಿಲ್ಲ" ಎಂದು ಹೇಳಿಬಿಟ್ಟರು. ಆಗ ನಾನು ನಿರುಪಾಯನಾಗಿ ತಡಬಡಿಸುತ್ತ ನಿಂತೆ. ಮುಗಿಲೇ ಕತ್ತರಿಸಿ ತಲೆ ಮೇಲೆ ಬಿದ್ದವನಂತಾಗಿಬಿಟ್ಟೆ. ನಾನು ಧೈರ್ಯಮಾಡಿ "ಡೈರೆಕ್ಟರವರಿಗೆ ಬರೆದು ಪರ್ಮಿಷನ್ ತರಸಿಕೊಂಡು ದಯವಿಟ್ಟು ಸೇರಿಸಿಕೊಳ್ಳಿ ಸ್ವಾಮಿ" ಎಂದೆ. "ಬೇಕಾದರೆ ಬರಿಯುತ್ತೇನೆ. ಅವರು ಅಪ್ಪಣೆ ಕೊಟ್ಟಮೇಲೆ ನಿಮಗೆ ತಿಳಿಸುತ್ತೇನೆ. ಆಮೇಲೆ ನೀವು ಸೇರಬಹುದು. ಸೇರಿದರೂ ನೀವು ಫೀಜು ಕಟ್ಟಿ ಓದಬೇಕಾಗಬಹುದು. ಸ್ಕಾಲರ್‌ಷಿಪ್ ವಗೈರೆ ಏನೂ ಸಿಗಲಾರದು. ಇದೇನಿದ್ದರೂ ನಮ್ಮಸ್ಟೇಟಿನಲ್ಲಿ ಉಪಾಧ್ಯಾಯ ವೃತ್ತಿಗಾಗಿ ತರಬೇತುಗೊಳಿಸುವ ಸಂಸ್ಥೆ" ಎಂದರು. ಅಪ್ಲಿಕೇಷನ್ನು ಪುನಃ ಅವರಿಗೆ ಕೊಟ್ಟು "ದಯವಿಟ್ಟು ಅಪ್ಪಣೆ ತರಿಸಿಕೊಟ್ಟು ಉಪಕಾರಮಾಡಿ" ಎಂದೆ. "ಆಗಲಿ ಹೋಗಿ" ಎಂದು ಬಿಟ್ಟರು. ನಾನು ಮುಖ ಒಣಗಿಸಿಕೊಂಡು ವೀರಪ್ಪನೊಡನೆ ಬಂದು ಬಿಟ್ಟೆ. ಆ ಕೂಡಲೆ ಪುನಃ ಬೆಳಗುತ್ತಿ ಲಿಂಗಪ್ಪನವರಿಗೆ ವಿಷಯ ತಿಳಿಸಲಾಗಿ ಅವರು ಡಿ.ಪಿ.ಐ. ಪರ್ಮಿಷನ್ ಕೊಡುತ್ತಾರೆ. ಓದಿಬಿಡು ಎಂದರಾಗಲಿ ಹೆಚ್ಚಿನ ಆಸಕ್ತಿ ತೋರಿಸಲಿಲ್ಲ. ಮನಸ್ಸು ದುಗುಡಗೊಂಡಿತು. ಹಿರೇಕಾಂಶಿಯಲ್ಲಿ ಓದುವುದಕ್ಕೆ ಹೋಗುತ್ತೇನೆಂದು ಪೌರುಷಕೊಚ್ಚಿ ಅವರು ಕೊಟ್ಟ ದುಡ್ಡನ್ನು ಜೇಬಿಗಿಳಿಬಿಟ್ಟುಕೊಂಡು ಬಂದಿದ್ದೇನೆ, ಒಂದು ವೇಳೆ ಡೈರೆಕ್ಟರ್ ಪರ್ಮಿಷನ್ ಕೊಡದಿದ್ದರೆ ಮುಂದೇನು? ಎಂಬ ಯೋಚನೆ ತಲೆತಿನ್ನತೊಡಗಿತು. ಆ ರಾತ್ರಿಯೇ ಸಾಮಾನನ್ನೆಲ್ಲ ವೀರಪ್ಪನ ಕೊಠಡಿಯಲ್ಲಿಟ್ಟು ಟ್ರೇನು ಹಿಡಿದು ಹಾವೇರಿಗೆ ಹೊರಟುಬಿಟ್ಟೆ. ಹಾವೇರಿಗೆ ಬಂದು ನೇರವಾಗಿ ವಾಲಿಮಠದಲ್ಲಿದ್ದು ಸದ್ಧರ್ಮದೀಪಿಕೆ ಆಫೀಸಿಗೆ ಹೋದೆ. ಅಲ್ಲಿಯೂ ನಿರಾಸೆ ಕಾದಿತ್ತು. "ನಿನ್ನೆಯ ದಿನವೇ ಶ್ರೀ ಚೆನ್ನಮಲ್ಲಿಕಾರ್ಜುನರು ಶಿರಾಳಕೊಪ್ಪಕ್ಕೆ ಹೋಗಿ ಬರುತ್ತೇವೆಂದು ಹೇಳಿ ಹೋದರೆಂದು ಪ್ರೆಸ್ಸಿನವರು ಹೇಳಿದರು. ನಾನು ಆ ಕೂಡಲೆ ಶಿರಾಳಕೊಪ್ಪಕ್ಕೆ ನಡೆಯುತ್ತಲೇ ಹೋಗಿಬಿಡೋಣವೆಂದು ನಿರ್ಧರಿಸಿ, ಹೋಟಲಿನಲ್ಲಿ ಪಟ್ಟಾಗಿ ಊಟಮಾಡಿ, ಐದಾರು ರೊಟ್ಟಿಗಳನ್ನು ಖಾನಾವಳಿಯಲ್ಲಿ ಕೊಂಡು ಕಟ್ಟಿಕೊಂಡು ಬೆಳಗಿನಿಂದ ಸಾಯಂಕಾಲದವರೆಗೆ ಸುಮಾರು ಮೂವತ್ತು ಮೈಲು ದೂರದ ಹಿರೇಕಾಂಶಿಗೆ ಬಂದು ಅಲ್ಲಿ ಉಳಿದುಕೊಂಡು ನನ್ನ ಈ ಪುರಾಣವನ್ನೆಲ್ಲ ಹಿರೇಕಾಂಶಿಯ ಪ್ರಮುಖರಿಗೆ ಹೇಳಿ ಪುನಃ ನಸುಕಿನಲ್ಲಿ ಐದು ಘಂಟೆಗೆ ಎದ್ದು ಶಿರಾಳಕೊಪ್ಪಕ್ಕೆ ನಡೆಯುತ್ತಲೇ ಹೋಗಿ ಸುಮಾರು ಹತ್ತು ಘಂಟೆಯ ಹೊತ್ತಿಗೆ ತಲುಪಿ ಬಿಟ್ಟೆ. ಚೆನ್ನಮಲ್ಲಿಕಾರ್ಜುನರಿಗೆ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದೆ. ಅವರು ಕೆಲಹೊತ್ತು ಮೌನವಾಗಿ ಕುಳಿತು, "ನೀನು ಔಟ್ ಆಫ್ ಸ್ಟೇಟಿನವರೆಂದು ಹೆಡ್‌ಮಾಸ್ತರರು ಹೇಳಿದರೆ, ನಿನ್ನನ್ನು ಈ ಸ್ಟೇಟಿನವನೇ ಎನ್ನಲು ಒಂದು ಯೋಚನೆಯಿದೆ. ನಿನ್ನ ಹೆಸರಿಗೆ ನಮ್ಮ ಕುಮಸಿಯಲ್ಲಿ (ಸೊರಬ ತಾಲ್ಲೂಕು ಕುಮಸಿ ಎಂಬ ಹಳ್ಳಿಯಲ್ಲಿನ) ಎರಡೆಕರೆ ಗದ್ದೆಯನ್ನು ನಿನ್ನ ಹೆಸರಿಗೆ ವರ್ಗಾಯಿಸಿ 12 ರೂ. ಪಾಲು ಕಂದಾಯ ಕೊಡುವ ಖಾತೇದಾರನನ್ನಾಗಿ ಮಾಡಿಬಿಡುತ್ತೇನೆ. ಆಗ ನೀನು ಬೇರೆ ಸ್ಟೇಟಿನವನು ಎನ್ನಲಿಕ್ಕಾಗುವುದಿಲ್ಲ. ಆಗ ನಿನಗೆ ಸೀಟು

ಸಿಗಬಹುದು. ಮುಂದೆ ನಿರಾತಂಕವಾಗಿ ಓದಿಬಿಡಬಹುದು" ಎಂದು ಹೇಳಿ ಮರುದಿನ ಗಾಡಿ ಕಟ್ಟಿಸಿಕೊಂಡು ಸೊರಬ ತಾಲ್ಲೂಕು ಕಚೇರಿಗೆ ಹೋಗಿ ಎರಡೆಕರೆ ಗದ್ದೆಯನ್ನು ನನ್ನ ಹೆಸರಿಗೆ ಮಾಡಿಸಿ ಒಂದೇ ದಿನದಲ್ಲಿ ಎಲ್ಲ ಕಾಗದ ಪತ್ರಗಳನ್ನು ಮಾಡಿಸಿ ಕೈಗೆ ಕೊಟ್ಟು ಬಿಟ್ಟರು. ಇಷ್ಟೆಲ್ಲ ಕಾರ್ಯವಾಗಬೇಕಾದರೆ ಆ ತಾಲ್ಲೂಕು ಆಫೀಸಿನಲ್ಲಿ ಚನ್ನಮಲ್ಲಪ್ಪನವರ ಶಿಷ್ಯರಾಗಿದ್ದ ಅನೇಕ ಜನ ನೌಕರರಿದ್ದುದೇ ಕಾರಣವಾಗಿತ್ತು. ಚೆನ್ನಮಲ್ಲಪ್ಪನವರು ತಾಲ್ಲೂಕು ಆಫೀಸಿಗೆ ಹೋದುದೇ ತಡ. ಭಯಭಕ್ತಿಯಿಂದ ಕಂಡವರು ಕೆಲವರು, ಕಾಲಿಗೆ ಬಿದ್ದವರು ಕೆಲವರು. ಅತ್ಯಂತ ವಿನಮ್ರಭಾವದಿಂದ ನಡೆದು ಕೊಂಡವರು ಕೆಲವರು. ಇವರು ಮೂವತ್ತು ವರ್ಷಗಳಷ್ಟು ದೀರ್ಘಕಾಲ ಶಿರಾಳಕೊಪ್ಪದ ಮಿಡಲ್‌ಸ್ಕೂಲ್ ಅಸಿಸ್ಟೆಂಟ್ ಮಾಸ್ತರಾಗಿ ಸೇರಿ ಹೆಡ್ ಮಾಸ್ತರರಾಗಿ ದೀರ್ಘಕಾಲ ಮಾಡಿದ ಅನುಪಮ ಸೇವೆಯ ಫಲ ಈ ಮಾನ ಮನ್ನಣೆ.

ಚನ್ನಮಲ್ಲಪ್ಪನವರು ಉನ್ನತ ಆದರ್ಶವಾದಿಗಳು, ಪ್ರಬುದ್ಧ ಆಚಾರಶೀಲರು, ಬಸವಾದಿ ಪ್ರಮಥರ ಸಮತಾವಾದವನ್ನು ಎತ್ತಿ ಹಿಡಿಯಲು ಹಗಲಿರುಳು ಶ್ರಮಿಸಿದವರು. ಎಲ್ಲಕ್ಕೂ ಹೆಚ್ಚಾಗಿ ಸತತ ಕಾಯಕಮಾಡಿ ಕಾಯಕಾರ್ಜಿತ ಧನದಿಂದ ತ್ರಿವಿಧ ದಾಸೋಹ ಮಾಡಿದವರು. ಶಾಸ್ತ್ರಜ್ಞಾನ ಸಂಜನಿತ ಪರಿಪಕ್ವಾಂತಃಕರಣಿಗಳು. ಆಶ್ರಿತಾಭಿಮಾನಿಗಳು. ಒಂದೇ ದಿನದಲ್ಲಿ ತಮ್ಮ ಸ್ವಂತ ಎರಡೆಕರೆ ಗದ್ದೆಯನ್ನು ನನ್ನ ಹೆಸರಿಗೆ ವರ್ಗಾಯಿಸಿ ಮೈಸೂರು ಸಂಸ್ಥಾನದಲ್ಲಿ 12 ರೂ. ಕಂದಾಯ ಕಟ್ಟಿದ ರೈತನನ್ನಾಗಿ ಮಾಡಿ ಓದುವುದಕ್ಕೆ ಅನುಕೂಲವಾಗಲಿ ಎಂಬ ಉಪಕಾರಬುದ್ಧಿಯಿಂದ ತ್ಯಾಗ ಮಾಡಿದವರು. ಆಶ್ರಿತಾಭಿಮಾನಕ್ಕೆ ಇದಕ್ಕಿಂತ ಹೆಚ್ಚಿನ ಉದಾಹರಣೆಯನ್ನು ನಾನು ಎಲ್ಲಿಂದ ತರಲಿ! ಅಲ್ಲಿಂದ ಕಾಗದ ಪತ್ರ ತೆಗೆದುಕೊಂಡು ಪುನಃ ನಾನು ಶಿವಮೊಗ್ಗಕ್ಕೆ ಬಂದು ತೋರಿಸಿದೆ. ಏನು ಮಾಡಿದರೂ ನಾರ್ಮಲ್ ಸ್ಕೂಲ್ ಹೆಡ್ ಮಾಸ್ತರರು ನಾನು ಮೈಸೂರು ಸಂಸ್ಥಾನ ಸಂಜನಿತನೆಂಬುದನ್ನು ಒಪ್ಪಿಕೊಳ್ಳದೆ, "ಮುಂದೆ ಏನಾದರೂ ವಿವಾದವುಂಟಾದರೆ ಇದಕ್ಕೆ ಜವಾಬು ಹೇಳುವವನು ನಾನು, ನೀವಲ್ಲ" ಎಂದು ತಳ್ಳಿಹಾಕಿಬಿಟ್ಟರು. ಇಷ್ಟರಲ್ಲಿ ನನ್ನ ಅಪ್ಲಿಕೇಷನ್ ಡಿ.ಪಿ.ಐ. ಅವರ ಮಂಜೂರಾತಿಗಾಗಿ ಹೋಗಿತ್ತು. ಇನ್ನೇನು ಬರುತ್ತದೆ, ಬರುತ್ತದೆ ಎನ್ನುತ್ತಲೇ ಮೂರು ತಿಂಗಳು ಕಾಲ ತಳ್ಳಿ ಹೋಯಿತು. ಈ ಮೂರು ತಿಂಗಳು ಕುಳಿತು ಮಾಡುವುದೇನು? ನನ್ನ ಕೀರ್ತನ ಕಲೆಯನ್ನಾದರೂ ಸುತ್ತಮುತ್ತಣ ಪ್ರಾಂತದಲ್ಲಿ ಮೆರೆಯೋಣವೆಂದು ತೀರ್ಮಾನಿಸಿ ಆ ಕಾರ್ಯಕ್ಕೆ ಕೈಹಾಕಿದೆ.

### *ಶಿವಮೊಗ್ಗಿ ಪ್ರಾಂತದಲ್ಲಿ ಶಿವಸಂಕೀರ್ತನ ಪ್ರಸಾರ*

ಪ್ರಥಮತಃ ನಾನು ಯಾರಯಾರದೋ ಪರಿಚಯವನ್ನು ಉಪಯೋಗಿಸಿಕೊಂಡು ಹಾರ್ನಹಳ್ಳಿಗೆ ಹೋದೆ. ಹಾರ್ನಹಳ್ಳಿಯನ್ನು ಹಿಂದೊಮ್ಮೆ 1936ರಲ್ಲಿಯೇ ನಮ್ಮ ಮನೆ ಗುರುಗಳಾದ ಹುಲಿಗಬಾಲಿ ಪಟ್ಟದ ದೇವರು ಶಿಷ್ಯರನ್ನು ಹುಡುಕಿಕೊಂಡು ಬಂದಾಗ ಅವರೊಡನೆ ಬಂದ ಪ್ರಸ್ತಾಪ ಹಿಂದಿನ ಪುಟಗಳಲ್ಲಿ ಬಂದಿದೆ. ಅಯೋಗ್ಯ ಶಿಷ್ಯನನ್ನು ಹುಡುಕಿಕೊಂಡು ಬಂದ ಗುರುವು ಹೊಟ್ಟೆಗೆ ಅನ್ನವಿಲ್ಲದೆ ಹೋದುದೂ, ಅವರ ಮನೆಯನ್ನು ಹೊಕ್ಕ ತಪ್ಪಿಗೆ ಪೋಲಿಸ್ ಕಂಪ್ಲೆಂಟ್ ಕೊಡುತ್ತೇನೆಂದು ಅನ್ನಿಸಿಕೊಂಡು ಹೆದರಿ ಬೇರೊಬ್ಬರ ಮನೆಯಲ್ಲಿ ರಾತ್ರಿ ಭೋಜನ ಮಾಡಿ ಗುಡಿಯಲ್ಲಿ ಮಲಗಿ ಭವಣೆಗೊಂಡುದು ನನಗೂ ನೆನಪಿತ್ತು. ಈಗ ಆ ಸ್ಥಿತಿಯೇನೂ ಇರಲಿಲ್ಲ. ನಾನೊಬ್ಬ ಉತ್ತರದೇಶದಿಂದ ಬಂದ ದೊಡ್ಡ ಕೀರ್ತನಕಾರ ಅಲ್ಲದಿದ್ದರೂ ಕೀರ್ತನಕಾರ

ಎಂದು ಅವರಿವರಿಂದ ಪ್ರಚಾರ ಮಾಡಿಸಿ, ರುದ್ರಪ್ಪ ಎಂಬ ಓರ್ವ ಶ್ರೀಮಂತನ ಮನೆಯಲ್ಲಿ ಕೀರ್ತನೆಮಾಡುವ ಮೊದಲ ಆಮಂತ್ರಣವನ್ನು ಗಿಟ್ಟಿಸಿದೆ. ರುದ್ರಪ್ಪ ಹಾರ್ಮೋನಿಯಂ ನುಡಿಸಲು ಸಾಸಿವೆಹಳ್ಳಿಯ ಮುರಿಗೆಪ್ಪ ಎಂಬುವನನ್ನೂ, ತಬಲಾಕ್ಕೆ ದೊಡ್ಡ ಬಸಪ್ಪ ಎಂಬುವನನ್ನೂ ಕರೆಯಿಸಿದರು. ಆ ದಿನ ಮಂಗಳಗೌರಿ ಕಥೆಯನ್ನು ಬಹು ಸ್ವಾರಸ್ಯವಾಗಿ ಮಾಡಿ ಬಿಟ್ಟೆ. ತಬಲಾ ಹಾರ್ಮೋನಿಯಂನವರು ಬಹಳ ಮೆಚ್ಚುಗೆ ವ್ಯಕ್ತಪಡಿಸಿ ಈ ನಮೂನೆ ಕೀರ್ತನೆ ಹೇಳುವವರನ್ನು ನಾವು ಕಾಣದೆ ಬಹಳ ದಿನವಾಯಿತೆಂದು ಹೇಳಿ ಬಹುವಾಗಿ ಪ್ರೋತ್ಸಾಹ ಕೊಟ್ಟು ಪ್ರಚಾರ ಮಾಡಿಬಿಟ್ಟರು. ಸಾಸಿವೆಹಳ್ಳಿ ಮುರಿಗೆಪ್ಪ ಒಳ್ಳೆಯ ಹಾರ್ಮೋನಿಯಂ ವಾದಕ. ಅವನ ಹೆಂಡತಿಯ ಮನೆ ಹಾರ್ನಹಳ್ಳಿಯ ಪಕ್ಕದ ಕಸಿಬೆ ಎಂಬ ಊರಲ್ಲಿತ್ತು. ಸಾಮಾನ್ಯವಾಗಿ ಈತ ಹೆಂಡತಿಯ ಮನೆಯಲ್ಲೇ ಇರುತ್ತಿದ್ದ. ಕುಂಬಾರ ಕಾಯಕದ ಸಾತ್ವಿಕ ವ್ಯಕ್ತಿಯಾದ ಈತನಿಂದ ನನಗೆ ಬಹಳ ಉಪಕಾರವಾಯಿತು. ದೊಡ್ಡಬಸಪ್ಪನೂ ಅಷ್ಟೆ. ಅವನೂ ಮಡಿಕೆ ಕಾಯಕದವ, ಉತ್ತಮ ತಬಲಾವಾದಕ. ಇವರುಗಳ ನೆರವಿನಿಂದ ಹಾರ್ನಹಳ್ಳಿ ಮತ್ತು ಕಸಬೆಗಳಲ್ಲಿ ಓಣಿಗೊಂದೊಂದರಂತೆ ಕಥೆಗಳನ್ನು ಮಾಡಿಸಿದ್ದರ ಫಲವಾಗಿ ಅಷ್ಟು ಇಷ್ಟು ದುಡ್ಡು ಕೈಸೇರತೊಡಗಿತು. ನಾನು ಯಾರನ್ನು ಎಂದೂ ಅಷ್ಟು ಕೊಡಿ, ಇಷ್ಟು ಕೊಡಿ ಎಂದು ಕೇಳುತ್ತಿರಲಿಲ್ಲ. ಅವರು ಕೊಟ್ಟರೂ ಸರಿ ಕೊಡದಿದ್ದರೂ ಸರಿಯೇ ಕಥೆ ಮಾಡಿ ಮುಗಿಸಿದ ಬಳಿಕ ಅವರೇ ನನ್ನ ನಿರೀಕ್ಷಣೆಗೆ ಮೀರಿ ಕೊಟ್ಟಿದ್ದುಂಟು. ಆಗ ಒಂದೊಂದು ಕಥೆಗೆ ಐದು ರೂಪಾಯಿಗೆ ಕಡಿಮೆಯಿಲ್ಲದಂತೆ ಕೊಡುತ್ತಿದ್ದರು. ಆರತಿ ತಟ್ಟೆಯಲ್ಲಿ ಕನಿಷ್ಠ ಎರಡು ರೂಪಾಯಿಗಳಾದರೂ ಬೀಳುತ್ತಿತ್ತು. ಕೆಟ್ಟದ್ದೇನು? ನನ್ನ ಅರ್ಧತಿಂಗಳ ಚರಿತ್ರಾರ್ಥ ಒಂದು ಕಥೆಯ ಸಂಭಾವನೆಯಿಂದ ನಡೆದು ಹೋಗುತ್ತಿತ್ತು. ಜೊತೆಗೆ ನನ್ನ ಈ ಕಲೆ ಸಾಣಿಹಿಡಿದು ದಿನದಿಂದ ದಿನಕ್ಕೆ ಹರಿತಗೊಳ್ಳುತ್ತಿತ್ತು. ಹಾರ್ನಹಳ್ಳಿಯ ನನ್ನ ಕಥೆಯ ವೈಖರಿ ಹುಬ್ಬಳ್ಳಿಯ ಕೆಲವು ಪತ್ರಿಕೆಗಳಲ್ಲಿ ವರದಿಯಾಗತೊಡಗಿತು. ಪ್ರಚಾರಾಧಿಕ್ಯದಿಂದ ಹೆಚ್ಚು ಹೆಚ್ಚಾಗಿ ಕರೆ ಬರತೊಡಗಿದವು. ಉತ್ಪತ್ತಿಯೂ ಗಣನೀಯವಾಗಿ ಹೆಚ್ಚಾಯಿತು. ಇದೇ ಮುಂದೆ ನನ್ನ ಮೂರು ವರ್ಷಗಳ ಓದಿನ ಖರ್ಚಿಗೆ ತುಂಬಾ ನೆರವಾಗಿ ಹೋಯಿತು. ಇವರಿಂದ ಸ್ಥಳೀಯ ಕಥೆಗಾರರ ನಿಷ್ಠುರವನ್ನು ಕಟ್ಟಿಕೊಳ್ಳಬೇಕಾಯಿತು.

ಹಾರ್ನಹಳ್ಳಿಯಲ್ಲಿ ಸಿದ್ಧಲಿಂಗಶಾಸ್ತ್ರಿ ಎಂಬ ಓರ್ವ ವೃದ್ಧರಿದ್ದರು. ಅವರ ಸ್ಥಿತಿಯನ್ನು ಕಂಡು ನನಗೆ ಅಯ್ಯೋ ಎನ್ನುವಂತಾಗುತ್ತದೆ. ಕಥೆ ಪುರಾಣ ಜ್ಯೋತಿಷ್ಯ ಇವನ್ನೇ ನಂಬಿಕೊಂಡು ಜೀವನಮುದ್ದಕ್ಕೂ ಬಂದ ಮನುಷ್ಯರವರು. ತಾರುಣ್ಯದಲ್ಲಿ ಅಲ್ಲಿ ಇಲ್ಲಿ ತಿರುಗಾಡಿ ಜ್ಯೋತಿಷ್ಯದ ಬುರುಡೆ ಬಿಟ್ಟೋ, ಕೀರ್ತನಗಳನ್ನು ಮಾಡಿ ಹೆಂಗಸರನ್ನು ಹುಡುಗರನ್ನು ನಗಿಸಿಯೋ, ಅಲ್ಲಿ ಇಲ್ಲಿ ಪುರಾಣ ಗಿರಾಣಾ ಅಂತಾ ಹೇಳಿ ಏನೋ ಅಲ್ಪಸ್ವಲ್ಪ ಗಳಿಸಿ ತಂದು ಜೀವನ ನಿರ್ವಹಣೆ ಮಾಡಿರಬಹುದು. ಇವರಿಗೆ ಮಾತಿನ ಬಲವಿರುವವರೆಗೆ ಮಾತ್ರ ಜೀವನ. ಅದಿಲ್ಲದಿದ್ದಾಗ ಇವರ ಹತ್ತಿರ ಸುಳಿಯುವವರಾದರೂ ಯಾರು ಹೇಳಿ? ಈ ಎಲ್ಲ ಕಲೆ ಅಥವಾ ಕಸಬು ಅನ್ನಿ, ಇವೆಲ್ಲ ಒಂದು ಜೀವನ ನಿರ್ವಹಣೆಗೆ ಇರುವ ಪ್ರಧಾನ ಕಸಬಿಗೆ ಉಪಕಸಬಾಗಿರಬೇಕೆ ವಿನಾ ಇವೇ ಪ್ರಧಾನವಾಗಿ ಇರಬಾರದು. ಅದರಲ್ಲೂ ಕಾಲಕಾಲಕ್ಕೂ ಜನರ ಅಭಿರುಚಿಗಳಲ್ಲಿ ಬದಲಾವಣೆ ಆಗುತ್ತಿರುತ್ತದಲ್ಲವೆ? ಅವರ ಅಭಿರುಚಿಗನುಗುಣವಾಗಿ ತಮ್ಮ ಕಸಬಿನಲ್ಲಿಯೂ ಕಸಬುದಾರರು ಬದಲಾವಣೆ ಮಾಡಿಕೊಳ್ಳಬೇಕು. ಸಿದ್ಧಲಿಂಗಶಾಸ್ತ್ರಿ ಅಂಥ ಬದಲಾವಣೆ ಮನುಷ್ಯನಲ್ಲ. ಹಳೆಯ ಮನುಷ್ಯ. ಧ್ವನಿಯೆಲ್ಲ ಕುಂಠಿತಗೊಂಡು ಹಾಡಲು, ಮಾತಾಡಲು

ಶಕ್ತಿಯಿಲ್ಲ. ಕಪೋಲಕ್ಕೆ ಕೈಕೊಟ್ಟು ಹಾಡಲು ಪ್ರಾರಂಭಿಸಿದನೆಂದರೆ, ಹಾರ್ಮೋನಿಯಂನವನು ಒಮ್ಮೆಲೆ ನಾಲ್ಕೈದು ಸೂರು ಹಿಡಿದು ಒದ್ದಾಡಬೇಕಾಗಿತ್ತು. ಇವರು ಕಥೆ ಹೇಳಹೊರಟರೆ ಮುಕ್ಕಾಲು ಪಾಲು ಅಡ್ಡತಿಡ್ಡ, ಚರ್ವಿತ ಚರ್ವಣದ ಅಜ್ಜಿಯ ಕಥೆಗಳಿಗೇ ಪ್ರಾಶಸ್ತ್ಯ. ಪುರಾಣ ಹೇಳ ಕುಳಿತರೂ ಅಷ್ಟೆ. ಹೀಗಾಗಿ ಯಾರೂ ಇವರನ್ನು ಕಥೆ ಪುರಾಣ ಮಾಡಲು ಕರೆಯುತ್ತಿರಲಿಲ್ಲ. ನಾನು ಹಾರ್ನಹಳ್ಳಿಯಲ್ಲಿ ಅನೇಕ ಕಥೆ ಮಾಡತೊಡಗಿದಾಗ ದೂರದಲ್ಲಿ ಕುಳಿತು ಕೇಳಿ, ಮನಸ್ವೀ ಬೈದಾಡುತ್ತಿದ್ದನಂತೆ. ಜಾತಿಗೆ ಜಾತಿ ವೈರಿ, ಕಸಬುದಾರನಿಗೆ ಕಸಬುದಾರ ವೈರಿ! ಎಂಬ ಗಾದೆಯೇ ಉಂಟಲ್ಲವೆ? ಆ ಕಾಲ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಪರ್ವಕಾಲ. ನಾನು ಗಾಂಧಿ, ನೆಹರು, ಪಟೇಲ್ ಇತ್ಯಾದಿ ಸ್ವಾತಂತ್ರ್ಯಸಂಗ್ರಾಮದ ಅಧ್ವರ್ಯುಗಳ ಧೈರ್ಯ-ಸಾಹಸ ತ್ಯಾಗಾದಿ ಗುಣಗಳನ್ನು ಹೇಳತೊಡಗಿದೆನೆಂದರೆ ಜನರ ಉತ್ಸಾಹ ಹೇಳತೀರದು. ಹೋಹೋ! ಎಂದು ಸಂತೋಷದ ಜಯಘೋಷವನ್ನು ಮಾಡಿಬಿಡುತ್ತಿದ್ದರು. ಅಂಥ ಸಮ್ಮೋಹನಾಸ್ತ್ರವನ್ನು ಜನತೆಯ ಮೇಲೆ ಗಾಂಧಿ ಬೀರಿದ್ದರು. ನಾನು ಇಂಥ ಹಲವಾರು ಗಾಂಧಿಯವರ ತ್ಯಾಗದ ಕಥೆಗಳನ್ನು ದುಂಬಿಯಂತೆ ಸಂಗ್ರಹಿಸಿ ಪ್ರಸಂಗ ಬಂದಾಗಲೆಲ್ಲ ಹೇಳಿ ಜನರ ಉತ್ಸಾಹವನ್ನು ಕೆರಳಿಸುತ್ತಿದ್ದೆ. ಇಂಥ ಕಥೆ ಹೇಳುವುದರ ಮೂಲಕ ಜನರ ಅಭಿರುಚಿಗಳಿಗೆ ತಕ್ಕ ಹಾಗೆ ಏನೇನೋ ಮಾತಾಡಲು ಕಲಿತಿದ್ದೆ. ಇಂಥ ತಂತ್ರ ಹೂಡಿ ಕಥೆ ಮಾಡುವುದರಲ್ಲಿ ಆಗ ಕಳ್ಳಿ ಕಪ್ಪಣ್ಣ ಶಾಸ್ತ್ರಿ ಎಂಬುವನು ಪ್ರಸಿದ್ಧನಾಗಿದ್ದ. ಅವನ ಕಥೆಗಳನ್ನು ನಾನು ಬಾಲ್ಯದಲ್ಲಿ ಕೇಳಿದ್ದೆ. ಅಲ್ಲಿಂದ ಬೇಕಾದಷ್ಟು ಕದ್ದುತಂದು ನಾನೂ ಆ ತಂತ್ರವನ್ನು ಅನುಸರಿಸಿ ಹೇಳಿದಾಗ ಜನತೆಯ ಉತ್ಸಾಹ ನೂರ್ಮಡಿಗೊಂಡು ಸಂತೋಷಗೊಂಡ ಜನ ಚಪ್ಪಾಳೆ ತಟ್ಟುವುದರ ಮೂಲಕ ತಮ್ಮ ಉತ್ಸಾಹ ಪ್ರಕಟಿಸುತ್ತಿದ್ದರು. ಅಂಥ ಕೆಲವು ಹಾಡುಗಳನ್ನು ಕಲಿತಿದ್ದೆ. ಗುಬ್ಬಿವೀರಣ್ಣನವರ ನಾಟಕ ಕಂಪನಿಯಲ್ಲಿ ಹಿಂದೆ 'ಅಶ್ವತ್ಥಮ್ಮ' ಎಂಬ ಕಲಾವಿದೆಯಿದ್ದಳು. ಅವಳು ನಾಟಕವೊಂದರಲ್ಲಿ ರಂಗಭೂಮಿಯ ಮೇಲೆ ಪಾತ್ರಧಾರಿಣಿಯಾಗಿ ಬಂದು,

ಮಾತೆ ಭಾರತೀಯ ಸ್ವಾತಂತ್ರ್ಯಮಂತ್ರವೊಂದೇ ಮಾತರಂ॥
ಹಾಕು ಬೆಂಕಿಲಿ ಉರಿಲಿ ಧಗಧಗ ಧರಿಸು ಖಾದಿ ಪವಿತ್ರವೋ॥
ಹೂಡಿಗೂಡಿ ಸ್ವರಾಜ್ಯ ಸ್ವಾತಂತ್ರ್ಯವನು॥
ಭಗಿನೀ ಚರಣವಿದೇ ನಮ್ಮ ಜೀವನವು॥

ಈ ಹಾಡು ಹಾಡಿದಾಗ ಕಿಕ್ಕಿರಿದು ತುಂಬಿದ್ದ ನಾಟಕದ ಥಿಯೇಟರ್‌ನ ಪ್ರೇಕ್ಷಕ ವರ್ಗ ರೋಮಾಂಚನಗೊಂಡು ಹೋ ಹೋ!! ಎಂದು ಅಟ್ಟಹಾಸದಿಂದ ಉತ್ಸಾಹ ಪ್ರಕಟಿಸಿ ಒನ್ಸ್‌ಮೋರ್ ಎನ್ನುತ್ತಿತ್ತು. ನಾನು ಇಂಥ ಕೆಲವು ಹಾಡು ಕಲಿತು ಪ್ರಸಂಗಗಳಿಗೆ ಹೊಂದಿಸಿಕೊಂಡು ಹೇಳುತ್ತಿದ್ದೆ. ವಂದೇ ಮಾತರಂ... ಹಾಡನ್ನಾಗಿಲಿ, ಜನಗಣಮನ ಅಧಿನಾಯಕ.. ಹಾಡನ್ನಾಗಲಿ ಹಾಡಿ ಅದರ ಅರ್ಥ ವಿವರಿಸುತ್ತಿದ್ದಾಗ ಜನ ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದರು. ಗಾಂಧಿ ಆ ಕಾಲದಲ್ಲಿ ಜನತೆಯ ಮೇಲೆ ಬೀರಿದ್ದ ಮೋಹನಾಸ್ತ್ರ ಅಂಥಿಂಥದಲ್ಲ. ಭಾರತವನ್ನು ಈ ಪುಣ್ಯಪುರುಷ ಕಟ್ಟಿದಂತೆ ಹಿಂದೆ ಯಾವ ಭಾರತೀಯನೂ ಕಟ್ಟಲೇ ಇಲ್ಲ. ಛಪ್ಪನ್ನಾರು (56) ದೇಶಗಳನ್ನು ಮಾಡಿಕೊಂಡು ತಾವೇ ತಾವೇ ಹೊಡೆದಾಡಿ ಸಣ್ಣಗಾಗಿ ಪರಕೀಯರಿಗೆ ತಾವೇ ಹಗ್ಗಕೊಟ್ಟು ಕೈಕಟ್ಟಿಸಿಕೊಂಡ ಅವಿವೇಕ ಇವರದು. ನಮ್ಮ ದೇಶವನ್ನು ತುಂಟ-ಗುಲಾಮರೆಲ್ಲ ಆಳಿಹೋದರು. ಗಾಂಧಿ ನಿಜವಾಗಿ ಭಾರತೀಯರನ್ನೆಲ್ಲ ಒಂದುಗೂಡಿಸಿ ರಾಷ್ಟ್ರೀಯ ಭಾವೈಕ್ಯವನ್ನು

ಸಾಧಿಸಿದಂತೆ ಯಾವ ಪ್ರಾಚೀನನೂ ಸಾಧಿಸಲಿಲ್ಲ. ಇದನ್ನು ಈ ಕಾಲದಲ್ಲಿ ಅರಿತ ಜನ ಭಾರತ, ಭಾರತ ಸ್ವಾತಂತ್ರ್ಯ, ಭಾರತದ ಇತಿಹಾಸ, ಗಾಂಧಿ, ನೆಹರು, ಚರಕ, ಖಾದಿ ಇತ್ಯಾದಿ ಹೆಸರೆತ್ತಿದಾಗಲೆಲ್ಲ ಹೋ ಹೋ ಎಂದು ನೂರ್ಮಡಿಸಿದ ಉತ್ಸಾಹದಲ್ಲಿ ಬೀಗಿ ಹೋಗುತ್ತಿದ್ದರು. ಒಮ್ಮೊಮ್ಮೆ ಎಲ್ಲೋ ಯಾರೋ ಹಾಡುತ್ತಿದ್ದ ಹಾಡುಗಳನ್ನು ಬರೆದುಕೊಂಡು ನನ್ನ ಕಥೆಯ ಸಂದರ್ಭಕ್ಕೆ ಸೇರಿಸಿಕೊಳ್ಳುತ್ತಿದ್ದೆ.

ಕರುಣವು ಬಾರದೆ ಇನ್ನಾದರೂ ಶಿವನೇ
ಅರಹೊಟ್ಟೆಯುಣ್ಣುವ ಭಾರತೀಯರ ನೋಡಿ॥
ತೂಗುತಕ್ಕಡಿ ತಂದು ರೊಕ್ಕವ ಸೆಳೆದರೊ।
ಭಕ್ಕಳ ಮಾಡಿದರೊ ಭಾರತ ಭಾಗ್ಯವ॥
ಕಾರು ಮೋಟಾರು ತಂದು ಕಾಲನು ಕಳೆದರೊ।
ಷೋಕಿಯ ಹೆಚ್ಚಿಸಿ ಜನಗಳ ಕೊಂದರೋ....

ಏನೇನೋ ಒಂದಲ್ಲ ಎರಡಲ್ಲ, ಸಾಮಾನ್ಯ ಜನಗಳನ್ನು ಉತ್ಸಾಹಗೊಳಿಸಿ ಆಯಾಯ ಕಾಲದ ಅವರ ಮನೋಭಾವಗಳನ್ನು ಕೆರಳಿಸಿ ಸಂತೋಷ ಪಡಿಸಬೇಕಲ್ಲವೇ. ಸಂಸ್ಕೃತದಲ್ಲಿ "ಏನಕೇನ ಪ್ರಕಾರೇಣ ಯಸ್ಯ ಕಸ್ಯಾಪಿರೇಪಿನಃ ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರ ಪೂಜನಂ" ಎಂಬ ಒಂದು ಸುಭಾಷಿತವುಂಟು. ಯಾವು ಯಾವುದೋ ಪ್ರಕಾರದಿಂದ ಜನಗಳನ್ನು ಸಂತೋಷಪಡಿಸುವುದೇ ಈಶ್ವರ ಪೂಜೆಯಂತೆ. ಹಾಗೆ ನೋಡಿದರೆ ನನ್ನದೂ ಬುರುಡೆಯೇ. ಕಥೆಯ ಪುಂಗಿಯನ್ನು ನಾನೂ ಊದುತ್ತಿದ್ದೆ. ನನಗೆ ಸಂಸ್ಕೃತ ಜ್ಞಾನವಿರಲಿಲ್ಲ, ಶಾಸ್ತ್ರಾಭ್ಯಾಸವಿರಲಿಲ್ಲ, ದರ್ಶನ, ಉಪನಿಷತ್ತು, ಗೀತೆ, ಅಷ್ಟಾದಶ ಪುರಾಣ, ವಚನ ಶಾಸ್ತ್ರ - ಏನೇನೋ ಹೇಳುತ್ತಾರಲ್ಲ. ಅವುಗಳ ತಳಬುಡಗಳ ಪರಿಚಯವೂ ಇರಲಿಲ್ಲ. ಅವರು ಇವರು ಹೇಳಿದ ಕೆಲವು ಸಂಸ್ಕೃತ ಶ್ಲೋಕಗಳನ್ನು ಬರೆದುಕೊಂಡು ತಪ್ಪುತಪ್ಪಾಗಿಯೇ ಜಡಿದು ಬಿಟ್ಟು "ಇವರೂ ಸಂಸ್ಕೃತಗಿಂಸ್ಕೃತ ಎಲ್ಲಾ ಓದಿಕೊಂಡಾವ್ರೆಪೋ" ಎಂದು ಏನೂ ಅರಿಯದ ಜನ ಆಡಿಕೊಳ್ಳುವಂತೆ ಅವಸರ ಪರಿತಾಪಾಣೆಯಲ್ಲಿ ಹೇಳಿ ಮಂಕುಬೂದಿ ಎಸೆದು ಕಥೆ ಮುಗಿಸಿ ಮಂಗಳಾರತಿ ತಟ್ಟೆ ಎತ್ತಿಸಿ ಆಗಲೂ ಜನ ಹೆಚ್ಚು ಹೆಚ್ಚು ಹಣವನ್ನು ತಟ್ಟೆಗೆ ಹಾಕುವಂತೆ ಹಾಸ್ಯ ಮಾಡಿ ಬಂದಷ್ಟು ದುಡ್ಡನ್ನು ಜೇಬಿಗಿಳಿಸಿಬಿಟ್ಟುಕೊಂಡು ನಡೆಯುತ್ತಿದ್ದೆ. ನಾನು ಮುಂದೆ ಸ್ವತಃ ಸಂಸ್ಕೃತಾಭ್ಯಾಸ ಮಾಡುವವರೆಗೆ ನಾನು ಹೇಳುತ್ತಿದ್ದ ಸಂಸ್ಕೃತ ಶ್ಲೋಕಗಳ ಮತ್ತು ಸಾಂದರ್ಭಿಕ ಮಾತುಗಳ ತಪ್ಪುಗಳೇ ನನಗೆ ಗೊತ್ತಾಗಲಿಲ್ಲ. ಓದಿದ ಮೇಲೆ ಅವನ್ನೆಲ್ಲ ತಿದ್ದಿಕೊಂಡೆ. ಅಂಥ ತಪ್ಪುಶ್ಲೋಕಗಳನ್ನೇ ನೂರಾರು ಸಲ, ಸಾವಿರಾರು ಸಲ ಹೇಳಿ ಚಲಾವಣೆಗೊಳಿಸಿಬಿಟ್ಟಿದ್ದೆ. ಖೋಟಾನೋಟುಗಳನ್ನು ಚಲಾವಣೆಗೆ ಬಿಟ್ಟು ಗಳಿಕೆ ಮಾಡಿದ ಕಳ್ಳರಂತೆ. ಆದರೆ ಒಂದು ಮಾತ್ರ ನಿಜ. ನಾನು ಒಂದರಿಂದ ಏಳನೇ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿದ ಕಾಲದಲ್ಲಿ ಪಠ್ಯಪುಸ್ತಕದಲ್ಲಿದ್ದ ಪದ್ಯಗಳೆಲ್ಲಾ ಕ್ರಮವಾಗಿ ಬಾಯಿಗೆ ಬರುತ್ತಿದ್ದವಾಗಿ ಅವುಗಳ ಬಂಡವಾಳ ನನಗೆ ದೊಡ್ಡ ಪ್ರಮಾಣದಲ್ಲಿ ಸಹಕಾರಿಯಾಗಿ "ಕನ್ನಡದಲ್ಲಿ ಮಹಾವಿದ್ವಾಂಸರಪ್ಪ" ಎಂದು ಜನ ಅನ್ನುವಂತೆ ಅವನ್ನೆಲ್ಲ ವೇಗದಲ್ಲಿ ಹೇಳಿ ಆಶ್ಚರ್ಯಗೊಳಿಸಿ ಬಿಡುತ್ತಿದ್ದೆ.

ಆಗ ಶಬರಶಂಕರ ವಿಳಾಸ, ರಾಜಶೇಖರ ವಿಳಾಸ, ಚನ್ನಬಸವ ಪುರಾಣ, ಪಂಪಭಾರತ, ಗದಾಯುದ್ಧ, ರತ್ನಾಕರ ಶತಕ, ಅಪರಾಜಿತೇಶ್ವರ ಶತಕ, ಪಂಪರಾಮಾಯಣ, ತೊರವೆ

ರಾಮಾಯಣ, ಜೈಮಿನಿ ಭಾರತ, ಗದುಗಿನ ಭಾರತ, ಬಸವಪುರಾಣವೇ ಮೊದಲಾದ ಕನ್ನಡ ಪ್ರೌಢಕಾವ್ಯ ಖಂಡಗಳು 5-6-7ನೆಯ ತರಗತಿಯ ಪಠ್ಯಪುಸ್ತಕಗಳಲ್ಲಿರುತ್ತಿದ್ದವು. ಆಗಿನ ನಮ್ಮ ಉಪಾಧ್ಯಾಯರು ಎಲ್ಲ ಪದ್ಯಗಳನ್ನು ವಿದ್ಯಾರ್ಥಿಗಳು ಬಾಯಿಪಾಠ ಮಾಡೇ ತೀರಬೇಕೆಂದು ಆಸಕ್ತಿ ವಹಿಸಿ, ಶಿಕ್ಷೆಯನ್ನಾದರೂ ಕೊಟ್ಟು ಬಾಯಿಪಾಠ ಮಾಡಿಸುತ್ತಿದ್ದರು. ಕನ್ನಡದಲ್ಲಿ ನಾನೇನಾದರೂ ಅಲ್ಪಸ್ವಲ್ಪ ತಿಳಿದವನೆನ್ನಿಸಿದ್ದರೆ ಈ ಮೂಲಬಂಡವಾಳವೇ ಕಾರಣ. ಈ ಮೂಲಬಂಡವಾಳದಿಂದ ನಮ್ಮಲ್ಲಿ ಅನೇಕ ಶಬ್ದಚಿತ್ರ, ಪ್ರಕೃತಿಚಿತ್ರ, ಜೀವನ ಚಿತ್ರಗಳು ಸಂಸ್ಕಾರಗೊಂಡು ನಮ್ಮ ಭಾವಕೋಶದಲ್ಲಿ ಹುದುಗಿಬಿಟ್ಟವು. ಉತ್ತಮೋತ್ತಮ ಶಬ್ದಗಳ ಭಾಂಡಾರ ನಮ್ಮದಾಗಿ ಹೋಯಿತು. ಈ ಬಂಡವಾಳವನ್ನೆಲ್ಲ ನಾನು ಕಥೆಯ ತಂತ್ರಕ್ಕೆ ಅಳವಡಿಸಿ ಜನಕ್ಕೆ ತಿಳಿಯಲಿ ಬಿಡಲಿ, ವೇಗವೇಗವಾಗಿ ಹೇಳಿ ಜನತೆಯ ಗಮನವನ್ನು ಸಾಹಿತ್ಯದ ಕಡೆಗೆ ಸೆಳೆದು ಕನ್ನಡ ಸಾಹಿತ್ಯವೆಂದರೆ ಎಷ್ಟು ಭವ್ಯ ಎಂಬ ಒಂದು ಭಾವನೆಯನ್ನಾದರೂ ಹುಟ್ಟಿಸಲು ಸಹಕಾರಿಯಾಗುತ್ತಿತ್ತು.

> ಅನ್ನೆಗಂ ಬಂದನಗ್ಗದ ಸಮಿತ್ಪುಷ್ಪಂಗಳಂ ನೆತ್ತಿಯೊಳ್ ಪೊತ್ತು
> ಕೊಂಡು ಕುಶನಳುತಿರ್ಪ ತನ್ನ ತಾಯಂ ಕಂಡಿದೇನದ್ಭುತ ಪ್ರಳಾಪಂ
> ನಿನಗೆ ಪೇಳೆನಲ್ಕೆ ಬನ್ನಮಂ ಕೇಳಗ್ರನೆ ಹಯವೊಂದು ಬರಲದಂ
> ನಿನ್ನ ತಮ್ಮಂ ಕಟ್ಟಲರಸುಗಳ್ಪಿಡಿದೊಯ್ದರಿನ್ನೇವೆನೆಂದು ಜಾನಕಿ ನುಡಿಯೆ
> ರೋಷದಿಂದಾ ಕುವರನಿಂತೆಂದನು.

- ಜೈಮಿನೀ ಭಾರತದ ಲವಕುಶರ ಪ್ರಸಂಗದ ಈ ಪದ್ಯವನ್ನು ಕೇದಾರಗೌಳದಲ್ಲೋ ಭೈರವಿಯಲ್ಲೋ ಹೇಳಿ ಜನವನ್ನು ಅಚ್ಚರಿಗೊಳಿಸುವುದೊಂದು ಕಲೆ. ಈ ಕಲೆ ನನಗೆ ನಾಟಕಗಳನ್ನು ನೋಡಿ ನೋಡಿ ಕರಗತವಾದದ್ದು. ಸಂಗೀತವನ್ನು ನಾನು ಕ್ರಮವಾಗಿ ಕಲಿಯ ದಿದ್ದರೂ, ಸರಿಗಮ ಪದನಿಸಗಳ ತಳಬುಡ ಗೊತ್ತಿಲ್ಲದಿದ್ದರೂ ಅನುಕರಣಕಲೆಯಿಂದ ಸಂಗೀತ ಕಲಿತವನಂತೆ ಹೇಳಿ ಜನಗಳನ್ನು ಮೆಚ್ಚಿಸಿಬಿಡುತ್ತಿದ್ದೆ. ಚನ್ನಬಸವಪುರಾಣದೊಳಗಿನ ಶಿವನ ಹಣೆಗಣ್ಣುರಿ ಪ್ರತಾಪ ಹೇಳಬೇಕಾದಾಗ,

> ನಿಟಿಲಾಕ್ಷಮರೆದೆರೆಯೆ ತುಂಬಿದುದು ಬ್ರಹ್ಮಾಂಡ ಘಟದೊಳಗೆ
> ಬೆಳಗು, ಬೆಳಗಿಂದುಷ್ಣಮುಷ್ಣದಿಂ ಪುಟನೆಗೆದು ಬಳೆವ ಪೊಗೆ
> ಪೊಗೆಯೊಳುರಿ
> ಉರಿಯೊಳಿರದೇಳ್ವ ಶಿಖಿ ಶಿಖಿಯೊಳಗೆ ಲಟಕಟಿತ ಶಿಖಿಯ ನಾಲಗೆ
> ಪೆರ್ಚೆ ಭುಗಿಭುಗಿಲ್ ಚಟಚಟಿಲ್ ಸಿಮಿಸಿಮಿಸಿಮೆಂದು...

ಇತ್ಯಾದಿ ಪದ್ಯವನ್ನು ರಾಗವಾಗಿ ಹೇಳಿ ಸಂದರ್ಭವನ್ನು ಹೇಳುತ್ತಿದ್ದಾಗ ಕನ್ನಡ ಕವಿಯ ಪ್ರತಿಭೆಗೆ ಶಬ್ದಶಯ್ಯೆಗೆ ಮಾರುಹೋದ ಜನ ಅರ್ಥ ಗೊತ್ತಾಗದಿದ್ದರೂ ಭಾಷೆಯ ಬೆಡಗಿಗೇ ಮರುಳಾಗಿ ಚಪ್ಪಾಳೆ ತಟ್ಟುತ್ತಿದ್ದರು. ಇದೊಂದು ಗತ್ತುಗಾರಿಕೆ. ಈ ತಂತ್ರವನ್ನು ಕಥೆಮಾಡುವವರು ಸ್ವಲ್ಪ ಕಲಿತಿರಬೇಕಾಗುವುದು. ಇದು ಸಾಹಿತ್ಯ ಸಂಸ್ಕೃತಿಯ ಬಗೆಗೆ ಒಂದು ಬಗೆಯ ಅಭಿಮಾನವನ್ನು ಕೆರಳಿಸಿ ಸಂತೋಷಗೊಳಿಸುವುದು. ಉತ್ತಮಕವಿಯ ಸುಂದರ ಶಬ್ದಜಾಲದ ವರ್ಣನಾ ಭಾಗ ನಮ್ಮ ಪ್ರಕೃತ ಯಾವ ಕಥೆಗೇ ಆಗಲಿ ಹೊಂದಿಕೆಗೊಂಡಾಗ ನಮ್ಮ ಭಾಷೆಗೇ ಒಂದು ಬನಿ.

ಬೆಡಗು. ಭವ್ಯತೆ ಬರುತ್ತದೆ. ಕೀರ್ತನೆ ಮಾಡುವವರು, ಕಥೆ ಪುರಾಣಮಾಡುವವರು ತಮ್ಮ ಬರಡು ಮಾತುಗಳನ್ನೇ ಹೇಳಿ ಹೇಳಿ ಯಾವಾಗ ಈ ಮಹಾರಾಯ ಬಾಯಿ ಮುಚ್ಚಿಯಾನು ಎನ್ನಿಸಿಕೊಳ್ಳುವುದಕ್ಕಿಂತ, ಇನ್ನಷ್ಟು ಹೇಳಿದ್ದರೆ ಚೆನ್ನಾಗಿತ್ತು ಎನ್ನುವ ಮಟ್ಟಿಗಾದರೂ ನಾವು ನಮ್ಮ ತಂತ್ರವನ್ನು ಪೂರ್ವಭಾವಿಯಾಗಿ ಯೋಚಿಸಿ ಯಾವ ಕಥೆಯನ್ನೇ ಮಾಡಲಿ. ಅದಕ್ಕೆ ಅಳವಡಿಸಿಕೊಂಡಾಗ ಕಥೆಗೊಂದು ಸತ್ವಬರುತ್ತದೆ. ನನ್ನ ಬಂಡವಾಳದ ಬಗ್ಗೆ ನಿಮಗೆ ಈ ಮೊದಲೇ ಹೇಳಿದ್ದೇನೆ. ನಾನು ಎಷ್ಟೋ ತಪ್ಪು ಹೇಳುತ್ತಿದ್ದೆನೆಂದು ಈಗ ಅನ್ನಿಸುತ್ತದೆ. ಅದನ್ನೆಲ್ಲ ನಾನು ಗಮನಿಸಿದ್ದೆ. ಆದ ಕಾರಣ ಅಂಥಲ್ಲಿ ನನ್ನ ವೇಗ ಹೆಚ್ಚಿ ಬಿಡುತ್ತಿತ್ತು. ಅವರಿಗೆ ಅರ್ಥಕ್ಕಿಂತ ಶಬ್ದಶಕ್ತಿಯಲ್ಲಿನ ಬೆಡಗಿಗೆ ಮಾರುಹೋಗುವಂತೆ ಮಾಡುತ್ತಿದ್ದೆ. ಎಲ್ಲವನ್ನು ತಿಳಿದವರು ಲೋಕದಲ್ಲಿ ಸಿಗುವುದು ಅಪರೂಪವಲ್ಲವೆ? ಅದನ್ನೆಲ್ಲ ಅವಸರವಾಗಿ ಕೇಳುವವರಿಗೆ ಆಶ್ಚರ್ಯ ಹುಟ್ಟುವಂತೆಯೂ ಆ ಅಜಾಂಡ ಶಬ್ದಜಾಲವನ್ನವರು ಹಿಂಬಾಲಿಸಿಕೊಂಡು ಬಂದು ಇಲ್ಲಿ ತಪ್ಪು ಹೇಳಿದರೆಂದು ಕಂಡು ಹಿಡಿಯುವುದಕ್ಕೂ ಅವಕಾಶವಾಗದಂತೆ ಮಾಡುತ್ತಿದ್ದೆನಾಗಿ ಜನಕ್ಕೆ ಆಶ್ಚರ್ಯವಾಗಿ ನನ್ನ ಕಥೆ ಮಾಡಿಸಲು ಮುಂದೆ ಬರುತ್ತಿದ್ದರು. ಸಿದ್ಧಲಿಂಗ ಶಾಸ್ತ್ರಿಗೆ ಈ ತಂತ್ರ ಗೊತ್ತಿಲ್ದೆ ಸವಕಳಿ ನಾಣ್ಯವಾಗಿದ್ದರು. ಇದು ಒಂದು ರೀತಿಯಲ್ಲಿ ಮಾತ್ಸರ್ಯವುಂಟಾಗುವುದಕ್ಕೆ ಕಾರಣವಾಗಿರಬಹುದು. ಅವರ ಸ್ಥಿತಿಗತಿಗಳಿಗಾಗಿ ಮರುಗುತ್ತಿದ್ದೆ. ವೃದ್ಧಾಪ್ಯ, ಶಕ್ತಿಗುಂದಿದವರು, ಬಡವರು ಎಂಬುದನ್ನು ನಾನು ಅರಿತುಕೊಂಡಿದ್ದೆ. ಒಂದೆರಡು ಸಲ ನಾನೇ ಅವರ ಮನೆಗೆ ಹೋಗಿ ಮಾತನಾಡಿಸಿ ಅವರ ಮಾತ್ಸರ್ಯ ನನ್ನ ಮೇಲೆ ಚರಮಾವಸ್ಥೆಗೇರಗೊಡದಂತೆಯೂ ಮಾಡಿದ್ದೆ. ಅವರನ್ನು ನಾನು ತೆಗಳಲಿಲ್ಲ. ಅವರ ಪ್ರಾಚೀನ ಪದ್ಧತಿಯನ್ನು ಬದಲಿಸಿಕೊಳ್ಳುವ ಉತ್ಸಾಹವೂ ಅವರಿಗೆ ಹೇಗೆ ಬರಬೇಕು. ಇಂದಿನ ಜನಜೀವನದೊಡನೆ ಅವರು ಹೊಂದಿಕೊಳ್ಳಲು ಸಿದ್ಧರಾಗುವಂತಿರಲಿಲ್ಲ. ಆದ್ದರಿಂದ ಜನ ಅವರನ್ನು ಕರೆಯುವುದನ್ನು ಬಿಟ್ಟಿರಬಹುದು. ನಾನು ಈಗ ಅನುಸರಿಸುತ್ತಿರುವ ತಂತ್ರವೂ ಶಾಶ್ವತವಾಗಲಾರದು. ಈ ತಂತ್ರವೂ ಹಳೆಯದೆಂದು ಹಿ ಂದಕ್ಕೆ ಸರಿಸುವವರು ಮುಂದೆ ಹುಟ್ಟಬಹುದು. ಕಥೆ ಪುರಾಣ ಕಾವ್ಯಪಠಣ ಮಾಡುವ ಕಲಾವಿದರೆಲ್ಲ ಈ ವಿಷಯವನ್ನು ಅರಿತಿರ ಬೇಕಾದುದು ಮುಖ್ಯವಲ್ಲವೆ?

ಸಿದ್ಧಲಿಂಗಶಾಸ್ತ್ರಿಗಳಂತೆಯೇ ಹನುಮಂತಪ್ಪ ಎಂಬ ಇನ್ನೊಬ್ಬ ಕಥೆಗಾರ ಆ ಭಾಗದಲ್ಲಿ ಶನಿಕಥೆ ಮಾಡುತ್ತ ಏನೋ ತನ್ನ ಚರಿತಾರ್ಥ ಸಾಗಿಸುತ್ತಿದ್ದ. ನಾನು ಮೂಢಧರ್ಮ ಖಂಡನೆಯಂತಹ ಕೆಲವು ಮಾತುಗಳನ್ನಾಡುವಾಗ ಶನಿಯೂ ನನ್ನ ನಾಲಿಗೆ ಮೇಲೆ ಬಂದ ಮನುಷ್ಯನೇ. ನನ್ನದೇನಿದ್ದರೂ ಅಖಂಡಾದ್ವೈತ ತತ್ವಕ್ಕೆ ಹೊಂದಿಕೊಂಡಿದ್ದ ಮಾತುಗಳೇ. ಅದನ್ನು ಶಾಸ್ತ್ರೋಕ್ತವಾಗಿ ತರ್ಕಬದ್ಧವಾಗಿ ಹೇಳುತ್ತಿದ್ದೆನೆಂದಲ್ಲ. ಅದಕ್ಕಂಟಿಕೊಂಡು ತಿಳಿದಷ್ಟು ಹೇಳುವವ. ದೇವನೊಬ್ಬ ನಾಮ ಹಲವು ಎಂಬಲ್ಲಿ ನಾಮ ಹಲವನ್ನು ನಾನು ಒಪ್ಪುತ್ತಿರಲಿಲ್ಲ. ದೇವರಿಗೆ ಹಿಂದೂ ಜನಾಂಗ ಹಲವು ನಾಮಗಳನ್ನಿಟ್ಟೇ ಒಂದು ಬಗೆಯಲ್ಲಿ ತಪ್ಪು ಮಾಡಿದೆಯೆಂದು ನನ್ನ ಅಭಿಪ್ರಾಯ. ನಮ್ಮ ಜನ ನಾಮಕ್ಕೇ ಅಂಟಿಕೊಂಡು ಬಿಟ್ಟು ಹಲವು ನಾಮಗಳಿಗೆ ಹಲವು ಪಂಗಡ ಹುಟ್ಟಿಸಿ ಸಮಾಜ ವ್ಯವಸ್ಥೆಯನ್ನು ಹಾಳುಮಾಡಿದರೆಂಬುದೇ ನನ್ನ ಅಭಿಮತವಾಗಿತ್ತು. ಜಗತ್ತಿನ ಅನೇಕ ಕಡೆಗಳಲ್ಲಿ ಅನೇಕ ಭಾಷೆಗಳನ್ನಾಡುವ ಮಹಮ್ಮದೀಯರು ಹಲವು ನಾಮ ಮಾಡಲಿಲ್ಲ. ಅಲ್ಲಾ ಎಂಬ ಒಂದೇ ಹೆಸರಿನಿಂದ ಗುರುತಿಸಿದಂತೆ ಹಿಂದೂ ಸಮಾಜವೂ ಒಂದೇ ಒಂದು ಶಬ್ದದಿಂದ ಏಕಮೇವಾದ್ವಿತೀಯನಾದ ಪರಮಾತ್ಮನನ್ನು ಹೇಳಿಬಿಟ್ಟಿದ್ದರೆ ಈಗಿನಷ್ಟು ಛಿದ್ರತೆಯನ್ನು

ಹಿಂದೂಸಮಾಜ ಹೊಂದುತ್ತಿರಲಿಲ್ಲವೆಂದು ನನ್ನ ನಂಬಿಕೆಯಾಗಿತ್ತು. ಯಾರು ಪೂಜೆ ಸಲ್ಲಿಸಿದರೂ ಅದು ಒಬ್ಬನೇ ಒಬ್ಬನಾದ ಪರಮಾತ್ಮನೆಂಬುವನಿಗೆ. ಈ ವಿಚಾರ ನನ್ನಲ್ಲಿ ಉಂಟಾದದ್ದು ಪ್ರಖ್ಯಾತ ಶಿವಾದ್ವೈತ ಸಿದ್ಧಾಂತವಾದಿಯಾದ ಹರ್ಡೇಕರ್ ಮಂಜಪ್ಪನವರ ಭಾಷಣದಿಂದ. ಅದರ ಭಾಷಣಗಳನ್ನು ನಾನು ಬಾಲ್ಯದಲ್ಲಿ ಹಾವೇರಿ ಮೊದಲಾದ ಕಡೆ ಕೇಳಿದ್ದೆ. ಮೂಢಧರ್ಮಖಂಡನೆ ನನಗೆ ಉಂಟಾದ್ದೇ ಮಂಜಪ್ಪನವರು ಮತ್ತು ತಳ್ಳಿ ತಿಪ್ಪಣ್ಣ ಶಾಸ್ತ್ರಿಯಿಂದ. ಆ ಕೆಲಸವನ್ನು ಸ್ವಲ್ಪವೂ ಅಳುಕಿಲ್ಲದೆ ಮಾಡುತ್ತಿದ್ದೆ. ಈ ಕಾರಣ ನನ್ನ ಕಥೆಯಲ್ಲಿ ಜನತೆಯಲ್ಲಿ ರೂಢಮೂಲವಾಗಿದ್ದ ಪದ್ಧತಿಗಳ ಬಗ್ಗೆ ಟೀಕೆಮಾಡುತ್ತಿದ್ದಾಗ ಶನಿಯ ಬಗ್ಗೆಯೂ ಏನೇನೋ ಹೇಳುತ್ತಿದ್ದುದನ್ನು ಹನುಮಂತಪ್ಪ ಕೇಳಿಸಿಕೊಂಡು ನನ್ನನ್ನು "ನಾಸ್ತಿಕ!, ಶನಿಪರಮಾತ್ಮನನ್ನು ಬೈಯುವ ದುಷ್ಟ" ಇತ್ಯಾದಿ ಬೈದಾಡುತ್ತಿದ್ದನಂತೆ. ನನಗೆ ಅವನ ಈ ವರ್ತನೆಗಾಗಿ ಸಿಟ್ಟು ಬರುತ್ತಿರಲಿಲ್ಲ. ನಗುತ್ತಿದ್ದೆ. ಒಮ್ಮೆ ಹಾರ್ನಹಳ್ಳಿಯಲ್ಲಿ ನಾನಿದ್ದಾಗ ಕೋಟೆಹಾಳು ಅನ್ನುವ ಊರೇ ಏನೋ ಸ್ಪಷ್ಟವಾಗಿ ನೆನಪಿಲ್ಲ. ಆ ಊರಿನಲ್ಲಿ ಹನುಮಂತಪ್ಪನ ಶನಿ ಕಥೆ ಇತ್ತು. ಆ ಭಾಗದಲ್ಲಿ ಇಷ್ಟು ಹೊತ್ತಿಗಾಗಲೇ ಪ್ರಖ್ಯಾತನಾಗಿದ್ದ ನನಗೆ ಮತ್ತು ನಮ್ಮ ಹಾರ್ಮೋನಿಯಂ ವಾದಕ ಮಿತ್ರನಾದ ಸಾಸಿವೆಹಳ್ಳಿ ಮುರಿಗೆಪ್ಪನಿಗೆ ಆ ಮನೆಯವರು ಬರಬೇಕೆಂದು ಒತ್ತಾಯ ಮಾಡಿಹೋದರು. ನಾವು ಸುಮ್ಮನೆ ಕುಳಿತು ಮಾಡುವುದಾದರೂ ಏನೆಂದು ಹೋದೆವು. ಆಲೂರು ಹಾರ್ನಹಳ್ಳಿಗೆ ಸಮೀಪದಲ್ಲೇ ಇತ್ತು. ದೂರದಿಂದ ಹನುಮಂತಪ್ಪ ಯಾರೆಂಬುದನ್ನು ಕೇಳಿ ತಿಳಿದುಕೊಂಡ ನಾನು ನೇರವಾಗಿ ಹನಮಂತಪ್ಪನ ಎದುರಿಗೇ ಹೋಗಿ "ನಮಸ್ಕಾರ ಶಾಸ್ತ್ರಿಗಳಿಗೆ" ಎಂದೆ. ಆತ ಬೆವೆತು ಹೋಗಿಬಿಟ್ಟ. ಇದೆಲ್ಲಿಂದ ಬಂತಪ್ಪ ಏಳರ ಶನಿ! ಅಂದಿರಬೇಕು. ನಿಮ್ಮ ವಿಚಾರ ಕೇಳಿ ತಿಳಿದಿದ್ದೇನೆ. ತಾವು ವಿದ್ವಾಂಸರು, ಒಳ್ಳೇ ಕಥೆಗಾರರು, ಸಂಗೀತಗಾರರು ಎಂದು ಮುಂತಾಗಿ ಇನ್ನೂ ಮೂರು ನಾಲ್ಕು ಮಾತು ನಗುನಗುತ್ತ ಪೋಣಿಸುತ್ತಿದ್ದಂತೆಯೇ ಮುರಿಗೆಪ್ಪ ಅವರಿಗೆ "ಹನುಮಂತಪ್ಪ, ಚನ್ನಪ್ಪ ಏರೇಸೀಮೆ ಎಂದರೆ ಇವರೇಪಾ! ಉತ್ತರದೇಶದವರು, ಘನ ವಿದ್ವಾಂಸರು, ಹಾರ್ನಹಳ್ಳಿ, ಕಸಬಿ ಮುಂತಾದ ಕಡೆಗಳಲ್ಲಿ ಬೇಕಾದಷ್ಟು ಕಥೆ ಮಾಡಿದ್ದಾರೆ" ಎಂದು ಪ್ರಶಂಸೆಯ ಸುರಿಮಳೆಯನ್ನೇ ಸುರಿಸಿಬಿಟ್ಟ. ಹನುಮಂತಪ್ಪನಿಗೆ ನಾವು ಅಲ್ಲಿಗೆ ಬಂದದ್ದು ನುಂಗಲಾರದ ತುತ್ತಾಗಿ ಸುಸ್ತಾಗಿ ಬಿಟ್ಟ. ಅವನ ಧಿಮಾಕೆಲ್ಲ ಕಡಿಮೆಯಾದಂತೆ ಕಂಡಿತು. ಅವನು ನಮ್ಮೆದುರಿಗೆ ಏನೂ ಮಾತನಾಡಲು ಶಕ್ತನಾಗಲಿಲ್ಲ. ಆಗ ನಾನು ಮನಸ್ಸಿನಲ್ಲಿ ನಮ್ಮನ್ನು ಈ ಮನೆಯವರು ಇಲ್ಲಿಗೆ ಬರಹೇಳಿ ತಪ್ಪು ಮಾಡಿದರೆಂದುಕೊಂಡೆ. ಏಕೆಂದರೆ ನಾವು ಬರದಿದ್ದರೆ ಈ ಹನುಮಂತಪ್ಪ ತನ್ನದೇ ಆದ ವಿಧಾನದಿಂದ ಎಳ್ಳನ್ನು, ಎಣ್ಣೆಯ ಕಕ್ಕಡವನ್ನು ಸುಡಿಸಿ ಶನಿಕಥೆಯನ್ನು ತನ್ನದೇ ಆದ ಧಾಟಿಯಲ್ಲಿ ಹೇಳಿ ತನ್ನ ಬೇಳೆಬೇಯಿಸಿಕೊಂಡು ಅಕ್ಕಿ ಬೇಳೆ ಬೆಲ್ಲ ಎಳ್ಳು ಗಿಳ್ಳು ಕಟ್ಟಿಸಿಕೊಂಡು ಹೋಗುತ್ತಿದ್ದ ಪಾಪ! ಎನಿಸಿತು. ನಮ್ಮ ಕಥೆ ಈ ಯಾವ ಪಂಚಾಯಿತಿಯೂ ಇಲ್ಲದ್ದು. ಕಥೆ ಮಾಡುವುದಕ್ಕೆ ನಮ್ಮದು ನಿಗದಿಪಡಿಸಿದ ಶುಲ್ಕವೂ ಅಲ್ಲದ್ದು. ನಮ್ಮದು ಕಥೆಯೂ ಅಲ್ಲ, ಭಾಷಣವೂ ಅಲ್ಲ. ನಾಟಕ ಮೊದಲಿಲ್ಲದಂಥದ್ದು. ಒಂದು ಥರಾ ಇವೆಲ್ಲವುಗಳ ಮಿಶ್ರಣ ಅನ್ನಬಹುದು. ಇಂಥ ಕಥೆಗಳೆಲ್ಲ ಕಾಂಗ್ರೆಸ್ ಕಥೆಯೆಂದೇ ಜನಗಳು ಕರೆಯುತ್ತಿದ್ದರು. ಆದ್ದರಿಂದಲೇ ಸೇರುತ್ತಿದ್ದರು. ಇದೇ ಹನುಮಂತಪ್ಪನಿಗೂ ಸಿದ್ದಲಿಂಗಶಾಸ್ತ್ರಿಗೂ ಹೊಟ್ಟೆಕಿಚ್ಚು ಬರಲು ಕಾರಣವಾಗಿತ್ತು ಇವರ ಶೈಲಿ ಅಂಥದಲ್ಲ, ಕಲಿತರೂ ಅವರಿಗೆ ಒಗ್ಗದ ಶೈಲಿ, ನನ್ನದು ನನ್ನದೇ ಆದ ಶೈಲಿ, ಈ ಶೈಲಿಯ ಆಗಿನ ಕಥೆಗಾರರೆಂದರೆ ಒಬ್ಬ ಕಳ್ಳಿ ತಿಪ್ಪಣ್ಣ ಶಾಸ್ತ್ರಿ, ಇನ್ನೊಬ್ಬ ಕುಮ್ಮಾರು ಕೊಟ್ರಯ್ಯ.

ಆಗ ಕಾಂಗ್ರೆಸ್ ಸಭೆಗಳಾಗುತ್ತಿದ್ದಾಗ ಇವರನ್ನು ಕಾಂಗ್ರೆಸ್ಸಿನವರು ಮನರಂಜನೆಗಾಗಿ ಮತ್ತು ಜನಗಳನ್ನು ಕೂಡಿಸುವುದಕ್ಕಾಗಿ ಕರೆಸಿ ಕಥೆ ಮಾಡಿಸುತ್ತಿದ್ದರು. ಇವರ ಶೈಲಿಯಲ್ಲಿ ಕಥೆಗಳು ಉಪಲಕ್ಷ್ಯ ಮಾತ್ರ. ಉಳಿದದ್ದೆಲ್ಲ ಸ್ವಾತಂತ್ರ್ಯ ಚಳುವಳಿಗೆ ಜನಗಳನ್ನು ಹುರಿದುಂಬಿಸುವ ಪ್ರಸಂಗಗಳೇ ಹೆಚ್ಚಾಗಿರುತ್ತಿದ್ದವು. ಅವೆಲ್ಲವನ್ನು ಹೇಳುವ ಕಥೆಗೆ ಹೊಂದಿಕೆಯಾಗುವಂತೆ ಜೋಡಿಸಿಕೊಳ್ಳುತ್ತಿದ್ದರು.

**ಚಾಮೇನಹಳ್ಳಿ ಕೇಂದ್ರದಿಂದ**

ಹೀಗೆ ನನ್ನ ಶಿವಕಥೆಯನ್ನು ಹದಿನೈದು ದಿನ ಹಾರ್ನಹಳ್ಳಿಯ ಸುತ್ತ ಹರಡಿ ಚಿಗುರೊಡಿಸಿ ಶಿವಮೊಗ್ಗಕ್ಕೆ ಡಿ.ಪಿ.ಐ. ಅವರಿಂದ ನನಗೆ ಕಾಲೇಜಿಗೆ ಸೇರಿಕೊಳ್ಳಲು ಅನುಮತಿ ಬಂದಿತೇ ಎಂಬುದನ್ನು ವಿಚಾರಿಸಿಕೊಂಡು ಹೋಗಲು ಬಂದೆ. ಅದು ಇಷ್ಟು ಬೇಗ ಬರುವುದಿಲ್ಲ, ಬಂದಾಗ ತಿಳಿಸುತ್ತೇವೆ. ನಿಮ್ಮ ಅಡ್ರೆಸ್ ಕೊಟ್ಟು ನೀವು ಊರಿಗೆ ಹೋಗಬಹುದೆಂದು ಹೆಡ್ಮಾಸ್ಟರವರು ತಿಳಿಸಿದರು. ನಾನು ಅಡ್ರೆಸ್ ಕೊಡದೆ "ನಾನೇ ಆಗಾಗ ಬಂದು ವಿಚಾರಿಸಿಕೊಂಡು ಹೋಗುತ್ತಿರುತ್ತೇನೆಂದು" ಹೇಳಿ ಶಿವಮೊಗ್ಗದಲ್ಲಿ ನಾಲ್ಕಾರು ದಿನ ಉಳಿದು ಬಿಟ್ಟೆ. ದಿನವೂ ಬೆಳಿಗ್ಗೆ ತುಂಗಾನದಿಯಲ್ಲಿ ಸ್ನಾನಮಾಡಿ ಅಲ್ಲಿಯೇ ಪೂಜೆ ಮುಗಿಸಿಕೊಂಡು ಹೋಟೆಲುಗಳಲ್ಲಿ ಊಟ ಮಾಡಿಕೊಂಡು ಹಾಸ್ಟೆಲ್‌ನಲ್ಲಿ ವೀರಪ್ಪನ ಕೊಠಡಿಯಲ್ಲಿ ರಾತ್ರಿ ಉಳಿದುಕೊಳ್ಳತೊಡಗಿದೆ. ಬರಬರುತ್ತ ಕೆಲವೇ ದಿನಗಳಲ್ಲಿ ಹಾಸ್ಟಲಿನ ಮುಕ್ಕಾಲು ಭಾಗ ಜನ ನನ್ನ ಸ್ನೇಹಿತರಾಗಿ ಹೋದರು. ಎಲ್ಲರೂ ತಮ್ಮ ತಮ್ಮ ಕೊಠಡಿಗಳಿಗೆ ನನ್ನನ್ನು ಕರೆಯತೊಡಗಿದರು. ನನ್ನ ಹಿಂದೆ ನಾಲ್ಕಾರು ಜನ ಮಾಸ್ತರರು ಸುತ್ತಾಡತೊಡಗಿದರು. ನಾನು ಅಷ್ಟು ಇಷ್ಟು ದುಡ್ಡನ್ನು ಕಥೆಮಾಡಿ ತರುತ್ತಿದ್ದೆನಾಗಿ ಅವರಿಗೆಲ್ಲ ಕಾಫಿ ತಿಂಡಿ ಕೊಡಿಸುವುದಕ್ಕೆ ಹಿಂದುಮುಂದು ನೋಡುತ್ತಿರಲಿಲ್ಲ. ಎಲ್ಲರಿಗೂ ಬೆಳಿಗ್ಗೆಯೋ ಸಾಯಂಕಾಲವೋ ಒಂದೊಂದು ಹೊತ್ತು ಮಹಾಬಲಯ್ಯನ ಹೋಟಲಿನ ದೋಸೆ ಬೆಣ್ಣೆ ಕೊಡಿಸಿ ಕಾಫಿ ಕುಡಿಸುತ್ತಿದ್ದೆನಾಗಿ ಅವರೆಲ್ಲ ನನ್ನ ಪಕ್ಷವಹಿಸಿ ಕೆಲಸ ಮಾಡತೊಡಗಿದರು. ಒಟ್ಟೊಟ್ಟಾಗಿ ಹೆಡ್‌ಮಾಸ್ಟರ್‌ಹತ್ತಿರ ಹೋಗಿ ಬೇಗ ನನಗೆ ಪರ್ಮಿಷನ್ ತರಿಸಿ ಕೊಡಲು ತಿಳಿಸುತ್ತಿದ್ದರು. ನನ್ನನ್ನು ಅತೀವ ಆದರದಿಂದ ಕಾಣತೊಡಗಿದರು. ಇದನ್ನು ಕಂಡು ವೀರಪ್ಪ ಕರುಬಿದ. ನನ್ನೆದುರಿಗೇ "ಊರು ಹೋಗುವ ತನಕ ಒಬ್ಬ ನಂಟ, ಹೊಕ್ಕ ಮೇಲೆ ಊರೆಲ್ಲ ನಂಟರು" ಎಂದು ಅಣಕವಾಡಿ ಬಿಟ್ಟ. ನಾನು ಅವರಿಗೂ "ಸ್ವಾಮಿ, ನೀವೂ ಬನ್ನಿ, ಎಲ್ಲರೂ ಸೇರಿಹೋಗಿ ಕಾಫಿ ಕುಡಿದು ಬರೋಣ" ಎನ್ನುತ್ತಿದ್ದೆನಾಗಿ ಅವರಿಗೆ ತಿರಸ್ಕಾರ ಮಾಡುತ್ತಿರಲಿಲ್ಲ. ಅವರಿಗೆ ಯಾರೂ ಸೇರದಿದ್ದರೂ ನಾನು ಅದನ್ನು ಗಮನಿಸುತ್ತಿರಲಿಲ್ಲ. ಏನೇನೋ ವೈಯಕ್ತಿಕ ದ್ವೇಷಾಸೂಯೆಗಳಿರುತ್ತವೆ. ಅದಕ್ಕೂ ನನಗೂ ಸಂಬಂಧವಿಲ್ಲವೆಂದುಕೊಂಡು ಎಲ್ಲರೊಡ ನೊಂದಾಗಿ ಇರುತ್ತಿದ್ದೆ. ಎಲ್ಲರನ್ನೂ ಸಂಗ್ರಹಿಸಲು ಪ್ರಯತ್ನಿಸುತ್ತಿದ್ದೆ.

ಒಂದು ದಿನ ನನ್ನನ್ನು ಹಾರ್ನಹಳ್ಳಿಯಲ್ಲಿಯೋ ಇನ್ನೆಲ್ಲಿಯೋ ನೋಡಿದ ಓರ್ವ ಹಾರ್ಮೋನಿಯಂ ವಾದಕ ನಾನು ಹಾಸ್ಟಲಿನಲ್ಲಿರುವುದನ್ನು ತಿಳಿದು ನನ್ನಲ್ಲಿಗೆ ಬಂದು ನಯವಿನಯಗಳಿಂದ ನಮಸ್ಕಾರ ಹೇಳಿ "ಚನ್ನಪ್ಪ ಎರೇಸೀಮೆ ಎಂದರೆ ತಾವೇ ಏನು ಸ್ವಾಮಿ" ಎಂದ. "ಹೌದು ಏನಾಗಬೇಕಾಗಿತ್ತು" ಎಂದೆ. "ಸ್ವಾಮಿ, ತಾವು ಬಹಳ ಚೆನ್ನಾಗಿ ಕಥೆ ಮಾಡುತ್ತೀರೆಂದು ಎಲ್ಲರೂ ಹೇಳುತ್ತಾರೆ. ನಾನು ಹಾರ್ಮೋನಿಯಂ ಬಾರಿಸುತ್ತೇನೆ. ಮನೆಯಲ್ಲಿ ಲೆಗ್ ಹಾರ್ಮೋನಿಯಂ

ಇದೆ. ತಮಗೆ ನನ್ನ ಅನೇಕ ಪರಿಚಿತ ಸ್ಥಳಗಳಲ್ಲಿ ಕಥೆಗೆ ಆರ್ಡರ್ ಕೊಡಿಸುತ್ತೇನೆ. ನಾನೇ ಹಾರ್ಮೋನಿಯಂ ನುಡಿಸುತ್ತೇನೆ ಬರುತ್ತೀರಾ" ಎಂದ. "ನನಗೆ ಇಲ್ಲಿ ಓದಲು ಅಪ್ಪಣೆ ಬರುವವರೆಗೆ ನಾನು ಕಥೆ ಮಾಡಲು ತಿರುಗಾಡುವವನೇ. ನೀವು ನಮ್ಮ ಹಾರ್ಮೋನಿಯಂ ವಾದಕರಾಗಿ ನನ್ನೊಡನೆ ಬರುವುದಾದರೆ ಸಂತೋಷದ ವಿಚಾರವೇ, ಆಗಬಹುದು" ಎಂದೆ. ಆತ "ಬನ್ನಿ ನಮ್ಮ ಮನೆಗೆ ಹೋಗೋಣ" ಎಂದು ಕರೆದುಕೊಂಡು ಹೋದ. ಒಳ್ಳೆ ಲಕ್ಷಣವಾದ ಮನುಷ್ಯ. ನೀಳದೇಹ, ಬಿಳಿಯ ಬಣ್ಣ, ಆಗಿನ ಕಾಲದ ನಾಟಕ ಕಂಪನಿಯವರಂತಹ ತಲೆಗೂದಲು, ಮೇಲೊಂದು ಕರಿಉಣ್ಣೆಯ ಉದ್ದನೆಯ ಟೊಪ್ಪಿಗೆ. ಬಹುಶಃ ಹಿಂದೆ ಯಾವುದೋ ನಾಟಕ ಕಂಪನಿಯಲ್ಲಿ ಸೇರಿದವನೂ ಆಗಿರಬಹುದು. ಆ ವಿಷಯವನ್ನೇನೂ ಪ್ರಸ್ತಾಪ ಮಾಡಲಿಲ್ಲ. ಅವರ ಮನೆಗೆ ಹೋದೆ. ಅವನು ತನ್ನ ಹೆಂಡರು ಮಕ್ಕಳಿಗೆ ತಂದೆತಾಯಿ ಅಣ್ಣಂದಿರಿಗೆ ನನ್ನ ಪರಿಚಯ ಮಾಡಿದ. ಅವರು ಕುರುಬ ಜನಾಂಗದವರ ಗುರುಗಳಂತೆ. ಗುರುವೇಷವಾದ ಕಾಷಾಯ ವಸ್ತ್ರಧಾರಿಣಿಯಾದ ಅವರ ತಾಯಿಯದೇ ಅವರ ಮನೆಯಲ್ಲಿ ದರ್ಬಾರು. ಆಕೆ ಹೇಳಿದಂತೆ ಎಲ್ಲರೂ ಕೇಳಬೇಕು. ಶೇಖರಯ್ಯ ತನಗಾಗಿ ಆ ಮನೆಯಲ್ಲಿ ಒಂದು ಕೊಠಡಿಯನ್ನು ಮಾಡಿಕೊಂಡು ಅಲ್ಲಿ ಹಾರ್ಮೋನಿಯಂ ತಬಲಾ ಇಟ್ಟುಕೊಂಡಿದ್ದ. ನನ್ನನ್ನು ಕುಳ್ಳಿರಿಸಿ, ಆಗ ತಾನೆ ಒಳ್ಳೆಯ ಹೆಸರು ಮಾಡಿದ್ದ ನಾಗೇಂದ್ರರಾಯರ ವಸಂತಸೇನೆ ಸಿನಿಮಾದ "ಇದೇ ಮಹಾಸುದಿನ..." ಕೆಲವು ಹಾಡುಗಳನ್ನು ಹಾಡಿ, ತನ್ನನ್ನು ತಾನು ತೋರಿಸಿಕೊಂಡ. ನನಗೂ ಒಂದೆರಡು ಹಾಡಿರೆಂದ. ನಾನೂ ಭೀಮಪ್ಲಾಸ್ - ಯಮನ ಕಲ್ಯಾಣಿ ರಾಗದಲ್ಲಿ ಎರಡು ಹಾಡು ಹಾಡಿದೆ. ಹೊಸದನಿ ಕೇಳಿ ಅವರ ಅಮ್ಮ ಅಪ್ಪ ಇಬ್ಬರೂ ಬಂದು ಇಣಿಕಿ ನೋಡ ತೊಡಗಿದರು. ಪರವಾಯಿಲ್ಲ ಚೆನ್ನಾಗಿ ಹಾಡ್ತಾರೆ ಅಂದರು. ಆದರೆ ಅವರ ಮನೆಯಿಂದ ಯಾವ ಉಪಚಾರವೇನೂ ನಡೆಯಲಿಲ್ಲ. ಬಹುಶಃ ತಾಪತ್ರಯದ ಮನೆಯೆಂದು ತಿಳಿದುಕೊಂಡೆ. ಹಾಡಿ ಮುಗಿದ ಮೇಲೆ ಶೇಖರಯ್ಯನನ್ನು ಕರೆದುಕೊಂಡು ಮಹಾಬಲಯ್ಯ ಹೋಟಲಿಗೆ ಹೋಗಿ ದೋಸೆ ಕಾಫಿ ಕೊಡಿಸಿದೆ.

ಇಷ್ಟೆಲ್ಲ ಆದ ಮೇಲೆ ಹಾರ್ನಹಳ್ಳಿ ಪಕ್ಕದಲ್ಲಿ ಚಾಮೇನಹಳ್ಳಿಯೆಂದು ಒಂದು ಹಳ್ಳಿ ಇದೆ. ಅಲ್ಲಿ ನಮ್ಮ ಬಂಧುಗಳೇ ಆದ ದೇಸಾಯಿ ಚಂದ್ರಶೇಖರಯ್ಯ ಇದ್ದಾರೆ. ಅವರು ಬಹಳ ರಸಿಕರು ಮತ್ತು ಉದಾರಿಗಳು. ಅವರಲ್ಲಿಗೆ ಹೋಗಿ ಕ್ಯಾಂಪ್ ಮಾಡಿ, ಸುತ್ತಮುತ್ತಣ ಹಳ್ಳಿಗಳಲ್ಲಿ ಮತ್ತು ಅಲ್ಲಿ ಕಥೆ ಮಾಡಲು ಅವಕಾಶ ಮಾಡಿಸಿ ಕೊಡುತ್ತೇನೆ. ಅದರಿಂದ ನಮಗೂ ಪ್ರಯೋಜನ, ನಿಮಗೂ ಲಾಭ ಎಂದ ಶೇಖರಯ್ಯ ಅವನ ಮಾತುಕತೆ ಮತ್ತು ಮನೆತನಗಳನ್ನು ಪ್ರತ್ಯಕ್ಷ ನೋಡಿದುದರಿಂದ ಅಪಾಯಕಾರಿ ಮನುಷ್ಯನಲ್ಲ ಎಂದುಕೊಂಡು, ಓರ್ವ ತಬಲಾಜಿಯನ್ನು ಹೊಂದಿಸಿಕೊಳ್ಳಲಿಕ್ಕೆ ಹೇಳಿದೆ. ತಬಲಾಜಿಯನ್ನು ಹೊಂದಿಸಿ ಕರೆದುಕೊಂಡೇ ಬಂದು ನಿಲ್ಲಿಸಿದ. ಅವನನ್ನು ಎಲ್ಲೋ ನೋಡಿದುದು ಜ್ಞಾಪಕ. ಎಲ್ಲಿ ಎಂಬುದು ಬೇಗ ಹೊಳೆಯಲಿಲ್ಲ, ನಾನು ಕೇಳಲಿಲ್ಲ. ಅವನು ಹಿಂದೆ ಶಿರಾಳಕೊಪ್ಪದಲ್ಲಿ ಖಾನಾವಳಿ ಇಟ್ಟುಕೊಂಡಿದ್ದನೆಂದೂ ಅಲ್ಲಿ ಲುಕ್ಸಾನು ಮಾಡಿಕೊಂಡು ಊರು ಊರು ತಿರುಗುತ್ತ ಶಿವಮೊಗ್ಗ ಸೇರಿ ಶೇಖರಯ್ಯನ ಸ್ನೇಹ ಮಾಡಿದ್ದನೆಂದೂ ಆಮೇಲೆ ಗೊತ್ತಾಯಿತು. ಚೆನ್ನಮಲ್ಲಿಕಾರ್ಜುನರನ್ನು ನೋಡಲು ಶಿರಾಳಕೊಪ್ಪಕ್ಕೆ ಪದೇ ಪದೇ ಹೋಗುತ್ತಿದ್ದ ನಾನು ಈತನನ್ನು ಅಲ್ಲಿಯೇ ನೋಡಿರಬೇಕೆಂದುಕೊಂಡೆ. ಬಹುಶಃ ಅವನ ಖಾನಾವಳಿಯಲ್ಲಿ ನಾನು ಊಟವನ್ನು ಮಾಡಿರಬಹುದು. ಅವನ ಮಾತು ಮುಖ

ನಡತೆ ನೋಡಿದರೆ ಸ್ವಲ್ಪ ಘಾಟಿ ಮನುಷ್ಯ ಅನ್ನುವಂತೆಯೂ ತೋರಿದ. ಘಾಟಿಯಾದರೆ ನನ್ನನ್ನೇನು ಮಾಡುತ್ತಾನೆ. ಎಲ್ಲಿ ಇಡಬೇಕೋ ಅಲ್ಲಿ ಇಟ್ಟರಾಯಿತೆಂದುಕೊಂಡು ಚಾಮೇನಹಳ್ಳಿಗೆ ಮುಂದೆ ಒಂದೆರಡು ದಿನ ಬಿಟ್ಟು ಹೋದೆವು.

ಚಾಮೇನಹಳ್ಳಿಯಲ್ಲಿ ದೇಸಾಯಿ ಚಂದ್ರಶೇಖರಯ್ಯನ ಮನೆಗೆ ಹೋದೆವು. ಅಲ್ಲಿ ನಮಗೆ ಭವ್ಯಸ್ವಾಗತ ಸಿಕ್ಕಿತು. ದೊಡ್ಡದಾದ ಅವರ ಮನೆಯಲ್ಲಿಯೇ ಬಿಡಾರ ಹೂಡಿದೆವು. ಅದು ಹಾರ್ನಹಳ್ಳಿ ಪಕ್ಕದಲ್ಲೇ ಇದ್ದದ್ದರಿಂದ ಅಲ್ಲಿಗೆ ಬಂದು ಕಥೆ ಕೇಳಿದ ಈ ಊರ ಜನ ಚಂದ್ರಶೇಖರಯ್ಯನ ಮನೆಗೆ ಬಂದು ನಮ್ಮ ಈ ಕಂಪನಿಯನ್ನು ಕಂಡು ಮಾತನಾಡಿಸಿ ಆ ದಿನ ರಾತ್ರಿಯೇ ಊರಮಧ್ಯದ ದೇವಾಲಯದಲ್ಲಿ ಕಥೆ ಇಟ್ಟುಕೊಂಡು ಬಿಟ್ಟರು. ಕಥೆ ಶೇಖರಯ್ಯನ ಹಾರ್ಮೋನಿಯಂ ವಾದನ, ಶಿವಯ್ಯನ ತಬಲಾದೊಡನೆ ಭವ್ಯವಾಗಿ ಹೋಯಿತು. ಏತನ್ಮಧ್ಯೆ ಶೇಖರಯ್ಯ ದೇಸಾಯಿಯರಿಗೆ ನನ್ನ ಪರಿಚಯಿಸುವಾಗ "ಇವರು ಉತ್ತರ ದೇಶದಿಂದ ಬಂದಿದ್ದಾರೆ. ಬಹಳ ದೊಡ್ಡ ಶಾಸ್ತ್ರಿಗಳು. ಬಹಳ ಕಡೆ ಕಥೆ ಮಾಡಿ ಪ್ರಖ್ಯಾತರಾದವರು" ಹಾಗೆ ಹೀಗೆಂದು ವರ್ಣನೆ ಮಾಡುತ್ತ "ಕೂಲಂಬಿಗೂ ಹೋಗಿ ಕಥೆ ಮಾಡಿದ್ದಾರೆ. ಅಲ್ಲಿ ನಿಮ್ಮ ಮಾವನವರೂ ಇವರಿಗೆ ಪರಿಚಯ" ಎಂದು ಹಚ್ಚ ಹಸೀ ಸುಳ್ಳೊಂದನ್ನು ಸೃಷ್ಟಿಸಿ ಹೇಳಿಬಿಟ್ಟನಂತೆ. ಇದು ನನಗೆ ಗೊತ್ತಿರಲಿಲ್ಲ. ಕೂಲಂಬಿ, ಚಂದ್ರಶೇಖರಯ್ಯನ ಎರಡನೇ ಹೆಂಡತಿಯ ತವರುಮನೆಯ ಊರು. ಹೀಗೇ ಹೇಳಿದರೆ ದೇಸಾಯಿ ನಮ್ಮ ವಿಷಯದಲ್ಲಿ ಅಭಿಮಾನ ತಾಳುತ್ತಾನೆಂದು ಶೇಖರಯ್ಯನ ಅಂದಾಜಾಗಿರಬಹುದು. ಈ ಸುಳ್ಳು ನನ್ನನ್ನು ಬಹಳ ಪೇಚಿಗೆ ಸಿಕ್ಕಿಸಿ ಬಿಟ್ಟಿತು. ನಾವು ಚಾಮೇನಹಳ್ಳಿಯಲ್ಲಿರುವಾಗಲೇ ದೇಸಾಯಿಯ ಮಾವ, ತನ್ನ ಮಗಳು ಅಳಿಯ ಮೊಮಕ್ಕಳನ್ನು ನೋಡಿಕೊಂಡು ಹೋಗೋಣವೆಂದು ಅಕಸ್ಮಾತ್ ಬಂದೇಬಿಟ್ಟ. ಆಗ ದೇಸಾಯಿ ಚಂದ್ರಶೇಖರಯ್ಯ ನನಗೆ ಅವರ ಮಾವನ ಪರಿಚಯಿಸಿದ. ನಾನು ನಮಸ್ಕಾರ ಹೇಳಿದೆ. ತನ್ನ ಮಾವನಿಗೆ ನನ್ನ ಪರಿಚಯ ಮಾಡಿಕೊಡುತ್ತ ಏನೆಲ್ಲ ವರ್ಣನೆ ಮಾಡಿ ಮುಗಿಸಿ "ಇವರು ನಿಮ್ಮ ಊರಿಗೂ ಬಂದು ಕಥೆ ಮಾಡಿದ್ದಾರಂತೆ! ನೀವು ಇವರಿಗೆ ಪರಿಚಯವಂತೆ" ಅಂದು ಬಿಟ್ಟ. ಆ ಮನುಷ್ಯ ನನ್ನನ್ನು ಮಿಕಿಮಿಕಿ ನೋಡುತ್ತ "ನೀವು ನಮ್ಮ ಊರಿಗೆ ಯಾವಾಗ ಬಂದಿದ್ದಿರಿ ಶಾಸ್ತ್ರಿಗಳೇ? ನಾನು ನೀವು ಕೂಡೇ ಇಲ್ಲವಲ್ಲ! ಎಂದು ಪದೇ ಪದೇ ನನ್ನನ್ನು ಸಂಶಯದೃಷ್ಟಿಯಿಂದ ನೋಡತೊಡಗಿದ. ನನಗೆ ಎಲ್ಲಿಲ್ಲದ ಅಪಮಾನವಾದ ಹಾಗಾಯಿತು. ಇದೆಲ್ಲ ಶೇಖರಯ್ಯನ ಅವ್ಯವಹಾರವೆಂದು ಮನದಲ್ಲಿ ಅಂದುಕೊಂಡು "ನಾನು ಕೂಲಂಬಿಗೆ ಹೋಗಿದ್ದೆನೆಂದು ಯಾರು ಹೇಳಿದರು?" ಎಂದು ದೇಸಾಯಿಯನ್ನು ಕೇಳಿದೆ. "ನಮ್ಮ ಶೇಖರಯ್ಯನೇ ಹೇಳಿದ" ಎಂದು ಬಿಟ್ಟ, ಅವನನ್ನು ತೋರಿಸುತ್ತ. ಅವನು ತಲೆ ತಗ್ಗಿಸಿಕೊಂಡು ಕುಳಿತಿದ್ದ, ತುಟಿಗಳನ್ನು ನಾಲಗೆಯಿಂದ ಸವರಿಕೊಳ್ಳುತ್ತ. ನನಗೆ ಯಾರಾದರೂ ಏನಾದರೂ ಕೇಳಿದರೆ ಥಟ್ಟನೆ ಉತ್ತರಕೊಡುವ ಒಂದು ಶಕ್ತಿಯಿತ್ತು. ಆ ಶಕ್ತಿಯನ್ನು ಬಳಸಿಕೊಂಡು "ಹಿಂದೆ ಕುಂದೂರಿನಲ್ಲಿ ಗ್ರಾಮದೇವತೆ (ದೇಮವ್ವ ದೇವತೆ)ಯ ದೊಡ್ಡಜಾತ್ರೆ ನಡೆದಾಗ ಕೋಣನನ್ನು ಕಡಿಯಬಾರದೆಂಬ ಚಳುವಳಿಯಾಯಿತಲ್ಲ! ಆಗ ಕುಮಾರ್ರು ಕೊಟ್ರಯ್ಯನ ಜೊತೆ ನಾನೂ ಬಂದಿದ್ದೆ. ಅಲ್ಲಿ ನಾನೂ ಭಾಷಣ ಮಾಡಿದ್ದೆ. ಈ ಶೇಖರಯ್ಯ ಕುಂದೂರು-ಕೂಲಂಬಿಗಳು ಪಕ್ಕ ಪಕ್ಕದ ಊರಲ್ಲವೇ. ಅದನ್ನು ತಪ್ಪಾಗಿ ಭಾವಿಸಿಕೊಂಡು ಕುಂದೂರು ಅನ್ನುವ ಬದಲು ಕೂಲಂಬಿ ಎಂದು ಹೇಳಿರ ಬಹುದೆಂದು ಇನ್ನೊಂದು ಸುಳ್ಳು ತುರುಕಿ ಈ ದೊಡ್ಡ ಸುಳ್ಳಿನಿಂದ ಮೊದಲಿನ ಸುಳ್ಳನ್ನು

ಮುಚ್ಚಲು ಪ್ರಯತ್ನಿಸಿದೆ. ಅವನೂ ರಂಗೋಲಿ ಬುಡಕ್ಕೆ ನುಸುಳುವ ಮನುಷ್ಯನೇ "ಆವಾಗ ಬಂದಿದ್ದೀರಾ! ಆಗ ನಾನೂ ಆ ಸಮಾರಂಭದಲ್ಲಿ ಇದ್ದೆ. ಅಲ್ಲಿಯೂ ನಿಮ್ಮನ್ನು ಕಂಡಂತಿಲ್ಲ" ಎಂದು ಬಿಟ್ಟ. ಈ ಮನುಷ್ಯಬಹಳ ಪಕ್ಕಾ ಎಂದುಕೊಂಡು "ಬಹಳ ಜನ. ಆದ್ದರಿಂದ ಮುಖ ಪರಿಚಯ ನೆನಪಿನಿಂದ ಜಾರಿರಬಹುದು" ಎಂದೆ. "ಹಾಗೆ ಇರಬಹುದು. ಆದರೆ ನನಗಂತೂ ನಿಮ್ಮ ಪರಿಚಯ ಇದೇ ಮೊದಲು" ಅಂದುಬಿಟ್ಟ. ನಾನು ಅಪಮಾನದಿಂದ ಭೂಮಿಗೆ ಇಳಿದು ಹೋದೆ. ವೃಥೋತ್ಸಾಹಿಗಳನ್ನು ಸುಳ್ಳರನ್ನೂ, ಬಹಳ ಮಾತಾಡುವವರನ್ನು, ಮಾತಿನ ಮೇಲೆ ಎಚ್ಚರವಿಲ್ಲದೆ ಬಾಯಿಗೆ ಬಂದುದನ್ನು ಬೊಗಳಿ ಬಿಡುವವರನ್ನು ಹಿಂದೆ ಮುಂದೆ ಇಟ್ಟುಕೊಂಡು ವ್ಯವಹರಿಸುವುದು ಮಾನಹಾನಿಗೆ ಕಾರಣವೆಂಬುದರ ಅರಿವಾಯಿತು. ಆದರೂ ನಮಗೆ ಹಾರ್ಮೋನಿಯಂ ತಬಲಾದವರ ಸಾಥಿ ಬೇಕೇ ಬೇಕಲ್ಲ. ಈ ಮೊದಲು ಹಾರನಹಳ್ಳಿಯಲ್ಲಿ ಸಿಕ್ಕಿದ್ದ ಸಾಥಿಗಳಾದ ಸಾಸ್ವೆಹಳ್ಳಿ ಮುರಿಗೆಪ್ಪ ಮತ್ತು ದೊಡ್ಡಬಸಪ್ಪ ಅವರುಗಳು ತುಂಬಾ ಸಾತ್ವಿಕರು, ಒಳ್ಳೆಯ ಕಲಾವಂತರೂ ಅಹುದು. ಕರೆದಲ್ಲಿ ಬರುವವರಲ್ಲ, ಅವರಿಗೂ ಮನೆಯಲ್ಲಿ ತಮ್ಮದ್ದೇ ಆದ ಕುಂಬಾರಿಕೆಯಿತ್ತು. ಅವರು ಅಪರೂಪಕ್ಕೊಮ್ಮೆ ಬರುವವರು. ಆದ್ದರಿಂದ ಇದ್ದುದ್ದರಲ್ಲಿ ಶೇಖರಯ್ಯ, ಶಿವಯ್ಯ ಇವರೇ ನಮಗೆ ಗತಿಯಾಗಿದ್ದರು. ಶೇಖರಯ್ಯನನ್ನು ನಾನು ತರಾಟೆಗೆ ತೆಗೆದುಕೊಂಡು ಹೀಗೆಲ್ಲ ನನ್ನನ್ನು ಇಕ್ಕಟ್ಟಿಗೆ ಸಿಕ್ಕಿಸುವುದಾದರೆ ನನಗೆ ನಿಮ್ಮೊಡನೆ ಸೇರಿ ಮಾಡುವ ಕಥೆಯೂ ಬೇಡ, ಈ ಹಳ್ಳಿಹಳ್ಳಿಗಳ ತಿರುಗಾಟವೂ ಬೇಡ" ಎಂದೆ. ಶೇಖರಯ್ಯ ಮುಖ ಇಳಿಬಿಟ್ಟುಕೊಂಡು. "ನಾನೇನೋ ದೇಸಾಯಿ ಮೆಚ್ಚಿಕೊಳ್ಳಲೆಂದು ಹಾಗೆ ಹೇಳಿಬಿಟ್ಟೆ. ಆ ಶನಿ ಮುದುಕ ನಾವಿರುವಾಗಲೇ ಬಂದು ಬಿಡುವುದೇ" ಎಂದಾಗ ನನಗೆ ಇನ್ನೂ ರೇಗಿ ಹೋಯಿತು. "ಮುದುಕ ಶನಿ ಅಲ್ಲ, ನಿಮ್ಮ ಬಾಯಿಯೇ ಶನಿ. ಈ ಸುಳ್ಳು ಮುಚ್ಚುವುದೇ ಅಲ್ಲ. ಈಗ ಬಾರದೆ ಇನ್ನಾವಾಗಲೋ ಬಂದಿದ್ದರೂ ಈ ಪ್ರಸ್ತಾಪ ಬಂದೇ ಬರುತ್ತಿತ್ತು. ಆಗ ಈ ಮುದುಕನಿಗೆ ಈ ದೇಸಾಯಿ ಹೇಳೇ ಹೇಳುತ್ತಿದ್ದ. ಆಗ ಮುದುಕ ಏನೆನ್ನುತ್ತಿದ್ದ ಗೊತ್ತೆ? ಅವನಾವನೋ ಅಯೋಗ್ಯ ಸುಳ್ಳು ಹೊಡೆದು ನಿನ್ನಿಂದ ಪ್ರಯೋಜನ ಪಡೆದು ಹೋಗಿರಬೇಕು. ಇನ್ನೊಮ್ಮೆ ಬಂದರೆ ಆ ಸುಳ್ಳು ಶಾಸ್ತ್ರಿಯನ್ನು ಮನೆ ಹೊಗಿಸಬೇಡ ಅಂದು ಬಿಡುತ್ತಿದ್ದ. ಈಗ ನಾನೇ ಇದ್ದೆ. ಈ ತಪ್ಪು ಮುಚ್ಚಿಕೊಳ್ಳಲು ನಾನೊಂದು ಸುಳ್ಳು ಹೊಡೆದು ತಾತ್ಕಾಲಿಕ ಉಪಶಮನ ಮಾಡಿದೆ. ಕುಂದೂರಿನಲ್ಲಿ ಈಗ ಕೆಲವು ವರ್ಷಗಳ ಹಿಂದೆ ಆದ ಗ್ರಾಮದೇವತೆಯ ಜಾತ್ರೆಯಲ್ಲಿ ನನ್ನ ಓರ್ವ ಮಿತ್ರ ನನ್ನ ಹಾಗೆಯೇ ಕಥೆ ಮಾಡಹೋಗಿ. ಕೋಣ ಕಡಿಯುವುದನ್ನು ತಪ್ಪಿಸಿ ಅವರ ಮನಃ ಪರಿವರ್ತನೆ ಮಾಡಿದ ವಿಷಯ ಹೇಳಿದ್ದ. ಅದನ್ನೇ ನನ್ನ ಸುಳ್ಳಿಗೆ ವಸ್ತುವನ್ನಾಗಿ ಮಾಡಿ ಹೇಗೋ ಜಾರಿಕೊಂಡೆ. ಆದರೂ ಆ ಮುದುಕ ಒಪ್ಪಿಕೊಂಡಂತಿಲ್ಲ. ಸಾತ್ವಿಕರು ಹೋಗಲಿ. ಇನ್ನು ಮುಂದೆ ಇಂಥ ಇಕ್ಕಟ್ಟಿಗೆ ಸಿಕ್ಕಿಸಬೇಡ. ಈ ವೃತ್ತಿಗೆ ಇಳಿದವರು ಸಾತ್ವಿಕರೂ ಪವಿತ್ರ ಮನೋಭಾವದವರು ಆಗಿದ್ದರೆ ಮಾತ್ರ ಇವರ ಮಾತಿಗೆ, ಕಥೆಗೆ ತುಂಬಿಬರುತ್ತದೆ. ಇಲ್ಲದಿದ್ದರೆ ಕೇವಲ ಬುಡುಬುಡಿಕೆಯಾಗಿ ಬಿಡುತ್ತದೆ. ಕಥೆ ಕೇಳುವುದಕ್ಕೆ ಬರಬಹುದು. ಕೇಳಲು ಬಂದವರ ಜುಟ್ಟು ನನ್ನ ಕಯ್ಯಲ್ಲಿದೆ ಎಂದು ತಿಳಿಯುವುದು ಮಾತ್ರ ತಪ್ಪು. ನಮ್ಮಲ್ಲಿನ ತಪ್ಪನ್ನು ತಿಳಿದವರು ಮನೆಗೆ ಹೋಗುವಾಗ ನಮಗೆ ಸಹಸ್ರನಾಮ ಹಾಕುತ್ತಲೇ ಹೋಗುತ್ತಿರುತ್ತಾರೆ. ಸುಳ್ಳು, ಕಳವು, ಹಾದರ - ಈ ಮೂರರಿಂದ ದೂರವಿದ್ದವರಿಗೆ ಮಾನ ಮನ್ನಣೆ ಸಲ್ಲುವಂತೆ ಅದಿಲ್ಲದವರಿಗೆ ಸಲ್ಲುವುದಿಲ್ಲ. ಕಥೆಯನ್ನೇನೋ ಹತ್ತಾರು ರೂಪಾಯಿ ಖರ್ಚುಮಾಡಿ ಕೇಳಿ ನಕ್ಕೋ, ಬೈದುಕೊಂಡೋ

ಕೆಲ ಹೊತ್ತು ಕಾಲ ಕಳೆದು ಹೋಗಬಹುದು. ಕಥೆ ಮುಗಿದ ಮೇಲೆ ನಮಗೆ ಕೊಡುವುದನ್ನು ಕೊಟ್ಟು ಚಾವಡಿಗೋ ದೇವರ ಗುಡಿಗೋ ಹರಕುಚಾಪೆ ಕಳಿಸಿ ಮಲಗಲು ಹೇಳಿ ಹೋಗಿಬಿಡುತ್ತಾರೆ. ಬೆಳಿಗ್ಗೆ ನಾವು ಯಾರಿಗೂ ಹೇಳದೆ ಕೇಳದೆ ಗುಡಿಯಿಂದ ಎದ್ದು ಹೊರಡಬೇಕಾಗುತ್ತದೆ. ನಾಟಕದವರನ್ನು ಕಂಡಂತೆ ಜನ ನಮ್ಮನ್ನು ಕಂಡರೆ ನಮ್ಮದೇನು ಉಳಿಯಿತು? ನಮ್ಮ ಸಾತ್ವಿಕವೃತ್ತಿ ನಮಗೆ ಆದರೋಪಚಾರವನ್ನು ಒದಗಿಸುತ್ತದೆ. ನಮ್ಮ ತತ್ವನಿಷ್ಠೆ ಅವರ ಮನಸ್ಸಿನ ಮೇಲೆ ಪರಿಣಾಮ ಬೀರುತ್ತದೆ. ತತ್ವನಿಷ್ಠೆಯನ್ನು ಜನಕ್ಕೆ ಹೇಳುವ ನಮ್ಮಲ್ಲಿಯೇ ಅದಿಲ್ಲದಿದ್ದರೆ ನಮ್ಮನ್ನಾರು ಕೇಳುತ್ತಾರೆ ಹೇಳಿ? ಏನು ಮುಚ್ಚಿದರೂ ಕಳವು, ಸುಳ್ಳು, ಹಾದರ ಇವನ್ನು ಮುಚ್ಚುವುದು ಕಷ್ಟ. ತಾತ್ಕಾಲಿಕವಾಗಿ ಮುಚ್ಚಿದರೂ ಇವು ಮುಂದೆ ಮೇಲಕ್ಕೆ ಪುಟಿದು ಎದ್ದೇ ಏಳುತ್ತವೆ. ಒಂದು ಸುಳ್ಳು ಮುಚ್ಚಲು ನೂರಾರು ಸುಳ್ಳು ಹೇಳುವ ಹೊತ್ತು ಬರುತ್ತದೆ. ಆಗ ಒಂದಿಲ್ಲೊಂದು ಮಾತಿನಲ್ಲಿ ನಾವು ಸಿಕ್ಕು ಬೀಳುವುದು ಖಂಡಿತ. ಸುಳ್ಳಿನಿಂದ ಸುಳ್ಳನ್ನು ಮುಚ್ಚುವುದು ಬಹು ಕಷ್ಟದ ಕೆಲಸ.

ದುಡ್ಡು ಬರುತ್ತದೆ, ಹೋಗುತ್ತದೆ. ನಮ್ಮ ಸದ್ವರ್ತನೆ ನಮಗೆ ದುಡ್ಡು ಹರಿದು ಬರುವಂತೆ ಮಾಡುತ್ತದೆ. ನನಗೆ ಹೀಗಾದರೆ ಸರಿಹೋಗುವುದಿಲ್ಲ. ನಿನ್ನೆ ಆ ಮುದುಕ ನನಗೆ 'ನಮ್ಮ ಊರಿಗೆ ಯಾವಾಗ ಬಂದಿದ್ದಿರಿ?' ಎಂದಾಗ ನನ್ನ ಮನಸ್ಸಿನಲ್ಲಿ ಹೇಗಾಗಿತ್ತು ಗೊತ್ತೆ! ನಾನು ಭೂಮಿಗೆ ಇಳಿದು ಹೋಗಿ ಬಿಡಬಾರದೇ ಎನಿಸಿಬಿಟ್ಟಿತು. ಎದೆ ಡವಡವ ಬಡಿದುಕೊಳ್ಳ ತೊಡಗಿತ್ತು. ಆದರೂ ಸಮಯೋಚಿತ ಎಂಬುದೊಂದುಂಟಲ್ಲ! ಈ ಹಾಳು ದುರಾಲಾಪದಿಂದ ಪಾರಾಗಿ ಹೋಗಲು ಯತ್ನಿಸಿದೆ. ಇದು ಮನುಷ್ಯ ಸ್ವಭಾವ. ಗಾಬರಿಕೊಂಡ ಮನಸ್ಸಿಗೆ ಸಮಯಕ್ಕೆ ಸರಿಯಾಗಿ ನೇರಉತ್ತರ ಇದ್ದಕ್ಕಿದ್ದಂತೆ ಹೊಳೆಯುವುದು ಕಷ್ಟ, ಆದರೂ ಒಂದು ಪ್ರಸಂಗ ಜೋಡಿಸಿ ಬೀಸುವ ದೊಣ್ಣೆಯಿಂದ ತಲೆತಪ್ಪಿಸಿಕೊಂಡೆ" ಇತ್ಯಾದಿ ಅವನಿಗೆ ದೀರ್ಘ ಉಪನ್ಯಾಸ ಮಾಡಿಬಿಟ್ಟೆ. ಶಿವಯ್ಯನೂ ಪಿಳಿ ಪಿಳಿ ಕಣ್ಣುಬಿಟ್ಟುಕೊಂಡು ನೋಡುತ್ತಲೇ ಇದ್ದ.

ಈ ಊರಿಗೆ ಬಂದು ಸುತ್ತಣ ಕುಮಸಿ, ಮಂಡಗದ್ದೆ, ಆಯಾನ್ನಾರು, ಕೋಟೆ ಹಾಳು ಮೊದಲಾದ ಕಡೆ ಕಥೆಗಳನ್ನು ಮಾಡಿದೆ. ಬಂದದ್ದರಲ್ಲಿ ಅವರಿಗೂ ಸ್ವಲ್ಪ ಕೊಟ್ಟು ನನಗೆ ಕಾಲೇಜಿಗೆ ಸೇರಲು ಡಿ.ಪಿ.ಐ. ಅವರ ಅನುಮತಿ ಬಂದಿದೆಯೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಲು ಶಿವಮೊಗ್ಗಕ್ಕೆ ತೆರಳಿದೆ.

ಈ ಪ್ರವಾಸದಲ್ಲಿ ನನಗೆ ಚಾಮೇನಹಳ್ಳಿಯಲ್ಲಿ ಅತಿಸ್ನೇಹಿಯೂ, ಮಾನವೀಯತೆಯುಳ್ಳವನೂ ಆಗಿದ್ದ ವೀರಪ್ಪ ಎಂಬುವನ ಸ್ನೇಹ ಲಭ್ಯವಾಯಿತು. ಅವನು ನನ್ನ ಈ ಕಾಲೇಜಿನ ಬವಣೆಯನ್ನು ಅರಿತು "ನೀವು ಹೆದರಬೇಡಿ. ನಾನು ಡಿ.ಪಿ.ಐ. ಅವರ ತನಕ ಬಡಿದಾಡಿ ನಿಮಗೆ ಸೀಟು ಕೊಡಿಸುತೇನೆ. ಬೇಕಾದರೆ ನಮ್ಮ ಜೊತೆಗೆ ರುದ್ರಪ್ಪ ಇದ್ದಾರೆ, ಸಿದ್ದಯ್ಯ ಇದ್ದಾರೆ, ಹೆಚ್.ಎಸ್. ರುದ್ರಪ್ಪ ಇದ್ದಾರೆ ಇವರಲ್ಲಿ ಯಾರಿಂದಲಾದರೂ ಡಿ.ಪಿ.ಐ.ಗೆ ಕಾಗದ ಬರೆಸುತ್ತೇನೆ. ಬಾ ಎಂದ". ನದಿಯಲ್ಲಿ ಮುಳುಗುತ್ತ ಏಳುತ್ತ ಸಂಕಟಪಡುವವನಿಗೆ ತೆಪ್ಪ ಸಿಕ್ಕಷ್ಟು ಸಂತೋಷವಾಗಿ "ವೀರಪ್ಪನವರೇ, ನಾನು ಕಾಲೇಜು ಸೇರಲು ಅಪ್ಲಿಕೇಷನ್ ಕೊಟ್ಟು ತಿಂಗಳ ಮೇಲಾಯಿತು. ಬಹುಶಃ ಇಷ್ಟು ಹೊತ್ತಿಗಾಗಲೇ ಬಂದಿರಬಹುದು. ಬಾರದಿದ್ದರೆ ಅವಶ್ಯವಾಗಿ ತಮ್ಮ ನೆರವು ಪಡೆಯುತ್ತೇನೆಂದು ಹೇಳಿ ಶಿವಮೊಗ್ಗಕ್ಕೆ ಬಂದು ಕಾಲೇಜಿನಲ್ಲಿ ವಿಚಾರಿಸಿದೆ. ಪರ್ಮಿಷನ್ ಇನ್ನೂ

ಬಂದಿಲ್ಲ, ಬರಬಹುದು, ಕಾದು ನೋಡಿ ಎಂದು ಬಿಟ್ಟರು ರಾಮಾಚಾರರು. ನಾನು ಕೆಲವು ದಿನ ತುಂಗಾಸ್ನಾನ, ಪೂಜೆ, ಊಟ, ಹಾಸ್ಟಲಿನಲ್ಲಿ ನಿದ್ರೆ, ಮಿತ್ರರೊಡನೆ ಹೋಟೆಲ್ ತಿರುಗಾಟ ಮಾಡುತ್ತ ನಾಲ್ಕಾರು ದಿನ ಕಳೆದೆ.

### ದೀರ್ಘ ಪ್ರವಾಸದಲ್ಲಿ ಕಂಡುಂಡ ಅನುಭವ

ಒಂದು ದಿನ ಶೇಖರಯ್ಯ ಒಂದು ದೊಡ್ಡ ಸುದ್ದಿಯನ್ನೇ ತಂದ : "ಶಾಸ್ತ್ರಿಗಳೇ, ನೀವು ಒಪ್ಪಿದರೆ ಸೂಳೆಕರೆ ಬೈಲಿನಲ್ಲಿ ನಾಲ್ಕಾರು ಊರುಗಳ ಪರಿಚಯವಿದೆ. ಅಲ್ಲಿಂದ ಮುಂದೆ ಇಳೆಹೊಳೆ, ಧೂಳೇಹೊಳೆ, ಮುದೇನೂರುಗಳಲ್ಲಿ ಚೆನ್ನಾಗಿ ಪರಿಚಯವಿದೆ. ಅತ್ತ ಒಂದು ಪ್ರವಾಸ ಹೋಗೋಣ. ಅಲ್ಲಿಯವರು ಉದಾರಿಗಳೂ ಅಹುದು. ನಾಲ್ಕು ಕಾಸು ಕೈಗೆ ಸಿಗುತ್ತದೆ. ದಯವಿಟ್ಟು ತಪ್ಪು ತಿಳಿಯಬೇಡಿ. ನಿಮಗೆ ಯಾವ ನೋವೂ ಆಗದಂತೆ ಕರೆದುಕೊಂಡು ಹೋಗಿ, ಕರೆತರುವುದು ನಮ್ಮ ಜವಾಬ್ದಾರಿ. ಚಾಮೇನಹಳ್ಳಿಯ ಘಟನೆಯಿಂದ ನಿಮಗೆ ಬಹಳ ನೋವು ಮಾಡಿಬಿಟ್ಟೆ ಎನಿಸಿ ನಾಲ್ಕು ದಿನ ಬಾಯಿಗೆ ಅನ್ನ ಸವಿ ಹತ್ತಲಿಲ್ಲ. ನಿದ್ರೆಯೂ ಸರಿಯಾಗಿ ಬರಲಿಲ್ಲ. ಈ ವಿಚಾರ ನಮ್ಮ ಮನೆಯಲ್ಲಿ ತಿಳಿಸಿದಾಗ ಅವರೂ ನನ್ನನ್ನು ಬಹಳ ಬೈದು ಬಿಟ್ಟರು" ಎಂದು ಮನ ಮರಗುವಂತೆ ಮಾತಾಡಿದ. ಇನ್ನು ಎರಡು ಮೂರು ದಿನಬಿಟ್ಟು ಹೋಗಿ ಬರೋಣ ಎಂದು ಹೇಳಿ ಕಳಿಸಿಕೊಟ್ಟೆ.

ಇತ್ತ ಚಾಮೇನಹಳ್ಳಿ ವೀರಪ್ಪ ಹೇಳಿದಂತೆ ಹೆಚ್. ಎಸ್. ರುದ್ರಪ್ಪನವರಿಂದ ಡಿ.ಪಿ.ಐ.ಗೆ ಕಾಗದವನ್ನಾದರೂ ಬರೆಯಿಸೋಣವೆಂದು ಯೋಚಿಸಿ ಅಲ್ಲಿಗೆ ಹೋಗಿ ವಿಚಾರ ತಿಳಿಸಿದೆ. ವೀರಪ್ಪ ಆ ಕೂಡಲೆ ಬಟ್ಟೆ ಹಾಕಿಕೊಂಡು ಹೊರಟೇ ಬಿಟ್ಟ. ರೈಲು ಹತ್ತಿ ಶಿವಮೊಗ್ಗಗೆ ಬಂದು ನೇರವಾಗಿ ರುದ್ರಪ್ಪನವರ ಮನೆಗೆ ಹೋದೆವು. ಅವರಿಗೆ ವೀರಪ್ಪನೇ ನನ್ನ ವಿಷಯವನ್ನೆಲ್ಲ ವಿಸ್ತಾರವಾಗಿ ಹೇಳಿದ. ಸೊರಬ ತಾಲ್ಲೂಕಿನಲ್ಲಿ ಕುಂಸಿ ಗ್ರಾಮದಲ್ಲಿ ಎರಡೆಕರೆ ಗದ್ದೆ ಇದೆ. ಹನ್ನೆರಡು ರೂಪಾಯಿ ಕಂದಾಯವನ್ನು ಕಟ್ಟುತ್ತಾರೆ. ಇತ್ಯಾದಿ ತಿಳಿಸಿದ ಮೇಲೆ ರುದ್ರಪ್ಪನವರು ಡಿ.ಪಿ.ಐ.ಗೆ ನೇರವಾಗಿ ಕಾಗದ ಬರೆದು ಇವರಿಗೆ ಆದಷ್ಟು ಬೇಗ ಅನುಮತಿ ಕೊಡಬೇಕೆಂದು ತಿಳಿಸಿ ಬರೆದ ಕಾಗದವನ್ನು ನಮ್ಮ ಕೈಗೇ ಕೊಟ್ಟರು. ಇನ್ನು ಕೆಲವೇ ದಿನಗಳಲ್ಲಿ ಅನುಮತಿ ಬರಬಹುದೆಂದೂ ಹೇಳಿದರು. ನಾವು ಕಾಗದವನ್ನು ರಿಜಿಸ್ಟರ್ ಪೋಸ್ಟ್‌ದ್ವಾರ ಡಿ.ಪಿ.ಐ. ಅವರಿಗೆ ಕಳಿಸಿಬಿಟ್ಟೆವು.

ಇನ್ನು ಕೈ ಖರ್ಚುಮಾಡಿಕೊಂಡು ಕುಳಿತು ಕೊಳ್ಳುವುದಕ್ಕಿಂತ ಅಷ್ಟು ಇಷ್ಟು ಪುಡಿಗಾಸು ಸಂಪಾದಿಸೋಣವೆಂದು ಶೇಖರಯ್ಯ ಹೇಳಿದ ರೀತಿಯಲ್ಲಿ ಪ್ರವಾಸ ಕೈಕೊಂಡು ಬಿಟ್ಟೆವು. ಈ ಪ್ರವಾಸದಲ್ಲಿನ ಎರಡು ಮೂರು ಊರುಗಳ ಹೆಸರು ಮಾತ್ರ ಜ್ಞಾಪಕದಲ್ಲಿ ಉಳಿದವೇ ವಿನಾ ಉಳಿದವುಗಳ ಹೆಸರು ಮರೆತು ಹೋಯಿತು. ಒಂದರೆಡು ಕಥೆಗಳನ್ನು ಮಾಡಿ ಖರ್ಚಿಗೆ ದುಡ್ಡು ಮಾಡಿಕೊಂಡು ಹಾಲಿವಾಣಕ್ಕೆ ಬಂದೆವು. ಇಲ್ಲಿ ಒಂದು ಅಪಾಯಕರ ಸ್ವಾರಸ್ಯ ಪ್ರಕರಣವನ್ನು ಹೇಳುವುದು ಸೂಕ್ತ. ಹಾಲಿವಾಣ ಹೆಚ್ಚಾಗಿ ಕುರುಬರು ಇರುವ ಊರು. ಅಲ್ಲಿ ಕುರುಬರು ಕಂಬಳಿ ನೆಯ್ಯುವ, ಕುರಿ ಕಾಯುವ ಉದ್ಯೋಗದಲ್ಲಿ ನಿಪುಣರು. ಅಲ್ಲಿಗೆ ಬರುವ ಹೊತ್ತಿಗಾಗಲೆ ಸಂಜೆಗತ್ತಲಾಗುತ್ತ ಬಂದಿತ್ತು. ಶಿವಯ್ಯ ಮತ್ತು ಶೇಖರಯ್ಯ ಅವರು ನನ್ನನ್ನು ಊರ ಹೊರಗಿನ ಅರಳಿಕಟ್ಟೆಯ ಮೇಲೆ ಕುಳ್ಳಿರಿಸಿ ಊರಿನ ಪ್ರಮುಖರನ್ನು ಕಂಡು ಕಥೆ ನಡೆಸಲು ಕೇಳಹೋದರು.

ಬೇಗ ಬನ್ನಿರೆಂದು ಹೇಳಿ ಕಳಿಸಿದೆ. ಅವರು ಓರ್ವ ವೀರಶೈವ ಪ್ರಮುಖ ವ್ಯಕ್ತಿಯನ್ನು ಕಂಡು "ಉತ್ತರದೇಶದ ಕೀರ್ತನಕಾರರು ಬಂದಿದ್ದಾರೆ. ಈ ದಿನ ನಿಮ್ಮ ಊರಿನಲ್ಲಿ ಒಂದು ಕಥೆ ಮಾಡಿಸಬೇಕೆಂದು" ಕೇಳಿದರಂತೆ. ಅವರು "ಈ ಊರಲ್ಲಿ ತಾಳಮೇಳ ಇಲ್ಲ. ಇಂಥ ಕೆಲಸಕ್ಕೆ ಯಾರೂ ಮುಂದೆ ಬರುವುದಿಲ್ಲ. ನಾನೊಬ್ಬನೇ ನಿಂತು ಕೀರ್ತನೆ ಮಾಡಿಸುವ ಸ್ಥಿತಿಯಲ್ಲಿಲ್ಲವೆಂದು" ಅಸಹಾಯಕತೆ ಸೂಚಿಸಿ ಬಿಟ್ಟರಂತೆ. ಇವರು ಇಷ್ಟಕ್ಕೆ ಬಿಡಬೇಕಲ್ಲ! "ಕಥೆ ಇಲ್ಲದಿದ್ದರೆ ಹೋಗಲಿ. ಈ ದಿನ ನಮಗೆ ಮೂವರಿಗೂ ಶಿವಪೂಜೆ ಪ್ರಸಾದಕ್ಕಾದರೂ ಅನುಕೂಲ ಮಾಡಿ. ರಾತ್ರಿ ಇಲ್ಲೇ ನಿಮ್ಮ ಕಟ್ಟೆಯ ಮೇಲೆ ಮಲಗಿ ಬೆಳಿಗ್ಗೆ ಎದ್ದು ಮುಂದೆ ಹೋಗುತ್ತೇವೆ" ಎಂದರಂತೆ. ಅದಕ್ಕವರು ಆಗಬಹುದು ಎಂದರಂತೆ. ಅವರು ನನ್ನ ಹತ್ತಿರಕ್ಕೆ ಬಂದು ವಿಷಯ ತಿಳಿಸಿ ಕರೆದುಕೊಂಡು ಹೋದರು. ನಮ್ಮ ಮೂವರ ಹೊಟ್ಟೆಗಳೂ ಏಳೆಂಟು ಮೈಲು ನಡೆದು ಬಂದುದರ ಪರಿಣಾಮವಾಗಿ ಹಸಿದು ಹೋಗಿದ್ದವು. ರಾತ್ರಿ ನಾವೆಲ್ಲ ಪೂಜೆ ಮಾಡಿಕೊಂಡು ನವಣೆಅಕ್ಕಿ ಅನ್ನ ಮಜ್ಜಿಗೆ ಸಾರಿನ ಊಟವನ್ನು ಕಂಠಪೂರ್ತಿ ಬಿಗಿದು ಬಿಟ್ಟೆವು. ಹಸಿದ ಹೊಟ್ಟೆಯ ಬಾಧೆ ನೀಗಿತು. ಶೇಖರಯ್ಯನಿಗೆ ನವಣೆಅಕ್ಕಿ ಅನ್ನ ಉಂಡು ರೂಢಿಯಿಲ್ಲವೆಂದು ಉಸುರಿದ. "ಹೋದ ಹೋದಲ್ಲೆಲ್ಲ ನೆಲ್ಲಕ್ಕಿ ಮಮ್ಮು ಬೇಕೆಂದರೆ ಹೇಗೆ? ಧರ್ಮಕ್ಕೆ ಕೊಟ್ಟ ಎಮ್ಮೆ ಹಲ್ಲು ಹಿಡಿದು ನೋಡುವುದೇ" ಎಂದೆ ಮೆಲ್ಲಗೆ. ಹಸಿದ ಹೊಟ್ಟೆ ಕೇಳಬೇಕೆ! ಅದನ್ನೇ ಮುಕ್ಕಿದ. ಅವರ ಕಟ್ಟೆ ವಿಶಾಲವಾಗಿತ್ತು. ಅಲ್ಲಿ ಮಲಗಲು ಒಂದು ಗುಡಾರವನ್ನು ಕೊಟ್ಟು ಹೊದಿಯಲು ಕಂಬಳಿ ಕೊಡುತ್ತೇನೆಂದರು. ನಾವು ಹೊದಿಯಲು ನಮ್ಮಲ್ಲಿ ಉಂಟೆಂದು ತಿಳಿಸಿ ಹೊದ್ದುಕೊಂಡು ಮಲಗಿಬಿಟ್ಟೆವು.

ಈ ಮನೆಯ ಮುಂದೆ ಒಂದು ಕುರುಬರ ಮನೆಯಿತ್ತು. ಸುಮಾರು ಐದುಘಂಟೆ ನಸುಕಿನಲ್ಲಿ ಆ ಕುರುಬಗೌಡ ಅವ್ವ ಅಕ್ಕ ಎಂದು ಅಶ್ಲೀಲದಗಳಿಂದ ಬೈದಾಡಲು ಪ್ರಾರಂಭಿಸಿದ. ಒಳಗಿನಿಂದ ಹೆಣ್ಣುಮಗಳೊಬ್ಬಳು ಅವನ ಬೈಗುಳಗಳಿಗೆ ವಿರೋಧ ಮಾಡುತ್ತಲಿದ್ದುದೂ ಕೇಳಿಸುತ್ತಿತ್ತು. ನಮಗೆ ಎಚ್ಚರವಾದರೂ ಸುಮ್ಮನೆ ಎಲ್ಲವನ್ನು ಕೇಳಿಸಿಕೊಂಡು ಮಲಗಿದ್ದೆವು. ಆದರೆ ನಮ್ಮ ಗುಂಪಿನಲ್ಲಿದ್ದ ಶಿವಯ್ಯ ಎದ್ದು ಕುಳಿತ. ಬಹಳ ಹೊತ್ತು ಕೇಳಿಸಿಕೊಂಡ. ಅವನ ತಾಳ್ಮೆ ತಪ್ಪಿತು. ಅವನು ಬೈದಾಡುವ ಯುವಕನಿಗೆ" "ಏ ಅಯ್ಯಾ. ಯಾರಿಗೆ ನೀನು ಬೈಯುವುದು?" ಎಂದ. "ಯಾರಿಗ್ಯಾದರೂ ಆಗಲಿ ನಿಂಗ್ಯಾಕ ಬೇಕೋ ಸುಮ್ಮನ ಮಕ್ಕೊಂಡೆದ್ದು ಹೋಗು" ಎಂದುಬಿಟ್ಟ ಒಗರಿನಿಂದಲೇ ಆ ಕುರುಬಗೌಡ. ಶಿವಯ್ಯ ನಖಶಿಖಾಂತದವರೆಗೆ ಉರಿದು "ಯಾಕಲೇ ಮಗನ! ನಿನಗೆ ತನಗೆ ಅಂತ ಏಕವಚನದಲ್ಲೇ ಮಾತಾಡ್ತೀಯೇನ್ಲೇ" ಎಂದವನೇ ಕಟ್ಟೆಯನ್ನು ಹಾರಿ ಹೋಗಿ 'ಒದೀತೆನಿ ನೋಡು ಮಗನೇ' ಎಂದು ಬಿಟ್ಟ. ನನಗೆ ಗಾಬರಿಯಾಯಿತು. ಒಳ್ಳೇ ಉಸಾಬರಿ ಆಗಿಹೋಯಿತಲ್ಲಾ! ದಾರಿ ಹಿಡಿದು ಹೋಗುವ ಮಾರಿಯನ್ನು ಊರು ಹೊಕ್ಕು ಹೋಗೆಂದು ಕರೆದವವುಂಟೇ? ಎಂಬ ಗಾದೆಯಂತೆ, ಆ ಮೂರ್ಖನೊಡನೆ ನಮಗೇನು ಸಂಬಂಧ? ನಾವು ನಮ್ಮ ದಾರಿ ಹಿಡಿದು ಹೋದರಾಯಿತು ಎಂದುಕೊಂಡು "ಶಿವಯ್ಯ, ಬೇಡ, ಬಾಯಿತ್ತ! ನಮಗೂ ಅವನ ಮನೆಯ ಬೈದಾಡುವ ವ್ಯವಹಾರಕ್ಕೂ ಏನು ಸಂಬಂಧ" ಎಂದೆ. ಶಿವಯ್ಯ ಅವನ ಮೇಲೆ ಏರಿಹೋಗಿಯೇ ಬಿಟ್ಟ. ಅಷ್ಟರಲ್ಲಿ ಸುತ್ತಮುತ್ತಣ ಮನೆಯವರೂ ನಾವು ಉಳಿದಿದ್ದ ಮನೆಯವರೂ ಬಾಗಿಲು ತೆಗೆದು ಹೊರಗೆ ಬಂದು ಬಿಟ್ಟರು. ಶಿವಯ್ಯ ಪಕ್ಕದ ಮನೆಯಿಂದ ಬಂದ ಒಬ್ಬನನ್ನು "ಈತ ಬೈಯುವುದು ಯಾರನ್ನು" ಎಂದು ಕೇಳಿದ. ಆತ

"ಸ್ವಾಮಿ, ಇವನೊಬ್ಬ ಮೂರ್ಖ, ದಿನಾಲು ಇದೇ ಹಾಡು. ತಲೆಯಲ್ಲಿ ಪಿತ್ಥ ಕೆರಳಿದಾಗಲೆಲ್ಲ ತನ್ನ ತಾಯಿಯನ್ನೇ ಇಂಥ ಕೆಟ್ಟ ಕೆಟ್ಟ ಮಾತುಗಳಿಂದ ಬೈದಾಡುತ್ತಾನೆ. ನಮಗೆ ಕೇಳಿಕೇಳಿ ತಲೆ ಚಿಟ್ಟೆಂದು ಹೋಗಿದೆ. ನೀವಾದರೂ ಬುದ್ಧಿ ಕಲ್ಸಿ ಈ ಕೆಟ್ಟ ಸೂ.. ಮಗನಿಗೆ" ಎಂದು ಬಿಟ್ಟ. ಶಿವಯ್ಯನ ಪಿತ್ಥವೂ ಕೆರಳಿ ನೆತ್ತಿಗೇರಿ ಹೋಗಿ "ತಾಯಿಯನ್ನ ಇಂಥ ಕೆಟ್ಟ ಕೆಟ್ಟ ಮಾತಿನಿಂದ ಬೈತಾನೆಯೇ? ಇವನನ್ನು ಒಂದು ಕೈ ನೋಡಿಯೇ ಬಿಡುತ್ತೇನೆಂದು" ಹಿಡಿದು ಹೊಡೆಯಲು ಪ್ರಾರಂಭಿಸಿ ಬಿಟ್ಟ. ನನಗೆ ಎಲ್ಲಿಲ್ಲದ ಭಯವಾಯಿತು. ಇಂಥವರನ್ನು ಕಟ್ಟಿಕೊಂಡು ನಾನು ಒಳ್ಳೇ ಪ್ರವಾಸ ಕೈಕೊಂಡು ಬಿಟ್ಟೆನಲ್ಲಾ ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತ ಮಲಗಿದ ಹಾಸಿಗೆಯನ್ನು ಮಡಿಸಿ ಮನೆಯವರಿಗೆ ಕೊಡೆಂದು ಶಂಕರಯ್ಯನಿಗೆ ಹೇಳುತ್ತ ಕೈ ಚೀಲ ಹಿಡಿದು ಮೇಲೆದ್ದೆ. ಶೇಖರಯ್ಯನೂ ಎದ್ದ. ಊರ ಹೊರಗೆ ನೀರು ಸಿಕ್ಕಲ್ಲಿ ಮುಖ ಮಾರ್ಜನ ಮಾಡಿಕೊಂಡು ಹೋದರಾಯಿತೆಂದು ಕಟ್ಟೆ ಇಳಿದು ಬರುತ್ತಿದ್ದಂತೆ ಶಿವಯ್ಯ ಅವನೊಡನೆ ಕುಸ್ತಿಗೆ ಬಿದ್ದು ಸಿಕ್ಕಲ್ಲಿ ಗುದ್ದುತ್ತಿದ್ದ. ಕುರುಬಗೌಡ "ಅಯ್ಯಯ್ಯೋ! ಅಯ್ಯಯ್ಯೋ! ಸತ್ತೆ! ಸತ್ತೆ! ಇವನ್ಯಾವನೋ ನನ್ನ ಇವತ್ತ ಕೊಲ್ತಾನ್ರೆಪೋ ಇವನಮ್ಮ..... ಇತ್ಯಾದಿ ಶಿವಯ್ಯನಿಗೇ ಪೂಜೆ ಪ್ರಾರಂಭಿಸಿಬಿಟ್ಟ. ಇದನ್ನು ಕೇಳಿ ಕೇಳಿದಂತೆಲ್ಲ ಶಿವಯ್ಯನ ತಾಮಸ ಇನ್ನೂ ಅಧಿಕಗೊಳ್ಳುತ್ತಿತ್ತು. ಈತ ಇಷ್ಟೊಂದು ಒರಟ ಎಂದು ಗೊತ್ತಾದದ್ದೇ ನನಗೆ ಈಗ. ಇವನ ದೃಷ್ಟಿಯಿಂದ ಶೇಖರಯ್ಯ ನೂರು ಪಾಲು ಉತ್ತಮ ಎನಿಸಿತು. ಕುರುಬಗೌಡನ ಆರ್ತನಾದ ಅಧಿಕವಾಗುತ್ತಿದ್ದಂತೆ ಜನಜಂಗುಳಿಯೂ ಗುಂಪುಗೊಂಡಿತು. "ನಾನಿವತ್ತು ಉಳಿಯೋದಿಲ್ರೆಪೋ! ಸತ್ತೆ! ಸತ್ತೆ" ಎಂದು ಪುನಃ ಪುನಃ ಕೂಗಿಕೊಳ್ಳುತ್ತಿದ್ದ. ಈ ಕೂಗಿಗೆ ಅವನ ತಾಯಿ ಒಳಗಿಂದ ಬಂದು "ಯಾರೆಪ್ಪಾ ನನ್ನ ಮಗನ್ನ ಹೊಡ್ದು ಪ್ರಾಣಾ ತೆಗೆವೋರು! ಕೈ ಬಿಡ್ರೆಪ್ಪಾ ಬೈದರ ಬೈಕೊಂತಾನ" ಎಂದು ಬಿಟ್ಟಳು. ಈ ಮಾತು ಕೇಳಿ ಥೂ! ಒಳ್ಳೆ ಸಹವಾಸಾಯ್ತಲ್ಲ! ಎಂದು ಕೈ ಬಿಟ್ಟ. ಅಂಗಿಯೆಲ್ಲ ಹರಿದು ಹೋಗಿತ್ತು. ನಾವು ಶಿವಯ್ಯನನ್ನು ಎಳೆದುಕೊಂಡು ಇನ್ನೂ ಮಬ್ಬುಗತ್ತಲು ಇರುವುದರೊಳಗಾಗಿ ಊರುಬಿಟ್ಟು ಹೊರಟುಬಿಟ್ಟೆವು. ಊರು ಬಿಟ್ಟು ಸ್ವಲ್ಪ ದೂರ ಹೋಗುವಾಗ ಒಂದು ಕೇದಿಗೆವನದ ಹಳ್ಳ ಸಿಕ್ಕಿತು. ಅಲ್ಲಿ ಕುಳಿತುಕೊಂಡೆವು. ಮಾರುದ್ದ ಹೊತ್ತೇರಿತ್ತು. ನಾನು ಶಿವಯ್ಯನಿಗೆ "ನಿಮ್ಮ ತಂದೆ-ತಾಯಿ ತಪ್ಪು ಮಾಡಿದ್ದಾರೆ" ಎಂದೆ. "ಏನು ಶಾಸ್ತ್ರಿಗಳೇ ಹಾಗೆಂದರೆ" ಎಂದ. "ನಿನಗೆ 'ರುದ್ರ' ಎಂದು ಹೆಸರಿಡುವ ಬದಲು 'ಶಿವಯ್ಯ' ಎಂದಿರುವುದೇ ಮೊದಲ ತಪ್ಪು. ಅಲ್ಲಾ! ಪರಸ್ಥಳದಲ್ಲಿ ಬಂದು ಹೀಗೆ ಜಗಳವನ್ನು ನಾವಾಗಿ ಕೊಂಡುಕೊಳ್ಳಬಹುದೇ? ಅವರ ಮನೆಯವರು ಬಂಧುಗಳು ನಮ್ಮೆಲ್ಲರ ಮೇಲೆ ಬಿದ್ದಿದ್ದರೆ ನಮ್ಮ ಗತಿ ಏನಾಗುತ್ತಿತ್ತು? ಜಗತ್ತಿನಲ್ಲಿ ಎಂಥೆಂಥ ....ಇದ್ದಾರೆ. ಅವರನ್ನೆಲ್ಲ ನಾವು ತಿದ್ದುವುದಕ್ಕಾಗುವುದೇ? ನಾವೆಲ್ಲಿ? ನಮ್ಮ ಊರೆಲ್ಲಿ? ಇಲ್ಲಿ ನಮಗೆ ಪರಿಚಿತರುಂಟೆ? ನೀವು ಹೀಗೆಲ್ಲ ಮಾಡಿದರೆ ನಮ್ಮ ಈ ಪ್ರವಾಸ ಹೇಗಪ್ಪಾ ಶುಭಪ್ರವಾಸವಾಗುವುದು? ಸುಮ್ಮನೆ ಹಿಂತಿರುಗಿ ಶಿವಮೊಗ್ಗೆಗೆ ಹೋಗುವುದೇ ಮೇಲೆನಿಸುತ್ತದೆ" ಎಂದೆ ನಗುನಗುತ್ತ. ಅಲ್ಲಿಗೆ ಶಿವಯ್ಯನ ರೌದ್ರ ಮಾಯವಾಗಿ ಮೊದಲಿನ ಸ್ಥಿತಿಗೆ ಇಳಿದಿದ್ದ. "ಶಾಸ್ತ್ರಿಗಳೇ, ಆ ಗೌಡ ಇನ್ನಾರಿಗಾದ್ರೂ ಬೈತ್ಯಾನೆಂದ ಮೇಲೆ ನನ್ನ ತಲೆಪಿತ್ಥನೇ ಕೆರಳಿಬಿಟ್ಟು. ಏನಾಗ್ಲಿ, ಹೊಡ್ಡು ಹೊಡ್ದು ಹಣ್ಣುಗಾಯಿ ನೀರ್ಗಾಯ್ ಮಾಡಿಹಾಕ್ಬಿಟ್ಟೆ. ಅವರ ತಾಯಿಕಳ್ಳು ಎಷ್ಟೇ ಆಗ್ಲಿ ಹಡೆದ ಮಗನಿಗೆ ಹೊಡ್ತಾ ಬೀಳೋವಾಗ ಕೆಟ್ಟ ಕೆಟ್ಟ ಬೈಗಳು ಬೈಸಿಕೊಂಡರೂ 'ನನ್ಮಗನ್ನ ಹೊಡಿಬ್ಯಾಡ್ರೆಪೋ' ಅಂತ ಆ ಹರಕುಬಟ್ಟೆ ಮುದ್ಕಿ ಬಂದ್ಬಿಟ್ಟಲ್ಲಾ!

ಈ ಕಳ್ಳಸೂ...ಮಗನಿಗೆ ಅಷ್ಟೂ ತಿಳಿಬಾರ್ದ ತಾಯಿ ಎಂಥಾ ವಸ್ತು ಅಂತ" ಎಂದ ನಗುತ್ತ. ಶಿವಯ್ಯನಲ್ಲಿ ಸಾತ್ವಿಕವೂ ಇದೆ; ನ್ಯಾಯನಿಷ್ಠುರವೂ ಇದೆ. ಎಲ್ಲಕ್ಕೂ ಹೆಚ್ಚಾಗಿ ತಾಮಸವೂ ಇದೆ ಎನಿಸಿತು ನನಗೆ. "ಈಗ ಆದದ್ದಾಯಿತು. ಮುಂದಿನ ಪ್ರಯಾಣದಲ್ಲಿ ನಾನು ಈ ರೀತಿ ಉಗ್ರನೋ, ರುದ್ರನೋ, ವೀರಭದ್ರನೋ ಆಗಬೇಡ ಮಹಾರಾಯಾ! ಜಗಳಕ್ಕೂ ನಮಗೂ ಬಹಳ ದೂರ. ನಮ್ಮ ಈ ಪ್ರವಾಸ ಶಾಂತಿಯದು, ಸಂಸ್ಕೃತಿ ವಿಶಿಷ್ಟದ್ದು, ಸಾತ್ವಿಕದ್ದು. ನಮ್ಮ ವೃತ್ತಿಗೆ ತಕ್ಕ ಗುಣಸ್ವಭಾವ ನಮ್ಮದಾಗಿರಬೇಕು ಎಂದು ಹೇಳುತ್ತ ಅಲ್ಲಿನ ಮಡುವಿನಲ್ಲಿ ಸ್ನಾನಾದಿಗಳನ್ನು ಮಾಡಿಕೊಂಡು. ಕೊಳೆಯಾದ ಬಟ್ಟೆಬರೆಗಳನ್ನು ತೊಳೆದುಕೊಂಡು ಊರೂರ ಮೇಲೆ ಸೂಳೆಕೆರೆಯ ವಿಸಾರವಾದ ಬೈಲುಪ್ರದೇಶದಲ್ಲಿ ದಾರಿ ಸಾಗಿಸುತ್ತ ಹೊರಟೆವು. ಹರಿದು ಹೋದ ಅಂಗಿಯನ್ನು ತೆಗೆಸಿ ಶೇಖರಯ್ಯ ತಾನು ತಂದಿದ್ದ ಹೆಚ್ಚಿನ ಅಂಗಿಯನ್ನು ಸ್ವಲ್ಪ ಉದ್ದವಾದರೂ ತೊಡಿಸಿ ಆಸ್ಪತ್ರೆ ಪೇಷಂಟ್ ಕಾಣುವಂತೆ ಮಾಡಿಕೊಂಡು ಹೊರಟೆ.

ನಾವು ಉದ್ದೇಶಿಸಿ ಹೊರಟ ಊರ ಹೆಸರು ಮರೆತು ಹೋಗಿದೆ. ಆದು ಶಿವಯ್ಯನ ಪರಿಚಿತದ ಊರಂತೆ. ಆ ಊರಲ್ಲಿ ಅವನಿಗೆ ಬೇಕಾದವರು ಯಾರೋ ಇದ್ದಾರಂತೆ. ಅಲ್ಲ ಅವನ ಸ್ವಂತ ಕೆಲಸವೂ ಇತ್ತಂತೆ. ಅಲ್ಲಿ ಒಂದು ಶಿವಕಥೆ ನಡೆದರೆ ಮಾಡಿಕೊಂಡು ಅಲ್ಲಿನ ಕೆಲಸವನ್ನು ಮುಗಿಸಿಕೊಂಡು. ಹೋದರಾಯಿತೆಂದು ಅವನ ನಿರ್ದೇಶನದ ಪ್ರಕಾರವೇ ನಮ್ಮ ದಾರಿ ಸಾಗಿತ್ತು. ದಾರಿಯಲ್ಲಿ ಸಿಕ್ಕ ಯಾವುದೋ ಒಂದೂರಲ್ಲಿದ್ದ ಹರಕುಮುರುಕು ಚಹಾದಂಗಡಿಯಲ್ಲಿ ಒಗ್ಗರಣೆ ಮಂಡಕ್ಕಿ ತಿಂದು ಕರಿಯಬಣ್ಣದ ಬೆಲ್ಲದ ಚಹಾ ಕುಡಿದು ಜಠರವನ್ನು ಸಾಂತ್ವನಗೊಳಿಸಿಕೊಂಡು 12 ಘಂಟೆ ಸುಮಾರಿಗೆ ಉದ್ದೇಶಿತ ಊರು ತಲುಪಿದೆವು. ಅಲ್ಲಿ ನಾನು ಊರ ಹೊರಗಿನ ಒಂದು ಬೇವಿನ ಮರದ ಕೆಳಗೆ ಕುಳಿತುಬಿಟ್ಟೆ. ಹೊಟ್ಟೆ ಚುರ್ರೆನ್ನುತ್ತಿತ್ತು. ಬೆಳಗಿನ ಐದೂವರೆ ಘಂಟೆಯಿಂದ ಏಕ ಪ್ರಕಾರವಾಗಿ ನಡೆದು ದಣಿದಿದ್ದ ನಮಗೆ ಹಿಡಿ ಒಗ್ಗರಣೆ ಮಂಡಕ್ಕಿ ಯಾವ ಮೂಲೆಗೆ? "ನೀನು ಊರಲ್ಲಿ ಹೋಗಿ ಅಲ್ಲಿನ ವಿಷಯ ತಿಳಿದು ಊಟಕ್ಕೆ ಎಲ್ಲಿಯಾದರೂ ಏರ್ಪಾಡಾದರೆ ಸರಿ, ಇಲ್ಲವಾದರೆ ಸ್ವಲ್ಪ ಅವಲಕ್ಕಿ ಬೆಲ್ಲ ತಂದು ಬಿಡಿ. ಇಲ್ಲಿಯೇ ಯಾರ ಮನೆಯಿಂದಲಾದರೂ ಸ್ವಲ್ಪ ನೀರು ತರಿಸಿ ಅವಲಕ್ಕಿ ನೆನಸಿ ಬೆಲ್ಲದೊಡನೆ ತಿಂದು ನೀರು ಕುಡಿದು ಬಿಡೋಣ" ಎಂದು ನಾಲ್ಕಾಣೆ ಕೈಗೆ ಕೊಟ್ಟೆ. ಅವರು ಹೋದರು.

ಇತ್ತ ನಾನು ವಿಶ್ರಮಿಸಿಕೊಳ್ಳುತ್ತಿದ್ದುದು ಊರ ಹೊರಗೆ ದಾರಿಯ ಪಕ್ಕದಲ್ಲಿ ದಟ್ಟವಾಗಿ ಚಿಗಿತ ಬೇವಿನ ಮರದ ಕೆಳಗೆ. ಆ ಹಳ್ಳಿಯ ಒಬ್ಬ ರೈತ ಬೇವಿನ ಮರದ ನೆರಳಿನಲ್ಲಿ ಕುಳಿತು ಹಗ್ಗ ಹೊಸೆಯಲು ಕೈಯಲ್ಲಿ ನಾರಿನ ಗಂಟು ಹಿಡಿದುಕೊಂಡು ತೊಟ್ಟ ಅಂಗಿಯನ್ನು ಕಳೆದು ಹೆಗಲ ಮೇಲೆ ಹಾಕಿಕೊಂಡು ತಾಂಬೂಲ ಜಗಿಯುತ್ತ ದಾರಿಯುದ್ದಕ್ಕೂ ಆಗೊಮ್ಮೆ ಈಗೊಮ್ಮೆ ಉಗುಳುತ್ತ ಬಂದ. ನನ್ನನ್ನು ನೋಡಿ "ಯಾವೂರು ತಮ್ಮು?" ಎಂದ. ನಾನು ಶಿವಮೊಗ್ಗ ಎಂದೆ. ಪಿಳಿ ಪಿಳಿ ಕಣ್ಣುಬಿಟ್ಟು "ಎಷ್ಟು ದೂರ ಬಂದಿದ್ದೀರಲ್ರಪೋ ನೀವೊಬ್ರ ಬಂದೀರಾ ಏನೋ...." ಎನ್ನುತ್ತಿದ್ದಂತೆ, "ಇನ್ನೂ ಇಬ್ಬರು ನಮ್ಮವರು ಇದ್ದಾರೆ ಅವರನ್ನು ಊರೊಳಗೆ ಕಳಿಸಿದ್ದೇನೆ" ಎಂದೆ. "ಹಾಗೆ ಹೇಳಿ ಮತ್ತೆ? ಒಬ್ಬ ನಾಟಕದ ಪಾಲ್ಟು ಹಾಕುವ ಹಾಂಗ ಹಿಂದ್ಕ ಕೂದ್ಲ ಬಿಟ್ಕಂಡು ಕರೇಉಣ್ಣೆ ಟೋಪಿ ಹಾಕಿರೋರು. ಇನ್ನೊಬ್ಬ ಮೋಟನಾಗಿ ದಪ್ಪಗ ಸ್ವಲ್ಪ ಉದ್ದನೆಯ ಅಂಗೀತೊಟ್ಟಿರೋರು ನಿಮ್ಮ ಕಡೆ ಮಂದಿನೋ ಏನೋ!" ಅಂದ. ಅವರನ್ನು ಎಷ್ಟು ಚೆನ್ನಾಗಿ

ಈತ ಇಷ್ಟು ಬೇಗನೆ ನೋಡಿಕೊಂಡು ಬಿಟ್ಟಿರುವನಲ್ಲಾ ಎಂದು ಆಶ್ಚರ್ಯಪಟ್ಟು "ಹೌದು ಅವರು ನಮ್ಮ ಮಂದೀನೇ ಅವರ ಚಹರೆ ಪಟ್ಟಿಯನ್ನು ನೀವು ಎಷ್ಟು ಬೇಗನೆ ಗಮನಿಸಿದ್ದೀರಲ್ಲಾ! ಭೇಷ್!!" ಎಂದೆ "ನಾನ್ಯಾಕ ಕಂಡಕಂಡವ್ರನ್ನ ಗಮನಿಸ್ಲಿ ಸ್ವಾಮಿ, ಅವರು ಬಂದದ್ದು ನಮ್ಮ ಮನೆ ಹತ್ರದ ಮನೆಗೆ. ನನ್ನ ಕುತೂಹಲ ಕೆರಳಿತು. ಇವನ ಮಾತಿನ ಧ್ವನಿಯಲ್ಲಿ ಏನೇನೋ ಬಹಳ ವಿಷಯ ಹುದುಗಿದಂತಿದೆ. ಇವರ ಚರಿತ್ರೆ ತಿಳಿಯಲು ಇದು ಸಹಕಾರಿಯಾದೀತೆಂದು ಭಾವಿಸಿ ನಾನೂ ಕೆಣಕಿ ಕೆಣಕಿ ಮಾತನಾಡಿಸುತ್ತ -

'ನಿಮ್ಮ ಹೆಸರೇನು ಯಜಮಾನರೇ?' ಎಂದೆ
"ನನ್ಹೆಸ್ರು ಈರಭದ್ರಯ್ಯಾ ಅಂತ"
"ನಿಮ್ಮ ಕಸಬು"

"ಯವಸಾಯಾನೇಯ! ಇಲ್ಲೀಕ ಯಾಂವಾ ಈ ನಾರು ತೊಗೊಂಡು ಕಣ್ಣೀ ಹೊಸ್ಯಾಕ ಬರ್ತಿದ್ದೆ. ನಿಮ್ಹಂಗ ಸಾವೇನೂ ಸಾಲಿ ಓದ್ದೋರಲ್ಲಾ ಏನಲ್ಲಾ!"

"ಶಿವಮೊಗ್ಗದ ಇಬ್ಬರು ನಿಮ್ಮ ಪಕ್ಕದ ಮನೆಗೆ ಬಂದಿದ್ದರೂ ಅಂದಿರಲ್ಲಾ ಅವರು ನಿಮ್ಮ ಕಡೆ ಜನಕ್ಕೆ ಪರಿಚಯಸ್ಥರೇ?"

"ಅದೊಂದು ದೊಡ್ಡಕತೆ ಐತಿ ಬಿಡ್ರೆಪಾ!"

"ಹಾಗೆಂದರೆ? ಅರ್ಥವಾಗಲಿಲ್ಲ."

- ಅಷ್ಟರಲ್ಲಿ ಆತ ಜಾಗ್ರತನಾದ. ನಿಜವೃತ್ತಾಂತ ಬಾಯಿಬಿಡುವುದಕ್ಕೆ ಹಿಂದೆ ಮುಂದೆ ನೋಡಿ "ಆ ಇಬ್ರು ಬಂದ್ರಲ್ಲಾ! ಅವ್ರು ನಿಮಗೇನಾಗ್ಬೇಕು?" ಎಂದ, ಒಂದು ಬಗೆಯ ತುಂಟುನಗೆ ಬೀರುತ್ತ.

"ಅವರಿಗೂ ನಮಗೂ ಯಾವ ಸಂಬಂಧವೂ ಇಲ್ಲ. ಬೆಟ್ಟದ ನೆಲ್ಲಿಕಾಯಿ ಸಮುದ್ರದ ಉಪ್ಪುಗಳ ಸಂಬಂಧವಿದ್ದ ಹಾಗೆ. ಅವರ್ಯಾವುದೋ ಊರೋರು ನನ್ನದಾವುದೋ ಊರು" ಎಂದೆ ಒಂದು ಬಗೆಯ ತಿರಸ್ಕಾರದ ದನಿಯಲ್ಲಿ.

"ಮತ್ತೆ ಇಲ್ಲಿಗ್ಯಾಕ ಕೂಡಿಕೊಂಡು ಬಂದಿದ್ರಿ?"

ನಾನು ನಿಜವನ್ನು ಬಿಚ್ಚದಿದ್ದರೆ ಇರಬಹುದಾದ ಗೂಢವನ್ನು ಈತ ಬಿಚ್ಚುವುದಿಲ್ಲವೆಂದು ಭಾವಿಸಿ ಹೇಳಿದೆ.

"ನಾವು ಶಿವಕೀರ್ತನೆ ಮಾಡುವವರು. ಕರೇ ಟೋಪಿಯಾತ ನಮ್ಮ ಹಾರ್ಮೋನಿಯಂ ಬಾರಿಸುವವ, ಇನ್ನೊಬ್ಬ ತಬಲಾ ನುಡಿಸುವವ."

"ಹೀಂಗೋ, ಪಸಂದ ಆತು ಬಿಡ್ರಿ. ಈ ಊರಾಗಾ ಕತೆಗಿತೆ ಮಾಡಸ್ತೇವಂತ ಯಾರಾರ ಹೇಳ್ಯಾರೇನ್ರಿ ಶಾಸ್ತ್ರಿಗೋಳೆ."

"ಇಲ್ಲ. ಇಲ್ಲ! ಅದನ್ನ ಕೇಳಿಕೊಂಡು ಬರುತ್ತೇವೆಂದೇ ಹೇಳಿ ಹೋಗಿದ್ದಾರೆ."

"ನಿಮ್ಗ ನಿಜಾ ಗೊತ್ತಿಲ್ಲ ಬಿಡ್ರಿ ಹಾಂಗಾರ."

ನನ್ನ ಆಸಕ್ತಿ ತುಂಬಾ ಕೆರಳಿತು. ಸ್ವಲ್ಪ ಭಯವೂ ಆಯಿತು. ಪುನಃ ಆತನನ್ನು ಕೆಣಕಿಕೆಣಕಿ ಪ್ರಶ್ನಿಸಲು ಯತ್ನಿಸುತ್ತಿದ್ದಂತೆ ಅವನೇ,

"ಶಾಸ್ತ್ರಿಗೊಳೇ, ಅವ್ರು ಇಲ್ಲಿ ಹೆಣ್ಣು ನೋಡಿ ಹೊಸಾ ಬೀಗ್ತನ ಮಾಡಾಕ ಬಂದಾರ. ಅದೊಂದು ಹುಡ್ಗಿ ಐತಿಲ್ಲ, ಮೂರ್ಲೋಕ ಹಾಳು ಮಾಡಿದ್ದೂ" ಎಂದು ಮುಗುಳುನಗೆ ನಗುತ್ತ ಮಾತನ್ನು ನಿಲ್ಲಿಸಿ ನಾರಿನ ಚಿಕ್ಕ ಚಿಕ್ಕ ಪಾಚಿಗಳನ್ನು ಜೋಡಿಸಿ ಪಡುವು ಹೊಸೆಯುತ್ತ ಕಾಲಿಗೆ ಸುತ್ತುತ್ತಲೇ ಇದ್ದ. ಆಗ ನಾನು ಓಹೋ!! ಈ ಹಳ್ಳಿಯಲ್ಲಿ ಸ್ವಲ್ಪ ಕೆಲಸವಿದೆ. ಅದನ್ನು ತೀರಿಸಿಕೊಂಡು ಕಥೆಗಿತೆ ಆಗುವುದಾದರೆ ಮುಗಿಸಿಕೊಂಡು ಮುಂದೆ ಹೋಗೋಣವೆಂದು ಹೇಳಿದ್ದರು. ಕೆಲಸ ಎಂದರೆ ಇದೇ ಆಗಿರಬೇಕು ಎಂದು ಮನದಲ್ಲಿಯೇ ಯೋಚಿಸಿ.

"ಹೆಣ್ಣು ಇದೆ. ಅದೇನೋ ಅಂಥಾದ್ದು ಇಂಥಾದ್ದು ಅಂದಿರಿ. ಅದರ ವೃತ್ತಾಂತವೇನು?"

"ಶಾಸ್ತ್ರಿಗೊಳೇ, ನೀವೇನೂ ತಿಳಕೊ ಬ್ಯಾಡ್ರಿ. ಒಬ್ಬ ಒಳ್ಳೇ ಮನುಸ್ಯಇದ್ದ. ಮಲ್ಲಯ್ಯ ಅಂತ. ಭಾಳಾ ಒಳ್ಳೇ ಮನಿಸ್ಯಾ. ಯಾಪಾರ ಸಾಪಾರ ಮಾಡಿಕೊಂಡು ಚೆನ್ನಾಗೇ ಆಗಿದ್ದ. ಅವಂಗ ಏಳರ ಶನಿಯಂಥಾ ಒಂದು ಹೆಂಡ್ತಿ ಸಿಕ್ಕುಬಿಟ್ತು. ಅದಕ ಮದಿವಿ ಆಗೋಕಿಂತ ಮೊದಲೇ ಕೆಟ್ಟಚಾಳಿತ್ತಂತ!ಇವಗ ಗೊತ್ತಾಗಲಿಲ್ಲ. ನಿಮಗ ಎಲ್ಲಾ ಗೊತ್ತು. ಕಥೆ ಮಾಡೋರು ಅಂದ್ರ ನಿಮಗೆ ಹೇಳೋದೇನೈತಿ. ಒಳ್ಳೆ ಹೆಂಡ್ತಿ ಸಿಗೋದು ಪುಣ್ಯ ಅಲ್ಲವಾ! ಇಲ್ಲಿನೂ ಅದೇ ಚಾಳಿ ಸುರುವಾಗ್ಬಿಟ್ಟಿತು. ಏನು ಮಾಡಿದ್ರೂ ಆಕಿ ಕೆಟ್ಟ ಚಾಳಿ ಬಿಡ್ಲಿಲ್ಲ. ಈಗಿನ ಹೆಣ್ಮಗ್ಳಾ ಇಂಥ ಕಾಲದಾಗ ಹುಟ್ತು ಮಲ್ಲಯ್ಯನ ಸಂಶಯ ಬಂತು. ಇಬ್ಬರಿಗೂ ಜಗಳಾ ಅಂದರ ಜಗಳಾ. ಇದೆಯೆಸನದಾಗ ಮಲ್ಲಯ್ಯ ಶಿವಶಿವಾ ಅಂದ. ಮುಂದ ಈಕಿ ಚೆಲ್ಲಾಟ ಜಾಸ್ತಿ ಆತು. ಇದರ ಮ್ಯಾಲಿಂದ ತಿಳಕಳ್ರಿ. ತಾಯಿ ಹಂಗ ಮಗ್ಳೂ ಅದ್ಲು ನೂಲಿನಂಗಾ ಸೀರಿ ಅಲ್ವಾ ಅದ್ಲು. ಊರಾಗೆಲ್ಲ ಗುಬುಲು ಗುಬುಲು ಆತು. ಆ ಹುಡ್ಗೀನ ಯಾರಿಗ್ಯಾದರೂ ಕಟ್ಟಿ ಕೈತೊಳಕೊಂಬಿಡೋಣಾ ಅಂತ ಏನೇನೋ ಮಾಡಿದ್ಲು. ಬಂದವ್ರು ಈಕಿಯ ಚಾಳಿ ನೋಡಿ ಅವರಿವರಿಂದ ಕೇಳಿ ಹುಡ್ಗಿ ಇಸ್ಯಾ ತಿಳ್ಕಂಡು ಹಿಂದಕ್ಕ ಹೋಗ್ತಿದ್ರು. ಈಗ ಇವ್ರು ಬಂದಾರ. ದಪ್ಪನ್ನವ ಇದಾನಲ್ಲ ಅವಂಗ ಎರಡನೇದೋ ಮೂರನೇದೋ ಮದುವ್ಯಂತ. ಇಬ್ಬರು ಹೆಂಡ್ರನ್ನ ಆಗಲೆ ಮಶಾಣಕ್ಕೆ ಕಳಿಸಿದಂವ ಅಂತ ಹೆಣ್ಣ ಕೇಳಾಕ ಬಂದು ಅಲ್ಲೇ ಇಬ್ರು ಅದಾರ. ಹೊಂದಿಕ್ಯಾದರ ಅಂವಾ ಮಾಡಿಕೆಳ್ಳಾಕ ತಯಾರಿ ಅಂದ ಹಾಂಗಿತ್ತು. ಈಗ ಮದ್ವಿ ಮಾಡಿಕೊಂಡವ ಅದರ ಗಂಡ ಸತ್ತ ಮ್ಯಾಲ ಕೂಡಿಕೊಂಡಾನಲ್ಲ ರಾಮ್ಯಾ ಅಂತ! ಅವ ಕುಡ್ಕ. ಅವ್ನೂ ನಿಂಗಾಯತ್ರವ್ನೇಯಾ! ಕುಡ್ಕ ಅಂದರ ಕುಡುಕ. ನಮ್ಮೂರ್ರ ಲಮಾಣೇರ ತಾಂಡ್ಯಾ ಆತು ಅವನಾತು. ಅಲ್ಲಿ ಲಂಬಾಣೇರು ಭಟ್ಟಿ ಸರಾಯಿ ಕುಡ್ಸಿ ಕುಡ್ಸಿ ಕಲ್ಸಿ ಬಿಟ್ರು. ಒಂದಿನ ಸರಾಯಿ ಅಮಲಿನ್ಯಾಗ ಅಲ್ಲಿನೂ ಏನೋ ಹಲ್ಕಾ ಕೆಲ್ಸ ಮಾಡಾಕ ಹೋದ್ಯಂತ ಅವರು ಮೈ ಹುಳೇ ಹೊಡ್ದು ತಾಂಡ್ಯಾದಿಂದ ಓಡ್ಸಿಬಿಟ್ರು. ಈಗ ಈಕಿನ ಜೋಡ್ಸಿಗೆಂಡಾನ. ಅಂಥರಿಗೆಲ್ಲ ಈ ಚಾಳಿ ಇರ್ಲೇಬೇಕಲ್ಲ ಏನೋರೇ!" ಎಂದು ಬಹು ಗೌರವದಿಂದ ನಾನು ಶಾಸ್ತ್ರಿ ಎಂಬುದನ್ನು ತಿಳಿದು ಹೇಳಿದ. ಈ ಮಾತನ್ನು ಕೇಳಿ ಅಯ್ಯೋ! ಪಾಪ ಮುಂಡೇಗಂಡರೇ ಎಂದು ಕೊಂಡೆ ಮನದಲ್ಲಿ. ಮನಸ್ಸಿಗೆ ಹುಳಕಡಿದಂತಾಗಿ ಇವರ ಜೊತೆಯಲ್ಲಿ ಈ ಪ್ರವಾಸ ಕೈಕೊಂಡು ನಾನು ಮುರ್ಖನಾಗಿಬಿಟ್ಟೆ ಎಂದುಕೊಂಡೆ.

ಸ್ವಲ್ಪ ಹೊತ್ತಾದ ಮೇಲೆ ಅವರಿಬ್ಬರೂ ಬಂದು "ಶಾಸ್ತ್ರಿಗಳೇ ಏಳಿ. ಹೊತ್ತಾಗಿ ಹೋಯ್ತು. ಊಟ ಮುಗಿಸಿ ಬಿಡೋಣ. ಇಲ್ಲಿ ಕಥೆ ಆಗುವ ಸಂಭವವಿಲ್ಲ. ತಾಳ ಮೇಳ ಇಲ್ಲದ ಊರು" ಅಂದರು. ಆಗ ನಾನು "ಶೇಖರಯ್ಯ ಇಲ್ಲಿ ಬೇವಿನಮರದ ತಂಪಾದ ನೆಳಲು ಇದೆ. ಒಳ್ಳೇ ಗಾಳಿಯೂ ಇದೆ. ಊಟ ವಗೈರೆ ನನಗೆ ಏನೂ ಬೇಡ ಸ್ವಲ್ಪ ಅವಲಕ್ಕಿ ಬೆಲ್ಲ ತಂದು ಕೊಟ್ಟು ಬಿಡಿ. ತಿಂದು ಇಲ್ಲೇ ವಿಶ್ರಮಿಸಿಕೊಳ್ಳುತ್ತೇನೆ. ನೀವು ಊಟ ವಗೈರೆ ಮುಗಿಸಿಕೊಂಡು ಬರ್ರಿ" ಎನ್ನುತ್ತಿದ್ದಂತೆ ಹುರಿಹೊಸೆಯುತ್ತಿದ್ದ ಈರಭದ್ರಯ್ಯ ಇವರಿಬ್ಬರನ್ನು ಹಾಸ್ಯಬೆರೆತ ಮುಖದ ಕಡೆಗಣ್ಣನೋಟದಿಂದ ನೋಡುತ್ತ ತಮ್ಮ ಹಿತ್ತಿಲಿನ ಹೊಟ್ಟಿನ ಬಣವಿ ಮೈಯ್ಯುತ್ತಿದ್ದ ದನಗಳನ್ನು ಬೆದರಿಸುವವನಂತೆ ಹಾ ಹೂ ದೇ ದೇವನ್ನು ಎದ್ದು ಹೋದ. ಶೇಖರಯ್ಯ ಅವನ ಮುಖವನ್ನು ಗಮನಿಸಿ ಶಾಸ್ತ್ರಿಗಳಿಗೆ ಈ ಮನುಷ್ಯ ಬಹುಶಃ ಏನೇನನ್ನೊ ಚುಚ್ಚಿರಬೇಕು ಎಂದುಕೊಂಡು. ನಡೆದ ವೃತ್ತಾಂತವನ್ನು ಶಿವಯ್ಯನ ಹೆಂಡತಿ ಸತ್ತು ಈತ ಈಗ ಒಂಟಿಯಾಗಿ ಭವಣೆ ಪಡುತ್ತಿರುವುದನ್ನೂ ಈ ಊರಲ್ಲಿ ಒಂದು ಹೆಣ್ಣು ಇದ್ದುದನ್ನು ತಿಳಿದು ಇಲ್ಲಿಗೆ ಬಂದುದಾಗಿಯೂ ತಿಳಿಸುತ್ತ ಅಲ್ಲಿ ನಡೆದ ವಿದ್ಯಮಾನವನ್ನೆಲ್ಲ ವಿವರಿಸಿದ. ನಾನು ಈಗ ಇವರೊಡನೆ ಮುನಿಸಿಕೊಳ್ಳುವುದಾಗಲಿ ಆಕ್ಷೇಪವೆತ್ತುವುದಾಗಲಿ ಸಾಧುವಲ್ಲವೆಂದು ತಿಳಿದು "ಸರಿ, ಹೆಣ್ಣು ಹೊಂದಿಕೆಯಾದರೂ ಆಯಿತೆ? ಪಾಪ!" ಎಂದೆ. "ಇಲ್ಲ ಮಾತು ಮುಗಿಸಿಲ್ಲ ನಾವು ಹೆಣ್ಣನ್ನು ನೋಡಿದೆವು. ತಂದೆಯಲ್ಲ, ಹುಡಿಗಿ ಮುಖಲಕ್ಷಣವೇನೊ ಚನ್ನಾಗಿದೆ. ಪೋರಿ ಬಹಳ ತೀರಾ ಚಿಕ್ಕ ವಯಸ್ಸು ಬೇರೆ 16-17 ವರ್ಷ ಇರಬಹದು. ದುಡ್ಡುಕಾಸು ವಸ್ತು ವಡವೆಗೆ ಕೊರತೆಯಿಲ್ಲ. ಆದರೆ ಶಿವಯ್ಯನಿಗೆ ಈಗಾಗಲೇ 38-40 ವರ್ಷ. ಅದಕ್ಕಾಗಿ ಯೋಚನೆ. ಅವರೇನೋ ಕೊಡುವುದಕ್ಕೆ ಸಿದ್ಧ. ಅವರಿಗೆ ಶ್ರಾವಣ ಕಳೆದುಕೊಂಡು ಬರುತ್ತೇವೆಂದು ಹೇಳಿದ್ದೇವೆ. ಈಗ ಅಲ್ಲೇ ಊಟಕ್ಕೆ ಏರ್ಪಾಡಾಗಿದೆ. ನೀವು ಏಳಬೇಕು" ಎಂದು ದುಂಬಾಲು ಬಿದ್ದರು. ನನ್ನ ಮನಸ್ಸು ಆ ಹೆಣ್ಣುಮಗಳ ಚರಿತ್ರೆ ಕೇಳಿದ ಮೇಲೆ ಅಸಹ್ಯವಾಗಿ "ನೀವು ಊಟಮುಗಿಸಿಕೊಂಡ. ಬನ್ನಿ. ನನ್ನನ್ನು ಒತ್ತಾಯಿಸಬೇಡಿ" ಎಂದು ಖಂಡತುಂಡಾಗಿ ಹೇಳಿಬಿಟ್ಟೆ. ಅವರು ನಿರುಪಾಯರಾಗಿ ಹೋಗಿ ಅಲ್ಲಿ ಉಂಡು ನನಗೆ ಅವಲಕ್ಕಿ ನೆನೆಸಿಕೊಂಡೇ ಬೆಲ್ಲಸಹಿತ ಬಂದುಬಿಟ್ಟರು. ನಾನು ಅವನ್ನು ತಿಂದು ನೀರು ತರಿಸಿ ಕುಡಿದು ಬಿಟ್ಟೆ. ಇಂಥ ತಿಂಡಿ ತಿಂದು ನನಗೆ ಅನುಭವವಿತ್ತು. ಈ ಸಂದರ್ಭದಲ್ಲಿ ನಾನು ಚಿಂತೆಗೊಳಗಾದೆ. ಇವರಿಬ್ಬರ ತಳ ಬುಡ ನನಗೆ ಅರ್ಥವೇ ಆಗಲಿಲ್ಲ. ನಿರುಪಾಯನಾದೆ. "ಶೇಖರಯ್ಯ ನಾವೀಗ ಹೋಗುವುದೆಲ್ಲಿಗೆ?" ಎಂದೆ. ಆತ ನಾವು ಈಗ ಮುದೇನೂರಿಗೆ ಹೋಗಿ ಅಲ್ಲಿ ನೋಡಿಕೊಂಡು ಇಳೆಹೊಳೆ - ಧೂಳೆಹೊಳೆಗಳಿಗೆ ಹೋಗಿ ಶಿವಮೊಗ್ಗಕ್ಕೆ ಹೋಗಿ ಬಿಡೋಣ ಎಂದ. "ಅಪ್ಪಾ, ಯಾಕೋ ನನಗೂ ಆಲಸ್ಯ, ತಿರುಗಾಟ ಬಹಳ ಆಯಿತು. ಮುದೇನೂರೊಂದನ್ನು ನೋಡೋಣ. ನೀನು ಆ ಊರ ಬಗ್ಗೆ ಬಹಳ ಹೇಳುತ್ತೀಯೆ. ಅಲ್ಲಿ ನಮಗೆ ಲಾಭವೇ ಆಗಲಿ ಲುಕ್ಸಾನೇ ಆಗಲಿ ನೋಡಿಕೊಂಡು ಶಿವಮೊಗ್ಗೆಗೆ ಹೋಗಿ ಬಿಡೋಣ" ಎಂದೆ. ಆಗಲಿ ಏಳಿ, ಅಲ್ಲಿಗೆ ಹೋದ ಮೇಲೆ ಮುಂದಿನ ಯೋಚನೆ ಮಾಡೋಣ ಎಂದು ಹೇಳಿದ ಮುದೇನೂರು ಕಡೆಗೆ ನಮ್ಮ ಕಂಪನಿಯ ಪ್ರಯಾಣ ಸಾಗಿತ್ತು. (ನಾವು ಮುದೇನೂರಿಗೆ ಹೇಗೆ ಹೋದೆವೋ ಏನೋ ಜ್ಞಾಪಕ ಹಾರಿ ಹೋಗಿದೆ) ಮುದೇನೂರನ್ನು ಸಾಯಂಕಾಲದ ಆರುಘಂಟೆ ಹೊತ್ತಿಗೆ ತಲುಪಿದ್ದಂತೂ ಜ್ಞಾಪಕದಲ್ಲಿದೆ. (ತುಂಗಭದ್ರಾ ಹೊಳೆಯ ದಂಡೆಯಲ್ಲಿಯೇ ಹರಿಹರದಿಂದ ನಡೆದುಕೊಂಡು ಹೋದುದು ಮಸಕುಮಸಕಾಗಿ ಜ್ಞಾಪಕ)

ಅದು ಶೇಖರಯ್ಯನ ಮನೆತನದ ಶಿಷ್ಯರಿರುವ ಸ್ಥಳ. ಅಲ್ಲದೆ ಶೇಖರಯ್ಯನಿಗೆ ಎಳೆದು ಕಟ್ಟಿಕೊಳ್ಳಬೇಕಾದಂತಹ ಹಳೆಗಾಲದ ಸಂಬಂಧ ಇತ್ತು. ಆ ಸಂಬಂಧದ ಎಳೆ ಹಿಡಿದು ಶೇಖರಯ್ಯ ಯಾರು ಯಾರದೋ ಮನೆಗೆ ನನ್ನನ್ನು ಕರೆದುಕೊಂಡು ಹೋದ. ಊಟೋಪಚಾರಕ್ಕೆ ಕೊರತೆಯಾಗಲಿಲ್ಲ. ಹೊಟ್ಟೆ ಹಸಿದ ನನಗೆ ಊಟೋಪಚಾರ ವ್ಯವಸ್ಥೆಯಾಯಿತು. ಅವರೂ ಊಟ ಮಾಡಿದರು. ಅಲ್ಲಿನ ಕೆಲವು ಪ್ರತಿಷ್ಠಿತರಿಗೆ ನನ್ನ ಪರಿಚಯವನ್ನು ಮಾಡಿದ ಮೇಲೆ "ಕಥೆಯನ್ನು ನಾಳೆ ಇಟ್ಟುಕೊಳ್ಳೋಣ. ಈಗಾಗಲೆ ಹೊತ್ತಾಗಿ ಹೋಗಿದೆ. ಕಥೆಗೆ ತಕ್ಕ ವ್ಯವಸ್ಥೆ ಮಾಡಿ ಊರಲ್ಲೆಲ್ಲ ಡಂಗುರ ಸಾರಿಸಬೇಕಾಗುತ್ತದೆ. ಹಾಗೇ ಮಾಡಲಾಗುವುದಿಲ್ಲ. ಪಟ್ಟಿ ಗಿಟ್ಟಿ ಎತ್ತಬೇಕು, ಗ್ಯಾಸ್‌ಲೈಟ್, ಹಾರ್ಮೋನಿಯಂ, ತಬಲಾ ಏನೆಲ್ಲ ಹೊಂದಿಸಬೇಡವೆ? ನಾಳೆ ಬೇಗನೆ ವ್ಯವಸ್ಥೆ ಮಾಡಿ ಚೆನ್ನಾಗಿಯೇ ಕಾರ್ಯಕ್ರಮ ಮಾಡಿ ಮುಗಿಸೋಣ. ಶಾಸ್ತ್ರಿಗಳು ಬರೋದು ಹೆಚ್ಚೋ! ನಾವು ಮಾಡಿಸೋದು ಹೆಚ್ಚೊ! ಬೇಕೆಂದಾಗ ಸಿಗುವರೇನು? ಈಗ ತಾವಾಗಿ ಬಂದಿದಾರೆ. ಈ ಸಂದರ್ಭ ಕಳಕೊಂಡರೆ ಹೇಗೆ?" ಎಂದು ಅಲ್ಲಿಯ ಜನ ಬಹು ಸಿಹಿ ಯಾಗಿಯೇ ಮಾತಾಡಿದರು. ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದರೆ ಹೇಗೆ ಎಂಬ ಬಸವಣ್ಣನ ಮಾತನ್ನು ನೆನೆಸಿಕೊಂಡೆ. ಮುತ್ತಿನ ಹಾರದಂತೆ ನುಡಿದರು. ಮುತ್ತಿನಲ್ಲಿ ಲಾವಣ್ಯ ತುಂಬಿದಂತೆ ಮಾತಿನಲ್ಲಿ ಶಬ್ದಶಬ್ದದಲ್ಲೂ ಲಾವಣ್ಯದ ಸವಿಯಿದ್ದುದು ತತ್ಕಾಲದಲ್ಲಿ ನನಗಂತೂ ಹರ್ಷ ತಂದಿತು ನಾಳೆ ಕಥೆ ಆಗಲಿ ಬಿಡಲಿ, ಮಾತಿನ ಸವಿಯಿಂದಲೇ ತೃಪ್ತಿ ಪಡಿಸಲು ಬರುತ್ತದೆ ಎಂಬುದು ಮುದೇನೂರ ಜನರ ಮಾತಿನಿಂದ ಅನುಭವಕ್ಕೆ ಬಂತು. ನಮಗೆ ಮಲಗಲು ಹೊಸದಾಗಿ ಕಟ್ಟಿಸಿ ಇನ್ನು ಪ್ರವೇಶ ಮಾಡದಿದ್ದ ಮನೆಯಲ್ಲಿ ದೀಪ ಹಚ್ಚಿ ಗುಡಾರ ಹಾಸಿ ವ್ಯವಸ್ಥೆ ಮಾಡಿದರು. ಬಹಳ ದಣಿದು ಹೋಗಿದ್ದ ನನಗೆ ನಿದ್ರೆ ಬಂದು ಮಲಗಿಬಿಟ್ಟೆ. ಆ ಮನೆ ದೊಡ್ಡದು ಅದರ ಒಂದು ಪಾರ್ಶ್ವದಲ್ಲಿ ಬಿಜಾಪುರ ಕಡೆಯಿಂದ ಅಲ್ಲಿಗೆ ಕೂಲಿಯ ಕೆಲಸಕ್ಕೆ ಬಂದಿದ್ದ ಇಬ್ಬರು ಗಂಡಸರು, ಇಬ್ಬರು ಮೂವರು ಹೆಂಗಸರೂ ರಾತ್ರಿ ಮಲಗಿಕೊಳ್ಳುತ್ತಿದ್ದರು. ಹಗಲು ಹೊತ್ತು ಹೊರಗೇ ಅಡಿಗೆ ಮಾಡಿಕೊಂಡು ಉಂಡು ತಿಂದು ಕೆಲಸ ಮಾಡಿ ಬಂದು ರಾತ್ರಿ ಕಳೆಯಲು ಮನೆ ಆಶ್ರಯ ಕೊಟ್ಟಿತ್ತು. ಶಿವಯ್ಯ ಶೇಖರಯ್ಯ ನಾನು ಮಲಗಿದಾಗ ಇನ್ನೂ ಕುಳಿತೇ ಇದ್ದರು. ಬಿಜಾಪುರ ಕಡೆಯ ಕೂಲಿಕೆಲಸದ ಹೆಂಗಸರೊಡನೆ ಗಂಡಸರೊಡನೆ ಏನೇನೋ ಮಾತುಕತೆ ಬೆಳೆಸಿ ಕೊಕ್ಕೊಕ್ಕೊ ಎಂದು ನಗುವುದನ್ನು ಶಿವಯ್ಯ ನಡೆಸಿದ್ದ. ನಾನು ಏನಾದರೂ ಮಾಡಿಕೊಳ್ಳಲೆಂದು ಮಲಗಿಬಿಟ್ಟೆ. ಗಾಢನಿದ್ರೆ ಹತ್ತಿ ಬಿಟ್ಟಿತು. ನಾನು ಎಷ್ಟು ಹೊತ್ತಿಗೇ ಮಲಗಲಿ, ಬೆಳಗಿನ ಐದು ಘಂಟೆಗೆ ಎಚ್ಚರವಾಗಿ ಬಿಡುತ್ತಿತ್ತು. ಇದು ನನ್ನ ಬಹುದಿನದ ಅಭ್ಯಾಸ. ಐದು ಘಂಟೆಗೆ ಎದ್ದೆ. ಬೆಳದಿಂಗಳು ಇತ್ತು. ಹೊಳೆಯ ಕಡೆ ಹೋಗಿಬಿಟ್ಟೆ. ನಾನು ಹೊಳೆಗೆ ಹೋಗಿ ಬರುವಷ್ಟರಲ್ಲಿ ರಾದ್ಧಾಂತ ನಡೆದು ಹೋಗಿತ್ತು. ಶಿವಯ್ಯ ರಾತ್ರಿ ಕೂಲಿ ಜನರೊಡನೆ ಮಾತಿನ ಸಂಪರ್ಕ ಬೆಳೆಸಿದಂತೆ, ನಾನು ಹೊಳೆ ಕಡೆ ಹೋದ ಮೇಲೆ ದೇಹ ಸಂಪರ್ಕಕ್ಕೂ ಹೋಗಿಬಿಟ್ಟಿದ್ದನಂತೆ. ಅವನು ಸಂಪರ್ಕ ಪಡೆಯಲೆತ್ನಿಸಿದ ಸ್ತ್ರೀ ಬಾಯಿ ಬಾಯಿ ಬಡಿದುಕೊಂಡು ಹುಯ್ಯಲೆಬ್ಬಿಸಿ ಬಿಟ್ಟಳಂತೆ. ವಿಜಾಪುರದ ಆ ಒರಟು ಜನ ಶಿವಯ್ಯನಿಗೆ ಐದಾರು ಏಟು ಹಾಕಿ ಲುಚ್ಚಾ ಇತ್ಯಾದಿ ಗೌರವಾರ್ಹ ಬಿರುದನ್ನು ಕೊಟ್ಟು ಕಪೋಲ ಪಾಲಿಯಿಂದ ಅಶ್ರುಧಾರೆಯಿಳಿಯುವಂತೆ ಮಾಡಿಬಿಟ್ಟರಂತೆ. ಹೊಳೆಯಿಂದ ಆರು ಘಂಟೆಯ ಸುಮಾರಿಗೆ ಮನೆ ಕಡೆಗೆ ಬರುತ್ತಿದ್ದ ನನಗೆ ಯಾವೂರು ಎಂದು ಕೇಳಿದ ಓರ್ವನಿಗೆ ಶಿವಮೊಗ್ಗ ಎಂದು

ಹೇಳಿದಾಗ ಶಿವಮೊಗ್ಗದಿಂದ ಬಂದಿರುವ ಇಬ್ಬರು ಹೊಸ ಮನೆಯಲ್ಲಿರುವವರು ಗೊತ್ತೇನು ಎಂದ. ನನಗಾಗಲೇ ಎದೆ ಧಸಕ್ ಎಂದಿತು. ಗೊತ್ತು, ಏನು ಸಮಾಚಾರಾ? ಎಂದೆ. ಅಯ್ಯೋ! ಪಾಪಿ ಮುಂಡೇಮಗ! ದೊಡ್ಡ ಮನುಸರು ಎಂದು ಮನೆಯಲ್ಲಿ ಹಾಸಲು ಹೊದೆಯಲು ಕೊಟ್ಟು ಉಪಚಾರಮಾಡಿದಕ್ಕೆ ತಕ್ಕನಾಗಿ ಮಾಡಿಬಿಟ್ಟ ಎಂದ. ನಾನು ಮುಂದೆ ಹೆಜ್ಜೆಯಿಡಲೂ ಮನಸ್ಸುಬಾರದೆ, ಆ ವ್ಯಕ್ತಿಯನ್ನು ನೋಡುತ್ತ "ಏನಾಯಿತು, ದಯವಿಟ್ಟು ಹೇಳಬಾರದೆ ಅಪ್ಪಾ" ಎಂದಾಗ "ಏನು ಹೇಳೋದು ಪಾಪ ಕೂಲಿ ನಾಲಿ ಮಾಡಿಕೊಂಡು ಹೊಟ್ಟೆ ತುಂಬಿಸಿಕೊಳ್ಳಲು ಬಂದಿದ್ದ ಆ ಹೆಂಗಸರಲ್ಲಿ ಒಬ್ಬಳನ್ನು........ ಹೋಗಿ ಸಿಕ್ಕುಬಿದ್ದು ಮೈ ಹುಳಿಯುವಂತೆ ಒದಿಸಿಕೊಂಡು ಬಿಟ್ಟ. ಆ ಹೆಂಗಸು ಅವನ ಮೈಮೇಲೆ ಉಗುಳಿ ಬಿಟ್ಟಳು" ಎಂದು ಹೇಳಿದಾಗ ನನ್ನ ರಕ್ತವೇ ಹೆಪ್ಪುಗಟ್ಟಿದಂತಾಗಿ ಹೋಯಿತು. ಅಲ್ಲಿಗೆ ಪೋಗುವುದಕ್ಕೆ ನಾಚಿಕೆ ಮತ್ತು ಭಯ ಆವರಿಸಿ ತುಂಗಭದ್ರೆಯ ಮಳಲು ರಾಶಿಯ ಮೇಲೆ ಕುಸಿದು ತಲೆ ಮೇಲೆ ಕೈ ಹೊತ್ತುಕೊಂಡು ಕುಳಿತು ಬಿಟ್ಟೆ. ಏನೂ ತೋಚಲಿಲ್ಲ. ಬಹಳ ಹೊತ್ತು ಕುಳಿತೇ ಕುಳಿತೆ. ಇತ್ತ ಶೇಖರಯ್ಯ 'ಶಾಸ್ತ್ರಿಗಳು ಬೆಳಿಗ್ಗೆ ಐದು ಘಂಟೆಗೇ ಹೋದವರು ಎತ್ತ ಹೋದರೋ ಏನಾದರೊ' ಎಂದು ಚನ್ನಾಗಿ ಒದೆ ತಿಂದು ಮೈನೋವು ಮಾಡಿಕೊಂಡಿದ್ದ ಶಿವಯ್ಯನನ್ನು ಕರೆದುಕೊಂಡು ಪ್ರಾತರ್ವಿಧಿಗಳಿಗಾಗಿ ಹೊಳೆಯ ಕಡೆಗೆ ಬರುತ್ತಿದ್ದುದನ್ನು ದೂರದಿಂದಲೇ ನೋಡಿ ದಾರಿ ಬಿಟ್ಟು ದೂರ ಹೋಗಿ ಅಲ್ಲಿ ತಣ್ಣನೆಯ ನುಣ್ಣನೆಯ ಮಳಲ ಮೇಲೆ ಕುಕ್ಕರಿಸಿದ್ದೆ. ಮುಂದೆ ಮುಂದೆ ಶೇಖರಯ್ಯ. ಹಿಂದೆ ಹಿಂದೆ ಹರಿದ ಅಂಗಿ, ಕೆದರಿದ ತಲೆ, ಒಣಗಿಹೋದ ತುಟಿಯ ಶಿವಯ್ಯ ತಲೆ ಕೆಳಗೆ ಮಾಡಿ ಬರುತ್ತಿದ್ದುದನ್ನು ಗಮನಿಸಿ ಏನೂ ಮಾತಾಡದೆ ಸುಮ್ಮನೆ ದೆವ್ವ ಬಡಿದವರಂತೆ ಕುಳಿತಿದ್ದೆ. ಅವರು ಅಲ್ಲಿಗೆ ಬಂದರು. ಅವರೂ ಗರಬಡಿದವರಂತಾಗಿ ನನ್ನ ಮುಂದೆ ಮಾತಿಲ್ಲದೆ ಸುಮ್ಮನೆ ಕುಳಿತು ಬಿಟ್ಟರು. ಸ್ವಲ್ಪ ಹೊತ್ತು ಒಬ್ಬರ ಮುಖವನ್ನೊಬ್ಬರು ನೋಡುತ್ತಿದ್ದೆವು. ಪರಸ್ಪರ ನಮ್ಮ ಕಣ್ಣುಗಳೇ ಮಾತಾಡ ತೊಡಗಿದವು. ಕಣ್ಣಿನ ಈ ಮಾತುಗಳೇ ಬಾಯಿಂದ ಮಾತನಾಡುವ ಮಾತಿಗಿಂತಲೂ ಅರ್ಥಪೂರ್ಣವಾಗಿದ್ದವು "ಒಳ್ಳಿದನು ಕಳ್ಳರೊಡನಾಡಿ ಅವ ಶುದ್ಧ ಕಳ್ಳ ತಾನಕ್ಕು" "ದುಷ್ಟರ ನೆರೆಯ ಜಗದೊಳಗೆ ನಷ್ಟ ಕಾಣಯ್ಯ" "ಕ್ಷಣಮಾತ್ರವಾದರೂ ಗುಣಿಗಳೊಡನಾಡುವುದು, ಗುಣಹೀನರುಗಳೊಡನಾಡೆ ಬಹುದುಕ್ಕನವಣಲೊಳಿದ್ದಂತೆ ಸರ್ವಜ್ಞ" ಎಂಬ ಸರ್ವಜ್ಞನ ಮಾತುಗಳನ್ನು ಮೆಲುಕು ಹಾಕತೊಡಗಿದೆ. ಬೇಗ ಈ ಎರಡೂ ಶನಿಗಳನ್ನು ತೊಲಗಿಸಬೇಕು. ಜನರ ಯೋಗ್ಯತೆ ತಿಳಿದು ಸ್ನೇಹ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ನಾನು ಸರ್ವನಾಶವಾಗಿ ಹೋದೇನೆಂಬ ಭಯ ನನ್ನಲ್ಲಿ ಆವರಿಸಿ ಮೈನಡುಗಿಂತಾಗಿ ಹೋಯಿತು. ಅನಂತರ ಮೈನಡುಕ ಸ್ಥಿರತೆಗೊಂಡಿತು. ನನ್ನ ಕೈಯಚೀಲಗಳನ್ನು ತರಿಸಿ ಇಲ್ಲಿಂದ ಹೀಗೇ ಹಿಂದಕ್ಕೆ ಹರಿಹರಕ್ಕೆ ಹೋಗಿ ಅಲ್ಲಿಂದ ಬಸ್ಸು ಹಿಡಿದು ಶಿವಮೊಗ್ಗ ಬೀಳಬೇಕು. ಇವರನ್ನು ಕಟ್ಟಿಕೊಂಡು ಕಥೆಗಿತೆ ಎಂದು ದೇಶದೇಶ ತಿರುಗಾಡುವ ಈ ಪುಡಿಗಾಸಿನ ಸಂಪಾದನೆಯ ಆಸೆ ಸಾಕೆಂದು ಮನಸ್ಸಿನಲ್ಲಿ ತೀರ್ಮಾನಿಸಿದೆ. ಮೌನವನ್ನು ನಾನೇ ಮುರಿದು "ಏನ್ರೀ ಶೇಖರಯ್ಯ ಈ ಗಲಾಟೆ? ಛೇ ಇದೊಂದು ದೊಡ್ಡ ಅಪಮಾನಕರ ಘಟನೆ ನಡೆದು ಹೋಯಿತಲ್ರೀ. ನನಗೆ ಮನ್ನಣೆ ಮಾಡಿ ಉಪಚರಿಸಿದರಲ್ಲಾ! ಈಗ ನಾನು ಯಾರಿಗೂ ಮುಖತೋರಿಸದೆ ಹರಿಹರಕ್ಕೆ ಹೋಗಿ ಬಿಡುತ್ತೇನೆ ಮಹಾರಾಯ. ಸಾಕು, ದಯವಿಟ್ಟು ನನ್ನ ಕೈ ಚೀಲ ತಂದು ಕೊಟ್ಟು ಬಿಡಿ" ಎಂದೆ. ಆಗ ಶಿವಯ್ಯ "ಶಾಸ್ತ್ರಿಗಳೇ, ನಿಮ್ಮ ಪಾದದಾಣೆಯಾಗಿ ಯಾವ ತಪ್ಪೂ ಮಾಡಲಿಲ್ಲ. ಆ ಬೇವಾರ್ಸಿ ಹೆಣ್ಣು ತಾನೇ ನನ್ನ ಹತ್ರಕ್ಕೆ ಬಂದುಬಿಟ್ಟು ಏನೋ ಚೇಷ್ಟೆಮಾಡಿದಳು. ಜೇಬಿನಲ್ಲಿ

ಕೈ ಹಾಕಿ ಏನೇನೋ ಹುಡುಕಿದಳು. ನನಗೆ ಸಿಟ್ಟು ಬಂತು. ಅವಳನ್ನು ಆಚೆಗೆ ದಬ್ಬಿ ಬಿಟ್ಟೆ. ಅಷ್ಟಕ್ಕೆ ಅವಳು ಈ ಬೊಬ್ಬಾಟ ಎಬ್ಬಿಸಿಬಿಟ್ಲು. ಆ ಹೆಂಗಸರೆಲ್ಲ ಇದೇ ಕಸಬು" - ಹೀಗೆ ಏನೇನೋ ತನ್ನ ತಪ್ಪು ಮುಚ್ಚುವ ಮಾತಿನ ಮಾಲೆಗೆ ಪ್ರಾರಂಭಿಸಿ ಬಿಟ್ಟ. "ಶಿವಯ್ಯನವರೇ, ನೀವು ಅವರ ಬಗೆಗೆ ದೋಷಾರೋಪಣೆಯನ್ನೇನೋ ಮಾಡುತ್ತಿರಿ, ಅದಿರಲಿ. ಅವರು ಅದೇ ಕಸಬಿನವರೆಂದಿರಲ್ಲಾ, ಇದು ನಿಮಗೆ ಗೊತ್ತಾದುದು ಹೇಗೆ? ಅಂಥ ಜನರೊಡನೆ ನೀವು ಮಾತಿಗೆ ಕುಳಿತು ಸಲಿಗೆ ಬೆಳೆಸಿದಾಗಲೇ ನಾನು ಸುಮ್ಮನೆ ಮಲಗಿಕೊಳ್ಳಿರೆಂದು ಹೇಳಿ ಗದರಿಸಬೇಕೆಂದಿದ್ದೆ. ನೀವು ಇಷ್ಟು ದೂರ ಹೋಗಿ ರಾದ್ಧಾಂತಕ್ಕೆ ಅವಕಾಶ ಕೊಡುವರೆಂಬುದನ್ನು ನಾನು ಯೋಚಿಸಲಿಲ್ಲ. ಒಮ್ಮಿಂದೊಮ್ಮೆಗೆ ಕಂಡಕಂಡ ಹೆಂಗಸರು ಮತ್ತು ಅವರ ಗಂಡಂದಿರೊಂದಿಗೆ ಸಲಿಗೆ ಬೆಳೆಸಲು ಕಾರಣವಿರಬೇಕಲ್ಲಾ? ಆಗಲೇ ನೀವು ಆ ಹೆಂಗಸರ ಲಕ್ಷಣಗಳನ್ನು ಅಭ್ಯಾಸ ಮಾಡಿ ಈ ಅಕಾರ್ಯಮಾಡಿ ಈಗ ನಮ್ಮೆಲ್ಲರನ್ನು ಅಪಮಾನದ ಸುಳಿಗೆ ಸಿಕ್ಕಿಸಿ, ಹೇಳದೆ ಕೇಳದೆ ಓಡಿಹೋಗುವ ಹಾಗೆ ಮಾಡಿ ಬಿಟ್ಟಿರಲ್ಲಾ? ನನ್ನ ಗತಿ ಏನಾಗಬೇಕು ಹೇಳಿ. ಒಂದು ವೇಳೆ ಆ ಜನರೇನಾದರೂ ಪೋಲಿಸ್ ಕಂಪ್ಲೆಂಟ್ ಗಿಂಪ್ಲೆಂಟ್ ಅಂತಾ ಮುಂದುವರಿದರೆ ನಾವೆಲ್ಲ ಸ್ಟೇಷನ್ನಿಗೆ ಹೋಗಬೇಕಲ್ಲವೆ? ವಿವೇಕ ಬೇಡವೆ? ಹಾಲಿವಾಣದಲ್ಲಿ ನಮಗೆ ಸಂಬಂಧವಿಲ್ಲದ ವಿಷಯದಲ್ಲಿ ಪ್ರವೇಶಮಾಡಿ ಮೈ ಮೇಲಿನ ಬಟ್ಟೆ ಬರೆಗಳನ್ನೆಲ್ಲ ಹರಿದುಕೊಂಡು ಬಂದಿರಿ. ಆ ಊರಿನವರೇ ಸುಮ್ಮನೆ ಇರುವಾಗ ದಾರಿಹೋಕರಾದ ನಾವೇಕೆ ಪ್ರವೇಶ ಮಾಡಿ ಮಾರಿಗೆ ಊರು ಹೊಕ್ಕು ಹೋಗೆಂದು ಆಹ್ವಾನಿಸುವುದೇ? ಆ ಘಟನೆ ನಡೆದಾಗಲೇ ನಾನು ಅಲ್ಲಿಂದ ಹಿಂದಿರುಗಬೇಕೆಂದು ಯೋಚಿಸಿದ್ದೆ. ಬಹುಶಃ ಅಲ್ಲಿನ ಮನಸ್ಸಿನಲ್ಲಿನ ಯೋಚನೆಯನ್ನು ಕಾರ್ಯಗತಗೊಳಿಸಿದ್ರೆ ಈ ಅನಿವಾರ್ಯ ಅಪಮಾನ ನನಗೆ ಆಗುತ್ತಿರಲಿಲ್ಲ. ಈಗ ನನ್ನ ಮನಸ್ಸು ಜರ್ಜರಿತಗೊಂಡು ವಿಚಾರ ಶೂನ್ಯನನ್ನಾಗಿಮಾಡಿ ಬಿಟ್ಟಿದೆ. ಮತ್ತೊಂದು ಹಳ್ಳಿಗೆ ಹೆಣ್ಣು ನೋಡಲು ಹೋದಿರಿ. ನಾನು ಅಲ್ಲಿಗೆ ಊಟಕ್ಕೆ ಏಕೆ ಬರಲಿಲ್ಲ ಗೊತ್ತೆ? ನೀವು ಯಾರ ಮನೆಗೆ ಹೆಣ್ಣೆಗೆಂದು ಹೋಗಿದ್ದಿರೋ ಅವರ ಬಂಡವಾಳವೆಲ್ಲ ನನಗೆ ಗೊತ್ತಾಗಿ ಹೋಗಿತ್ತು. ಅವೆಲ್ಲ ನಾವು ಹೋಗಬಾರದ ಸ್ಥಳಗಳೆಂಬುದರ ಅರಿವಾಗಿ ಅವಲಕ್ಕಿ ಬೆಲ್ಲದಿಂದಲೇ ಹಸಿವು ನೀಗಿಸಿಕೊಳ್ಳಬೇಕಾಯಿತು. ನೀವೇ ಪ್ರತ್ಯೇಕ ವ್ಯವಹರಿಸಿದಾಗ ಏನಾದರೂ ಮಾಡಿಕೊಳ್ಳಿ. ನಮ್ಮ ಹಿಂದೆ ಬಂದಾಗ ನಮ್ಮ ವೃತ್ತಿಗೌರವ, ವ್ಯಕ್ತಿಗೌರವಗಳಿಗೆ ಅನುಗುಣವಾಗಿ ನಡೆದುಕೊಳ್ಳಬೇಕಲ್ಲವೆ? ಮನಸ್ಸಿಗೆ ಬಂದ ಹಾಗೆ ನಡೆದರೆ ನಮಗೆ ಯಾರು ಬೆಲೆ ಕೊಡುತ್ತಾರೆ ಹೇಳಿ; ಮನೆಯೊಳಗೆ ಹೆಜ್ಜೆ ಇರಗೊಟ್ಟಾರೆಯೆ? ನಾವೇ ಇನ್ನೊಬ್ಬರು ಇಂಥವರು ಮನೆಗೆ ಬಂದರೆ ಅವರನ್ನು ಹೇಗೆ ಕಾಣುತ್ತೇವೆ ಹೇಳಿ? ನಮ್ಮ ಹಾಗೆ ಅವರೂ ಅಲ್ಲವೇ? ನಮ್ಮ ನಮ್ಮ ಸಂಸ್ಕಾರಗಳು ಏನೇ ಇರಲಿ, ಮನಸ್ಸಿನ ಅನೇಕ ಮುಖದ ಹುಚ್ಚುಗಳು ಎಂಥವೇ ಆಗಿರಲಿ, ಕಡಿವಾಣವನ್ನು ಇಂಥ ಸಂದರ್ಭದಲ್ಲಾಗಲಿ ಎಳೆದು ಹಿಡಿಯಬಾರದೆ. ನಮ್ಮ ಗತಿಯೇನು? ನೀವೇ ಹೇಳಿ? ನಾನೀಗ ಮುದೇನೂರಿಗೆ ಹೋಗಿ ಅಲ್ಲಿನ ಪ್ರತಿಷ್ಠಿತರೆದುರು ಹೋಗಿ ನಿಂತರೆ ಎಷ್ಟು ಚಿಕ್ಕಮನುಷ್ಯನಾಗಿ ಬಿಡುತ್ತೇನೆ ಗೊತ್ತೇ? ಅವರು 'ಮೊದಲು ಇಲ್ಲಿಂದ ಹೊರಡಿ' ಎನ್ನಲಿಕ್ಕಿಲ್ಲವೆ? ಬೇಡಪ್ಪ! ನಾನಿನ್ನು ಮುದೇನೂರ ಊರೊಳಗೆ ಹೋಗಲಾರೆ. ಶೇಖರಯ್ಯ, ದಯಪಿಟ್ಟು ಅಲ್ಲಿರುವ ನನ್ನ ಬಟ್ಟೆ ಬರೆ, ಕೈಚೀಲ ತಂದುಕೊಟ್ಟುಬಿಡು. ನಾನು ಇಲ್ಲಿಂದಲೇ ಊರಗೆ ಹೊರಡುತ್ತೇನೆ. ನಿಮಗೂ ಶಿವಮೊಗ್ಗೆಯವರೆಗೆ ಬಸ್ ಚಾರ್ಜು ಕೊಟ್ಟುಬಿಡುತ್ತೇನೆ.

ಊರು ಸೇರಿಕೊಂಡುಬಿಡಿ. ಮುಂದೆ ನೋಡೋಣ" ಎಂದು ವ್ಯಥಿತ ಹೃದಯನಾಗಿ ನುಡಿದೆ. ಶಿವಯ್ಯ ಹಲ್ಲಿನಿಂದ ಉಗುರು ಕಡಿದುಕೊಂಡು ಆಗಾಗ ಉಗುಳುತ್ತ, ಹರಿದ ಅಂಗಿಯನ್ನು ಸರಿಪಡಿಸಿಕೊಳ್ಳುತ್ತ, ಅತ್ತ ಇತ್ತ ಆಗೊಮ್ಮೆ ಈಗೊಮ್ಮೆ ಭಯಗ್ರಸ್ಥನಂತೆ ನೋಡುತ್ತ ವಿಷಣ್ಣವದನನಾಗಿ, ತುಟಿ ಒಣಗಿಸಿಕೊಂಡು ಕುಳಿತಿದ್ದ. ಶೇಖರಯ್ಯ "ಶಾಸ್ತ್ರಿಗಳೇ, ಆದುದ್ದಾಗಿಹೋಯಿತು. ನಾವು ಊರುಬಿಟ್ಟು ಹೊರಟ ಘಳಿಗೆ ಚೆನ್ನಾಗಿರಲಿಲ್ಲವೆಂದು ತೋರುತ್ತದೆ. ಶಿವಯ್ಯ ಖಂಡಿತ ತಪ್ಪುಗಾರನೇ ಅಲ್ಲ. ಆದರೂ ಕೆಟ್ಟ ಅಪವಾದ ತಲೆ ಮೇಲೆ ಬಂದುಬಿಡ್ತು. ಆಳಿಗೊಂದು ಮಾತನಾಡಿಬಿಟ್ಟರು. ಮಾಡುವುದೇನಿದೆ ಏಳಿ, ಹೋಗೋಣ" ಎಂದ. ನಾನು 'ಎಲ್ಲಿಗೆ ಹೋಗುವುದು' ಎಂದೆ. ಊರೊಳಗೆ ಹೋಗಿ ಹಿರೇಮಠದ ಅಯ್ಯನವರಿಗೆ ಹೇಳಿ. ಮುಂದೆ ಅವರು ಹೇಗೆ ಹೇಳುತ್ತಾರೆಯೋ ಹಾಗೆ ಮಾಡೋಣ" ಎಂದ ಜೋಲುಮುಖದಿಂದ. "ಶೇಖರಯ್ಯಾ, ನಾನು ಖಂಡಿತ ಬರುವುದಿಲ್ಲ. ನನ್ನ ಬಟ್ಟೆ ಬರೆ ತಾಳ ಪುಸ್ತಕವಿಲ್ಲದಿದ್ದರೂ ಚಿಂತೆಯಿಲ್ಲ. ಮತ್ತೆ ಕೊಂಡುಕೊಳ್ಳಲು ಬಂದೀತು. ಮಾನ-ಮರ್ಯಾದೆ ಕೊಂಡುಕೊಳ್ಳುವ ವಸ್ತುವಲ್ಲ ತಾನೆ? ನಿಮ್ಮ ಹಿಂದೆ ಬಂದವರು ಇಂಥ ಅಚಾತುರ್ಯ ಮಾಡಿಬಿಟ್ಟರೆಂದು ಅವರು ಎಂದರೆ ನಾನು ಅವರಿಗೆ ಏನು ಹೇಳಲಿ! ನಾನಿಲ್ಲದಾಗ ಅವರೇನಾದರೂ ಅಂದುಕೊಳ್ಳಲಿ; ನಮಗೆ ಕೇಳಿಸುವುದಿಲ್ಲವಲ್ಲ! ಅವರಿಂದ ಅನ್ನಿಸಿಕೊಂಡ ಮೇಲೆ ಮಾನಸಿಕವಾಗಿ ನಾನು ನಿಮಿಷ ನಿಮಿಷಕ್ಕೂ ಸಾಯುತ್ತೇನೆ. ಹಾಗೆ ಸಾಯುವುದಕ್ಕಿಂತ ಹೀಗೆ ಹೋಗುವುದೇ ಮೇಲು. ಆಮೇಲೆ ಅವರೇನಾದರೂ ಅಂದುಕೊಳ್ಳಲಿ. ನೀವು ಹೋಗಿ ನಿಮ್ಮ ಬಂಧುಗಳಿಗೆ ಹೇಳಿ ಬೇಕಾದರೆ ಅಲ್ಲೇ ಊಟಮಾಡಿಕೊಂಡು ಬನ್ನಿ. ಇಲ್ಲವಾದರೆ ಹಾಗೇ ಬನ್ನಿ. ಹರಿಹರಕ್ಕೆ ಹೋಗಿ ಎಲ್ಲಿಯಾದರೂ ಖಾನಾವಳಿಯಲ್ಲಿ ಒಂದು ತುತ್ತು ಕೂಳು ತಿಂದು ಬಸ್ಸು ಹತ್ತಿ ಶಿವಮೊಗ್ಗಕ್ಕೆ ಹೋಗಿಬಿಡೋಣ" ಎಂದೆ. ನಿರುಪಾಯರಾಗಿ ಅವರು ಹೊಳೆಯಲ್ಲಿ ಮುಖಮಾರ್ಜನಾದಿ ಮುಗಿಸಿ ಊರಿಗೆ ಹೋದರು. ನಾನು ಟವೆಲ್ ಉಟ್ಟುಕೊಂಡು ಪವಿತ್ರ ತುಂಗಭದ್ರೆಯಲ್ಲಿ ಮುಳು ಮುಳುಗಿ "ತಾಯೆ, ಮೂರುಲೋಕದ ಕೊಳೆಯನ್ನು ಕಳೆಯುವ ನೀನು ನನ್ನ ಮನಕ್ಕಂಟಿದ ಈ ಕೊಳೆಯನ್ನು ಕಳೆದು ನಾನು ಮೊದಲಿನಂತೆ ಮಾನಸಿಕವಾಗಿ ಉಲ್ಲಾಸಗೊಳ್ಳುವಂತೆ ಮಾಡು" ಎಂದು ಪ್ರಾರ್ಥಿಸುತ್ತಾ ಸ್ನಾನಮಾಡಿ, ಮೈಲಿಗೆಯ ಪಂಚೆಯನ್ನೇ ಉಟ್ಟೆ. ಏಕೋ ಮನಸ್ಸು ಒಪ್ಪಲಿಲ್ಲ. ಕೊಳೆಯ ಪಂಚೆಯನ್ನು ಉಟ್ಟುಕೊಂಡೆಯಾ ಎಂದು ಹೇಳುತ್ತಿರುವಂತೆ ಭಾಸವಾಯಿತು. ಪುನಃ ಪಂಚೆಯನ್ನು ತೊಟ್ಟ ಅಂಗಿಯನ್ನು ತೊಳೆದು ಎರಡನ್ನೂ ಮುಳ್ಳು ಮೇಲೆ ಎಳೆಬಿಸಿಲಿಗೆ ಒಣಗಲು ಹಾಕಿ ಮತ್ತೊಮ್ಮೆ ಮನದಣಿಯೇ ಈಸಾಡಿದೆ. ಸ್ವಲ್ಪ ಸಮಾಧಾನವಾದಂತಾಯಿತು. ಪಂಚೆ-ಅಂಗಿಗಳು ಇನ್ನೂ ಹಸಿಯಿರುವಾಗಲೇ ಉಟ್ಟು ಟವಲನ್ನು ತೊಳೆದು ಮಡಿಕೆ ಮಾಡಿ ತಲೆಯ ಮೇಲೆ ಹಾಕಿಕೊಂಡು ಹೊಳೆಯ ಮಧ್ಯದಲ್ಲಿರುವ ಒಂದು ಬಂಡೆಗಲ್ಲಿನ ಮೇಲೆ ಹೋಗಿ ಕುಳಿತುಕೊಂಡೆ. ಅಲ್ಲಿಗೆ ಹೋಗಲು ನೀರು ಆಳವಾಗೇನೂ ಇರಲಿಲ್ಲವಾಗಿ ಅಲ್ಲಿಗೆ ನಡೆಯುತ್ತಲೇ ಹೋದೆ. ಪ್ರಶಾಂತ ಗಂಭೀರವಾಗಿ ಹರಿಯುತ್ತಿದ್ದ ತುಂಗಭದ್ರಾ ತಾಯಿಯ ವಾತ್ಸಲ್ಯಮಯ ಸಾಂತ್ವನ ಧ್ವನಿಯಂತೆ ಗುರುಧ್ಯಾನದಲ್ಲಿ ಮನಸ್ಸು ಲೀನವಾಗಿ ಹೋಯಿತು; ವಿಲಕ್ಷಣಾನಂದವಾಯಿತು. ಒಂದು ತಾಸು ಕಳೆದ ನಂತರ ನಮ್ಮ ಮಹಾಪುರುಷರಿಬ್ಬರೂ ಬರುತ್ತಿದ್ದರು. ಅವರು ಮಳಲದಂಡೆಯ ಮೇಲೆ ನನ್ನನ್ನು ಕಾಣದೆ ಕೂಗಾಡಿದರು. ಎಲ್ಲೋ ಹೊಳೆಯಲ್ಲಿ ಹಾರಿಕೊಂಡು ಪ್ರಾಣಬಿಟ್ಟು ಬಿಟ್ಟರೆಂದು ಭಾವಿಸಿದ್ದರೋ

ಏನೋ? ನಾನು ಎರಡು ದೊಡ್ಡ ಬಂಡೆಗಳ ಮಧ್ಯದಲ್ಲಿನ ಸಣ್ಣ ಬಂಡೆಯ ಮೇಲೆ ಜುಳುಜುಳು ಹರಿಯುವ ನೀರಿನಲ್ಲಿ ಕಾಲಿಳಿಬಿಟ್ಟುಕೊಂಡು, ಬಿದ್ದೆದ್ದು ಹರಿಯುವ ನೀರನ್ನು ದಿಟ್ಟಿಸಿ ನೋಡುತ್ತ ಕುಳಿತಿದ್ದೆ. ಇವರು ಬಂದುದು ಗೊತ್ತಿದ್ದರೂ ಗೊತ್ತಿಲ್ಲದವರಂತೆ ಕುಳಿತ ನಾನು ಎರಡು ಮೂರು ಸಲ ಕೂಗಿದ ಮೇಲೆ, "ಇಲ್ಲೇ ಇದ್ದೇನಪ್ಪೋ! ಹೊಳೆಯಲ್ಲಿ ಬಿದ್ದು ಸತ್ತಿಲ್ಲ" ಎಂದೆ ನಗುನಗುತ್ತ. ನನ್ನ ನಗು ಅವರ ಮನಸ್ಸಿನ ದುಗುಡವನ್ನು ಸ್ವಲ್ಪ ಕಡಿಮೆ ಮಾಡಿರಬೇಕು. ಆಗ ಶೇಖರಯ್ಯ "ಶಾಸ್ತ್ರಿಗಳೇ, ನಿಮ್ಮನ್ನು ಎಲ್ಲರೂ ಬಹಳ ಕೇಳಿದರು. ಕರೆದುಕೊಂಡು ಬನ್ನಿ ಈ ರಾತ್ರಿ ಕಥೆ ಮಾಡಿಸಿಬಿಡೋಣ" ಅಂದರು. ನಾನು ಅವರು ಬರುವವರಲ್ಲ. ಏಕೋ ಮನಸ್ಸಿಗೆ ಬೇಸರಮಾಡಿಕೊಂಡುಬಿಟ್ಟಿದ್ದಾರೆ. ಬೇಸರದ ಮನಸ್ಸಿನ ಕಥೆ ಕಳೆಗಟ್ಟುವುದಿಲ್ಲ. ಅವರೊಂದು ಥರಾ ಮನುಷ್ಯರು" ಎಂದು ಹೇಳಿ ಬಂದುಬಿಟ್ಟೆವು ಎಂದ. ಆಗ ನಾನು ಮನಸ್ಸಿನಲ್ಲಿ ಊರಿನವರಿಗೆ ನನ್ನ ಕಥೆ ಬೇಕೇ? ಬೇಕಾಗಿದ್ದರೆ ಅವರಿಗೆ ಈ ಹೊಳೆಯೇನೂ ದೂರದ ದಾರಿಯಲ್ಲವಲ್ಲ! ಅವರಾರೂ ಬರಲಿಲ್ಲವಾದ್ದರಿಂದ ನನ್ನ ಕಥೆ ಆದರೂ ಅಷ್ಟೆ! ಹೋದರೂ ಅಷ್ಟೆ!! ಎಂದು ಅವರು ಮನದಲ್ಲಿ ಭಾವಿಸಿರಬೇಕೆಂದು ತರ್ಕಿಸಿದೆ. ಅವರಿಗೆ ನನ್ನ ಸ್ಥಾನ ತುಂಬುವವರು ಬೇರೆ ಯಾರಾದರೂ ಸಿಗಲಿಕ್ಕಿಲ್ಲವೇನು? ನಾವಾಗಿ ಕಥೆ ಮಾಡುತ್ತೇವೆಂದು ಹೋದರೆ ಒಮ್ಮೊಮ್ಮೆ ನಾವು ಬಹುಅಗ್ಗವಾಗಿ ಹೋಗುವುದೂ ಉಂಟು. ಅವರಾಗಿ ಕರೆಸಿದಾಗಲೇ ನಮ್ಮಂಥ ಕಲೆಗಾರರಿಗೆ ಸ್ವಲ್ಪ ಮರ್ಯಾದೆ. ಎಲ್ಲ ಕಡೆಗೂ ಸಂಸ್ಕಾರಿಗಳಾದವರು ಸಿಕ್ಕಾರೇನು? ಒಮ್ಮೊಮ್ಮೆ ಸಿಗಬಹುದು. ಒಟ್ಟಿನಲ್ಲಿ "ಕರೆಯದೆ ಹೋಗುವವನು" ಒಂದು ರೀತಿಯಲ್ಲಿ ಅಗ್ಗವೆಯೆ ಎಂದುಕೊಂಡೆ. ಆಗ ಶೇಖರಯ್ಯ ಬಟ್ಟೆಯಲ್ಲಿ ಕಟ್ಟಿದ ಗಂಟೊಂದನ್ನು ನನ್ನ ಮುಂದೆ ಹಿಡಿಯುತ್ತ "ನಮ್ಮ ನಂಟರು ಬಿಡಲಿಲ್ಲ. ಬಿಸಿಬಿಸಿ ರೊಟ್ಟಿ ಕರಿಂಡಿ ಮೊಸರು ತಿಂದು ಬಂದುಬಿಟ್ಟೆವು. ನೀವು ಬಹಳ ಹಸಿದಿರಬಹುದೆಂದು, ನಾಲ್ಕು ರೊಟ್ಟಿ, ಅಗಸಿ ಚಟ್ನಿ, ಕರಿಂಡಿ ಹಾಕಿಸಿಕೊಂಡು ತಂದಿದ್ದೇವೆ. ದಯವಿಟ್ಟು ತಿಂದು ನೀರು ಕುಡಿದುಬಿಡಿ. ಇಳೆಹೊಳೆ, ಧೂಳೇಹೊಳೆ ಪ್ರಯಾಣ ರದ್ದುಗೊಳಿಸಿಬಿಡೋಣ. ಯಾಕೋ  ಪ್ರವಾಸ ನಮಗೆ ಸುಖ ಕೊಡಲಿಲ್ಲ. ಮುಂದೆ ಇನ್ನೊಮ್ಮೆ ನೋಡೋಣ" ಎಂದ. ನಾನು ಮನಸ್ಸಿನಲ್ಲಿಯೇ ಇಂದಿಗೆ ನಿಮ್ಮ ಸಹವಾಸ ಸಾಕು. ಇಂದೇ ಕೊನೆ ಎಂದುಕೊಂಡು ಅವರು ತಂದ ನಾಲ್ಕು ರೊಟ್ಟಿಗಳನ್ನು ಜಠರಕ್ಕಿಳಿಸಿ, ತುಂಗಭದ್ರೆಯ ನೀರನ್ನು ಮನದಣೀ ಕುಡಿದು ಹರಿಹರದ ದಾರಿ ಹಿಡಿದು ಹೊರಟುಬಿಟ್ಟೆ. ಬಸವನ ಹಿಂದಿನ ಬಾಲದಂತೆ ಅವರಿಬ್ಬರೂ ಹಿಂಬಾಲಿಸಿದರು. ಹರಿಹರಕ್ಕೆ ಬಂದು ಅವರಿಗೆ ಚಹಾ ಕುಡಿಸಿ ಶಿವಮೊಗ್ಗ ಬಸ್ಸು ಹತ್ತಿಸಿದೆ. "ನೀವು ಬರುವುದಿಲ್ಲವೇ ಶಾಸ್ತ್ರಿಗಳೇ" ಎಂದ, ಶಿವಯ್ಯ "ಇಲ್ಲ ನಾನು ನಾಳಿಯೋ ನಾಡಿದ್ದೋ ಬರುತ್ತೇನೆ. ಇಲ್ಲಿಗೆ ಐದಾರು ಮೈಲು ದೂರದಲ್ಲಿ 'ಕಡ್ಲೆಗೊಂದ್ರಿ' ಎಂಬ ಹಳ್ಳಿಯಿದೆ. ಅಲ್ಲಿ ನಮ್ಮ ಬಂಧುಗಳಿದ್ದಾರೆ. ಅವರನ್ನು ಕಂಡು ಬರುತ್ತೇನೆ" ಎಂದು ಹೇಳಿ ಅವರ ಜೊತೆಯಿಂದ ಕಳಚಿಕೊಂಡು ಕಡಲೇಗೊಂದಿಗೆ ನಡೆಯುತ್ತ ಹೊರಟುಬಿಟ್ಟೆ. ಈ ಕಳಚಿಕೆ ಅಂದಿನ ಮಟ್ಟಿಗಾಗಿ ಅಲ್ಲ, ಶಾಶ್ವತವಾಗಿಯೇ ಅವರನ್ನು ದೂರವಿಟ್ಟುಬಿಟ್ಟೆ. ಕಡಲೆಗೊಂದಿಗೆ ನಮ್ಮ ದೊಡ್ಡಮ್ಮನ್ನು ಕೊಟ್ಟಿತ್ತು. ನಮ್ಮ ದೊಡ್ಡಮ್ಮನ ಮಕ್ಕಳು ವ್ಯವಸಾಯ ಮಾಡಿಕೊಂಡು ಸುಖವಾಗಿ ಇದ್ದರು. ಅಲ್ಲಿ ಎರಡು ಮೂರುದಿನ ಇದ್ದು ಇರುವವರೆಗೆ ದುರ್ಜನರ ಸಹವಾಸ ಫಲವಾಗಿ ಆದ ಗಾಯುಗಳನ್ನೆಲ್ಲ ಮಾಯಿಸಿಕೊಂಡು ಶಿವಮೊಗ್ಗೆಗೆ ಹೋದರಾಯಿತೆಂದು ಹೋದೆ. ಆ ರಾತ್ರಿಯೇ ಸಮೀಪದಲ್ಲಿರುವ ದೇವರಬೆಳಕೋರಿಯಲ್ಲಿನ

ನಿರಖೇಡ ನಾಗಪ್ಪ ಎನ್ನುವವನ ಕರೆಯ ಮೇರೆಗೆ ಹೋಗಿ ಅಲ್ಲಿ ಒಂದು ಕೀರ್ತನೆ ಮಾಡಿ ಆರೋ ಏಳೋ ರೂಪಾಯಿ ಖರ್ಚಿಗೆ ಗಿಟ್ಟಿಸಿಕೊಂಡುಬಿಟ್ಟೆ. ಬಹಳ ಚೆನ್ನಾಗಿ ವ್ಯವಸ್ಥೆಗೊಳಿಸಿದ್ದರು. ಮೂರು ದಿನಗಳ ನಂತರ ಶಿವಮೊಗ್ಗಕ್ಕೆ ಬಂದುಬಿಟ್ಟೆ.

ಇಷ್ಟು ಹೊತ್ತಿಗಾಗಲೆ ಎರಡು ತಿಂಗಳು ಸಂದು ಹೋಗಿದ್ದರೂ ಡಿ.ಪಿ.ಐ. ಅವರಿಂದ ಇನ್ನೂ ಕೋರಿಕೆ ಮನ್ನಣೆಗೊಂಡು ಬಂದಿರಲಿಲ್ಲ. ಮನಸ್ಸಿಗೆ ಬಹಳ ಬೇಸರವಾಯಿತು. ಒಂದೆರಡು ದಿನ ಶಿವಮೊಗ್ಗೆಯಲ್ಲಿ ಇದ್ದು ಚಾಮೇನಹಳ್ಳಿಗೆ ಮಿತ್ರನಾದ ವೀರಪ್ಪನನ್ನು ಹುಡುಕಿಕೊಂಡು ಹೋದೆ. ಅವನು ನನ್ನ ಮುಖವನ್ನು ಕಂಡೊಡನೆಯೇ "ಡಿ.ಐ.ಪಿ. ಪರ್ಮಿಷನ್ ಬಂತೇ?" ಎಂದುಬಿಟ್ಟ. 'ಇಲ್ಲ' ಎಂದೆ. "ತಡ ಮಾಡಲು ಕಾರಣವಿಲ್ಲವಲ್ಲ. ಬರುತ್ತೆ, ಬಾರದಿದ್ದರೆ ಸಿದ್ಧಯ್ಯನವರಿಂದಲೇ ಪರ್ಸನಲ್ ಅಡ್ರೆಸ್ಸಿಗೆ ಕಾಗದ ಬರೆಸಿ ತರಿಸೋಣ, ನೀವೇನೂ ಭಯಪಡಬೇಕಾದುದಿಲ್ಲ. ನಾನಿದ್ದೇನೆ" ಎಂದು ಧೈರ್ಯ ಹೇಳಿದ. ವೀರಪ್ಪನ ಸ್ನೇಹ ನನಗೊಂದು ದೊಡ್ಡನಿಧಿ ಸಿಕ್ಕಷ್ಟು ಸಂತೋಷಗೊಳಿಸಿತ್ತು. "ಇಷ್ಟೆಲ್ಲ ಸರಿ, ಎಲ್ಲಿ ನಿಮ್ಮ ಸಾಥಿಗಳು ಬಂದಿದ್ದಾರೇನು? ನೀವು ಅವರನ್ನು ಪ್ರಸಂಗದಲ್ಲಿ ಉಪಯೋಗಿಸಿಕೊಳ್ಳಿ. ಅವರ ಮಾತುಗಳನ್ನೆಲ್ಲ ಕೇಳಬೇಡಿ. ಶೇಖರಯ್ಯನೇನೋ ಸ್ವಭಾವತಃ ಒಳ್ಳೆಯವನೇ, ಕಳ್ಳನೇನೂ ಅಲ್ಲ. ಅವನು ಸ್ತ್ರೀಲೋಲ. ಈ ವಿಚಾರವನ್ನು ನಿಮಗೆ ಮೊದಲೇ ಹೇಳೋಣವೆಂದಿದ್ದೆ. ಅವರ ನಿಮ್ಮ ವಿಶ್ವಾಸ ಹೇಗಿದೆಯೋ ಏನೋ, ಅವರ ವಿಷಯದಲ್ಲಿ ನಿಮಗಿರುವ ವಿಶ್ವಾಸಕ್ಕೆ ಅಡ್ಡ ಬರಬಾರದೆಂದೂ ಕಾಲಾನಂತರದಲ್ಲಿ ನಿಮಗೇ ತಿಳಿದೀತೆಂದೂ ಸುಮ್ಮನಿದ್ದೆ. ಹಿಂದೆ ಅವನೊಂದು ನಾಟಕ ಕಂಪನಿಯಲ್ಲಿ ಹಾರ್ಮೋನಿಯಂ ಮಾಷ್ಟರ್ ಆಗಿದ್ದ. ಅವನ ಚೆನ್ನಾಗಿರುವ ಮುಖ ಮುಸುಡಿ ಕಂಡು ಆ ಕಂಪನಿಯ ಹೆಂಗಸರೆಲ್ಲ ಇವನಿಗೇ ಮುಗಿಬಿದ್ದರು. ಒಮ್ಮೆ ಒಬ್ಬ ಹುಡುಗಿಯನ್ನು ಕಟ್ಟಿಕೊಂಡು ಅವಳ ದುಡ್ಡಿನಲ್ಲೇ ಬೊಂಬಾಯಿ-ಗಿಂಬಾಯಿ ಅಂತ ಎಲ್ಲೆಲ್ಲೋ ತಿರುಗಿ ಬಂದ. ಅವನ ಹೆಂಡತಿ ಮತ್ತು ತಾಯಿ-ತಂದೆ-ಅಣ್ಣಂದಿರಿಗೆಲ್ಲ ಇದು ಗೊತ್ತಾಗಿ ಇದ್ದಲ್ಲಿಂದ ಒದ್ದು ಮನೆಗೆ ಕರೆದುಕೊಂಡು ಬಂದು, ಹಾಕಿದ್ದನ್ನು ತಿಂದು ಮನೆಯಲ್ಲಿ ಬಿದ್ದಿರು ಬಡ್ಡಿಮಗನೇ ಎಂದುಬಿಟ್ಟರು. ಒಳ್ಳೆ ಹೆಂಡತಿ ಮಕ್ಕಳು ಮರಿ ಇಟ್ಟುಕೊಂಡು ಹೀಗೆ ಪೋಲಿ ಆಟ ಆಡಿದರೆ ಯಾರು ಸುಮ್ಮನಿರುತ್ತಾರೆ ಹೇಳಿ? ನಾಟಕದ ಆ ಹೆಂಗಸು ಇವನ ಮನೆಗೋಗುವಷ್ಟರ ಮಟ್ಟಿಗೆ ಆಗಿಬಿಟ್ಟಿದ್ದಳಂತೆ. ಅವರ ಅಣ್ಣ ಸ್ವಲ್ಪ ಪ್ರಬಲನೇ. ಮನೆ ಹತ್ತಿರ ಬಾ. ನಿನ್ನ ಕಾಲು ಮುರಿದು ಕೈಗೆ ಕೊಡುತ್ತೇನೆಂದು ಹೆದರಿಸಿದ ಕಾರಣವಾಗಿ ಅವಳು ಹತ್ತಿರ ಸುಳಿಯಲಿಲ್ಲ. ಅವಳು ಬಂದು ಮನೆ ಹೊಕ್ಕಿದ್ದರೆ ಇವನನ್ನೇ ಸಂತೆಯಲ್ಲಿ ಮಾರಿಕೊಂಡು ಬಂದು ಬಿಡುತ್ತಿದ್ದಳು. ನಮ್ಮ ಚಾಮೋನಹಳ್ಳಿಗೆ ಪದೇಪದೇ ಇವನು ಬರುವುದೂ ಕೂಡ ಇದೇ ಚಟಕ್ಕೆ. ಇಲ್ಲೊಬ್ಬ ಗಂಡನನ್ನು ಬಿಟ್ಟು ಓಡಿಬಂದ ಹೆಂಗಸಿದ್ದಾಳೆ. ಪುಟ್ಟೆನೋ ರೊಟ್ಟೆನೋ ಅವಳ ಹೆಸರು. ಅವಳ ಸಹವಾಸ ಇದೆ. ಅವರು ಇವರ ಬಂಧುಗಳೇ. ಬಂಧುತ್ವದ ನಂಟಿನಿಂದ ಒಳಹೊಕ್ಕು ಹೀನಕೃತ್ಯ ಮಾಡುತ್ತಿದ್ದಾನೆ ಅಯೋಗ್ಯ ಆತ. ನೀವು ಅವನ ಹಿಂದೆ ಎಂದೂ ಹೋಗಬೇಡಿ. ಪ್ರಸಂಗದಲ್ಲಿ ನಿಮ್ಮ ಹಿಂದೆ ಅವನು ಬರುವಂತಿಟ್ಟುಕೊಳ್ಳಿ. ಅವನನ್ನು ಮುಂದೆ ಬಿಟ್ಟು ನೀವು ಹೋದರೆ ನಿಮ್ಮ ಮಾನವನ್ನು ಹರಾಜಿಗೆ ಹಾಕಿಬಿಡುತ್ತಾನೆ. ಒಂದು ಮಾತು ನಿಜ, ಕಳ್ಳ ಅಲ್ಲ; ಮೋಸಗಾರ ಅಲ್ಲ; ಸ್ವಲ್ಪ ಸುಳ್ಳ, ಹೆಚ್ಚಾಗಿ ಸ್ತ್ರೀಲೋಲ" ಎಂದು ಹೇಳುತ್ತ "ತಬಲಾ ಬಡಿಯಲು ಬಂದಿದ್ದನಲ್ಲಾ ಅವನನ್ನು ಮಾತ್ರ ಹತ್ತಿರ ಸೇರಿಸಲೇಬೇಡಿ. ತಬಲಾ ಇಲ್ಲದೆ ಕಥೆ ಆದರೂ ಚಿಂತೆಯಿಲ್ಲ. ಅವನಂತೂ

ನಾಡಪೋಲಿ. ಇಬ್ಬರು ಹೆಂಡರನ್ನು ನುಂಗಿ ಮೂರನೆಯವಳನ್ನು ಪಡೆಯಲು ಎಲ್ಲೆಲ್ಲೋ ತಿರುಗಾಡುತ್ತಾನಂತೆ. ನಾಲ್ವತ್ತರ ಗಡಿಯಲ್ಲಿರುವ ಇವನ ಹೊಲಸು ಮುಖಕ್ಕೆ ಹೆಣ್ಣು ಕೊಡೋರಿಗೆ ಮಕ್ಕಳು ಭಾರ ಆಗಿರಬೇಕಷ್ಟೆ. ಆ ಶೇಖರಯ್ಯನ ದೂರದ ನಂಟನೇ ಈತ. ಅವನ ಜೊತೆಗೆ ಇವನೂ ಸೇರಿಕೊಂಡು ನಿಮ್ಮ ಹಿಂದೆ ಪುಡಿಗಾಸಿಗಾಗಿ ಹೊರಟಿದ್ದಾನೆ. ಶಿರಾಳಕೊಪ್ಪದಲ್ಲಿ ಊಟದ ಹೋಟೆಲ್ ಇಟ್ಟುಕೊಂಡು ಏನೋ ಒಂದು ರೀತಿ ದುಡಿದುಕೊಂಡು ಇದ್ದ. ನಾಲ್ಕು ಕಾಸೂ ಕೈಗೆ ಹತ್ತಿತ್ತಂತೆ. ಈ ಸ್ತ್ರೀಲೋಲತೆಗೆ ಬಿದ್ದು ಕೈಯ ಕಾಸನ್ನೂ ಕಳೆದುಕೊಂಡು. ಒಬ್ಬಿಬ್ಬರ ಕಡೆಯಿಂದ ಒದೆ ತಿಂದು, ರಾತ್ರೋರಾತ್ರಿ ಮನೆ ಸಾಮಾನನ್ನೆಲ್ಲ ಯಾರಲ್ಲೋ ಒತ್ತೆಯಿಟ್ಟು ದುಡ್ಡು ಕಾಸು ತಗೊಂಡು ಓಡಿಬಂದು ಶಿವಮೊಗ್ಗ ಹೊಕ್ಕ ಭೂಪ ಈತ. ಈತ ಶಿವಮೊಗ್ಗದಲ್ಲೂ ಸಾಫ್ ಸೀದಾ ಇದ್ದಾನೆಂದು ತಿಳಿಯಬೇಡಿ. ಇಲ್ಲಿ ಏನೇನೋ ಕಿತಾಪತಿ ಮಾಡ್ತಿದ್ದಾನಂತೆ. ಸದಾ ಸೂಳೆಯ ಬೀದಿಯಲ್ಲೇ ತಿರುಗುತ್ತಿರುತ್ತಾನಂತೆ. ಇವೆಲ್ಲ ಹೊಸಬರಾದ ನಿಮಗೆ ಗೊತ್ತಿಲ್ಲ. ಶೇಖರಯ್ಯನನ್ನು ಒಂದು ವೇಳೆ ನಂಬಬಹುದು, ಈ ಕಳ್ಳಭಡವನ್ನ ನಂಬಲಿಕ್ಕೆ ಆಗುವುದಿಲ್ಲ. ಯಾವ ಯಾವ ಹುತ್ತದಲ್ಲಿ ಯಾವ ಯಾವ ಹಾವು ಇದ್ದಾವೆಂಬುದನ್ನು ನೀವು ತಿಳಿದು ಅವರೊಡನೆ ವ್ಯವಹಾರ ಮಾಡಿ. ನೀವು ಧಾರವಾಡ ಕಡೆ ಸಂಪನ್ನ ಜನ. ಆ ಕಡೆಯ ಜನರೆಂದರೆ ನನಗೆ ತುಂಬಾ ಗೌರವ. ನನಗೆ ಈ ಅನುಭವ ಇದೆ. ನನ್ನ ಹೆಂಡತಿ ನಿಮ್ಮ ಹಿರೇಕೇರಿಯವಳೇ. ನಾನೇನಾದರೂ ಅಲ್ಲಿಗೆ ಹೋದರೆ ಅವರು ಹೊಸಬರ ವಿಷಯದಲ್ಲಿ ತೋರುವ ಗೌರವಾದರಗಳ ಬಗೆಗೆ ನನಗೆ ಬಹಳ ತೃಪ್ತಿಯಿದೆ" ಎಂದು ಹೇಳಿದ. ನನ್ನ ಮೈ ಇಬ್ಬರ ಬಗೆಗೂ ನಡುಗಿ ಹೋಯಿತು. ಈ ಸಮಾಚಾರಗಳೆಲ್ಲ ಗೊತ್ತೇ ಇರಲಿಲ್ಲ. ಮೊನ್ನೆ ತಾನೇ ಮುದೇನೂರುವರೆಗೆ ಹೋಗಿ ಬಂದ ಪ್ರವಾಸ ಕಥನವನ್ನೆಲ್ಲ ವೀರಪ್ಪನಿಗೆ ಚಾಚೂ ತಪ್ಪದೆ ಹೇಳಿ "ಅದೇ ಕೊನೆ, ಮುಂದೆ ಅವರನ್ನು ಹತ್ತಿರಕ್ಕೂ ಸೇರಿಸುವುದಿಲ್ಲ. ನನಗೆ ಸಾಕಷ್ಟು ಅಪಮಾನ ಮಾಡಿಬಿಟ್ಟಿದ್ದಲ್ಲದೆ, ಮಾನಸಿಕವಾಗಿ ಕೊಂದು ಬಿಟ್ಟರು" ಎಂದೆ. "ಸಧ್ಯ ಬದುಕಿ ಕೊಂಡಿರಿ, ಬಹುಬೇಗ ಅವರ ಗುಣಸ್ವಭಾವವನ್ನು ಗುರುತಿಸಿ ದೂರಬಿಟ್ಟದ್ದು ಒಳ್ಳೆಯದೇ ಆಯಿತು. ಮುಂದೆ ಅವರಿಂದ ನಿಮಗೆ ಏನೇನು ತೊಂದರೆಗಳು ಕಾಯ್ದಿದ್ದವೊ ಊಹಿಸುವುದು ಕಷ್ಟ. ಸಧ್ಯ ದೇವರು ಬದುಕಿಸಿದ ಅಂತ ತಿಳಿದುಕೊಳ್ಳಿ" ಎಂದುಬಿಟ್ಟ.

ನಾನು ವೀರಪ್ಪನೊಡನೆ ಅನೇಕ ಸಭೆ ಸಮಾರಂಭಗಳಲ್ಲಿ ಭಾಗವಹಿಸಿದೆ. ಅನೇಕ ದೊಡ್ಡ ದೊಡ್ಡವರ ಪರಿಚಯ ಮಾಡಿಕೊಂಡೆ. ಆಗ ಅವನೊಬ್ಬ ಕಾಂಗ್ರೆಸ್ಸಿನ ಕಾರ್ಯಾಕರ್ತ, ಪ್ರಾಮಾಣಿಕ. ಒಳ್ಳೆಯ ಹೊಲಮನೆ ಗದ್ದೆಗಳಿದ್ದು ವ್ಯವಸಾಯಗಾರನಾಗಿದ್ದ. ಆತ ಹೈಸ್ಕೂಲ್ ಮುಟ್ಟದವರೆಗೆ ಓದಿದವ. ಅನೇಕ ಕಡೆಗಳಲ್ಲಿ ಕೀರ್ತನ ಮಾಡಿಸಿ ನನ್ನ ಆರ್ಥಿಕ ಸ್ಥಿತಿಯನ್ನು ಮೇಲೆತ್ತಿದವ.

### ಅಂಬರಗೊಡ್ಲು - ಹೆಡತ್ರಿಗಳ ಪ್ರವಾಸ

ಶ್ರಾವಣ ಮಾಸ ಬಂತು. ಇನ್ನೂ ಡಿ.ಪಿ.ಐ. ಅವರ ಅನುಮತಿ ಬರಲಿಲ್ಲ. ಶ್ರಾವಣ ಮಾಸ ಬಂತೆಂದರೆ ಕಥೆ-ಕೀರ್ತನ-ಪುರಾಣ ಪ್ರವಚನಕಾರರಿಗೆ ಸುಗ್ಗಿ ತಾನೆ. ಕೈಖರ್ಚು ತಿನ್ನುತ್ತ ಕೂತರೇನು ಬಂತೆಂದು ವೀರಪ್ಪನವರನ್ನು ಕಂಡು "ಶ್ರಾವಣ ಬಂತು ಎಲ್ಲಿಗಾದರೂ ಹೋಗಿ ಕೀರ್ತನೆ ಮಾಡಿ ಸ್ವಲ್ಪ ಸಂಪಾದಿಸೋಣವೆಂದು ಬಂದೆ" ಎಂದು ಹೇಳಿದ್ದೆ. "ಸಾಗರದ ಕಡೆ

ಹೋಗುತ್ತೀರಾ?" ಎಂದ. "ಸಾಗರವೇನು ಸೊರಬ ಏನು ಎಲ್ಲಿಗಾದರೂ ಹೋಗುತ್ತೇನೆ. ಹೋದಲ್ಲಿ ಪರಿಚಯ ಇರಬೇಕಲ್ಲ! ಪರಿಚಯದಿಂದ ಕೀರ್ತನ ನಡೆಯಲು ಸಹಕಾರವಾಗುತ್ತದೆ." ಹಾಗಾದರೆ ಸಾಗರದಿಂದ ದಕ್ಷಿಣಕ್ಕೇ ಹಿರೇಭಾಸ್ಕರ ಸಮೀಪದಲ್ಲಿ ಅಂಬರಗೋಡ್ಲು ಎಂಬ ಊರಿನಲ್ಲಿ ನಮ್ಮೂರಿನವನೇ, ನಮ್ಮ ಬಂಧುವೇ ಆದ ಬಸಪ್ಪ ದೊಡ್ಡಕಿರಾಣಿಅಂಗಡಿ ಅಭಿವೃದ್ಧಿ ಪಡಿಸಿಕೊಂಡು ಮಲೆನಾಡಿನ ಗೌಡರನ್ನೆಲ್ಲ ಹಿಡಿದು ಬಿಟ್ಟಿದ್ದಾನೆ. ಅವನು ನಿಮ್ಮನ್ನು ನೋಡಿದ್ದಾನೆ. ನಿಮಗೇ ಅವನ ಪರಿಚಯ ಸಾಕಷ್ಟಿಲ್ಲ. ಅವನಿಗೊಂದು ಕಾಗದ ಕೊಡುತ್ತೇನೆ. ಹೋಗಿ ಕಂಡು ಅವನ ನೆರವಿನಿಂದ ಅಲ್ಲಿ ಕಥೆ ಮುಗಿಸಿಕೊಂಡು ಬನ್ನಿ" ಎಂದು ಹೇಳಿ ಕಾಗದ ಬರೆದು ಕೊಟ್ಟುಬಿಟ್ಟನು.

ಸಾಗರದಿಂದ ದಕ್ಷಿಣಕ್ಕೆ ಸುಮಾರು ಹನ್ನೆರಡು ಮೈಲು ದೂರದ ಅಂಬರಗೋಲಿಗೆ ಹೋದೆ. ಬಸಪ್ಪ ಅಂಗಡಿಯಲ್ಲೇ ಇದ್ದ. ಸಾಕಷ್ಟು ದೊಡ್ಡ ಅಂಗಡಿಯೇ. ಅಲ್ಲಿಯ ಜನಜೀವನಕ್ಕೆ ಬೇಕಾಗುವ ವಸ್ತುಗಳಿಂದ ಅಂಗಡಿ ತುಂಬಿತ್ತು. ಪ್ರಬುದ್ಧ ಸ್ಥಿತಿಯಲ್ಲಿದ್ದ ವ್ಯಕ್ತಿಯೆನಿಸಿತು. ಅವನು ನನ್ನ ಮುಖವನ್ನು ಕಂಡು "ಓಹೋ! ಶಾಸ್ತ್ರಿಗಳು ಬರಬೇಕು. ಏನು ಸ್ವಾಮಿ, ಈ ಘೋರಾರಣ್ಯ ಪ್ರದೇಶಕ್ಕೆ ಬಂದು ಬಿಟ್ಟಿರಿ, ಬನ್ನಿ" ಎಂದು ಆದರೋಪಚಾರ ಮಾಡಿದ. "ವೀರಪ್ಪ ಇಲ್ಲಿಗೆ ಹೋಗಿ ಕಥೆ ಮಾಡಿಕೊಂಡು ಬನ್ನಿರೆಂದು ಚೀಟಿ ಕೊಟ್ಟಿದ್ದಾರೆಂದು ಹೇಳಿ ಪತ್ರ ಕೊಟ್ಟೆ. ಪತ್ರ ಓದಿ" ಓಹೋ ಆಗಬಹುದು. ಈ ಊರಿನಲ್ಲೊಂದು ಕಥೆಗೆ ಏರ್ಪಾಟುಮಾಡುತ್ತೇನೆ. ಇಲ್ಲಿಯೇ ಪಕ್ಕದಲ್ಲಿ ಮೂರು ನಾಲ್ಕು ಮೈಲು ದೂರದಲ್ಲಿ ಹೆಡತ್ರಿ ಎಂಬ ಊರಿದೆ. ಅಲ್ಲಿ ಬಹುದೊಡ್ಡ ಗೌಡರೊಬ್ಬರಿದ್ದಾರೆ. ಅವರ ಹೆಸರು ದ್ಯಾವಪ್ಪಗೌಡರು ಎಂದು. ಆರುಸಾವಿರ ರೂಪಾಯಿ ಕಂದಾಯ ಕೊಡುವ ಕುಳ. ಅಡಿಕೆ, ಯಾಲಕ್ಕಿ, ಮೆಣಸು, ಬಾಳೆ, ಬತ್ತ ಬೆಳೆಯುವ ದೊಡ್ಡ ವ್ಯವಸಾಯಗಾರರು. ಒಬ್ಬ ಚಿಕ್ಕ ಸಂಸ್ಥಾನಿಕರಿದ್ದ ಹಾಗೆ ಇಧ್ದಾರೆ. ಅಲ್ಲಿಗೂ ಹೋಗಿಬನ್ನಿ. ನಾನು ಗೌಡರಿಗೆ ಕಾಗದ ಕೊಡುತ್ತೇನೆ ಎಂದು ಹೇಳಿ, ನನ್ನ ಮಾರ್ಗಾಯಾಸ ನಿವಾರಿಸುವ ಸೌಲಭ್ಯಗಳನ್ನೆಲ್ಲ ಒದಗಿಸಿದ. ಊಟಮಾಡಿ ಒಂದು ನಿದ್ದೆ ತೆಗೆದು ಹೊಸ ಮನುಷ್ಯನೇ ಆದೆ. ಅದೊಂದು ಘೋರಾರಣ್ಯ ಪ್ರದೇಶ ಎಲ್ಲೆಲ್ಲೂ ಬಾಳೆ, ಅಡಿಕೆ, ತೆಂಗಿನ ಬಹುರಮ್ಯ ತೋಟಗಳ ಸಾಲು. ಗಗನಚುಂಬಿಗಳಾದ ಗಿಡಮರಗಳಿಂದ ನೋಡುವವರ ಕಣ್ಣು ಬರವನ್ನೇ ಹಿಂಗಿಸುವ ಶೃಂಗಾರ ಸಾರ ಸರ್ವಸ್ವ. ಸುತ್ತಮುತ್ತಣ ವನಶ್ರೀಯನ್ನು, ಬೆಳೆದು ನಿಂತ ಪೈರು ಪಚ್ಚೆಗಳ ಇಂಥ ಆಢ್ಯತೆಯನ್ನು ನೋಡುವುದಕ್ಕೂ ಮನುಷ್ಯ ಪುಣ್ಯಮಾಡಿ ಹುಟ್ಟಿರಬೇಕು ಎನ್ನಿಸಿತು. ಶ್ರಾವಣಮಾಸ ಎಂದರೆ ಕೇಳಬೇಕೆ! ತಾಸು ತಾಸಿಗೆ ಮಳೆಯ ಸೆಳಕಲುಗಳು ಗಗನದಿಂದ ಭೂಮಿಗೆ ನೀರನ್ನೇ ಸುರಿಸುತ್ತಿದ್ದವು; ಹಳ್ಳಕೊಳ್ಳಗಳು ಭೋರ್ಗರೆಯುತ್ತಿದ್ದವು. ದನಕರುಗಳು ಸಮೃದ್ಧವಾಗಿ ಮೆಯ್ದು ಮೈತುಂಬಿ ನಲಿದಾಡುತ್ತಿದ್ದವು. ಭೂಮಿಯಿಂದ ಮೂರು ನಾಲ್ಕು ಆಳೆತ್ತರ ದೊಡ್ಡ ಕಾಂಡದಿಂದ ನೇರವಾಗಿ ಬೆಳೆದು ಹತ್ತಿಪ್ಪತ್ತು ರೆಂಬೆ ಕೊಂಬೆಗಳು ಹರಡಿ ದಟ್ಟವಾದ ಎಲೆಗಳಿಂದ ಗಗನದಲ್ಲಿ ನಿಂತಿರುವ ಮಾಮರಗಳ ಸೊಬಗು ವನಶ್ರೀ ದೇವಿಗೆ ಎತ್ತಿ ಹಿಡಿದ ಕೊಡೆಯಂತೆ ಮನೋಹರವಾಗಿದ್ದವು. ಮಾಮರಕ್ಕೆ ಸರಿದೊರೆಯಾದ ಇನ್ನೊಂದು ಮಹಾವೃಕ್ಷವೆಂದರೆ ಕಣ್ಣಿಟ್ಟಲ್ಲೆಲ್ಲ ದೃಷ್ಟಿಯನ್ನೆಲ್ಲ ಸೆರೆಗೆಯ್ಯುತ್ತಿದ್ದ ಹಲಸಿನ ಮರಗಳು. ಆಲ, ಅರಳಿ, ಮತ್ತಿ, ಬೇಲ, ಬನ್ನಿ, ಹುಣಿಸೆ, ದಿಂಡಿಲು, ಅರಿ, ಅಂಬಟೆ, ಶ್ರೀಗಂಧ, ಬೂರುಗ. ಹೊನ್ನೆ, ತೇಗ, ಸುರಗಿ, ಸುರಹೊನ್ನೆ, ಮುತ್ತುಗ, ಬನ್ನಿ, ಗೇರು, ನೆಲ್ಲಿ, ನೇರಳೆ, ಧೂಪ, ಆಳಲೆ, ತಾರೆ, ಮೊದಲಾದ ವೃಕ್ಷ ಸಮೂಹಗಳಿಂದ ದಟ್ಟವಾಗಿ

ಬೆಳೆದು ನಿಂತ ಆ ಕಾಡು ನನ್ನ ಮನಸ್ಸನ್ನೆಲ್ಲ ಸೆರೆ ಹಿಡಿದು ಹಾಕಿಬಿಟ್ಟಿತು. "ಬಸಪ್ಪ, ಈ ಸುಂದರಲೋಕವನ್ನು ಕಂಡು ಹಿಡಿದು ಇಷ್ಟು ದೂರ ಬಂದು ಅಂಗಡಿಯಿಟ್ಟು ಪುರಾಣಗಳಲ್ಲಿ ಹೇಳುವ ದೇವಲೋಕದ ಕಲ್ಪನೆಯ ನಂದನವನ ಮಧ್ಯದಲ್ಲಿ ಸದಾ ಬಾಳುವಂತಾಗಿರುವುದೊಂದು ಪುಣ್ಯವೇ ನಿನ್ನದು" ಎಂದು ಹೇಳಿದಾಗ ಆತ "ಶಾಸ್ತ್ರಿಗಳೇ ಅಗೋ ಆ ತೋಟದ ಮಧ್ಯದಲ್ಲಿರುವ ಮಹಾಲಿನಂತಹ ಮನೆ ಶಂಕರಭಟ್ಟರದು. ಅವರು ಮಹಾವಿದ್ವಾಂಸರು. ನಮಗೆ ಬಹಳ ಬೇಕಾದವರು. ಭಗವದ್ಗೀತೆಯನ್ನು ಕಂಠಪಾಠ ಮಾಡಿದವರು. ಅವರ ಮನೆಯಲ್ಲಿಯೇ ಕಥೆ ಇಟ್ಟುಕೊಳ್ಳಲು ಏರ್ಪಾಡು ಮಾಡಿದ್ದೇನೆ. ಯಾವ ಕಥೆ ಇಟ್ಟುಕೊಳ್ಳುತ್ತೀರಿ" ಎಂದ. ನನಗೆ ಸ್ವಲ್ಪ ಅಳುಕೇ ಆಯಿತು. ಮಹಾವಿದ್ವಾಂಸರೆಂದು ಮೊದಲೇ ಹೇಳಿದ್ದಾನೆ. ಮಹಾವಿದ್ವಾಂಸರ ಎದುರು ಕಥೆಮಾಡಲು ಮಹಾವಿದ್ವಾಂಸರೇ ಆಗಬೇಕು. ನಾನಾದರೋ ವಿದ್ವಾಂಸನಾಗಿ ಕಥೆ ಮಾಡುವವನಲ್ಲ; ಕಥೆ ಮಾಡಿ ವಿದ್ವಾಂಸನೆನ್ನಿಸಿ ಕೊಳ್ಳಬೇಕಾಗದವನು ಎಂದುಕೊಂಡು ಸ್ವಲ್ಪ ಸಾಹಿತ್ಯದ ಬಿಗುವಿನಿಂದ ಕೂಡಿದ ಶಬರ ಶಂಕರ ವಿಲಾಸವನ್ನೇ ಮಾಡಿ ಬಿಡೋಣವೆಂದು ತೀರ್ಮಾನಿಸಿ ಬಸಪ್ಪನಿಗೆ ಹೇಳಿದೆ. ಅವನೂ ಆಗಬಹುದು ಎಂದು ಹೇಳಿದ. "ಇಲ್ಲಿ ನಮ್ಮ ಊರುಗಳ ಕಡೆ ಸೇರುವಂತೆ ಕಿಕ್ಕಿರಿದು ಜನ ಜಂಗುಳಿ ಸೇರುವುದಿಲ್ಲ. ಆ ತೋಟದಲ್ಲಿ ಇರುವುದು ಅವರ ಮನೆಯೊಂದೇ. ಅವರ ಮನೆಯಲ್ಲಿಯ ಜನ, ಅವರ ನಂಟರಿಷ್ಟರು ಸೇರಿ ಹದಿನೈದು ಇಪ್ಪತ್ತಕ್ಕಿಂತ ಹೆಚ್ಚು ಜನ ಸೇರಲಿಕ್ಕಿಲ್ಲ. ಒಳ್ಳೆ ಪಗಡದಸ್ತಾಗಿ ಕಥೆ ನಡೆದು ಬಿಡಬೇಕು. ಫಸ್ಟ್‌ಕ್ಲಾಸ್ ಎಂದರೆ ಫಸ್ಟ್‌ಕ್ಲಾಸ್ ಆಗಿರಬೇಕು. ಹಿಂದೆ ಯಾರೂ ಮಾಡಿರಬಾರದು. ಮುಂದೆ ಯಾರೂ ಮಾಡ್ಬಾರದು ಹಾಗಿರಬೇಕು. ಹಾರ್ಮೋನಿಯಂ ತಬಲಾಗಳಿಗೆ ಸಾಗರಕ್ಕೆ ಭಟ್ಟರೇ ಹೇಳಿ ಕಳಿಸಿದ್ದಾರೆ. ಆರು ಘಂಟೆ ಬಸ್ಸಿಗೆ ಅವರೆಲ್ಲ ಬರುತ್ತಾರೆ. ಆರುವರೆಗೆ ಕಥೆ ಪ್ರಾರಂಬಿಸಿ ಎಂಟು ಘಂಟೆ ಹೊತ್ತಿಗೆ ಮುಗಿಸಿ ಬಿಡಬೇಕು. ಒಂದೂವರೆ ತಾಸು ಅಷ್ಟೆ. ಬೇಕಾದರೆ ಹತ್ತೂ ಹದಿನೈದು ನಿಮಿಷ ಹೆಚ್ಚಾಗಬಹುದು. ಹೆಚ್ಚಾಗಿ ಅಡ್ಡಕಥೆ ಬೇಡ. ಅವರು ಇಂಥ ಎಷ್ಟೊ ಕಥೆ ಮಾಡಿಸಿದವರು" ಎಂದು ನನಗೆ ಭಯವಾಗುವಂತೇ ಹೇಳಿಬಿಟ್ಟ. ನನ್ನ ಎದೆ ಬಡಿದುಕೊಳ್ಳಲು ತೊಡಗಿತು. ಆದರೂ ದೇವರು ನನಗೆ ವರವಾಗಿ ಕೊಟ್ಟ ಮೊಂಡಧೈರ್ಯ ಮುಂದೆ ಧೀಂಕಿಟ್ಟು ಬಂದು "ಕುತತ್ವಾ ಕಶ್ಮಲಮಿದಂ ವಿಷಮೋಸಮುಪಸ್ಥಿತಂ?...." ಎಂಬ ಗೀತೆಯ ಧೈರ್ಯದ ನುಡಿ ನೆನಪಿಗೆ ಬಂದು ಹೆದರುವುದೇತಕ್ಕೆ? ಷಡಕ್ಷರ ಕವಿಯ ಬಂಡವಾಳ ಅಷ್ಟೊಂದು ಇಟ್ಟುಕೊಂಡು? ಎಂದು ಹೇಳತೊಡಗಿತು.

ಸಾಯಂಕಾಲ ಆರೂವರೆ ಸುಮಾರಿಗೆ ಕಥೆ ಪ್ರಾರಂಭವಾಯಿತು. ನಾನು ನೆಹರೂ ಜುಬ್ಬಾ ತೊಟ್ಟು ತಲೆಗೊಂದು ಖಾದಿಟೊಪ್ಪಿಗೆ ಹಾಕಿಕೊಂಡು, ಶುಭ್ರಪಂಚೆಯನ್ನುಟ್ಟು ಆಗಿನ ಕಾಲದ ಕೀರ್ತನಕಾರರಂತೆ ಸಜ್ಜಾಗಿ ನಿಂತೆ. ಎರಡುವರೆ ಶ್ರುತಿಗೆ ತಬಲಾ ಶ್ರುತಿಗೂಡಿಸಿ ಕೊಂಡದ್ದಾಯಿತು. ಮುಂದೆ ನೋಡುತ್ತೇನೆ ಕಂಬಕ್ಕೊಬ್ಬೊಬ್ಬರಂತೆ ಒರಗಿಕೊಂಡು ಕುಳಿತ ಬಸಪ್ಪ ಹೇಳಿದಂತೆ, ಹದಿನೈದು ಇಪ್ಪತ್ತು ಜನ ಅಷ್ಟೇ. ಶಂಕರಭಟ್ಟರು ವೀಳ್ಯತಟ್ಟೆಯನ್ನು ಮುಂದಿಟ್ಟುಕೊಂಡು ಬಾಯಿಗೆ ಅಡಕೆ ಹಾಕಿ ಚಿಗುರೆಲೆಗಳನ್ನು ಒರೆಸುತ್ತ ಕುಳಿತರು. ಐದಾರು ಜನ ಹೆಣ್ಣುಮಕ್ಕಳು ಸ್ವಲ್ಪ ಕತ್ತಲೆಯಿರುವ ಕಡೆ ಚಾಪೆಯ ಮೇಲೆ ಕುಳಿತಿದ್ದರು. ಓರ್ವ ವಿಧವಾಸ್ತ್ರೀ ಮಡಿಯಲ್ಲಿ ಬಹುದೂರದಲ್ಲಿ ಕುಬದೊತ್ತಿನಲ್ಲಿ ಹೂ ಬತ್ತಿ ಹೊಸೆಯುತ್ತ ಕುಳಿತಿದ್ದಳು. ಉಳಿದಂತೆಲ್ಲ ಹಣೆಗೆ ಗಂಧದ ಧರಿಸಿ ಎಲೆಯಡಕೆ ಜಗಿಯುತ್ತ ಕುಳಿತ ಪುರುಷಶ್ರೇಷ್ಠರೇ ಕಣ್ಣಿಗೆ ಬಿದ್ದರು.

ಇಂಥ ಸಭೆಗಳಲ್ಲಿ ಕಥೆ ಮಾಡಿ ನನಗೆ ಗೊತ್ತೇ ಇರಲಿಲ್ಲ. ನನ್ನ ಕಥೆಗಳಿಗೆ ಹೆಣ್ಣುಗಂಡು ಸರಿಸಮಾನವಾಗಿ ಕಿಕ್ಕಿರಿದು ಸೇರುತ್ತಿದ್ದರು. ಇಲ್ಲಿ ಇಷ್ಟೇ ಜನಗಳ ಮಧ್ಯದಲ್ಲಿ ನನಗೆ ಉತ್ಸಾಹಬಂದೀತೆ? ಕಥೆ ಕಳೆಗಟ್ಟೀತೇ? ಎಂಬ ಅಳುಕು ಪದೇ ಪದೇ ಉಂಟಾಗುತ್ತಿತ್ತು. "ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯ ಕ್ತ್ವೊತ್ತಿಷ್ಠ...." ಎಂದು ಆಂತರಿಕ ಪ್ರಜ್ಞೆಯೊಂದು ದಿಗಿಲ್ ಎಂದು ಮೇಲೆದ್ದ ಹಾಗಾಯಿತು. ಪ್ರಥಮತಃ ಯಮುನ ಕಲ್ಯಾಣಿ ರಾಗದಲ್ಲಿ ಷಡಕ್ಷರಿಯ ಶಬರಶಂಕರ ವಿಲಾಸದ ಮಂಗಲ ಸ್ರಗ್ಧರಾವ್ರತ್ತವನ್ನು -

ಶ್ರೀಮತ್ಕಲ್ಯಾಣರೂಪಂ ಶರಭವನಗಜೋತ್ಸಂಗನಭ್ರಾಂತಯೋಗಾ।
ರಾಮಾಂಚತ್ಪಾದಪದ್ಮಂ ಸುರುಚಿರ ಗಣಪ ವಿಭ್ರಾಜಿತಂ ಸಾರಸತ್ವಂ।
ವ್ಯಾಮಿಶ್ರಾಹೀನ ಚಂಚತ್ಕಟಕನಧಿಕ ದಿವ್ಯಾಗಮಂ ಸ್ವಸ್ಥಿಲೋಕ
ಸ್ತೋಮಂ ಭ್ರಾಜಿಷ್ಣುವೆಮ್ಮಂ ಪೊರೆಗೆ ವಿತತ ಭಾಸ್ವತ್ಪ್ರಕಾಶಂ ಗಿರೀಶಂ॥

ಎಂದು ಉಚ್ಚಧ್ವನಿಯಿಂದ ಹೇಳಿ ರಾಗದ ಕಸರತ್ತನ್ನು ಮಾಡಿ ಬಿಟ್ಟೆ. ಹಾರ್ಮೋನಿಯಂ ಭವ್ಯವಾಗಿ ನುಡಿಯಿತು. ಶಂಕರ ಭಟ್ಟರು ತಲೆದೂಗಿ ಚಪ್ಪಾಳೆ ತಟ್ಟಿ ಬಿಟ್ಟರು. ಆಮೇಲೆ ಮಾಮೂಲಿ ವರದಾಯಕ... ಪದ್ಯ ಹೇಳಿ ಮುಗಿಸಿದೆ. ಸರಿ ಕಥೆ, ಇನ್ನು ನಿರಾತಂಕವಾಗಿ ಭವ್ಯವಾಗೇ ಸಾಗುತ್ತದೆಂಬ ಭರವಸೆ ಮೂಡಿತು. ಪೀಠಿಕೆಗೀಟಿಕೆ ಅಂತಾ ತರಲೆಮಾತುಗಳನ್ನು ಹೇಳಲು ಹೋಗಲಿಲ್ಲ. ಒಮ್ಮೊಮ್ಮೆ ವಿದ್ವಾಂಸರೆದುರು ಅದನ್ನು ಹೇಳ ಹೋಗಿ ಕೆಲವರು ಸಿಕ್ಕುಬೀಳುತ್ತಾರೆ, ಬಾಯಿಗೆ ಬಂದದ್ದನ್ನು ಹೇಳಿ. ಅದಕ್ಕಾಗಿ ಅದನ್ನು ಬಿಟ್ಟು ಆದಷ್ಟು ನಮ್ಮ ಷಡಕ್ಷರಿಯ ಮಾತುಗಳನ್ನೇ ಬಳಸುತ್ತ ಒಮ್ಮೆಲೆ ಶಿವಲೋಕದ ವರ್ಣನೆಗೆ ತೊಡಗಿಬಿಟ್ಟೆ :

ಬಾಂದಳಮಂ ಪಳಂಚಲೆವ ತುಂಗ ವೃಷಧ್ವಜದಿಂದೆ ತಳ್ತು ಚೆ ।
ಲ್ವೊಂದಿದ ಭರ್ಮಹರ್ಮ್ಯದಿನಂಕೃತಿವೆತ್ತ ಗಣೇಶ್ವರ ಸ್ಫುರ ।
ನ್ಮಂದಿರ ಪಂಕ್ತಿಯಿಂದಮೃತ ಪೂರ್ಣಸರಸ್ಸುರ ಭೂರುಹೋಲ್ಲಸ ।
ನ್ನಂದನದಿಂ ವಿರಾಜಿಸಿದುದಗ್ಗದ ಚಾರುಪುರಂ ಪುರಾರಿಯಾ॥

- ಬಾನಿನ ತಳವನ್ನು ಮುಟ್ಟಿ ಅಲೆದಾಡುವ ಎತ್ತರವಾದ ವೃಷಭಧ್ವಜದಿಂದ ಕೂಡಿದ ಶಿವನ ಅರಮನೆಯ ಭವ್ಯಚಿತ್ರದ ವರ್ಣನೆ ಭಟ್ಟರನ್ನು ಬಹಳ ಆನಂದಗೊಳಿಸಿರಬೇಕು. ಸುಣ್ಣಹಚ್ಚಿ ಕೈಯಲ್ಲಿ ಹಿಡಿದ ಎಲೆಯನ್ನು ಬಾಯಲ್ಲಿ ಹಾಕಿಕೊಳ್ಳದೆ ಹಾಗೇ ಹಿಡಿದಿದ್ದನ್ನು ಕಂಡು ಈ ತೀರ್ಮಾನಕ್ಕೆ ಬಂದೆ. ಹಾಗೆಯೇ ಮುಂದಕ್ಕೆ ಷಡಕ್ಷರಿಯೇ ರಾಜಶೇಖರ ವಿಳಾಸದಲ್ಲಿ ವರ್ಣಿಸಿದ ಯಾರಿಗೂ ತಿಳಿಯದ ನನಗೂ ಅರ್ಥಗೊತ್ತಿಲ್ಲದ ಕೈಲಾಸವರ್ಣನೆಯನ್ನೂ ಈ ಸಂದರ್ಭಕ್ಕೆ ಜೋಡಿಸಿಕೊಂಡು -

"ಮತ್ತಮದು ಸಂತತ ಸಮಧಿಗತ ಭರ್ಮ ಕೂರ್ಮ ಸಶರ್ಮಪರಿಚಲತ್ ಪೃಥುಳತರ ಶಫರ ಸಲಿಲಕರಿನಿಕರ ಮಕರ ಸುಕರ ಹಿಮಕರಧವಳ ಮರಾಳ ಮಂಜುಳ ಮದಮಧುಕರ ಪ್ರಕರ ಮಧುರರವ ಪರಿಗತ ನಿಜರಜಃಪುಂಜ ಪಿಂಜರಿತ ಜಳಕನಕ ಕಮಳ ಕುಮುದ ಕಲ್ಹಾರವಿಸರ ಸರಳತರ ತರಂಗ ರಂಗದ ಭಂಗ ಶೈವಲಲತಾವಿತಾನ ವಿಳಸಿತ ವಿತತ ಸ್ವಕೀಯ ಮಹನೀಯ ಗಾಂಭೀರ್ಯ ಪರಿಹಸಿತ ಸುಧಾಶರಧಿಪುರ ಶ್ರೀ......॥

- ಈ ಗದ್ಯಖಂಡವನ್ನು ಒಂದೇ ಉಸುರಿಗೆ ಹೇಳಿ ಎಲ್ಲರನ್ನು ಆಶ್ಚರ್ಯಗೊಳಿಸಿ ಬಿಟ್ಟೆ. ಅವರೆಲ್ಲ ಇಷ್ಟು ಚಿಕ್ಕವಯಸ್ಸಿನಲ್ಲೇ ಎಷ್ಟೊಂದು ವಿದ್ವತ್ತು ಸಂಪಾದನೆ ಮಾಡಿದ್ದಾರಲ್ಲಾ! ಎನ್ನಿಸಿಬಿಟ್ಟೆ. ಶಂಕರಭಟ್ಟರು - ಈ ಗದ್ಯ ಖಂಡದ ಅರ್ಥ ಹೇಳಿಬಿಡಿ ಎಂದಿದ್ದರೆ, ನಾನು ಪೇಚಿಗೆ ಸಿಕ್ಕಿಹಾಕಿಕೊಳ್ಳುತ್ತಿದ್ದೆ. ಇದರ ಅರ್ಥ ಕುಳಿತವರಿಗೂ ಆಗಲಿಲ್ಲ; ಹೇಳಿದವನಿಗೆ ಮೊದಲೇ ಗೊತ್ತಿಲ್ಲ. ಕಥೆ ಮಾಡುವವರು ಕೆಲವು ಪಟ್ಟು ಕಲಿತು ಕೊಂಡಿರುತ್ತಾರೆ. ಕೆಲವು ಗದ್ಯ ಖಂಡಗಳನ್ನೊ, ದಂಡಕವ ಚೂರುಗಳನ್ನೋ ಬಾಯಿಪಾಠಮಾಡಿ ಹೇಳಿಕೊಂಡು ತಡಬಡವಾಗಿ ಬುಡು ಬುಡು ಯಾರ ಕೈಗೂ ಸಿಗದಂತೆ ಹೇಳುತ್ತ ಓಡಿ ಕಂಠಪಾಠದ ಕಸರನ್ನು ಸಭೆಯ ಮುಂದೆ ಪ್ರದರ್ಶಿಸುವ ಕಥೆಗಾರರಿಗೆ ಕಡಿಮೆಯಿಲ್ಲ; ಉದರ ನಿಮಿತ್ತಂ ಬಹುಕೃತ ವೇಷಂ ಅನ್ನುವ ಮಾತನ್ನು ಜ್ಞಾಪಿಸಿಕೊಂಡು ಅಯ್ಯೋಪಾಪ ಎಂದು ಕೊಂಡು ಕೇಳುವವರು ಸುಮ್ಮನಾಗಬೇಕು ಅಷ್ಟೆ. ಅವರನ್ನು ಒರೆಗೆ ಹಚ್ಚುವ ಹುಚ್ಚು ಕೆಲಸಕ್ಕಿಳಿಯಬಾರದು. ನಾನೂ ಕೂಡ ಈ ಪಟ್ಟು ಕಲಿಯದೆ ಆಖಾಡಕ್ಕೆ ಇಳಿಯಲಾಗುತ್ತಿತ್ತೇ? ಇದನ್ನೇ ನಾನು ಪದೇ ಪದೇ ಹೇಳುವ "ಏನೂ ಗೊತ್ತಿಲ್ಲದವರು ಏನೂ ಗೊತ್ತಿಲ್ಲದವರಿಗೆ ಏನೂ ಗೊತ್ತಾಗದಂತೆ ಹೇಳುವ ವಿಧಾನ" ಎಂದು ನಾನೂ ಅಂಥ ಕೆಲವು ಪಟ್ಟುಗಳನ್ನು ಭಟ್ಟರೆದುರು ಪ್ರದರ್ಶಿಸಿ ಬಿಟ್ಟೆ. ಭಟ್ಟರು ಹುಬ್ಬೇರಿಸಿ ಭುಜ ಕುಣಿಸುತ್ತ ಕೇಳುತ್ತಿದ್ದುದು ಕಂಡಿತು. ನನಗೆ ಇನ್ನೂ ನಸೆ ಏರಿತು.

ಇದರಲ್ಲಿ ಬಾಯಿ ಕಸರತ್ತಿರುತ್ತಿತ್ತೇ ವಿನಾ ಅರ್ಥ ಕಸರತ್ತು ಇರುತ್ತಿರಲಿಲ್ಲ. ಸಂಸ್ಕೃತವನ್ನು ತಿಳಿಕೊಂಡಿದ್ದಾನೆ ಎಂದು ತೋರಿಸುವುದಕ್ಕೆ ಅರ್ಥವೇ ಗೊತ್ತಿಲ್ಲದೆ ಕೆಲವು ಶ್ಲೋಕಗಳನ್ನು ತಪ್ಪೋ ಸರಿಯೋ ಹೇಳಿ ಅವಕ್ಕೆ ಮನಸ್ಸಿಗೆ ಬಂದ ಹಾಗೇ ಅರ್ಥ ಮಾಡಿ ನೂರಿಪ್ಪತ್ತು ಮೈಲುಗಳ ವೇಗದ ಭರ್ತಿ ರಭಸದಲ್ಲಿ ಓಡಿಹೋಗುವ ಕೀರ್ತನಕಾರರಿಗೆ ಕಡಿಮೆಯೇನೂ ಇಲ್ಲ. ಭಗವದ್ಗೀತೆಯನ್ನು ಕಂಠಪಾಠ ಮಾಡಿದವರು ಎಂದು ಮೊದಲೇ ನಮ್ಮ ಬಸಪ್ಪಸೆಟ್ಟರು ಹೇಳಿದ್ದರಿಂದ ನಾನು ನನ್ನ ಸಂಸ್ಕೃತ ಭಾಷಾಪಾಂಡಿತ್ಯದ ಗಂಟನ್ನು ಬಿಚ್ಚುವ ಗೋಜಿಗೆ ಹೋಗಲಿಲ್ಲ. ಹೋಗಿದ್ದರೆ ಶಂಕರಭಟ್ಟರ ಕೈಗೆ ಸಿಕ್ಕು ಒದ್ದಾಡುವ ಪ್ರಮೇಯ ಒದಗುತ್ತಿತ್ತೋ ಏನೋ. ಅಂತೂ ನಾನು ಶಬರ ಶಂಕರ ವಿಳಾಸದ ಕಥೆಯ ಶಾಂತಿರಸ ಭಕ್ತಿರಸಗಳನ್ನು ಪ್ರವಾಹವನ್ನೇ ಹರಿಸುತ್ತ ಮುಂದುವರಿಸಿಕೊಂಡು ಹೋದೆನೆಂದು ಜ್ಞಾಪಕ. ಶಿವನಿಗೂ ಅರ್ಜುನನಿಗೂ ಯುದ್ಧವಾಗುವ ಪ್ರಸಂಗದಲ್ಲಂತೂ ನಾನೂ ಯುದ್ಧ ಮಾಡಿಯೇ ತೋರಿಸಿಬಿಟ್ಟೆ. ಭಾವಭಂಗಿ, ಅಂಗಭಂಗಿಗಳಿಂದ ಬೇಡವೇಷದ ಶಿವನು ಅರ್ಜುನನ ಬಳಿಗೆ ಬಂದು ಅವನ ಶಸ್ತ್ರಾಸ್ತ್ರಗಳು ಬಿಲ್ಲು, ಖಡ್ಗ ಮುಂತಾದ ಆಯುಧಗಳನ್ನೆಲ್ಲ ಕಿತ್ತುಕೊಂಡು ನಿರಾಯುಧವನ್ನಾಗಿ ಮಾಡಿದಾಗ ಅರ್ಜುನ ಕೋಪಗೊಂಡು ತೋಳುತಟ್ಟಿ, ಸೆಡ್ಡು ಹೊಡೆದು ಹಲ್ಲವಡೆ ಕಚ್ಚಿಯೇ ಮುಂದೆ ಇರುವ ಬೇಡನೊಡನೆ ಯುದ್ಧ ಮಾಡುತ್ತಾನೋ ಏನೋ ಎಂಬ ಭಾವಭಂಗಿಯಲ್ಲಿ ಬೇಡನಿಗೆ "ಎಲೆ ಧೂರ್ತ ಕಿರಾತ,

"ಇಸಿತೊಂದಾರ್ಭಟೆಯೇಂ ಪುಳಿಂದ ಬಿಡು ನಿನ್ನೀ ಬಿಂಕಮಂ
ಮಾಣ್ಗೆ ಶಸ್ತ್ರ ನಿಶಾತಾಸ್ತ್ರ ನಿಕಾಯದಿಂ ನೆಗಳ್ವ ಯುದ್ಧಂ
ಮುಷ್ಟಿಯುದ್ಧಕ್ಕೆ ನಿಂದನುವಾಗು ಈಗಳೆ ತೋರ್ಪೆನ್ ಎನ್ನಬಲವದೋರ್ದಂಡ
ಶೌರ್ಯ ಪ್ರವರ್ತನಮಂ ನೋಡುಗೆ ನಿನ್ನ ನಚ್ಚಿನ ಕಿರಾತವ್ರಾತಂ ಎನ್ನಂದಮಂ"

ಎಂದು ಪದ್ಯವನ್ನೇ ಗದ್ಯದ ಶೈಲಿಯಲ್ಲಿ ಹೇಳುತ್ತಿದ್ದಂತೆ ಕುಳಿತ ಕೆಲವರು ಹಲ್ಲವಡೆ ಕಚ್ಚಿದಂತೆ ತೋರಿದ್ದು ನನ್ನ ಭ್ರಮೆಯೇನೂ ಅಲ್ಲ. ವೀರರಸದ ಪ್ರತಾಪವೇ ಅಂಥಾದ್ದು. ಹೇಳಿಲ್ಲವೆ ಅಲಂಕಾರಿಕರು "ವೀರಶೃಂಗಾರಯೋರೇಕಂ ಪ್ರಧಾನಂ ಯತ್ರವರ್ಣ್ಯತೇ..." ಎಂದು ನಾಟಕಗಳಲ್ಲಿ ವೀರಶೃಂಗಾರರಸ ಪ್ರಧಾನವಾದುವುಗಳೇ ಬಹು ಜನಮೆಚ್ಚುಗೆ ಗಳಿಸುತ್ತಿದ್ದ ಕಾರಣವೇ ಲಕ್ಷಣವನ್ನು ಹಾಗೆ ಹೇಳಬೇಕಾಯಿತು. ಕಾವ್ಯದಲ್ಲೂ ಅಷ್ಟೆ. ವೀರ ಶೃಂಗಾರರಸ ಪ್ರಧಾನವಾದ್ದುವುಗಳ ಪ್ರಖ್ಯಾತಿಯೇ ಬಹಳ. ಉಳಿದ ರಸಗಳೂ ಇರುತ್ತವೆ. ಅವು ಅಂಗರಸಗಳಾಗಿರುತ್ತವೆ. ಶಬರಶಂಕರವಿಲಾಸದಲ್ಲಿ ಶಾಂತಕ್ಕಿಂತ ವೀರವೇ ತೇಜಸ್ವಿಯಾಗಿ ಕಾಣುತ್ತದೆ. ಇನ್ನೊಂದು ಸಂದರ್ಭದಲ್ಲಿ ಭಯಂಕರ ಕೋಪಾಟೋಪದಿಂದ ಕೂಡಿದ್ದ ಅರ್ಜುನನ ಕೋಪವನ್ನು ವ್ಯಕ್ತಪಡಿಸುವ ಷಡಕ್ಷರಿಯ,

"ಪಟು ಕೋಪಾಟೋಪ ಬದ್ಧಭೃಕುಟಿ, ವಿಚಳಿತ ಶ್ಮಶ್ರು;
ಘುರ್ಮಾಂಬು ಭಾಸ್ವನ್ನಿಟಿಲಂ ಶೋಣಾಕ್ಷಿಕೋಣಂ;
ಪೆದೆಯನೆಳೆದು ಗಾಂಢೀವದೊಳ್ ತೊಟ್ಟು ರೌದ್ರೋತ್ಕಟ ವೃತ್ತಂ;
ಜ್ಯಾರವಂಗೈದು ಅಡಸಿ ಪಿಡಿದು ನಿಂದಿರ್ದು ಶಾಕಾಸ್ತ್ರಮಂ
ಸಂಘಟಿಸುತ್ತುಂ ಮಾಣದೆಚ್ಚಂ ಕಪಟಶಬರನಂ ಕೊಳ್
ಎನುತ್ತ ಉಣ್ಮಿ ಪಾರ್ಥಂ"

- ಈ ಪದ್ಯವನ್ನು ಈ ರೀತಿ ಗದ್ಯದಂತೆ ಭೇದಮಾಡಿ ಹೇಳಿದಾಗಂತೂ ಭಲೇ! ಪಾರ್ಥ ಎಂದು ಉದ್ಗಾರ ಮಾಡಿದವರು ಹಲವರು. ಕೊನೆಯಲ್ಲಿ ಅರ್ಜುನ ಸೋತು ಬೇಡನನ್ನು ಶಿವನೇ ಈ ರೂಪದಲ್ಲಿ ಬಂದಿರುವನೆಂಬುದು ಖಚಿತಗೊಂಡೊಡನೆ,

ಅನವದ್ಯನೋಳ್, ಅಪ್ರತಿಮನೋಳ್, ಅನಘನೋಳ್
ಆದ್ಯಂತ ಶೂನ್ಯನೊಳ್, ಸಕಲ ಜಗಜ್ಜನಕನೊಳ್
ಅಭ್ಯರ್ಹಿತ ಚೇತನಗತನೊಳ್
ಇದಿರ್ಚಿ ಧುರದೊಳೆಚ್ಚಾಡಿದೆನೇ?
ಪರಮೈಶ್ವರ್ಯಾಸ್ಪದನೊಳ್
ಪರಿಪೂರ್ಣ, ಪರಪ್ರಕಾಶನೊಳ್, ಪಶುಪತಿಯೊಳ್
ಪರಶಕ್ತಿಯುಕ್ತನೊಳ್ ಪರತರ ಮಹಿಮನೊಳ್
ಅಂತು ಇದಿರ್ಚುತ ಎಚ್ಚಾಡಿದೆನೇ?
ತ್ರಿಳಿದೆನೆ ಶಂಭುವೆಂದು ಬಹುಬಾಣದಿನೆಚ್ಚೊಡೆ ತಾಗದಂದು?
ತ್ರಿಳಿದೆನೆ ದಿವ್ಯಮಾರ್ಗಣದಿನಾನಿಸೆ ತಳ್ವದೆ ನುಂಗಿದಂದು?
ತ್ರಿಳಿದೆನೆ ಕೆಯ್ಯ ಚಾಪಮನ್ ಅಡಾಯುಧಮಂ ಸೆಳೆದು ಈಳ್ದುಕೊಂಡೊಡಂ?
ಅಕ್ಕಟ ತಿಳಿವೊಳಸಾರ್ದುದು ಪುರಾಕೃತ ಕರ್ಮದ ಪೆರ್ಮೆ ಎಂತುಟೊ!!

- ಈ ಮಾತುಗಳನ್ನು ಹೇಳಿದಾಗ ಶಂಕರಭಟ್ಟರು ಸ್ಪಷ್ಟವಾಗಿ ಅಯ್ಯೋ! ಅಯ್ಯೋ! ಅಪ್ಪಾ! ಅಪ್ಪಾ! ಎನ್ನುತ್ತ ಕಣ್ಣೊರಿಸಿಕೊಂಡದ್ದು ನೋಡಿದೆ. ಅನೇಕರು ಆಗ ಕಣ್ಣೊರಸಿಕೊಂಡು ಆಹಾ! ಆಹಾ! ಎಂದರು. ಅವರೆಲ್ಲ ಕಥೆಯ ಈ ಶಾಂತರಸಕ್ಕೆ ಸ್ಪಂದಿಸಿ ಆಸ್ವಾದನೆ ಮಾಡಿ

ಸಂತೋಷಗೊಂಡದ್ದು ನನ್ನನ್ನು ಪುಳಕಿತ ಗಾತ್ರನನ್ನಾಗಿಸಿತು. ಕಥೆಯನ್ನು ಒಂದೂವರೆ ಘಂಟೆಯಲ್ಲಿ ಮುಗಿಸಬೇಕೆಂದಿದ್ದ ಗಡುವು ಮುಂದೆ ಹೋಗಿ ಎರಡುವರೆ ಘಂಟೆ ನಡೆದು ಹೋಯಿತು. ಯಾರೂ ಅತ್ತ ಲಕ್ಷ್ಯ ಕೊಡಲೇ ಇಲ್ಲ. ಅನೇಕ ದಿನಗಳಿಂದ ಇಷ್ಟೊಂದು ತನ್ಮಯತೆಯಿಂದ ಕಥೆ ಮಾಡಿದ್ದಿಲ್ಲ. ನಾನು ಸಂಪೂರ್ಣ ಮೈಮರೆತು ಬಿಟ್ಟಿದ್ದೆ. ನಾನು ನಾನಾಗಿರದೆ ಏನೋ ಆಗಿಬಿಟ್ಟಿದ್ದೆನೆಂಬುದಂತೂ ನನ್ನನ್ನು ನಾನು ಹೊಗಳಿಕೊಳ್ಳಲು ಜೋಡಿಸಿದ ಮಾತಿನ ಮಾಲೆಯಂತೂ ಅಲ್ಲ. ಯಥಾರ್ಥ ವರದಿ. ಒಮ್ಮೊಮ್ಮೆ ಹೀಗಾಗುವುದುಂಟು. ಅದಕ್ಕೇ ಹೇಳುವುದು ಹೇಳುವವರಿಗಿಂತ ಕೇಳುವವರು ಜಾಣರಾಗಿರಬೇಕು ಎಂದು. ಶಂಕರಭಟ್ಟರು ಸುಸಂಸ್ಕೃತರು. ರಸಾಸ್ವಾದನಕ್ಕೆ ಅವರ ಅಂತಃಕರಣ ಹದಗೊಂಡ ತಾಣ. ಇದೇ ಶೈಲಿಯಲ್ಲಿ ಕವಿವಾಣಿಯ ಬಿಗುವಿನಲ್ಲಿ ಹಾರ್ನಹಳ್ಳಿಯ ಅಥವಾ ಚಾಮೇನ ಹಳ್ಳಿಯ ಜನಜಂಗುಳಿಯ ಮಧ್ಯದಲ್ಲಿ ಮಾಡಿದ್ದರೆ ಮೊದಲರ್ಧ ತಾಸಿನಲ್ಲಿಯೇ ಒಬ್ಬೊಬ್ಬರಾಗಿ ಎದ್ದು ಹೋಗಿ ಮಂಗಲವಾಗುವ ಹೊತ್ತಿಗೆ ಆಕಳಿಸುತ್ತ ನಾಲ್ಕೈದು ಜನ ಕಾರ್ಯಕರ್ತರು ನಮ್ಮನ್ನು ಕರೆದು ಹೇಳಲು ನಿಲ್ಲಿಸಿದ ತಪ್ಪಿಗೆ ಉಳಿದು ಆರತಿ ತಟ್ಟೆ ಎತ್ತಬೇಕಾದ ಪ್ರಮೇಯವೇ ಉಳಿಯುತಿರಲಿಲ್ಲ.

ಶಂಕರಭಟ್ಟರು "ಬಸಪ್ಪ ಸೆಟ್ಟರೆ. ಕಥೆ ಫಸ್ಟ್ ಅಂದರೆ ಫಸ್ಟ ಅಂದು ಬಿಟ್ಟರು. ಆರತಿ ತಟ್ಟೆ ಇತರ ಹಳ್ಳಿಯ ಆರತಿ ತಟ್ಟೆಗಿಂತ ಯೋಗ್ಯತೆಯಲ್ಲಿ ಮಿಕ್ಕಿಸಿತ್ತು. ಹಳ್ಳಿಗಳ ಕಡೆ ಕಾಲಾಣೆಯೋ ಅಥವಾ ದಂಬಡಿಯನ್ನೋ ಹಾಕುವವರೇ ಹೆಚ್ಚು. ದಂಬಡಿಯಂತೆ ಹಾಕಿದ್ದರೆ ಒಂದು ರೂಪಾಯಿಗೇರ ಬೇಕಾದರೆ 192ಜನರ ಕೈಮೇಲಾಗಬೇಕಿತ್ತು. ಕಾಲಾಣೆ ಹಾಕಿದ್ದಾದರೆ 64 ಜನ ಕೈಮೇಲಾಗ್ಗಿ ಔದಾರ್ಯ ತೋರಬೇಕಾಗಿತ್ತು. ಇಲ್ಲಿ ಸೇರಿದ 18-20 ಜನರ ಈ ಚಿಕ್ಕ ಸಮೂಹವೇ ಎಂಟಾಣೆ, ಒಂದು ರೂಪಾಯಿಯಂತೆ ನಾಲ್ಕು ರೂಪಾಯಿಗಳನ್ನು ಹಾಕಿಬಿಟ್ಟರು. ನಾನು ಈ ಮೊತ್ತದ ಆರತಿ ತಟ್ಟೆಯನ್ನು ಕಂಡವನೇ ಅಲ್ಲ; ಭಟ್ಟರು ಔದಾರ್ಯದಿಂದ ಹನ್ನೆರಡು ರೂಪಾಯಿಗಳನ್ನು ಮುಗಿವಳಿ (ಸಂಭಾವನೆ) ಕೊಟ್ಟು ಬಹಳ ಸಂತೋಷವ್ಯಕ್ತಪಡಿಸಿದರು. ಈ ಮೊತ್ತವೂ ದೊಡ್ಡದೇ ತಾನೆ! ನನಗೆ ಐದು-ಆರು ರೂಪಾಯಿ ಸಂಭಾವನೆ ಕೊಟ್ಟ ಊರುಗಳೇ ಬಹಳ. ಹತ್ತು ರೂಪಾಯಿ ಪರಮಾವಧಿ ಸಂಭಾವನೆ. ನೂರಾರು ಕಡೆ ಮಾಡಿದರೆ ಹತ್ತು ರೂಪಾಯಿ ಗೌರವ ಸಿಕ್ಕದ್ದು ಎಲ್ಲೋ ಒಂದೆರಡು ಊರಲ್ಲಿ ಮಾತ್ರ. ನನ್ನ ಊಹೆಗೆ ಮೀರಿ ಭಟ್ಟರು ಸಂಭಾವನೆ ಕೊಟ್ಟದ್ದು ನನ್ನಲ್ಲಿ ಆತ್ಮಪ್ರತ್ಯಯ ಮೂಡಿಸಿ, ನನ್ನಲ್ಲಿ ಏನೇನೋ ಸತ್ವ ಇದೆ ಕಣಪ್ಪೋ! ಎಂದು ನನಗೆ ನಾನೇ ಆಡಿಕೊಂಡದ್ದೂ ಉಂಟು. ಕೊನೆಯಲ್ಲಿ ಸ್ವಲ್ಪ ಇಂಗ್ಲೀಷ್ ಬೆರೆಸಿ ಮಾತನಾಡುತ್ತಿದ್ದ ಬಸಪ್ಪ ಸೆಟ್ಟರು "ಕರ್ಮಣಿ ಸರದೊಳ್ ಚಿಂಬವಳಮಂ ಕೋದಂತೆ" ಅಲ್ಲಲ್ಲಿ ಮುತ್ತಿನ ಸರದೋಳ್ ಗಾಜಿನ ಗುಂಡಂ ಬೆರಸಿದಂತೆಯೇ ಏನೋ ಒಂದು ಹೋಲಿಕೆ ಅನ್ನಿ. ಹಾಗೆ "ಶಾಸ್ತ್ರಿಗಳೆ ಕಥೆ ಸಕ್ಸಸ್‌ಫುಲ್ ಅಂದರೆ ಸಕ್ಸಲ್‌ಫುಲ್ಲೇ - ಅದ್ಭುತ! ಅದ್ಭುತ! ವಂಡರ್‌ಫುಲ್" ಎಂದು ಹೇಳಿ ತಮ್ಮ ಮನೆಗೆ ಕರೆದುಕೊಂಡು ಹೋದರು. ಹೋಗುವಾಗ ಭಟ್ಟರು ಕನ್ನಡ ಅರ್ಥವುಳ್ಳ ಭಗವದ್ಗೀತೆಯ ಪುಸ್ತಕ ಕೊಟ್ಟರು. ಅದುವರೆಗೆ ನಾನು ಭಗವದ್ಗೀತೆಯ ಹೆಸರು ಕೇಳಿದ್ದೆನೇ ವಿನಾ ಆ ಗ್ರಂಥವನ್ನು ಕೈಗೆತ್ತಿಕೊಂಡಿರಲಿಲ್ಲ. "ಯದಾಯದಾಹಿ ಧರ್ಮಸ್ಯ.....", "ಪರಿತ್ರಾಣಾಯ ಸಾಧೂನಾಂ....", "ಧ್ಯಾಯತೋ ವಿಷಯಾನ್ ಪುಂಸಃ...." ಇಂಥ ನಾಲ್ಕೈದು ಶ್ಲೋಕಗಳನ್ನು ಯಾರು ಯಾರಿಂದಲೋ ಕೇಳಿ ಬರೆದುಕೊಂಡು ಗಟ್ಟಿಮಾಡಿ ಗೀತೆಯ ಹೆಸರೆತ್ತಿ ಆ ಗ್ರಂಥವನ್ನು ಅರುಬಿ ಹಾಕಿಬಿಟ್ಟವರಿಗಿಂತ ಹೆಚ್ಚಾದ ಧಿಮಾಕಿನಿಂದ ಹೇಳಿಬಿಡುತ್ತಿದ್ದೆ. ಕೇವಲ

ಒಂದು ಮುಲ್ಕೀ ಪರೀಕ್ಷೆ ತೇರ್ಗಡೆ ಹೊಂದಿದ್ದ ನನಗೆ ಇನ್ನೆಷ್ಟು ವಿದ್ಯೆ ಸಿಕ್ಕೀತು! ನೀವೇ ಯೋಚನೆ ಮಾಡಿಕೊಳ್ಳಿ. ಇಷ್ಟು ಬಂದದ್ದೇ ಈಶ್ವರ ಕಾರುಣ್ಯ! ದೊಡ್ಡವರ ಆಶೀರ್ವಾದ, ಗುರುಗಳ ಕೃಪೆಯೆಂದುಕೊಂಡಿದ್ದೇನೆ. ಕೆಲವರು ಈ ಮಾತುಗಳನ್ನು ಅಲ್ಲಗಳೆಯುವುದೂ ಉಂಟು. ಅದೊಂದು ಲಂಡ ಬದುಕಿನ ಅಪಕ್ವ ಮನಸ್ಥಿತಿಯ ಭಾವನೆಯೆಂದು ನನ್ನ ತೀರ್ಮಾನ. ಮನುಷ್ಯ ಯಾವುದೇ ವಿಚಾರಕ್ಕೆ ಮೇಲೇರಿ ನೋಡಿ ತೀರ್ಮಾನಿಸಬೇಕಾಗುತ್ತದೆ. ಈಶ್ವರ ಸೃಷ್ಟಿ ರಹಸ್ಯದಲ್ಲಿ ನಮಗೆ ತಿಳಿದಿರುವುದು ತೀರ ಅಲ್ಪವೇ. ತಿಳಿದಿದ್ದರೂ ತಿಳಿವಿನ ಆಳ ಕಡಿಮೆ.

**ಹೆಡತ್ರಿಗೆ ಪ್ರಯಾಣ**

ಮರುದಿನ ಬಸಪ್ಪ ಸೆಟ್ಟರು "ಶಾಸ್ತ್ರಿಗಳೇ ನಿನ್ನೆ ರಾತ್ರಿ ಬಹು ಕೂಗಾಡಿ ದಣಿದಿದ್ದೀರಿ. ಈ ದಿನ ಪೂರ್ಣ ವಿಶ್ರಾಂತಿ ತಕ್ಕೊಳ್ಳಿ. ನಾಳೆ ಹೆಡತ್ರಿಗೆ ಹೋಗಿ ದ್ಯಾವಪ್ಪ ಗೌಡರನ್ನು ಕಂಡು, ಅಲ್ಲೊಂದು ಕಥೆ ಮಾಡಿ ಹೋಗುವಿರಂತೆ" ಎಂದರು. ಅದರಂತೆ ಮರುದಿನ ಅಲ್ಲಿದ್ದು, ಹಿರೇಭಾಸ್ಕರ ಆಣೆಕಟ್ಟು ಕಟ್ಟುತ್ತಿದ್ದುದನ್ನು, ಅಂಬಲಗೋಡ್ಲಿನ ಪಕ್ಕದ ಗುಡ್ಡದ ಮೇಲೆ ನಡೆಯುತ್ತಿದ್ದ ಒಂದು ಚಿಕ್ಕಜಾತ್ರೆಯನ್ನು ನೋಡಿಕೊಂಡು ಬಂದೆ.

ಮರುದಿನ ಬಸಪ್ಪ ಸೆಟ್ಟರು ಕೊಟ್ಟ ಪರಿಚಯ ಪತ್ರ ತೆಗೆದುಕೊಂಡು ಹೆಡತ್ರಿಗೆ ಹೊರಟೆ. ಘೋರಅರಣ್ಯ ಪ್ರಾಂತವನ್ನೂ, ಭೋರ್ಗರೆವ ನಿರ್ಝರ ಪ್ರವಾಹಗಳನ್ನು ದಾಟಿ ಒಂದು ಬೆಟ್ಟವನ್ನೇರಿ ಇಳಿದು ವಿಸ್ತಾರವೂ, ದೀರ್ಘವೂ ಆದ ಗದ್ದೆ ಬಯಲನ್ನು ದಾಟಿ ಮತ್ತೊಂದು ಮಹಾಬೆಟ್ಟದ ತಪ್ಪಲು ಪ್ರದೇಶಕ್ಕೆ ಹೋದ ಮೇಲೆ ನಮಗೆ ಗೌಡರ ಭವ್ಯಭವನ ಸಿಕ್ಕುತ್ತಿತ್ತು. ನಾನು ಹಗಲಿನಲ್ಲೇ ಕತ್ತಲೆಗವಿದಿದ್ದ ಅರಣ್ಯ ಹೊಕ್ಕೆ. ನಾನು ಹೊರಟದ್ದು ಕಾಲುದಾರಿಯಲ್ಲಿ. ಕಾಲುದಾರಿ ಹಿಡಿದು ಹೋದರೆ ಗೌಡರ ಮನೆ ಎರಡು ಮೈಲು ಕಡಿಮೆ ಎಂದುದೇ ಈ ದಾರಿ ಹಿಡಿಯಲು ಕಾರಣವಾಗಿತ್ತು. ಕೇವಲ ನಾಲ್ಕೈದು ಫರ್ಲಾಂಗ್ ಹೋಗುತ್ತಲೇ ಅರಣ್ಯ ದುರ್ಗಮವಾಗತೊಡಗಿತು. ಭಯ ಆವರಿಸಿತು. ಯಾವುದೋ ಮೂಲೆಯಿಂದ ಹುಲಿ ಮೇಲೆ ಬಿದ್ದರೆ, ಆನೆ ಸೊಂಡಿಲಿನಿಂದ ಕಿತ್ತೆಸೆದರೆ, ಬೇಡನಾಯಿ ಬೆನ್ನಟ್ಟಿದರೆ ಎಂಬ 'ರೇ' ಸಾಮ್ರಾಜ್ಯದ ಭಯವೇ ಹೆಜ್ಜೆ ಹೆಜ್ಜೆಗೂ ಮುಂದಕ್ಕೆ ಬೆಟ್ಟ ಪ್ರದೇಶದಿಂದ ಭೋರ್ಗರೆದು ಧುಮುಕುತ್ತಿರುವ ನಿರ್ಝರಗಳನ್ನು ದಾಟಲೂ ಅನುಭವವಿರಬೇಕು. ಬಂಡೆ ಅಪಾಯದ್ದಲ್ಲವೆಂದು ಅತ್ತಿತ್ತ ನೋಡಿ ಹೆಜ್ಜೆಯಿಟ್ಟರೆ ಆಗಿಯೇ ಹೋಯಿತು, ಹಾವಸೆ ನಮ್ಮನ್ನು ಅನಾಮತ್ತಾಗಿ ಎತ್ತಿ ಮಡುವಿನಲ್ಲಿ ತೇಲಿ ಮುಳುಗಲು ಹಚ್ಚುತ್ತವೆ. ಸ್ವಚ್ಛನೀರಿನ ಕಾರಣವಾಗಿ ತಳದ ಕಲ್ಲುಗಳೂ ಗಾಜಿನ ಹಿಂದಿನ ವಸ್ತುವಿನಂತೆ ಸ್ಪಷ್ಟ ಕಂಡರೂ ಅವು ನಮ್ಮನ್ನು ಜಾರಿಸುತ್ತವೆ. ನಾನು ಒಂದು ನಿರ್ಜರನ್ನು ದಾಟುವ ಸಮಯದಲ್ಲಿಯೇ ಓರ್ವ ಸ್ಥಳೀಯ ವ್ಯಕ್ತಿ ಸಿಕ್ಕು 'ಯಾವೂರಾಯ್ತು ಮಾರಾಯ್ರೇ' ಅಂದ ನಾನು ಶಿವಮೊಗ್ಗ ಎಂದು ಹೇಳದೆ ಧಾರ್ವಾಡ ಎಂದೆ. ಅವನು ತೋರುಬೆರಳನ್ನು ಹಣೆಯ ಮೇಲಿಟ್ಟು ಊರ ಹೆಸರು ಕೇಳಿದ್ದುಂಟು. ಎಲ್ಲಿ ಬರ್ತದೆಂದು ಮುಂತಾಗಿ ಪ್ರಶ್ನಿಸಿದ. ನಾನು ಅವನಿಗೆ ವಿವರವಾಗಿ ಹೇಳುವಾಗ ಒಂದು ಭೂಗೋಳ ಪಾಠವನ್ನೇ ಮಾಡಿದಂತಾಯಿತು. ಅವನು ಸ್ಥಳೀಯನಲ್ಲವಂತೆ. ಕುಂದಾಪುರ ಕಡೆಯಿಂದ ಇಲ್ಲಿನ ತೋಟದ ಕೆಲಸಕ್ಕೆ ಬಂದವನೆಂದು ಆಮೇಲೆ ತಿಳಿಯಿತು. ನಾನು ಅವನ ಸಹಾಯದಿಂದ ಆ ನಿರ್ಝರವನ್ನು ದಾಟಿದೆ. ನೋಡಿದರೆ ಭಯವಾಗುವಂತೆ ದಾಟುವಾಗ ಭಯವಾಗಲಿಲ್ಲ. ಆತನನ್ನು ದಂಡೆಯಲ್ಲಿ ಕುಳ್ಳಿರಿಸಿಕೊಂಡು

ಒಂದು ಬೀಡಿ ಕೊಟ್ಟೆ. ಚೆನ್ನಾಗಿ ಎಳೆದ. "ನಿನ್ನ ಹೆಸರೇನೆಂದೆ" ವೆಂಕಟನೋ ಏನೋ ಹೇಳಿದ. "ಅಯ್ಯಾ ವೆಂಕಣ್ಣಾ ನನಗೊಂದು ಉಪಕಾರ ಮಾಡುತ್ತೀಯಾ" ಎಂದೆ. ಏನರು ಎಂದ ಸ್ವಲ್ಪ ಗಾಬರಿಯಿಂದ. "ಏನೂ ಇಲ್ಲ, ಈ ಅರಣ್ಯ ನೋಡದರೆ ಕೈ ಕಾಲು ನಡುಗುತ್ತವೆ. ಈ ಬಿದಿರು ಬೆತ್ತ, ಬಳ್ಳಿ, ಗಗನಚುಂಬಿ ಮರ, ಗಿಡ, ಪೆಳೆ ಮೆಳೆ ಒಂದೊಂದೂ ನನಗೆ ಹೊಸದೇ. ಅರಣ್ಯ ಪ್ರದೇಶ ನೋಡಿದ್ದೇನೆ. ಇಂಥ ಘನಘೋರ ಅರಣ್ಯ ನೋಡಿಲ್ಲ. ಏಕೋ ಭಯವಾಗುತ್ತಿದೆ. ಹೆಡತ್ರಿಗೆ ಹೋಗಬೇಕು. ಬೈಲು ಬರುವವರೆಗೆ ನನ್ನ ಜೊತೆಗೆ ಬಂದೀಯಾ" ಎಂದೆ. ಇಲ್ಲಿ ಹೆದರಿಲ್ಲಿಕ್ಕೇನುಂಟು ಮಾರಾಯ್ರೇ. ಹೆಡತ್ರಿ ಗೌಡರ ಮನೆ ಇಲ್ಲೇ ಸಮೀಪದಲ್ಲೆ ಮಲೆ ಒತ್ತಿನಲ್ಲುಂಟು. ಸ್ವಲ್ಪ ದೂರಕ್ಕೆ ತಾನು ಕೊನೆಯಾಗುತ್ತೆ. ಆಮೇಲೆ ಮಟ್ಟೆ, ಮಟ್ಟೆ ಹತ್ತಿದರೆ ಗೌಡರ ಗದ್ದೆಬೈಲು, ಅದನ್ನು ದಾಟಿದರೆ ಗೌಡರ ಮನೆ ಆಯಿತೋ ಇಲ್ಲೊ. ನೀವು ಧಾರ್‍ವಾಡದವರಲ್ವಾ ಈ ಅರಣ್ಯ ಕಾಣ್ರಿ. ನಿಮ್ಮದು ಬೈಲು ಅಂದ್ರೆ ಬೈಲು ಅಲ್ವಾ! ನಡೀರಿ ಮಾರಾಯ್ರಿ ಈ ತಾಕು ಕೊನೆ ಆಗೋವರಿಗೆ ಬಿಟ್ಟು ಬರೋವಾ' ಎಂದು ಅರಣ್ಯ ದಾಟಿಸಿದ. ಈ ಘೋರಾರಣ್ಯ ದಾಟಿದ ಮೇಲೆ ಒಂದು ಬೋಳು ಗುಡ್ಡವಿತ್ತು. ಅದು ಗಿಡ ಮರಗಳಿಲ್ಲದೆ ಹುಲ್ಲು ಮತ್ತು ಚಿಕ್ಕ ಚಿಕ್ಕ ಪೊದೆ (ಕಸಬರಿಗೆ ಕಟ್ಟುವ, ಗಕ್ಕೆಚಾಪೆಗೆ ಉಪಯೋಗಿಸುವ ಈಚಲಿನ ಜಾತಿ ಪೊದೆ. ಇದಕ್ಕೆ ಕಿರೀಚಲು ಎಂದೂ ಕರೆಯುತ್ತಾರಂತೆ) ಗಳಿರುವ ಗುಡ್ಡ ಅದನ್ನು ತೋರಿಸಿ "ಈ ಗುಡ್ಡ ಏರಿದರೆ ಮುಂದೆ ಗೌಡರ ಗದ್ದೆ, ಆದರಾಚೆ ಗೌಡರ ಮನೆ ಆಯ್ತು" ಎಂದು ಹೇಳಿ ನಾನು ಬೇಗ ಅಂಬರಗೋಡ್ಲಿಗ್ಹೋಗಿ ಬರೊ ಕೆಲ್ಸ ಉಂಟು. ನಿಲ್ಲೋ ಹಾಗಿಲ್ಲ ಮಾರಾಯ್ರೇ ಬರ್‍ತ್ನೆ" ಎಂದು ತಿರುಗಿ ಹೋದ. ನಾನು ಗುಡ್ಡ ಏರಿದೆ. ಗುಡ್ಡದ ನೆತ್ತಿಗೆ ಹೋದೆ. ಆ ಸ್ಥಾನದಿಂದ ಸುತ್ತಮುತ್ತ ಕಣ್ಣು ಬೀರಿದೆ. ಇಂದಿಗೂ ಆ ದೃಶ್ಯವು ನನ್ನ ಮನೋಮಂದಿರದಲ್ಲಿ ಚಿತ್ರಿತವಾಗಿ ಕುಳಿತಿದೆ. ಅಹೋ ಹೋ! ಏನಿದು! ಎಂದೂ ಕಾಣದಿದ್ದ ಅರಣ್ಯಸೌಂದರ್ಯ ಕಲ್ಪನಾತೀತ. ಅದರ ಭವ್ಯಚಿತ್ರಣ ಇಂದಿಗೂ ಸಂಸ್ಕಾರರೂಪವಾಗಿ ಉಳಿಯತಕ್ಕುದು ಈ ಅರಣ್ಯಸೌಂದರ್ಯ. ಮುಂದಿನ ಎತ್ತರವಾದ ಬೆಟ್ಟದ ಮೇಲಿಂದ ಕಾಣುವ ಅನಂತ ಸೌಂದರ್ಯರಾಸಿಯ ಪ್ರಕೃತಿಚಿತ್ರಣ ಮನದಾಳದಲ್ಲಿ ಮನೆಮಾಡಿ ನಿಂತಿವೆ. 45 ವರ್ಷ ಕಳೆದರೂ ಚಿತ್ರ ಮಾಸಿಲ್ಲ, ಕಂದಿಲ್ಲ ಕುಂದಿಲ್ಲ. ದಾರಿಯ ಪಕ್ಕದಲ್ಲೇ ಒಂದು ಕಲ್ಲು ಬಂಡೆಯಿತ್ತು. ವಿಲಕ್ಷಣಾನಂದ ಭಾವ ತುಂಬಿ ಹೆಜ್ಜೆಯಿಡಲಾರದವನಾಗಿ ಕುಳಿತು ಬಿಟ್ಟೆ. ಸುತ್ತಲೂ ನೋಡಿದೆ. ನಾನು ಕನಸಿನಲ್ಲಿದ್ದೇನೆಯೇ ವಾಸ್ತವ ಪ್ರಪಂಚದಲ್ಲಿದ್ದೇನೆಯೇ ಎನ್ನಿಸಿತು. ಇಂದಿಗೂ ಒಮ್ಮೊಮ್ಮೆ ಆ ಭವ್ಯಚಿತ್ರಭಾವನೆಯ ಎದುರು ಬಂದಾಗ ನಾನು ನಿಜವಾಗಿ ಈ ಪ್ರಕೃತಿಚಿತ್ರ ವಾಸ್ತವಿಕ ಪ್ರಪಂಚದಲ್ಲಿ ಕಂಡದ್ದೋ ಅಥವಾ ಭ್ರಮಾತ್ಮಕ ಕನಸಿನ ಪ್ರಪಂಚದಲ್ಲಿ ಕಂಡದ್ದೋ ಎನ್ನಿಸುವುದೂ ಉಂಟು. ಕೈಚೀಲದಿಂದ ನೋಟು ಬುಕ್ಕು ಹೊರತೆಗೆದು ಭಾಮಿನಿ ಷಟ್ಪದಿಯಲ್ಲಿ ಆ ಸುಂದರ ಪ್ರಕೃತಿಯನ್ನು ಅಂದಿನ ನನ್ನ ಶಕ್ತಿಯ ಪ್ರತಿಭೆಯ ಮಿತಿಯೊಳಗೆ ಪದ್ಯಗಳು ಬರೆದೆ. ಅವನ್ನು ಬಹುದಿನಗಳವರೆಗೆ ನನ್ನ ಮೌಲ್ಯಮಾಪನವನ್ನು ನಾನೇ ಮಾಡಿಕೊಳ್ಳುವ ದೃಷ್ಟಿಯಿಂದ ಕಾಯ್ದಿಟ್ಟಿದ್ದೆ. ಇತ್ತೀಚೆಗೆ ಹುಡುಕಿದಾಗ ಸಿಕ್ಕದ್ದೂ ಪದ್ಯ ಎಂಟರಿಂದ ಹನ್ನೆರಡರವರೆಗೆ ಮಾತ್ರ. 1943ರಲ್ಲಿನ ಶ್ರಾವಣ ಮಾಸದಲ್ಲಿ ಹೆಡತ್ರಿಯ ಸಮೀಪದ ಬೆಟ್ಟದ ಮೇಲೆ ವಿಲಕ್ಷಣಾನಂದ ಭರಿತನಾಗಿ ಅಂದಿನ ನನ್ನ ಇತಿಮಿತಿಯಲ್ಲಿ ರಚಿಸಿದ ಪದ್ಯಗಳು. ಪದ್ಯ 8 ರಿಂದ ಪ್ರಾರಂಭ. ಮೊದಲ ಏಳು ಪದ್ಯಗಳು ಲುಪ್ತವಾಗಿ ಹೋಗಿವೆ. ಇಂದು ಈ ಪದ್ಯ ನೋಡಿ ನನಗೇ ನಗು ಬರುತ್ತದೆ. ಆದರೆ

ಅಂದು ಇವೇ ಪದ್ಯಗಳು ನನ್ನಲ್ಲಿ ನಾನೂ ಒಬ್ಬ ಕವಿಯೆಂಬ ಆತ್ಮ ಪ್ರತ್ಯಯ ತುಂಬಿದ್ದಂತೂ ನಿಜ. ಉಳಿದುದು ಲುಪ್ತವಾಗಿ ಹೋದುದಕ್ಕೆ ಬಹಳ ಮರುಗುತ್ತಿದ್ದೇನೆ. ಓರ್ವ ಮುಲ್ಕೀಪರೀಕ್ಷೆ ಪಾಸಾದವನು ತನ್ನ ಪ್ರತಿಭೆ ಕಾವ್ಯವಿದ್ಯಾ ಪ್ರಚಯ ಪರಿಚಯಾದಿಗಳ ಮತ್ತು ಛಂದೋಜ್ಞಾನ, ಭಾಷಾಜ್ಞಾನ, ಕವಿತೆಯನ್ನು ರಚಿಸುವ ಸಾಮರ್ಥ್ಯ, ಅಲಂಕಾರಗಳ ಬಳಕೆಗಳ ಇತಿಮಿತಿಯಲ್ಲಿ ಎಷ್ಟರ ಮಟ್ಟಿಗೆ ರಚಿಸಿ ತನ್ನನ್ನು ತೋರಿಸಿಕೊಳ್ಳ ಬಲ್ಲ ಎಂಬುದಕ್ಕೆ ಒಂದು ಅಂದಾಜು ಮೌಲ್ಯಮಾಪನವಾಗುತ್ತಿತ್ತೆಂದು ನನ್ನ ಭಾವನೆ. ಕೆಳಗೆ ಆ ಪದ್ಯಗಳನ್ನು ಕೊಡಲಾಗಿದೆ. ಅಲ್ಲಿ ನನ್ನ ಕಣ್ಣಿಗೆ ಕಂಡ ಮಲೆನಾಡಿನ ವನಶ್ರೀ ಪ್ರಕೃತಿಶ್ರೀ ಇದೆ. ದೃಶ್ಯ ಭೂಮಿಗಿಳಿದು ಬಂದ ಸಗ್ಗಶ್ರೀಯಾಗಿತ್ತು. ಅಲ್ಲಿಂದ ಕದಲಲು ಮನಸ್ಸೇ ಬರಲಿಲ್ಲ. ಬಹಳ ಹೊತ್ತು ಕುಳಿತುಕೊಂಡೆ.

ಮರಗಳಿಲ್ಲದ ಗುಡ್ಡದಗ್ರದೊ-।
ಳಿರದೆ ನೋಡಲು ಸುತ್ತಮುತ್ತಲು।
ಹರನ ಸೃಷ್ಟಿ ರಹಸ್ಯ ಕಂಗೊಳಿಸುವುದು ಶುಭವಾಗಿ ॥
ಅದರೆ ಒಂದೆಡೆ ತೋರ್ಪ ಗಿಡಗಳೊ-।
ಳಿರದೆ ತೋರುವ ತೆಂಗು ಅಡಕೆಯು।
ಮರನ ಪರಿವೃತ್ತದೊಳು ಬಾಳೆಯ ಕಿತ್ತಳೆಯ ವನವು॥ 8

ನಾಡ ಜನಗಳ ವಸತಿಯರಿಯಲು ।
ನೋಡಬೇಕಡಕೆಗಳ ತೆಂಗಿನ ।
ನೀಡವಾಗಿಹ ಬೆಳೆದ ರಮ್ಯದ ತೋಟಗಳ ಹುಡುಕಿ॥
ಮಾಡದಿರೆ ಈ ಯುಕ್ತಿಯರಿಯದೆ।
ಕಾಡೊಳಗೆ ಸಂಚರಿಸೆ ಸುಮ್ಮನೆ।
ಕೇಡು ಬಂತೆಂದಾನುಭಾವಿಸಿದೆಲ್ಲ ತಿಳಿದಲ್ಲಿ॥ 9

ಬೀಗಿ ನಿಂತಿಹವರೆರಡು ಗುಡ್ಡ ಗ-।
ಳಾಗಸವ ಚುಂಬಿಸುವ ಗಿಡದಿಂ ।
ಆ ಗಿಡದ ಮಧ್ಯದಲಿ ಗೌಡರು ಭವ್ಯ ಭವನದಲಿ।
ಭೋಗ ತ್ಯಾಗಕೆ ಹೆಸರು ಮಾಡಿದ।
ಈ ಗವುಡ ಮನೆತನವು ಬಂಧುಗ-।
ಳಾಗಿ ತಲೆ ತಲೆಮಾರಿನಿಂದಲಿ ಬಾಳಿಬಂದಿಹರು॥10

ಆಲ ಅತ್ತಿಯು ಹೊಂಗೆ ಹೊನ್ನೆಯು।
ಮೇಳದಲಿ ಕಾನಿನಲಿ ಬೆಳೆದಿರೆ।
ಕಾಳಿಯನು ಹಿಡಿವಂದದಲ ಮಲೆನಾಡು ಹೆಚ್ಚೆಂದು॥
ನೀಳವಾಗಿಹ ಮರದ ನಿಕರದಿ।
ಮೇಳತಪ್ಪಿದ ಮರಗಳೆರಡವು।
ತಾಳದಪ್ಪದೆ ಯುದ್ಧಮಾಡಲು ಕಾಡಕಿಚ್ಚುದಿಸೆ॥ 11

ಉದಿಸಿದಂಥಾ ಅಗ್ನಿದೇವನು।
ಅದುರಿಸುವವೊಲ್ ಕಾರದೆಲ್ಲವ
ಮದಿಸಿ ಸುಡುತಲಿ ತೋರ್ಪನಿಬ್ಬರ ಮತ್ಸರದ ಫಲವ॥
ಇದರ ಗುಟ್ಟನ್ನರಿಯದಲೆ ಹಲ-।
ವಿಧದಿ ಮಾನುಷ ಜೀವಿಗಳು ತಾವ್
ಕುದಿಯುತಲಿ ಪರದಾಸ್ಯ ಬೆಂಕಿಗೆ ದೇಶವಾನಿಸುತ॥ 12

ಮನೆಯ ಮುಂಭಾಗದಲಿ ಪೂಗಳ।
ವನವು ತೆಂಗಿನ ತೋಪು ಮಾವಿನ
ಮನಕೆ ಹರುಷವನೀವ ಹಲಸಿನ ತರುಸಮೂಹಗಳು॥ 13

(ಇಲ್ಲಿ ಅರ್ಧಪದ್ಯ ಲುಪ್ತವಾಗಿದೆ. ಇದರ ಮುಂದೆಯೂ ಕೆಲವು ಪದ್ಯಗಳಿದ್ದುವು. ಅವೆಲ್ಲ ಲುಪ್ತವಾಗಿ ಹೋಗಿವೆ)

ಬಹಳ ಹೊತ್ತು ಸುತ್ತೆತ್ತಲೂ ಹೊರಳುತ್ತ ನೋಡುತ್ತ ಕುಳಿತೇ ಕುಳಿತೆ. ಪದ್ಯಗಳನ್ನು ಹೊಡೆದು ತೆಗೆದು ಬರೆದು ಛಂದಸ್ಸು ಕೂಡಿಸಿ ನನಗೆ ನಾನೇ ಓದಿ, ನನ್ನ ಪದ್ಯಗಳನ್ನು ನಾನೇ ಮೆಚ್ಚಿ ಒಮ್ಮೆಗೇ ಕಾಳಿದಾಸನೋ ಗದುಗಿನ ನಾರಾಣಪ್ಪನೋ ನನ್ನ ನಚ್ಚಿನ ಷಡಕ್ಷರಿಯೋ ಆಗಿಬಿಟ್ಟೆ. ಮಾನಸಿಕವಾಗಿ ನಾನು ಬಹಳ ಎತ್ತರಕ್ಕೇರಿದವನಾಗಿ ನನ್ನನ್ನೇ ನಾನು ಮೆಚ್ಚಿಕೊಂಡದ್ದಂತೂ ನಿಜ. ಬೇರೆಯವರೆದುರು ಅವನ್ನು ಓದಿದ್ದರೆ ಅವರು ಏನೆನ್ನುತ್ತಿದ್ದರೆಂಬುದು ಇಲ್ಲಿ ಗ್ರಾಹ್ಯವಲ್ಲ. ತನ್ನ ಬಗೆಗೆ ತನಗೇ ಮೊದಲು ವಿಶ್ವಾಸ ಹುಟ್ಟುವುದೂ ಬೆಳೆಯಬೇಕೆನ್ನುವವನಿಗಿರುವ ಒಂದು ಉತ್ತಮ ಗುಣವೆಂದು ನನ್ನ ಭಾವನೆ. ಇದನ್ನೇ ಆತ್ಮಪ್ರತ್ಯಯ ಎನ್ನುವುದು.

ಸರಿ, ನನಗೆ ಕರ್ತವ್ಯಪ್ರಜ್ಞೆ ಎಚ್ಚರಗೊಂಡಿತು. ಏಳಲಾರದ ಮನಸ್ಸಿನಿಂದ ಎದ್ದು ಮತ್ತೊಮ್ಮೆ ಸುತ್ತಮುತ್ತ ನೋಡಿ ಗೌಡರ ಮನೆಯತ್ತ ಹೊರಟೆ. ಮನೆಯೆಲ್ಲೂ ಕಾಣುತ್ತಿರಲಿಲ್ಲ. ಬರಿಯ ತೋಟ, ಗಿಡಮರಗಳು ಮಾತ್ರ ಇದ್ದುವು. ಮುಂದೆ ಎರಡು ಮೂರು ಕವಲು ದಾರಿಗಳು. ಮಲೆನಾಡಿನ ದಾರಿಗಳು ಹೊಸಬರನ್ನು ತಬ್ಬಿಬ್ಬುಗೊಳಿಸಿ ಬಿಡುತ್ತವೆ. ಒಂದು ದಾರಿ ಕೆಲವು ದಿನ ಸವೆದು ನೀರು ಹರಿದು ಅದು ಸಮತೆ ಕಳಕೊಂಡಿದ್ದರೆ ಮರದ ಹರಿ ಅಡ್ಡ ಬಂದು ಹೋಗಲು ಅನಾನುಕೂಲವಾದರೆ ಅವರು ಬೇರೊಂದು ಕಡೆ ನಡೆದು ಅದನ್ನು ಸವೆಸಿ ದಾರಿಮಾಡುತ್ತಾರೆ. ಹೀಗೆ ಹತ್ತೆಂಟು ದಾರಿಗಳು ಅಡ್ಡತಿಡ್ಡ ಮನಸ್ವೀ ಹೋಗಿರುವಾಗ ಯಾವ ದಾರಿ ಹಿಡಿದು ಹೋಗಬೇಕೆಂದು ತಿಳಿಯುವುದೇ ಕಷ್ಟವಾಗಿ ಕೊನೆಗೆ ಯಾವುದೋ ದಾರಿ ಹಿಡಿದು ಎಲ್ಲಿಗೋ ಹೋಗಿ ಬಿಡುವುದುಂಟು. ನನಗೂ ಹಾಗೇ ಆಯಿತು. ಇರುವ ಹಲವಾರು ದಾರಿಗಳಲ್ಲಿ ಬಹಳ ಸವೆದ ಮತ್ತು ಇತ್ತೀಚಿನ ಹೆಜ್ಜೆಗಳ ಗುರುತಿರುವ ಒಂದು ದಾರಿ ಹಿಡಿದೆ. ಆ ದಾರಿ ಒಂದು ತೋಟದ ಹತ್ತಿರಕ್ಕೇ ಕರೆದೊಯ್ಯಿತು. ಇದೇ ಹೆಡತ್ರಿಯೆಂಬ ಭ್ರಮೆ ಬಂತು. ಅದು ಒಂದು ಗುಡ್ಡದ ಇಳಿಜಾರಿನಲ್ಲಿತ್ತು. ನೇರವಾಗಿ ತೋಟ ದಾಟಿ ಮಾಮರ ಹಲಸಿನ ಮರಗಳ ತೋಪು ಹಿಂದೆ ಹಾಕಿ ಮನೆಹತ್ತಿರಕ್ಕೆ ಹೋದೆ. ಮನೆ ಮುಂದೆ ವಿವಿಧ ಕೆಲಸ ಮಾಡುವ ಹೆಂಗಸರೂ ಗಂಡಸರೂ ನನ್ನನ್ನೇ ಮಿಕಿ ನೋಡತೊಡಗಿದರು. ಒಬ್ಬ ಒಳಗೆ ಓಡಿ

ಹೋಗಿ, ತಮ್ಮ ಯಜಮಾನಿಗೆ ಸುದ್ದಿ ಮುಟ್ಟಿಸಿದನೆಂದು ತೋರುತ್ತದೆ. ಓರ್ವ ನಡುವಯಸ್ಸಿನ ಹೆಣ್ಣುಮಗಳು ಒಳಗಿನಿಂದ ಬಂದು "ನಿಮಗೆ ಯಾವುರಾಯ್ತು" ಎಂದಳು. ನಾನು "ನಾವು ಧಾರವಾಡ ಕಡೆಯವರು. ಅಂಬರಗೋಡ್ಲು ಬಸಪ್ಪಸೆಟ್ಟರು ಕಳಿಸಿಕೊಟ್ರು. ಪತ್ರ ಕೊಟ್ಟಿದ್ದಾರೆ ಎಂದು ಪತ್ರ ತೆಗೆಯುತ್ತಿದ್ದಂತೆ "ಯಾರಿಗೆ ಪತ್ರ ಕೊಟ್ಟಿದ್ದಾರೆ ಬಸಪ್ಪ ಸೆಟ್ರು" ಎಂದಳು. "ಹೆಡತ್ರಿ ದ್ಯಾವಪ್ಪಗೌಡರಿಗೆ" ಎನ್ನುತ್ತಿದ್ದಂತೆ ಆ ತಾಯಿ ನಗುತ್ತ "ಒಳಗೆ ಬನ್ನಿ ಕುಳಿತುಕೊಳ್ಳಿ" ಎಂದು ಹೇಳುತ್ತ" ಹೆಡತ್ರಿ ದ್ಯಾವಪ್ಪಗೌಡರ ಮನೆ ಆಗೋ ಅತ್ತ ಕಾಣೋ ಗುಡ್ಡ ಅಡ್ಲನಲ್ಲಿ ಉಂಟಲ್ಲವಾ. ದಾರಿತಪ್ಪಿ ಬಂದ್ರಿ. ಚಿಂತಿಲ್ಲ, ಕುತ್ಕೊಳ್ಳಿ. ಆಸರ ಗೀಸರ ತಕ್ಕೊಂಡು ಹೋದರಾಯ್ತು" ಎನ್ನುತ್ತ ಒಳಗೆ ಸರ್ರನೆ ಹೋಗಿಯೇ ಬಿಟ್ಟಳು. (ಈ ಊರಿಗೂ ಒಂದು ಹೆಸರುಂಟು. ಹೆಸರು ಮರೆತಿದೆ) ನಾನು ಬೆಪ್ಪನಂತೆ ಅತ್ತ ಇತ್ತ ನೋಡುತ್ತ ನಿಂತೆಬಿಟ್ಟೆ. ಆ ಮನೆಯ ಹೊರನೋಟಕ್ಕೆ ಕಾಣುವ ಭವ್ಯತೆಗೆ, ಮಾಟಕ್ಕೆ, ಕಾಣುವ ಭವ್ಯತೆಗೆ ಮಾಟಕ್ಕೆ ಮೆಚ್ಚಿ ಇವೆಲ್ಲ ಮನೆಗಳಲ್ಲ, ಅರಮನೆಗಳು ಎಂದು ಮನಸ್ಸಿನಲ್ಲಿ ಭಾವಿಸಿಕೊಳ್ಳುತ್ತ ಹೊಸಬರಿಗೆ ಈ ಮಲೆನಾಡು ಎಷ್ಟೊಂದು ತಬ್ಬಿಬ್ಬುಗೊಳಿಸುವುದಲ್ಲಾ! ಎನೆಲ್ಲ ಯೋಚನೆ ಮಾಡುತ್ತಿದ್ದಂತೆ ಆ ಹೆಣ್ಣುಮಗಳು ಒಂದು ಚಿಕ್ಕ ಬಟ್ಟಲಿನಲ್ಲಿ ರಾಪಿನ ಬೆಲ್ಲ ಮತ್ತು ನೀರನ್ನು ಪಾರ್ಶ್ವದ ಕಟ್ಟೆಯ ಮೇಲಿಟ್ಟು "ಏಕೆ? ಕೂತ್ಕೊಳ್ಳಿ, ನಿಂತೇ ಇದ್ದೀರಲ್ಲಾ" ಆಸರ ತಕ್ಕೊಳ್ಳಿ ದ್ರಾವಪ್ಪಗೌಡರು ನಮ್ಮ ಬಳಗವೇ ಹೌದು" ಎಂದಳು. ಆ ಹೊತ್ತಿಗೆ ನನ್ನ ಹೊಟ್ಟೆ ತುಂಬಾ ಹಸಿದಿತ್ತು. ಆಸರ ಎಂದರೆ ನಾನು ಊಟ ಎಂದು ತಿಳಿದಿದ್ದೆ. ಅವರು ತಂದಿಟ್ಟದ್ದು ರಾಪಿನ ಬೆಲ್ಲ, ನೀರು (ರಾಪಿನ ಬೆಲ್ಲ : ಮಲೆನಾಡಿನ ಹಿಂದೆ ತಮ್ಮ ಮನೆಯ ಉಪಯೋಗಕ್ಕೆಷ್ಟು ಬೇಕೋ ಅಷ್ಟು ಬೆಲ್ಲವನ್ನು ಆಗ ಬಹು ಒಳ್ಳೆಯ ಜಾತಿಯ ಕಬ್ಬೆಂದು ಹೇಳಲಾಗುತ್ತಿದ್ದ ಹುಲಗಬ್ಬನ್ನು ಬೆಳೆದು ಗಾಣಮಾಡಿ ಒಂದು ಹದದಲ್ಲಿ ಅದನ್ನು ದಪ್ಪನೆಯ ಗಡಿಗೆ ಅಥವಾ ಡಬ್ಬಿಗಳಲ್ಲಿ ತುಂಬಿಡುತ್ತಿದ್ದರು. ಆ ಬೆಲ್ಲ ತಳದಲ್ಲಿ ಮಳಲಿನಂತೆ ಸ್ವಲ್ಪ ಗಟ್ಟಿಯಾಗಿಯೂ ಮೇಲುಭಾಗದಲ್ಲಿ ಜೇನು ತುಪ್ಪದಂತೆ ಮಂದವಾಗಿ ಅಳ್ಳಕಾಗಿ ಇರುತ್ತಿತ್ತು. ಜೇನಿನಂತಹ ಬೆಲ್ಲವನ್ನು ತಿನ್ನಲು ಉಪಯೋಗಿಸುತ್ತಿದ್ದರು. ನೆಲದಲ್ಲಿ ಹುಗಿದು ಗಡಸಿ ಕಲ್ಲುಸಕ್ಕರೆ ಮಾಡುತ್ತಿದ್ದರು. ಇದೇ ರಾಪಿನ ಬೆಲ್ಲ.) ಇದೇ ಆಸರ. ಏನೂ ಇಲ್ಲದ ಹೊಟ್ಟೆಗೆ ಸಿಕ್ಕಷ್ಟೇ ಲಾಭವೆಂದು ಬಟ್ಟಲಲ್ಲಿಟ್ಟ ಬೆಲ್ಲವೆಲ್ಲವನ್ನು ನುಂಗಿ ಮೇಲೆ ಅರ್ಧಚಂಬು ನೀರು ಹಿಗ್ಗಿದೆ. ಚುರುಗುಡುತ್ತಿದ್ದ ಹೊಟ್ಟೆಗಷ್ಟು ಸಮಾಧಾನವೆನಿಸಿತು. "ಅಮ್ಮಾ, ನಾನಿನ್ನು ಹೆಡತ್ರಿಗೆ ಹೊರಡುತ್ತೇನೆ. ದಯವಿಟ್ಟು ಸ್ವಲ್ಪ ಯಾರನ್ನಾದರೂ ಕಳಿಸಿ ದಾರಿ ತೋರಿಸಿದರೆ ಉಪಕಾರವಾಗುವುದು" ಎಂದೆ. ಆ ತಾಯಿ "ಸೀನಾ, ಇವ್ರಿಗೆ ದೊಡ್ಡಗೌಡ್ರ ಮನೆ ದಾರೀ ತೋರ್ಸಿಬಿಟ್ಟು ಬಾರೋ" ಎಂದು ಹೇಳಿದ್ದರ ಮೇರೆಗೆ ಸೀನ ಬಂದು ನನ್ನನ್ನು ಕರೆದುಕೊಂಡು ಗುಡ್ಡ ಸೌದ್ಲಿನಲ್ಲಿದ್ದ ಅಡಿಕೆ ತೋಟ ದಾಟಿ ಅಲ್ಲಿದ್ದ ದೊಡ್ಡ ದೊಡ್ಡ ಮಾಮರ ಹಲಸಿನ ಮರಗಳನ್ನು ದಾಟಿ ಸ್ವಲ್ಪ ಮುಂದೆ ಬಂದು "ದೊಡ್ಡ ಗೌಡ್ರ ಮನೆ ಇಲ್ಲಿಗೆ ಸ್ವಲ್ಪವೇ ದೂರ. ಮುಂದಿನ ಆ ಗುಡ್ಡದ ಇಳಕಲ್ಲಲ್ಲಿ ತ್ವಾಟಾ ಕಣ್ಸೋಲ್ವೇ ಅದೇ ಅವರ ತ್ವಾಟಾ. ತ್ವಾಟದಲ್ಲೇ ಮನೆ ಅಕೋ ಅಲ್ಲಿ. ಎಡಗಡೆ ಗದ್ದೆ ಬೈಲಲ್ಲಿ ದೊಡ್ಡ ಗೌಡ್ರೇ ನಿಂತು ಕಳೆ ತೆಗೆಸ್ತಾ ನಿಂತಿದ್ದಾರಲ್ಲ! ಅದೋ ಅಲ್ಲಿ" ಎಂದು ಬೆರಳು ಮಾಡಿ ತೋರಿಸುತ್ತ "ನನಗೆ ಮರಳಿ ಹೋಗು ಹೇಳ್ತಿರಾ" ಎಂದ. ನಾನು "ನೀನು ಹೋಗು. ನಾನು ಗೌಡರಿದ್ದಲ್ಲಿಗೇ ಹೋಗಿ ಅವರನ್ನು ಕಾಣುತ್ತೇನೆ" ಎಂದು ಹೇಳಿ ಅವನನ್ನು ಕಳಿಸಿದೆ. ನಾನು ಕಾಡಿನ ದಾರಿಯಿಂದ ಗದ್ದೆ ಬೈಲಿಗಿಳಿದೆ. ಎರಡು ಗುಡ್ಡಗಳ ಮಧ್ಯದ ವಿಶಾಲವಾದ

ಬಯಲೇ ಗದ್ದೆಯ ಬೈಲು. ಅದು ಅಂಕುಡೊಂಕಾಗಿ ಕಣ್ಣು ಹಾಯುವವರೆಗೂ ಬಹು ಸುಂದರವಾಗಿ ಒಂದೇ ಅಳತೆಯ ಸಸ್ಯಶಾಮಲವಾದ ಬತ್ತದ ಬೆಳೆಯ ಸುಂದರ ನೋಟದ್ದು. ಅದರ ಅಕ್ಕಪಕ್ಕ ದೊಡ್ಡದೊಡ್ಡ ಅಡಕೆಯ ತೋಟಗಳು. ಅಡಕೆಯ ತೋಟದ ಸುತ್ತ ಬೃಹತ್‌ಭಾವದಲ್ಲಿ ಬೆಳೆದು ನಿಂತ ಅಲ್ಲಿನ ಜನರ ನಿತ್ಯ ನಿತ್ಯ ಬಳಕೆಗೆ ಬೇಕಾದ ಮಾವು , ಹಲಸು, ಧೂಪ, ಹೊನ್ನೆ, ತೇಗ, ಮತ್ತಿ, ದಿಂಡಿಲು ಮರಗಳು. ಅದರ ಹಿಂಭಾಗದಲ್ಲಿ ಗುಡ್ಡದ ನೆತ್ತಿಯವರೆಗೆ ಬಾಂದಳಮಂ ಪಳಂಚಲೆದಾಡುತ್ತ ಶೋಭಿಸುವ ವಿವಿಧ ಮರಗಿಡಗಳ ದಟ್ಟಕಾಡು. ಶಬ್ದಕ್ಕೆ ನಿಲುಕದ ಸೌಂದರ್ಯ ಅದು.

ಗದ್ದೆಯ ಬಯಲಿನಲ್ಲಿ ಹಾಳೆಗಳ ಬದುವಿನ ಮೇಲೆ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕುತ್ತ ಬೀಳುತ್ತೇಳುತ್ತ ದ್ಯಾವಪ್ಪ ಗೌಡರು ನಿಂತಿರುವಲ್ಲಿಗೆ ಗುರಿಯಿಟ್ಟು ನಡೆದೆ. ಸ್ವಲ್ಪ ದೂರದಿಂದಲೇ ಗೌಡರು ನನ್ನನ್ನೂ, ನಾನು ಗೌಡರನ್ನು ನೋಡಿದೆವು. ಅವರೊಬ್ಬ ಆಜಾನುಬಾಹು ಶರೀರಿ. ಮೊಳಕಾಲವರೆಗೆ ಉಟ್ಟ ಒಂದು ಪಂಜೆ. ಮೈಮೇಲೊಂದು ದೊಡ್ಡ ದುಪ್ಪಟ್ಟಿ ಅಗಿನ ಅವರ ಮೈಮೇಲಿನ ಬಟ್ಟೆಗಳು. ಬಲಗೈಯಲ್ಲಿ ಬಂಗಾರದ ದೊಡ್ಡ ಕೈಗಡಗ. ಬಲಗಿವಿಯ ಮೇಲ್ಭಾಗದಲ್ಲಿ ಒಂದೇ ಒಂದು ದೊಡ್ಡ ಮುತ್ತನ್ನು ಒಳಗೊಂಡಿರುವ ಮೇಲು ಮುರುವು. ಆಧುನಿಕ ಜಗತ್ತಿನ ಸುಳಿಗೆ ಸಿಕ್ಕು ತಮ್ಮನ್ನು ತಾವು ಸುಂದರಗೊಳಿಸಿಕೊಳ್ಳುವ ಯಾವ ಹವ್ಯಾಸಕ್ಕೂ ಹೋಗದಿರುವ ಮೈಮಾಟದ ಗೌಡರ ಮುಖ ಹತ್ತೂ ಹದಿನೈದು ದಿನಗಳ ಹಿಂದೆ ಕ್ಷೌರಮಾಡಸಿಕೊಂಡಿದ್ದರೆಂದು ಸಾರುತ್ತಿತ್ತು. ಅವರೂ ಓರ್ವಶ್ರಮಜೀವಿಯ ಮೈಕಾಂತಿ ಹೇಗಿರಬೇಕೋ ಹಾಗಿದ್ದರು. ಮೈದಾರ್ಢ್ಯ ಮಾತ್ರ ಪ್ರಬಲವಾಗೇ ಇತ್ತು. ಕಳೆ ತೆಗೆಯುತ್ತಿದ್ದ ನೂರಾರು ಜನ ಹೆಂಗಸರು ಮತ್ತೂ ಗಂಡಸರು ಎದ್ದು ನಿಂತು ನನ್ನನ್ನೇ ನೋಡುತ್ತ ನಿಂತರು. ನಿರ್ನಿಮಿತ್ತ ನಗೆಗೆ ಹೆಸರಾದ ಹೆಂಗಸರು ಕೆಲವರು ನಕ್ಕರು. ಕೆಲವರು ಪಿಸುಮಾತಾಡಿದರು. ಕೆಲವರು ಮೂಗುಮುರಿದರು. ಗಂಡಸರದು ಇನ್ನೊಂದು ಬಗೆ. ಒಬ್ಬರೊಡನೊಬ್ಬರು ತಲೆ ಕೂಡಿಸಿ ಮಾತಾಡಿದರು. ಕೆಲವರು ಗಂಭೀರವಾಗಿ ಒಮ್ಮೆ ನೋಡಿ ತಲೆಬಗ್ಗಿಸಿ ತಮ್ಮ ಕೆಲಸಕ್ಕೆ ಮತ್ತೆ ಬಾಗಿದರು. ಕೆಲವರು ಒಮ್ಮೆ ನನ್ನನ್ನು, ಮತ್ತೊಮ್ಮೆ ಗೌಡರನ್ನು ಕೈಯಲ್ಲಿ ಕಳೆಯ ಹುಲ್ಲು ಕುರ್ಚಿಗಳನ್ನು ಹಿಡಿದೇ ನೋಡತೊಡಗಿದರು.

ನೇರವಾಗಿ ಗೌಡರ ಹತ್ತಿರಕ್ಕೆ ನಗುನಗುತ್ತ ಹೋಗಿ ಸ್ವಲ್ಪದೂರದಲ್ಲಿ ನಿಂತು ಶಿರಬಾಗಿ ಕೈಮುಗಿದು "ನಮಸ್ಕಾರ ಸ್ವಾಮಿ" ಎಂದೆ. ಅವರು ಎದೆವರೆಗೆ ಕೈಯೆತ್ತಿ ನಮಸ್ಕಾರ ಎಂದರು. "ನಿಮಗೆ ಯಾವೂರಾಯ್ತು" ಎನ್ನುತ್ತಿದ್ದಂತೆ ಬಸಪ್ಪಸೆಟ್ಟರ ಕಾಗದ ಕೊಡುತ್ತ "ನನ್ನದು ಧಾರ್ವಾಡ ಸೀಮೆ. ಇಲ್ಲೆ ಶಿವಮೊಗ್ಗದಲ್ಲಿ ಟ್ರೈನಿಂಗ್ ಓದಲು ಬಂದಿದ್ದೇನೆ" ಎಂದೆ. ಕಾಗದ ಓದಿ ನಕ್ಕು ಅದಾರನ್ನೋ ಕರೆದು "ಇವರಿಗೆ ಮನೆಗೆ ಕರೆದು ಕೊಂಡು ಹೋಗಿ ಮೇಷ್ಟ್ರಿಗೆ ಸ್ನಾನ ಪೂಜೆ ಮಾಡಿಸೋಕೆ ಹೇಳ್ಬಿಟ್ಟು ಬಾ" ಎಂದರು. ನಾನು ನಮಸ್ಕಾರ ಹೇಳಿ ಅವರ ಮನೆಗೆ ಹೋದೆ. ಇಂದ್ರ ಭವನದಂಥ ಬಹು ಚಿತ್ತಾಕರ್ಷಕ ಮನೆ. ಮನೆಯ ಎಡಪಕ್ಕದಲ್ಲಿ ಸ್ನಾನದ ಮನೆಯಿತ್ತು. ಆ ಮನೆ ಚಿಕ್ಕಸ್ನಾನದ ಮನೆಯಲ್ಲ. ಅದರಲ್ಲೇ ಮೂರುಭಾಗ ಮೊದಲ ಭಾಗದಲ್ಲಿ ಬಾವಿ, ಅದರ ಪಕ್ಕದಲ್ಲಿ ಒಂದು ಹಳೆಗಾಲದ ದೊಡ್ಡ ಒಲೆಯ ಮೇಲೆ ದೈತ್ಯಾಕಾರದ ಸದಾ ಬಿಸಿ ನೀರಿನಿಂದ ತುಂಬಿರುವ ಹಂಡೆ. ಆ ಒಲೆಗೆ ಹತ್ತಾರು ಮೊಳದುದ್ದದ ಸದಾ ಒಲೆಯಲ್ಲಿ ಉರಿಯುತ್ತಿರುವ ಮರದ ದಪ್ಪನೆಯ ತುಂಡು. ಮೂಲೆಯಲ್ಲಿ ಐದಾರು ಗಾಡಿಗಳಷ್ಟು ಸೌದೆರಾಶಿ. ಎರಡನೆಯ ಭಾಗದಲ್ಲಿ ಉಪಾಧ್ಯಾಯರು ಮತ್ತು ನಮ್ಮಂಥ ಅತಿಥಿಗಳು ಬಂದರೆ

ಉಳಿಮುಕೊಳ್ಳಲು ಮಾಡಿರುವ ವ್ಯವಸ್ಥಿತ ಸೌಲಭ್ಯಗಳ ದೊಡ್ಡ ಮೂರನೆಯ ಭಾಗವೇ ಗೌಡರ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವ ಪಾಠಶಾಲೆ. ನನಗೆ ಇಲ್ಲೇ ಬಿಡಾರದ ಏರ್ಪಾಡು.

ಕಳಿಸಲು ಬಂದ ಆಳು ಉಪಾಧ್ಯಾಯರನ್ನು ಕರೆದು ಏನೇನೋ ಹೇಳಿ ಹೋಗಿಬಿಟ್ಟ. ಉಪಾಧ್ಯಾಯರು ನನ್ನನ್ನು ಸ್ವಾಗತಿಸುತ್ತ "ಬನ್ನಿ ಬನ್ನಿ! ಬಹಳ ಸಂತೋಷ. ಮೊದಲು ಸ್ನಾನ ಮಾಡಿ ಪೂಜೆ ತೀರಿಸಿ ಊಟಮಾಡಿ ಬಿಡಿ. ಆಮೇಲೆ ಒಡೆಯರು ಬರುತ್ತಾರೆ.(ಗೌಡರಿಗೆ ಒಡೆಯರು ಎನ್ನುವ ಇನ್ನೊಂದು ಗೌರವಸೂಚಕ ಹೆಸರು) ಅಷ್ಟರಲ್ಲಿ ತಾವು ಒಂದು ನಿದ್ದೆಯನ್ನು ಮಾಡಬಹುದು, ದಣಿದು ಬಂದಿದ್ದೀರಿ ಪಾಪ!" ಎಂದು ನಯವಿನಯ ಭಕ್ತಿಭಾವದಿಂದಲೇ ಮಾಡಿದ ಉಪಚಾರಕ್ಕೆ ನಾನು ಬಹಳ ಪ್ರಸನ್ನಗೊಂಡೆ. ಮನಸ್ಸಿನಲ್ಲಿ ಯಾರು ಯಾರಿಂದ ಸೇವೆಮಾಡಿಸಿಕೊಳ್ಳುವ ಭಾಗ್ಯವನ್ನು ದೇವರು ಹಣೆಯಲ್ಲಿ ಬರೆದಿರುವನೋ ಎನ್ನುತ್ತ ಉಪಾಧ್ಯಾಯರ ಪೂರ್ವೋತ್ತರಗಳನ್ನು ಅವರ ಶಿಕ್ಷಣ ಪದ್ಧತಿಯನ್ನೂ ತಿಳಿದುಕೊಂಡೆ. ಅದೊಂದು ವ್ಯವಸ್ಥಿತ ಶಾಲಾ ಪಠ್ಯ ವಿಷಯಗಳಂತೆ ನಡೆಸಿಕೊಂಡು ಬರುವ ಶಾಲೆಯಲ್ಲ, ಪುಸ್ತಕಗಳು ಶಾಲೆಯ ಪಠ್ಯ ಪುಸ್ತಕಗಳೇ. ಆ ಶಾಲೆಯ ಮೇಲೆ ಯಾವ ಸರಕಾರಕ್ಕೂ ಅಧಿಕಾರವಿಲ್ಲ, ಅಲ್ಲಿಯ ಮಕ್ಕಳು ಯಾವ ನೌಕರಿಗೂ ಬೇಕಾಗುವ ಸರ್ಟಿಫಿಕೇಟ ಆಸೆಯಿಂದ ಮಾಡಬಾರದ ಅವ್ಯವಹಾರ ಮಾಡಿ ಓದದೆ ಪಾಸಾಗಬೇಕೆನ್ನುವವರೂ ಅಲ್ಲ. ಓದು ಬರೆಹ, ಲೆಕ್ಕ ಮಗ್ಗಿ ಗಣಿತ, ಲೋಕವ್ಯವಹಾರ ಪತ್ರವ್ಯವಹಾರ ಮೊದಲಾದವುಗಳನ್ನು ಕಡ್ಡಾಯವಾಗಿ ಬೋಧಿಸಿದರೆ ಆಯಿತು, ಶಾಲೆಯ ಉದ್ದೇಶ ಈಡೇರಿದಂತೆಯೇ ಎಂಬುದನ್ನು ಉಪಾಧ್ಯಾಯರಿಂದಲೇ ಕೇಳಿ ತಿಳಿದುಕೊಂಡೆ. ಉಪಾಧ್ಯಾಯರು ಸುಮಾರು ಇಪ್ಪತ್ತು ಇಪ್ಪತ್ತೈದು ವರ್ಷಗಳ ಹಿಂದೆಯೇ ಇಲ್ಲಿಗೆ ಬಂದು ಆ ಮನೆಯ ಮಕ್ಕಳಿಗೆ ಉಪಾಧ್ಯಾಯರೂ ಸ್ವಾಗತಕಾರರೂ, ಗಮಾಸ್ತರರೂ ಅರ್ಧಮರ್ಧ ಮ್ಯಾನೇಜರೂ ಆಗಿ ಕೆಲಸ ಮಾಡುತ್ತ ಬಂದ ಓರ್ವ ನಿಷ್ಠಾವಂತ ವ್ಯಕ್ತಿ. ಲೋಕವ್ಯವಹಾರ ಬಲ್ಲವ, ಆಚಾರಶೀಲ, ಕನ್ನಡ ಇಂಗ್ಲೀಷ್ ಗೊತ್ತಿದ್ದವ ಎಂಬುದನ್ನೆಲ್ಲ ತಿಳಿದು ಬಹುಸಂತೋಷಗೊಂಡೆ. ಅವನ ಸೇವೆ ಗೌಡರಿಗೆ ಅತ್ಯಂತ ತೃಪ್ತಿ ತಂದಿತ್ತಿದೆಯೆಂದೂ ಗೊತ್ತಾಯಿತು.

ನನಗೆ ಸ್ನಾನ ಮಾಡಿಸಿ, ಸ್ನಾನದ ಮನೆಯಿಂದ ಪ್ರಧಾನ ಮನೆಗೆ ಹಾಕಿದ ಕಲುಚಪ್ಪಡಿಯ ಮೇಲೆ ನಡೆದು ಮನೆ ಹೊಕ್ಕೆ. ನಿಜವಾಗಿಯೂ ಆ ಮನೆ ಇದು ಸುಖದಾಗರಂ ಎನ್ನುವುದಕ್ಕೆ ಬೇಕಾಗುವ ಸಮಗ್ರ ಲಕ್ಷಣಗಳಿಂದ ಕೂಡಿದುದಾಗಿತ್ತು. ಮನೆಯ ಮಹಾದ್ವಾರ ದಾಟಿ ದೊಡ್ಡ ಬಾವಂಜಿ. ಸುತ್ತಮುತ್ತ ಹತ್ತೂ ಹನ್ನೆರಡು ಕೊಠಡಿಗಳು. ಕೊಠಡಿಗಳಲ್ಲಿ ತುಂಬಿದ ಚೀಲಗಳ ನಿಟ್ಟು. ಕೊಠಡಿಗಳ ಸುತ್ತಣ ಹಜಾರದಲ್ಲಿ ಒಂದು ಮೂಲೆಯಲ್ಲಿ ಅಡಿಕೆರಾಸಿ. ಮತ್ತೊಂದು ಕಡೆ ಮೆಣಸು. ಹಸಿ ಶುಂಠಿ, ಸುವರ್ಣಗಡ್ಡೆ, ಸುಲಿಯದಿದ್ದ ಗೋಟಡಿಕೆ ರಾಶಿ, ಬಾಳೆಕಾಯಿ ಗೊನೆಗಳ ಸಮೂಹ. ಇವುಗಳಿಂದ ನೋಡುವವರಿಗೆ ಗೌಡರ ವ್ಯವಸಾಯದ ನೂರಾರು ಮುಖಗಳ ಪರಿಚಯ ಮಾಡುವಂತಿತ್ತು. ಈ ಬಾವಂಜಿ ಗೃಹದ ಮಧ್ಯದ ಬಾಗಿಲು ದಾಟಿ ಹೋದರೆ, ನೂರಾರು ಜನಗಳು ಏಕಕಾಲದಲ್ಲಿ ಕುಳಿತು ಊಟ ಮಾಡಲು ಯೋಗ್ಯವಾದ ಊಟದ ಮನೆ. ಆ ಊಟದ ಮನೆಯ ಸುತ್ತಣ ನಾಗವಂದಿಗೆಯ ಮೇಲೆ ಒಂದು ಕಡೆ ರಾಪಿನ ಬೆಲ್ಲದ ಕೊಡಗಳ ಸಾಲು, ಮತ್ತೊಂದೆಡೆ ಬೂದುಗುಂಬಳಗಳ ಸಾಲು, ಇನ್ನೊಂದೆಡೆ ಸಿಹಿಗುಂಬಳ, ಐದಾರು ತಿಂಗಳು ಕೆಡದಂತೆ ಇರುವ ಸವತೆಹಣ್ಣುಗಳ ಸಾಲು ಕಣ್ಣಿಗೆ ಬಿದ್ದವು.

ಸುತ್ತಲೂ ಕಟ್ಟಿದ್ದ ತೂಗುಕೋಲುಗಳ (ನೆಲೋಗಣೆಗಳ) ಮೇಲೆ ತೂಗುಬಿಟ್ಟ ಉಳ್ಳೇಗಡ್ಡಿಯ ಜಡೆಜಡೆಗಳಾಗಿ ಹೆಣೆದು ಆ ಕೋಲುಗಳ ಮೇಲೆ ತೂಗುಹಾಕಿದ್ದಾರೆ. 'ಇವು ವರ್ಷದುದ್ದಕ್ಕೂ ಕೆಡದಂತೆ ಇರುತ್ತವೆ. ಬೇಕಾದಾಗ ಬೇಕಾದಷ್ಟನ್ನು ಆ ಜಡೆಗಳಿಂದ ತೆಗೆದು ಉಪಯೋಗಿಸುವರು) ಮತ್ತೊಂದು ಕಡೆ ಅನೇಕ ಬಗೆಯ ಉಪ್ಪಿನ ಕಾಯಿ ಭರಣಿಗಳ ಸಾಲು. ಮತ್ತೊಂದೆಡೆ ಜೇನುತುಪ್ಪವನ್ನು ಸಂಗ್ರಹಿಸಿಟ್ಟ ದೊಡ್ಡ ದೊಡ್ಡ ಸೀಸೆಗಳ ಸಮೂಹ. ಇಷ್ಟೊಂದು ವ್ಯವಸ್ಥಿತ ಜೀವನವಿಧಾನದ ಮನೆಯನ್ನು ನಾನು ಒಳಹೊಕ್ಕು ನೋಡಿದ್ದು ಈಗಲೇ ಹಿಂದೆ ಹಿರೇಕಾಂಶಿಯಲ್ಲಿದ್ದಾಗ ಕೆಲವು ಮಲಾಗೌಡರ ಮನೆಗಳನ್ನು ಕಂಡಿದ್ದೆ. ಅವು ನಮ್ಮಗಳ ಮನೆಯ ಜೀವನ ಸೌಲಭ್ಯಗಳಿಗಿಂತ ಶ್ರೇಷ್ಠವಾಗಿದ್ದರೂ ಹೆಡತ್ರಿಗೌಡರ ಮನೆಯ ದೃಷ್ಟಿಯಿಂದ ತೀರಾ ಕೆಳದರ್ಜೆಯವು, ಬಹಳ ಬಡಕಲು ಎನ್ನಬಹುದು. ಪೂರ್ವದಲ್ಲಿ ಇವರೆಲ್ಲ ಕೆಳದಿ ರಾಜಮನೆತನವೋ ಅಥವಾ ಇನ್ನೊಂದೋ ಪೂರ್ಣವಾಗಿ ಜ್ಞಾಪಕವಿಲ್ಲ, ಅವರ ವಂಶಸ್ಥರೆಂದು ಉಪಾಧ್ಯಾಯರು ಹೇಳಿದ್ದು ಜ್ಞಾಪಕ. ಇವರ ಜೀವನ ಸಮೃದ್ಧಿ ವಿಧಾನಗಳಿಂದ ಕೆಳದಿ, ಇಕ್ಕೇರಿ ಮೊದಲಾದ ರಾಜರ ರಾಜವಂಶಸ್ಥರ ಜೀವನ ವಿಧಾನಗಳನ್ನು ಗುರುತಿಸಬಹುದಾಗಿತ್ತು. ಒಂದು ರೀತಿಯಲ್ಲಿ ಇವು ದಾಸೋಹ ಗೃಹಗಳೇ,

ಅಡಿಗೆಯನ್ನು ಸ್ವತಃ ಗೌಡಶಾನಿಯವರು ಮತ್ತು ಮನೆಮಂಡಳಿಯವರೇ ಕೈ ಮುಟ್ಟಿ ತನುಮುಟ್ಟಿ ಮನಮುಟ್ಟಿ ಮಾಡಬೇಕು. ಉಳಿದ ಕೆಲಸಕ್ಕೆ ಆಳೋ ಕಾಳೋ ಇರಬಹುದು. ಆಳು ಹೇಗೆಂದರೆ ಹಾಗೆ ಬೇಯಿಸಿದ ಹಾಕಿದ ಅನ್ನ ತಿಂದು ಬದುಕುವ ಜನ ಇವರಲ್ಲ. ಎಲ್ಲವನ್ನೂ ಸ್ವತಃ ಕೈ ಮುಟ್ಟಿ ಮಾಡಿ ತಿಂದು ತಿನ್ನಿಸಿ ದೈಹಿಕ ಚಟುವಟಿಕೆಯನ್ನು ಮಾನಸಿಕ ಉತ್ಸಾಹವನ್ನು ಮರೆಯುವ ಈ ಗೌಡರುಗಳ ಕಾಯಕನಿಷ್ಠೆ ತುಂಬಾ ಆದರ್ಶಮಯವಾದದ್ದು. ಸಮೃದ್ಧಸಂಪತ್ತಿನಲ್ಲೂ ಶ್ರಮಜೀವನದಿಂದ ಬದುಕುವ ಇವರಿಗೆ ಎತ್ತಿ ಕೈಮುಗಿಯಬೇಕು ಎನ್ನಿಸಿತು.

ಉಪಾಧ್ಯಾಯರು ನನ್ನನ್ನು ಶಿವಪೂಜಾಗೃಹವನ್ನು ಹೊಗಿಸಿ ತಾವೂ ಮಡಿಯುಟ್ಟು ಬಂದರು. ನಾನು ಪೂಜೆಮುಗಿಸಿಕೊಂಡು ಬಂದೆ. ಇಬ್ಬರೂ ಕುಳಿತು ಊಟ ಮಾಡಿದೆವು. ಸಮೃದ್ಧವಾದ ಊಟ. ನಮ್ಮಂಥವರು ಯಾರಾದರೂ ಹೊಸ ಅತಿಥಿಗಳು ಬಂದರೆ ಬಂದೊಡನೆ ಅಡಿಗೆಮನೆಗೆ ರಿಪೋರ್ಟ ಹೋಗುತ್ತದೆ. ಆ ಕೂಡಲೆ ಗಂಧಶಾಲಿಯನ್ನು ತೊಳೆದು ಒಲೆಯ ಮೇಲೆ ಇಟ್ಟು ಬಿಡುತ್ತಾರೆ. ಅವರ ಮನೆಯಲ್ಲಿ ಹುರುಳಿಕಟ್ಟಿನ ಸಾರು ಸದಾ ಇರುತ್ತದೆ. ಅದಕ್ಕೆ ತಂಗುಳು ಎಂಬ ಶಾಪ ಮಾತ್ರ ತಟ್ಟುವುದೇ ಇಲ್ಲ ಮತ್ತು ಅದು ತಣ್ಣನೆಯ ಕೂಳು ಆಗುವುದೇ ಇಲ್ಲವಲ್ಲ. ಸದಾ ಒಲೆಯ ಮೇಲೆಯೇ ಇರುವ ಸಾರಿನ ಗಡಿಗೆ. ಆದ್ದರಿಂದ ಅದು ಸದಾ ಬೆಂಗೂಳೇ! ದಿನದಿನವೂ ತಮ್ಮ ಮನೆಯ ಎತ್ತುಗಳಿಗೆ ಹುರುಳಿಯನ್ನು ಕುದಿಸಿ ತಿನ್ನಿಸುವುದೇ ಅವಕ್ಕೆ ದಾಣಿ. ಹಾಗೆ ದಿನದಿನವೂ ಕುದಿಸಿದಾಗ ಬರುವ ಹುರುಳಿಯ ಕಟ್ಟನ್ನು ಆಗಡಿಗೆ ಸುರಿಯುತ್ತಿರುತ್ತಾರೆ. ಅದಕ್ಕೆ ಮೆಣಸಿನ ಕಾಯಿ ಮೆಣಸಿನ ಪುಡಿ ಸ್ವಲ್ಪ ಉಪ್ಪು ಹಾಕಿ ಬಿಡುತ್ತಾರೆ. ಅದಕ್ಕೆ ಮೆಣಸಿನ ಕಾಯಿ, ಮೆಣಸಿನ ಪುಡಿ ಸ್ವಲ್ಪ ಉಪ್ಪು ಹಾಕಿ ಬಿಡುತ್ತಾರೆ. ಅದು ಕುದ್ದು ಕುದ್ದು ಮಂದವಾಗಿ ಸದಾ ಹುರುಳಿ ಸಾರಾಗಿಯೇ ಇರುತ್ತದೆ. ಇದು ಕಾಯಂ ಸಾರು; ಇಪ್ಪತ್ತ ನಾಲ್ಕು ತಾಸೂ ಇದು ಒಲೆಯ ಮೇಲೆ ಇದ್ದು ಬಿಸಿಯಾಗಿಯೇ ಇರುವುದರಿಂದ ಇದರ ರುಚಿಯನ್ನು ಬಲ್ಲವನೇ ಬಲ್ಲ. ಅದರ ಜೊತೆಗೆ ದಿನದಿನವೂ ತರಕಾರಿ ಹಾಕಿ ಮಾಡಿದ ಬೇಳೆ ಸಾರು ಇದ್ದೇ ಇರುತ್ತದೆ. ಯಾವ ಸಾರನ್ನಾದರೂ ಹಾಕಿಸಿಕೊಂಡು ಉಣ್ಣಬಹುದು ಅಥವಾ ಎರಡೂ ಸಾರನ್ನು

ಒಂದಾದ ಮೇಲೊಂದರಂತೆ ನೀಡಿಸಿಕೊಂಡು ಉಣ್ಣಬಹುದು. ಕೊನೆಗೆ ಗಟ್ಟಿಯಾದ ಮೊಸರು ಹಾಲು ಇದ್ದೇ ಇರುತ್ತದೆ. ಹಾಲು ಮೊಸರು, ತುಪ್ಪಕ್ಕೆ ಜಗತ್ತಿನಲ್ಲಿ ಎಲ್ಲಿಯಾದರೂ ಬರವಿದ್ದೀತು. ಮಾಲಾಗೌಡರ ಮನೆಯಲ್ಲಿ ಅದಕ್ಕೆ ಬರವಿಲ್ಲ. ಹೋಳಿಗೆ ಕರಿಗಡಬು ಮಾಡಿದ ದಿನವಂತೂ ತುಪ್ಪದಲ್ಲಿ ಅವನ್ನು ಚೆನ್ನಾಗಿ ನೆನೆಸಿಕೊಂಡೇ ತಿನ್ನಬೇಕು; ಅವರು ತಿನ್ನಿಸಬೇಕು ನಮ್ಮಂಥವರಿಗೆ.

ನಾನು ಗಂಧಶಾಲಿ ಅಕ್ಕಿಯ ಬಿಸಿಬಿಸಿ ಅನ್ನಕ್ಕೆ ಈ ಹುರುಳಿ ಕಟ್ಟಿನ ಸಾರನ್ನೇ ನೀಡಿಸಿಕೊಂಡು ಸಮೃದ್ಧವಾಗಿ ಊಟಮಾಡಿದೆ. ಅನ್ನದ ಮೇಲೆ ತುಪ್ಪ ನಿರೀಕ್ಷಣೆಗೆ ಮಿಕ್ಕಿ ಬಿತ್ತು. ತುಪ್ಪ ಅನ್ನವನ್ನು ಕಲಸಿ ಹೊಟ್ಟೆ ಅನ್ನನಾಳ ತುಪ್ಪದ ಜಿಡ್ಡಿನಿಂದ ಮೃದುವಾಗಲೆಂದು ಮೊಟ್ಟಮೊದಲು ನಾಲ್ಕಾರು ತುತ್ತು ತುಪ್ಪಅನ್ನವನ್ನು ಉಪ್ಪಿನ ಕಾಯಿಯ ರಸದ ನಂಜಿಕೆಯೊಡನೆ ಊಟಮಾಡಿದೆ. ಅನಂತರ ಹುರುಳಿ ಕಟ್ಟಿನ ಸಾರಿನೊಡನೆ ಊಟಮಾಡಿದೆ. ಗಂಧಶಾಲಿ ಅಕ್ಕಿ ಅನ್ನದ ರುಚಿ 1938ನೆಯ ಇಸ್ವಿಯಿಂದಲೂ ನನಗೆ ಆಗಾಗ ಸೋಡಸಿಗುತ್ತಿತ್ತು. ಈ ದಿನವೂ ಹೆಡತ್ರಿಗೌಡರ ಮನೆಯಲ್ಲಿ ಸಮೃದ್ಧವಾಗಿ ಉಂಡು. ಹೊಟ್ಟೆಗೆ ಒಳ್ಳೆಯದೆಂದು ಸುವರ್ಣಗಡ್ಡೆಯ ಹುಳಿ ಹಾಕಿಸಿಕೊಂಡೂ ಸ್ವಲ್ಪ ಊಟಮಾಡಿದೆ. ಇನ್ನು ಹಾಲು ಮೊಸರು ಬಿಡುವುದೆಂತು? ಅದಕ್ಕೂ ಜಠರದಲ್ಲಿ ಸ್ವಲ್ಪ ಸ್ಥಾನವಿತ್ತೆ. ಊಟ ಮುಗಿಸಿ ಉಪಾಧ್ಯಾಯರ ಕೊಠಡಿಗೆ ಬಂದೆ. ಮನೆಯಲ್ಲಿಯೇ ತುಪ್ಪದಲ್ಲಿ ಹುರಿದ ಎಳೆ ಅಡಕೆಯ ಚೂರು- ಬಿಳಿಯೆಲೆ ಏಲಕ್ಕಿ ಲವಂಗ ಒಣಕೊಬ್ರಿಯನ್ನು ಉಪಾಧ್ಯಾಯರು ತಂದು "ಅಡಿಕೆ ಎಲೆ ಅಭ್ಯಾಸವಿದೆಯೇ?" ಎಂದರು. ನಾನು "ಚೆನ್ನಾಗಿಯೇ ಇದೆ" ಎಂದೆ ನಗುತ್ತ. ಯಾವುದೋ ಋಷಿ ವಾತಾಪಿಯನ್ನೇ ತಿಂದು ವಾತಾಪಿ ಜೀರ್ಣೋಭವ ಎಂದು ಹೊಟ್ಟೆಯ ಮೇಲೆ ಕೈಯಾಡಿಸಿ ಹೇಳಿದನಂತೆ. ನಾನು ಈ ಅಡಿಕೆ ಎಲೆಯನ್ನು ಇತರ ಪರಿಕರಗಳೊಡನೆ "ಗಂಧಶಾಲೀ ಜೀರ್ಣೋಭವ" ಎನ್ನುತ್ತ ಬಾಯಿತುಂಬಹಾಕಿದೆ. ನಡೆದು ಬಂದುದರಿಂದಲೂ ಶ್ರಾವಣ ಮಾಸದ ಕಾರಣ ಮೋಡ ಆಗಸದ ತುಂಬೆಲ್ಲ ತುಂಬಿ, ಆಗೊಮ್ಮೆ ಈಗೊಮ್ಮೆ ಸೆಳಕಲು ಸೆಳಕಲಾಗಿ ಸುರಿಯುವ ಮಳೆಯ ತಂಪಿನಿಂದ ಕೂಡಿದ ವಾತಾವರಣ ಕಾರಣವಾಗಿಯೂ, ಸಮೃದ್ಧವಾಗಿ ಉಂಡ ಊಟದ ಭಾರದ ಕಾರಣವಾಗಿಯೂ, ಮೇಳೈಸಿ ಬಂದು ನಿದ್ರಾಂಗನೆ ನನ್ನ ಆವರಿಸಿದಳು ಹಾಸಿ ಹೊದ್ದುಕೊಂಡು ಮೂಲೋಕದ ವ್ಯವಹಾರವೆಲ್ಲ ನಿಂತು ಹೋದರೂ ಚಿಂತೆಯಿಲ್ಲ ಎಂದು ನಿಶ್ಚಿಂತೆಯಿಂದ ಪಗಡದಸ್ತಾಗಿ ಮಲಗಿಬಿಟ್ಟೆ.

ಇತ್ತ ದ್ಯಾವಪ್ಪಗೌಡರು ಗದ್ದೆಯಿಂದ ಬಂದು ಉಪಾಧ್ಯಾಯರ ಕೈಗೆ ಬಸಪ್ಪ ಸೆಟ್ಟರ ಕಾಗದ ಕೊಟ್ಟು ರಾತ್ರಿ ಎಲ್ಲ ವ್ಯವಸ್ಥೆಯೂ ಆಗಲೆಂದು ಹೇಳಿ ಊಟಮಾಡಿ ನಾನು ಮಲಗಿರುವುದನ್ನು ಕಂಡು ಎಬ್ಬಿಸದೆ ಪುನಃ ತಮ್ಮ ಕಾಯಕವಾದ ಗದ್ದೆಕಳೆತೆಗೆಸುವ ಕಾರ್ಯಕ್ಕೆ ಹೋಗಿಬಿಟ್ಟರಂತೆ. ಸ್ವತಃ ಕಾಯಕಷ್ಟಮಾಡಿ ತಿಂದುಂಡು ಬದುಕುವ ಸ್ವರ್ಗ ಲೋಕದ ಈ ಜನವೆಲ್ಲಿ? ಸದಾ ಇನ್ನೊಬ್ಬರನ್ನು ಚಪ್ಪರಿಸುವ ಮೋಸಗೊಳಿಸುವ ಕ್ರಿಯೆಯಲ್ಲಿ ನಿಮಗ್ನರಾಗಿ ವ್ಯವಹರಿಸಿ ಕಂಡ ಕಂಡವರ ದುಡ್ಡಿನಿಂದ ಭಂಡಬಾಳು ಬಾಳುವ ಅಯೋಗ್ಯರೆಲ್ಲಿ? ನನ್ನ ಕಣ್ಣಿಗೆ ದೇವೇಗೌಡರು ಆಗರ್ಭಶ್ರೀಮಂತರಾದರೂ ನಿರ್ಲಿಪ್ತ ಭಾವದ ಕ್ರಿಯಾಯೋಗಿಗಳಾಗಿ ಕಂಡವರು. ಇಂಥವರು ರಾಷ್ಟ್ರಕ್ಕೆ ಭೂಷಣರು, ಇಂಥವರ ಕ್ರಿಯೆಗೇ ಅದ್ಭುತ ಶಕ್ತಿಬರುವುದು. ಇವರ ಸಾತತ್ಯಕ್ರಿಯೆಯೇ ಒಂದು ದೊಡ್ಡ ಯೋಗ, ಇದೇ ಬಸವಣ್ಣ ಹೇಳುವ ಕಾಯಕನಿಷ್ಠೆ.

ರಾತ್ರಿ ಕಥೆ ನಡೆಯುವುದಕ್ಕೆ ಬೇಕಾಗುವ ಕಾರ್ಯವನ್ನು ಉಪಾಧ್ಯಾಯರು ವ್ಯವಸ್ಥಿತವಾಗಿ ಮಾಡಿ ಸುತ್ತಮುತ್ತಲೂ ಇರುವ ದ್ಯಾವಪ್ಪಗೌಡರ ಬಂಧುಗಳ ಮನೆಗಳಿಗೆಲ್ಲ ಸುದ್ದಿ ಮುಟ್ಟಿಸಿದ್ದರು.

ಅಂಬರಗೋಡ್ಲಿನಿಂದ ಗ್ಯಾಸ್‌ಲೈಟು ಬಂದವು. ಆದರೆ ತಬಲಾ ಹಾರ್ಮೋನಿಯಂ ವಾದಕರು ಸಿಗಲಿಲ್ಲವಂತೆ. ಅವುಗಳ ಅವಶ್ಯಕತೆಯಿಲ್ಲದೆಯೂ ಕೀರ್ತನೆ ಮಾಡುವುದನ್ನು ನಾನು ಅಭ್ಯಾಸ ಮಾಡಿದ್ದೆನಾಗಿ ನನಗೇನೂ ಬಾಧಕವಾಗಲಿಲ್ಲ. ನಾನು ಎಚ್ಚರಗೊಂಡಾಗ ಐದುವರೆ ಆರು ಘಂಟೆಯಾಗಿರಬಹುದು. ನಿದ್ರೆಯ ಬರವೆಲ್ಲ ಹಿಂಗಿ ನಾನು ಉತ್ಸಾಹಭರಿತ ಹೊಸಮನುಷ್ಯನೇ ಆಗಿದ್ದೆ. ಅಷ್ಟು ಹೊತ್ತಿಗಾಗಲೆ ಗೌಡರ ಬಂಧುವರ್ಗದ ಜನರಿಂದ ಮಕ್ಕಳು ಮರಿಗಳಿಂದ ಮನೆ ಗಿಜಿಗಿಜಿ ಎನ್ನುತ್ತಿತ್ತು. ಗೌಡರು ಆರು ಘಂಟೆ ಸುಮಾರಿಗೆ ಬಂದರು. ಅವರು ಬಂದ ಕೂಡಲೆ ಬಚ್ಚಲು ಮನೆಗೆ ಬಂದು ಕೌಪೀನ ತೊಟ್ಟು ತಲೆಯ ಬಿಸಿನೀರು ಸುರಿದದ್ದೇ ಸುರಿದದ್ದು. ಹಾಗೆ ಬಿಸಿನೀರಿನ ಸ್ನಾನವನ್ನು ಗಜವತ್ ಆಚರಿಸಿ ಮಡಿಯುಟ್ಟು ನೇರವಾಗಿ ಶಿವಪೂಜಾಗೃಹಕ್ಕೆ ಹೋಗಿ ಪೂಜೆ ಮಾಡಿಕೊಂಡು ತಮ್ಮ ಸಾಯಂಕಾಲದ ತಿಂಡಿ ತೀರ್ಥ ಮುಗಿಸಿ ವೀಳ್ಯೆ ಮೇಲ್ಲುತ್ತ ಬಾವಂಜಿ ಬೈಲಿನಲ್ಲಿ ಹಾಕಿದ್ದ ಮಂಚದ ಮೇಲೆ ಸುತ್ತಮುತ್ತಲೂ ನೆರೆದಿದ್ದ ಬಂಧುವರ್ಗದವರೊಡನೆ ಹೊಲಗದ್ದೆಗಳ ವಿಚಾರ ಆರೋಗ್ಯಭಾಗ್ಯಾದಿ ವಿಚಾರವನ್ನು ಮಾತನಾಡುತ್ತ ಮಧ್ಯಮಧ್ಯದಲ್ಲಿ ಸ್ವಲ್ಪನಗುತ್ತ ಸಂತೋಷಚಿತ್ತರಾಗಿ ಕುಳಿತಿದ್ದರು. ಆಗ ಉಪಾಧ್ಯಾಯರು ಗ್ಯಾಸ್‌ಲೈಟ್ ಹಚ್ಚಿ ಬಾವಂಜಿಯ ವಿಶಾಲ ಬೈಲಿನಲ್ಲಿ ಕಟ್ಟಿಸಿದ್ದರು. ಆಮೇಲೆ ನನ್ನನ್ನು ಕರೆದುಕೊಂಡು ಗೌಡರ ಹತ್ತಿರ ಹೋದೊಡನೆ ಗೌಡರ ಸುತ್ತಮುತ್ತ ನೆರೆದಿದ್ದ ಹೆಂಗಸರೆಲ್ಲ ಒಳಸರಿದರು. ಗೌಡರು ನನ್ನನ್ನು ಕಂಡು ಬನ್ನಿ ಶಾಸ್ತ್ರಿಗಳೇ ಎಂದು ಖುರ್ಚಿ ತೋರಿಸಿದರು. ನಾನು ಅವರ ಮುಂದೆ ಖುರ್ಚಿಯ ಮೇಲೆ ಕೂಡದೆ ಎದುರಿಗೆ ಹಾಸಿದ ಕಂಬಕ್ಕೆ ಒರಗಿಸಿಟ್ಟಿದ್ದ ದಿಂಬಿಗೆ ಆತು ಕುಳಿತುಕೊಂಡೆ. ಆ ಗೌಡರ ಎದುರಿಗೆ ಸಾಮಾನ್ಯವಾಗಿ ಯಾರೂ ಖುರ್ಚಿಗಳ ಮೇಲೆ ಕೂಡುವುದಿಲ್ಲವೆಂಬದುನ್ನು ಮೊದಲೇ ಉಪಾಧ್ಯಾಯರಿಂದ ತಿಳಿದ ನಾನು ಹಾಗೆ ಮಾಡದಿದ್ದುದೇ ಗೌಡರಿಗೆ ನನ್ನ ಮೇಲೆ ವಿಶೇಷ ಆದರಾಭಿಮಾನಕ್ಕೆ ಕಾರಣವಾಯಿತೆಂದು ತೋರುತ್ತದೆ. ಅನಂತರ ನನ್ನ ವಿಷಯವನ್ನೆಲ್ಲಾ ಕೇಳಿದರು, ಅವರ ಪ್ರಶ್ನೆಗಳಿಗೆಲ್ಲ ಉತ್ತರ ಹೇಳಿದೆ. ಅಷ್ಟು ಹೊತ್ತಿಗಾಗಲೇ ಕತ್ತಲಾಗುತ್ತ ಬಂತು. ಬರುವವರೆಲ್ಲ ಬಂದರೆಂದು ಉಪಾಧ್ಯಾಯರು ಹೇಳಿದರು. ಇವತ್ತು ಯಾವ ಕಥೆ ಮಾಡುತ್ತೀರಿ? ಎಂದರು. ಇದು ಶ್ರಾವಣಮಾಸ "ಮಂಗಳಗೌರಿ" ಎಂಬ ಪವಿತ್ರ ಕಥೆ ಮಾಡುತ್ತೇನೆ ಎಂದೆ. ಅದೇ ಸರಿ, ಆಗಲಿ ಎಂದರು. ಮುಖತೊಳೆದು ವಿಭೂತಿ ಧರಿಸಿ ನನ್ನ ಕೀರ್ತನೆಯ ಕೊಡುಗೆಗಳಾದ ನೆಹರುಜುಬ್ಬಾ ಖಾದಿ ಟೊಪ್ಪಿಗೆ ಹಾಕಿಕೊಂಡು ಶುಭ್ರಪಂಚೆಯನ್ನುಟ್ಟು ನಡುಕಟ್ಟು ಕಟ್ಟಿ ಕೈಯಲ್ಲಿ ತಾಳ ಹಿಡಿದೆ. ಮುಂದೆ ನೋಡಿದರೆ ಅಂಬರಗೋಡ್ಲು ಶಂಕರಭಟ್ಟರ ಮನೆಯಲ್ಲಿನ ಜನರಿಗಿಂತ ಎಂಟು ಹತ್ತು ಜನ ಹೆಚ್ಚಿರಬಹುದು, ಅಷ್ಟೇ. ಹದಿನೈದು ಇಪ್ಪತ್ತು ಜನ ದೊಡ್ಡವರು ಹತ್ತೂ ಹನ್ನೆರಡು ಜನ ಹುಡುಗರು. ಏಳೆಂಟು ಜನ ಹೆಣ್ಣುಮಕ್ಕಳು ಮಾತ್ರ ದೊಡ್ಡ ದೊಡ್ಡಗೌಡರುಗಳೆಲ್ಲ ಕಂಬಕಂಬಕ್ಕೆ ಹಾಕಿದ್ದ ಒರಗುದಿಂಬುಗಳಿಗೆ ಆತು ಕುಳಿತಿದ್ದರು. ಹೆಣ್ಣುಮಕ್ಕಳು ಒಳಗೆ ಜಮಖಾನೆಯ ಮೇಲೆ ಸ್ವಲ್ಪ ದೂರದಲ್ಲಿ ಕುಳಿತಿದ್ದರು. ಅಲ್ಲಲ್ಲಿ ನಾಲ್ಕಾರು ಅಡಿಕೆ ಎಲೆಗಳ ತಟ್ಟೆಗಳು ಕಂಡವು. ಪ್ರಶಾಂತ ವಾತಾವರಣ. ಹಾರ್ಮೋನಿಯಂ ಶ್ರುತಿಯನ್ನು ಉಪಾಧ್ಯಾಯರೇ ಎರಡುವರೆ ತಾಸಿನಲ್ಲಿ ಹಿಡಿದಿದ್ದರು. ಕಥೆ ಪ್ರಾರಂಭಿಸಲು ಹೇಳಿದರು ಗೌಡರು. ಪ್ರಥಮತಃ ಬಸವಣ್ಣನವರ "ನೀರಿಗೆ ನೈದಿಲೆ ಶೃಂಗಾರ.... ಚಕೋರಂಗೆ ಚಂದ್ರಮನ..." ಎಂಬ ವಚನಗಳನ್ನು ಹಾಡಿದೆ. ಕೇಳುವವರಿಂದ ಒಳ್ಳೆ ಪ್ರತಿಕ್ರಿಯೆ ದೊರಕಿತು ಮೂರು ನಾಲ್ಕು ಘಂಟೆಗಳ ಕಾಲ ಪೂರ್ಣ ವಿಶ್ರಾಂತಿ, ಸಮೃದ್ಧವಾದ

ಸಮತೋಲನ ಆಹಾರ ಸೇವನೆಯಿಂದ ಉತ್ಸಾಸ ಭರಿತವಾದ ದೈಹಿಕಶಕ್ತಿ ಸಂಚಯನ, ನೂತನ ಪ್ರಕೃತಿ ಸಂಪತ್ತಿನ ಅಗಾಧ ಸೌಂದರ್ಯದರ್ಶನಾನಂದ, ಸೂಕ್ತ ಉಪಚಾರ ಸಂಜನಿತ ಮಾನಸಿಕ ತೃಪ್ತಿ ಹೊಂದಿದ ಕಾರಣವೋ ಏನೋ ಸಮಸ್ತಾಂಗರಚನೆಯೂ ನನ್ನ ಕೀರ್ತನಕಾರ್ಯಕ್ಕೇ ನೆರವಾದ ಹಾಗೆ ತೋರಿತು. ಕಂಠಶ್ರೀ ಕೆರಳಿತು. ಬಹುಗಂಭಿರವಾಗಿ ಹಾಡಿದೆನೆಂದು ನನಗೇ ಅನ್ನಿಸಿತು. ಯಾವ ಕಾರ್ಯದಲ್ಲೇ ಆಗಲಿ. ಪರರ ತೃಪ್ತಿಗಿಂತ ಮೊದಲು ತಾನು ತೃಪ್ತಿಗೊಳ್ಳಬೇಕು. ತನಗೇ ತೃಪ್ತಿ ತರದ ಕಾರ್ಯ. ಪರರಿಗೇನು ತೃಪ್ತಿ ತಂದೀತು. ಕೀರ್ತನ ಕಾರ್ಯದಲ್ಲಿ ಕಂಠಶ್ರೀಯದೇ ಬಹುಪಾಲು ಕಸರತ್ತು. ಅನಂತರ ಉಳಿದ ಮಾತಿನ ಚಕಮಕಿ, ಹಾಸ್ಯದ ಹೊಸಲು, ಕಥಾ ಸ್ವಾರಸ್ಯ, ವಿಷಯ ಪ್ರತಿಪಾದಿನೆಯ ಕಾರ್ಯ. ಇವೆಲ್ಲವುಗಳು ತಾಳಮೇಳಗೊಂಡು ನಡೆದವೆಂದರೆ ಕೇಳುವವರಿಗೆ ಹಿತ. ಇಲ್ಲದಿದ್ದರೆ ಇದೆಲ್ಲಿಂದ ಬಂದಿತಪ್ಪಾ! ಭೂತಪ್ರಾಣಿ ಅಂದಾರು. ಕೇಳುವ ಜನ. ಹಾಗೆ ಅನ್ನಿಸಿಕೊಳ್ಳುವುದಕ್ಕೆ ನನ್ನ ಮನಸ್ಸು ಯಾವಾಗಲೂ ಸಿದ್ಧವಿರಲಿಲ್ಲ. ಭಂಡತನ ನನಗೆ ಎಂದೂ ಹಿಡಿಸದ್ದು. ಹಾಗೆ ಅವರು ಭಾವಿಸಿದಂತೆ ತನ್ಮಯತೆಯಿಂದಲೇ ಈ ಕಾರ್ಯಮಾಡಬೇಕಲ್ಲ! ಅದಕ್ಕೆ ಸಾಮಗ್ರಿಗಳೂ ಬಹಳ ಬೇಕಾದಾವು. ಊಟಕ್ಕೊಂದು ಅನ್ನ ಸಾರು ಆದರೆ ಆಯಿತೆ? ಅದಕ್ಕೆ ಮೇಲೆ ನಾಲ್ಕು ಹನಿತುಪ್ಪ, ಚಟ್ನಿ, ಉಪ್ಪಿನ ಕಾಯಿ, ಹಪ್ಪಳ, ಸಂಡಿಗೆ, ಮಧ್ಯೇ ಮಧ್ಯೇ ರುಚಿ ವೈವಿಧ್ಯಕ್ಕಾಗಿ ಹಣ್ಣುಹಂಪಲು ಇದ್ದರೆ ಊಟವೆಷ್ಟು ಸೊಗಸು. ಈ ವಿಷಯವನ್ನು ಲಕ್ಷ್ಯದಲ್ಲಿಟ್ಟು ಕಥೆಗಾರ ಕಥೆ ಮಾಡಿ ಕೇಳುವವರ ಸ್ವಭಾವ ಕೆರಳಿಸಬೇಕು.

ಅರ್ಧಘಂಟೆ ಪೀಠಿಕೆಗೆ ಉಪಯೋಗಿಸಿ ವಿವಿಧ್ಯ ಹಾಸ್ಯದ ದೃಷ್ಟಾಂತ ಕಥೆ ಹೇಳಿ ಬಹುಗಂಭೀರ ಪ್ರಕೃತಿಯ ಗೌಡರೇ ತಂಬುಲ ತುಂಬಿದ ಬಾಯಿಯಿಂದ ತಾಂಬೂಲರಸ ತುಟಿಯನ್ನು ಮಿಕ್ಕಿ ಹರಿದು ಬರುವಂತೆ ಮಾಡಿದೆ. ಅವರು ಪಕ್ಕದ ವಸ್ತ್ರದಿಂದ ಹೊಟ್ಟೆಯನ್ನು ಕಣ್ಣೀರನ್ನು ಒರೆಸಿಕೊಂಡದ್ದು ಕಂಡಿತು. ಎಲ್ಲರೂ ಉತ್ಸಾಹಭರಿತರಾಗಿ ಮುಂದೆ ಕಥೆ ಕೇಳುವುದರಲ್ಲಿ ವಿಶೇಷಾಸಕ್ತಿ ತಳೆದದ್ದು ತೇಲಿಬಂತು. ಕಥೆ ಪ್ರಾರಂಭವಾಯಿತು. ಕಥೆಯುದ್ದಕ್ಕೂ ತಿಳಿಹಾಸ್ಯಭರಿತ ಮಾತುಗಳನ್ನೊಳಗೊಂಡಂತೆ ಸರಾಗವಾಗಿ ಕಥೆ ಯಶಸ್ವಿಯಾಯಿತು. ಮಧ್ಯಮಧ್ಯದಲ್ಲಿ ಕಣ್ಣರಳಿಸಿ ಕಥೆಯಲ್ಲಿ ವಿಶೇಷಾಸಕ್ತಿ ತಳೆದುದನ್ನು ಗಮನಿಸಿದೆ, ಬಾಯಿಬಿಟ್ಟು ನಕ್ಕದ್ದೂ ಉಂಟು, ಮುಗುಳುನಗೆ ನಕ್ಕದ್ದೂ ಉಂಟು. ಸ್ವಲ್ಪ ದೂರದಲ್ಲಿ ಅರೆಬೆಳಕಿನಲ್ಲಿ ಕುಳಿತ ಗೌಡಶಾನಿಯವರ ಮುಖಭಾವ ಕಾಣಲಿಲ್ಲ, ಅವರೂ ತೃಪ್ತಿಪಟ್ಟರೆಂದು ಕೊನೆಯವರೆಗೂ ಕದಲದೆ ಕುಳಿತುದರಿಂದ ಭಾವಿಸಿದೆ. ಕಥೆ ಮುಗಿದು ಮಂಗಳಾರತಿ ತಟ್ಟೆಯನ್ನೆತ್ತಿದಾಗ ಆಶ್ಚರ್ಯದ ಮೇಲೆ ಆಶ್ಚರ್ಯ ನನಗೆ ಆಯಿತು. ಇದೇನು ಆರತಿಯ ದುಡ್ಡೊ ಅಥವಾ ಇದರಲ್ಲೇ ಸಂಭಾವನೆಯೂ ಸೇರಿಹೋಗಿದೆಯೇ ಅನ್ನಿಸಿತು. ಕಥೆಗಾರರಿಗೆಲ್ಲ ಈ ಅರತಿ ದೃಷ್ಟಿಯ ಮೇಲೆ ಬಹಳ ದೃಷ್ಟಿ. ಈ ದುಡ್ಡು ಕಥೆಗಾರನ ಮೇಲಿನ ಖರ್ಚಿಗೆ. ಸಂಭಾವನೆಯ ದುಡ್ಡು ಮನೆಯ ಖರ್ಚಿಗೆ ಎಂದೇ ಅವನ ಎಣಿಕೆ. ಆರತಿ ತಟ್ಟೆಯಲ್ಲಿ ಇಷ್ಟು ದುಡ್ಡು ಬಿದ್ದುದನ್ನು ಕಂಡವನೇ ಅಲ್ಲ, ಏನು ಹುಡುಗಾಟವೇ? ಎಣಿಸಿದರೆ ಹನ್ನೆರಡು ರೂಪಾಯಿಯ ಮಜಲಿಗೆ ಏರಿಹೋಗಿದೆ. ಸಂಭಾವನೆ ಆರತಿ ಕಾಸು ಸೇರಿ ಆರೋ-ಏಳೋ ರೂಪಾಯಿ ಬರುವ ನನ್ನ ಈ ವೃತ್ತಿಯ ಮುಗಿವಳಿ ಎಲ್ಲಿ? ಈಗ ಹನ್ನೆರಡು ರೂಪಾಯಿ ಎಲ್ಲಿ? ಉಳಿದ ಊರುಗಳಿಂದ ಬಂದ ಗೌಡರುಗಳು ಗೌಡಸಾನಿಯರು ಕಾಲಾಣೆ. ಅಣೆ ಹಾಕಿದರೆ ಮರ್ಯಾದೆಯೇ? ಎಂದುಕೊಂಡೋ ಏನೋ ಎಂಟಾಣೆ, ರೂಪಾಯಿ ಹಾಕಿಬಿಟ್ಟರಂತೆ. ನಾಳೆ ಗೌಡರ ಸಂಭಾವನೆಯೂ ಜೋರಾಗಿರುತ್ತದೆ ಎಂದು ಉಪಾಧ್ಯಾಯರು ಹೇಳಿದಾಗಲೇ ಇವರಲ್ಲಿ

ಸಂಭಾವನೆ ಸೇರಿಲ್ಲವೆಂಬುದು ಗೊತ್ತಾಗಿ ನೆಮ್ಮದಿಯ ಉಸುರುಬಿಟ್ಟೆ. ಎಲ್ಲ ಹಣವನ್ನು ಬಳಿದು ಬಾಚಿ ಜೇಬಿಗಿಳಿಬಿಟ್ಟೆ. ನೋಟುಗಳನ್ನು ಎರಡು ಮೂರು ಸಲ ಎಣಿಸಿದೆ ಕೊಠಡಿಯಲ್ಲಿ!

ಶ್ರಾವಣಮಾಸ ಮಂಗಳಗೌರೀ ಕಥೆ ಬೇರೆ ಮಾಡಿಸಿದ್ದಾಗಿದೆಯೆಂದು ಮರುದಿನ ಗಣಾರಾಧನೆ ಮಾಡಿ ಅನ್ನಸಂತರ್ಪಣೆಯ ಸಮಾರಂಭಕ್ಕೂ ದೊಡ್ಡದಾಗಿಯೇ ಗೌಡರು ವ್ಯವಸ್ಥೆ ಮಾಡಿದರು. ಬಂದ ನಂಟರುಗಳನ್ನೆಲ್ಲ ಬೆಳಿಗ್ಗೆ ಗಣರಾಧನೆಯ ಪ್ರಸಾದ ತಕ್ಕೊಂಡೇ ಹೋಗಬೇಕೆಂದು ಹೇಳಿದ್ದರಿಂದ ಬಂದವರೆಲ್ಲ ಮನೆಯಲ್ಲಿ ತುಂಬಿಕೊಂಡಿದ್ದರು. ಗೌಡಸಾನಿಯವರೇ ಬಂಧುವರ್ಗದ ಎಲ್ಲ ಹೆಣ್ಣುಮಕ್ಕಳ ಸಹಕಾರದಿಂದ ಅಕ್ಕಿಯ ಸೇವಗೆ, ಹೋಳಿಗೆ ಈ ಎರಡು ಸಿಹಿಯ ಜೊತೆಗೆ ಮಾಮೂಲಿ ಅನ್ನ, ಸಾರುಗಳ ಅಡಿಗೆಯನ್ನು ಬೆಳಿಗ್ಗೆ ಹತ್ತು ಘಂಟೆಯ ಹೊತ್ತಿಗೆ ಸಿದ್ಧಗೊಳಿಸಿಬಿಟ್ಟರು. ಮಲೆನಾಡಿನವರ ಆಹಾರದ ಪದ್ಧತಿ ಹತ್ತು-ಹನ್ನೊಂದು ಘಂಟೆಗೇ ಊಟ. ಮೂರು ಘಂಟೆಗೆ ಪುನಃ ಮಧ್ಯಾಹ್ನದ ಊಟ. ಅನಂತರ ರಾತ್ರಿ ಎಂಟೊಂಬತ್ತಕ್ಕೆ ಊಟ. ಬೆಳಿಗ್ಗೆ ತಿಂಡಿ ಕಾಫಿ, ಎರಡು ಘಂಟೆಗೆ ಊಟ. ಈ ಚಾಳಿ ಅವರಿಗೆ ಅಂಟಿರಲಿಲ್ಲ. ಆಳುಕಾಳಿಗೆ ಬೆಳಿಗ್ಗೆಯೇ ಊಟವಾಗಬೇಕು. ಹೀಗೆ ಅವರ ಜೀವನ ವಿಧಾನ.

ಅಕ್ಕಿಯ ಸೇವಗೆ ಒತ್ತಿಮಾಡಿದ್ದು. ಹೋಳಿಗೆಯಂತೂ ಕರ್ನಾಟಕದ ಸಾಮಾನ್ಯವಾದ ಪ್ರಾಚೀನ ಸಿಹಿಖಾದ್ಯವಲ್ಲವೆ! ಇವೆರಡಕ್ಕೂ ತಮ್ಮತಮ್ಮದೇ ಆದ ರುಚಿಕಟ್ಟು. ಶಾವಗೆಗೆ ಒಣಕೊಬ್ರಿ, ಬೆಲ್ಲ, ಹುರಿದ ಎಳ್ಳು, ಹುರಿಗಡಲೆಗಳನ್ನು ಹಾಕಿ ಮಾಡಿದ ಸೂಸಲು. ಅದಕ್ಕೆ ಏಲಕ್ಕಿ, ಜಾಕಾಯಿ, ಪತ್ರೆ, ಒಣಶುಂಠಿಯ ಸಾಂಗತ್ಯ. ಶಾವಗೆಯ ಮೇಲೆ ಸೂಸಲು ಹಾಕಿಸಿಕೊಂಡು ತುಪ್ಪವನ್ನು ಕಲಸಿ ಆಮೇಲೆ ಬಿಸಿಹಾಲನ್ನು ಹಾಕಿಕೊಂಡು ಉಂಡಾಗ ಅದರ ಸೊಗಸು ಸಮಸ್ತೇಂದ್ರಿಗಳಿಗೂ ಒಮ್ಮೆಲೆ ಮುಟ್ಟಿ ಅವೆಲ್ಲ ಪ್ರಸನ್ನಗೊಂಡಾವು! ಹೋಳಿಗೆಯ ಮೇಲೆ ಸಮೃದ್ಧ ತುಪ್ಪವನ್ನೆರೆದು ಮೇಲೆ ಬಿಸಿಹಾಲು ಬಿಡಿಸಿಕೊಂಡರಾಯಿತು ಅತ್ಯಂತ ಮೃದುಗೊಂಡು ಒಂದೊಂದು ಹೋಳಿಗೆ ಒಂದೊಂದೇ ಬಲವಾದ ತುತ್ತಾಗುವಷ್ಟಾಗುತ್ತಿತ್ತು. ಅಷ್ಟು ಜಾಣ್ಮೆಯಿಂದ ಹೂರಣತುಂಬಿ ಅರೆದವುಗಳು. ಮೊದಲು ಈ ಎರಡು ಸಿಹಿಗಳನ್ನು ತಿಂದೆ. ಮುಂದೆ ಅನ್ನಸಾರು, ಪಲ್ಯ, ಚಟ್ನಿ, ಉಪ್ಪಿನಕಾಯಿಗಳ ಸಡಗರದ ಊಟ ಅಲ್ಲಿಯದು. ಎಷ್ಟೋ ಕಡೆ ಒಂದು ಗುಕ್ಕಿನಷ್ಟು ಸಿಹಿ ಯಿಟ್ಟು ಅನ್ನಸಾರನ್ನೆ ತಟ್ಟೆಗೆ ತುಂಬಾ ಎಳೆದು ಬಿಡುವವರೂ ಇದ್ದಾರೆ. ಇವರಿಂದ ಇನ್ನಷ್ಟು ಸಿಹಿ ತಿನ್ನಬೇಕೆಂಬ ಮಧುರ ರಸಾಸ್ವಾದನ ಪರಿಣತ ಮತಿಗಳಿಗೆ ರಸಭಂಗ ಅಲ್ಲವೆ? ಆದ್ದರಿಂದ ತಿನ್ನುವಷ್ಟು ಸಿಹಿ ಮೊದಲು ನೀಡಿ, ಅದು ಸಾಕೆಂದಾಗ ಅನ್ನಸಾರು ನೀಡಬೇಕು. ಅನ್ನ ಸಾರು ಸದಾ ಮಾಮೂಲಿನ ಊಟವೇ ಅಲ್ಲವೆ? ವಿಶೇಷ ಊಟದ ದಿನ ಅದಕ್ಕೆ ಗೌಣಸ್ಥಾನ ಕೊಟ್ಟು ವಿಶೇಷ ಅಡಿಗೆಗಳಿಗೆ ಪ್ರಧಾನ ಸ್ಥಾನ ಕೊಡಬೇಕು. ಇದು ಎಲ್ಲರೂ ಒಪ್ಪುವ ಮಾತು. ನಾನು ಸಿಹಿಪದಾರ್ಥಪ್ರಿಯನೇನೋ ನಿಜ. ಆ ಕಾರಣದಿಂದ ಹೀಗೆ ಹೇಳಿದ್ದಾನೆಂದೆನ್ನಬೇಡಿ. ನ್ಯಾಯ ಹೇಳಿದೆ, ಅಷ್ಟೆ.

ನಾನು ಆ ದಿನ ಬಹು ಸಮೃದ್ಧವಾಗಿ ಗೌಡರ ಪಕ್ಕದಲ್ಲಿಯೇ ಕುಳಿತು ಉಂಡು ತೃಪ್ತಿಗೊಂಡೆ. ಊಟದಲ್ಲಿ ಗೌಡರನ್ನು ಮಿಕ್ಕಿಸುವ ಸಾಮರ್ಥ್ಯ ಉಂಟಾಗಲಿಲ್ಲ. ಅನ್ನ ಆ ದಿನ ವಿಶೇಷ ಸಂದರ್ಭಗಳಲ್ಲಿ ಅವಶ್ಯವಾಗಿ ಮಾಡುತ್ತಿದ್ದ ಗಂಧಸಾಲಿ ಅಕ್ಕಿಯದೇ. ಬಾಳೇಕಾಯಿ,

ಬದನೇಕಾಯಿ ಪಲ್ಯ, ಇದೆಲ್ಲ ಏನೇ ಇರಲಿ. ಆ ದಿನ ನನ್ನ ಗಮನ ಸೆಳೆದು ಆಶ್ಚರ್ಯ ಹುಟ್ಟಿಸಿದ ಅಂಶವೆಂದರೆ ಗೌಡರ ಮನೆಯ ಉಪ್ಪಿನಕಾಯಿಯ ವೈವಿಧ್ಯತೆ! ಒಂದು ಊಟದಲ್ಲಿ ಏಕಕಾಲದಲ್ಲಿ ನಂಜಿಕೆಗಾಗಿ ಹತ್ತು ತರಹೆಯ ಉಪ್ಪಿನಕಾಯಿ, ಐದು ತರ ಹೆಯ ಗುಳಂಬವನ್ನು ಎಲೆಯ ಮೇಲೆ ಕಂಡದ್ದು ಇದೇ ಮೊದಲು. ಇದೇ ನನಗೆ ಆಶ್ಚರ್ಯತಂದ ಅಂಶ. ಇದೊಂದು ಅತ್ಯಾಶ್ಚರ್ಯವಾದ್ದರಿಂದಲೇ ನನ್ನ ಸ್ಮೃತಿಪಥದಲ್ಲಿ ಇಂದಿಗೂ ಹಚ್ಚಹಸುರಾಗಿ ಅಂಕಿ ಸಂಖ್ಯೆಯೊಡನೆ ನಿಂತಿದೆ. ಸಾಯುವ ತನಕ ನಿಲ್ಲುತ್ತದೆ. ಊಟದಲ್ಲಿ ಭೋಗವೆಂದರೆನೆಂಬುದನ್ನು ನಮ್ಮ ಹಿರಿಯರು ಅರಿತು ಅನುಭವಿಸಿದಂತೆ ನಮಗೆಲ್ಲಿ ಬಂತು? ಅವರು ಶ್ರದ್ಧೆಯಿಂದ ದುಡಿದರು. ಸಮೃದ್ಧವಾಗಿ ಉಂಡರು. ಆ ಹೆಣ್ಣುಮಕ್ಕಳು ತಮಗೆ ಬೇಕಾದಷ್ಟು ಐಶ್ವರ್ಯವಿದ್ದರೂ ಸದಾ ಕ್ರಿಯೆಯಲ್ಲಿ ಮಗ್ನರಾಗಿ ಹಪ್ಪಳ,ಸಂಡಿಗೆ, ಸೇವಗೆ, ಬಾಳಕ, ವಿವಿಧ ಉಪ್ಪಿನಕಾಯಿ ತಯಾರಿಸುವ ಶಕ್ತಿ-ಜಾಣ್ಮೆ ಎರಡನ್ನೂ ಬಲ್ಲವರು. ಅವರು ಶ್ರೀಮಂತಿಕೆಯ ಅಟ್ಟಹಾಸದಲ್ಲಿ ಮೆರೆದವರೇ ಅಲ್ಲ. ದುಡಿಮೆಯಲ್ಲಿ ಅವರು ಸಾಮಾನ್ಯ ಮನುಷ್ಯನ ಶ್ರಮವನ್ನೇ ಮಾಡುವರು; ಮನೆಯಲ್ಲಾಗಲಿ ಹೊಲಗದ್ದೆಯಲ್ಲಾಗಲಿ ಅವರದು ಶ್ರದ್ಧಾವಂತರಾಗಿ ದುಡಿದು ಚನ್ನಾಗಿ ತಿಂದರು; ಚನ್ನಾಗಿಯೂ ಬದುಕಿದರು. ಮನೆಯಲ್ಲಿ ಸ್ತ್ರೀಯರು ದುಡಿದರು. ಹೊರಗೆ ಪುರುಷರು ದುಡಿದರು. ಮನೆಯ ದುಡಿಮೆಯೇನು ಚಿಕ್ಕದೇನು? ಅದೂ ದೊಡ್ಡದೇ? ಅಷ್ಟೇ ಅಲ್ಲ, ಬಹಳ ಜವಾಬ್ದಾರಿಯದು. ಅಲ್ಲಿ ಜವಾಬ್ದಾರಿ ವಹಿಸದ ಸ್ತ್ರೀಯರು ಮನೆ-ಮನೆತನ, ಮನೆಯ ಸುಖ ಅಂದರೆ ಗೃಹಸೌಖ್ಯದಿಂದ ತಾವೂ ವಂಚಿತರಾದರು, ಪುರುಷರನ್ನೂ ಮಕ್ಕಳನ್ನೂ ವಂಚಿಸಿದರು, ಶ್ರದ್ಧೆಯಿಂದ ದುಡಿಯದವನಿಗೆ ಸಮೃದ್ಧವಾಗಿ ಉಣ್ಣುವ ಹಕ್ಕು ಇರುವುದಿಲ್ಲ, ಅಲ್ಲವೆ?

ಪುರುಷ ಪ್ರಧಾನ ಸಮಾಜದಲ್ಲಿ ನಮ್ಮ ಶೋಷಣೆಯಾಗಿದೆ. ಹಾಗೆ ಹೀಗೆ ಎಂದು ನಮ್ಮ ಸ್ತ್ರೀಯರನೇಕರು ಭಾಷಣಬಿಗಿಯುತ್ತ ತಮ್ಮ ಹಕ್ಕಿಗಾಗಿ ಕ್ರಾಂತಿಯನ್ನೇ ಮಾಡುವ ಕೂಗು ಹಾಕುತ್ತಿರಬಹುದು. ಹಕ್ಕು ಕೇಳುವವರಿಗೆ ಬಾಧ್ಯತೆಯೂ ಗೊತ್ತಿರಬೇಕು. ಇದು ಸ್ತ್ರೀ ಪುರುಷ ಇಬ್ಬರೂ ಹೊಂದಿ ಬಾಳಲಸಮರ್ಥವಾದ ಕಾರಣ ಉಂಟಾದ ಬೊಬ್ಬೆ. ಇಷ್ಟರ ಮೇಲಿಂದ ಗಂಡಸರೆಲ್ಲ ಧರ್ಮದೇವತೆಯ ಅಪರಾವತಾರವೆಂದು ಹೇಳಹೊರಟಿಲ್ಲ ನಾನು. 'ಸಾಮರಸ್ಯ' ಎಂಬ ಮಾತೊಂದುಂಟು. ಸಾಮರಸ್ಯ ಸಭ್ಯತೆಗೆ ಅಡಿಗಲ್ಲು. ಸಭ್ಯತೆಯೆಂಬುದನ್ನು ಅನೇಕ ಹಿರಿಯರು ಶತಶತಮಾನಗಳಿಂದ ಕಂಡುಂಡ ಜೀವನಾನುಭವಗಳಿಂದ ಇದು ಧರ್ಮ, ಇದು ಅಧರ್ಮ. ಇದು ಮಾಡಬೇಕಾದುದು, ಇದು ಮಾಡಬಾರದುದು. ಇದರಿಂದ ಸುಖ, ಇವರಿಂದ ದುಃಖ ಎಂಬುದನ್ನು ಅನುಭವಿಸಿ ಜನಾಂಗಕ್ಕೆ ಸಭ್ಯತೆಯ ಉಪದೇಶ ಮಾಡುತ್ತ ಬಂದಿದ್ದಾರೆ, ಸಮಾಜನೆಮ್ಮದಿಯ ಮಾರ್ಗದರ್ಶನ ಮಾಡಿದ್ದಾರೆ. ಇದು ಗೊತ್ತಿಲ್ಲದ ಪುರುಷ ಸ್ತ್ರೀ ಇಬ್ಬರೂ ಎಲ್ಲ ಸುಖದಿಂದ ವಂಚಿತರೇ. ಸ್ತ್ರೀಯರು ಕೆಲವರು ನಮ್ಮನ್ನು ಕೇವಲ ಭೋಗಸಾಮಗ್ರಿಯಂತೆ ಪುರುಷ ಕಂಡಿದ್ದಾನೆನ್ನುವುದುಂಟು. ಎಷ್ಟೋ ಸ್ತ್ರೀಯರು ಪುರುಷನನ್ನೂ ಹಾಗೇ ಭಾವಿಸಿ ಅವನಿಗೆ ಊಟ್-ಬೈಟ್ ಹೇಳುವವರಿಲ್ಲವೆ? ಸ್ತ್ರೀಯಿಂದ ಪುರುಷ ವಂಚಿತನಾದ ದೃಷ್ಟಾಂತಗಳಿಲ್ಲವೆ? ಇದಕ್ಕೆಲ್ಲ ಇನ್ನೊಂದು ಮುಖ್ಯಕಾರಣ ಇಬ್ಬರಲ್ಲಿಯೂ ವಿಷಮತರ ಜೀವನ ವಿಧಾನ ಮತ್ತು ಉನ್ಮತ್ತಕಾಮ, ವಿಕೃತಕಾಮ, ಅನ್ಯಾಸಕ್ತಿಗಳೇ ಬಹುಮಟ್ಟಿಗೆ ಕಾರಣವೆಂದು ಪ್ರಾಜ್ಞರು ಹೇಳುತ್ತಾರೆ. ಎಷ್ಟೋ ಜನ ಸ್ತ್ರೀಯರು ಇನ್ನೊಂದು ಮುಖ್ಯವಾದ ಕೂಗನ್ನು ಮೊಳಗಿಸುತ್ತಾರೆ. ಪುರುಷ ಸ್ತ್ರೀಯರನ್ನು ನಾಲ್ಕು ಗೋಡೆಗಳ ಮಧ್ಯದಲ್ಲಿ ಬಂಧಿಸಿ ಹಾಳುಮಾಡಿದ್ದಾನೆ. ಅವಳ ವಿಕಾಸಕ್ಕೆ

ಅವಕಾಶವೇ ಇಲ್ಲ ಎಂಬುದೇ ಆ ಕೂಗು. ನಾಲ್ಕು ಗೋಡೆಗಳ ಮಧ್ಯೆ ಸಾಧಿಸುವುದು ಬೇಕಾದಷ್ಟಿದೆ. ಅಲ್ಲಿ ಅವಳ ಪರಿಪೂರ್ಣಜವಾಬ್ದಾರಿಯಾದ ವಂಶವಾಹಿನಿಯಲ್ಲಿನ ಪ್ರತಿಸಂತತಿಯನ್ನು ಯಥಾರ್ಥರೀತಿಯಲ್ಲಿ ಕಡೆದು ನಿಲ್ಲಿಸುವ ಕ್ರಿಯಾಯೋಗವೇನು ಚಿಕ್ಕದೇ? ಆ ಕೆಲಸ ಸಾಗಬೇಕಾದುದು ನಾಲ್ಕು ಗೋಡೆಗಳ ಮಧ್ಯದಲ್ಲಿಯೇ. ಅಲ್ಲಿಯೇ ಮಕ್ಕಳ ಶೀಲಸ್ವಭಾವಗಳು ವ್ಯವಸ್ಥೆಗೊಳ್ಳಬೇಕು. ಬುದ್ಧಿವಿಕಾಸವಾಗಬೇಕು, ಮೆದುಳು ಬಲಿಯಬೇಕು. ಹೃದಯ ಶುದ್ಧಗೊಳ್ಳಬೇಕು. ಆ ವಿಷಯದಲ್ಲಿ ಅಶ್ರದ್ಧೆಯನ್ನು ಇತ್ತೀಚಿನ ಸ್ತ್ರೀಯರು ತೋರಿಸಿದ ಕಾರಣವೇ ಇಂದು ಸಮಾಜದಲ್ಲಿ ಭ್ರಷ್ಟ, ಕಳ್ಳ, ಘಟಿಂಗ, ಅವ್ಯವಹಾರಿ, ಕ್ರೂರಿ, ಉದ್ಧಟ, ಕ್ರಿಯಾಶೂನ್ಯ, ಅನ್ಯವಿತ್ತಾಪಹಾರಕರಾದ ಜನರ ಬಾಹುಳ್ಯವುಂಟಾಗಿದೆ. ಅಂಥವರಿಂದ ಸಮಾಜ ಕಲುಷಿತಗೊಂಡಿದೆ. ಅವರು ಮಾಡುವ ಪಾಪಕಾರ್ಯದಲ್ಲಿ ಕಾಲ ಕಳೆಯುವಂತಾಗಿದೆ. ತಾಯಿಯ ಮಮತೆಯಲ್ಲಿ ಬಾಲ್ಯದಿಂದಲೂ ಬೆಳೆದ ಮಗುವಿನಲ್ಲಿ ಸಂಸ್ಕೃತಿಯನ್ನು ಕಾಣುತ್ತೇವಾಗಲಿ ತಾಯಿಯಿಂದ ವಂಚಿತರಾದ ಮಕ್ಕಳಲ್ಲಿ ಅದನ್ನು ಕಾಣುತ್ತಿಲ್ಲ. ಎರಡು ಮಕ್ಕಳನ್ನು ಹೆತ್ತು ಬಿಸಾಡಿದರೆ ಅದು ತಾಯಿಯಾದವಳ ಜವಾಬ್ದಾರಿ ಮುಗಿದಂತೇನು? ಈ ಕೆಲಸವನ್ನು ಮಾಡುವ ಭಾರ ತಾಯಿಯದೇ. ತಾಯಿಯಂತೆ ತಂದೆಗೆ ಮಕ್ಕಳು ಒಲಿಯುವುದಿಲ್ಲ. ತಂದೆಗೂ ಬೆಲೆ ಕೊಡುವುದನ್ನು ತಾಯಿಯೇ ಅವಕ್ಕೆ ತಿಳಿಸಬೇಕಾದೀತು. ಇದೇ ಸ್ತ್ರೀತ್ವದ ಪರಮಭಾಗ್ಯದ ಪರಮಾವಧಿ; ಇದೇ ನಾಲ್ಕು ಗೋಡೆಗಳ ಮಧ್ಯದಲ್ಲಿ ಬೆಳೆಸಬೇಕಾದ ಸಂಸ್ಕೃತಿ, ಸಾಧಿಸಬೇಕಾದ ಯೋಗ, ಪಡೆಯಬೇಕಾದ ಸತ್ಫಲ. ಇದನ್ನು ತಿರಸ್ಕರಿಸಿ ಏನೇನೋ ಗೊಣಗುತ್ತಿರುವ ಹೆಂಗಸು ಪ್ರಾಚೀನರು ಗೌರವದಿಂದ ಹೇಳುವ ಕುಲವಧು, ಗೃಹಿಣೀ ಪದಗಳಿಗೆ ಹೇಗೆ ಅರ್ಹರಾದಾರು? ಸ್ತ್ರೀಯರ ಶೋಷಣೆ ಕುರಿತು ಮಾತನಾಡುವಾಗ ಪುರುಷನ ಶೋಷಣೆಯನ್ನೂ ಗಮನಿಸಬೇಕಾಗುವುದು. ಪುರುಷನೇನು ಸುಖದ ಸುಪ್ಪತ್ತಿಗೆಯಲ್ಲಿ ಇರುವನೆಂದಲ್ಲ. ಪುರುಷ ತನ್ನಲ್ಲಿ ಸ್ತ್ರೀಯನ್ನು, ಸ್ತ್ರೀ ಪುರುಷನಲ್ಲಿ ತನ್ನನ್ನು ಕಾಣುವ ಮಹಾಯೋಗವನ್ನು ಸಾಧನೆ ಮಾಡಿದಾಗಲೇ ಸಾಮರಸ್ಯ ಬೆಳೆಯುತ್ತದೆ. ವಿರೋಧಮಾಡಿದರೆ ಇಬ್ಬರೂ ಸುಖದಿಂದ ವಂಚಿತರೇ. ಸುಖದಿಂದ ವಂಚಿತರಾದವರ ಬಾಳು ನಾಯಿಯ ಬಾಳು. ಆದ್ದರಿಂದ ಸುಖ ಬೇಕೆನ್ನುವವರು ಸಾಮರಸ್ಯ ಸಂಪತ್ತನ್ನು ಗಳಿಸಬೇಡವೇ? ನಾನೇನು ಈ ಮನೆಯ ಆಳು ಅಲ್ಲ ಎಂದು ಸ್ತ್ರೀ ಹೇಳಿ ಗಂಡನನ್ನು ಪ್ರತಿಭಟಿಸಿದ ಕೆಲವು ಉದಾಹರಣೆ ಸಿಕ್ಕುತ್ತವೆ. ಆ ಮನೆಗೆ ಅವಳು ಆಳಾಗಿ ಹೋಗದಿದ್ದರೆ ಅರಸಿಯಾಗಿ ಆ ಮನೆಯಲ್ಲಿ ಬದುಕಲೂ ಅವಕಾಶವೆಲ್ಲಿ? ಗಂಡ ಹೆಂಡತಿ ಇಬ್ಬರೂ ಆ ಮನೆಯ ಆಳಾಗಲು ಶಕ್ತರಾದಾಗ ಅರಸ-ಅರಸಿಯರಾಗಿ ಅಲ್ಲಿ ಬದುಕಿ, ಒಂದು ದಿನ ಕಂತೆ ಬಿಸಾಡಿ ಹೋಗಬಹುದು. ಕಾಳಿದಾಸ ಸ್ತ್ರೀ-ಪುರುಷರಿಬ್ಬರೂ ಪರಮಾತ್ಮನ ಒಂದೇ ಆತ್ಮಭಾಗ; ಸೃಷ್ಟಿಗಾಗಿ ಭಿನ್ನರಾಗಿದ್ದಾರೆನ್ನುತ್ತಾನೆ. ಸೃಷ್ಟಿಯಾಗುವುದೇ ದ್ವೈತ ವಾತಾವರಣದಲ್ಲಿ, ಸೃಷ್ಟಿ ಮುಂದುವರಿಯಬೇಕಾದರೆ ಸೃಷ್ಟಿಕರ್ತನೂ ಎರಡಾಗಲೇಬೇಕು. ಎರಡರಿಂದ ಒಂದು ಸೃಷ್ಟಿಯಾಗಬೇಕು. ಈ ಮಾತು ಜಂಗಮಜಗತ್ತಿಗೆಲ್ಲ ಅನ್ವಯಿಸುವಂತಹುದೇ. ಕೇವಲ ಮನುಷ್ಯನಿಗಲ್ಲ ಸಸ್ಯಪ್ರಪಂಚಕ್ಕೂ ಅನ್ವಯ:

> ಸ್ತ್ರೀ ಪುಂಸಾವಾತ್ಮಭಾಗೌತೇ ಭಿನ್ನಮೂರ್ತೇಃ ಸಿಸೃಕ್ಷಯಾ।
> ಪ್ರಸೂತಿ ಭಾಜಃ ಸರ್ಗಸ್ಯ ತಾವೇವ ಪಿತರೌ ಸ್ಮೃತಾ॥

ದ್ವಿಧಾಕೃತಿ ವಿಗ್ರಹವಾಗಿಯೇ ಸೃಷ್ಟಿಕ್ರಿಯೆ ನಡೆಯಬೇಕು. ಅದಕ್ಕಾಗಿ ಪರಮಾತ್ಮನ

ಆತ್ಮಭಾಗ ಸ್ತ್ರೀ ಪುರುಷರೆಂದು ಬೇರೆಯಾಯಿತು. ಎರಡೂ ನಿರತಿಶಯ ಸಮರಸ ಭಾವದಿಂದ ಕೂಡಿದಾಗ ಅದು ಯಥಾರ್ಥದಾಂಪತ್ಯವಾಗುವುದು. ಕೂಡಿದಾಗ ಎಂಬ ಪದ ಕೇವಲ ಶಾರೀರಿಕ ಕೂಡಿಕೆಯೇ ಅಲ್ಲ. ಎಲ್ಲ ಮುಖದಲ್ಲೂ ಸಮರಸವಿಲ್ಲದಾಗ ಎಲ್ಲ ತರಲೆ ಬಾಳೇ. ಸಂಸ್ಕೃತದಲ್ಲಿ ಗಂಡಹೆಂಡಿರನ್ನು ಹೇಳಲು ಒಂದೊಂದೇ ಸಮಾನಪದಗಳಿವೆ. ಕನ್ನಡ ಭಾಷೆಯಲ್ಲಿ ಆ ಸೌಲಭ್ಯವಿಲ್ಲ. ಪಿತಣ - ದಂಪತಿ - ಜಂಪತಿ. ಈ ಮೂರು ಶಬ್ದಗಳಲ್ಲಿ ಗಂಡ-ಹೆಂಡತಿ ಎರಡೂ ಸೇರಿ ಒಂದೇ ಶಬ್ದವಾಗಿದೆ. (ಪಿತನೂ-ಮಾತೆಯೂ ಸೇರಿ - ಪಿತಣ, ದಾರಾ-ಪತಿ ಎರಡೂ ಸೇರಿ ದಂಪತಿ, ಜಾಯಾ-ಪತಿ ಎರಡೂ ಸೇರಿ-ಜಂಪತಿ) ಈ ಶಬ್ದಗಳು ಸಾಮರಸ್ಯ ಶಬ್ದಕ್ಕೆ ತಕ್ಕ ನಿದರ್ಶನಗಳು. ಶಬ್ದದಲ್ಲೇ ಸಾಮರಸ್ಯವಿದೆ; ಸಮರತಿಯಿದೆ. ಎರಡು ಒಂದಾಗಿವೆ. ಒಂದು ಎರಡಾಗುವುದು ನೋಟಕ್ಕೆ ಮಾತ್ರ. ಹೆಡತ್ರಿ ದೇವಪ್ಪಗೌಡರ ಸಂಸಾರದಲ್ಲಿ ಒಂದೆರಡೇ ದಿನಗಳ ನನ್ನ ಅನುಭವದಲ್ಲಿ ಅವರಿಬ್ಬರಲ್ಲಿನ ಸಾಮರಸ್ಯದ ಅರಿವಾಯಿತು. ಶ್ರೀಮಂತ ಪತ್ನಿಯಾದರೂ ಶ್ರೀಮಂತಿಕೆಯ ವಿಕಾರವಿಲ್ಲದಿರುವ ಅವರ ಶುದ್ಧ ನಡೆ ನುಡಿ, ಸರಸಸಜ್ಜನಿಕೆ, ಆಡಂಬರರಾಹಿತ್ಯ, ದಂಭಾಚಾರ ವಿಹೀನತೆ, ಸದಾ ಕ್ರಿಯಾಮಗ್ನತೆ - ಈ ಎಲ್ಲ ಆದರ್ಶಗಳಿಂದ ಆಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿ ಆ ಸಾಧ್ವಿ ಸಾಧಿಸಿದ್ದು, ಸಾಧಿಸುತ್ತಿರುವುದು, ಸಾಧಿಸಬೇಕಾದದ್ದು ಬಹಳ ಎಂಬುದರ ಅರಿವಾಯಿತು.

ಮನೆಗೆ ಅತಿಥಿಗಳಿಗೆ ಆಳುಕಾಳಿಗೆ ಸಮೃದ್ಧ ಆಹಾರ ಪಾನೀಯಗಳನ್ನು ವ್ಯವಸ್ಥೆ ಮಾಡುವಿಕೆಯಲ್ಲಿನ ಅವಳ ಶ್ರದ್ಧೆ, ಶ್ರಮ, ತ್ಯಾಗಗಳು ಎದ್ದು ತೋರುತ್ತಿದ್ದವು. ತುಂಬಿದ ಮನೆಯನ್ನು ಓರಣವಾಗಿಟ್ಟುಕೊಳ್ಳುವುದೇ ಒಂದು ಕಲೆ. ಆ ಮನೆಯಲ್ಲಿ ಆ ಸಾಧ್ವಿ ಆಳಾಗಲು ಒಪ್ಪದಿದ್ದರೆ ಅಲ್ಲಿ ಅರಸಿಯಾಗಿರಲೂ ಅಧಿಕಾರವೆಲ್ಲಿತ್ತು? ಮಾತನಾಡಬಹುದು. ಭಾಷಣ ಮಾಡಬಹುದು, ಸಮಾಜ ಜೀವನವನ್ನು ಕಲಕಬಹುದು, ಕ್ರಾಂತಿಯ ಹುಯಿಲೆಬ್ಬಿಸಬಹುದು. ಅದಕ್ಕೂ ಮೊದಲು ಸಮಗ್ರ ಸಮಾಜದ ಮತ್ತು ಅದರ ವ್ಯವಸ್ಥೆಯ, ಕಷ್ಟ ಕಾರ್ಪಣ್ಯದ ಆಳವಾದ ಅಧ್ಯಯನ ಮಾಡಿದಲ್ಲದೆ, ಕಲಿತ ಮಾತನ್ನೆಲ್ಲ ಆಡುವ ಹುಚ್ಚು ಸಾಹಸ ಮಾಡಬಾರದು. ಕೇವಲ ರೂಪದ ಮೇಲಿನ ಅಭಿಮಾನದಿಂದ ಮೂರು ಲೋಕಗಳನ್ನೇ ಗೆದ್ದೇನೆಂದು ಟೇಂಕರಿಸಿ ಸಾಮಾಜಿಕವಾದ ತನ್ನ ಎಲ್ಲ ಬಂಧನಗಳನ್ನು ಕಿತ್ತೆಸೆದು ಸ್ವೇಚ್ಛಾಪ್ರಪಂಚಕ್ಕಿಳಿದವರು ಕೆಲವೇ ದಿನಗಳಲ್ಲಿ ಭ್ರಮನಿರಸನಗೊಂಡು ಮೊದಲಿನಪಕ್ಕೂ ಮರಳದೆ, ಹೊಸದರಲ್ಲೂ ಬಾಳಲಾಗದೆ ಹಾಳಾಗಿದ್ದಾರೆ. ಗೌಡರ ಪತ್ನಿಯವರ ಸ್ವರೂಪದರ್ಶನವೇ ನನ್ನಲ್ಲಿ ಭಕ್ತಿಭಾವವನ್ನು ಕೆರಳಿಸಿತು. ಪಾತಿವ್ರತ್ಯ ಚಿಹ್ನಾಂಕಿತವಾದ ಅವರ ಮುಖದ ವರ್ಚಸ್ಸೇ ಅಂತಹುದಾಗಿತ್ತು. ಅದು ದೀರ್ಘಕಾಲದ ತ್ಯಾಗಜೀವನದಿಂದಾದ ಸಿದ್ಧಿ ಎಂಬುದನ್ನು ನಾನು ಗುರುತಿಸಿದೆ. ನನ್ನ ಈ ವಿಶ್ಲೇಷಣೆ ಹೆಂಗಸು ಬಂಧನದಲ್ಲೇ ಇರಲೆಂಬ ಮನಸ್ಸಿನದಲ್ಲ. ಗೃಹಿಣಿ ಪದದಲ್ಲಿ ಅವಳೇ ಸಾಮ್ರಾಜ್ಞಿ, ಅಲ್ಲಿ ಬಂಧನವೇ ನನಗೆ ಕಾಣಲಾಗುವುದಿಲ್ಲ. ಸ್ವೇಚ್ಛೆಯಾಗಿ ಸಾಧಿಸಬೇಕಾದ ಸಾಧನೆ ಇಲ್ಲಿ ಬೇಕಾದಷ್ಟಿದೆ. ಸಾಧಿಸಬೇಕಾದ್ದನ್ನು ಸಾಧಿಸಿದಾಗ ಸಿದ್ಧಿಸಬೇಕಾದದ್ದು ಸಿದ್ಧಿಸೀತು.

ಅಯ್ಯೋ! ನನಗೇನು ಹುಚ್ಚು ಹಿಡಿಯಿತೋ, ಬೆಪ್ಪು ಅಂಟಿತೋ! ದೇವೇಗೌಡರ ಮನೆಯಲ್ಲಿ ನಡೆದ ಕಥೆಯ ಹೆಗ್ಗಳಿಕೆಯ ಜಂಭಕೊಚ್ಚುತ್ತ. ಅಲ್ಲಿ ಬಂದ ಬರಲಿರುವ ಹಣದ ಮೊತ್ತದ ಬಗೆಗೆ ತಲೆಕೆಡಿಸಿಕೊಂಡುದನ್ನು, ಅಲ್ಲಿನ ಊಟದ ಅಧ್ಭುತೆಯನ್ನು ಮೆಚ್ಚಿ ಏನೇನೋ ಹಾಳೆತುಂಬಿಸುವ ಕಾರ್ಯವನ್ನು ಬಿಟ್ಟು ಸಮಾಜಶಾಸ್ತ್ರ. ಸ್ತ್ರೀಯ ಕೂಗು ಮೊದಲಾದ ತಲೆ

ಕೆಡಿಸುವ ಸಮಸ್ಯೆಗಳನ್ನು ಹೇಳುತ್ತ ಹೋಗುವುದೇ? ಈ ಕೀರ್ತನೆ ಮಾಡುವವರ ಸಹವಾಸವೇ ಇಷ್ಟು. ಏನೋ ಒಂದು ಹೇಳಹೋಗಿ ಮತ್ತೆ ಒಂಬತ್ತಕ್ಕೆ ಹಾರಿಹೋಗಿ ಸುತ್ತಿಸುತ್ತಿ ಬರುತ್ತಾರೆ ಎನ್ನಬೇಡಿ! ಹೆಡತ್ರಿ ಗೌಡರ ಮನೆಯೊಡತಿ ನಿಜವಾಗಿ ಮನೆಯೊಡತಿಯಾಗಿ ಯಥಾರ್ಥ ಜೀವನ ನಡೆಸುತ್ತಿದ್ದ ಬಗ್ಗೆ ವಿಶ್ಲೇಷಣೆ ಮಾಡುವಾಗ ಸ್ವಲ್ಪ ಅಡ್ಡತಿಡ್ಡ ಹೋದದು ನನ್ನ ತಪ್ಪು, ಕ್ಷಮಿಸಿ.

ಊಟೋಪಚಾರವೆಲ್ಲ ಮುಗಿದು ಕ್ಷಣಕಾಲ ವಿಶ್ರಾಂತಿ ತಕ್ಕೊಂಡ ಮೇಲೆ ಗೌಡರ ಹತ್ತಿರಕ್ಕೆ ಉಪಾಧ್ಯಯರು ನನ್ನನ್ನು ಕರೆದೊಯ್ದರು. ಗೌಡರು ನಕ್ಕರು. ಬಹುಶಃ ರಾತ್ರಿ ನಾನು ಬಹಳ ನಗುವಂತೆ ಆಡಿದ ಮಾತುಗಳನ್ನು ನೆನೆಸಿಕೊಂಡಿರಬೇಕು. "ಮೇಷ್ಟ್ರೇ ತಟ್ಟೆಕೊಡಿ" ಓಗೆ ಅನ್ನುವುದನ್ನೇ ಎದುರು ನೋಡುತ್ತಿದ್ದ ಉಪಾಧ್ಯಾಯರು ತಾಂಬೂಲದ ತಟ್ಟೆ ತಂದರು. ತಟ್ಟೆಯಲ್ಲಿ ಎರಡು ಕಾಯಿ, ಚಿಪ್ಪು ಬಾಳೆ ಹಣ್ಣು, ಎಲೆ ಅಡಿಕೆಯ ಮೇಲಿಟ್ಟಿದ್ದ 25 ರೂಪಾಯಿಗಳ ನೋಟು ಹೊಸಬಟ್ಟೆಯ ಸಂಕೇತವಾಗಿ ಒಂದು ಟವಲ್ ಇಷ್ಟೆಲ್ಲ ಇದ್ದವು. ನನ್ನನ್ನು ಕರೆದು ನಿನ್ನೆ ಬಹಳ ಚೆನ್ನಾಗಿ ಕಥೆ ಮಾಡಿದಿರಿ. ಬನ್ನಿ' ಎಂದು ಹೇಳಿ ತಟ್ಟೆಯನ್ನು ಕೊಟ್ಟರು. ತೆಗೆದುಕೊಂಡು ತುಂಬಾ ಉಪಕಾರವಾಯಿತೆಂದು ಧನ್ಯವಾದ ಸಮರ್ಪಿಸಿದೆ. ಹಾಗೆಯೇ ನೋಟನ್ನು ಜೇಬಿಗಿಟ್ಟೆ. ಬಿಟ್ಟೆ. ಅವರ ಮುಗಿವಳಿ ದುಡ್ಡು ನನ್ನನ್ನು ಬೆಚ್ಚಿಬೀಳುವಂತೆ ಮಾಡಿದ್ದಂತೂ ನಿಜ. ಆಮೇಲೆ "ಸ್ವಲ್ಪ ಅಡಿಕೆ ಒಯ್ಯುತ್ತೀರಾ" ಎಂದರು. ನಾನು ಬಿಡುವುದೆಂತು! ಸಾಕ್ಷಾತ್ ಗೌಡರೇ ಅಡಿಕೆ ರಾಶಿಯಿಂದ ಒಂದು ಮೊರದ ತುಂಬ ಅಡಕೆ ಬೆಟ್ಟೆಯನ್ನು ತಂದು ಸುರಿದರು; ಕಟ್ಟಿದೆ. ಸುಮಾರು ನಾಲ್ಕೈದು ಬೊಗಸೆಯಷ್ಟು ಮೆಣಸು, ಒಂದು ಬೊಗಸೆ ತುಂಬ ಯಾಲಕ್ಕಿಯನ್ನು ತಂದು ಸುರಿದರು. ಎಲ್ಲವನ್ನು ಕಟ್ಟಿದೆ. ಬೀಳ್ಕೊಟ್ಟರು. ಗೌಡ ದಂಪತಿಗಳಿಗಿಬ್ಬರಿಗೂ ನಮಸ್ಕಾರ ಹೇಳಿ ಉಪಾಧ್ಯಾಯರ ಕೊಠಡಿಗೆ ಬಂದೆ.

ನಾನು ನಿಜವಾಗಿ ದಂಗುಬಡಿದೆ. ಐದು ನಿಮಿಷ ಸ್ತಬ್ಧವಾಗಿ ಸಂಭಾವನೆ ಇಪ್ಪತ್ತೈದು ರೂಪಾಯಿ. ಆರತಿ ತಟ್ಟೆಹಣ ಹನ್ನೆರಡು. ಅಂಬರಗೋಡ್ಲಿನಲ್ಲಿ ಬಂದದ್ದು ಹದಿನಾರು. ಐವತ್ತು ಮೂರು ರೂಪಾಯಿ. ಅಡಿಕೆ ಯಾಲಕ್ಕಿ ಮಾರಿದರೆ ಐದಾರು ರೂಪಾಯಿ ಬಂದಾವು. ಒಟ್ಟು ಅರವತ್ತರ ಮಜಲು. ಭಲೆ! ಎಂದು ಮನದಲ್ಲೇ ನನ್ನ ವಿಜಯ ಸಾಧನೆಗೆ ನಾನೇ ಮೆಚ್ಚುತ್ತ ನಾಲ್ಕು ತಿಂಗಳು ಎಷ್ಟೇ ಧಾರಾಳವಾಗಿ ಖರ್ಚುಮಾಡಿದರೂ, ದೋಸೆ, ಕಾಫಿಗಾಗಿ ಬೆನ್ನು ಹತ್ತುವ ನಮ್ಮ ಮಿತ್ರರಿಗೆ ಧಾರಾಳವಾಗಿ ಖರ್ಚು ಮಾಡಿದರೂ ಸಾಕಾಗುವಷ್ಟು ಹಣ ಕೈ ಸೇರಿ ಹೋಯಿತೆಂದು ಯೋಚಿಸುತ್ತಿರುವಾಗಲೇ ಉಪಾಧ್ಯಾಯರು "ಈಗ ನೀವು ಕಾಲುದಾರಿಯಲ್ಲಿ ಹೋಗುವಿರೋ, ರಸ್ತೆ ಹಿಡಿದು ಹೋಗುವಿರೋ" ಎಂದು ನನ್ನ ಸಮಾಧಿ ಭಂಗ ಮಾಡಿದರು. ನಾನು ತಡಬಡಗೊಂಡು ಇಲ್ಲ ಇಲ್ಲ! ನಾನು..... ನಾನು ಈಗ....... ರಸ್ತೆ ಹಿಡಿದೇ ಹಿಡಿದೇ ಹೋಗುತ್ತೇನೆ - ಎಂದೆ, ಸಮಾಧಿಯಿಂದ ಎಚ್ಚರಗೊಂಡವನಂತಾಗಿ. "ಆಗಲಿ ಹಾಗೇ ಮಾಡಿ. ಸ್ವಲ್ಪ ದೂರ ಆದರೂ ಚಿಂತೆಯಿಲ್ಲ. ಗದ್ದೆ ಹಾಳೇ ಕೊಚ್ಚೆ - ಹೊಳೆ - ಹಳ್ಳ ಇಲ್ಲ. ನೀವು ಬೈಲು ಸೀಮೆಯವರು. ಅರಣ್ಯದ ದಾರಿಯೂ ನಿಮಗೆ ಸ್ವಲ್ಪ ಭಯದ್ದು ಅಲ್ಲವೆ" ಎಂದು ನಗುನಗುತ್ತ ಬೀಳ್ಕೊಟ್ಟರು. ಹೊರಟೆ. ಉತ್ಸಾಹ ತುಂಬಿ ನಾನು ಭೂಮಿಯ ಮೇಲೆ ನಡೆಯುತ್ತಿದ್ದೇನೋ, ಅಂತರಿಕ್ಷದಲ್ಲಿಯೇ ಹೋಗುತ್ತಿದ್ದೇನೋ ತಿಳಿಯದಾಯಿತು. ಅಷ್ಟೊಂದು ಹುಮ್ಮಸ್ಸು. ಮನುಷ್ಯ ಜೀವನವೇ ಅರ್ಥವ್ಯಕ್ತಿ. ಅದು ಕೈಗೂಡಿದಾಗ ಉತ್ಸಾಹಶಕ್ತಿ ಅತ್ಯಧಿಕ. ಅರ್ಥ ಕೈಸೇರಿದಾಗ

ವಿಕಾರವಾಗದವರು ಬಹುವಿರಳ. ವಿತರಣದೊಡನೆ ಕೂಡಿದ ಅರ್ಥದೊದವು ಆದಾಗಲೇ ಆ ಗಳಿಕೆಯ ಸಾರ್ಥಕ್ಯ. ಶುದ್ಧ ಕಾಯಕಾರ್ಜಿತ ಧನದಲ್ಲಿ ಮನುಷ್ಯನಿಗೆ ತೃಪ್ತಿ ಅತ್ಯಧಿಕ. ಅದು ಶುಚಿಯಾದ ಧನ, ಧನದಲ್ಲಿ ಶುಚಿಯುಂಟಾಗುವುದು ಧರ್ಮಮಾರ್ಗದಲ್ಲಿ ಅದು ಕೈಸೇರಿದಾಗಲೇ. ಅದಕ್ಕಾಗಿ ವ್ಯಾಸರು ತನ್ನ ಎರಡೂ ಕೈಗಳನ್ನು ಮೇಲಕ್ಕೆತ್ತಿ ಲೋಕಕ್ಕೆ 'ಧರ್ಮಾದರ್ಥಶ್ಚ ಕಾಮಶ್ಚ' ಎಂದು ಸಾರಿ ಹೇಳಿದರು. ಧರ್ಮದಿಂದ ಬಂದ ಅರ್ಥಕಾಮಾದಿಗಳೇ ಮನುಷ್ಯನನ್ನು ಅತ್ಯಂತ ಉತ್ಸಾಹಿತನನ್ನಾಗಿ ಮಾಡುತ್ತವೆ. ಅಧರ್ಮದಿಂದ ಬಂದುದು ಆಸೆಯನ್ನು ಹೆಚ್ಚು ಮಾಡಿ ಜೊತೆಗೆ ಅಂಜಿಕೆಯನ್ನು ನಿದ್ರಾಭಂಗವನ್ನು ಮಾಡಿ ದುಃಖವನ್ನುಂಟುಮಾಡುತ್ತದೆ. 'ಧರ್ಮಸ್ಯ ಮೂಲಮರ್ಥಃ' ಎಂದು ಚಾಣಕ್ಯ ಹೇಳಿದ್ದೂ ಇದನ್ನೇ. ಧರ್ಮಕ್ಕೆ ಅರ್ಥಮೂಲವಾದರೂ, ಆ ಅರ್ಥ ಧರ್ಮದಿಂದಲೇ ಬಂದಿರಬೇಕೆಂಬುದು ಇಲ್ಲಿ ತಾತ್ಪರ್ಯ. ಅರ್ಥ ಎಂದರೆ ಇಲ್ಲಿ ದುಡ್ಡು ಅಷ್ಟೇ ಅಲ್ಲ. ಧಾನ್ಯವೂ, ಇತರ ಭೋಗ್ಯವಸ್ತುಗಳೆಲ್ಲವೂ ಕೂಡ. "ನಹಿ ಧಾನ್ಯಸಮೋಹ್ಯರ್ಥ" ಎಂದು ಅವನು ಹೇಳಿದುದು ಅದಕ್ಕಾಗಿಯೇ. ನನಗೊದಗಿರುವ ಕಾಯಕದ ಧನ ನನ್ನನ್ನು ಅತೀವ ಉತ್ಸಾಹಿತನನ್ನಾಗಿ ಮಾಡಿದ್ದು ಎಳ್ಳಷ್ಟೂ ಉತ್ಪ್ರೇಕ್ಷಿತ ಮಾತಲ್ಲ.

ಅಂಬರಗೋಡ್ಲಿಗೆ ಬಂದು ಬಸಪ್ಪಸೆಟ್ಟರಿಗೆ ಧನ್ಯವಾದ ಹೇಳಿ "ನಿಮ್ಮಿಂದ ತುಂಬ ಉಪಕಾರವಾಯಿತು" ಎಂದೆ. ಅವರು "ಚಿಂತೆಯಿಲ್ಲ ನೀವು ನಮಗೂ ಗೌರವ ತಂದಿರಿ" ಎನ್ನುತ್ತ ಕುಳಿತುಕೊಳ್ಳ ಹೇಳಿ ಒಳಗೆ ಹೋಗಿ ತಾವು ಮಾರಲಿಕ್ಕೆಂದು ತಂದಿಟ್ಟ ಕಂಬಳಿರಾಶಿಯಲ್ಲಿಂದ ಒಂದು ಕಂಬಳಿಯನ್ನು ಕಯ್ಯಲ್ಲಿ ಹಿಡಿದು ತಂದು "ನೀವು ಬೈಲು ಸೀಮೆಯವರು, ಶಿವಮೊಗ್ಗೆಯಲ್ಲಿರುವವರು. ಅಲ್ಲಿ ಚಳಿ, ಸೊಳ್ಳೆ ಎರಡೂ ಬಹಳ. ಇದೇ ಈ ಕಂಬಳಿಯನ್ನು ಉಪಯೋಗಿಸಿ. ಇದು ನನ್ನ ಕಾಣಿಕೆ" ಎಂದು ಹೆಗಲ ಮೇಲೆ ಮಡಿಕೆಮಾಡಿ ಹಾಕಿಬಿಟ್ಟರು.

ನಾನು ಸಂತೋಷದಿಂದ ಅವರನ್ನು ಬೀಳ್ಕೊಂಡು ಸಾಗರದ ಬಸ್ಸು ಹತ್ತಿ ಸಾಗರದಿಂದ ಶಿವಮೊಗ್ಗಕ್ಕೆ ರೈಲಿನಲ್ಲಿ ಹೊರಟು ಬಂದೆ. ದಾರಿಯಲ್ಲಿ ಶೇಖರಯ್ಯ ಮತ್ತು ಶಿವಯ್ಯ ಇವರಿಬ್ಬರನ್ನೇನಾದರೂ ಈ ಸ್ಥಳಗಳಿಗೆ ಕರೆದುಕೊಂಡು ಬಂದಿದ್ದರೆ ನನ್ನ ಗತಿ ಏನಾಗುತ್ತಿತ್ತೋ ಎಂದುಕೊಂಡು ಈ ಹಿಂದಿನ ಮುದೇನಾರು, ಹಾಲಿವಾಣ ಮುಂತಾದ ಪ್ರವಾಸ ಪ್ರಸಂಗಗಳನ್ನು ನೆನೆದು ಕಂಪಿಸಿಬಿಟ್ಟೆ. ಸದ್ಯ ದೇವರು ಬದುಕಿಸಿದ ಎಂದುಕೊಂಡೆ.

ಇಷ್ಟು ಹೊತ್ತಿಗಾಗಲೇ ಡಿ.ಪಿ.ಐ. ಅವರಿಂದ ಶಿವಮೊಗ್ಗ ನಾರ್ಮಲ್ ಸ್ಕೂಲಿನಲ್ಲಿ ಹೈಸ್ಕೂಲ್ ಫೀಜು ಕಟ್ಟಿ ಟ್ರೈನಿಂಗ ಪಡೆಯಬಹುದೆಂಬ ಅನುಮತಿಯ ಪತ್ರ ಬಂದು ಹೋಗಿತ್ತು. ವಿದ್ಯಾರ್ಥಿವೇತನಕ್ಕೆ ಮಾತ್ರ ಸೊನ್ನೆಯಾಯಿತು. ಆದರೆ ಇದು ನನ್ನನ್ನು ಬಾಧಿಸಲಿಲ್ಲ. ದುಡಿದು ಸಂಪಾದಿಸಿ ಓದಬಲ್ಲೆನೆಂಬ ಆತ್ಮಪ್ರತ್ಯಯ ನನಗೆ ಧೈರ್ಯ ಹೇಳಿತು. ಮೂರು ತಿಂಗಳವರೆಗೆ ನಾನು ಮಾನಸಿಕವಾಗಿ ಭಯಗೊಂಡದ್ದು ಅಷ್ಟಿಷ್ಟಲ್ಲ. ಏಕೆಂದರೆ ಏನೋ ಕಡಿದು ಕತ್ತರಿಸಿ ಬರುತ್ತೇನೆಂದು ಕೊಂಡು ಜಂಭಕೊಚ್ಚಿ ದಂಡಿಗೆ ಹೋಗುವವವನು ಮನೆಯಲ್ಲಿ ಏನೇನೋ ತಿಂದು ಕುಂಭಕರ್ಣನಂತೆ ಮಲಗಿ ಹೋದವನಂತಾಗಿತ್ತು ನನ್ನ ಪರಿಸ್ಥಿತಿ. ಹಿರೇಕಾಂಶಿ ಜನರೆದುರು ಓದಲು ಹೋಗುತ್ತೇನೆ ಎಂದು ಹೇಳಿ ಇಲ್ಲಿ ಸೀಟೂ ಸಿಗದೆ ಅಲ್ಲಿ ಶಾಲೆಯನ್ನು ತ್ಯಜಿಸಿ ಇನ್ನೊಬ್ಬರನ್ನು ನೇಮಿಸಿ ತ್ರಿಶಂಕುವಿನಂತೆ ಎಲ್ಲಿ ತಲೆಕೆಳಗಾಗಿ ನಿಲ್ಲುವೆನೋ ಎಂಬ ಭಯವೇ ನನ್ನನ್ನು ಹಗಲು-ರಾತ್ರಿ ಕಾಡುತ್ತಿತ್ತು. ಅದೀಗ ಪರಿಹಾರವಾಗಿ ಪೂರ್ಣಹಗುರಾಗಿ ಬಿಟ್ಟೆ. ಆರ್ಡರು

ಬಂದ ದಿನ ನನ್ನ ಮಿತ್ರವರ್ಗವೆಲ್ಲ ಎಲ್ಲಿ ಹೋದ. ಎಲ್ಲಿ ಹೋದ! ಎಂದು ಹುಡುಕಾಡಿ ತಡಕಾಡಿ ಬಿಟ್ಟರಂತೆ. ಅವರು ಕಾತರಗೊಂಡು ಅವರಿವರನ್ನು ವಿಚಾರಿಸುವ ಹೊತ್ತಿಗೇ ನಾನು ಅಂಬರಗೋಡು, ಹೆಡತ್ರಿಯ ವೀರವಿಜಯಯಾತ್ರೆಯನ್ನು ಮುಗಿಸಿ ಧೀಂ ರಂಗ ಎಂದು ಅವರ ಮುಂದೆ ಪ್ರತ್ಯಕ್ಷನಾಗಿ ಬಿಟ್ಟೆ. ನನ್ನ ಈ ವಿಜಯಯಾತ್ರೆಯ ಕಥೆಯನ್ನೆಲ್ಲ ಸುತ್ತು ಮುತ್ತು ನೆರೆದ ಹತ್ತಿಪ್ಪತ್ತು ಜನರಿಗೆ ಒಂದೇ ಉಸುರಿಗೆ ಹೇಳಿ ನಗಿಸಿದ್ದೇ ನಗಿಸಿದ್ದು. ಅವರಲ್ಲಿ ಚನ್ನಗಿರಿ ಚಿಕ್ಕಪ್ಪ (ಇಂದಿಗೂ ಆಪ್ತ ಮಿತ್ರನಾಗಿರುವವನು) "ಎಲಾ ಎಲಾ ಕಳ್ಳ! ನಮ್ಮ ನಾಲ್ಕು ತಿಂಗಳ ಸಂಬಳದ ಹಣವನ್ನು ನಾಲ್ಕೈದು ದಿನಗಳಲ್ಲಿ ಹೊಡೆದು ಬಿಟ್ಟೆಯಲ್ಲ! ಈಗ ಎರಡು ಸಲ ನಮಗೆ ತಿಂಡಿಕೊಡಿಸಬೇಕು. ಒಂದು ಡಿ.ಪಿ.ಐ. ಆರ್ಡರಿನದು, ಇನ್ನೊಂದು ನಿನ್ನ ವಿಜಯಯಾತ್ರೆಯದು" ಎಂದು ಅಲಿಬಾಬನ ಹಿಂದಿನ ಕಳ್ಳರಂತೆ ಎಲ್ಲರೂ ಹಿಂಬಾಲಿಸಿ ಬಿಟ್ಟರು. ಇಪ್ಪತ್ತೂ ಜನವನ್ನು ಬೆನ್ನು ಹತ್ತಿಸಿಕೊಂಡು ಶಿವಮೊಗ್ಗ ಬೀದಿಯಲ್ಲಿ ನಗುತ್ತ ಕೆಲೆಯುತ್ತ ಜನಗಳೆಲ್ಲ ನಮ್ಮನ್ನೇ ನೋಡಿ ಏನಾಗಿದೆ ಇವರಿಗೆ? ಎನ್ನುವಂತೆ ಮಾಡುತ್ತಾ ಮಹಾಬಲಯ್ಯನ ಹೋಟಲಿಗೆ ಹೋಗಿ ಇಪ್ಪತ್ತು ದೋಸೆ, ಇಪ್ಪತ್ತು ಬೆಣ್ಣೆ , ಇಪ್ಪತ್ತು ಸಿಹಿ, ಇಪ್ಪತ್ತು ಕಾಫಿಗಳಿಗೆ ಆರ್ಡರು ಕೊಟ್ಟೆ. ಎಲ್ಲರೂ ಹೋಟಲು ಹಾರಿ ಬೀಳುವಂತೆ ನಗುತ್ತ. ಮ್ಯಾನೇಜರಿಂದ ಸ್ವಲ್ಪ ಗದರಿಸಿಕೊಂಡು ತಿಂಡಿ ತಿಂದು ಐದು ರೂಪಾಯಿ ಹತ್ತಾಣೆ ಬಿಲ್ಲು ಕೊಟ್ಟು ತುಂಗಭದ್ರಾ ನದಿಯ ತೀರಕ್ಕೆ ಹೋಗಿ ಮಳಲರಾಶಿಯ ಮೇಲೆ ಕತ್ತಲಾಗುವವರೆಗೆ ಕುಳಿತು ಹರಟೆ ಹೊಡೆದು ಕುರುಬರ ಬೀದಿಯಲ್ಲಿ ಹಾಯ್ದು ಹಾಸ್ಟಲ್ ಸೇರಿ ಬಿಟ್ಟೆವು.

ಕಾಲೇಜನ್ನು ವಿಧ್ಯುಕ್ತವಾಗಿ ಸೇರಿಕೊಂಡು ಬಿಟ್ಟೆ. ಮೂರು ತಿಂಗಳು ನಡೆದ ಪಾಠ ಪ್ರವಚನ ಭಾಗವನ್ನು ವಿದ್ಯಾರ್ಥಿಮಿತ್ರರ ಸಹಾಯದಿಂದ ಹದಿನೈದು ದಿನಗಳಲ್ಲಿ ಟಿಪ್ಪಣಿ ತೆಗೆದುಕೊಂಡು ಅವರನ್ನೆಲ್ಲ ಹಿಂದೆ ಹಾಕಿ ತರಗತಿಯಲ್ಲಿ ನನ್ನ ಪತಾಕೆಯನ್ನು ಎತ್ತಿ ಹಿಡಿದುದು ಎಲ್ಲರಿಗೂ ಅಚ್ಚರಿಯನ್ನುಂಟುಮಾಡಿ ಬಿಟ್ಟಿತು. ಈ ಹಿಂದೆ ನಾನು ತಿಳಿದುಕೊಂಡಿದ್ದ ಎಷ್ಟೋ ಅಂಶಗಳು ಅದರಲ್ಲಿದ್ದುವು. ಅಲ್ಲದೆ ನಾನು ಎಂದಿನಿಂದಲೂ ಓದುತ್ತ ಬಂದಿದ್ದೆನಾಗಿ ಬೀಜಗಣಿತವೊಂದನ್ನು ಬಿಟ್ಟರೆ ಯಾವುದೂ ನನಗೆ ಕಷ್ಟವೆನಿಸಲೇ ಇಲ್ಲ. ಗಣಿತ ನಾನು ಹಿಂದೆ ತಿಳಿದುಕೊಂಡುದಕ್ಕಿಂತ ತೀರ ಕಡಿಮೆ. ಜಾಮೆಟ್ರಿ ನಾನು ಮುಲ್ಕೀ ಪರೀಕ್ಷೆಯಲ್ಲಿ ಓದಿದುದಕ್ಕಿಂತ ಕಡಿಮೆಯೇ ಅನ್ನಿಸಿತು. ನಾನು ತರಗತಿಗೆ ಸೇರಿದ ದಿನದಿಂದ ತರಗತಿಗೊಂದು ಕಳೆ ಬಂದಿತೆಂದು ನನ್ನ ಮಿತ್ರರೆಲ್ಲ ಭಾವಿಸಿದರು. ಈ ನನ್ನ ಕಾಲೇಜಿಗೆ ಸೇರಿದ ವಿಷಯವನ್ನು ಹಿರೇಕಾಂಶಿ, ಹೊಸೂರು, ಚಾಮೇನಹಳ್ಳಿ, ಹರವಿ (ನನ್ನ ಹುಟ್ಟೂರು) ಮುಂತಾದ ಕಡೆಗೆಲ್ಲ ತಿಳಿಸಿದೆ. ಮುಖ್ಯವಾಗಿ ಶರಣ ಶ್ರೀ ಚೆನ್ನಮಲ್ಲಿಕಾರ್ಜುನರಿಗೆ ಕಾಗದ ಬರೆದೆ. ಮುಂದೆ ಅಲ್ಲಿಯೇ ಹಾಸ್ಟಲಿನಲ್ಲಿದ್ದುಕೊಂಡು ವಿದ್ಯಾಭ್ಯಾಸವನ್ನು ನಿರಾತಂಕವಾಗಿ ಮುಂದುವರಿಸಿದೆ.

ಇದೇ ಕಾಲದಲ್ಲಿ ನಾನೊಂದು ಘೋರ ಮಾನಸಿಕ ಆಘಾತಕ್ಕೊಳಗಾದೆ. ನನ್ನನ್ನು ವಿಶೇಷ ವಾತ್ಸಲ್ಯದಿಂದ ಹಲವಾರು ವರ್ಷ ಕಂಡು ಆಶೀರ್ವದಿಸುತ್ತಿದ್ದ ಹಾವೇರಿ ಹುಕ್ಕೇರಿ ಮಠದ ತಪಸ್ವಿ ಶ್ರೀ ಸಿ. ಪ್ರ. ಶಿವಬಸವ ಮಹಾಸ್ವಾಮಿಗಳವರು ಲಿಂಗೈಕ್ಯರಾದರೆಂದು ಬಂದ ಪತ್ರಿಕೆ ಸುದ್ದಿಯನ್ನು ಓದಿ ಬಹಳವಾಗಿ ಸಂಕಟಪಟ್ಟೆ. ಆ ಕೂಡಲೆ ಹಾವೇರಿಗೆ ಓಡಿ ಹೋದೆ. ಲಿಂಗೈಕ್ಯರಾಗಿ ನಾಲ್ಕೈದು ದಿನಗಳಾಗಿ ಹೋಗಿತ್ತು. ಗದ್ದಿಗೆ ದರ್ಶನ ಮಾಡಿಕೊಂಡು ಅಶ್ರುತರ್ಪಣವನ್ನು ಅವರ ಪಾದಕ್ಕರ್ಪಿಸಿ ಬಂದೆ. ಕಳೆದ ಹತ್ತು ವರ್ಷಗಳಿಂದ ಅವರು ಬಹಳ

ವಾತ್ಸಲ್ಯದಿಂದ ನನ್ನನ್ನು ಕಾಣುತ್ತಿದ್ದರು. ನನಗಾಗಿ ಒಂದು ಕೆಲಸ ಕೊಡಿಸಲು ಪ್ರಯತ್ನಿಸಿದರು. ನನಗೆ ಸಂಗೀತ ಕಲಿಯಲು ಪ್ರೇರೇಪಿಸಿದರು. ನಾನು ಒಪ್ಪಲಿಲ್ಲ. ಅಂಗಡಿ ಗುಮಾಸ್ತರನ್ನಾಗಿಸಿದರು. ಅದನ್ನು ಕೈ ಬಿಟ್ಟೆ. ಶ್ರೀ ಚೆನ್ನಮಲ್ಲಿಕಾರ್ಜುನರ ಉಡಿಗೆ ಹಾಕಿ ಹೋದರೆಂದು ಕಣ್ಣೀರಿಟ್ಟು ಬಂದೆ. ಚೆನ್ನಮಲ್ಲಿಕಾರ್ಜುನರು 1962ರವರೆಗೂ ನನ್ನನ್ನು ವಾತ್ಸಲ್ಯದಿಂದ ಕಂಡು ಆಶೀರ್ವದಿಸಿದರು. ಈ ಮಹನಿಯರಿಬ್ಬರ ಆಶೀರ್ವಾದ ನನ್ನನ್ನು ರಕ್ಷಿಸಿದೆ; ಮನುಷ್ಯನನ್ನಾಗಿಸಿದೆ. ಅಲ್ಲಿ ಓರ್ವ ಕನ್ನಡ ಪಂಡಿತರಿದ್ದರು. (ಹೆಸರು ಮರೆತಿದೆ) ಅವರು "ನೀನು ಇಲ್ಲಿ ಹೊಸದಾಗಿ ಏನು ಕಲಿಯಬೇಕೆಂದು ಬಂದಿಯಪ್ಪಾ! ನನಗಂತೂ ಅರ್ಥವಾಗಲಿಲ್ಲ" ಎಂದರು. ನನ್ನ ಕಾರ್ಯ ಪ್ರತಿಭೆ, ಕಾವ್ಯವಾಚನ ರೀತಿ ಅವರಿಗೆ ಬಹಳ ತೃಪ್ತಿ ತಂದಿತ್ತು. ಕಾವ್ಯಗಳನ್ನು ಓದುವ ಪ್ರಸಂಗ ಬಂದಾಗ ಓದಿ ತರಗತಿಯನ್ನೆಲ್ಲ ದಂಗು ಬಡಿಸಿಬಿಡುತ್ತಿದ್ದೆ. ಆ ವರ್ಷದ ವಾರ್ಷಿಕೋತ್ಸವದಲ್ಲಿ ನನಗೆ ಆರು ಪ್ರಥಮ ಬಹುಮಾನಗಳು ಬಂದು ಬಹುಶಃ ಎಲ್ಲರನ್ನು ದಂಗುಬಿಡಿಸಿಬಿಟ್ಟುದಂತೂ ಪೂರ್ಣಸತ್ಯ ವಿಷಯ. ಪ್ರಥಮ ಬಹುಮಾನಾಂಕಿತ ಕೆಲವು ಪುಸ್ತಕಗಳು ನನ್ನಲ್ಲಿ ಈಗಲೂ ಇವೆ. ಆರು ಪ್ರಥಮ ಬಹುಮಾನ ಗಳಿಸಿದ್ದು ನನ್ನ ವಿಷಯದಲ್ಲಿ ಕೆಲವರಿಗೆ ನಿರ್ನಿಮಿತ್ತ ಅಸಮಾಧಾನವಾದದ್ದು ಕಂಡು ಬಂತು. ಇದು ನನ್ನ ಮಿತ್ರರಿಂದ ತಿಳಿದುಬಂತು. ನಮ್ಮ ಉಪಾಧ್ಯಾಯರಲ್ಲೇ ಒಬ್ಬರು "ಎಲ್ಲಾ ಪ್ರಥಮ ಬಹುಮಾನಗಳ ಗುತ್ತಿಗೆಯನ್ನು ನೀನೇ ತೆಗೆದುಕೊಂಡಿದ್ದೀಯೇನಯ್ಯಾ" ಅಂದುಬಿಟ್ಟರು, ತಡೆಯಲಾರದೆ. ನಾನು ಸುಮ್ಮನಾದೆ. ಅವರ ಮಾತ್ಸರ್ಯಕ್ಕೆ ಕಾರಣ ಔಟ್ ಆಫ್ ಸ್ಟೇಟಿನವನು ಇಲ್ಲಿಗೆ ಬಂದು ಸ್ಥಳೀಯ ಹುಡಗರಿಗೆ ಫಸ್ಟ್ ಪ್ರೈಜ್ ದೊರೆಯದಂತಾಯಿತಲ್ಲ! ಎಂಬ ಪ್ರಾದೇಶಿಕ ದುರಭಿಮಾನಪೂರಿತ ಬಾಲಕ ಮನೋಭಾವ ಪ್ರೇರಿತವಂತೆ! ನಾನು ಹೀಗೆ ಆರು ಪ್ರಥಮ ಬಹುಮಾನ ಪಡೆದದ್ದು ಅಭಿಮಾನಿಗಳಿಗೆಲ್ಲ ಕುಣಿದಾಡುವಷ್ಟು ಆನಂದಗೊಳಿಸಿತ್ತು. ಅವರ ಗುಂಪಿನಲ್ಲಿ ನನ್ನ ಪ್ರತಿಷ್ಠೆ ಇನ್ನೂ ಅಧಿಕವಾಗಿ ಹೋಯಿತು. ಮತ್ಸರಗೊಳ್ಳುವ ಯಾರಿಗೂ ಹೆದರುವ ಸ್ಥಿತಿಯಲ್ಲಿರಲಿಲ್ಲ. 9-10 ತಿಂಗಳ ಅವಧಿಯಲ್ಲಿ ನಾನು ಹಿರೇಕಾಂಶಿಯಲ್ಲಿದ್ದುದಕ್ಕಿಂತ ಬಹಳ ಬೆಳೆದು ಬಿಟ್ಟಿದ್ದೆ. ಚಾಮೇನಹಳ್ಳಿ, ಕಾಂಗ್ರೆಸ್ ಕಾರ್ಯಕರ್ತ ವೀರಪ್ಪನ ಮೂಲಕ ಸಿದ್ಧಯ್ಯನವರೇ ಮೊದಲಾದ ದೊಡ್ಡದೊಡ್ಡವರ ಪರಿಚಯ ಗಳಿಸಿಬಿಟ್ಟಿದ್ದೆ. ನಮ್ಮ ತರಗತಿಗಳಲ್ಲೇ ಎರಡು ಜಿಲ್ಲೆಯ ನಾನಾ ಮೂಲೆಗಳಿಂದ ಬಂದಿದ್ದ ಘಟಾನುಘಟಿಗಳಾದ ನೂರಾರು ಜನ ಉಪಾಧ್ಯಾಯರ ಬೆಂಬಲವೂ ಇತ್ತು. ಜೊತೆಗೆ ನನ್ನದೇ ಆದ ಬನಿ - ಬಿಗುವು - ಶಕ್ತಿ ಸಾಮರ್ಥ್ಯಗಳು ಇದ್ದುವಲ್ಲವೆ? ಇಷ್ಟೆಲ್ಲ ಇದ್ದಿತ್ತೆಂದು ನಾನು ಯಾರಿಂದಲೂ ಗರ್ವಿಷ್ಠನೆಂಬ ಬಿರುದನ್ನೇನೂ ಸಂಪಾದಿಸಿರಲಿಲ್ಲ. ಭಾರತೀಯರಲ್ಲಿ ತಲೆ ತಲಾಂತರಗಳಿಂದ ಬಂದ ಜಾತಿಯ ಸಂಬಂಧದ, ಪ್ರಾಂತೀಯ ದುರಭಿಮಾನದ ಕೊಳೆಯಲ್ಲಿ ಮಿಂದ ಜನದ ಬೀಜ ಇದ್ದೇ ಇತ್ತಲ್ಲ! ಅಂಥ ಕೆಲವರಿಂದ ಬಂದ ನೈಷ್ಠುರ್ಯದ ನುಡಿಗಳಿಗೆ, ಮಾತ್ಸರ್ಯದ ಕೊಂಕುನುಡಿಗೆ ಹೆದರಬೇಕಾದ ಪ್ರಮೇಯವಿರಲಿಲ್ಲ. 1943-44ನೇ ಇಸ್ವಿಯ ನಮ್ಮ ಶಾಲಾವಾರ್ಷಿಕೋತ್ಸವದ ಸಂದರ್ಭದಲ್ಲಿಯೇ,

"ಹೂವು ಸೂರ‍್ಯಾಡುತಾವ, ನಮ್ಮ ಶಾಲಿಯ ಮ್ಯಾಲೇ, ಹೂವು ಸೂರ‍್ಯಾಡುತಾವ" - ಎಂಬ ಒಂದು ನಾನೇ ರಚಿಸಿದ ಪದ್ಯ ಹೇಳಿ ಎಸ್. ವಿ. ಪರಮೇಶ್ವರ ಭಟ್ಟ ಅವರನ್ನು ದಂಗುಬಡಿಸಿ ಬಿಟ್ಟೆ. ತಮ್ಮ ಭಾಷಣದಲ್ಲಿ ಅವರು ನನ್ನ ಪ್ರತಿಭೆಯ ಬಗೆಗೆ ಬಹಳಷ್ಟು ಹೊಗಳಿಬಿಟ್ಟರು. ಆ ಪದ್ಯದ ಪೂರ್ಣಪಾಠ ನನ್ನಲ್ಲಿ ಇಲ್ಲದೆ ಹೋಯಿತು. ಅಂದಿನಿಂದ ನನಗೆ

ಎಸ್.ವಿ. ಪರಮೇಶ್ವರ ಭಟ್ಟರ ಪರಿಚಯ. ಒಂದು ವರ್ಷದ ನನ್ನ ವಿದ್ಯಾಭ್ಯಾಸವನ್ನು ಸಮರ್ಪಕ ಮುಗಿಸಿ ಉಚ್ಚಮಟ್ಟದಲ್ಲಿ ತರಗತಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಎರಡನೆಯ ವರ್ಷದ ವಿದ್ಯಾಭ್ಯಾಸಕ್ಕೆ ಪ್ರಥಮ ಪ್ರಾಶಸ್ತ್ಯ ಅರ್ಹತೆ ಪಡೆದೆ. ಒಂದು ಮತ್ತು ಎರಡನೆಯ ವರ್ಷಗಳ ವಿದ್ಯಾಭ್ಯಾಸ ಮಾಡಿದರೆ ಅದು ಪ್ರಥಮ ವಿ.ಟಿ.ಸಿ ಎಂದೂ. ಮೂರನೆಯ ವರ್ಷದ ಓದು ದ್ವಿತೀಯ ವಿಟಿಸಿ ಎಂದೂ, ಅನಂತರ ಪ್ರಾಕ್ಟಿಕಲ್ ಪರೀಕ್ಷೆಯೇ ಮೂರನೆಯ ವಿಟಿಸಿ ಎಂದು ಆ ಪರೀಕ್ಷೆಯ ಮೂರು ವರ್ಷದ ವಿದ್ಯಾಭ್ಯಾಸದ ವಿಭಜನೆಯಾಗಿತ್ತು.

### *ಶಿವಮೊಗ್ಗ ಜೀವನದ ಸ್ವಾರಸ್ಯಕರ ನೆನಪುಗಳು*

1935ರಲ್ಲಿ ನನಗೆ ಹಾವೇರಿ ಹುಕ್ಕೇರಿ ಮಠದಲ್ಲಿ ಉಚಿತ ಊಟವಸತಿ ಸೌಲಭ್ಯವಿತ್ತು. ಹೈಸ್ಕೂಲ್‌ನಲ್ಲಿ ತಿಂಗಳಿಗೆ ಮೂರು ರೂಪಾಯಿ ಶುಲ್ಕ ಕಟ್ಟಿ ವಿದ್ಯಾಭ್ಯಾಸ ಮಾಡಲು ಸಾಧ್ಯವಾಗದೆ ಹೋಯಿತು. ಅಷ್ಟೊಂದು ನಿಸ್ಸಹಾಯಕನಾಗಿ ಹೋಗಿದ್ದೆ. ಆ ಕಾಲ ಅಂಥದು. ರೈತರು ನೆಲಕಚ್ಚಿ ಹೋಗಿದ್ದ ಕಾಲ. ಹುಟ್ಟಾರೈತರಾಗಿದ್ದ ನಮ್ಮ ಪಿತೃಗಳು ಎಲ್ಲ ರೈತರಂತೆ ತೀರಾ ಕೆಳಗಿಳಿದು ಹೋಗಿ ಅಹನ್ಯಹನಿ ಜೀವನ ನಡೆಸುತ್ತ ಅತ್ಯಂತ ದುಃಖದಾಯಕ ಪರಿಸ್ಥಿತಿಯಲ್ಲಿ ಬಾಳುವಾಗ ನನಗೆ ತಿಂಗಳಿಗೆ ಮೂರುನಾಲ್ಕು ರೂಪಾಯಿಯನ್ನು ಎಲ್ಲಿಂದ ತಂದಾರೆಂಬುದು ನನಗೇ ಅರ್ಥವಾಗುತ್ತಿತ್ತು. ಕೂಲಿಗೆ ಹೋದರೆ ಗಂಡಾಳಿಗೆ ಎರಡಾಣೆ, ಹೆಣ್ಣಾಳಿಗೆ ಒಂದುವರೆ ಆಣೆ. ನನಗೊಬ್ಬನಿಗೆ ಒಂದು ತಿಂಗಳಿಗೆ ಖರ್ಚಿಗಾಗಿ 16 ದಿನ ಒಬ್ಬ ಮನುಷ್ಯ ಕೂಲಿಮಾಡಿ ಸಂಪಾದಿಸಿಕೊಡಬೇಕಲ್ಲ! ಈ ಭಾವನೆ ನನಗೇ ಉಂಟಾಗಿ ನಾನು ಹಾವೇರಿಗೆ ಗಂಟು ಮೂಟೆ ಕಟ್ಟಿಕೊಂಡು ಹೋಗಿ ಪುನಃ ಹಿಂದಕ್ಕೆ ಗಂಟುಮೂಟೆ ಕಟ್ಟಿಕೊಂಡು ತಲೆಯ ಮೇಲಿಟ್ಟುಕೊಂಡು ಹತ್ತು ಮೈಲು ನಡೆದೇ ಬಂದು ಬಿಟ್ಟೆ. ವ್ಯವಸಾಯಕ್ಕೆ ಕೂಲಿಕುಂಬಳಿಗಳಿಗೆ ನನ್ನನ್ನು ನಾನು ಅರ್ಪಿಸಿಕೊಂಡು ಬಿಟ್ಟೆ.

ಈಶ್ವರಚಂದ್ರ ವಿದ್ಯಾಸಾಗರ, ಸರ್ ಎಂ. ವಿಶ್ವೇಶ್ವರಯ್ಯನವರುಗಳಂಥ ಅನೇಕ ವಿಶ್ವವಿಖ್ಯಾತ ವಿದ್ವಾಂಸರು ವಿದ್ಯಾಭ್ಯಾಸ ಕಾಲದಲ್ಲಿ ತೊಂದರೆ ಅನುಭವಿಸಿದರೆಂಬುದನ್ನು ನಾನು ಅಲ್ಲಿ ಇಲ್ಲಿ ಓದಿತಿಳಿದಿದ್ದೆ. ಅವರು ಓದಲು ದೀಪದ ವ್ಯವಸ್ಥೆಯಿಲ್ಲದೆ ರಸ್ತೆಯ ಪಕ್ಕದಲ್ಲಿನ ದೀಪಗಳ ಕೆಳಗೆ ಕುಳಿತು ಓದುತ್ತಿದ್ದರಂತೆ. ಅವರಿವರ ಮನೆಯಲ್ಲಿ ಉಂಡು ಓದಿದ್ದರಂತೆ. ಬಹುಶಃ ಅವರಿಗೆ ನನ್ನ ಹಾಗೆಯೇ ನಿಸ್ಸಹಾಯಕ ಸ್ಥಿತಿ ಒದಗಿರಬೇಕು ಎಂದು ಭಾವಿಸುತ್ತಿದ್ದೆ. ನನಗೂ ಈ ಅನುಭವವಾಗಿತ್ತು. ಆರು ಮತ್ತು ಏಳನೆಯ ತರಗತಿಗಳಲ್ಲಿ ಓದುವಾಗ ಇಷ್ಟೊಂದು ತೀವ್ರವಲ್ಲದಿದ್ದರೂ ಸಾಮಾನ್ಯ ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕು ಓದಿ ಮುಲ್ಕೀ ಪರೀಕ್ಷೆಯವರೆಗೆ ಓದಿದ್ದೇ ಸಾಹಸದ ಕಾರ್ಯವಾಗಿತ್ತು. ನನ್ನ ದೃಷ್ಟಿಯಿಂದ ಆ ಪರೀಕ್ಷೆ ಪಾಸಾದದ್ದು ಎಂ.ಎ., ಪಿ.ಹೆಚ್‌ಡಿ., ಬಿ.ಇ., ಎಂ.ಇ., ಇತ್ಯಾದಿ ಏನೇನೋ ದೊಡ್ಡದೊಡ್ಡ ಪರೀಕ್ಷೆಗಳ ಹೆಸರು ಹೇಳುವುದಿಲ್ಲವೇ, ಅಂಥ ಒಂದು ಸಿದ್ಧಿಯನ್ನು ಪಡೆದಂತಾಗಿ ಹೋಗಿತ್ತು. ಇನ್ನು ಮುಂದೆ ಓದುವುದು ಬಡಿಗ್ಯೆಯಿಂದ ಸಾಧ್ಯವೇ ಇಲ್ಲದಂತಹ ಪರಿಸ್ಥಿತಿಗೆ ಸಿಕ್ಕದ್ದರಿಂದಲೇ ಹಾವೇರಿಗೆ ಓದಲು ಹೋಗಿ ವಾಪಸು ಬಂದದ್ದು. ಓದಬೇಕೆಂಬ ಮಹತ್ವಾಕಾಂಕ್ಷೆ ಮಸುಳಿಸಿ ಮಣ್ಣು ಗೂಡಿದುದು ಪುನಃ 1943 ರಲ್ಲಿ ನನ್ನ ಓದಬೇಕೆಂಬ ಆಸೆಯನ್ನು ಚಿಗುರಿಸಿತ್ತು. ಅದೂ ಕೂಡ ಸ್ವತಃ ಸಂಪಾದಿಸೇನೆಂಬ ಧೈರ್ಯ ಬಂದಮೇಲೆ. ಅದರಲ್ಲೂ ನಾನು ಪರಗೃಹವಾಸ - ಪರಾನ್ನಭುಂಜನದಂತಹ ಪರೋಪಜೀವನದಂತಹ ಸ್ಥಿತಿ ತೊಲಗಿ ಅಶನವಸತಿಗಳನ್ನು ಸ್ವತಃ

ಏರ್ಪಾಡುಮಾಡಿಕೊಳ್ಳುವಷ್ಟು ಶಕ್ತಿಯನ್ನು ಏನಕೇನ ಪ್ರಕಾರೇಣ ಮಾಡಿಕೊಳ್ಳಬಲ್ಲನೆಂಬ ಶಕ್ತಿ ಬಂದಮೇಲೆ. ಇದೂ ಒಂದು ಯೋಗಾಯೋಗವೇ. ನನಗೆ ಮಿತ್ರರ ಬಳಗವೂ ಅಧಿಕವಾಗಿ ಹೋಯಿತು. ನಾನು ಓದಿದ್ದು ಒಂದು ಸಣ್ಣ ಟ್ರೈನಿಂಗ್ ಪರೀಕ್ಷೆಗಾಗಿ. ಆದರೆ ನನ್ನ ಪಾಲಿಗಂತೂ ಅದು ಬಹುದೊಡ್ಡ "ಕ್ವಾಲಿಫಿಕೇಷನ್". ಇದಕ್ಕಾಗಿ ಓದುವಾಗ ನಾನು ಎಂದೂ ತಾಪತ್ರಯ ಪಡಲಿಲ್ಲ, ತೊಂದರೆಯನ್ನನುಭವಿಸಲಿಲ್ಲ. ಶ್ರೀಮಂತನಂತೆ ಓದಿದೆ. ಸುತ್ತ ಹತ್ತಾರು ಜನ ಸುತ್ತಾಡಿ ನನ್ನ ಸಣ್ಣಪುಟ್ಟ ಆಶ್ರಯ ಪಡೆಯುವವರನ್ನಾಗಿ ಮಾಡಿಕೊಂಡು ಓದಿದೆ. ಸ್ವತಃ ದುಡಿದು ಸಂಪಾದಿಸಿ ಓದಿದೆ. ಇಂಥ ಹೋರಾಟದ ಬದುಕೇ ನನ್ನನ್ನು ಮೇಲಕ್ಕೇರಿಸಿತು. ಒಂದು ದೃಷ್ಟಿಯಿಂದ ನಾನು ಹುಟ್ಟು ಸಾತ್ವಿಕ ಹೋರಾಟದ ಮನುಷ್ಯನೇ. ನನ್ನ ಈ ಸಾತ್ವಿಕ ಹೋರಾಟವೇ ನನ್ನನ್ನು ಮೇಲಕ್ಕೇರಿಸಿತು, ಬೆಳೆಸಿತು, ಉಳಿಸಿತು. ಜೀವನದಲ್ಲಿ ಓರ್ವ ವ್ಯಕ್ತಿಯನ್ನಾಗಿಸಿತು ಎಂದು ಕೊಂಡಿದ್ದೇನೆ.

ಮೊದಮೊದಲು ಮಿತ್ರರ ನಿಮಿತ್ತ ಬಾಂಧವ್ಯವಾಗಿ ಅದು ಕೊನೆಕೊನೆಗೆ ಅನಿಮಿತ್ತ ಬಾಂಧವ್ಯದ ಸ್ಥಿತಿಗೇರಿತು. ರಜಾ ಬಂದರಾಯಿತು, ನಮ್ಮ ಊರಿಗೆ ಬನ್ನಿ, ನಮ್ಮ ಊರಿಗೆ ಬನ್ನಿರೆಂಬ ಅಗ್ರಹ ಅಧಿಕವಾಗತೊಡಗಿತು. ಹೋದ ಹೋದಲ್ಲೆ ಶಿವಕಥೆ. ಕಥೆಯಿಂದ ಪುಡಿಗಾಸಿನ ಸಂಪಾದನೆ, ಸಂಪಾದಿಸಿದ್ದನ್ನು ಮಿತ್ರರೊಡನೆ ಹಂಚಿಕೊಂಡು ತಿನ್ನುವ ಮನೋಭಾವ ಬೆಳೆಯಿತು. ಅನೇಕ ನಿಸ್ಸಹಾಯಕರಿಗೆ ಸಹಾಯವನ್ನು ಮಾಡಿದೆ. ನಮ್ಮ ಮನೆಗೂ ಅಲ್ಪಸ್ವಲ್ಪ ಹಣವನ್ನು ಆಗಾಗ ಕಳಿಸತೊಡಗಿದೆ. ಗಣಿತಶಾಸ್ತ್ರ ಪ್ರಾಧ್ಯಾಪಕರಾಗಿ ಅಮೆರಿಕೆಯಲ್ಲಿದ್ದು ಕೆಲವು ದಿನಗಳ ಹಿಂದೆ ಮರಣ ಹೊಂದಿದ ಬಸಪ್ಪ ಆಗ ಅಂಥ ಪರಿಸ್ಥಿತಿಯಲ್ಲಿದ್ದ. ಅವನ ಬಹುತೊಂದರೆಯಿಂದ ಕೂಡಿದ ವಿದ್ಯಾಭ್ಯಾಸ ಜೀವನವನ್ನು ಕಂಡು ಆಗಾಗ ರೂಪಾಯಿ ಎರಡು ರೂಪಾಯಿಗಳ ಸಹಾಯ ಮಾಡಿದೆ. ಕಂಡಾಗಲೆಲ್ಲ ಹೋಟಲಿಗೆ ಕರೆದುಕೊಂಡು ಹೋಗಿ ತಿಂಡಿಕಾಫಿ ಕೊಡಿಸುತ್ತಿದ್ದೆ. ಅದನ್ನು ಬಸಪ್ಪ ಸಿಕ್ಕಾಗೆಲ್ಲ ಜ್ಞಾಪಿಸಿಕೊಳ್ಳುತ್ತಿದ್ದ. ಆ ಕಾಲದ ಜೀವನದ ಬಗ್ಗೆ ನಾವಿಬ್ಬರೂ ಬಹಳ ಮೆಲಕು ಹಾಕುತ್ತಿದ್ದೆವು. 1987ರಲ್ಲಿ ಅವನು ಅಕಸ್ಮಾತ್ ಮರಣಹೊಂದಿದಾಗ ಅವರ ಮಕ್ಕಳು ಹೆಂಡಿರು ನನಗೆ ಕಾಗದ ಬರೆದದ್ದು ನನಗೆ ಆಶ್ಚರ್ಯವೆನಿಸಿತು. ಬಹುಶಃ ಬಸಪ್ಪ ತನ್ನ ಮನೆಯವರಿಗೆ ನನ್ನ ಮಿತ್ರತ್ವದ ವಿಷಯ ತಿಳಿಸಿರಬೇಕು. ಬಸಪ್ಪ ತನ್ನ ಡೈರಿಯಲ್ಲೋ ಇನ್ನೆಲ್ಲೋ ನನ್ನ ಅಡ್ರೆಸ್ಸು ಬರೆದಿರಬೇಕು. ಅದನ್ನು ನೋಡಿ ನಾನೊಬ್ಬ ಅವರ ಮಿತ್ರನೆಂದು ಭಾವಿಸಿ ಬರೆದಿರಬೇಕೆಂದು ಭಾವಿಸಿ ಅವರಿಗೆ ಸಂತಾಪ ಸೂಚಕ ಪತ್ರ ಬರೆದೆ. ಹೀಗೆ ನನ್ನ ಶಿವಮೊಗ್ಗದ ವಿದ್ಯಾರ್ಥಿಜೀವನ ಭವ್ಯವಾಗಿ ದಿವ್ಯವಾಗಿಯೇ ಸಾಗುತ್ತಿತ್ತು. ಮಿತ್ರರಲ್ಲಿ ಈಗಲೂ ಚನ್ನಗಿರಿಯಲ್ಲಿರುವ ಹೆಚ್. ಬಿ. ಚಿಕ್ಕಪ್ಪ, ಬನ್ನಿಹಟ್ಟಿಯ ಎಸ್. ಕೆ. ವೀರಭದ್ರಪ್ಪ, ಕಾಗಿನೆಲ್ಲಿ (ಹೊನ್ನಾಳಿ ತಾಲ್ಲೂಕು)ತಮ್ಮಪ್ಪ, ಚಿತ್ರದುರ್ಗದಲ್ಲಿರುವ ರಂಗರಾಜು, ಬಸವಾ ಪಟ್ಟಣದ ಕೊಟ್ರಪ್ಪ, ಅರಬಗಟ್ಟೆ (ಹೊನ್ನಾಳಿ ತಾ.) ಬಸಪ್ಪ ರಾಮದಾಸ, ದುಗ್ಗಪ್ಪಾ ಚೌರಿ (ತೀರ್ಥಹಳ್ಳಿ) ಮೊದಲಾದವರಿದ್ದಾರೆ. ಬಹು ಆಪ್ತರೂ ಹಿತಚಿಂತಕರೂ ಆಗಿದ್ದ ಸೋಮಸೆಟ್ಟಿಹಳ್ಳಿ ವೀರಪ್ಪ, ಓಗ್ಗೇನಹಳ್ಳಿ ಶಿವಲಿಂಗಪ್ಪ, ಅರೆಬಿಳಿಚಿ ಜಾಫರ ಸಾಬ್, ಬಸವಾಪಟ್ಟಣದ ಗಂಗಯ್ಯ ಮೊದಲಾದವರು ವಿಧಿವಶರಾಗಿ ಹೋಗಿದ್ದಾರೆ.

ನಾನು ನನ್ನ ಮಿತ್ರರಿಗೆ ಎಂದೂ ಕೊರತೆ ಮಾಡಲಿಲ್ಲ. ಹೋಟೆಲ್ ತಿಂಡಿಗಾಗಲಿ, ಆಗಾಗ ಬರುವ ನಾಟಕ ಕಂಪನಿಗಳಲ್ಲಿ ನಾಟಕ ನೋಡಲಿಕ್ಕಾಗಲಿ ಹಿಂದುಮುಂದು ನೋಡದೆ

ಖರ್ಚು ಮಾಡುತ್ತಿದ್ದೆ. ಹಿರಣ್ಣಯ್ಯ ಮಿತ್ರ ಮಂಡಳಿಯ ದೇವದಾಸಿ ನಾಟಕವನ್ನು ನಾಲ್ಕೈದು ಸಲ ನೋಡಿದೆ. ಇನ್ನು ಕೆಲವು ನಾಟಕ ನೋಡಿದೆ. ಅವುಗಳ ಹೆಸರು ಮರೆತಿದೆ. ನಾನು ಸಾಮಾನ್ಯವಾಗಿ ನನ್ನ ಬೆನ್ನು ಹತ್ತಿ ಬರುವ ಉಪಾಧ್ಯಾಯರುಗಳಿಗಿಂತ ಕಿರಿಯನೇ ಆಗಿರುತ್ತಿದ್ದರೂ ಅವರೆಲ್ಲರಿಗೆ ಮುಂದಾಳಾಗಿರುತ್ತಿದ್ದೆ. ಅವರು ಬಯಸಿದ ತಿಂಡಿತೀರ್ಥಗಳನ್ನು ತಿನ್ನಿಸುತ್ತಿದ್ದೆ. ರಜೆ ಬಂದಾಗ ಅವರ ಊರಿಗೇ ಹೋಗಿ ಕಥೆಗಿಥೆ ಅಂತ ಮಾಡಿ ಅವರೂರ ದುಡ್ಡನ್ನೇ ತಂದು ಅವರಿಗೆ ಹಂಚುತ್ತಿದ್ದೇನೆಂದೆನಿಸುತ್ತಿತ್ತು ನನಗೆ. ಕೊಡುವವರೂ ಅವರೇ ಕೊಳ್ಳುವವರೂ ಅವರೇ ಆಗಿದ್ದರಲ್ಲವೆ? ಬಸವಣ್ಣ ತನ್ನ ಒಂದು ವಚನದಲ್ಲಿ "ಬೇಡಿಬೇಡಿದ ಶರಣರ್ಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ ಅವಧಾರು" ಎಂದು ಹೇಳಿಬಿಟ್ಟ. ಕಳಿಂಗದೇಶಕ್ಕೆ ನನ್ನ ಹಾಗೆಯೇ ಪ್ರವಚನ ಮಾಡುವುದಕ್ಕೆ ಕೀರ್ತನ ಕಥೆ ಮಾಡುವುದಕ್ಕೋ ಹೋದ ಓರ್ವ ಪ್ರವಚನಕಾರ ಆ ವಚನವನ್ನು ವಾಚಿಸಿ ಬಸವಪ್ರತಿಜ್ಞೆಯನ್ನು ತಿಳಿಸಿದ. ಇದನ್ನು ಕೇಳಿದ ಅಲ್ಲಿನ ಮಹಾದೇವ ಸೆಟ್ಟಿ ಎಂಬ ಮನುಷ್ಯ ಯಾರಾದರೂ ಲೋಕದಲ್ಲಿ ಇಂಥ ಪ್ರತಿಜ್ಞೆ ಮಾಡಬಹುದೇ? ಮಾಡಬೇಕೆ? ಮಾಡಿ ಬದುಕಲುಂಟೆ? ಅವನು ಕೊಡುವ ಮುನ್ನವೇ ಈ ಕೆಟ್ಟಜನ ಕಿತ್ತುಕೊಳ್ಳಲಿಕ್ಕಿಲ್ಲವೆ? ಇಷ್ಟು ಬಸವಣ್ಣನಿಗೆ ತಿಳಿಯಬೇಡವೆ? ಅವನೇನು ಹುಚ್ಚನೇ? ಲೋಕದಲ್ಲಿ ಯಾವ ವಿವೇಕಿಯೂ ಈ ತರದ ಪ್ರತಿಜ್ಞೆ ಮಾಡಲಾರ! ಈ ಎಲ್ಲ ಅಂಶಗಳನ್ನು ಮನದಲ್ಲಿ ಭಾವಿಸಿ ಸಂಶಯ ಬಂದು ಬಸವಣ್ಣನಲ್ಲಿಗೆ ಹೋಗಿ ಮೂವತ್ತೆರಡು ಎತ್ತುಗಳು ಹೊರುವಷ್ಟು ಭಾರದ ಚಿನ್ನ, ಮುತ್ತು, ಮಾಣಿಕ್ಯವನ್ನು ಕೇಳಿ ಬಿಡೋಣ. ಹೇಗೆ ಕೊಡುತ್ತಾನೆಂಬುದನ್ನು ಪರೀಕ್ಷಿಸಿ ಬಿಡೋಣ? ಎಂದು ಮನದಲ್ಲಿ ಯೋಚಿಸಿ ಎತ್ತುಗಳೊಡನೆ ಕಲ್ಯಾಣಕ್ಕೆ ಬಂದೇ ಬಿಟ್ಟನಂತೆ. ಬಸವಣ್ಣ ಇದನ್ನು ಹೇಗೆ ತಿಳಿದನೋ ದೇವರೇ ಬಲ್ಲ; ಬಸವಣ್ಣ ಬಲ್ಲ. ಅವನು ಕಲ್ಯಾಣವನ್ನು ಹೊಗುತ್ತಲೇ ಅವನನ್ನು ಅನೇಕ ಮಂಗಳದ್ರವ್ಯಗಳನ್ನು ಹಿಡಿದ ಸುವಾಸಿನೀ ಜನಗಳ ಮಧ್ಯದಲ್ಲಿ ನಡೆಯುತ್ತ ಎದುರ್ಗೊಳ್ಳಲು ಹೋಗಿ ಬಿಟ್ಟನಂತೆ. ಇಷ್ಟಕ್ಕೆ ಮಹಾದೇವಿ ಸೆಟ್ಟಿ ಸುಸ್ತಾಗಿ ಅರ್ಧಮರ್ಧ ಇಳಿದು ಹೋದನಂತೆ. ಬಸವಣ್ಣ ಅವನನ್ನು ಮನೆಗೆ ಕರೆತಂದು ಸ್ನಾನಾದಿಗಳನ್ನು ಮಾಡಿಸಿ ಪೂಜಾದಿ ವ್ಯವಹಾರ ಮುಗಿಸಿ ಊಟಕ್ಕೆ ಕುಳ್ಳಿರಿಸಿ ಶರಣರೇ ತೃಪ್ತಿಯಾಗಿ ಊಟ ಮಾಡಿರಿ ಎಂದು ಹೇಳುತ್ತ ತೃಪ್ತಿ, ಪಡಿಸಿಬಿಟ್ಟನಂತೆ. ಆಗ ಬಸವಣ್ಣ "ಮಹಾದೇವಿ ಸೆಟ್ಟಿಯರೇ, ತಾವು ಇಷ್ಟು ದೂರ ದಯಮಾಡಿಸಿದ ಕಾರಣವೇನು? ಏನು ಬಯಸಿ ಬಂದಿರಿ" ಎಂದ. ಮಹಾದೇವಿ ಸೆಟ್ಟಿಗೆ ತೃಪ್ತಿಯಾಗಿ "ಬಸವಣ್ಣನವರೇ ಏನೂ ಇಲ್ಲ ಸುಮ್ಮನೆ ನಿಮ್ಮ... ದರ್ಶನ....." ಮಾತಾಡಲಾಗದೆ ತಬ್ಬಿಬ್ಬುಗೊಳ್ಳುತ್ತ "ಸ್ವಲ್ಪ ಜೋಳ, ತೊಗರಿ ಬೇಕಾಗಿತ್ತು, ಅದನ್ನು ನಿಮ್ಮಿಂದ..." ಎಂದು ಅನ್ನತೊಡಗಿದನಂತೆ. ಆಗ ಬಸವಣ್ಣ "ಶರಣರೇ, ಕಳಿಂಗದೇಶದಿಂದ ಹೊರಡುವ ಮುನ್ನ ನನ್ನಿಂದ ಏನನ್ನು ಪಡೆಯಲು ಬಯಸಿ ಬಂದಿರೋ ಅದನ್ನು ಕೇಳಿ" ಕೊಡುವವ ಸಂಗ, ಕೊಳ್ಳುವವ ಸಂಗಮದೇವ, ನನಗೊಂದೂ ಭಾರವಿಲ್ಲ" ಎಂದು ಬಿಟ್ಟನಂತೆ. ಹಾಗೆ ನನ್ನ ಬಾಳಾಗಿತ್ತು. ಯಾವ ಉಪಾಧ್ಯಾಯಮಿತ್ರರೊಡನೆ ನಾನು ಹಿಂದೆ ಮುಂದೆ ನೋಡದೆ ಖರ್ಚು ಮಾಡುತ್ತಿದ್ದೆನೋ ಅದೆಲ್ಲ ಅವರವರೇ ಕರೆದು ಕೊಂಡು ಹೋಗಿ ನನಗೆ ಮರ್ಯಾದೆಯಿಂದ ಒಂದು ಕಥೆಯನ್ನು ಮಾಡಿಸಿ ಕೊಡುತ್ತಿದ್ದ ಹಣ. ಹೆದತ್ರಿ ದ್ಯಾವಪ್ಪ ಗೌಡರಂಥ ಉದಾರಿಗಳಾಗದಿದ್ದರೂ ಒಂದೊಂದು ಕಥೆಗೆ ಐದೋ, ಆರೋ, ಏಳೋ ರೂಪಾಯಿ ಕೊಡುವವರು ನಾ ಮುಂದೆ ತಾ ಮುಂದೆ ಎಂದು ಬರುತ್ತಿದ್ದರು. ಶಕ್ತಿಯಿತ್ತು,

ಏನೋ ಹೇಳುತ್ತಿದ್ದೆ. ಏನೋ ಕೊಡುತ್ತಿದ್ದರು. ಕೊಟ್ಟಷ್ಟನ್ನು ಜೇಬಿಗಿಳಿಬಿಟ್ಟುಕೊಂಡು ಬರುತ್ತಿದ್ದೆ. ಜನರನ್ನು ಅಷ್ಟು ಕೊಡಿ ಇಷ್ಟು ಕೊಡಿ ಎಂದು ಕೇಳಿದ್ದೇ ಇಲ್ಲ. ಒಮ್ಮೊಮ್ಮೆ ನಿರೀಕ್ಷಣೆಗೆ ಮೀರಿ ಬರುತ್ತಿತ್ತು. ಆಗಲೂ ಅಷ್ಟೇ ಸಂತೋಷ. ಕೊಡದೆ ಇದ್ದಾಗಲೇ ನಗುತ್ತ ಬರುತ್ತಿದ್ದೆನೇ ವಿನಾ ದುಡ್ಡಿಗೆ ನಾನು ಅಂಟಿದವನೇ ಅಲ್ಲ. ಆದ್ದರಿಂದ ಆ ಭಾಗದಲ್ಲಿ ನನ್ನ ಹೆಸರು ಎಲ್ಲ ಕಡೆಗೂ ಪ್ರಸಾರವಾಗಿತ್ತು. ಮೇಲಾಗಿ ಅದೇ ವೃತ್ತಿಯಿಂದ ಜೀವನ ಸಾಗಿಸಬೇಕೆಂಬುವವನೂ ನಾನಲ್ಲವಲ್ಲ! ಕೆಲವು ಕಡೆ ಏನೂ ಪಡೆಯದೆ ಕಥೆ ಮಾಡಿದೆ. ಆದರೆ ತಟ್ಟೆಯಲ್ಲಿನ ಒಂದೋ ಎರಡೋ ರೂಪಾಯಿಯಲ್ಲೇ ತೃಪ್ತನಾಗುತ್ತಿದ್ದೆ. ಆದ್ದರಿಂದ ನಾನು ನನ್ನ ಸ್ನೇಹಿತರಾಗಿದ್ದ ಉಪಾಧ್ಯಾಯರ ವಿಷಯದಲ್ಲಿ ಜೀನತನವನ್ನು ಎಂದೂ ಮಾಡಿದವನೇ ಅಲ್ಲ.

1943-44ರಲ್ಲಿ ಕೀರ್ತನೆಗಾಗಿ ತಿರುಗಾಡಿದ ಕೆಲವು ಊರುಗಳಲ್ಲಿನ ನೆನಪಿರುವ ಅನುಭವಗಳು ನನ್ನ ಅನುಭವಕೋಶದಿಂದ ಹೊರಬರುತ್ತಿವೆ.

ನಮ್ಮ ತರಗತಿಯಲ್ಲಿ ಹೊಳಲ ಕೆರೆ ತಾಲೂಕು ಕೆಂಗುಂಟೆ ನಾಗಪ್ಪನೆಂಬ ಮಿತ್ರ ನನ್ನನ್ನು ಕರೆದುಕೊಂಡು ತಮ್ಮೂರಿಗೆ ಹೋದ. ಅಲ್ಲಿ ಎರಡೋ ಮೂರು ಕಥೆಗಳನ್ನು ಕೇರಿಗೊಂದೊಂದರಂತೆ ಮಾಡಿದೆ. ಕೆಂಗುಂಟೆಗೆ ಸಮೀಪದಲ್ಲಿಯೇ ಮಲ್ಲಾಡಿಹಳ್ಳಿ. ಆ ಊರಿನವರು ಕಥೆ ಕೇಳಲಿಕ್ಕೆ ಕೆಂಗುಂಟೆಗೆ ಬಂದು ನಾಳೆಯ ದಿನ ನಮ್ಮೂರಿನಲ್ಲಿ ಕಥೆಗೆ ಬರಬೇಕೆಂದು ವೀಳ್ಯವಿತ್ತು ಹೋದರು. ಅಡಿಕೆ ಎಲೆಯಲ್ಲಿ ನಾಲ್ಕಾಣೆಯಿಟ್ಟು ಕೊಟ್ಟು ಹೋಗುವುದೇ ವೀಳ್ಯ. ಒಪ್ಪಿಕೊಂಡು ಮರುದಿನ ಸಾಯಂಕಾಲ ನಾಲ್ಕಾರು ಜನ ಕೆಂಗುಂಟೆ ಮಿತ್ರರೊಡನೆ ಮಲ್ಲಾಡಿಹಳ್ಳಿಗೆ ಹೊರಟೆ. ದಾರಿಯಲ್ಲಿ ನಾಗಪ್ಪ "ಅಯ್ಯಾ, ಮಹಾರಾಯಾ ಕಥೆ ಚೆನ್ನಾಗಿ ಆಗಬೇಕು. ಆ ಊರಿನಲ್ಲಿ ರಾಘವೇಂದ್ರಸ್ವಾಮಿಗಳೆಂಬುವರು ಕೆಲವು ದಿನಗಳ ಹಿಂದೆ ಹಿಮಾಲಯ ಬೆಟ್ಟದ ಕಡೆಯಿಂದ ಬಂದಿದ್ದಾರೆ. ಬಹಳ ವಿದ್ಯಾವಂತರು, ಯೋಗಿಗಳು. ಅವರು ಅಂಥವರು ಇಂಥವರು ಎಂದು ಹೆದರಿಕೆ ಬರುವಂತೆ ವರ್ಣಿಸಿಬಿಟ್ಟ. ನಾನು "ಅವರು ನನ್ನ ಕಥೆ ಕೇಳಲು ಬರುತ್ತಾರೆಯೇ" ಎಂದೆ. "ಬರದೆ ಏನು? ಅವರಿಲ್ಲದೆ ಇಂಥ ಕಾರ್ಯಗಳು ಅಲ್ಲಿ ನಡೆಯುವುದೇ ಇಲ್ಲ. ಆ ಊರಿಗೆ ಅವರೇ ದೇವರಾಗಿ ಬಿಟ್ಟಿದ್ದಾರೆ. ಅಲ್ಲಿ ಅವರು ವ್ಯಾಯಾಮ ಯೋಗ-ಗೀಗ ಅಂತ ಜನಕ್ಕೆ ಕಲಿಸುತ್ತ ಪರಪ್ಪ ಸ್ವಾಮಿ ಮಠದಲ್ಲಿ ಬೀಡುಬಿಟ್ಟಿದ್ದಾರೆ. ಸಂಸ್ಕೃತ ಚೆನ್ನಾಗಿ ಬಲ್ಲವರಂತೆ. ಅವರಿಗೆ ಗೊತ್ತಿಲ್ಲದ ವಿದ್ಯೆ ಯಾವುದೂ ಇಲ್ಲ. ಇಂಥ ಕಥೆ ಎಷ್ಟು ಕೇಳಿದ್ದಾರೋ ಏನೋ. ಅವರೇ ಬಹುಶಃ ಇವತ್ತಿನ ಸಭೆಗೆ ಅಧ್ಯಕ್ಷರಾಗಲೂ ಬಹುದು. ಅಲ್ಲಿ ಅವರೆದುರಿಗೆ ಬುರುಡೆಬಿಡಬೇಡ, ಸ್ವಲ್ಪ ಸರಿಯಾಗಿ ಹೇಳು" ಎಂದು ಬಿಟ್ಟ. ನನಗೆ ಎದೆ ನಡುಕ ಬಂತು. ಒಣಧೈರ್ಯದಿಂದ ಭಯಪಡಬೇಕಾಗಿಲ್ಲ. ಎಲ್ಲೆಲ್ಲೂ ಪಾರಾಗಿ ಬಂದಿದ್ದೇನೆ. ಇಲ್ಲಿಯೂ ದೇವರೇ ಪಾರುಮಾಡುತ್ತಾನೆ ಎಂದು ಹೇಳಿದೆ. ನಾಗಪ್ಪ ಹೇಳಿದಂತೆ ಅವರೇ ಆ ದಿನದ ಕಥೆಗೆ ಅಧ್ಯಕ್ಷರೂ ಹೌದು. ಹಾರ್ಮೋನಿಯಂ ನುಡಿಸುವವರೂ ಹೌದು. ತಬಲಾಕ್ಕೆ ಸ್ಥಳೀಯ ಒಬ್ಬ ಹುಡುಗ ಕುಳಿತ. ಆ ದಿನದ ಕಥೆಗೆ ಶಬರಶಂಕರವಿಳಾಸವನ್ನು ಆರಿಸಿಕೊಂಡೆ. ಅನೇಕ ಕಡೆ ಆಗಲೇ ಈ ಕಥೆ ಮಾಡಿ ಯಶಸ್ವಿಗೊಂಡಿದ್ದೆ. ದೊಡ್ಡ ಸಾಹಿತಿ ಎಂದೂ ಸಾಹಿತ್ಯದ ಗಂಧವಿಲ್ಲದವರಿಂದ ಸರ್ಟಿಫಿಕೇಟ್ ಪಡೆದುಬಿಟ್ಟಿದ್ದೆ. ಈಗ ಈ ಮಲಾಡಿಹಳ್ಳಿ ರಾಘವೇಂದ್ರ ಸ್ವಾಮಿಗಳ ಎದುರಿನಲ್ಲಿ ಇದೇ ಕಥೆಯೇ ನನಗೆ ಮಾನಮರ್ಯಾದೆ ತಂದು ಕೊಟ್ಟೀತೆಂದು ಅದನ್ನಾರಿಸಿಕೊಂಡೆ. ಅಪಾರ ಜನಸಂಖ್ಯೆ ಸೇರಿಬಿಟ್ಟಿತು. ಅರ್ಧ ಹೆಣ್ಣು ಮಕ್ಕಳ

ಬಳಗ ಸೇರಿಬಿಟ್ಟತು. ಈ ಹೆಣ್ಣುಮಕ್ಕಳಿಗೆ ಹೊಟ್ಟೆ ಹುಣ್ಣಾಗುವ ಹಾಗೆ ನಗಿಸದಿದ್ದರೆ ಯಶಸ್ವಿಯಾಗುವುದಿಲ್ಲವೆಂದೂ ಮತ್ತು ಹೆಚ್ಚು ಹೊತ್ತು ಕಥೆಮಾಡದಿದ್ದರೆ ಬೈದುಕೊಳ್ಳುತ್ತಾರೆಂದೂ ನಿಶ್ಚಯಿಸಿ ಒಂದು ಘಂಟೆಯವರೆಗೆ ಪೀಠಿಕೆಯನ್ನು ಬೆಳೆಸಿ ಎಲ್ಲರನ್ನು ತರಲೆ ಕಥೆಗಳನ್ನು ಹೇಳಿ ಹೊಟ್ಟೆ ಹುಣ್ಣಾಗುವಂತೆ ನಗಿಸಿಬಿಟ್ಟೆ. ಸರಿ. ಸಭೆಯ ಜುಟ್ಟೆಲ್ಲಾ ನನ್ನ ಕೈಗೆ ಸಿಕ್ಕುಹೋಯಿತೆಂದು ಉತ್ಸಾಹಿತನಾಗಿ ಪ್ರಥಮತಃ ಶಿವನ ಕೈಲಾಸದ ವರ್ಣನೆಮಾಡಿದೆ. ಪಾರ್ವತೀಪರಮೇಶ್ವರರು ಆನಂದತುಂದಿಲರಾಗಿ ಕುಳಿತಾಗ ಅರ್ಜುನನ ತಪೋಗ್ನಿ ಜ್ವಾಲೆಯಿಂದ ಕಂದಿ-ಕುಂದಿ-ಬೆಂದು ಕೈಲಾಸದ ಮಣಿಮಂಟಪದ ಬಾಗಿಲಿಗೆ ಶಿವಘೋ ಶಿವಘೋ ಎನ್ನುತ್ತ ಬಂದು ಮುನೀಶ್ವರ ಬಳಗದ ಬರವನ್ನು ಸೂಚಿಸುವ ಷಡಕ್ಷರ ಕವಿಯ,

> ಕೆದರ್ದ ಜಟಾಳಿ ಜಾರಿದ ಮೃಗಾಜಿನಂ ಉಣ್ಮಿದ ಘರ್ಮವಾರಿಯಿಂ
> ಕದಡಿದ ಭೂತಿ, ಕಂದಿದ ಮೊಗಂ, ನಿಡುಸುಯ್ ಬಿಸುಪಿಂದಂ ಇರ್ಪುಗುಂದಿದ
> ತುಟಿ, ಕಂಪನಂಬಡೆದ ಕಯ್ಯ ಕಮಂಡಲು
> ವಕ್ಷದೊಳ್ ತೊಡಂಕಿದ ಕರದ ಅಕ್ಷಮಾಲೆ
> ಬಿಡದೊಂದಿರೆ ಬಂದುದು ತಾಪಸವ್ರಜಂ ॥

- ಈ ಚಂಪಕಮಾಲಾವೃತ್ತವನ್ನು ಯಮನ ಕಲ್ಯಾಣಿ ರಾಗದಲ್ಲಿ ರಾಗದ ಮೇಲೆ ರಾಗ, ತಾನದ ಮೇಲೆ ತಾನ ಹಾಕಿ ಹಾಡಿಬಿಟ್ಟೆ. ರಂಗಭೂಮಿಯ ಮೇಲೆ ಅಂದಿನ ಕಲಾವಿದರು ಹಾಡುವ ದಾಟಿಯಲ್ಲೇ ಅಂಗಾಭಿನಯದಿಂದ ಹಾಡಿದ ಹಾಡನ್ನು ಕೇಳಿ ಜನ ಹೋ ಹೋ! ಎಂದು ಬಿಟ್ಟಿತು. ರಾಘವೇಂದ್ರಸ್ವಾಮಿಗಳೂ ತಮ್ಮ ಹಾರ್ಮೋನಿಯಂ ವಾದನದ ಕಸರತ್ತನ್ನು ತಲೆ ಕುಣಿಸುತ್ತ ನುಡಿಸಿ ಹಾ! ಹಾ! ಹೂ! ಹಾಡಿ ಎಂದು ಪ್ರೋತ್ಸಾಹ ಕೊಟ್ಟುಬಿಟ್ಟರು. ನೆತ್ತಿಗೇರಿ ಹೋಯಿತು ನನ್ನ ಸಂಗೀತದ ಹುಚ್ಚು. ಪುನಃ ಶಿವಪ್ರಾರ್ಥನೆ ಮಾಡುವ ಆ ಋಷಿಗಳ,

> ಜಯ ಜಯ ಜಾಹ್ನವೀಧರ ಜನಾರ್ದನ ಪೂಜ್ಯ ಕಪರ್ದಿ ಕರ್ಮಸಂ
> ಚಯ ಜಲದ ಪ್ರಭಂಜನ, ನಿರಂಜನ, ನಿರ್ಮದ, ಭಕ್ತ ಹೃತ್ಕುಶೇಶಯ
> ತರುಣಾರ್ಕ, ತಂತ್ರ ನಿಗಮಸ್ತುತ, ನಿರ್ಜಿತ ಕಾಲ, ಭೂಧರಾಶ್ರಯ
> ಭುಜಗೇಂದ್ರಹಾರ, ಭುವನೇಶ್ವರ ಬಾಲಶಶಾಂಕಶೇಖರಾ॥

- ಈ ಪದ್ಯವನ್ನು ಅದೇ ರಾಗದಲ್ಲೇ ಇನ್ನು ಸೊಗಸಾಗಿ ಮುಂದುವರಿಸಿಬಿಟ್ಟೆ. ಸ್ವಾಮಿಗಳು ಮತ್ತು ಜನ ನನ್ನ ಸಂಗೀತಕ್ಕೆ ಮೆಚ್ಚಿದರೋ, ಸಾಹಿತ್ಯಕ್ಕೆ ಮೆಚ್ಚಿದರೋ, ಹಾವಭಾವಾದಿಗಳಿಗೆ ಮೆಚ್ಚಿದರೋ ದೇವರೇ ಬಲ್ಲ. ಚಪ್ಪಾಳೆಗಳ ಸುರಿಸಿಬಿಟ್ಟರು. ನನಗೆ ನಾನೇ ಭುಜ ತಟ್ಟಿಕೊಳ್ಳುವಂತಾಯಿತು. ಉತ್ಸಾಹ ಅಧಿಕವಾಗಿ ಕಥೆ ನಭೂತೋ ನಭವಿಷ್ಯತಿ ಆಯಿತೆಂದು ನನಗೆ ನಾನೇ ಅಂದುಕೊಂಡೆ. ಕಥೆಯೆಲ್ಲ ಮುಗಿದ ಮೇಲೆ ಸ್ವಾಮಿಗಳು, ನಾವು ಕೆಲವರು ಸ್ವಲ್ಪ ಹೊತ್ತು ಮಾತಾಡುತ್ತ ಕುಳಿತೆವು. ಕೆಲವರು ನಮ್ಮ ಗಾರಾದ ಗಂಟಲಿಗೆ ಸ್ವಲ್ಪ ಬಿಸಿ ಮಾಡೋಣವೆಂದು ಕಾಫಿ ಮಾಡಿಕೊಂಡು ಬರಲು ಹೋಗಿದ್ದರು. ಆದಕ್ಕಾಗಿ ಈ ಮಾತಿನ ಪ್ರಸ್ತಾಪಕ್ಕೆ ಎಡೆಯಾಗಿತ್ತು. ಆಗ ಸ್ವಾಮಿಗಳು ನಗುತ್ತ ನನ್ನ ಎರಡು ತಪ್ಪುಗಳನ್ನು ಗಮನಕ್ಕೆ ತರುತ್ತ "ನಿಮ್ಮ ಮಾತಿನ ವೇಗವನ್ನು ಬೆನ್ನಟ್ಟಿ ಹಿಡಿಯುವುದೇ ಕಷ್ಟವಪ್ಪಾ! ನಿಮ್ಮ ತಡೆಬಡೆಯಿಲ್ಲದೆ ಆಡುವ ಮಾತುಗಳೇ ನಿಮಗೆ ಅರ್ಥ ಯಶಸ್ಸನ್ನು ತಂದು ಕೊಡುತ್ತವೆ. ಆಲ್ಲಾ! ನೀವು ಸ್ವಾರ್ಥಕ್ಕ

ಅಂದಿರಲ್ಲ ಅದು ಸರಿಯೆ" ಎಂದು ಬಿಟ್ಟರು. 'ಸಾರ್ಥಕ್ಯ, ಅನ್ನುವ ಬದಲು ಸ್ವಾರ್ತಕ್ಯ' ಎಂದು ಕುಟ್ಟಿಬಿಡುತ್ತಿದ್ದೆ. ಸಂಸ್ಕೃತದ ಅನೇಕ ಶಬ್ದಗಳ ಸಂಯೋಜನೆಯೇ ನನಗೆ ಸರಿಯಾಗಿ ಗೊತ್ತಿರಲಿಲ್ಲ. ಅದನ್ನು ನನ್ನ ಮನಸ್ಸಿಗೆ ಬಂದಂತೆ ಬಳಸಿ ಅಲ್ಲಿ ಇಲ್ಲಿ ಜನರ ಕಯ್ಯಲ್ಲಿ ಸಿಕ್ಕಿಹಾಕಿಕೊಂಡು ಬಿಡುತ್ತಿದ್ದೆ. ಆದರೆ "ಏಕೋಹಿ ದೋಷೋಗುಣ ಸನ್ನಿಪಾತೇ ನಿಮಜ್ಜತಿಂದೋಃ ಕಿರಣೇಷ್ವಿವಾಂಕಃ" ಎಂಬಂತೆ ಮಧ್ಯದಲ್ಲಿ ಬರುವ ಇಂಥ ಕೆಲವು ನನ್ನ ದೋಷಗಳು ಚಂದ್ರನ ಅನೇಕ ಆಹ್ಲಾದಕರ ಗುಣಗಳ ಮಧ್ಯದಲ್ಲಿ ಕಪ್ಪುಕಲೆಯಂಥ ಒಂದು ದೋಷ ಮುಚ್ಚಿ ಹೋಗುವಂತೆ ಮುಚ್ಚಿಹೋಗುತ್ತಿದ್ದವು. ವಿದ್ವಾಂಸರಾದವರೂ ನನ್ನ ಉತ್ಸಾಹಕ್ಕೆ ಬಹಳ ಮೆಚ್ಚಿ ದೋಷಗಳನ್ನು ಮರೆತು ನಕ್ಕು ಬಿಡುತ್ತಿದ್ದರು. ಆದರೆ ಅವರ ಸಲಹೆಯನ್ನು ಸ್ವೀಕರಿಸುತ್ತ "ಎಲ್ಲ ಬಲ್ಲವರಿಲ್ಲ, ಬಲ್ಲಿದರು ಬಹಳಿಲ್ಲ" ಎಂದು ನಗುನಗುತ್ತಲೇ ಹೇಳಿ ಪಾರಾಗಿ ಬಂದು ಬಿಡುತ್ತಿದ್ದೆ. ಇತ್ತೀಚೆಗೆ ತ.ಸು. ಶಾಮರಾಯರ ಸಂಪಾದಕತ್ವದಲ್ಲಿ ರಚಿತವಾದ ನಂದನ ಎಂಬ ಸಂಭಾವನಾ ಗ್ರಂಥವನ್ನು ಮಲ್ಲಾಡಿಹಳ್ಳಿ ರಾಘವೇಂದ್ರಸ್ವಾಮಿಗಳಿಗೆ ಅರ್ಪಿಸಿದರು. ಅದಕ್ಕೊಂದು ಲೇಖನ ಬರೆಯಲು ನನಗೆ ಶಾಮರಾಯರು ಕೇಳಿದರು. ಅದರಲ್ಲಿ ಅಂದು - ಇಂದು ಎಂಬ ಶಿರೋನಾಮೆಯ ಲೇಖನ ಬರೆದ ನಾನು ಇದೇ ವಿಷಯವನ್ನು ಬರೆದಿದ್ದೇನೆ. ಅನೇಕ ಕಡೆ ನಾನು ಕಥೆಗಳಿಗೆ ತಿರುಗಾಡಿ ಆ ಜಿಲ್ಲೆಯ ಮೂಲೆ ಮೂಲೆಗಳಲ್ಲೆಲ್ಲ ಸುತ್ತಾಡಿ ಅಪಾರ ಜೀವನಾನುಭವ ಗಳಿಸಿಬಿಟ್ಟೆ. ನಾನು ಓದಿದ್ದಕ್ಕಿಂತ ಪ್ರವಾಸದಿಂದ ಬಹಳಷ್ಟು ಅನುಭವ ದೊರಕಿತು. ಇನ್ನು ಕೆಲವು ದೃಷ್ಟಾಂತಗಳನ್ನು ಮುಂದೆ ಹೇಳುತ್ತೇನೆ.

### *ಶಿವಮೊಗ್ಗ ಕರ್ನಾಟಕ ಸಂಘದಲ್ಲಿ ಯಕ್ಷಗಾನ*

ಶಿವಮೊಗ್ಗದ ಅಂದಿನ ವಿದ್ಯಾರ್ಥಿಪ್ರಪಂಚದಲ್ಲಿ ನನ್ನ ಕೀರ್ತಿ ಅಧಿಕಗೊಂಡು ಆಗ ಅಲ್ಲಿ ಇದ್ದ ಎಲ್ಲ ವಿದ್ಯಾರ್ಥಿನಿಲಯಗಳೂ ನನ್ನ ಪರಿಚಯದಿಂದ ಕೂಡಿದವಾದವು. ಎನ್.ಡಿ.ವಿ. (ನಗರ ಡಿವಿಜನ್ ವಿದ್ಯಾರ್ಥಿನಿಲಯ)ದಲ್ಲಿನ ವಿದ್ಯಾರ್ಥಿಗಳಿಗೆಲ್ಲ ನಾನು ಅತ್ಯಂತ ಹೆಮ್ಮೆಯ ಮನುಷ್ಯನೇ ಆಗಿಬಿಟ್ಟೆ. ಮೊನೆ ಮೊನ್ನೆ ದಿವಂಗತರಾಗಿ ಹೋದ ನಿವೃತ್ತ ಡಿ.ಪಿ.ಐ ಗೊಪ್ಪೇನಹಳ್ಳಿ ಹಾಲಪ್ಪನವರು ಆಗ ಎನ್.ಡಿ.ವಿ. ಹಾಸ್ಟಲ್‌ನಲ್ಲಿದ್ದು ಹೈಸ್ಕೂಲ್‌ನಲ್ಲಿ ಓದುವ ವಿದ್ಯಾರ್ಥಿ. ಅದೇ ವರ್ಷವೋ ಹಿಂದಿನ ವರ್ಷವೋ ಶಿವಮೊಗ್ಗ ಕರ್ನಾಟಕ ಸಂಘ ಹಸೂಡಿಯವರ ಮನೆತನದ ಔದಾರ್ಯದ ಫಲವಾಗಿ ಉದ್ಘಾಟನೆಯಾಗಿತ್ತು. ಅಲ್ಲಿ ಉತ್ಸಾಹದಿಂದ ಅನೇಕ ಕಾರ್ಯಕ್ರಮಗಳು ಜರುಗತೊಡಗಿದವು. ಆ ವರ್ಷದ ಕನ್ನಡ ಸಾಹಿತ್ಯ ಸಮ್ಮೇಳನವು ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಅಲ್ಲಿಯೇ ನಡೆಯಿತು. ನಾನು ಬೇಂದ್ರೆಯವರನ್ನು ನೋಡಿದ್ದೂ ಭಾಷಣ ಹಾಡು ಕೇಳಿ ಪ್ರಭಾವಿತನಾದದ್ದೂ ಆಗಲೇ. ಆಗ ನನ್ನನ್ನು ನಮ್ಮ ಮಿತ್ರರು ಅನೇಕ ಕಾರ್ಯಕ್ರಮಗಳಿಗೆ ಮುಂದೆ ಮಾಡಿಕೊಂಡು ಹೋಗುತ್ತಿದ್ದರು. ಕರ್ನಾಟಕ ಸಂಘದಲ್ಲಿ ನಡೆಯುವ ನನ್ನ ಕಾರ್ಯಕ್ರಮಗಳಿಗೆಲ್ಲ ತನ್ನ ಮಿತ್ರರ ಗುಂಪುಕಟ್ಟಿಕೊಂಡು ಬಂದು ಹಾಲಪ್ಪ ಚಪ್ಪಾಳೆ ತಟ್ಟಿ ಹುರುಪುಗೊಳಿಸುತ್ತಿದ್ದ ಗುಂಪಿನ ನಾಯಕ. ನಮ್ಮ ಸ್ಕೂಲಿನ ಉಪಾಧ್ಯಾಯ ಮಿತ್ರರೆಲ್ಲರೂ ಇಂಥ ವಿಷಯದಲ್ಲಿ ತುಂಬಾ ಉತ್ಸಾಹದಿಂದ ವರ್ತಿಸಿ ನನ್ನನ್ನು ಮುಂದೂಡುತ್ತಿದ್ದರು.

ನಮ್ಮ ಟ್ರೈನಿಂಗ್ ಸ್ಕೂಲಿನಲ್ಲಿನ ವಿದ್ಯಾರ್ಥಿಗಳಲ್ಲಿ ಯಕ್ಷಗಾನ ಬಯಲಾಟದ ಹುಚ್ಚಿನವರೂ ಇದ್ದರು. ಚಿತ್ರದುರ್ಗ ಜಿಲ್ಲಾ ತುರುವನೂರು ಕಡೆಯ ಕೆಲವು ರೆಡ್ಡಿ ಉಪಾಧ್ಯಾಯರಿಗೆ ಯಕ್ಷಗಾನದ

ಹುಚ್ಚು ಬಹಳ ಇತ್ತು. ಅಷ್ಟು ಹೊತ್ತಿಗಾಗಲೆ ಹಿರೇಕಾಂಶಿಯಲ್ಲಿ ಯಕ್ಷಗಾನ ರಾಮಾಯಣ ಕಥೆಯನ್ನು ಸ್ವತಃ ನಾನೇ ತಯಾರಿಸಿ ಮಲೆನಾಡಿನಲ್ಲೆಲ್ಲ ಆಡಿಸಿ ಜಯಭೇರಿ ಹೊಡೆದು ಬಂದ ಕಥೆಯನ್ನು ಪ್ರಚಾರ ಮಾಡಿದ್ದೆ. ಆದ್ದರಿಂದ ಉಪಾಧ್ಯಾಯರೆಲ್ಲ ನನ್ನನ್ನೇ ಮುಂದಿಟ್ಟುಕೊಂಡು ಕೃಷ್ಣಾರ್ಜುನ ಕಾಳಗ ಆಟವನ್ನು ಪ್ರಾರಂಭಿಸಿಬಿಟ್ಟರು. ಅದರಲ್ಲಿ ಕೃಷ್ಣನ ಪಾತ್ರವನ್ನು ನಾನು ಮಾಡಿದೆ. ಶಿವರಾಮಕಾರಂತರ ಅಧ್ಯಕ್ಷತೆಯಲ್ಲಿ ಕರ್ನಾಟಕ ಸಂಘದಲ್ಲಿಯೇ ನಮ್ಮ ಯಕ್ಷಗಾನದ ಯಶಸ್ವೀ ದೊಡ್ಡಾಟ ಗುಡುಗಾಡಿಬಿಟ್ಟಿತು. ನಾನು ಕೃಷ್ಣನ ಪಾತ್ರದಲ್ಲಿ ರಂಗಭೂಮಿಗೆ ಪ್ರವೇಶಿಸುವ ಮೊದಲ ದೃಶ್ಯದಲ್ಲಿ ಒಳಗಿನಿಂದ ಒಮ್ಮೆಲೆ ರಂಗಭೂಮಿಗೆ ಬರಲಿಲ್ಲ. ಕರ್ನಾಟಕ ಸಂಘದ ಆವಾರ (ಕಾಂಪೌಂಡು)ದ ಬಾಗಿಲಿನಲ್ಲಿ ಎರಡು ಪಂಜುಗಳನ್ನು ಹಿಡಿಸಿಕೊಂಡು "ಲಾಲಿ ಕುಣಿಯುತ್ತ ಬಂದು ಎಲ್ಲರಿಗೂ ಆಶ್ಚರ್ಯಗೊಳಿಸಿಬಿಟ್ಟೆ. ನನ್ನ ರಾಮಾಯಣ ಆಟದಲ್ಲಿ ಪ್ರಧಾನ ಪಾತ್ರಧಾರಿಗಳಲ್ಲಿ ಒಬ್ಬಿಬ್ಬರನ್ನು ಜನಮಧ್ಯದಲ್ಲಿಯೇ ಪಂಜಿನ ಬೆಳಕಿನ ಮಧ್ಯದಲ್ಲಿ "ಲಾಲಿ ಕುಣಿತ" ದಿಂದ ತರುವುದು ಒಂದು ಪದ್ಧತಿ. ಕೃಷ್ಣಾರ್ಜುನ ಕಾಳಗ ಆಟದಲ್ಲಿ ಕೃಷ್ಣನೂ ವೀರರಸ ಪ್ರಾಧಾನ್ಯದ ಒಂದು ಪಾತ್ರವೇ ಅಲ್ಲವೆ? ಅದ್ದರಿಂದ ಈ ತಂತ್ರದಲ್ಲಿ ರಂಗಪ್ರವೇಶಮಾಡುವ ದೃಶ್ಯವನ್ನು ನಾನೇ ಇಟ್ಟುಕೊಂಡು ಬಿಟ್ಟೆ. ಭಾಗವತರು ರಂಗದ ಮೇಲೆಯೇ ಇದ್ದು ಮೃದಂಗ ಹಿಮ್ಮೇಳಗಳನ್ನು ಮೇಳೈಸಿಕೊಂಡು - ಲಾಲಿ ಲಾಲಿಯ । ಲಾಲಿಲಾಲಿಯ। ಎಂದು ಹಾಡುವ ಹಾಡಿಗೆ ಕುಣಿಯುತ್ತ ಶೌರ್ಯವನ್ನು ಮೆರೆಯುತ್ತ - ಹಲಲಲ... ಅನ್ನುತ್ತಾ ಪಂಜಿನ ಬೆಳಕಿನಲ್ಲಿ ನಾನು ಬರಬೇಕು. ಈ ತಂತ್ರದಿಂದ ಸಭೆಯೆಲ್ಲ ಹಕ್ಕಾಪಿಕ್ಕಿಯಾಗಿ ಹೋಯಿತು. ನಾನು ಕುಣಿಯುತ್ತ ಬರುವುದಕ್ಕೆ ಮಧ್ಯದಲ್ಲಿ ಮೊದಲೇ ಮಾರ್ಗ ಕಲ್ಪಿಸಲಾಗಿತ್ತು. ನನ್ನ "ಹಲಲಲಲ - ಶಾಹಾಬ್ಬಾಸ್ - ವಾಹವ್ವ......." ಅನ್ನುವ ದನಿ ಹಿಂದೆ ಇದೇನಿದು ಎಂದು ಸಭೆಗೆ ಅನ್ನಿಸಿದರೂ ಕಾರಂತರಿಗೆ ಈ ತಂತ್ರ ಗೊತ್ತಿರಬೇಕು. ಅವರು ಮೀಸೆಯಲ್ಲೆ ನಗುತ್ತ ನನ್ನ ಲಾಲಿಗುಣಿತದ ಗತ್ತಿಗೆ ತಲೆಹಾಕುತ್ತಿದ್ದುದನ್ನು ಸಮೀಪಕ್ಕೆ ಬಂದಾಗ ಗಮನಿಸಿದೆ. (ಇಂದು ಅವರಿಗೆ ಈ ದೃಶ್ಯ ನೆನಪಿದೆಯೋ ಇಲ್ಲವೊ ಗೊತ್ತಿಲ್ಲ) ರಂಗಮಂಟಪಕ್ಕೆ ಬಂದೊಡನೆ ಮತ್ತೊಂದು ಗತ್ತು ಕುಣಿದೆ. ಅಷ್ಟರಲ್ಲಿ ಸಾರಥಿ ಬಂದ. ಹೊಸ ಪಾತ್ರ ರಂಗಭೂಮಿಗೆ ಬಂದುದನ್ನು ಪರಿಚಯಮಾಡಿಕೊಡುವ ಪ್ರಾಚೀನ ಯಕ್ಷಗಾನ ತಂತ್ರದಂತೆ ಆತ "ಅಕ್ಕಾಡ್ ಧೀಂ ಧೀ ಸಲಾಂ - ಸ್ವಾಮಿ ತಾವು ಧಾರು ತಮ್ಮ ನಾಮಾಂಕಿತವೇನು?" ಎಂದು ಬಿಟ್ಟ. ನಾನು ನನ್ನ ಮೂಲ ಕಥೆಯೊಳಗಿನ ಕೃಷ್ಣನ ಮಾತು ಚನ್ನಾಗಿಲ್ಲವೆಂದು ಮಾತು ಬಿಟ್ಟು ಬೇರೊಂದು ಮಾತನ್ನು ಜೋಡಿಸಿಕೊಂಡು ಬಿಟ್ಟಿದ್ದೆ. ಆ ಮಾತನ್ನು ಹೇಳುತ್ತ "ಎಲೈ ಸಾರಥಿ, ನಾವು ದಾರೆಂದರೆ - ಹೇಳುತ್ತೇನೆ ಕೇಳು,

> ವಿಳಸದ್ಬಾಷ್ಪ ವನೋಪರಮ್ಯ ಪರಿಖಾಪೂರ್ಣಾಂಬುಜಾತಂಬುಜೋತ್ಪಲ
> ಕಲ್ಹಾರಸುಗಂಧಚುಂಬಿತ ನಭಶ್ಚಂದ್ರಾಶ್ರಶಾಲಂ ಸಮುಜ್ವಲ
> ರತ್ನಾಲಯ ಹರ್ಮ್ಯಮಂಟಪ ಶಿವಾಗಾರಾಮಿತ ಶ್ರೀಯುತಂ ಕಳೆವೆತ್ತು
> ಅಗ್ಗಳಮಾಗಿ ರಂಜಿಸುತ್ತಿರುವ ದ್ವಾರಕಾಪಟ್ಟಣಕ್ಕೆ ಅಧಿಪತಿ ಧಾರೆಂದು
> ಕೇಳಬಲ್ಲಿಯೈ, ಸುಗುಣಾ ಸದ್ಗುಣಾಭರಣ" ಎಂದು ಬಿಟ್ಟೆ

ಶಿವರಾಮ ಕಾರಂತರಂತೂ ಈ ಮಾತಿನ ಸಾಹಿತ್ಯ ನೋಡಿ ಬೆರಗಾಗಿ ಬಿಟ್ಟರೋ ಏನೋ! ಉಳಿದ ಜನ ತಮಗೂ ತಿಳಿಯದೆ ಜನವನ್ನು ಕೇಳಿ ತಿಳಿದುಕೊಳ್ಳಲು ಶಕ್ಯವಿಲ್ಲದೆ ಕಣ್ಣು ಕಣ್ಣು ಬಿಡುತ್ತ ಕುಳಿತಿದ್ದರು. ಇದೂ ನಾವು ಆಡುತ್ತಿದ್ದ ಕಥಾಗ್ರಂಥದಲ್ಲಿ ಇಲ್ಲದ್ದೆಂದು

ಮೊದಲೇ ಹೇಳಿದ್ದೇನೆ. ಇದೂ ಕೂಡ ಷಡಕ್ಷರ ಮಹಾಕವಿಯ ವೃಷಭೇಂದ್ರ ವಿಜಯದಲ್ಲಿ ಬರುವ ಕೋಳೂರು ಕೊಡಗೂಸಿನ ಕಥೆಯ ಮೊದಲನೆಯ ಮಂಗಳ ಪದ್ಯ. ಅಲ್ಲಿ ಕವಿಯು ಈ ವೃತ್ತದ ನಾಲ್ಕನೆಯ ಸಾಲಿನಲ್ಲಿ "ಕಳಿವೆತ್ತಗ್ಗಳಮಾಗಿ ರಂಜಿಪುದು ಕೋಳೂರೆಂಬ ಸತ್ಪತ್ತನ" ಎಂದಿದ್ದುದನ್ನು ಮಾರ್ಪಡಿಸಿ "ಕಳಿವೆತ್ತು ಅಗ್ಗಳಮಾಗಿ ರಂಜಿಸುತ್ತಿರುವ ದ್ವಾರಕಾಪಟ್ಟಣಕ್ಕೆ ಅಧಿಪತಿಧಾರೆಂದು ಕೇಳಬಲ್ಲಿ...." ಎಂದು ಮಾರ್ಪಡಿಸಿಕೊಂಡು ಬಿಟ್ಟಿದ್ದೆ. ಬಹುಶಃ ಈ ನನ್ನ ತಂತ್ರ ಆಗ ಯಾರಿಗೂ ಅರ್ಥವಾಗಿರಲಿಕ್ಕಿಲ್ಲ. ನಾನು ಇಂತಹ ಅನೇಕ ರುಚಿರೂಪವಾಸನೆಯ ಮಕರಂದವನ್ನು ಕುಡಿದು ತನ್ನ ಹೊಟ್ಟೆಯ ರಸದಲ್ಲಿ ಸೇರಿಸಿ ಜೇನುತುಪ್ಪವನ್ನಾಗಿ ಮಾರ್ಪಡಿಸಿ ಗೂಡಿನಲ್ಲಿಟ್ಟು ಕಂಡವರ ಬಾಯನ್ನೆಲ್ಲ ಸಿಹಿಮಾಡುವಂತೆ ನಾನೂ ಯಾವು ಯಾವುದೋ ಕವಿಗಳ, ದಾರ್ಶನಿಕರ, ವಿಚಾರವಾದಿಗಳ ವಿಚಾರಗಳನ್ನು ಸಂಗ್ರಹಿಸಿ ಕೇಳುವವರಿಗೆ ಸಿಹಿ ಮಾಡಿ ಕಥೆಯನ್ನು ರಂಜನೆಗೊಳಿಸುವ ಮನುಷ್ಯನಲ್ಲವೆ! ಹಾಗೆಯೇ ಷಡಕ್ಷರಿಯ ಒಂದು ಪದ್ಯವನ್ನೇ ಕೃಷ್ಣನ ಮಾತಿಗೆ ಮಾರ್ಪಡಿಸಿಕೊಂಡು ಬಿಟ್ಟಿದ್ದೆ.

ಮುಂದೆ ಆಟದಲ್ಲಿ ಬಹಳ ಕಸರತ್ತು ತೋರಿಸಿಬಿಟ್ಟೆ. ಯುದ್ಧ ಬಂದಾಗ ಯುದ್ಧದಲ್ಲಿ ಕುಣಿಯುವ ಗತ್ತೇ ಒಂದು ಥರದ್ದು, ಸಂತೋಷದ ಗತ್ತೇ ಇನ್ನೊಂದು ಥರದ್ದು. ರಂಗಭೂಮಿಗೆ ಪ್ರಥಮತಃ ಹೊರಗಿನಿಂದ ಬರುವಾಗಿನ ರೀತಿಯೇ ಬೇರೆ. ಹೀಗೆ ಯಕ್ಷಗಾನದ ಅನೇಕ ಪಟ್ಟುಗಳನ್ನು ಸಭಿಕರಿಗೆ ತೋರಿಸಿದ್ದರಿಂದಲೋ ಏನೋ ಚಪ್ಪಾಳೆಗಳ ಮೇಲೆ ಚಪ್ಪಾಳೆ ತಟ್ಟಿ ಬಿಟ್ಟರು. ಕಾರಂತರೂ ನಗುತ್ತ ಕುಳಿತಿದ್ದರು. ಕೊನೆಯಲ್ಲಿ ಮೊದಲ ಬಹುಮಾನದ ಪುಸ್ತಕಗಳ ಗಂಟು ನನ್ನ ಕೈಗೇ ಬಂತು. ಅದರಲ್ಲಿನ ಕೆಲಪುಸ್ತಕಗಳನ್ನು ನಮ್ಮ ಮಿತ್ರರೆಲ್ಲ ಕಿತ್ತುಕೊಂಡರು. ಉಳಿದ ಒಂದೆರಡು ಪುಸ್ತಕಗಳನ್ನು ಅಂದಿನ ನೆನಪಿಗಾಗಿ ಬೈಂಡ್ ಮಾಡಿಸಿಟ್ಟೆ. ಆ ಪುಸ್ತಕಗಳನ್ನು ನೋಡಿದಾಗಲೆಲ್ಲ ಶಿವಮೊಗ್ಗ ಕರ್ನಾಟಕ ಸಂಘದ ಕಟ್ಟಡ, ಆ ನಮ್ಮ ಯಕ್ಷಗಾನ ಮೇಳ, ಎಲ್ಲಕ್ಕೂ ಮುಖ್ಯವಾಗಿ ಪಂಜಿನ ಬೆಳಕಿನಲ್ಲಿ ಕುಣಿಯುತ್ತ ಬಂದ ದೃಶ್ಯದ ನೆನಪು ಮರುಕಳಿಸಿ ಒಂದು ಬಗೆಯ ತೃಪ್ತಿಯನ್ನು ಹದಿನೆಂಟು ಇಪ್ಪತ್ತರ ಹರೆಯದ ಲಗ್ನಕಾಲದಲ್ಲಿ ತೆಗೆಸಿಕೊಂಡು ಜೋಪಾನವಾಗಿಟ್ಟ ಚಿತ್ರ (ಫೋಟೊ) ಗಳನ್ನು ಎಂಬತ್ತು ಎಂಬತ್ತೈದರ ಹರೆಯದಲ್ಲಿ ವೃದ್ಧದಂಪತಿಗಳು ನೋಡಿ ಏನೇನನ್ನೋ ನೆನೆಸಿಕೊಂಡು ತಮ್ಮ ಬಚ್ಚ ಬಾಯಿಂದ ನಗುವಂತೆ ನಾನು ನಗುತ್ತಿದ್ದೇನೆ.

### ಒಮ್ಮೆ ಘೋರ ಅಪಾಯಕ್ಕೆ ಸಿಕ್ಕುಬಿಟ್ಟೆ

1943-44ರ ಕಾಲದಲ್ಲಿ ಜನರಲ್ಲಿ ಜಾಗೃತಿ ಒಡಮೂಡುತ್ತಿದ್ದ ಕಾಲ; ಏನೇನೋ ಸಾಮಾಜಿಕ ಬದಲಾವಣೆಗಳನ್ನು ಮಾಡಲು ಜನ ತವಕಿಸುತ್ತಿದ್ದರು. ಅದಕ್ಕೆ ಕಾಂಗ್ರೆಸ್ ಧುರೀಣರು ಒಂದು ರೀತಿಯ ಕಾರಣ ಪುರುಷರು. ಹಳೆಗಾಲದ ಮಡಿವಂತಿಕೆಯ ಸ್ಥಾನದಲ್ಲಿ ಗಾಂಧೀಯವರ ಅಭಿಪ್ರಾಯದ ಸಮತಾಭಾವ ಜಾರಿಗೆ ಬರುತ್ತಿತ್ತು. ಜೈಲಿನಲ್ಲಿದ್ದು ಬಂದ ಮಡಿವಂತಿಕೆಯ ಜನ ಅಲ್ಲಿ ಉಂಡು, ತಿಂದು, ಬದುಕಿ ಬಂದು ಜಾತಿಮತ ತಾರತಮ್ಯವನ್ನು ಬಹುಮಟ್ಟಿಗೆ ಸಡಿಲಿಸಿದ್ದರು. ಮದುವೆ ಮುಂಜಿಗಳಲ್ಲಿನ ಆಡಂಬರ ಕಡಿಮೆ ಮಾಡಲು ಹವಣಿಕೆ ಅಲ್ಲಲ್ಲಿ ನಡೆಯುತ್ತಿತ್ತು. ದಂಪತಿಗಳನ್ನು ಮಂಗಳಸ್ನಾನ ಮಾಡಿಸಿ ಹೊಸಬಟ್ಟೆ ಉಡಿಸಿ ರಾಟೆಯ ನೂತ ನೂಲಿನ ಲಡಿಯನ್ನೇ ಕೊರಳಿಗೆ ಹಾಕಿ ತಾಳಿಕಟ್ಟಿ ದಂಪತಿಗಳಾದರೆಂದು ಘೋಷಿಸುವ ಮದುವೆಗಳು

ಅಲ್ಲೊಂದು ಇಲ್ಲೊಂದು ನಡೆಯುತ್ತಿದ್ದವು. ಅವಕ್ಕೆ ಜನ ಕಾಂಗ್ರೆಸ್‌ಮದುವೆಗಳೆಂದು ಚೇಷ್ಟೆಯದೋ ಅಥವಾ ಒಳ್ಳೆಯ ಭಾವನೆಯದೋ ಹೆಸರಿಟ್ಟಿದ್ದರು. ಆ ಮದುವೆ ಸಮಾರಂಭಗಳಿಗೆ ಆಗಿನ ಪ್ರಸಿದ್ಧ ಕಾಂಗ್ರೆಸ್ ಧುರೀಣರು ಹೋಗುತ್ತಿದ್ದರು. ಇಂಥ ಪ್ರಖ್ಯಾತ ಧುರೀಣರೇ ಬರುವಾಗ ಜನರೂ ಕಿಕ್ಕಿರಿದು ಸೇರುತ್ತಿದ್ದರು. ಎಲ್ಲರಿಗೂ ಪಾಯಸ, ಅನ್ನ, ಸಾರು ಹಾಕಿ ಕಳಿಸಿ ಬಿಡುತ್ತಿದ್ದರು. ಹಿಂದಿನ ಹಾಗೆ ನಾಲ್ಕು ಐದು ದಿನ ದಿನವೂ ಒಂದು ಬಗೆಯ ಊಟ, ಬೆಳಗಿನ 'ನ್ಯಾರಿ' ಊಟ ಅಥವಾ ಬೆಳಗಿನ ಉಪ್ಪಿಟ್ಟು ಕಾಫಿ, ಸಾಯಂಕಾಲದ ಕಾಫಿ, ಎರಡು ಭರ್ಜರಿ ಊಟ, ಉಡುಗರೆ, ಮೆರವಣಿಗೆ, ಬಾಣಬಿರುಸು, ಊರೂಟ, ಬೀಗರೂಟ, ನಾಗೋಲಿ ಊಟ ಇತ್ಯಾದಿ ಮನೆ ಹಾಳಿನ ಮದುವೆಗಳು ಹಿಂದೆ ಸರಿದು ಒಂದೇ ದಿನದ ಮದುವೆ ಅರ್ಥಕ್ಕರ್ಥ ನಡೆದು ಬಿಡಲು ಪ್ರಾರಂಭವಾಯಿತು.

ಇಂಥ ಒಂದು ಮದುವೆ ನಡೆದುದು ಮೇ ಅಥವಾ ಜೂನ್ ತಿಂಗಳ ಆರಂಭದ ಒಂದು ದಿನವೆಂದು ಜ್ಞಾಪಕ. ಶಿವಮೊಗ್ಗದಿಂದ ಉತ್ತರಕ್ಕೆ ಹೊನ್ನಾಳಿ ಮಾರ್ಗದಲ್ಲಿರುವ ಹನಸವಾಡಿ ಎಂದು ಜ್ಞಾಪಕ. ಅದೋ ಅಥವಾ ಇನ್ನೊಂದೋ! ಅಲ್ಲಿ ಶಿವಮೊಗ್ಗದ ಪ್ರಸಿದ್ಧ ಕಾಂಗ್ರೆಸ್ ಧುರೀಣರೆಂದು ಪ್ರಖ್ಯಾತರಾಗಿ ಜನತೆಯ ಗೌರವಾದರಗಳಿಗೆ ಪಾತ್ರರಾಗಿದ್ದ ಹೆಚ್. ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಆ ಲಗ್ನದವರನಾದ ನಂದ್ಯಪ್ಪ ಓರ್ವ ಶಾಲಾ ಶಿಕ್ಷಕ. ಶಾಲಾ ಶಿಕ್ಷಕನಾದರೂ ಕಾಂಗ್ರೆಸ್ ಸಂಸ್ಥೆಯ ನಚ್ಚಿನ ಭಂಟ. ಸರಕಾರಿ ಸೇವೆಯಲ್ಲಿ ಇದ್ದವರು ಸರಕಾರದ ವಿರುದ್ಧ ಸೆಣಸುತ್ತಿರುವ ಕಾಂಗ್ರೆಸ್ಸಿನಲ್ಲಿ ಕೆಲಸದಲ್ಲಿ ಸೇರಿ ಕೆಲಸ ಮಾಡುವುದು ನಿಷಿದ್ಧವಾದರೂ ಈತ ಗುಪ್ತವಾಗಿ ಕಾಂಗ್ರೆಸ್ ಸಂಸ್ಥೆಯಲ್ಲಿ ಏನೆಲ್ಲ ಮಾಡಲೂ ಸಿದ್ಧನಾದ ಮನುಷ್ಯ. ಇಂಥವರಿಗೆ ಸಿದ್ಧಯ್ಯ ಮೊದಲಾದ ಧುರೀಣರ ಶ್ರೀರಕ್ಷೆಯಿತ್ತು ಈ ಕಾಲದಲ್ಲೆ ಶಿಕ್ಷಣಕ್ಷೇತ್ರ ಹಸಗೆಟ್ಟದ್ದು. ಶಿಕ್ಷಣಕ್ಷೇತ್ರದಲ್ಲಿರುವವರು ಭಿನ್ನಕ್ಷೇತ್ರಗಳಲ್ಲಿ ಕೆಲಸ ಮಾಡುವುದು. ಮಕ್ಕಳನ್ನು ಹುರಿದುಂಬಿಸಿ ಶಾಲೆಯಿಂದ ಹೊರಗೆ ಬಂದು ಪ್ರಭಾತಪೇರಿಯಂಥ ಕಾರ್ಯಗಳಿಗೆ ಬಳಸುವುದು ಮೊದಲಾದವು ಸ್ವಾತಂತ್ರ್ಯಾ ನಂತರವೂ ಮುಂದುವರಿದು ಶಿಕ್ಷಣ ಕ್ಷೇತ್ರ ಅಗಲವಾಗಿ ಹಬ್ಬಿದರೂ ಆಳ ಕಡಿಮೆಯಾಗಿ ಅದರ ಪಾವಿತ್ರ್ಯವೇ ಹಾಳಾಗಿಹೋಯಿತು. ಹೀಗೆ ಹದಗೆಟ್ಟದ್ದು ತಿಳಿದ ಮಟ್ಟಿಗೆ 1948 ರ ಕ್ವಿಟ್ ಇಂಡಿಯಾ ಚಳುವಳಿಯ ನಂತರದ ದಿನಗಳಿಂದ. ಅಂದಿನ ಮಕ್ಕಳ ಆಶಿಸ್ತು, ಸ್ವಾತಂತ್ರ್ಯಾನಂತರ ನಿಂತುಬಿಡಬೇಕಾಗಿತ್ತು. ನಿಲ್ಲಲಿಲ್ಲ. ಮುಂದೆ ರಾಜಕೀಯ ಪಕ್ಷಗಳು ಮಕ್ಕಳ ಮತ್ತು ಶಿಕ್ಷಕರ ಲಾಭ ಪಡೆಯ ತೊಡಗಿದರು. ಶಿಕ್ಷಣ ಕ್ಷೇತ್ರಕ್ಕೂ ನೇಮ ಹೋಯಿತು. ನನಗೆ ಈ ಶಿಕ್ಷಕ ನಂದೆಪ್ಪ ತುಂಬಾ ಪರಿಚಿತ. ನಾನೂ ನನ್ನ ಕಥೆಗಳಲ್ಲಿ ಆಗ ಸ್ವಾತಂತ್ರ್ಯ, ಸ್ವಾತಂತ್ರ್ಯ ಸಂಗ್ರಾಮ, ಗಾಂಧಿ, ನೆಹರೂ, ಭೋಸ್ ಇತ್ಯಾದಿ ಹೆಸರನ್ನು ಧಾರಾಳವಾಗಿ ಉಪಯೋಗಿಸುತ್ತಿದ್ದೆ. ಕಥೆಯ ನಡುನಡುವೆ ಹೀಗೆ ಸ್ವಾತಂತ್ರ್ಯ ಸಂಗ್ರಾಮದ ಕಥೆ ಹೇಳಿ ನಗಿಸುವ ಮತ್ತು ತರುಣರನ್ನು ಉತ್ತಾಹಿಸುವ ಗತ್ತುಗಾರಿಕೆ ಕಳ್ಳಿ ತಿಪ್ಪಣ್ಣನೇ ಮೊದಲಾದ ಕಥೆಗಾರರಿಂದಲೂ. ಅನೇಕ ಭಾಷಣಕಾರರಿಂದಲೂ ಕಲಿತುಕೊಂಡಿದ್ದೆ. ಹಾಗೆ ಹೇಳಿದಾಗ ನನ್ನ ಕಥೆಗೂ ಕಳೆ ಕಟ್ಟುತ್ತಿತ್ತು. ಜನರೂ ಹುರಿದುಂಬಿ ಜೈಕಾರ ಮಾಡುತ್ತಿದ್ದರು. ನಂದ್ಯಪ್ಪ ನನ್ನ ಕಥೆಗಳಿಗೆ ಅಲ್ಲಿ ಇಲ್ಲಿ ಒಮ್ಮೊಮ್ಮೆ ಹಾಜರಾಗಿ ಮುಖತೋರಿಸಿ ಹೋಗುತ್ತಿದ್ದ. ಹನಸವಾಡಿಯಲ್ಲಿ ತನ್ನದೇ ಆದ ಕಾಂಗ್ರೆಸ್ ಮದುವೆಗೆ ಏರ್ಪಾಡು ಮಾಡಿಕೊಂಡು ನನ್ನ ಕಥೆಯನ್ನು ಇಟ್ಟುಕೊಂಡ. ಮದುವೆ ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ನಡೆಯುತ್ತದೆ. ನಿಧಿಗೆ ರುದ್ರಪ್ಪ, ಹೆಚ್. ಎಸ್. ರುದ್ರಪ್ಪನವರೂ,

ಅನೇಕ ಕಾರ್ಯಕರ್ತರೂ ಬರುತ್ತಾರೆ. ಜನವೂ ಸೇರುತ್ತದೆ. ಹಾರ್ಮೋನಿಯಂ ಸಾಸಿವೆಹಳ್ಳಿ ಮರಿಗೆಪ್ಪ, ತಬಲಾಕ್ಕೆ ದೊಡ್ಡಬಸಪ್ಪ ಬರುತ್ತಾರೆ ಎಂದು ಹೇಳಿ ಒಪ್ಪಿಸಿ ಬಿಟ್ಟಿದ್ದ. ಮದುವೆ ಮುಹೂರ್ತ ಬೆಳಗಿನ ಹತ್ತು ಘಂಟೆಗೆ ಇತ್ತು. ನಾನು ಶಿವಮೊಗ್ಗದಿಂದ ನಾಲ್ಕು ಮೈಲು ಅಥವಾ ನಮ್ಮ ವಿದ್ಯಾರ್ಥಿನಿಲಯದಿಂದ ಐದು ಮೈಲು ದೂರವಾಗುವ ಆ ಊರಿಗೆ ಹೋಗಿ ತಲುಪಲು ಒಂದೂವರೆ ಎರಡು ತಾಸು ಸಾಕು ಎಂದು ಯೋಚಿಸಿ ಬೆಳಗಿನ ಏಳೂವರೆ ಹೊತ್ತಿಗೆ ತುಂಗಾಸ್ನಾನಾದಿಗಳನ್ನು ಮುಗಿಸಿ ಬಟ್ಟೆ ಬರೆಗಳನ್ನು ಒಳ್ಳೇ ಠೀವಿಯಿಂದ ಹಾಕಿಕೊಂಡೆ. ಇಷ್ಟು ಹೊತ್ತಿಗಾಗಲೆ ನನ್ನ ಧಾರವಾಡದ ಠೀವಿಯ ರುಮಾಲು ಪಂಜೆ ಅಂಗಿಗಳ ಸ್ಥಾನದಲ್ಲಿ ಓರ್ವ ನಿಷ್ಠಾವಂತ ಕಾಂಗ್ರೆಸ್ ಧುರೀಣ ಹಾಕುವ ಬಟ್ಟೆ ಬರೆಗಳ ರೀತಿ ನೀತಿಗಳಿಗೆ ಇಳಿದಿದ್ದೆ. ಶಿವಮೊಗ್ಗ ಪರಿಸರದ ಕಾಂಗ್ರೆಸ್‌ಧುರೀಣನೇ ಆಗಿ ಬಿಟ್ಟಿದ್ದೆ ಅಂದುಕೊಳ್ಳಿ. ಖಾದಿಯ ಒಂದು ಒಳ್ಳೆ ರೇಷ್ಮೆ ಜುಬ್ಬಾ ಹೊಲಿಸಿದ್ದೆ. ಖಾದಿ ಪಂಚೆ ಕೊಂಡು ಉಡುತ್ತಿದ್ದೆ. ಸುತ್ತಲೂ ಅಚ್ಚು ಹಾಕಿದ ಹೂಗಳುಳ್ಳ ದಪ್ಪನೆಯ ಖಾದಿ ಸೆಲ್ಲೆಯನ್ನಾಗ ಕೊಂಡಿದ್ದೆ. ನಾಲ್ಕೈದು ಒಳ್ಳೆಯ ಖಾದಿ ಟೊಪ್ಪಿಗೆಗಳನ್ನು ಕೊಂಡು ಇಟ್ಟುಕೊಂಡಿದ್ದೆ ಒಳ್ಳೆಯ ದಪ್ಪನೆಯ ಪಾದರಕ್ಷೆ ಕೊಂಡಿದ್ದೆ. ನಾನು ಸಿದ್ಧಯ್ಯನವರೇ ಮೊದಲಾದ ಕಾಂಗ್ರೆಸ್ ಧುರೀಣರ ಗಾಢಪರಿಚಯವನ್ನು ಮಾಡಿಕೊಳ್ಳಬೇಕೆಂಬ ಅಭಿಲಾಷೆಯುಳ್ಳವನಾಗಿ ಅವರೆದುರು ಒಳ್ಳೆಯ ವಸ್ತ್ರಾಲಂಕಾರ ಭೂಷಿತನಾಗಿ ಇವನೂ ಒಬ್ಬ ಕಾಂಗ್ರೆಸ್ಸಿಗ ಎಂದು ಕಾಣಿಸಿಕೊಳ್ಳಬೇಕೆಂಬುದೇ ಠೀವಿಯನ್ನು ಹೆಚ್ಚು ಮಾಡಿಕೊಳ್ಳುವುದಕ್ಕೆ ಕಾರಣವಾಗಿತ್ತು. ಹಾಸ್ಟಲಿನಿಂದ ಅತ್ಯಂತ ಉತ್ಸಾಹದಿಂದ ವೇಗವೇಗವಾಗಿ ಹೊರಟೆ. ಆಕಾಶ ಮೋಡದಿಂದ ಮುಸುಕಿತ್ತು. ಮಳೆಯ ಲಕ್ಷಣ ಅಷ್ಟೊಂದು ಇರಲಿಲ್ಲವೆಂದರೂ ನಡೆದೀತು. ನಿಮ್ಮ ಹಾಸ್ಟಲ್‌ನಿಂದ ರೈಲ್ವೆ ಕ್ರಾಸಿಂಗಿಗೆ ಬರುವಷ್ಟರಲ್ಲಿ ಮೋಡ ಅಧಿಕವಾದರೂ ನನಗೆ ಮಳೆ ಬರುತ್ತದೆಂಬ ಸೂಚನೆಯನ್ನೇ ಆಕಾಶ ಕೊಡಲಿಲ್ಲ. ರೈಲ್ವೆ ಸ್ಟೇಷನ್‌ನಿಂದ ನಾಲ್ಕು ಮೈಲು ದೂರವಿರುವ ಆ ಊರಿಗೆ ಹೋಗುವುದೇನು ಮಹಾ! ಎಂದುಕೊಂಡು ಹೊರಟೇ ಬಿಟ್ಟೆ. ಅರ್ಧ ದಾರಿಗೆ ಹೋದೆ. ಭಾರೀ ಮೋಡ ಮುಸುಕಿ ಮಳೆ ಪ್ರಾರಂಭವಾಗಿಯೇ ಬಿಟ್ಟಿತು. ಕೇವಲ ಮಳೆಯೇ ಆಗಿದ್ದರೆ ನಾನು ಭಯಪಡುತ್ತಲೇ ಇರಲಿಲ್ಲ. ಎಂಥ ಮಳೆಯಾದರೂ ತೋಯಿಸಿಕೊಂಡು ಹೋಗಬಲ್ಲವನಾಗಿದ್ದೆ. ನನಗೆ ಚಳಿ, ಮಳೆ, ಬಿಸಿಲಿಗೆ ಆ ಕಾಲದಲ್ಲಿ ಎಂದೂ ಹೆದರಿಕೆ ಇರುತ್ತಿರಲಿಲ್ಲ. ಎಲ್ಲವನ್ನು ತಡೆದುಕೊಳ್ಳುವ ವಜ್ರ ಶರೀರವನ್ನೇ ದೇವರು ನನಗೆ ಕೊಟ್ಟಿದ್ದನೆನ್ನಬಹುದು. ಭಯಂಕರವಾದ ಮಿಂಚು ಗುಡುಗು, ಸಿಡಿಲು ಪ್ರಾರಂಭವಾಗಿ ಬಿಟ್ಟಿತು. ಅದಕ್ಕೆ ಧೈರ್ಯಗುಂದಿ ಬಿಟ್ಟೆ. ಪರ್ವತ ವನ ರಾತ್ರಿಯೆಲ್ಲ ನಡುಗುವ ಘನಗಂಬೀರ ಅಂಬರದ ಅಬ್ಬರ. ಕಣ್ಣು ಕೋರೈಸುವ ಮಿಂಚಿನ ಹಿಂದೆಯೇ ಛಥಿಣ್ ಛಿಳ್ ಧಥಂ ಧಾಂಧಡಂ ಎಂಬ ಅಬ್ಬರದ ಬೊಬ್ಬೆಯಿಂದ ನಾನು ಇವತ್ತು ಸತ್ತೆನೆಂದೇ ಭಾವಿಸಿದೆ. ಜೊತೆಗೆ ದೊಡ್ಡ ದೊಡ್ಡ ಹನಿಗಳ ಬಿರುಸಿನ ಮಳೆ. ನನ್ನ ತಾಯಿ ಬಾಲ್ಯದಲ್ಲಿ ಗುಡುಗು ಸಿಡಿಲು ಪ್ರಾರಂಭವಾದೊಡನೆ ಇದ್ದಲ್ಲಿಂದ ಎಳೆತಂದು ಮನೆಯಲ್ಲಿ ದಬ್ಬಿ ಕದವಿಕ್ಕಿ ಅಗುಳಿ ಹಾಕಿ "ಹೊರಗೆ ಹೋಗಬೇಡ. ಚೊಚ್ಚು ಮಕ್ಕಳು, ನಾಗರಹಾವು, ಹುತ್ತ ಕಂಡರಾಯಿತು. ಸಿಡಿಲುಬಡಿದು ಸತ್ತೇ ಹೋಗುತ್ತಾರೆ" ಎಂದು ಹೇಳುತ್ತಿದ್ದ ಮಾತನ್ನು ನೆನೆದೆ. ಅಧೈರ್ಯದಿಂದ ನಡುಗಿದೆ. ಅಂದಿನ ನನ್ನ ಭಯಕ್ಕೆ ನನ್ನ ತಾಯಿಯನ್ನೇ ಏಕೆ ದೂರಲಿ, ತ್ರಿಮೂರ್ತಿಗಳು ಅಸ್ತಿತ್ವದಲ್ಲಿ ಎಲ್ಲಿಯಾದರೂ ಇರುವುದಾದರೆ ಅವರು ನಡುಗಿರಬೇಕು ಎನ್ನಿಸುತ್ತದೆ. ನಾನು ದಾರಿಯಲ್ಲಿ ರಕ್ಷಣೆಗೆ ಪರದಾಡಿಬಿಟ್ಟೆ. ಬಾಣನ

ಕಾದಂಬರಿಯ ಗಿಳಿಯ ಮರಿಯಾಗಿ ಬಿಟ್ಟೆ. ಎಲ್ಲಿಯೂ ರಕ್ಷಣೆ ಸಿಗಲಿಲ್ಲ. ಅಂಥ ಘೋರ ಮಳೆಯಲ್ಲಿ ಜಾಬಾಲಿಯ ಶಿಷ್ಯನಾದರೂ ಏಕೆ ಬಂದಾನು ಪಾಪ! ನಾನು ನನ್ನ ರಕ್ಷಣೆಗೆ ಬಂದು ಸಣ್ಣ ಪೂಲಿಗೆ (ಸೇತುವೆ)ಗ ಇಳಿದೆ. ಅಲ್ಲಿಗೆ ಇಳಿದುದೇ ತಡ ಮೇಲಿನಿಂದ ಕಿರಿಯ ಗಲದ ಆ ಸೇತುವೆಯಲ್ಲಿ ಗದ್ದೆಹಾಳೆಗಳು ತುಂಬಿ ಹೊರ ಚೆಲ್ಲಿದ ನೀರು ರಭಸದಿಂದ ಬರತೊಡಗಲು ಅದನ್ನು ಬಿಟ್ಟು ಮುಂದಕ್ಕೆ ಓಡಿ ಮತ್ತೊಂದು ದೊಡ್ಡ ಸೇತುವೆಗೆ ಇಳಿದು ಅಲ್ಲಿನ ಒಂದು ಕಲ್ಲುಬಂಡೆಯ ಮೇಲೆ ನಿಂತೆ. ಆದರೆ ಬ್ರಿಡ್ಜ್‌ನಲ್ಲಿ ಕಬ್ಬಿಣದ ದಪ್ಪ ದಪ್ಪ ತೊಲೆಗಳನ್ನು ಉಪಯೋಗಿಸಿದ್ದನ್ನು ಕಂಡೆ. ಎಷ್ಟೇ ಆಗಲಿ ಎಲಿಮೆಂಟರಿ ಸೈನ್ಸ್ ಓದಿದವನಲ್ಲವೆ! ಕಬ್ಬಿಣ, ಇದ್ದಲಿಗೆ ಸಿಡಿಲು ನೇರವಾಗಿ ಅಪ್ಪಳಿಸಿ ಬಿಡುತ್ತವೆ ಎಂಬ ಸಿದ್ಧಾಂತಕ್ಕೆ ಬಂದು ಭಯ ಇನ್ನಷ್ಟು ತೀವ್ರವಾಯಿತು. ನಾನು ಚಿಕ್ಕವನಿದ್ದಾಗಿಲಿಂದಲೂ ಮಿಂಚು ಸಿಡಿಲುಗಳ ಮಳೆ ಪ್ರಾರಂಭವಾದಾಗ ನಮ್ಮ ಮನೆಯವರು ಮುಂಚೆಯ ಬಾಗಿಲಲ್ಲಿ ಮತ್ತು ಹಿತ್ತಿಲಬಾಗಿಲಲ್ಲಿ ಕುಂಟೆಯ ದೊಡ್ಡ ದೊಡ್ಡ ಕುಡ (ಕುಳ)ಗಳನ್ನು ಎಸೆಯುತ್ತಿದ್ದರು. ಗುಡುಗು ಬಡಿದರೆ ಅವಕ್ಕೇ ಬಡಿದುಕೊಂಡು ಹೋಗಲೆಂದು. ಈ ಯುಕ್ತಿಯಂತೆ ನನಗೆ ಸೇತುವೆಯ ತೊಲೆಗಳನ್ನು ನೋಡಿದ ಮೇಲೆ ಓಹೋ ಸಾಯುವ ಸ್ಥಳಕ್ಕೆ ಬಂದು ಬಿಟ್ಟೆ. ನಾನು ಸಾಯುವ ಹೊತ್ತು ಸಮೀಪಿಸಿ ಬಿಟ್ಟಿತು. ಒಂದು ವೇಳೆ ಇಲ್ಲಿ ಸತ್ತು ಹೋದರೆ ನಮ್ಮೂರಿಗೆ ನನ್ನ ಹೆಣ ಹೋಗಲಿ, ಬೂದಿಯೂ ಸಿಗಲು ಸಾಧ್ಯವಿಲ್ಲ. ಈ ಗದ್ದೆಯ ಹಾಳೆಗಳಿಂದ ಬರುವ ಈ ಭಯಂಕರ ನೀರು ಬೂದಿಯನ್ನೇ ಕೊಚ್ಚಿಕೊಂಡು ಹೋಗಿ ನಾನು ಸತ್ತು ಹೋದದ್ದು ಯಾರಿಗೂ ಗೊತ್ತಾಗದಂತಹ ಕಾಲವನ್ನು ದೇವರೇ ತಂದ ಹಾಗಾಯಿತಲ್ಲ ಎಂದುಕೊಂಡು, ಆದದ್ದಾಗಲಿ, ಬೇರೆ ಇನ್ನೊಂದು ರಕ್ಷಣೆಯ ಸ್ಥಳ ಹುಡುಕಲೆಂದು ಅಲ್ಲಿಂದ ಓಡಿ ರಸ್ತೆಯಲ್ಲಿ ಬೀದಿಗರುವಿನಂತೆ ಓಡಾಡುತ್ತಿದ್ದಂತೆ, ಎದುರಿನಲ್ಲೆ ಭಯಂಕರ ಮಿಂಚು ಗುಡುಗು ಕಣ್ಣು ಮುಚ್ಚಿ ಓಡಿಹೋಗಿ ಒಂದು ಗಿಡವನ್ನು ಅಪ್ಪಿಕೊಂಡೆ. ಅಲ್ಲಿ ನಿಲ್ಲಲೂ ಭಯ. ನನಗೆ ಬೇಕಾದುದು ಮೇಲ್ಛಾವಣಿಯಿರುವ ಸ್ಥಳ. ಮಿಂಚು ಬಡಿಯುವುದು ಮೇಲಿನಿಂದ ತಾನೆ! ಮೇಲ್ಛಾವಣಿ ಆ ವನ ಪ್ರದೇಶದಲ್ಲಿ ಸೇತುವೆಯೊಂದನ್ನು ಬಿಟ್ಟರೆ ಇನ್ನೆಲ್ಲಿ? ಮುಂದೆ ಓಡಿದೆ. ನಾನು ಬಯಸಿದಂತಹ ಒಂದು ದೊಡ್ಡ ಸೇತುವೆ ಸಿಕ್ಕಿತು. ಅದರಲ್ಲಿ ನೀರು ಪದೇ ಪದೇ ಏರುತ್ತಿತ್ತು. ಆದರೂ ಆದರಲ್ಲಿನ ದಂಡೆಯಲ್ಲಿನ ಕಲ್ಲನ್ನು ಹತ್ತಿ ಕಣ್ಣು ಮುಚ್ಚಿ ಕೊಂಡೇ ನಿಂತೆ. ನನ್ನ ಜೀವನದಲ್ಲಿ ಇಂಥ ಒಂದು ಅನೂಹ್ಯವಾದ ಭಯಾನಕ ಅಪಾಯಕ್ಕೆ ಒಳಗಾಗಿದ್ದಿಲ್ಲ. ಎಷ್ಟೋ ಅಪಾಯಕರ ಸನ್ನಿವೇಶಗಳು ಒದಗಿದ್ದರೂ, ಜೀವನದ ಮೇಲಿನ ಆಸೆದೊರೆದು ಸತ್ತು ಹೋಗುವುದು ನಿಶ್ಚಿತ! ಈಗೋ ಇನ್ನೈದು ನಿಮಿಷಕ್ಕೆ ಸಾಯುವುದು ಖಂಡಿತವೆಂದು ನಂಬುಗೆಯಂಟುಮಾಡಿದ್ದು ಇದೊಂದೇ. ಸುಮಾರು ಒಂದು ಘಂಟೆಗಳ ಕಾಲ ನಾನು ಮೃತ್ಯುಭಯದಿಂದ ಓಡಾಡಿರಬೇಕು. ಈ ಸೇತುವೆಯಲ್ಲಿ ನಿಂತಾಗ ಸ್ವಲ್ಪ ಭಯ ಕಡಿಮೆಯಾದರೂ ಅದರ ಅಗಲ ಬಾಯಿಗಳ ಮೂಲಕ ಮಿಂಚು ಬರುವ ಸಾಧ್ಯತೆಯುಂಟಲ್ಲಾ ಎಂದು ನಂಬಿಕೊಂಡೆನಾದರೂ ಅರ್ಧಕ್ಕರ್ಧ ಭಯ ಕಡಿಮೆಯನ್ನಬಹುದು. ಒಂದು ತಾಸು ಸತತ ಮಳೆ ಸುರಿಯಿತು. ಗುಡುಗು ಮಿಂಚುಗಳು ಪಾರ್ಶ್ವದ ಮಾರ್ಗಹಿಡಿದು ಮುಂದೆ ಹೋಗುತ್ತಿರುವುದು ಕಂಡು ಬಂತು. ಸ್ವಲ್ಪ ಧೈರ್ಯ ಬಂತು. ವಿಕಟಾಟ್ಟಹಾಸದ ಪ್ರಕೃತಿಯ ಆ ತಾಪವನ್ನು ಕಂಡು ಎತ್ತಿ ಕೈಮುಗಿದೆ. ಮನುಷ್ಯ ಪ್ರಕೃತಿ ಮುನಿದರೆ ಏನು ಮಾಡಬಲ್ಲ. ಭೂಮಿ ನಡುಗಿ ನಾವು ನಿಂತ ನೆಲವನ್ನೇ ನುಂಗಿ ಬಿಟ್ಟರೆ, ಭಯಂಕರ ಮಿಂಚಿನ ಬೆಂಕಿ ನಮ್ಮ ಮನೆಮಠಗಳ ಮೇಲೆ ಸಹಸ್ರ ಸಂಖ್ಯೆಯಲ್ಲಿ ಏಕಕಾಲದಲ್ಲಿ ಅಪ್ಪಳಿಸಿಬಿಟ್ಟರೆ ಘೋರ ಮಳೆ ಸುರಿದು ಮನೆಮಠ,

ಹೊಲ-ಬೆಳೆ-ಏನೆಲ್ಲವನ್ನು ಕೊಚ್ಚಿಕೊಂಡು ಹೋದರೆ? ಇಂಥ ಅನೇಕ ಪ್ರಶ್ನೆಗಳು ನನ್ನ ಮನಸ್ಸಿನ ಮುಂದೆ ಸುಳಿದು ಈಶ್ವರಸೃಷ್ಟಿಯ ಅಗಾಧ ಶಕ್ತಿಯೆದುರು ಮನುಷ್ಯನೆಷ್ಟು ಕ್ಷುದ್ರಜಂತು ಎನ್ನಿಸಿತು ಮನಸ್ಸಿಗೆ. ನನ್ನ ದಿಮಾಕು ಇಳಿದು ಹೋಗಿತ್ತು. ಇಸ್ತ್ರಿ ಮಾಡಿಸಿ ಕೊಟ್ಟ ಅಂಗಿ, ಪಂಚೆ, ಟೋಪಿಗಳು ತಮ್ಮ ಸ್ವರೂಪ ಕಳೆದುಕೊಂಡು ಕೆಸರು ಕೊಚ್ಚೆಯಿಂದ ಅಸಹ್ಯವಾಗಿದ್ದವು. ಮದುವೆಯೂ ಬೇಡ, ಕಥೆಯೂ ಬೇಡ, ಪುರಾಣವೂ ಬೇಡ, ಸುಮ್ಮನೆ ತಿರುಗಿ ಹೋಗಿಬಿಟ್ಟರಾಯಿತೆಂದು ನಾಲ್ಕಾರು ಹೆಜ್ಜೆಯಿಟ್ಟೆ. ಮನಸ್ಸು ಬರಲಿಲ್ಲ. ಎಲಾ ಇಷ್ಟು ಕಷ್ಟಪಟ್ಟು ಬಂದಿದ್ದೇನೆ. ಹೆಚ್ಚೆಂದರೆ ಇನ್ನು ಒಂದು ಮೈಲು ಆಗಬಹುದು ಹನಸವಾಡಿ. ಆದದ್ದಾಗಲಿ ಮಳೆ ದೂರ ಹೋಯಿತು. ಅದು ಪುನಃ ಹಿಂದಿರುಗುವ ಸೂಚನೆಗಳಲ್ಲ. ಆ ಊರಿಗೆ ಹೋಗಿಯೇ ಬಿಡೋಣ. ಕಥೆ ಮಾಡದಿದ್ದರೂ, ಕಥೆ ಮಾಡಲಿಕ್ಕೆಂದು ಬಂದು ಮಳೆಗೆ ಸಿಕ್ಕು ಅನುಭವಿಸಿದ ಭವಣೆಯನ್ನಾದರೂ ಅವರಿಗೆ ತಿಳಿಸಿಬರೋಣವೆಂದು ಪುನಃ ತಿರುಗಿ ಹೊರಟು ಅಲ್ಲಿಯೇ ಹರಿಯುತ್ತಿದ್ದ ಹಳ್ಳದ ನೀರಿನಲ್ಲಿ ಬಟ್ಟೆಬರೆಗಳನ್ನು ಜಾಲಾಡಿಸಿ ಹಿಂಡಿ, ಅವನ್ನೇ ತೊಟ್ಟುಕೊಂಡು ನಡೆದೆ. ಮೊದಲೇ ಹೇಳಿದಂತೆ ನನ್ನ ಗಂಗರ್ವದ ದಿಮಾಕೆಲ್ಲ ಈಶ್ವರ ನಿರ್ಮಿತ ಸೃಷ್ಟಿಯ ಭಕ್ತನಾಗಿ ಹೇಗಿತ್ತು ಮನಸ್ಸು? ಬದುಕಿದೆಯಲ್ಲವೆ, ಎಚ್ಚರವಾಗಿರು ಎಂದು ಬೋಧಿಸುತ್ತಿದ್ದಂತೆ ಭಾಸವಾಗುತ್ತಿತ್ತು. ನಿಧಾನವಾಗಿ ಮೌನವಾಗಿ ಹೆಜ್ಜೆಯ ಮೇಲೆ ಹೆಜ್ಜೆ ಹಾಕುತ್ತ ಏನೇನನ್ನೊ ನೆನೆಸಿಕೊಳ್ಳುತ್ತ ನಡೆದೆ. ಆಗ ಮುಖ್ಯವಾಗಿ ನನ್ನ ಕಣ್ಣೆದುರಿಗೆ ನಿಂತವಳು ನನ್ನ ತಾಯಿ. ಗುಡುಗು ಮಿಂಚುಗಳಿಂದ ಪ್ರಕೃತಿ ರೌದ್ರರೂಪದಳೆದಾಗ ಹೇಳುತ್ತಿದ್ದ ಅವಳ ಮಾತುಗಳನ್ನು ಮೆಲುಕು ಹಾಕುತ್ತಲೇ ನಡೆದೆ.

ಮದುವೆಯ ಮಂಟಪವನ್ನು ನಂದೆಪ್ಪ ಹಾಕಿದ್ದು ರಾಜಮಾರ್ಗದ ಪಕ್ಕದಲ್ಲಿ ಹೊಸದಾಗಿ ಕಟ್ಟಿದ ಒಂದು ಸಣ್ಣದಾದ ಛತ್ರವೋ, ಚಾವಡಿಯೋ ಏನೋ ಒಂದು ಕಟ್ಟಡದಲ್ಲಿ. ಮುಂದೆ ವಿಶಾಲವಾದ ಬೈಲು 4 ರಸ್ತೆಯ ಸಾಲುಮರಗಳ ನೆಳಲೂ ಇದೆ. ಇಷ್ಟೇ ಸಾಕು. ಹೇಗಿದ್ದರೂ ಬೇಸಿಗೆಯಲ್ಲವೆ? ಎಂದು ಅವನ ಅಂದಾಜು. ಊರು ಅಲ್ಲಿಂದ ಒಂದೆರಡು ಫರ್ಲಾಂಗ್ ದೂರದಲ್ಲಿ ತುಂಗಾ ಹೊಳೆಯ ತೀರದಲ್ಲಿತ್ತು. ಮಳೆಯ ಹೊಡೆತದಿಂದ ಅಲ್ಲಿದ್ದ ಜನರೂ ದಿಕ್ಕಾಪಾಲಾಗಿ ಓಡಿದ್ದರು. ಆ ಕಟ್ಟಡದಲ್ಲಿ ಇಪ್ಪತ್ತು ಇಪ್ಪತ್ತೈದು ಜನರಿದ್ದರು. ಇದ್ದಕ್ಕಿದ್ದಂತೆ ಬಂದ ಮಳೆಯಿಂದ ಅಡಿಗೆ ಮಾಡಲು ಬೈಲಿನಲ್ಲಿ ಹಾಕಿದ್ದ ಒಲೆಗಳಲ್ಲಿ ಬೆಂಕಿನಂದಿ ಒಲೆಗಳೂ ಅರ್ಧಮರ್ದ ಕೊಚ್ಚಿ ಹೋಗಿದ್ದವು. ಮಾಡಿದ ಪಾಯಸ ಅನ್ನ ಸಾರನ್ನು ಹಾಗೂ ಹೀಗೂ ಎತ್ತಿಕೊಂಡು ಬಂದು ಆ ಛತ್ರದಲ್ಲಿಟ್ಟು ರಕ್ಷಿಸಿದ್ದರು. ಮದುವೆಗಾಗಿ ಹಾಕಿದ್ದ ಮಂಟಪ ಮಳೆಗೂ ಗಾಳಿಗೂ ಹಾರಿ, ಉರುಳಿ ಅಸ್ತವ್ಯಸ್ತಗೊಂಡಿತ್ತು. ಮಳೆ ನಿಂತ ಮೇಲೆ ಬರಬೇಕಾಗಿದ್ದ ಕಾಂಗ್ರೆಸ್ ಮುಖಂಡರು ಸೈಕಲ್‌ನವರನ್ನೊಬ್ಬನನ್ನು ಕಳಿಸಿ ಭಯಂಕರ ಮಳೆಯ ಕಾರಣ ಬರಲಾಗಲಿಲ್ಲ. ಮದುವೆಯನ್ನು ಹೇಗೋ ಹಾಗೆ ಮುಗಿಸಿ ಬಿಡಿ. ಎಂದಾದರೊಂದು ದಿನ ಬರೋಣ ಎಂದು ಪತ್ರ ಕಳಿಸಿಬಿಟ್ಟರು. ಇಷ್ಟು ಹೊತ್ತಿಗಾಗಲೆ ಹನ್ನೊಂದು ಘಂಟೆ. ಕ್ರಮವಾಗಿ ಹತ್ತುಗಂಟೆಗೆ ಮಳೆಯಿರಲಿ ಚಳಿಯಿರಲಿ ಪುರೋಹಿತ ಹುಡುಗಿಯ ಕೊರಳಿಗೊಂದು ತಾಳಿ ಕಟ್ಟಿಸಿ ಹೆಣ್ಣಿನ ಸೀರೆಗೆ ಗಂಡಿನ ಬಟ್ಟೆಯಿಂದ ಗಂಟು ಹಾಕಿಸಿಬಿಟ್ಟಿದ್ದ. ನಾನು ಹೋದ ಮೇಲೆ "ಅಯ್ಯೋ ಪಾಪ. ಪೂರ್ಣ ನೆನೆದಿರಿ, ತೊಂದರೆಯಾಯಿತು" ಎಂದು ಉಪಚಾರೋಕ್ತಿ ಆಡಲೇಬೇಕಲ್ಲ! ಆಡಿದರು. ನಮ್ಮಗತಿ ನೋಡಿ ಹೀಗಾಯಿತೆಂದು ತಮ್ಮದನ್ನು ಒಂದಷ್ಟು ಹೇಳಿದರು. ಶಾಸ್ತ್ರೋಕ್ತವಾಗಿ

ಮಾಂಗಲ್ಯಧಾರಣೆ ಆಗಿದೆ. ಅಷ್ಟೇ ಸಾಕು. ದೊಡ್ಡ ಮಳೆಬಂತು, ಕೆರೆ ಕಟ್ಟೆತುಂಬಿದವು, ಲೋಕ ಬದುಕಿತು. "ಮಳೆ ಬಂದರೆ ಕೇಡಲ್ಲ ಮಗ ಉಂಡರೆ ಕೇಡಲ್ಲ!" ಗಾದೆಯೇ ಇದೆ. ಅದು ಬರುವಾಗ ಭಯಂಕರ ಆರ್ಭಟಮಾಡಿದರೂ ಪರಿಣಾಮದಲ್ಲಿ ಎಲ್ಲವೂ ಮಂಗಳವೇ. ದೊಡ್ಡವರು ಬೈದು, ಝುಂಕಿಸಿ, ಕೋಪಿಸಿ ನುಡಿದಂತೆ, ಗುಡುಗು ಸಿಡಿಲು. ದೊಡ್ಡವರ ಕೋಪದ ಹಿಂದೆಯೇ ನಮ್ಮ ಹಿತ ಇಲ್ಲವೆ? ಹಾಗೆಯೇ ಇಳೆ ಸಮೃದ್ಧವಾಯಿತು ಬಿಡಿ. 'ಮಳೆ ಇಳಿಯೆ - ಇಳೆ ಮೊಳೆವುದು' ಎಂದು ನನ್ನ ಸ್ವಭಾವಕ್ಕನುಗುಣವಾಗಿ ಎರಡು ಮಾತು ಹೇಳಿ ನಗಿಸಿ, ಇಂದಿಗೆ ಇಷ್ಟೇ ಕಥೆ ಸಾಕು. ಇಂದು ಬದುಕಿ ಬಂದದ್ದೂ ನಿಮ್ಮೆಲ್ಲರ ಪುಣ್ಯವಿರಬೇಕು. ಈಗ ಇಲ್ಲಿ ಕೂಡಲೂ ಸ್ಥಳವಿಲ್ಲ, ನಿಲ್ಲಲೂ ಸ್ಥಳವಿಲ್ಲ. ಹಾರ್ಮೋನಿಯಂನವರೂ ಇಲ್ಲ. ಚಲ್ಲಾಪಿಲ್ಲಿಯಾಗಿ ಹೋಗಿ ಪಕ್ಕದ ಊರು ಸೇರಿದ್ದಾರೆ. ತಬಲಾದ ಮೇಲೆ ಸೋರಿ ನೆನೆದು ತೊಪ್ಪೆಯಾಗಿ ಹೋಗಿದೆ. ಇನ್ನೊಮ್ಮೆ ಎಂದಾದರೂ ನಿಮ್ಮ ಮನೆಯಲ್ಲೇ ಬಂದು ಕಥೆ ಮಾಡುತ್ತೇನೆಂದೂ ಹೇಳಿ, ಶಿವಮೊಗ್ಗಕ್ಕೆ ಹೋಗುವ ಒಂದು ಬಸ್ಸು ಹಿಡಿದು ಬಂದುಬಿಟ್ಟೆ. ಹಸಿಯಾದ ಬಟ್ಟೆಬರೆಗಳು ಮೈಯ ಬಿಸಿಗೆ, ಗಾಳಿಗೆ ಅರ್ಧಮರ್ಧ ಒಣಗಿದ್ದವು. ನಮ್ಮ ಮಿತ್ರರಿಗೆಲ್ಲ ಈ ಕಾಂಗ್ರೆಸ್ ಕಥೆಯ ಹರಿಕಥೆಯನ್ನು, ಪ್ರವಾಸದ ಪಡಬಾರದ ಭವಣೆಯ ಕಥೆಯನ್ನು ಹೇಳಿ ನಗಿಸಿದ್ದೇ ನಗಿಸಿದ್ದು! ನಕ್ಕಿದ್ದೂ ನಕ್ಕಿದ್ದೇ! .

ಹೀಗೆ ಒಟ್ಟಿನಲ್ಲಿ ಶಿವಮೊಗ್ಗದಲ್ಲಿ ಓದುವಾಗಿನ ನನ್ನ ದಿಗ್ವಿಜಯದ ಕಥೆ ಹೇಳಿ ಮುಗಿಯದ್ದು; ಕೇಳಿ ಬೇಸರ ಪಡದಂತಹುದು. ಶಿವಮೊಗ್ಗ ಚಿತ್ರದುರ್ಗ, ಕಾರವಾರ ಜಿಲ್ಲೆ, ಚನ್ನಗಿರಿ, ದೊಗ್ಗನಾಳು. ಒಡ್ಡನಾಳು, ಬೆಳಗುತ್ತಿ ಮಲ್ಲಿಗೇನಹಳ್ಳಿ, ತೀರ್ಥರಾಮೇಶ್ವರ, ನ್ಯಾಮತಿ - ಸುರಹೊನ್ನೆ, ರಂಗಾಪುರ, ಕುಂಸಿ, ಆಯನೂರು, ಮಂಡಗದ್ದೆ , ಕೋಡಮಗ್ಗಿ , ಜೀಲೂರು, ಕುರುಬರಹಟ್ಟಿ, ಹೊಳೆಹೊನ್ನೂರು, ಆರೆಬಿಳಚಿ, ಚಿರಡೋಣ, ಸೋಮಸೆಟ್ಟಿಹಳ್ಳಿ, ಸಿದ್ದಾಪುರ, ಬಸವಾಪಟ್ಟಣ, ಕೆಂಗುಂಟೆ, ಮಲ್ಲಾಡಿಹಳ್ಳಿ, ಹೊಳಲಕೆರೆ, ಮಲೇನೂರು, ದುಮ್ಮಿ , ಬನ್ನಿಹಟ್ಟಿ, ಭದ್ರಾವತಿ, ಹಿರೂರು (ಭದ್ರಾವತಿ ತಾಲೂಕು), ಸಂತೆಬೆನ್ನೂರು, ಕುಂಬಳೂರು, ಹೆಳವನಕಟ್ಟೆ, ಕಡಲೆಗೊಂದಿ, ದೇವರ ಬೆಳೆಕೇರಿ, ಸೋಗಲು, ಬುಕ್ಕಾಂಬುದಿ, ಪಾಂಡೋಮಟ್ಟು, ನಲ್ಲೂರು, ಚೀಲೂರು, ಕಾಗಿನೆಲೆ (ಹೊನ್ನಾಳಿ ತಾಲ್ಲೂಕು), ಹೆಡತ್ರಿ, ಅಂಬರಗೋಡ್ಲು, ಸಾಗರ, ಶಿರ್ಶಿ, ಸಿದ್ದಾಪುರ, ಶಿರಾಳಕೊಪ್ಪ, ಶಿಕಾರಿಪುರ, ಸೌಳಂಗ ಇವೆಲ್ಲ ನಾನು ಓದುವ ಕಾಲದಲ್ಲಿ ಉಪನ್ಯಾಸ, ಕಥೆಗೆಂದು ಸುತ್ತಾಡಿದ ಊರುಗಳೆಂದು ಸ್ಥೂಲವಾಗಿ ಹೇಳಬಹುದು. (ಕೆಲವು ಊರುಗಳ ಹೆಸರು ಮರೆತು ಹೋಗಿವೆ) ಈ ನನ್ನ ಪ್ರವಾಸ ಕಾಲದಲ್ಲಿ ನಾನು ಗಳಿಸಿದ ಲೋಕಾನುಭವ, ಮಾಡಿಕೊಂಡ ಪರಿಚಯಗಳಿಂದ ನಾನು ಬಹಳ ಬೆಳೆದೆನೆನ್ನಬಹುದು. ಕುಂಸಿಯಲ್ಲಿ ನನಗೆ ಆಗ ಅಲ್ಲಿ ಅಮಲದಾರರಾಗಿದ್ದ ಚನ್ನಬಸಪ್ಪನವರು ಬಹಳವಾಗಿ ವಿಶ್ವಾಸದಿಂದ ಕಂಡು ಅನೇಕ ಊರುಗಳಲ್ಲಿ ತಾವೇ ನಿಂತು ಕತೆ ಮಾಡಿಸಿ ಸಹಾಯಮಾಡಿದರು. ಚಾಮೇನಹಳ್ಳಿ ವೀರಪ್ಪ, ಚನ್ನಬಸಪ್ಪ (ಅಮಲದಾರರು), ಚನ್ನಗಿರಿ ಚಿಕ್ಕಪ್ಪ ಇವು ಮರೆಯಲಾರದ ಹೆಸರುಗಳು. ಹೀಗೆ ನಾನು ಯಾವ ತಾಪತ್ರಯ ಪಡದೆ ಒಳ್ಳೆಯ ಉತ್ಸಾಹದಿಂದಲೇ 2ನೇ ವರ್ಷದ ಪ್ರಥಮ ವಿ.ಟಿ.ಸಿ. ಪರೀಕ್ಷೆಯಲ್ಲಿ ಮೊದಲನೆಯ ದರ್ಜೆಯಲ್ಲಿ ಮೈಸೂರು ರಾಜ್ಯಕ್ಕೆ 2ನೇ ರ್‍ಯಾಂಕ್ ಗಳಿಸಿ ಉತ್ತೀರ್ಣನಾಗಿ ನನ್ನ ಮಿತ್ರರನ್ನೆಲ್ಲ ಸಂತೋಷಗೊಳಿಸಿದೆ. ಮೊದಲ ರ್‍ಯಾಂಕ್ ಏಕೆ ಬರಲಿಲ್ಲವೆಂದು ಇನ್ನೂ ಯೋಚಿಸುತ್ತೇನೆ. ಆದರೆ ಅರ್ಥವೇ ಆಗುತ್ತಿಲ್ಲ.

## ಬೆಲೆಯುಳ್ಳ ಮಾರ್ಗದರ್ಶನ

ಶಿವಮೊಗ್ಗದಲ್ಲಿ ನಾನು ಓದುತ್ತಿರುವಾಗ ನನಗೆ ಓರ್ವ ಹಿತಚಿಂತಕ ಮಿತ್ರನ ಪರಿಚಯ ಸ್ವಲ್ಪ ತಡವಾಗಿ ಆಯಿತು. ಆತ ಮೂರನೆಯ ವರ್ಷದಲ್ಲಿ ಓದುತ್ತಿದ್ದ. ನನ್ನ ಈ ಚಟುವಟಿಕೆಗಳನ್ನು ಆತ ಗಮನಿಸುತ್ತಲೇ ಇದ್ದ. ಹೆಸರು ವೀರಯ್ಯ ಎಂದು. ಆತ ಅತ್ಯಂತ ಸಭ್ಯ ಮತ್ತು ಯಾರಿಗೂ ಕಾಣಿಸಿಕೊಳ್ಳದ ಗುಪ್ತಭಕ್ತನಂತಿದ್ದವ. ಒಮ್ಮೆ ಅವನೇ ಮಾತನಾಡಿಸಿ "ನೀವು ಇಷ್ಟೊಂದು ಬಂಡವಾಳ ಇಟ್ಟುಕೊಂಡು ಈ ವಿ.ಟಿ.ಸಿ. ಓದಲು ಧಾರವಾಡ ಸೀಮೆಯಿಂದ ಬರಬೇಕಾಗಿತ್ತೇ? ಓದಿ ನಮ್ಮ ಹಾಗೆ ಹದಿನೈದು ಇಪ್ಪತ್ತು ರೂಪಾಯಿ ಸಂಬಳದ ಮೇಷ್ಟ್ರಾಗಬೇಕು ತಾನೆ. ಬೇರಿನ್ನಾವುದಾದರೂ ವೃತ್ತಿ ಮಾಡಿ ಸಂಪಾದಿಸಲು ನಿಮಗೆ ಮಾರ್ಗವಿಲ್ಲವೆ? ಇತ್ಯಾದಿ ಏನೇನೋ ನಿರಾಶೆಯ ಧ್ವನಿಯಲ್ಲಿ ಅಂದು ಬಿಟ್ಟ. ಆತ ನನ್ನನ್ನು ಮೊದಲಿನಿಂದಲೂ ಗಮನಿಸುತ್ತ ನನ್ನ ಕೀರ್ತಿವಾರ್ತೆಯನ್ನು ಕೇಳುತ್ತ ಬಂದಿದ್ದನಂತೆ. ಕಾಲೇಜಿನಲ್ಲೆಲ್ಲ ನನ್ನ ಹೆಸರು ಮಾರ್ದನಿಸುತ್ತಿದ್ದುದನ್ನು ಕೇಳಿ ಇವನು ಪ್ರತಿಭಾಶಾಲಿ ಎಂದು ಗುರುತಿಸಿದ್ದನಂತೆ. ಅವನ ಮಾತನ್ನು ಕೇಳಿ ನಾನು ಮನಸ್ಸಿನಲ್ಲಿ ಹದಿನೈದು ಇಪ್ಪತ್ತು ರೂಪಾಯಿಯ ಮಾಸ್ತರನ ಕೆಲಸವಾದರೂ ಅಲ್ಲಿ ಸಾಧಿಸುವುದು, ಸಾಧ್ಯಮಾಡಿಕೊಳ್ಳುವುದು, ಆ ಮೂಲ ಕೇಂದ್ರದಿಂದಲೇ ವಿಸ್ತಾರವಾಗಿ ಬೆಳೆಯುವುದು ಬಹಳವಿದೆ. ಅದನ್ನು ಸಾಧಿಸೇನು. ಅಲ್ಲಿ ಬೆಳೆದೇನು ಎಂಬ ಗಾಢ ಆತ್ಮಪ್ರತ್ಯಯದ ನಾನು ಅವರ ನಿರಾಶಾದಾಯಕ ಮಾತುಗಳಿಂದ ವಿಚಲಿತನಾಗಲಿಲ್ಲ, ಅಷ್ಟೆ ಅಲ್ಲ, ಅವು ನನ್ನ ಮನಸ್ಸನ್ನೇ ಪ್ರವೇಶಿಸಲಿಲ್ಲವೆಂದರೂ ತಡೆದೀತು. ಅದನ್ನು ತೋರಗೊಡದಂತೆ ನಗುತ್ತ "ಮೇಷ್ಟ್ರೇ ಏನೋ ಇಲ್ಲಿ ಪ್ರವೇಶಮಾಡಿಬಿಟ್ಟಿದ್ದೇನೆ, ಇದನ್ನು ಮುಗಿಸಿ ಮುಂದೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಹೋಗಬೇಕೆಂಬ ಆಸೆ" ಎಂದುಬಿಟ್ಟೆ. "ಇದನ್ನೋದಿ ನೀವೇನು ಬಿ.ಎ., ಎಂ.ಎ., ಓದಲಾಗುತ್ತದೆಯೇ? ಆಗಿ ಹೋಯಿತು. ಸ್ವಂತ ಖರ್ಚಿನಿಂದ ಟ್ರೈನಿಂಗ್ ಮುಗಿಸಿದವನಾದ್ದರಿಂದ ಮೈಸೂರು ಸರಕಾರದಲ್ಲಿಯೇ ಮತ್ತೆಲ್ಲೋ ಒಂದು ಮೇಷ್ಟ್ರು ಕೆಲಸವಂತೂ ಗ್ಯಾರಂಟಿ. ಆಮೇಲೆ ನಾಲ್ಕು ನಾಲ್ಕು ವರ್ಷಕ್ಕೆ ಊರಿಂದೂರಿಗೆ ಫುಟ್‌ಬಾಲ್‌ನಂತೆ ಸರಕಾರ ಒದ್ದಲ್ಲಿಗೆ ಗಂಟುಮೂಟೆ ಕಟ್ಟಿಕೊಂಡು ತಿರುಗಾಡುತ್ತಿರಬೇಕು. ಅಷ್ಟೆ" ಎಂದು ಬಿಟ್ಟ, ಇನ್ನೂ ಹೆಚ್ಚಿನ ನಿರಾಶೆಯ ಧ್ವನಿಯಲ್ಲಿ.

ಈ ಉಪಾಧ್ಯಾಯರಿಗೆ ಮೂವತ್ತಾರು ವರ್ಷಕ್ಕಾಗಲೆ ಏಳು ಮಕ್ಕಳಂತೆ; ತುಮಕೂರು ಜಿಲ್ಲೆಯವನಂತೆ. ಇವನಿಗೆ ಕೆಲಸ ಸಿಕ್ಕದ್ದು ಚಿತ್ರದುರ್ಗ ಜಿಲ್ಲೆಯಲ್ಲಿನ ಯಾವುದೋ ಊರಿನಲ್ಲಿ. ಅಲ್ಲಿ ಹದಿನಾರು ವರ್ಷಕ್ಕಾಗಲೇ ಐದಾರು ಊರು ತಿರುಗಿ ತಿರುಗಿ ಈಗ ಡಿಪಾರ್ಟಮೆಂಟಿನಿಂದ ಟ್ರೈನಿಂಗಿಗೆ ಆರಿಸಲ್ಪಟ್ಟು ಹೊಟ್ಟೆನೋವಿನಿಂದ ಬಳಲುತ್ತಲೇ ಓದುತ್ತ ಶಿವಮೊಗ್ಗದಲ್ಲಿ ಕಾಲ ಕಳೆಯುತ್ತಿದ್ದನೆಂಬುದು ನನಗೆ ಆಮೇಲೆ ತಿಳಿಯಿತು.ದೈಹಿಕವಾಗಿ ತೊಂದರೆಗೊಳಗಾದವರಿಗೆ ಮತ್ತು ಕುಟುಂಬದ ಭಾರದಿಂದ ಬಳಲಿ ಬೆಂಡಾದವರಿಗೆ ಇಂಥ ನಿರಾಶೆ ಸಹಜವೇ ಅಲ್ಲವೆ? ನನಗೆ ಅಂಥ ನನ್ನ ವೈಯುಕ್ತಿಕ ಕೌಟುಂಬಿಕ ಭಾರವಿರಲಿಲ್ಲವಲ್ಲ! ನನಗೇನು ಗೊತ್ತು ಅದರ ಅನುಭವ. ಆಗ ನಾನು ಅವರ ಮಾತುಗಳಿಂದ ನಗುತ್ತಲೇ "ಏಕೆ, ಮೇಷ್ಟ್ರೇ ಕನ್ನಡಪಂಡಿತ ಪರೀಕ್ಷೆ ಓದಬಹುದಲ್ಲ! ವಿಟಿಸಿ ಆಗದ ವಿನಾ ಕನ್ನಡ ಪಂಡಿತ ಪರೀಕ್ಷೆಗೆ ಆರಿಸುವುದಿಲ್ಲವಲ್ಲಂತೆ. ಅದಕ್ಕಾಗಿ ಇದನ್ನು ಮುಗಿಸಿ ಮುಂದೆ ಅಲ್ಲಿ ಹಾರಬೇಕೆಂದು ನನ್ನ ಮುಖ್ಯ ಗುರಿ ಎಂದೊಡನೆ ಅವರು ನಕ್ಕು "ಓಹೋ! ಹಾಗೋ!" ಆದರೆ ಕನ್ನಡ ಪಂಡಿತ ಪರೀಕ್ಷೆಗೆ ಸೀಟು ದೊರಕಿಸಿಕೊಳ್ಳುವುದು ನಿಮ್ಮ ಹಣೆಬರಹದಲ್ಲಿಯೂ ಇಲ್ಲ. ಅದು ಬಡವರು ಕುಡಿಯೋ

ಗಂಜಿಯಲ್ಲ. ಅದಕ್ಕೂ ಏನೇನೋ ಬೇರೆ ಬೇರೆ ಅರ್ಹತೆಗಳಿರಬೇಕು. ನಿಮ್ಮಂಥವರು ಎಷ್ಟೇ ಹಾರಾಡಿದರೂ ಸಾಧ್ಯವಿಲ್ಲ. ಆ ಹಂಬಲು ಬಿಟ್ಟು ಬೇರೆ ಏನಾದರೂ ಯೋಚನೆ ಮಾಡಿ" ಎಂದು ಕಡ್ಡಿಮುರಿದಂತೆ ನುಡಿದು "ನೋಡ್ರಿ ಮಿಸ್ಟರ್, ನೀವು ಔಟ್ ಆಫ್ ಸ್ಟೇಟಿನವರು. ಇಡೀ ಸ್ಟೇಟಿನಿಂದ ಅಲ್ಲಿ ಆರಿಸುವುದೇ ನಾಲ್ಕು ಜನರನ್ನು. ಒಂಬತ್ತೂ ಜಿಲ್ಲೆಗಳಿಂದ ಆರಿಸುವ ಆ ಕೋರ್ಸಿಗೆ ನೀವು ಸೆಲೆಕ್ಟ್ ಆಗುವುದು ಸಾಧ್ಯವೇ ಇಲ್ಲ. ಮೇಲಾಗಿ ಅಲ್ಲಿಗೆ ಕೇವಲ ಡಿಪಾರ್ಟಮೆಂಟಿನಲ್ಲಿ ಸರ್ವೀಸ್‌ನಲ್ಲಿರುವವರೇ ಆರಿಸಲ್ಪಡುವುದು! ಔಟ್ ಆಫ್ ಸ್ಟೇಟಿನವರಾದ ನಿಮಗೆ ಕೆಲಸ ಕೊಟ್ಟರೆ, ಆಮೇಲೆ ನೀವು ಖಾಯಂ ಉಪಾಧ್ಯಾಯರಾದರೆ, ಅಲ್ಲಿ ನಡೆಯುವ ಸೆಲೆಕ್ಷನ್ ಪರೀಕ್ಷೆಯಲ್ಲಿ ನಾಲ್ಕು ರ್‍ಯಾಂಕಿನಲ್ಲಿ ಒಂದು ರ್‍ಯಾಂಕ್ ಗಳಿಸಿದರೆ ತಾನೆ? ಈ ಹುಚ್ಚು ಸಾಹಸದ ಕನಸನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಡಿ. ಹೇಗಿದ್ದರೂ ವಿಟಿಸಿ ಮಾಡಿಕೊಳ್ಳುತ್ತೀರಿ. ಇಂಟಲಿಜಂಟ್ ಸ್ಟೂಡೆಂಟ್. ಆದ್ದರಿಂದ ಫಸ್ಟ್‌ಕ್ಲಾಸೋ, ರ್‍ಯಾಂಕೋ ಹೊಡೆಯುತ್ತೀರಿ. ಆಮೇಲೆ ನೀವು ಎಲ್ಲಿಯವರೇ ಆಗಿದ್ದರೂ ಮೇಷ್ಟ್ರ ಕೆಲಸವಂತೂ ನಮ್ಮ ಸ್ಟೇಟಿನಲ್ಲಿ ಸಿಗುತ್ತೆ ಎಂದು ಮಾತ್ರ ಹೇಳಬಲ್ಲೆ" ಎಂದು ಪಂಡಿತ ಪರೀಕ್ಷೆಯ ಸ್ಥಾನ ಪಡೆಯುವುದು ಘನಸಾಹಸದ ಕೆಲಸವೆಂಬುದನ್ನು ವಿಶ್ಲೇಷಿಸಿ ಹೇಳಿದರು. ಅವರ ಮಾತು ನಿಜವೂ ಆಗಿತ್ತು. ಆದರೆ ನಾನು ಸಾಮಾನ್ಯವಾದ ಸಾಹಸಿಯಲ್ಲ. ವಿಶೇಷ ಸಾಹಸದ ನೀರು ಸಿಗುವವರೆಗೂ ಬೋರು ತೋಡಿ ನೀರು ತೆಗೆದೇ ತೆಗೆಯುತ್ತೇನೆಂಬ ಹಟದ ಮನುಷ್ಯ. ನನ್ನ ಪೂರ್ಣಪರಿಚಯ ಅವರಿಗಿದ್ದಿಲ್ಲ.

ಸಾಧ್ಯವಿಲ್ಲದ್ದನ್ನು ಸಾಧ್ಯಮಾಡಿಕೊಳ್ಳುವ ಮಹಾಸಾಹಸವೇ ಹುಟ್ಟುಗುಣವಾಗಿದ್ದ ನನಗೆ ಆಗ ಸ್ವಲ್ಪ ಅಳುಕಾದರೂ "ಏನಾದರೂ ಮಾಡಿ ಆ ಸ್ಥಾನವನ್ನು ನಾನು ಪಡೆಯಲೇಬೇಕು. ಮೇಷ್ಟ್ರೇ. ಈ ವಿಟಿಸಿಯಲ್ಲಿ ನಾನು ರ್‍ಯಾಂಕ್ ಗಳಿಸಬಲ್ಲೆ. ರ್‍ಯಾಂಕ್ ಪಡೆದವರಿಗೆ ಆ ಪರೀಕ್ಷೆಗಾಗಿ ಓದಲು ಮೊದಲ ಪ್ರಾಶಸ್ತ್ಯ ಕೊಡುವುದಿಲ್ಲವೇನು?" ಎಂದೆ. ಅವರು ಅದಕ್ಕೂ ಡಿ.ಪಿ.ಐ. ವರಿಗೆ ಹೇಳಿಕೊಡಿಸುವವರು ಒಬ್ಬರು ಇರಬೇಕು. ಅದು ದೊಡ್ಡ ಪೈಪೋಟಿಯ ಸ್ಥಾನ. ಸೆಲೆಕ್ಷನ್ ಪರೀಕ್ಷೆಗೆ ನೂರಾರು ಜನ ಘಟಾನುಘಟಿಗಳು ಬರುತ್ತಾರೆ. ಸಂಸ್ಕೃತ ಬಲ್ಲವರು, ಇಂಗ್ಲೀಷ್ ಬಲ್ಲವರು ಬರುತ್ತಾರೆ. ನೀವು ಸಂಸ್ಕೃತ ಓದಿದ್ದೀರಾ? ಇಂಗ್ಲೀಷ್ ಎಲ್ಲಿಯವರೆಗೆ ಆಗಿದೆ? ಎಂದರು. "ನನಗೆ ಸಂಸ್ಕೃತ ಗೊತ್ತಿಲ್ಲ, ಇಂಗ್ಲೀಷಂತೂ ಸೊನ್ನೆ, ಸ್ವಲ್ಪ ಹಿಂದೀ ಓದಿದ್ದರಿಂದ ಸಂಸ್ಕೃತದ ಅಕ್ಷರ ಗೊತ್ತು, ಬರೆಯಬಲ್ಲೆ. ಆದರೆ ಭಾಷಾಜ್ಞಾನ ಇಲ್ಲ" ಎಂದೆ. ಆಗ "ಮೇಷ್ಟ್ರೆ ಅದಕ್ಕೇ ಹೇಳಿದ್ದು. ಆ ಕೋರ್ಸೇನೋ ಒಳ್ಳೇದೇ? ನಾಲ್ಕು ವರ್ಷ ಓದಿದವರೆಲ್ಲ ಅಲ್ಲಿಂದ ತೇರ್ಗಡೆ ಹೊಂದಿಯೇ ಬರುತ್ತಾರೆಂದು ಇಟ್ಟುಕೊಳ್ಳೋಣ. ಬಂದೊಡನೆ ಹೈಸ್ಕೂಲ್ ಸಿಕ್ಕೇ ಸಿಗುತ್ತದೆ. ಅದೆಲ್ಲ ಸರಿ. ಆದರೆ, ಅದೇ ಹೇಳಿದೆನಲ್ಲಾ! ನೀವು ಇಲ್ಲಿ ಡಿಪಾರ್ಟಮೆಂಟಿಗೆ ಸೇರಿಕೊಂಡು ಕನ್‌ಫರ್ಮ್ ಆದ ಮೇಲೆ ಆ ಪ್ರಯತ್ನಮಾಡಬಹುದು" ಎನ್ನುತ್ತ ಸ್ವಲ್ಪ ಹೊತ್ತು ಸ್ತಬ್ಧರಾಗಿ ಯೋಚಿಸುತ್ತ ಕುಳಿತರು. ನಾನು "ಹಾಗೇ ಮಾಡಿದರಾಯಿತು" ಎನ್ನುತ್ತಿದ್ದಂತೆ ಅವರು ನನ್ನ ದೃಢತೆಯನ್ನು ಕಂಡು "ನಾನು ಒಂದು ಯುಕ್ತಿ ಹೇಳುತ್ತೇನೆ ಅದರಂತೆ ಮಾಡುತ್ತೀರಾ?" ಎಂದರು. "ಹೇಳಿ ಸ್ವಾಮಿ, ಆಪ್ತ ಸಲಹೆ, ವಾಕ್ಯ, ಸಂದೇಶಗಳು ಯಾವ ಮೂಲೆಯಿಂದ ಬಂದರೂ ಯಾವಾಗಲೂ ಶಿರಸ್ಸಿನಿಂದ ಧರಿಸುವ ಮನುಷ್ಯ ನಾನು, ಅಪ್ಪಣೆ ಕೊಡಿಸಿ" ಎಂದು ಬಿಟ್ಟೆ.

"ನೋಡ್ರಿ, ತುಮಕೂರು ಹತ್ತಿರ ಸಿದ್ಧಗಂಗಾ ಕ್ಷೇತ್ರವೊಂದಿದೆ. ನೀವು ಅದರ ಹೆಸರು ಕೇಳಿರಬಹುದು. ಆ ಮಠಾಧಿಪತಿಗಳಾದ ಶ್ರೀ ಶಿವಕುಮಾರಸ್ವಾಮಿಗಳು ಮಹಾ ಅಂತಃಕರಣಿಗಳು. ನಿಮ್ಮಂತಹ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಕಂಡರಂತೂ ಬಹಳ ಪ್ರೀತಿ. ಮಹಾಸಮಾಜಾಭಿಮಾನಿಗಳು. ಅವರ ಬೆನ್ನಿಗೆ ಬಿದ್ದರೆ ನಿಮ್ಮ ಈ ಬಯಕೆ ಈಡೇರುತ್ತದೆ. ಇಲ್ಲದಿದ್ದರೆ ಪಂಡಿತ ಪರೀಕ್ಷೆಗೆ ಸೀಟು ದೊರಕಿಸಿಕೊಳ್ಳುವುದಕ್ಕೆ ನಿಮಗೆ ಸಾಧ್ಯವೇ ಇಲ್ಲವೆಂದು ಕಯ್ಯಲ್ಲಿ ಕಡ್ಡಿಕೊಟ್ಟು ಹೇಳಬಲ್ಲೆ. ನೀವು ಹೇಗಿದ್ದರೂ ಪ್ರೈವೇಟಿನವರು. ಅಷ್ಟೇ ಅಲ್ಲ, ಫೀಜು ಕೊಟ್ಟು ಓದುವವರು, ಸ್ವತಂತ್ರರು, ಇಲ್ಲಿಂದ ಟ್ರಾನ್ಸ್‌ಫರ್ ಸರ್ಟಿಫಿಕೇಟ್ ತಕ್ಕೊಂಡು ಹೋಗಿ ತುಮಕೂರು ನಾರ್ಮಲ್ ಸ್ಕೂಲಿಗೆ ಸೇರಿ 3ನೇ ವರ್ಷ ಅಲ್ಲೇ ಅಭ್ಯಾಸ ಮಾಡಬಹುದು. ಶ್ರೀ ಶಿವಕುಮಾರಸ್ವಾಮಿಗಳವರ ಆಶ್ರಯದಲ್ಲಿ ಅಶನವಸತಿಗಳನ್ನು ಮಠದಲ್ಲಿ ಪುಕ್ಕಟೆಯಾಗಿಯೂ ಪಡೆಯಬಹುದು" ಎಂದು ಯಾವ ಸುಮುಹೂರ್ತದಲ್ಲಿ ಹೇಳಿದನೋ ಆ ಕ್ಷಣದಲ್ಲಿ ನನ್ನ ಮನಸ್ಸು ಉತ್ತೇಜಿತಗೊಂಡು ಹೋಯಿತು. ನಾನು ಶ್ರೀ ಶಿವಕುಮಾರಸ್ವಾಮಿಗಳ ಕೀರ್ತವಾರ್ತೆಗಳನ್ನು 1936ನೇ ಇಸ್ವಿಯಿಂದ ಕೇಳಿದವನು. ಆ ಕ್ಷೇತ್ರ, ಅಲ್ಲಿನ ದಾಸೋಹ, ಅಲ್ಲಿನ ವಿದ್ಯಾರ್ಥಿಗಳ ಸಮೂಹ ಮೊದಲಾದ ಪವಾಡ ಸದೃಶ ಮಹತ್ತು ಬೃಹತ್ತುಗಳನ್ನು ಪತ್ರಿಕೆ ಮತ್ತು ಜನಜನಿತ ಸುದ್ದಿ ಮಾಧ್ಯಮಗಳಿಂದ ಕೇಳಿ ತಿಳಿದವನಾಗಿದ್ದೆ.

1936ನೆಯ ಇಸ್ವಿಯಲ್ಲಿ ನಮ್ಮೂರ ಭದ್ರಣ್ಣನವರ ಫಕ್ಕಿರಪ್ಪನ ಒಬ್ಬ ಮಗ ಗಿರಮಲ್ಲಪ್ಪ ಎಂಬುವನು ಮನೆಯ ಹಿಂಸೆ ತಾಳಲಾರದೆ ತನಗೆ ತಾನೇ ಕಾವಿಕಪನಿ ಧರಿಸಿಕೊಂಡು ದಂಡ ಕಮಂಡಲು ಹಿಡಿದು ಹೆಂಡಿರು ಮಕ್ಕಳನ್ನು ಬಿಟ್ಟು ಓಡಿ ಹೋಗಿ ಬಿಟ್ಟಿದ್ದ. ಈ ವೇಷ ಹಾಕಿದವರಿಗೆ ಲೋಕದಲ್ಲಿ ಅಲ್ಲಿ ಇಲ್ಲಿ ಅನ್ನ ಅರಿವೆಗಳಿಗೆ ದಾರಿಯಾಗುವುದಲ್ಲವೆ! ಸಾಮಾನ್ಯಉಡುಪು ಧರಿಸಿದವರನ್ನಾರು ಕೇಳಬೇಕು? ಅವನು ಹೋದದ್ದು ಮುಖ್ಯವಾಗಿ ಅವರ ಅಪ್ಪ ಮತ್ತು ಮಲತಾಯಿ ಹಿಂಸೆಯಿಂದ. ಎಷ್ಟೇ ಆಗಲಿ ತಂದೆಯ ಹೊಟ್ಟೆ ಚುರ್ ಎನ್ನದೆ ಇರುತ್ತದೆಯೇ? ಆ ಕಪಟ ಸಂನ್ಯಾಸಿಯನ್ನು ಅಲ್ಲಿ ಇಲ್ಲಿ ಹುಡುಕಾಡಿ ಬಂದಿದ್ದ. ಅವನಿಗೆ ಯಾವನೋ ನಿಮ್ಮ ಮಗ ಸಿದ್ಧಗಂಗಾ ಮಠದಲ್ಲಿದ್ದಾನೆಂದು ಸುಳ್ಳು ಹೊಡೆದು ಬಿಟ್ಟಿದ್ದ. ಫಕ್ಕೀರಪ್ಪ ನನ್ನ ಹತ್ತಿರ ಬಂದ. ಆಗ ನಾನು ನಮ್ಮೂರಲ್ಲೇ ಮುಲ್ಕೀ ಪರೀಕ್ಷೆ ಪಾಸಾಗಿದ್ದ ದೊಡ್ಡ ವಿದ್ಯಾವಂತ. ಒಂದು ದೃಷ್ಟಿಯಿಂದ ಸರ್ವಜ್ಞ ತಾನೆ! "ಏ ತಮ್ಮಾ ನೋಡಪಾ, ಒಂದು ವಿಷಯ. ನಮ್ಮ ಗಿರಿಮಲ್ಲಪ್ಪ ಮತ್ತ ಅಲ್ಲೆಲ್ಲೋ ಸಿದ್ಧಗಂಗಾ ಮಠಾ ಅಂತ ಐತೆಂತಲ್ಲಾ! ಅಲ್ಲಿ ಅದಾನಂತ ನೋಡು! ಆ ಮಠ ಎಲ್ಲೈತಿ ಅನ್ನೋದೇನರ ನಿನಗ ಗೊತ್ತೈತೇನು?" ಅಂದ. ಚೆನ್ನಾಗಿ ಗೊತ್ತಿರದಿದ್ದರೂ ನಾನು ಒಂದು ಅಂದಾಜನಿಂದ ಗೊತ್ತೈತಿ ಅನ್ನುವ ಮನುಷ್ಯ ತಾನೆ "ಗೊತ್ತೈತಿ. ತುಮಕೂರ ಹತ್ತಿರವೇ ಆ ಮಠ ಇರೋದು. ಅಲ್ಲಿ ಶಿವಕುಮಾರ ಸ್ವಾಮಿಗಳು ಅನ್ನುವವರು ಇದ್ದಾರೆ. ಅವರು ಮಹಾಮಹಿಮರು" ಎಂದು ಇನ್ನು ನಾಲ್ಕಾರು ಮಾತು ಪೋಣಿಸಿ ಹೇಳಿಬಿಟ್ಟೆ. ಅವನು ಕೈಯಲ್ಲಿ ಒಂದು ಪೋಷ್ಟ್ ಕಾರ್ಡ್ ಹಿಡಿದೇ ಬಂದಿದ್ದ. "ಹಾಂಗಾರ ತಮ್ಮ ನೋಡಪಾ ಮತ್ತ ಈ ಕಾಲ್ಡು ತಂದೇನಿ. ಇವರಾಗ ಅಲ್ಲಿಗೆ ಬಂದು ಪತ್ರ ಬರ್ದು ಇಂಥಾವಾ ಮನಿ ಬಿಟ್ಟು ಓಡಿ ಹೋಗ್ಯಾನ. ಅಂವಾ ನಿಮ್ಮಲ್ಲಿಗೆ ಬಂದಿದಾನೋ ಏನೋ ತಿಳಿಸ್ರಿ ಅಂತಾ ಬರ್ದು ಹಾಕಿಬಿಡಬಾರ್ದ?" ನನ್ನ ಕೈಗೆ ಕಾರ್ಡು ಕೊಟ್ಟ. ನಾನು ಆ ಕಾರ್ಡಿನಲ್ಲಿ ಒಳ್ಳೆ ದುಂಡಾದ ಅಕ್ಷರಗಳಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಪತ್ರಬರೆದೆ. ನಾನು ಬಾಲ್ಯದಿಂದ ವಿರಕ್ತ ಸ್ವಾಮಿಗಳವರ ಹತ್ತಿರ

ಇದ್ದ ಮನುಷ್ಯನೇ ಅಲ್ಲವೇ! ಜೋರಾಗಿ ಒಕ್ಕಣಿಕೆ ಎಲ್ಲಾ ಬರೆದು ಈ ವಿಷಯವನ್ನೆಲ್ಲಾ ವಿವರಿಸಿ ಕಾಗದ ಬರೆದು ಕೈಯಲ್ಲೇ ಕೊಟ್ಟೆ. ಒಂದು ಕಾರ್ಡು ಹಾಕುವುದಕ್ಕೂ ನಮ್ಮೂರಿಂದ ಒಂಬತ್ತು ಮೈಲುದೂರದ ಹಾವೇರಿಗೋ ಆರುಮೈಲು ದೂರದ ಬಂಕಾಪುರಕ್ಕೋ ಹೋಗಬೇಕಾಗಿತ್ತು. ಹೋಗಿ ಹಾಕಿ ಬಂದ. ನಮ್ಮೂರಿಗೆ ವಾರದಲ್ಲಿ ಬುಧವಾರ ಒಂದು ದಿನ ಮಾತ್ರ ಪೋಸ್ಟ್‌ಮನ್ ಬರುತ್ತಿದ್ದ. ಅದೂ ಪತ್ರಗಳಿದ್ದರೆ ಮಾತ್ರ, ಇಲ್ಲದಿದ್ದರೆ ಕಾಕಿ ಬಟ್ಟೆಯ ಆ ಪೋಸ್ಟ್ ಮನ್ ಮಹಾಶಯನನ್ನು ನಾವು ನೋಡುವಂತೆಯೇ ಇರಲಿಲ್ಲ. ನಾವು ಬರೆದು ಹಾಕಿದ ಕಾಗದ ನಮ್ಮೂರ್ ಪಟೇಲ್ ಗೌಡ ಪೀರುಸಾಬನಿಂದ ತಲುಪಿತು. ಅವನು "ಏ ತಮ್ಮಾ ಚನ್ನಪ್ಪ, ನೋಡಪಾ. ಈ ದಿನ ನಾನು ನರೇಗಲ್ಲಿಗೆ ಹೋಗಿದ್ದೆ. ಅಲ್ಲಿ ಪೋಸ್ಟ್‌ಮನ್ ಸಿಕ್ಕಿದ್ದ. ನಿನಗೆ ಎಲ್ಲಿಂದಲೋ ಬಂದ ಈ ಕಾಗದ ಕೊಟ್ಟ, ತಗೋಪ್ಪಾ" ಎಂದು ಹೇಳಿಕೊಟ್ಟ. ನಮ್ಮ ಮನೆಯಲ್ಲಿ ನಮ್ಮ ತಂದೆಯೊಡನೆ ಸ್ವಲ್ಪ ಹರಟೆ ಹೊಡೆಯುತ್ತಿದ್ದಂತೆ ನಾನು ಕಾಗದ ಬಿಚ್ಚಿ ನೋಡಿದೆ. ಬಹುಮುದ್ದಾದ ಅಕ್ಷರಗಳಲ್ಲಿ ಸ್ವತಃ ಶಿವಕುಮಾರಸ್ವಾಮಿಗಳವರೇ ತಮ್ಮ ಲೆಟರ್‌ಹೆಡ್‌ನಲ್ಲಿ ನಾವು ಕಾರ್ಡಿನಲ್ಲಿ ಬರೆದರೂ ಅದೇ ದಿನದಲ್ಲಿ ಉತ್ತರ ಕಳಿಸಿದ್ದಾರಲ್ಲ! ಎಂದು ಬಹಳ ಆಶ್ಚರ್ಯಗೊಂಡೆ. ಅಲ್ಲೇ ಇದ್ದ ಪೀರೂಗೌಡ "ತಮ್ಮ ಚನ್ನಪ್ಪ, ಎಲ್ಲಿಂದ ಬಂದ ಕಾಗದ ಅದು?" ಎಂದ. ನಾನು ಕಾಗದ ತೋರಿಸಿ "ಇದು ಸಿದ್ಧಗಂಗಾ ಮಠದ ಶಿವಕುಮಾರಸ್ವಾಮಿಗಳು ಬರೆದದ್ದು. ನಮ್ಮೂರ ಭದ್ರಣ್ಣನವರ ಗಿರಿಮಲ್ಲಪ್ಪ ನಿಮ್ಮ ಮಠದಲ್ಲಿ ಇದ್ದಾನೆಯೇ ಹೇಗೆ ಎಂದು ಬರೆದಿದ್ದೆ ಅದಕ್ಕೆ ಉತ್ತರವಾಗಿ 'ನಮ್ಮ ಮಠದಲ್ಲಿ ನೀವು ಬರೆದ ಚಹರೆಯ ಮನುಷ್ಯರಾರೂ ಬಂದಿಲ್ಲ' ಎಂದು ಬರೆದಿದ್ದಾರೆ" ಎಂದೆ. ಅವರ ಪತ್ರದಲ್ಲಿ ನನ್ನ ಊಹೆಗೂ ನಿಲುಕದ ಒಂದು ಆತ್ಮೀಯತೆಯಿತ್ತಾಗಿ ನಾನು ಬಹುಶಃ ಕಾಗದದಲ್ಲಿ ಸ್ವಲ್ಪ ಬಾಂಧವ್ಯದ ನಂಟು ಹಚ್ಚಿ ಬರೆಸಿದೆನೆಂದು ಜ್ಞಾಪಕ. ನಮ್ಮ ಊರು ನಿಮ್ಮ ಮಠದ ಲಿಂಗೈಕ್ಯ ಅಡವೀಸ್ವಾಮಿಗಳು ಪೂರ್ವದಲ್ಲಿ ಇದ್ದ ಕೂಡಲಿ ಗ್ರಾಮದ ಸಮೀಪದ ಹಳ್ಳಿ ಎಂದು ಬರೆದದ್ದು ಜ್ಞಾಪಕ. ಈ ವಿಷಯವನ್ನು ಕೂಡಲದ ನಮ್ಮ ಮಾವ ನಿಸ್ಸೀಮಪ್ಪ ಎಂಬುವನು ಆಗಾಗ ನನಗೆ ಕಥೆ ಮಾಡಿ ಹೇಳುತ್ತಿದ್ದ. ಕೂಡಲದವರಿಗೆ ಸಿದ್ಧಗಂಗಾ ಮಠದ ಪರಿಚಯ ಇತ್ತಂತೆ. ಹಿಂದೆ ಅಲ್ಲಿಗೇ ಅಡವೀಸ್ವಾಮಿಗಳನ್ನು ಕಾಣಲು ಯಾರೋ ಹೋಗಿ ಬಂದಿದ್ದರಂತೆ. ಈ ಕಥೆಯನ್ನೆಲ್ಲ ಕೇಳಿದ್ದೆ. ಈ ಸಂಬಂಧ ಹಚ್ಚಿ ಕಾಗದದಲ್ಲಿ ವಿವರಿಸಿದ್ದೆನೆಂದು ತೋರುತ್ತದೆ. ಆದ್ದರಿಂದಲೇ ಶಿವಕುಮಾರಸ್ವಾಮಿಗಳು ಇಷ್ಟು ಬೇಗನೆ ನನಗೆ ಕಾಗದ ಬರೆದಿದ್ದಾರೆಂದು ತರ್ಕಿಸುತ್ತೇನೆ. ಆ ಪತ್ರವನ್ನು ಬಹಳ ದಿನಗಳವರೆಗೆ ಕಾಯ್ದಿಟ್ಟಿದ್ದೆ. ಕಾಯ್ದಿಡಬೇಕಾಗದ ಕಾಗದ ಅದು.

ಇದನ್ನೆಲ್ಲ ನೆನೆದು ಮೇಷ್ಟ್ರಿಗೆ "ನನಗೆ ಒಳ್ಳೇ ಮಾರ್ಗ ತೋರಿಸಿದಿರಿ. ಶಿವಕುಮಾರ ಸ್ವಾಮಿಗಳು ಬಹಳ ದೊಡ್ಡವರು. ನಾನು ಇದೇ ದಿನವೇ ಅಲ್ಲಿಗೆ ಕಾಗದ ಬರೆಯುತ್ತೇನೆ. ನನ್ನ ನಿಸ್ಸಹಾಯಕ ಸ್ಥಿತಿಯನ್ನು ಅವರಲ್ಲಿ ತೋಡಿಕೊಳ್ಳುತ್ತೇನೆ ಅವರು ಆಶ್ರಯ ಕೊಡುತ್ತೇನೆಂದರೆ ಹೋಗಿ ಆ ಪವಿತ್ರ ಕ್ಷೇತ್ರದಲ್ಲಿಯೇ ಇದ್ದು ತುಮಕೂರಿನಲ್ಲಿ ಮೂರನೆಯ ವರ್ಷದ ವಿ.ಟಿ.ಸಿ ಓದಿ ಮುಂದೆ ಪ್ರಯತ್ನಿಸುತ್ತೇನೆ" ಎಂದು ಹೇಳಿ, ಅವರೊಡನೆ ಅದೇ ಸುದ್ದಿಯನ್ನೇ ಮಾತನಾಡುತ್ತ ವಿಶೇಷ ವಿಷಯಗಳನ್ನು ತಿಳಿದುಕೊಳ್ಳುತ್ತ ಮಹಾಬಲಯ್ಯನ ಹೋಟೆಲ್ ಕಡೆ ಕರೆದುಕೊಂಡು ಹೋಗಿ ತಿಂಡಿ ತಿನ್ನಿಸಿ ಹಾಗೆ ತುಂಗಾನದಿಯ ಕಡೆ ಹೋಗಿ ತುಮಕೂರಿನ ಜನ ಅಲ್ಲಿಯ ಸಂಸ್ಕೃತಿ, ಸಿದ್ಧಗಂಗಾ ಕ್ಷೇತ್ರದ ಕೀರ್ತಿವಾರ್ತೆ, ಅಲ್ಲಿನ ಜೀವನ ಪದ್ಧತಿ ಎಲ್ಲವನ್ನು ತಿಳಿದೆ.

ಏಕೆಂದರೆ ದೂರದ ದೇಶ ತಾನೆ. ತುಮಕೂರು ಎಂದರೆ ನನಗೆ ಆಗ ಯಾವುದೋ ಮೋಡದ ಅಂಚಿನ ದೂರದಲ್ಲಿ ಇರುವ ದೇಶದ ಒಂದು ಊರಾಗಿ ತೋರಿತ್ತು. ಶಿವಮೊಗ್ಗೆಯೇ ನನಗೆ ಆಗ ಅತ್ಯಂತ ದೂರದ ಒಂದು ಮಹಾನಗರವೆನಿಸಿತ್ತು.

ಆ ರಾತ್ರಿಯೆಲ್ಲಾ ನನಗೆ ಅದೇ ಯೋಚನೆ. ಏನೆಂದು ಕಾಗದ ಬರೆಯಲಿ, ಒಕ್ಕಣಿಕೆ ಹೇಗಿರಬೇಕು. ಪತ್ರದ ವಿಷಯವನ್ನು ಹೇಗೆ ಬೆಳೆಸಬೇಕು ಎಂಬ ಯೋಚನೆಯಲ್ಲಿಯೇ ನಿದ್ರೆ ಹತ್ತಿತ್ತು. ಆ ಸಂಬಂಧದ ಕನಸನ್ನು ಕಂಡೆ. ನಸುಕಿನ ಪ್ರಶಾಂತ ಗಂಭೀರ ಬ್ರಾಹ್ಮೀ ಮುಹೂರ್ತದಲ್ಲಿ ಶ್ರೀಮನ್ನಿರಂಜನ ನಿರಾಭಾರಿ ಪ್ರಣವಸ್ವರೂಪಿಗಳಾದ ಶ್ರೀ ಸಿದ್ಧಗಂಗಾ ಮಹಾಕ್ಷೇತ್ರದ ಶಿವಕುಮಾರ ಸ್ವಾಮಿಗಳವರ ಚರಣಸನ್ನಿಧಿಯಲ್ಲಿ ತ್ರಿಕಾಲ ದೀರ್ಘದಂಡ ಪ್ರಣಾಮಗಳು - ಎಂದು ಒಕ್ಕಣಿಕೆ ಬರೆದೆನೆಂದು ಜ್ಞಾಪಕ. ಮುಂದಿನ ವಾಕ್ಯ ಸಂಯೋಜನೆಗಳು ನೆನಪಿಲ್ಲ. ಬಹುಶಃ ನನ್ನ ಊರು ಇಂಥಾದ್ದು; ನಿಮ್ಮ ಅಡವೀಸ್ವಾಮಿಗಳು ಪೂರ್ವದಲ್ಲಿ ಇದ್ದ ಕೂಡಲ ಸಂಗಮೇಶ್ವರ ಕ್ಷೇತ್ರದ ಸ್ಥಳದ ಪಕ್ಕದಲ್ಲಿಯೇ ಇರುವಂತಹುದು. ಇತ್ಯಾದಿಯಾಗಿ ಬರೆದಿರಬೇಕು. ಮುಂದೆ ನಾನಿಲ್ಲಿ ವಿಟಿಸಿ ಎರಡನೇ ವರ್ಷದಲ್ಲಿ ಓದುತ್ತಿದ್ದೇನೆ. ಇಲ್ಲಿ ಫೀಜುಕೊಟ್ಟು ಹೋಟೆಲಿನಲ್ಲಿ ಉಂಡು ಓದುವುದು ತುಂಬಾ ಖರ್ಚಿನದಾಗಿ ತೊಂದರೆಯಾಗಿದೆ; ಇಲ್ಲಿ ಮಲೇರಿಯಾ ಬೇರೆ ಅಧಿಕ... ಹಾಗೆ ಹೀಗೆ ಎಂದು ಬರೆದಿರಬೇಕು. ಮುಂದೆ ನಿಮ್ಮ ಮಠದಲ್ಲಿದ್ದು ತುಮಕೂರಿನಲ್ಲಿ ಓದಬೇಕೆಂಬಾಸೆ, ನನಗೆ ನಿಮ್ಮ ಸನ್ನಿಧಿಯಲ್ಲಿ ಇದ್ದು ಓದಬೇಕೆಂಬ ಬಯಕೆ ಇತ್ಯಾದಿ ಬರೆದಿರಬಹುದು. ಒಂದಾಣೆ ಖರ್ಚುಮಾಡಿ ಕವರು ತಂದು ಕವರಿನಲ್ಲಿ ಸರಿಯಾಗಿ ಅಡ್ರೆಸ್ಸು ಬರೆದು ನನ್ನ ಅಡ್ರೆಸ್ಸನ್ನು ತಿಳಿಸಿ ಪೋಸ್ಟ್ ಡಬ್ಬಿಗೆ ಹಾಕಿಬಿಟ್ಟೆ. ಮುಂದೆ ಒಂದೇ ವಾರದಲ್ಲಿ ಶ್ರೀಗಳವರು ಪತ್ರ ಬರೆದು "ಸಕಾಲದಲ್ಲಿ ಬಂದು ನಮ್ಮ ಸಂಸ್ಥೆಗೆ ಸೇರಿಕೊಂಡು ನಿಮ್ಮ ವಿದ್ಯಾಭ್ಯಾಸ ಮುಂದುವರಿಸಬಹುದು" ಎಂದು ಬರೆದಿದ್ದು ತಾ. 9-10-44ನೆಯ ದಿನಾಂಕದ ನಂ. 413-44-45ರ ಪತ್ರ ಬಂದು ತಲುಪಿದಾಗ ನನ್ನ ಕಣ್ಣನ್ನೇ ನಾನು ನಂಬಲಿಲ್ಲ. ಇಂದಿಗೆ 44 ವರ್ಷವಾದರೂ ಆ ಪತ್ರ ನನ್ನ ಹತ್ತಿರ ಇದೆ. ಅದರ ಪೂರ್ಣಪಾಠ ಇದು :

ಓಂ

ಸಿದ್ದಗಂಗಾ
9-10-1944

ಶ್ರೀ ಶಿವಕುಮಾರಸ್ವಾಮಿಗಳು
ಸಿದ್ಧಗಂಗಾ
ತುಮಕೂರು ಜಿಲ್ಲೆ
ನಂ. 413/44-45

**ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶಿವಕುಮಾರಸ್ವಾಮಿಗಳು**

ಕೃಪಾಪಾತ್ರರಾದ ಚನ್ನಪ್ಪ ಮುದುಕಪ್ಪ ಎರೇಸೀಮೆಯವರಿಗೆ ಕೃತಾನೇಕಾಶಿಷಃ

ನಿಮ್ಮ ಪತ್ರ ಕೈಸೇರಿತು. ಪರಿಸ್ಥಿತಿಯು, ವಿದ್ಯಾರ್ಜನೆಯಲ್ಲಿ ನಿಮಗಿದ್ದ ತೀವ್ರಾಸಕ್ತಿಯು ಕೈಗೂಡದಂತೆ ಪ್ರತಿಬಂಧಕಗೊಳಿಸಿದುದು, ಆದರೂ ಅಂಜದೆ ಕಷ್ಟಗಳನ್ನೆದುರಿಸುತ್ತಾ ಅಭ್ಯಾಸವನ್ನು ಮುಂದುವರಿಸುತ್ತಿರುವುದೂ ಅರಿಕೆಯಾಯಿತು. ಶ್ರಮವಹಿಸಿ ವ್ಯಾಸಂಗಮಾಡಿ ಮುಂದುವರಿಯ ಲಪೇಕ್ಷೆಯುಳ್ಳವರಿಗೆ ಅನುಕೂಲ ಆಭಾವವೂ, ಸಮಸ್ತ ಅನುಕೂಲಗಳೂ ಇರುವವರಿಗೆ

ವ್ಯಾಸಂಗದಲ್ಲಿ ಉದಾಸೀನತೆಯೂ ಸಾಮಾನ್ಯವಾಗಿ ತೋರಿಬರುತ್ತಿದೆ. ತೊಂದರೆಗಳು ಬಂದರೂ ಅಭ್ಯಾಸವನ್ನು ಮಾಡಬೇಕೆಂಬ ದೃಢಸಂಕಲ್ಪದಿಂದ ನಿಮ್ಮ ಉದ್ದೇಶ ಸಾಧನೆಯಲ್ಲಿ ನಿರತವಾಗಿರುವ ಸಂಗತಿಯನ್ನು ತಿಳಿದು ತುಂಬಾ ಸಂತೋಷವಾಗುತ್ತದೆ.

ತುಮಕೂರಿಗೆ ವರ್ಗಾಯಿಸಿಕೊಳ್ಳಬೇಕೆಂಬ ಅಪೇಕ್ಷೆಯಿಂದ ಶ್ರೀಮಠದಲ್ಲಿ ಅಶನವಸತಿಗಳ ಸೌಕರ್ಯಕ್ಕಾಗಿ ಬಿನ್ನೈಸಿಕೊಂಡಿರುವಿರಿ. ಈಗುಂಟಾದ ವಿಷಮ ಪರಿಸ್ಥಿತಿಯಿಂದ ನಮ್ಮ ಪ್ರವೇಶದಲ್ಲಿ ಆಹಾರ ಸಮಸ್ಯೆ ಕಠಿಣವಾಗಿರುತ್ತದೆ. ಆಹಾರ ಸಾಮಗ್ರಿಗಳು ದೊರಕುವುದು ತುಂಬಾ ಪ್ರಯಾಸವಾಗಿರುತ್ತೆ. ಬಹಳ ಕಷ್ಟದಿಂದ ಸಂಸ್ಥೆಯನ್ನು ನಡೆಸುತ್ತಿರುವುದಾಗಿದೆ. ಆದರೂ ನಿಮ್ಮ ಅಸಹಾಯಕ ಸ್ಥಿತಿಯನ್ನು ತಿಳಿದು ಸಹಾಯಮಾಡಬಯಸುತ್ತೇವೆ. ಈ ವರ್ಷ ಅಲ್ಲಿಯೇ ನಿರ್ವಾಹ ಮಾಡಿ ಮುಂದಿನ ಸಂವತ್ಸರ ಸಕಾಲದಲ್ಲಿ ಬರಬಹುದು. ಅಲ್ಲಿ ನಿರ್ವಹಿಸುವುದು ಅವಶಕ್ಯವಾಗಿದ್ದರೆ ಬದಲಾಯಿಸಿಕ್ಕೊಂಡು ಬರಬಹುದು ಬಾಹುಳ್ಯ ಅನಾವಶ್ಯಕ

ಇತ್ಯಾಶಿಷಃ
**(ಶ್ರೀ ಶಿವಕುಮಾರ ಸ್ವಾಮಿಗಳು)**
(ಎಂದು ಇಂಗ್ಲೀಷಿನಲ್ಲಿ ಸಹಿ ಇದೆ)

ಇಂಥ ಆಪದ್ಬಂಧುವನ್ನು ಕಾರುಣ್ಯಹೃದಯವನ್ನು ಪರೋಪಕಾರ ಬುದ್ಧಿಯ ಮಹಾಮಾನವತ್ವವನ್ನು, ಉದಾರಚರಿತೆಯನ್ನು ಪರದುಃಖ ನಿವಾರಕ ಹೃದಯವನ್ನು ನಾನೆಲ್ಲಿಂದ ತರಲಿ! ಸಿದ್ಧಗಂಗಾ ಶ್ರೀಗಳವರ ಈ ಕಾಗದದಿಂದ ನನ್ನ ಜೀವನದಲ್ಲಿ ಇನ್ನೊಂದು ಅಭ್ಯುದಯ ಸಾಧನೆಯ ಅಧ್ಯಾಯ ಪ್ರಾರಂಭವಾಯಿತೆಂದೇ ನಾನು ಭಾವಿಸಿದೆ. ಬಹುಶಃ ನಾನು 1944ನೆಯ ಇಸ್ವಿಯ ನಾಲ್ಕು ಐದನೇ ತಾರೀಖಿನಂದು ಕಾಗದ ಬರೆದಿರಬಹುದು. ಅದು ಮುಟ್ಟಿದ ಕೂಡಲೆ 9-10-44ರಂದು ಬರೆದ ಈ ಕಾಗದ ಅದೇ ಅಕ್ಟೋಬರ್ 11ಕ್ಕೆ ತಲುಪಿರಬಹುದು. ಕಾಗದ ಬಂದೊಡನೆ ಅದನ್ನು ತೆಗೆದುಕೊಂಡು ಈ ಸಲಹೆಯನ್ನು ಕೊಟ್ಟ ಉಪಾಧ್ಯಾಯರ ಹತ್ತಿರ ಹೋಗಿ ತೋರಿಸಿದೆ. ಅವರು ಕಾಗದ ಓದಿ "ಹೇಳಲಿಲ್ಲವೆ ನಾನು, ಅವಶ್ಯವಾಗಿ ನಿನಗೆ ಸ್ವಾಮಿಗಳು ತಮ್ಮ ಮಠದಲ್ಲಿ ಉಚಿತ ಅಶನವಸತಿಯ ಸೌಕರ್ಯ ಮಾಡುತ್ತಾರೆ ಎಂದು! ಈ ವರ್ಷ ಇಲ್ಲಿ ಮುಗಿಸಿ ಮುಂದಿನ ಜೂನ್ ಒಂದನೆಯ ತಾರೀಖಿಗೆ ತುಮಕೂರು ನಾರ್ಮಲ್ ಸ್ಕೂಲಿಗೆ ಸೇರಿಬಿಡಿ. ಅಲ್ಲಿ ಹೇಗಿದ್ದರೂ ಕೃಷ್ಣಸ್ವಾಮಯ್ಯಂಗಾರ್ ಇದ್ದಾರೆ. ನೀವು ಹೋದರೆ ಸಾಕು, ಅವರು ನಿಮ್ಮನ್ನು ಬಹಳ ಮೆಚ್ಚಿಕೊಂಡು ಬಿಡುತ್ತಾರೆ. ಅವರು ಮಹಾರಸಿಕರು, ಸಹೃದಯರು, ನಾಟಕ ಪ್ರೇಮಿಗಳು. ನಿಮ್ಮಂಥ ಕಲಾವಿದರೇ ಅವರಿಗೂ ಬೇಕು. ನಮ್ಮ ಈ ಕಾಲೇಜಿನಲ್ಲಿರುವ ಕನ್ನಡ ಪಂಡಿತರೂ ಅವರು ಸಂಬಂಧಿಗಳು. ಇವರಿಂದಲೂ ಅವರಿಗೆ ಒಂದು ಕಾಗದವನ್ನು ಮುಂದಿನ ವರ್ಷ ನಿಮ್ಮ ಕಾಲೇಜಿಗೆ ಇಲ್ಲಿಂದ ನಮ್ಮ ವಿದ್ಯಾರ್ಥಿಯಾದ ಚನ್ನಪ್ಪ ಎರೇ ಸೀಮೆ ಅನ್ನುವರು ಟಿ.ಸಿ ತಕ್ಕೊಂಡು ಬರುತ್ತಾರೆ. ಅವರು ಒಳ್ಳೆಯ ಕಲಾವಂತರು, ಭಾಷಣಕಾರರು, ಕೀರ್ತನ ಕಲೆಯಲ್ಲಿ ನಿಪುಣರು. ರ್‍ಯಾಂಕ್ ಸ್ಟೂಡೆಂಟ್... ಇತ್ಯಾದಿ ಇತ್ಯಾದಿ ಬರೆಸಿ ಹಾಕಿಬಿಡೋಣ. ಅಲ್ಲಿ ನಿಮಗೆ ಅವರು ಸೀಟು ಕೊಟ್ಟೇ ಕೊಡುತ್ತಾರೆ" ಎಂದು ತಿಳಿಸಿದರು. ಶುಭಸ್ಯ ಶೀಘ್ರವೆಂದು ನಾನು ಉಪಾಧ್ಯಾಯರನ್ನು ಕೂಡಿಕೊಂಡು ಕನ್ನಡ ಪಂಡಿತರ ಮನೆಗೆ ಹೋದೆವು. (ಈ ಪಂಡಿತರ ಹೆಸರು ಮರೆತಿದೆ) ಅವರಿಗೆ ವಿಷಯ ತಿಳಿಸಿ ಪತ್ರವನ್ನು ಬರೆಸಿದೆವು.

ಕೃಷ್ಣಸ್ವಾಮಿಯ್ಯಂಗಾರರಿಂದ ಉತ್ತರವೂ ಪಂಡಿತರಿಗೆ ಬಂದಿತು. ಅವರು ಬಹಳ ಸಂತೋಷಗೊಂಡು "ನಾನೂ ಅವರ ಹೆಸರು ಕೇಳಿದ್ದೇನೆ. ಬರಲಿ. ಇಲ್ಲಿ ಸೀಟುಕೊಟ್ಟು ಅನುಕೂಲಮಾಡಿಕೊಡುತ್ತೇನೆಂದು" ತಿಳಿಸಿದರು. ನನಗೆ ಹಿಡಿಸಲಾದ ಸಂತೋಷವಾಯಿತು. ಉಪಾಧ್ಯಾಯರಿಗೆ ಧನ್ಯವಾದ ಸಲ್ಲಿಸಿದೆ.

ಹೀಗೆ ನನ್ನ ಜೀವನದಲ್ಲಿ ಅನೇಕ ಅನುಕೂಲಕರ ಸನ್ನಿವೇಶಗಳು ಹೆಜ್ಜೆ ಹೆಜ್ಜೆಗೂ ಸಂಘಟಿಸಿದವು. ಅದರಿಂದ ನಿರಾತಂಕವಾಗಿ ನನ್ನ ನಿಡುಗಾಲದ ಹೆಬ್ಬಯಕೆಯಾದ ಹೆಚ್ಚಿನ ವಿದ್ಯಾಭ್ಯಾಸಕ್ಕೆ ರಾಜಮಾರ್ಗವನ್ನೇ ಕಲ್ಪಿಸಿದುದು ನನ್ನ ಭಾಗ್ಯವೆಂದು ಭಾವಿಸಿದ್ದೇನೆ. ಈ ಮೊದಲೇ ಹೇಳಿದಂತೆ ನಾನು 2ನೇ ವರ್ಷದ ಪ್ರಥಮ ವಿ.ಟಿ.ಸಿ ಪರೀಕ್ಷೆಯನ್ನು ಯಶಸ್ವಿಯಾಗಿ ಮುಗಿಸಿ 2ನೇ ರ್‍ಯಾಂಕ್ ಗಳಿಸಿ ಟಿ.ಸಿ ಪಡೆದು, 1945ನೆಯ ಇಸ್ವಿ ಮೇ ತಿಂಗಳ ಕೊನೆಯ ವಾರ ನನ್ನ ಇಲ್ಲಿನ ಮಿತ್ರರಿಗೆಲ್ಲ ನಮಸ್ಕಾರ ತಿಳಿಸಿ ಸಿದ್ಧಗಂಗಾ ಕ್ಷೇತ್ರಕ್ಕೆ ಬಂದುಬಿಟ್ಟೆನು.

# ಅಧ್ಯಾಯ - 7

## ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ನನ್ನ ಪ್ರವಾಸ

ನಾನು ಸಿದ್ಧಗಂಗಾ ಕ್ಷೇತ್ರಕ್ಕೆ ಹೊರಟದ್ದು ಯಾವುದೋ ಬಹುದೂರದ ಪ್ರವಾಸ ಹೊರಟಂತೆ ನನಗಾದುದುಷ್ಟೇ ಅಲ್ಲ, ನಮ್ಮ ತಂದೆ ತಾಯಿಗಳಿಗೂ ಆಗಿತ್ತು. ಅವರು "ಇಲ್ಲಿಯೇ ದೇವರು ಕೊಟ್ಟ ಅಂಬಲಿ ಗಂಜಿ ಕುಡಿದುಕೊಂಡು ಇದ್ದರೂ ಆಗಿತ್ತು. ಯಾವ ದೇಶವೋ ಎಲ್ಲಿದೆಯೋ,. ಅಲ್ಲಿಗೆ ಹೋದ ಮೇಲೆ ನಮ್ಮ ಸಮಾಚಾರ ನಿನಗಿಲ್ಲ, ನಿನ್ನ ಸಮಾಚಾರ ನಮಗಿಲ್ಲ. ಕಷ್ಟ-ಸುಖದಲ್ಲಿ ನಿನಗೆ ಅಲ್ಲಿ ಏನೋ ಹೇಗೋ" ಎಂದು ಅವರು ಗೊಣಗಾಡಿದ್ದೂ ಉಂಟು. ಈ ಗೊಣಗಾಟದಲ್ಲೆ ಹಾವೇರಿಯವರೆಗೆ ಗಾಡಿಕಟ್ಟಿಕೊಂಡು ಬಂದು ರೊಟ್ಟಿಬುತ್ತಿ ಗಂಟು ಕೈಗೆ ಕೊಟ್ಟು, ಕಣ್ಣಂಚಿನಲ್ಲಿ ನೀರು ತಂದು ರೈಲು ಹತ್ತಿಸಿ ಹೋದದ್ದುಂಟು. ಅವರ ಸಂಕಟವನ್ನು ಅರ್ಥಮಾಡಿಕೊಂಡು ಕಸಿವಿಸಿಗೊಂಡು ಹರಿಹರದವರೆಗೆ ಮಾನಸಿಕ ತುಮುಲದಲ್ಲಿ ಮುಳುಗಿ ತುಂಗಭದ್ರಾನದಿಯಲ್ಲಿಯೇ ಆ ಉಮ್ಮಳವನ್ನು ಗಂಟು ಕಟ್ಟಿ ಬಿಸಾಡುವುದರ ಜೊತೆಗೆ ಒಂದು ದೊಡ್ಡ ಬಿಲ್ಲಿ(ಅರ್ಧಆಣೆ)ಯನ್ನು ನದಿಗೆ ಬಿಸಾಡಿ ಕೈಮುಗಿದೆ. ಧೈರ್ಯಗೊಂಡೆ. ಬಿರೂರುವರೆಗೆ ಹಾಗೂ ಹೀಗೂ ಈ ಪ್ರದೇಶವನ್ನು ಕಂಡಿದ್ದೆ. ಒಂದೆರಡು ಸಲ ಬೀರೂರು ಮೂಲಕವಾಗಿಯೇ ಶಿವಮೊಗ್ಗಕ್ಕೆ ಪ್ರವಾಸ ಮಾಡಿದ್ದೆ. ಬಿರೂರಿನಿಂದ ರೈಲು ಹೊರಟ ಮೇಲೆ ನನ್ನ ಕಣ್ಣೆಲ್ಲ ಚಿಕ್ಕದೊಡ್ಡ ಕಲ್ಲುಗುಂಡುಗಳ ಬೆಟ್ಟ ಪ್ರದೇಶವನ್ನು ನೋಡುವುದರಲ್ಲೇ ನಟ್ಟು ಹೋಗಿತ್ತು.

ಸಂಜೆ ನಾಲ್ಕು ನಾಲ್ಕುವರೆ ಘಂಟೆಗೆ ತುಮಕೂರಿಗೆ ಬಂದು ಇಳಿದೆ. ಅಲ್ಲಿ "ಸಿದ್ಧಗಂಗೆ ಎತ್ತ ಇದೆ, ಅಲ್ಲಿಗೆ ಹೇಗೆ ಹೋಗಬೇಕು" ಕೇಳುತ್ತಿದ್ದ ಪ್ರಶ್ನೆಗಳಿಗೆ "ಅಗೋ ಆ ದೊಡ್ಡ ಬೆಟ್ಟ ಇದೆಯಲ್ಲ. ಅದರ ಪಕ್ಕದ ಬೆಟ್ಟದೊತ್ತಿನಲ್ಲೇ ಇಲ್ಲೇ ಸಮೀಪದಲ್ಲೇ ಇದೆ. ಈಗ ಅರಸೀಕೆರೆ ಬೆಂಗಳೂರು ರೈಲು ಬರುತ್ತದೆ. ಒಂದುವರೆ ಆಣೆ ಚಾರ್ಜು ಅಷ್ಟೆ! ಕ್ಯಾತಸಂದ್ರ ಎಂಬುದೇ ಮುಂದಿನ ಸ್ಟೇಷನ್ ಅಲ್ಲಿ ಇಳಿದು ಬಿಡಿ, ಕ್ಯಾತ್‌ಸಂದ್ರ ಅಂದರೂ ಒಂದೇ, ಸಿದ್ಧಗಂಗಾ ಅಂದರೂ ಒಂದೇ" ಇತ್ಯಾದಿಯಾಗಿ ಹೇಳಿದರು. ಅವರು ಹೇಳಿದಂತೆ ಕ್ಯಾತಸಂದ್ರಕ್ಕೆ ಇಳಿದೆ. ಟ್ರಂಕನ್ನು ಹೆಗಲ ಮೇಲಿಟ್ಟುಕೊಂಡೆ. ಸ್ಟೇಷನ್‌ನಿಂದ ಅಂಕುಡೊಂಕಾಗಿ ಹೊಂಗೇಮರಗಳ ದಟ್ಟ ಗಿಡಮರಗಳ ಸಾಲಿನಲ್ಲಿ ಪ್ರಮೋದಗೊಂಡು ನಡೆಯುತ್ತಿದ್ದೆ. ಅದೊಂದು ಗೋಧೂಳಿಯ ಪವಿತ್ರ ಮುಹೂರ್ತವೆನಿಸಿತು ನನಗೆ. ಮಠದ ದಾಸೋಹಕ್ಕೆ ಸಮೃದ್ಧ ಹಾಲು ಮೊಸರನ್ನೊದಗಿಸುವ ಕಪಿಲ-ಸುರಭಿ-ನಂದಿನಿ-ಭದ್ರೆ ಜಾತಿಯೇ ಮೊದಲಾದ ವೈಶಿಷ್ಟ್ಯಪೂರ್ಣ ಸದೃಢ ದೇಹದ ಗೋವುಗಳ ಹಿಂಡು ತಮ್ಮ ಕರುಗಳನ್ನು ನೆನೆದು ಅಂಬಾಗರೆಯುತ್ತ ಬಾಲ ನಿಗುರಿಸಿ ಕೆಂಗಣ್ಣುಗಳ ದೃಷ್ಟಿಯನ್ನು ಎಡಬಲಕ್ಕೆ ಬೀರುತ್ತ ವೇಗವೇಗವಾಗಿ ನನ್ನ ಮುಂದೆಯೇ ಹೋಗುತ್ತಿತ್ತು. ಅನತಿ ದೂರದಲ್ಲಿ ಹೊಂಗೆಸಾಲು ಕಳೆದು ಮುಂದೆ ಬಂದರೆ ವಿಶಾಲವಾಗಿಯೂ ಎತ್ತರವಾಗಿಯೂ ಬೆಳೆದು ನಿಂತ ಬಿಲ್ವ, ಆಲ, ಮಾವು, ನೇರಳೆ ಮತ್ತು ಅಳಲೆ ಮರಗಳ ಗುಂಪು ಮನಕ್ಕೆ ಮನೋಹರವಾಗಿ ಕಂಡಿತು. ಬಾಣಭಟ್ಟನು ವರ್ಣಿಸಿರುವ ಜಾಬಾಲಿ ಋಷ್ಯಾಶ್ರಮದ ನೆನಪು ಮನಸ್ಸಿನ ಮುಂದೆ ಮಿಂಚಿ ಮಾಯವಾಯಿತು. ಸ್ವಲ್ಪ ಮುಂದಕ್ಕೆ ಬಂದೊಡನೆ ಎಡಗಡೆಗೆ ವಿಶಾಲವಾದ ಕಲ್ಯಾಣಿ (ಹೊಂಡ)ಯನ್ನು ಕಂಡೆ. ಆದಕ್ಕೆ ನಾಲ್ಕು ಕಡೆಯಿಂದಲೂ ಮೆಟ್ಟಿಲುಗಳನ್ನು ಕಟ್ಟಲಾಗಿತ್ತು. ಆ ಕಲ್ಯಾಣಿಯಲ್ಲಿ ........ಪ್ರಾರ್ಥನೆಗೆ ತೆರಳುವುದಕ್ಕೋಸುಗ ಮುಖಮಾರ್ಜನೆ

ಮಾಡುತ್ತಿರುವ ನೂರಾರುಜನ ವಿದ್ಯಾರ್ಥಿಗಳನ್ನು ಕಂಡೆ. ನಾನೂ ನನ್ನ ಟ್ರಂಕನ್ನು ಇಳಿಸಿ ಆ ಕಲ್ಯಾಣಿಯಲ್ಲಿ ಮುಖಮಾರ್ಜನೆ ಮಾಡಿ ಪುನಃ ಟ್ರಂಕನ್ನು ಹೆಗಲಿಗೇರಿಸಿದೆ. ಮುಂದೆ ಭವ್ಯವಾದ ಕಟ್ಟಡಗಳು, ಕಟ್ಟಡಗಳಲ್ಲಿ ಕಿಟಿಕಿಟಿ ಎನ್ನುವಂತೆ ತುಂಬಿದ ನೂರಾರು ವಿದ್ಯಾರ್ಥಿಗಳು, ಅವುಗಳ ವಿಶಾಲ ಮುಂಭಾಗದಲ್ಲಿ ವಿಶ್ರಮಿಸಿಕೊಂಡಿದ್ದ ಸಾವಿರಾರು ಜನ ಯಾತ್ರಾರ್ಥಿಗಳು ಧನ್ಯತೆ ಪಡೆದವರಂತೆ ಆನಂದ ತುಂದಿಲರಾಗಿ ಕುಳಿತು ಮಾತನಾಡುತ್ತಿರುವುದನ್ನು ಕಂಡೆ. ದಾಸೋಹ ಮಠದ ಮುಂಭಾಗಕ್ಕೆ ಬರದೆ ರಾತ್ರಿಯ ಪ್ರಸಾದೇಚ್ಛೆಯಿಂದ ಬಂದ ಸಾವಿರಾರು ಜನರಲ್ಲಿ ಕೆಲವರು ತಮ್ಮ ಮನ ಮೆಚ್ಚುವಂತಹ ಎಲೆಗಳನ್ನು ಹಚ್ಚಿಕೊಳ್ಳುವ, ದೊನ್ನೆಗಳನ್ನು ಕಟ್ಟುವ ಕಾರ್ಯದಲ್ಲಿ ನಿರತರಾಗಿದ್ದರು. ಆಗ ತಾನೆ ದೀಪಾರಾಧನೆಯಾಗಿತ್ತಾಗಿ ಸಾಯಂಕಾಲದ ಸ್ವಸ್ತಿವಾಚನ ಮಾಡುತ್ತ ಶ್ರೀಗಳವರ ಸುತ್ತ ನಿಂತ ಹತ್ತಿಪ್ಪತ್ತು ಜನ ವಟುಗಳನ್ನು ಕಂಡೆ. ಆಶೀರ್ವಾದ ಪಡೆಯಲು ಕೈಯಲ್ಲಿದ್ದ ಹಣ್ಣು ಕಾಯಿಗಳನ್ನು ಬಿದಿರಿನ ಸಣ್ಣ ಸಣ್ಣ ಬುಟ್ಟಿಗಳಲ್ಲಿಟ್ಟುಕೊಂಡು ನಿಂತಿದ್ದ ಅನೇಕರನ್ನು ಕಂಡೆ. ಇವರೆಲ್ಲರ ಮಧ್ಯದಲ್ಲಿ ಮೆಲುಕು ಹಾಕುತ್ತ ಜಿಂಕೆ ಮಲಗಿದ್ದನ್ನು ನೋಡಿದೆ. ಅವರ ಮಧ್ಯದಲ್ಲಿ ಮಂಚದ ಮೇಲೆ ಶಾಂತಿಯೇ ಮೈವೆತ್ತಂತೆ ಮಂಡಿಸಿದ್ದ ತ್ರಿವಿಧ ದಾಸೋಹಮೂರ್ತಿ ಶ್ರೀ ಶಿವಕುಮಾರಸ್ವಾಮಿಗಳನ್ನು ಕಂಡು ಆನಂದಬಾಷ್ಪ ಉಕ್ಕಿಬಂದವು. ಬೆಟ್ಟದ ಮೇಲೆ ಶ್ರೀ ಸಿದ್ಧಲಿಂಗೇಶ್ವರ ಪೂಜಾ ಸಾಮಗ್ರಿಗಳನ್ನು ಮಡಿಯುಟ್ಟು ಭಸ್ಮ ಚಿಹ್ನಾಂಕಿತರಾಗಿ ಮಡಿಯ ನೈವೇದ್ಯ ಪ್ರಸಾದವನ್ನು ಹೊತ್ತ ನಾಲ್ಕೈದು ಜನ ವಟುಗಳು ಕೈಯ ಕಬ್ಬಿಣದ ಬೆತ್ತದಿಂದ ನೆಲವನ್ನು ಕುಟ್ಟುತ್ತ ದಾಸೋಹ ಮನೆಯಿಂದ ಬೆಟ್ಟದ ಕಡೆಗೆ ಹೋಗುವುದನ್ನು ಕಾಣುತ್ತಲೇ ಅಲ್ಲಿ ನಿಂತೆ. ಸ್ವಸ್ತಿ ವಾಚನ ಸೇವೆ ಮುಗಿದು ಅವರೆಲ್ಲ ಶ್ರೀಗಳವರಿಗೆ ನಮಸ್ಕರಿಸಿ ಹೋದ ಮೇಲೆ, ಹೊತ್ತ ಟ್ರಂಕನ್ನು ದೂರದಲ್ಲಿಟ್ಟು ನಾನು ಸ್ವಾಮಿಗಳವರ ಸಾನ್ನಿಧ್ಯಕ್ಕೆ ಹೋದೊಡನೆ ಅವರ ಪುಣ್ಯಮಂಗಳ ಮುಖವನ್ನು ನಗುತ್ತ ನೋಡಿದೆ. ಶಿವಯೋಗಚಿಹ್ನಾಂಕಿತ ಮುಖಮುದ್ರೆಯಲ್ಲಿ ಹೊಳೆವ ನೇತ್ರದ್ವಯದಿಂದಲೂ, ಎಂಥ ಶ್ರಮಕ್ಕೂ ತಡೆಯಬಲ್ಲುದೆಂದು ಮೇಲುನೋಟಕ್ಕೆ ವಿಜೃಂಭಿಸುತ್ತಿದ್ದ ಪುಣ್ಯಮಂಗಳಮಯ ಲಿಂಗತನುಶ್ರೀಯಲ್ಲಿ ಶೋಭಿಸುವ ಶ್ರೀಗಳಿಗೆ ಸಾಷ್ಟಾಂಗಪೂರ್ವಕ ನಮಸ್ಕಾರ ಮಾಡಿದೆ. ಆ ಕ್ಷಣದಲ್ಲಿ ನಾನು ಪುಳಕಿತಗಾತ್ರನಾಗಿ ನನ್ನನ್ನೇ ಮರೆತ ಅನುಭವ ಹೊಂದಿದುದಂತೂ ನಿಶ್ಚಯ. ಶ್ರೀಗಳವರು 'ಯಾವ ಊರು, ಎಲ್ಲಿಂದ ಬಂದಿರಿ?' ಎಂದು ಬಹುಗೌರವಪೂರ್ವಕ ಮಾತನಾಡಿಸಿದರು. ನಾನು ಹಿಂದೆ ಶಿವಮೊಗ್ಗದಿಂದ ಬರೆದುಕೊಂಡ ಕಾಗದದ ಬಗೆಗೆ ಹೇಳಿ, ಆ ಕಾಗದಕ್ಕೆ ಶ್ರೀಗಳು ಬರೆದ ಪತ್ರವನ್ನು ಅವರ ಶ್ರೀಹಸ್ತಕ್ಕೇ ಕೊಟ್ಟೆ. ಆ ಪತ್ರ ನೋಡಿ ನಕ್ಕು ಯಾರನ್ನೋ ಕರೆದರು. ಇವರನ್ನು ಮಠದ ಮಹಡಿಯ ಮೇಲೆ ಕರೆದೊಯ್ದು ಅಲ್ಲಿ ಇವರ ಸಾಮಾನು ಇಡಿಸಿ, ಊಟೋಪಚಾರದ ವ್ಯವಸ್ಥೆ ಮಾಡಲು ತಿಳಿಸಿದರು. ಆ ಘಳಿಗೆಯಿಂದ ನಾನು ಶ್ರೀಮಠದ ಓರ್ವ ವಿದ್ಯಾರ್ಥಿಯಾಗಿಬಿಟ್ಟೆ. ಅರ್ಜಿಯಿಲ್ಲ, ಮೀಟಿಂಗ್ ಇಲ್ಲ, ಲೆಕ್ಕಕ್ಕೆ ಬುಕ್ಕಿಗೆ ಇಲ್ಲದೆಯೇ ನಾನು ಮಠದ ವಿದ್ಯಾರ್ಥಿನಿಲಯದ ಓರ್ವ ವಿದ್ಯಾರ್ಥಿಯಾದೆ. ನನ್ನಂತೆಯೇ ಅನೇಕ ವಿದ್ಯಾರ್ಥಿಗಳು ಲೆಕ್ಕವಿಲ್ಲದೆಯೇ ಊಟ ಮಾಡಿಕೊಂಡು ವಿವಿಧ ವಿದ್ಯಾಸಂಸ್ಥೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರೆಂದು ಆಮೇಲೆ ನನಗೆ ತಿಳಿಯಿತು. ಅಲ್ಲಿ ಹತ್ತೆಂಟುಜನ ವಿದ್ಯಾರ್ಥಿಗಳು ಎಲ್ಲೆಲ್ಲಿಯಿಂದಲೋ ಬಂದು ಉಳಿದ ಅಧಿಕೃತ ವಿದ್ಯಾರ್ಥಿಗಳ ಗುಂಪಿನಲ್ಲಿ ಸೇರಿ ಊಟಮಾಡಿಕೊಂಡು ಹೋದರೂ ಯಾರಿಗೂ ಗೊತ್ತೇ ಆಗುತ್ತಿರಲಿಲ್ಲ. ಗೊತ್ತಾದರೂ ಅವರನ್ನು ಮಠಬಿಟ್ಟು ಹೊರಗೆ ಹಾಕುತ್ತಿರಲಿಲ್ಲ. ಅಂಥ ಅನ್ನದಾನದ

ಸಂಸ್ಥೆ ಅದು. ನಾನು ಈ ಪೂರ್ವದಲ್ಲಿ ಅನೇಕ ಮಠಮಾನ್ಯಗಳ ಪರಿಚಯ ಮಾಡಿಕೊಂಡವನು. ಆದರೆ ಸಿದ್ಧಗಂಗಾಮಠದ ನಡೆವಳಿಯನ್ನು ಹೋಲುವ ಇನ್ನೊಂದು ಮಠವನ್ನು ನಾ ಕಾಣೆ. ದೊಡ್ಡದೊಡ್ಡ ಸಂಸ್ಥಾನಮಠ, ದಾಸೋಹಮಠ ಇತ್ಯಾದಿ ಹೇಳಿಕೊಳ್ಳುವ, ಕರೆಸಿಕೊಳ್ಳುವ ಯಾವ ಮಠವೂ ಸಿದ್ಧಗಂಗಾ ಮಠಕ್ಕೆ ಸರಿದೊರೆಯೆನ್ನಿಸಲಿಲ್ಲ. ಸದಾ ಬಂದ ಜನರಿಗೆ ಊಟಮಾಡಿ, ಊಟಮಾಡಿ ಅನ್ನುವ ಧ್ವನಿ ಅಲ್ಲಿ ಮಾರ್ದನಿಸುತ್ತಿತ್ತು. ಪ್ರಸಾದ ವಿತರಣೆಯಲ್ಲಿ ಸಿದ್ಧಗಂಗಾ ಏಕಮೇವಾದ್ವಿತೀಯವೇ ಸರಿ ಎಂದು ನಾನು ತೀರ್ಮಾನಿಸಿದೆ. ಹೊಸದರಲ್ಲಿ ನಾನು ಸಿದ್ಧಗಂಗಾ ಮಠಕ್ಕೆ ದುಡ್ಡು ಆಕಾಶದಿಂದ ಬೀಳುತ್ತೆಯೇ? ಹಿಂದೆ ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯ ಕಟ್ಟುವಾಗ ಆಕಾಶದಿಂದ ಹಣವನ್ನು ಕೇಳುತ್ತಿದ್ದ ಕಥೆಯನ್ನು ಜ್ಞಾಪಿಸಿಕೊಂಡೆ. ಕಾರಣ ಇಷ್ಟೇ, ಬಂದವರಿಗೆಲ್ಲ ಊಟಕ್ಕೆ ಹಾಕುವ ಪ್ರತಿಜ್ಞೆ ಮಾಡಿ ಕಾರ್ಯಕ್ಷೇತ್ರಕ್ಕೆ ಇಳಿದವರಿಗೆ ಹೀಗೆ ದುಡ್ಡು ಸುರಿಯದಿದ್ದರೆ ಹೇಗೆ ಸಾಧ್ಯವೆಂಬುದೇ ನನ್ನ ಅಪಕ್ವ ಬುದ್ಧಿಯ ತೀರ್ಮಾನ.

ಆದರೆ ನಿಜವೃತ್ತಾಂತ ಈ ಭಾವನೆಗೆ ವಿರುದ್ಧವೆಂದು ಮುಂದೆ ಬರಬರುತ್ತ ಅರಿವಾಯಿತು. ಮಠದಲ್ಲಿ ವ್ಯವಸಾಯ ಕಾಯಕವನ್ನು ಕ್ರಮವಾಗಿ ಮಾಡುತ್ತಿದ್ದರು. ಹದಿನಾರು ಹದಿನೆಂಟೆಕರೆ ಜಮೀನಿತ್ತು, ಸಾಕಷ್ಟು ದನ-ಕರುಗಳಿದ್ದವು. ಶ್ರೀಗಳವರು ದಿನದ 18 ತಾಸು ದುಡಿಮೆ ಮಾಡುವವರು, ದುಡಿಮೆಯೂ ಅವರಿಗೆ ಒಂದು ಶಿವಪೂಜೆಯೆನಿಸಿತ್ತು. ಗ್ರಾಮಾಂತರ ಪ್ರದೇಶದಲ್ಲಿ ಬೇಸರವಿಲ್ಲದೆ ಸುತ್ತಾಡಿ ಭಿಕ್ಷಾಟನೆ ಮಾಡಿ, ಲಕ್ಷ ಲಕ್ಷ ಜನರ ಕ್ಷುತ್ಪಿಪಾಸೆಯನ್ನು ನೀಗಿಸುವ ಸತ್ಸಂಕಲ್ಪಭರಿತರೆಂಬುದು ದಿನೇದಿನೇ ಅನುಭವಕ್ಕೆ ಬಂತು. ಅವರಿಗೆ ಜೋಳಿಗೆಯ ಬಲವೇ ಬಲವೆಂಬುದನ್ನರಿತೆ. ದೇಹಶ್ರಮವನ್ನು ಲೆಕ್ಕಿಸದೆ ಗ್ರಾಮಾಂತರ ಪ್ರದೇಶಗಳಲ್ಲಿ ಸುತ್ತಾಡುತ್ತ ಅವರ ಆಚಾರ-ವಿಚಾರ ತಿದ್ದುವುದು, ಅಲ್ಲಿ ಉಂಟಾಗುವ ವಿರಸ-ಜಗಳ-ತಂಟೆ-ತಕರಾರುಗಳನ್ನು ನಿವಾರಿಸುವುದು ಇವುಗಳಲ್ಲಿ ಬೇಸರಪಡದೆ ದುಡಿಯುತ್ತಿದ್ದರು; ಜನಜೀವನದೊಡನೆ ಬೆರೆತು ಅವರಿಗೆ ಶಕ್ತ್ಯಾನುಸಾರ ಸಹಾಯ ಮಾಡುತ್ತ ಅನ್ಯೋನ್ಯಾಶ್ರಯ ಸಂಬಂಧವಿಟ್ಟುಕೊಂಡ ಇನ್ನೊಂದು ಮಠವು ಇರಲೇ ಇಲ್ಲವೆಂಬುದನ್ನು ನಾನು ತಿಳಿಯಲು ಬಹುದಿನ ಹಿಡಿಯಲಿಲ್ಲ. ಈ ಕಾರಣದಿಂದ ಮಠದ ದಾಸೋಹಕ್ಕೆ ಹಳ್ಳಿ-ಹಳ್ಳಿಗಳಿಂದ ದವಸಧಾನ್ಯ ಹರಿದು ಬರುತ್ತಿತ್ತಾಗಿ ಇಷ್ಟೊಂದು ದಿವ್ಯವಾಗಿ-ಭವ್ಯವಾಗಿ ದಾಸೋಹ ನಡೆಯುತ್ತಿತ್ತೆಂಬುದನ್ನು ತಿಳಿದು ನಾನು ಅರ್ಥಪೂರ್ಣವಾದ ಸಂನ್ಯಾಸಧರ್ಮ ಕ್ರಿಯಾಮುಖಿಗೊಂಡರೆ ಎಂಥ ಅದ್ಭುತ ನಡೆಯುತ್ತಿದೆಂಬುದರ ಅರಿವು ಮಾಡಿಕೊಂಡೆ. ಶ್ರೀ ಶಿವಕುಮಾರ ಮಹಾಸ್ವಾಮಿಗಳ ಶಿವಯೋಗ ಜನ್ಯ ತೇಜೋವಿಶೇಷ ಅನಿಮಿತ್ತಬಾಂಧವ್ಯ, ಕ್ರಿಯಾಯೋಗಗಳು ಅವರ ಸಂಕಲ್ಪಕ್ಕೆ ಕಾಣದ ಕೈಯಾಗಿ ನೆರವಾಗುತ್ತಿತ್ತೆಂಬುದಂತೂ ಸತ್ಯ ವಿಚಾರವೆನಿಸಿತು.

ಮಠಕ್ಕೆ ಬಂದು ದಾಸೋಹ ಮಠದ ಆ ಮಹಡಿಯ ಮೇಲೆ ಇದ್ದ ದೊಡ್ಡದಾದ ಸಭಾಂಗಣದಲ್ಲಿ ನನ್ನ ಸಾಮಾನು-ಸರಂಜಾಮು ಇಳುಹಿದೆ. ಅಲ್ಲಿ ಐವತ್ತು ಅರವತ್ತು ಹುಡುಗರು ಸಾಲಾಗಿ ತಮ್ಮ ಟ್ರಂಕು-ಪುಸ್ತಕ-ಚಾಪೆಗಳನ್ನು ಹಾಸಿ ಸ್ಥಳಗಳನ್ನು ಹದ್ದುಗೊಳಿಸಿಕೊಂಡದ್ದು ಕಂಡೆ. ಅವರ ಮಧ್ಯದಲ್ಲಿಯೇ ನನಗೂ ಒಂದು ಸ್ಥಳವನ್ನು ಕರೆದುಕೊಂಡು ಬಂದವರು ತೋರಿಸಿ ಅಲ್ಲಿ ಇರಲು ಹೇಳಿ, "ಬನ್ನಿ, ನೀವು ಯಾವಾಗ ಊಟ ಮಾಡಿದ್ದಿರೋ ಏನೋ ಪಾಪ! ಮೊದಲು ಮುಖಮಾರ್ಜನೆ ಮಾಡಿ, ಊಟ ಮುಗಿಸಿಬಿಡಿ. ಇವರೆಲ್ಲ ಊಟಮಾಡಲು ಇನ್ನೂ ಕಾಲವಿದೆ. ಬನ್ನಿ ಬನ್ನಿ!" ಎಂದು ಒತ್ತಾಯ ಮಾಡಿ ಕರೆದೊಯ್ದರು. ನಾನು ಮುಖಮಾರ್ಜನೆ

ಮಾಡಿ ವಿದ್ಯಾರ್ಥಿಗಳಿಗೆಲ್ಲ ಶಿವಪೂಜೆ ಮಾಡುವ ಮನೆಹೊಕ್ಕೆ. ಅಲ್ಲಿ ನಾಲ್ಕು ಬುಟ್ಟಿಗಳಲ್ಲಿ ಬಿಲ್ವಪತ್ರೆ ತುಂಬಿತ್ತು. ವಿಭೂತಿ ಕರಂಡದಲ್ಲಿ ಐದಾರು ವಿಭೂತಿಗಟ್ಟಿಗಳನ್ನು ನೋಡಿದೆ. ನಾಲ್ಕಾರು ಹಿಡಿಯಷ್ಟು ಊದಿನಕಡ್ಡಿಗಳು ಗೂಡಿನಲ್ಲಿದ್ದವು. ಯಾರೋ ನಾಲ್ಕಾರು ಊದಿನಕಡ್ಡಿ ಹಚ್ಚಿದ್ದ ಕಾರಣ ಅವು ಸುತ್ತ ಲೋಕಕ್ಕೆ ಸುಗಂಧ ಬೀರುತ್ತಿದ್ದವು. ಶ್ರೀ ಸಿದ್ಧಗಂಗಾಕ್ಷೇತ್ರದ ಶ್ರೀಗಳವರ ಜೀವನವೂ ಹೀಗೆಯೇ ಅಲ್ಲವೆ ಎಂಬ ರೂಪಕ ಜ್ಞಾಪಕಕ್ಕೆ ಬಂತು. ಲೋಕದ ಉದ್ಧಾರಕ್ಕೆ ಅವರ ಶ್ರಮವೆಲ್ಲ ವಿನಿಯೋಗವಾಗುತ್ತದೆ ಅನ್ನಿಸಿತು. ಆ ಪವಿತ್ರ ಸ್ಥಳದಲ್ಲಿ ಕುಳಿತು ಲಿಂಗಪೂಜೆ ಮಾಡುವಾಗ ಸಾಕ್ಷಾತ್ ಸಿದ್ಧಲಿಂಗೇಶ್ವರ ಪಾದಸ್ಪರ್ಶದಿಂದ ಪುನೀತಗೊಂಡ ಇಲ್ಲಿ ನಾನೂ ಈಗ ಲಿಂಗಪೂಜೆ ಮಾಡುವ ಭಾಗ್ಯವುಂಟಾದುದು ಶಿವಕಾರುಣ್ಯವೆಂದು ಭಾವಿಸಿ ಭಾವೋದ್ರೇಕಗೊಂಡೆ; ಮಹದಾನಂದಗೊಂಡೆ. ಪೂಜೆ ಮುಗಿಸಿ ತೃಪ್ತಿಗೊಂಡು ಮಹಡಿಯನ್ನು ಹತ್ತಿ ನನ್ನ ಹಾಸಿಗೆ ಬಿಚ್ಚಿ ಅದರ ಮೇಲೆ ಕುಳಿತೆ. ಆ ವಿಶಾಲ ಕೊಠಡಿಯಲ್ಲಿದ್ದ ಎಲ್ಲ ಹುಡುಗರೂ ನನ್ನನ್ನೇ ಮಿಕಿಮಿಕಿ ನೋಡಿದ್ದೇ ನೋಡಿದ್ದು. ಅದರಲ್ಲಿಯೇ ಸ್ವಲ್ಪ ದೊಡ್ಡಹುಡುಗರು ನನ್ನ ಸುತ್ತಮುತ್ತ ನೆರೆದು ಮಾತನಾಡಾಸಿ ನನ್ನ ಚರಿತ್ರೆಯನ್ನೆಲ್ಲ ಕೇಳಿದರು, ಹೇಳಿದೆ. ಅವರೆಲ್ಲ ಚಿಕ್ಕವರೇ, ಅವರ ಮಧ್ಯದಲ್ಲಿ ಗಡ್ಡಮೀಸೆ ಬಂದವನೆಂದರೆ ನಾನೊಬ್ಬನೇ. ಶ್ರೀಗಳವರು ನನ್ನನ್ನು ಈ ಕೊಠಡಿಗೆ ಕಳಿಸಿದುದರ ಬಗ್ಗೆ ಅವರು ತಿಳಿದದ್ದು 'ತಮ್ಮೆಲ್ಲರ ಮೇಲ್ವಿಚಾರಕರನ್ನಾಗಿ ಮಾಡಲೆಂದೇ ಇಲ್ಲಿಗೆ ಇವರನ್ನು ಕಳಿಸಿದ್ದಾರೆ' ಎಂದು. ಅಷ್ಟರಲ್ಲಿ ಅವರೆಲ್ಲರ ಊಟದ ಗಂಟೆ ಬಾರಿಸಿತು. ಅವರೆಲ್ಲ ತಟ್ಟೆ ಲೋಟ ಹಿಡಿದು ನಾಗಾಲೋಟದಿಂದ ಬಿದ್ದೇವೆಂಬ ಪರಿವೆಯಿಲ್ಲದೆ ಓಡಿದರು. ಆಯಾಸಗೊಂಡಿದ್ದ ನಾನು ಗೊರಕೆ ಹಾಕುತ್ತಿದ್ದೆ.

ರಾತ್ರಿ ಹತ್ತು ಘಂಟೆ ಸುಮಾರಿಗೆ ಶ್ರೀಸ್ವಾಮಿಗಳು ಈ ಹುಡುಗರ ಕೊಠಡಿಗಳನ್ನೆಲ್ಲ ಒಂದು ಸುತ್ತು ಹಾಕಿ ತನಿಖೆ ಮಾಡಿಕೊಂಡು ಹೋಗುವುದು ನಿತ್ಯದ ಕಾಯಕವಂತೆ. ನಾನಿದ್ದ ಕೊಠಡಿಗೂ ಬಂದು 'ಯಾರು ಮಲಗಿದವರು?' ಎಂದರಂತೆ. ಗಾಢನಿದ್ರೆಯಲ್ಲಿದ್ದ ನನಗೆ ಬಂದುದಾಗಲಿ, ಯಾರು ಮಲಗಿದವರು? ಎಂದುದಾಗಲಿ ಗೊತ್ತೇ ಇಲ್ಲ. ಹುಡುಗರೆಲ್ಲ ಈ ದಿನ ಹೊಸದಾಗಿ ಬಂದವರೆಂದ ಮೇಲೆ ಏನೂ ಮಾತಾಡದೆ ಇಳಿದುಹೋಗಿಬಿಟ್ಟರಂತೆ.

ಮುಂದೆ ಅನೇಕ ದಿನಗಳು ಶ್ರೀಗಳವರು ನನ್ನನ್ನು ಮಾತನಾಡಿಸಿದುದೇ ಇಲ್ಲ. ನಾನೂ ಅವರ ಹತ್ತಿರ ಹೋದುದಿಲ್ಲ. ನಾನು ನಾರ್ಮಲ್ ಸ್ಕೂಲಿಗೆ ಸೇರಿಕೊಂಡು ನನ್ನ ಅಭ್ಯಾಸದಲ್ಲಿ ತಲ್ಲೀನನಾಗಿಬಿಟ್ಟೆ. ನಾರ್ಮಲ್ ಸ್ಕೂಲ್ ಹೆಡ್ ಮಾಸ್ತರರು "ಬಾರೋ ಅಣ್ಣಾ, ನಿನ್ನ ಪ್ರತಾಪ ಬಹಳ ಕೇಳಿದ್ದೇನೆ" ಎಂದು ಬಹು ಆತ್ಮೀಯತೆಯಿಂದ ಹೆಗಲ ಮೇಲೆ ಕೈಯಿಟ್ಟು ಮಾತನಾಡಿಸಿ ಸ್ಕೂಲ್‌ಗೆ ಸೇರಿಸಿಕೊಂಡುಬಿಟ್ಟಿದ್ದರು.

ಮಠದಲ್ಲಿ ಕಲೆಯ ಗಂಧಸುಗಂಧ ಎಲ್ಲರ ಕಿವಿಗೆ ಬೀಳುವುದು ತಡವಾಗಲಿಲ್ಲ. ಸ್ವಲ್ಪ ಹೆಚ್ಚುವಯಸ್ಸಿನವನಾದ ನಾನು ಒಂದು ರೀತಿಯಿಂದ ಆಗಿನ ಎಲ್ಲ ವಿದ್ಯಾರ್ಥಿಗಳ ಗುಂಪಿಗೆ ಅಚ್ಚುಮೆಚ್ಚಿನವನೂ ಆದೆ; ಹಿರಿಯನೂ ಆಗಿಬಿಟ್ಟೆ. ಇದರ ಕಾರಣವೋ ಇನ್ನಾವ ಕಾರಣವೋ ಅಲ್ಲಿದ್ದ 'ತೋಂಟದಾರ್ಯ ವಿದ್ಯಾವರ್ಧಿನಿ ಸಭಾ' ಎಂಬ ವಿದ್ಯಾರ್ಥಿ ಸಂಘದ ಕಾರ್ಯಕಾರಿ ಸಭೆಯ ಚುನಾವಣೆ ನಾನು ಬಂದ ಹದಿನೈದು ಇಪ್ಪತ್ತು ದಿನಗಳಲ್ಲಿ ನಡೆದು ಅತ್ಯಧಿಕ ಮಕ್ಕಳಿಂದ ಚುನಾಯಿತನಾದೆ. ಇದು ಸ್ವಾಮಿಗಳವರ ಕಿವಿಯವರೆಗೆ ಹೋಗಿ ಅವರಿಗೂ ಆಶ್ಚರ್ಯ ವಾಯಿತಂತೆ. ಮೊನ್ನೆಮೊನ್ನೆ ಮಠಕ್ಕೆ ಬಂದು ಅತ್ಯಧಿಕ ಮತಗಳಿಂದ ಚುನಾಯಿತನಾಗ ಬೇಕಾಗಿದ್ದರೆ,

ಇವನಲ್ಲಿ ಏನೇನೋ ಶಕ್ತಿಗಳಿವೆಯೆಂದು ಭಾವಿಸಿಬಿಟ್ಟರಂತೆ. ಆದರೂ ನನ್ನೊಡನೆ ಅವರು ಮಾತಾಡಿದುದೇ ಇಲ್ಲ. ನನಗೂ ಮಾತನಾಡಿಸುವ ಪ್ರಮೇಯ ಬೀಳಲಿಲ್ಲ. ಮೇಲಾಗಿ ಭಯ ಬೇರೆ. ಇಷ್ಟರಲ್ಲಿ ತುಮಕೂರು ನಾರ್ಮಲ್ ಸ್ಕೂಲಿಗೆ ಸೇರಿ ಶ್ರೀ ಸಿದ್ಧಗಂಗಾಮಠದಲ್ಲಿ ಅಶನ ವಶತಿಗಳ ಅನುಕೂಲ್ಯಕ್ಕೆ ಸೇರಿಕೊಂಡ ವಿಚಾರವಾಗಿ ಅನೇಕರಿಗೆ ಕಾಗದ ಬರೆದಿದ್ದೆನಷ್ಟೆ. ಅದಕ್ಕೆ ಉತ್ತರವಾಗಿ ಅನೇಕರಿಂದ ನನಗೆ ಕಾಗದ ಬಂದಿದ್ದವು. ಅವುಗಳಲ್ಲಿ ಶ್ರೀಗಳವರು ಸದ್ಧರ್ಮದೀಪಿಕೆ ಸಂಪಾದಕರಾದ ಶ್ರೀ ಚನ್ನಮಲ್ಲಿಕಾರ್ಜುನರು, ಹಾವೇರಿ ಹುಕ್ಕೇರಿಮಠದ ಶಿವಬಸವಸ್ವಾಮಿಗಳಿಂದ ಬಂದ ಪತ್ರಗಳನ್ನೂ ಅವಲೋಕಿಸಿದ್ದರಂತೆ. ಆದರೂ ಅವರು ನನ್ನ ತಂಟೆಗೆ ಬಂದಿರಲಿಲ್ಲ.

ಜುಲೈ ತಿಂಗಳ ತುದಿಗಾಲ ಪ್ರಾರಂಭವಾಗುವ ಕಾಲ. ನಾನು ನನ್ನ ಕಾಲೇಜು ಮುಗಿಸಿಕೊಂಡು ಸ್ವಲ್ಪ ತಡವಾಗಿಯೇ ತುಮಕೂರು ಬಿಟ್ಟು ನಡೆಯುತ್ತಲೇ ಹೊರಟಿದ್ದೆ. ಮಾರ್ಗದ ಪಕ್ಕದಲ್ಲಿ ಗಿಡಗಳ ಸಾಲಿನಲ್ಲಿಯೇ ಕಾಲುದಾರಿಯೊಂದು ಇತ್ತು. ಮಾರ್ಗಮಧ್ಯದಲ್ಲಿ ಕಲ್ಲು, ಕಲ್ಲಿನ ಚೂರು ಎಂದು ಕಾಲುನಡಿಗೆಯವರು ಅಕ್ಕಪಕ್ಕದಲ್ಲಿ ದಾರಿಮಾಡಿಕೊಂಡು ತಿರುಗುತ್ತಿದ್ದರು. ಈಗ "ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಟೆಕ್ನಾಲಜಿ"" (ಎಸ್.ಐ.ಟಿ.) ಇರುವ ಕಡೆ ರಸ್ತೆಯ ಇಕ್ಕೆಲಗಳಲ್ಲಿ ನೇರಳೇಹಣ್ಣಿನ ಮರಗಳಿದ್ದವು. ನಾನು ಕಾಲುದಾರಿಯನ್ನು ಹಿಡಿದು ಬರುತ್ತ ಉದುರಿಬಿದ್ದ ಕಳಿತ ಒಂದೊಂದೇ ಹಣ್ಣನ್ನು ಆರಿಸಿಕೊಂಡು ರುಚಿ ನೋಡುತ್ತ, ಬೀಡಿ ಸೇದುತ್ತ ನನ್ನ ಪಾಡಿಗೆ ನಾನುಂಟೋ ಮೂರುಲೋಕವುಂಟೋ ಎನ್ನುವಂತೆ ಆತ್ಮಾರಾಮನಾಗಿ ಬರುತ್ತಿದ್ದೆ. ಮಾರ್ಗದಲ್ಲಿ ಆಗೊಮ್ಮೆ ಈಗೊಮ್ಮೆ ಕ್ಯಾತಸಂದ್ರ ತುಮಕೂರು ಮಧ್ಯದಲ್ಲಿ ಜಟಕಾ ಗಾಡಿಗಳು ಓಡಾಡುವುದನ್ನು ಬಿಟ್ಟರೆ ಹೆಚ್ಚಿನ ಮೋಟಾರು ವಾಹನಗಳ ಸಂಚಾರವೂ ಇರಲಿಲ್ಲ. ಈ ಸ್ಥಿತಿಯಲ್ಲಿ ತುಮಕೂರಿಗೆ ಹೋಗಿದ್ದ ಶ್ರೀಗಳು ಮಠದ ಸ್ವಂತ ಜಟಕಾಗಾಡಿಯಲ್ಲಿ ವೇಗವಾಗಿ ಬರುತ್ತಿದ್ದರು. ಆ ಗಾಡಿ ನಾನು ಬೀಡಿ ಎಳೆಯುತ್ತಿದ್ದ ಸಮಯದಲ್ಲೇ ಗಕ್ಕನೆ ನನ್ನ ಪಕ್ಕದಲ್ಲಿ ಬಂದು ನಿಂತಿತು. ನಾನು ದಂಗು ಬಡಿದವಂತೆ ಬೀಡಿ ಸೇದುತ್ತಲೇ ಗಾಡಿಯನ್ನು ನೋಡಿದೆ. ಆ ಗಾಡಿ ಮತ್ತಾವುದೂ ಆಗಿರಲಿಲ್ಲ. ಶ್ರೀಮಠದ್ದೇ ಆಗಿತ್ತು. ಒಳಗೆ ಸ್ವಾಮಿಗಳು ಕುಳಿತದ್ದು ಕಣ್ಣಿಗೆಬಿದ್ದು ಭಯಗೊಂಡು ಬೀಡಿಯನ್ನೆಸೆದು ಬಾಯಿ ಒರೆಸಿಕೊಳ್ಳುತ್ತಾ ನಿಂತೆ. ಸ್ವಾಮಿಗಳು 'ಯಾರದು?' ಎಂದುಬಿಟ್ಟರು. ಎದೆ ಡವಡವ ಬಡಿದುಕೊಳ್ಳತೊಡಗಿತು. ಮೆತ್ತನೆಯ ಧ್ವನಿಯಿಂದ ಅವರಿಗೆ ಕಾಣುವಂತೆ ಹಿಂಭಾಗಕ್ಕೆ ಹೋಗಿ 'ನಾನು ಬುದ್ಧಿ' ಎಂದು ಮುಖತೋರಿಸಿ ನಿಂತೆ. 'ಬಾ! ಬಾ! ಗಾಡಿಯಲ್ಲಿ ಕುಳಿತುಕೋ' ಎಂದರು. ನಾನು ಬೀಡಿಸೇದುವುದನ್ನು ಶ್ರೀಗಳು ನೋಡಿಬಿಟ್ಟರಲ್ಲಾ! ಎಂದು ಶತಾಪರಾಧ ಮಾಡಿ ಹೆದರಿ ನಿಂತವನಂತೆ ನಿಂತುಕೊಂಡು "ಇಲ್ಲ ಬುದ್ಧಿ ನಾನು ನಡೆದುಕೊಂಡೇ ಬರುತ್ತೇನೆ, ತಾವು ದಯಮಾಡಿಸಿ" ಎಂದೆ. ಅಷ್ಟರಲ್ಲಿ ಜಟಕಾ ಹೊಡೆಯುತ್ತಿದ್ದ ಕ್ಯಾತಸಂದ್ರದ ಸಾಹೇಬು "ಆವ್ ಜೀ. ಸ್ವಾಮೀ ಬುಲಾತ್ಯೆ! ಆಕು ಬೈಟ್‌ನಾ" ಎಂದ ತನ್ನ ಹರಕುಬರಕು ಉರ್ದು ಭಾಷೆಯಲ್ಲಿ. ಅವನು ನಾನು ಬಂದ ಐದಾರೇ ದಿನಕ್ಕೆ ನನಗೆ ಪರಿಚಯವಾಗಿದ್ದ. ನಾನೂ ಅಲ್ಪಸ್ವಲ್ಪ ಉರ್ದು ಮಾತನಾಡುವ ಮನುಷ್ಯನೆಂಬುದು ಅವನಿಗೆ ತಿಳಿದಿತ್ತು. ಅದಕ್ಕಾಗಿ ನನಗೆ ಉರ್ದು ಮಾತಿನಿಂದಲೇ ಕರೆದ. ನನಗೆ ಮತ್ತಾವ ಭಯವೂ ಇರಲಿಲ್ಲ. ಬೀಡಿಯ ಈ ಹೊಲಸು ವಾಸನೆ ಜಟಕಾದಲ್ಲಿ ಕುಳಿತಾಗ ಶ್ರೀಗಳವರಿಗೂ ತಗುಲಿ ಅಸಹ್ಯಪಟ್ಟುಕೊಳ್ಳುವುದಲ್ಲದೆ, ಅವರ ಕೈಗೆ 'ರೆಡ್‌ಹ್ಯಾಂಡ್' ಸಿಕ್ಕುಹೋದೆನಲ್ಲಾ! ಎಂಬ ಭಯ-

ಆತಂಕ-ಚೌರ್ಯಗಳ ಬಾಧೆ. ಹೀಗಾಗಿ ನಿರಾಕರಿಸಿದೆ. ಅದಕ್ಕೆ ಶ್ರೀಗಳು "ಬಾ! ಬಾ! ಮಳೆಮೋಡ ಸುತ್ತಮುತ್ತ ಆವರಿಸಿದೆ. ನೀನು ನಡೆಯುತ್ತ ಮಠದವರೆಗೆ ಹೋಗುವುದರೊಳಗಾಗಿ ಮಳೆಗೆ ಸಿಕ್ಕು ತೊಯ್ಸಿಕೊಳ್ಳುತ್ತೀಯ" ಎಂದುಬಿಟ್ಟರು. ಆ ಕಾಲದಲ್ಲಿ ನನ್ನ ಮನಸ್ಸಿಗೆ ಶ್ರೀಗಳ ಹೃದಯಸಂಪತ್ತಿನ ಮಹತ್ತು ಬೃಹತ್ತುಗಳ ಆಳನೀಳಗಳೇ ಅಳತೆಗೆ ಸಿಕ್ಕದಂತಹ ಅಗಾಧ ಆಲೋಚನೆಗೆ ತೊಡಗಿಸಿಬಿಟ್ಟವು. ಆನಂದ ಉಕ್ಕೇರಿತು. ಇನ್ನು ಬಹಳ ಹೊತ್ತು ಕೊಸರಾಡುವುದು ಅರ್ಥವಿಲ್ಲವೆಂದುಕೊಂಡೆ. ಕೆಳಗೆ ಇಳಿದು ನಿಂತಿದ್ದ ಜಟಕಾಸಾಬು ಕೈಹಿಡಿದು "ಆವ್ ಜೀ ಬೈಠೋ ಆವ್" ಎಂದು ಎಳೆದುಬಿಟ್ಟ. ತಪ್ಪಿಸಿಕೊಳ್ಳುವ ಮಾರ್ಗ ತೋರದೆ ಗಾಡಿಯಲ್ಲಿ ಕುಳಿತೆ. ಮುಖವನ್ನು ಶ್ರೀಗಳವರ ಕಡೆಯಿಂದ ತಿರುಗಿಸದೆ ಓರೆಮಾಡಿ ಕುಳಿತೆ.

ಆಗಲೇ ಶ್ರೀಗಳು ನನ್ನ ಪೂರ್ವೋತ್ತರಗಳನ್ನೆಲ್ಲ ವಿಚಾರಿಸಿದರು. ನಾನು ಸಂಕ್ಷೇಪವಾಗಿ, ನಮ್ಮ ಊರು - ಹಿರೇಕಾಂಶಿಯ ಗ್ರಾಂಟ್ ಸ್ಕೂಲ್ ಮಾಸ್ತರನಾಗಿದ್ದು, ಅಲ್ಲಿಂದ ಶಿವಮೊಗ್ಗಕ್ಕೆ ಬಂದದ್ದು ಎಲ್ಲವನ್ನು ಹೇಳಿದೆ. ಶ್ರೀಗಳು ಬಹುವಚನದಲ್ಲಿ ಆಗ "ನಿಮಗೆ ಶಿರಾಳಕೊಪ್ಪದ ಚನ್ನಮಲ್ಲಪ್ಪನವರು ಮತ್ತು ಹಾವೇರಿ ಹುಕ್ಕೇರಿಮಠದ ತಪಸ್ವಿಗಳಾದ ಶಿವಬಸವಸ್ವಾಮಿಗಳು ಹೇಗೆ ಪರಿಚಯ? ಅವರು ನಿಮಗೆ ಬರೆದ ಪತ್ರಗಳನ್ನು ನಾನು ಓದಿದೆ" ಇತ್ಯಾದಿಯಾಗಿ ಕೇಳಿದಾಗ ನಾನು ವಿಸ್ತಾರವಾಗಿಯೇ ಅವರಿಬ್ಬರೊಡನೆ ನನ್ನ ಇತಿಹಾಸ ಹೇಳಿದೆ. ಕೇಳಿದರು. ಶ್ರೀಗಳು "ನಿಮಗೆ -- ನಿಮಗೆ" ಎಂದು ಅನ್ನದೆ "ನಿನಗೆ -- ನಿನಗೆ" ಎಂದು ಹೇಳಬಾರದಿತ್ತೇ ಎನಿಸಿದ್ದಂತೂ ನಿಜ. ಅದೇ ಕಾಲದಲ್ಲಿಯೇ ಅವರಿಗೆ ಅಡವಿಸ್ವಾಮಿಗಳು ನಮ್ಮಲ್ಲಿಂದ ಗುಬ್ಬಿಗೆ ಬಂದ ವಿಚಾರವನ್ನು ತಿಳಿಸಿದೆ. ನನ್ನ ಈ ಮಾತುಗಳಿಂದ ಅವರಿಗೆ ಸಂತೋಷವಾಯಿತೆಂಬುದನ್ನು ಗಮನಿಸಿದೆ. ಕೊನೆಯದಾಗಿ "ಇಲ್ಲಿಯ ಊಟ ನಿಮಗೆ ಹಿಡಿಸುತ್ತದೆಯೋ? ಮುದ್ದೆ ಊಟಮಾಡುವ ಅಭ್ಯಾಸ ಇದೆಯೇ?" ಮುಂತಾಗಿ ಪ್ರಶ್ನಿಸಿದರು. "ಊಟವೇನೋ ಹಿಡಿಸುತ್ತದೆ. ಮುದ್ದೆ ಊಟ ಮಾಡುವುದೇ ಸಮಸ್ಯೆ" ಎಂದೆ. ಅವರು ನಕ್ಕರು.

ಮರುದಿನ ಓರ್ವ ಶಿವಪೂಜಾಮರಿ ನನ್ನ ಹತ್ತಿರ ಬಂದು "ಎರೇಸೀಮೆಯವರೆಂದರೆ ನೀವೆಯೋ" ಎಂದ. "ಹೌದು, ಏನು ಸಮಾಚಾರ" ಎಂದೆ. "ಏನೂ ಇಲ್ಲ ದಿನಾಲು ನೀವು ಬೆಳಿಗ್ಗೆ 6 ಘಂಟೆಗೆ ಹಳೆಯ ಮಠದ ಶಿವಪೂಜಾ ಗೃಹದ ಹತ್ತಿರ ಬನ್ನಿ. ಅಲ್ಲಿ ನಿಮಗಾಗಿ ರೊಟ್ಟಿ ಕೊಡಲಾಗುವುದು. ನಿಮಗೆ ಮುದ್ದೆ ತಿನ್ನುವ ಅಭ್ಯಾಸವಿಲ್ಲವೆಂದು ಬುದ್ಧಿಯವರ ಹತ್ತಿರ ಹೇಳಿದಿರಂತೆ. ಈ ಕಾರಣವೇ ಬುದ್ಧಿಯವರು ನಿಮ್ಮನ್ನು ಕರೆದು ನಿಮಗೆ ರೊಟ್ಟಿ ಮಾಡಿಕೊಡಲು ತಿಳಿಸಿದ್ದಾರೆ" ಎಂದು ಹೋಗಿಬಿಟ್ಟ. ಮನಸ್ಸಿನಲ್ಲಿ ನಾನು ಇಂಥ ಕಾರುಣ್ಯ ಹೃದಯದ ಮಹಾಮಾನವತ್ವವನ್ನು ಮೃದುಹೃದಯವನ್ನು, ಸೂಕ್ಷ್ಮಗ್ರಾಹಿಗಳನ್ನು ನಾನೆಲ್ಲಿ ಹುಡುಕಿ ತರಲಿ! ಆನಂದಾಬ್ಧಿಯಲ್ಲಿ ಮುಳುಗಿ ಕೆಲವು ಸಮಯ ಮೂಕನಂತೆ ಕುಳಿತೆ. ಪದೇ ಪದೇ ಆ ಹುಡುಗ ಹೇಳಿಹೋದ ಮಾತುಗಳನ್ನು ಮೆಲುಕು ಹಾಕತೊಡಗಿದೆ. ಶ್ರೀಗಳವರ ಆದೇಶವನ್ನು ಮೀರಲಿಲ್ಲ. ದಿನವೂ ಹಳೆಮಠಕ್ಕೆ ಹೋಗತೊಡಗಿದೆ. ಅಲ್ಲಿ ಶ್ರೀಗಳವರಿಗೆ ಅಡಿಗೆ ಮಾಡುತ್ತಿದ್ದ ಚಿಕ್ಕಳ್ಳಿಯ ಚನ್ನಪ್ಪ ಎಂಬುವವನು ಮರ್ಯಾದೆಯಿಂದ ಕರೆದು ಕುಳ್ಳಿರಿಸಿ ರೊಟ್ಟಿ-ಪಲ್ಯ-ಚಟ್ನಿ ಕೊಟ್ಟು ತಿನ್ನಿಸಿ ಕಳಿಸತೊಡಗಿದ. ಇಷ್ಟಾದರೂ ಶ್ರೀಗಳು ಹೆಚ್ಚಾಗಿ ನನ್ನನ್ನು ಮಾತನಾಡಿಸುತ್ತಲೂ ಇರಲಿಲ್ಲ. ನಾನೂ ಅವರ ಹತ್ತಿರಕ್ಕೇ ಹೆಚ್ಚಾಗಿ ಸದರದಿಂದ ವರ್ತಿಸಲೂ ಇಲ್ಲ. ಭಯದಿಂದ ದೂರದೂರದಲ್ಲಿ ಇರುತ್ತಿದ್ದೆ.

ಮುಂದೆ ಗಣೇಶಚತುರ್ಥಿ ಬಂತು. ಅದುವರೆಗೆ ಮೂಲೆಹಿಡಿದು ತುಕ್ಕು ಹಿಡಿಯುತ್ತ ಕುಳಿತಿದ್ದ ನನ್ನ ಕೀರ್ತನ ಕಲೆಗೆ ಆಗ ಸಾಣೆ ಹಿಡಿದು ಹರಿತಗೊಳಿಸುವ ಸಮಯ ಒದಗಿತು. ಈ ಅವಧಿಯಲ್ಲಿ ತುಮಕೂರಿನಲ್ಲಿ ಬಿ. ಶಿವಮೂರ್ತಿ ಶಾಸ್ತ್ರಿಯವರು ಮಾಡಿದ ಪರಿಹರನ ಗಿರಿಜಾ ಕಲ್ಯಾಣವನ್ನಾಧರಿಸಿದ ಶಿವಕಥೆಯೊಂದನ್ನು ಕೇಳಿದ್ದೆ. ಆ ಕಥೆ, ಶೈಲಿಗಳು ನನ್ನನ್ನು ಬಹಳ ಪ್ರಭಾವಿತನನ್ನಾಗಿಸಿಬಿಟ್ಟವು. ಈ ಕಥೆಯನ್ನು ನಾನೂ ಮಾಡಬೇಕೆಂದು ಸಂಕಲ್ಪಿಸಿದೆ. ಒಂದು ಗಿರಿಜಾ ಕಲ್ಯಾಣ ಕಾವ್ಯವನ್ನು ದೊರಕಿಸಿಕೊಂಡು ಶಿವಮೂರ್ತಿಶಾಸ್ತ್ರಿಗಳಿಗಿಂತಲೂ ಹೆಚ್ಚಿನ ವಿಷಯಸಂಗ್ರಹ ಮಾಡಿ ಒಂದು ಹಸ್ತಪ್ರತಿ ತಯಾರಿಸಿ ಕಥೆ ಮಾಡುವ ದೃಷ್ಟಿಯಿಂದ ಅಭ್ಯಾಸ ಮಾಡಿಕೊಂಡಿದ್ದೆ. ಗಣೇಶ ಚತುರ್ಥಿಯ ದಿನ ಗಣಪತಿಯ ಎದುರು ಅವರ ಅಪ್ಪ-ಅಮ್ಮರ ಸಂಬಂಧದ ಕಥೆ ಮಾಡುತ್ತೇನೆಂದು ಒಳ್ಳೆಯ ಉತ್ಸಾಹ ಮತ್ತು ಆವೇಗಗೊಂಡು ಕಥೆ ಮಾಡಿಬಿಟ್ಟೆ. ಶ್ರೀಗಳವರು ದೂರದಲ್ಲಿ ಕುಳಿತು ಈ ಕಥೆ ಕೇಳಿದರೆಂದು ಆಮೇಲೆ ಯಾರೋ ಹೇಳಿದರು. ಅದೇ ಶ್ರೀಗಳವರ ಮೇಲೆ ನನ್ನ ಶಕ್ತಿಯ ಗಾಢ ಪರಿಚಯವಾಗಲು ನಾಂದಿಯಾಯಿತೆಂದು. ಮರುದಿನ ನನ್ನನ್ನು ಕರೆದು 'ಕಥೆ ಚೆನ್ನಾಗಿ ಮಾಡಿದಿರಿ' ಎಂದು ಬಹುವಚನದಲ್ಲೇ ಅಂದು 'ಈ ಕಲೆ ಬೆಳೆಸಿಕೊಳ್ಳಿ' ಎನ್ನುತ್ತ 'ಸಂಗೀತಾಭ್ಯಾಸ ಎಲ್ಲಿ ಮಾಡಿದಿರಿ?' ಎಂದು ಕೇಳಿದರು. "ಎಲ್ಲೂ ಇಲ್ಲ ಬುದ್ಧಿ, ನಾಟಕ ಮೊದಲಾದವನ್ನು ನೋಡಿ ನಾನೇ ಹಾಡುತ್ತ ಹಾಡುತ್ತ ಆ ಕಲೆಯನ್ನು ಇಷ್ಟು ಉಳಿಸಿಕೊಂಡೆ. ನಾನು ಹಾಡುವುದು ಶಾಸ್ತ್ರೀಯವೇನಲ್ಲ; ಮನಸ್ಸಿಗೆ ಬಂದ ಹಾಗೆ ಹಾಡುತ್ತೇನೆ" ಎಂದೆ. ಅದಕ್ಕವರು "ಸಾಕು ಸಾಕು, ಅಷ್ಟಿದ್ದರೆ ಎಷ್ಟೋ ಆಯಿತು" ಎನ್ನುತ್ತ "ಹೋಗಿ ಹೋಗಿ! ನಿಮ್ಮ ಅಭ್ಯಾಸ ಮಾಡಿಕೊಳ್ಳಿ" ಎಂದು ಕಳಿಸಿಕೊಟ್ಟರು. ಮುಂದೆ ಅವರು ಪ್ರತಿವರ್ಷ ಭಿಕ್ಷಾಟನೆಗೆ ಹೋಗುವಾಗ ನನ್ನನ್ನು ಜೊತೆಗೆ ಕರೆದುಕೊಂಡು ಹಳ್ಳಿಗಳಿಗೆ ಹೋಗತೊಡಗಿದರು. ಅಲ್ಲಿ ಕೀರ್ತನ ಕಾಯಕ್ರಮಗಳನ್ನೇರ್ಪಡಿಸತೊಡಗಿದರು. ನಾನು ಹೋದಾಗ ಶ್ರೀಗಳವರಿಗೆ ಸ್ವಲ್ಪ ಶ್ರಮ ಕಡಿಮೆಯಾಗುತ್ತಿತ್ತು. ಈ ಸಂದರ್ಭದಲ್ಲಿ ನನಗೆ ಸಿದ್ಧಗಂಗೆಯ ಸುತ್ತಮುತ್ತಣ ನೂರಾರು ಹಳ್ಳಿ-ಪಳ್ಳಿಗಳ ಜನರ ಪರಿಚಯವಾಯಿತು. ನನ್ನ ಕಥೆಗೂ ಬಣ್ಣವೇರಿಹೋಯಿತು. ದೊಡ್ಡವರ ಪತ್ತಿನಿಂದ ಮಾಡಿದ ಕಥೆಗೂ ಕಥೆಗಾರರಿಗೂ ದೊಡ್ಡತನ ಸಂಸರ್ಗಜನ್ಯವಾಗಿ ಬರುತ್ತದಲ್ಲವೆ?

ತುಮಕೂರು ನಾರ್ಮಲ್ ಸ್ಕೂಲಿನಲ್ಲೂ ಅಷ್ಟೆ. ಘಟಾನುಘಟಿಗಳಾದ ಉಪಾಧ್ಯಾಯರುಗಳಲ್ಲಿ ನನ್ನ ಸ್ಥಾನದ ಮೇಲ್ಮೆಯನ್ನು ಕಾಪಾಡಿಕೊಂಡೆ. ಕೊನೆಗೆ ಮೊದಲ ತರಗತಿಯಲ್ಲಿ (ಫಸ್ಟ್ ಕ್ಲಾಸಿನಲ್ಲಿ) ತೇರ್ಗಡೆ ಹೊಂದಿದೆ. ಇಲ್ಲಿಯೂ ಅಷ್ಟೆ, ಮೊದಲನೆಯ ಸ್ಥಾನ ಪಡೆಯುವೆನೆಂದು ಓದಿದ್ದ ನನಗೆ ಸೆಕೆಂಡ್ ರ್‍ಯಾಂಕೇಕೆಂದು ಈಗಲೂ ಚಿಂತಿಸುತ್ತಿದ್ದೇನೆ. ಆದರೆ ಸಮಾಧಾನಕರವಾದ ಉತ್ತರ ಇನ್ನೂ ಹೊಳೆದಿಲ್ಲ. ಅಂತೂ ಎಬಿಸಿ ಮೂರೂ ಪರೀಕ್ಷೆಗಳು ಫಸ್ಟ್‌ಕ್ಲಾಸ್ ಸೆಕೆಂಡ್ ರ್‍ಯಾಂಕ್ ಬಂದುದಂತೂ ನಿಶ್ಚಯ.

ತುಮಕೂರಿನಲ್ಲಿ ಓದುತ್ತಿದ್ದಾಗ ಸಾಮಾನ್ಯವಾಗಿ ಎಲ್ಲ ಉಪಾಧ್ಯಾಯರ ಗಮನ ಸೆಳೆದುಬಿಟ್ಟಿದ್ದೆ. ಕೃಷ್ಣಸ್ವಾಮಯ್ಯಂಗಾರ್ ಅವರು ಇಲ್ಲಿಂದ ವರ್ಗವಾಗಿ ಹೋಗಿ ಸೀತಾರಾಮಯ್ಯನವರು ಬಂದಿದ್ದರು. ಅವರು "ನೀನು ಈ ಸಲದ ಪರೀಕ್ಷೆಯಲ್ಲಿ ಪ್ರಥಮಸ್ಥಾನ ಗಳಿಸಿ ನಮ್ಮ ಶಾಲೆಗೆ ಕೀರ್ತಿ ತರಬೇಕಪ್ಪಾ" ಎಂದು ಪದೇಪದೇ ಹೇಳುತ್ತಿದ್ದುದು ಇಂದೂ ಜ್ಞಾಪಕ. ಬರವಣಿಗೆಯ ಪರೀಕ್ಷೆ ನಡೆಯುವಾಗ ತಾವೇ ನನ್ನ ಹಿಂದೆ ಮುಂದೆ ಸುತ್ತಾಡಿ ನನ್ನ

ಬರವಣಿಗೆಯ ರೀತಿಯನ್ನು ನೋಡಿ ತೃಪ್ತಿವ್ಯಕ್ತಪಡಿಸಿದುದಲ್ಲದೆ, ತಮ್ಮ ಕಯ್ಯ ವಾಚನ್ನು ಕೊಟ್ಟು "ಕಾಲವನ್ನು ನೋಡಿಕೊಂಡು ಎಲ್ಲ ಪ್ರಶ್ನೆಗಳಿಗೂ ಉತ್ತರಿಸಬೇಕಪ್ಪೋ!" ಎಂದು ಹೇಳಿಹೋಗಿದ್ದೂ ಜ್ಞಾಪಕ. ಪ್ರಾಕ್ಟಿಕಲ್ ಪರೀಕ್ಷೆ ನಡೆಯುವಾಗಿನ ಒಂದು ನೆನಪು ಇಂದಿಗೂ ಇದೆ.

ನನ್ನ ಪಾಠವಿರುವ ದಿನ ಇಬ್ಬರು ಪರೀಕ್ಷಕರ ಬೋರ್ಡ್‌ನಲ್ಲಿ, ತುಮಕೂರು ಜಿಲ್ಲಾ ವಿದ್ಯಾಧಿಕಾರಿಗಳಾದ ಅಜೀಜ್ ಖಾನ್ ಎಂಬುವರು ಒಬ್ಬರು. ಅವರು ಬಹು ಶಿಸ್ತಿನವರೆಂದೂ ಪಾಠ-ಪ್ರವಚನಗಳನ್ನು ಬಹು ಸೂಕ್ಷ್ಮವಾಗಿ ಗಮನಿಸುವವರೆಂದೂ ಒಂದು ದಿನ ಮೊದಲೇ ತಿಳಿಯಿತು. ನಾನು ಅಜೀಜ್‌ಖಾನರಿಗೆ ತಕ್ಕ ವಿಷಯವೆಂದು ಮೊಗಲ ಚಕ್ರವರ್ತಿ ಹುಮಾಯೂನನು ಓರ್ವ ರಜಪೂತ ಸ್ತ್ರೀಯ ಮಾನರಕ್ಷಣೆ ಮಾಡಿದ ಇತಿಹಾಸ ಪಾಠವನ್ನೇ ತೆಗೆದುಕೊಂಡೆ. ಜರಿಯ ಮೈಸೂರುಪೇಟಾ, ಉದ್ದನೆಯ ಕೋಟು, ಪಂಚೆ ಉಟ್ಟೆ. ಆಗ ಟ್ರೈನಿಂಗ್ ಕಾಲೇಜಿನಲ್ಲಿ ಪಾಠಕೊಡುವಾಗ ಇದೇ ಉಡುಪು ಧರಿಸಿ ಹೋಗಬೇಕಾಗಿತ್ತು. ಇವೆಲ್ಲ ಬಾಡಿಗೆಗೆ ಸಿಗುತ್ತಿದ್ದವು. ನಮ್ಮ ನಾರ್ಮಲ್ ಸ್ಕೂಲಿನ ಪ್ರಾಕ್ಟಿಕಲ್ ಪರೀಕ್ಷೆಯೇ ಆಗಲಿ, ಉಳಿದ ದಿನಗಳಲ್ಲಿ ನಡೆಯುವ ವಿಮರ್ಶಾಪಾಠಗಳಿಗೇ ಆಗಲಿ ನಾವು ಗೊತ್ತುಪಡಿಸಿದ (ಯೂನಿಫಾರ್ಮ್) ಉಡುಪಲ್ಲದೆ ಬೇರೆ ಉಡುಪಿಗೆ ಬೆಲೆಯೇ ಇರಲಿಲ್ಲ. ಈ ಉಡುಪಿನಲ್ಲೂ ಎರಡು ಮೂರು ದರ್ಜೆಯ ಉಡುಪುಗಳನ್ನು ವ್ಯಾಪಾರಸ್ಥರು ಮಾಡಿದ್ದು ಬಾಡಿಗೆಗೆ ಕೊಡುತ್ತಿದ್ದರು. ಉತ್ತಮ ದರ್ಜೆಯ ಉಡುಪುಗಳಿಗೆ ಒಂದು ರೂಪಾಯಿ ಹೆಚ್ಚು. ನಾನು ಉತ್ತಮ ದರ್ಜೆಯ ಜರಿಪೇಟಾ, ಇಸ್ತ್ರಿ ಮಾಡಿಕೊಟ್ಟು ಬಿಳಿಯ ಮಲ್ಲಿನ ಪಂಚೆಗಳನ್ನೇ ಒಂದು ರೂಪಾಯಿ ಹೆಚ್ಚು ಕೊಟ್ಟು ಆರಿಸಿ ತೊಟ್ಟುಕೊಂಡು ಪಾಠೋಪಕರಣಗಳೊಡನೆ ಒಳ್ಳೆಯ ಮದುವೆ ಗಂಡಿನಂತೆ ಕಾಣಿಸಿಕೊಂಡು ಪರೀಕ್ಷಾ ಕೊಠಡಿಗೆ ಪ್ರವೇಶಿಸಿದೆ. ಅಲ್ಲಿ ಈ ನನ್ನ ಸಾಮಗ್ರಿಗಳನ್ನು ಇಟ್ಟು ಕಪ್ಪುಹಲಗೆಯನ್ನು ಸ್ವಚ್ಛಗೊಳಿಸಿ ಬೇರೊಂದು ಕೊಠಡಿಯಲ್ಲಿ ಕುಳಿತ ನಾನು ಪಾಠಕೊಡಬೇಕಾಗಿದ್ದ ಹುಡುಗರನ್ನು ಸಾಲಾಗಿ ನಿಲ್ಲಿಸಿ ಕೊಠಡಿಯನ್ನು ಹೊಗಿಸಿ, ಕುಳ್ಳಿರಿಸಿ ಪಾಠವನ್ನು ಪ್ರಾರಂಭಿಸಿದೆ. ಅಂಥ ಕಾಲದಲ್ಲಿ ಉಪಾಧ್ಯಾಯನ ಚಾಕಚಕ್ಯತೆಯನ್ನು, ಸಂವಿಧಾನವನ್ನು, ಶಿಕ್ಷಣತತ್ತ್ವವನ್ನು ಗಮನಿಸಲು ಓರ್ವ ತರ್ಲೆ ಹುಡುಗನಿಗೆ ತರಗತಿಯಲ್ಲಿ ಗಲಾಟೆ ಮಾಡಲು ಹೇಳಿ ಕಳಿಸುತ್ತಿದ್ದರಂತೆ. ನಾನು ಪಾಠ ಪ್ರಾರಂಭ ಮಾಡುತ್ತಲೇ ಓರ್ವ ಹುಡುಗನು ತಲೆಹರಟೆ ಪ್ರಶ್ನೆ ಕೇಳುವುದು, ವಿಕಾರವಾಗಿ ನಗುವುದು, ಪಕ್ಕದ ಹುಡುಗನನ್ನು ಚೂಟಿ ಅಳಿಸುವುದು ಏನೆಲ್ಲ ಚೇಷ್ಟೆಯನ್ನು ಪ್ರಾರಂಭಿಸಿದ. ನಾನು ಅವನ ಕಡೆ ಲಕ್ಷ್ಯ ಕೊಡುತ್ತಲೇ ಪಾಠ ಮಾಡುತ್ತಿದ್ದೆ. ಅಂಥ ತರಲೆ ಹುಡುಗರಿಗೆ ಪ್ರಶ್ನೆ ಕೇಳಿ ಪಾಠದಲ್ಲಿ ತೊಡಗಿಸಬೇಕಾದುದು ಉತ್ತಮ ಉಪಾಧ್ಯಾಯನ ಲಕ್ಷಣವಲ್ಲವೆ? ಅದರಂತೆ ಕೇಳಿದ ಪ್ರಶ್ನೆಗಳಿಗೆ ಸೂಕ್ತ ಉತ್ತರ ಕೊಡದೆ ಆಗಲೂ ಅವನ ತರಲೆಯೇ ಪ್ರಾರಂಭವಾಯಿತು. ಆಮೇಲೆ ಅವನಿಗೆ ಸಾಮೋಪಾಯ ಹೇಳಿ, ಆ ಸ್ಥಳ ಬಿಡಿಸಿ ಎಲ್ಲಕ್ಕೂ ಮುಂದಿನ ಸಾಲಿನಲ್ಲಿ ಕುಳ್ಳಿರಿಸಿಕೊಂಡು ಪಾಠ ಪ್ರಾರಂಭಿಸಿದೆ. ಆಗಲೂ ಇಲ್ಲಿ ಗಲಾಟೆ ಪ್ರಾರಂಭವಾಯಿತು. ಅಷ್ಟಾದರೂ ನಾನು ಸಂಯಮ ಕಳೆದುಕೊಳ್ಳದೆ ಹುಡುಗನಿಗೆ ಗದರದೆ, ಎದ್ದು ನಿಲ್ಲುವ ಶಿಕ್ಷೆ ಕೊಟ್ಟೆ. ಅದಕ್ಕೂ ಅವನು ಬಗ್ಗಲಿಲ್ಲ; ಎದ್ದು ನಿಂತೇ ಸುಮ್ಮ ಸುಮ್ಮನೆ "ನೋಡಿ ಸಾರ್, ಇವನು ನನ್ನನ್ನು ನೋಡಿ ನಗುತ್ತಾನೆ" ಎಂದು ನನ್ನ ಅವಧಾನನ್ನು ಹಾಳುಮಾಡತೊಡಗಿದ. ನಾನು ಆ ಕೂಡಲೆ ಒಳ್ಳೆಯ ಮಾತಿನಿಂದ "ಅಪ್ಪಾ, ನಿನ್ನಿಂದ ಬಹಳ ತೊಂದರೆಯಾಗುತ್ತಿದೆ; ಪಾಠ ಕೇಳುವ ಉಳಿದ ಮಕ್ಕಳಿಗೆ ನೀನು ನಷ್ಟ ಉಂಟುಮಾಡುತ್ತಿದ್ದೀಯೆ.

ಈ ಪಾಠ ಮುಗಿಯುವವರೆಗೆ ಸ್ವಲ್ಪ ಹೊತ್ತು ನೀನು ಹೊರಗೆ ಕುಳಿತಿರು" ಎಂದು ಹೇಳುತ್ತ ಆತನ ಕೈ ಹಿಡಿದು ಹೊರಗೆ ಕರೆದೊಯ್ದು ಅವರ ಉಪಾಧ್ಯಾಯರ ಕೈಗೆ ಕೊಟ್ಟು, ಅನಂತರ ಯಶಸ್ವಿಯಾಗಿ ಪಾಠ ಮುಗಿಸಿದೆ. ಮೌಲ್ಯಮಾಪನದಲ್ಲಿ ನಾನು ಕೇಳಿದ ಪ್ರಶ್ನೆಗಳಿಗೆ ವಿದ್ಯಾರ್ಥಿಗಳು ಸಮರ್ಪಕ ಉತ್ತರ ಕೊಟ್ಟರು. ಅನಂತರ ಶಿಸ್ತಿನಿಂದ ಹುಡುಗರನ್ನು ಸಾಲಾಗಿ ಹೊರಗೆ ಕಳಿಸಿಬಂದು ಕೊಠಡಿಯನ್ನು ಹೊಕ್ಕೆ. ಆಗ ಅಜೀಜ್‌ಖಾನ್ ಅವರು ನನಗೆ 'ನೀವು ಆ ಹುಡುಗನನ್ನು ಹೊರಗೆ ಕಳಿಸಿದ್ದು ಸರಿಯೆ?' ಎಂದರು. ನಾನು ಧೈರ್ಯವಾಗಿಯೇ 'ಸರಿ' ಎಂದೆ. "ಹೇಗೆ ಸರಿ! ಅವನ ಎಜ್ಯುಕೇಷನ್ ಹಾಳಾಗಲಿಲ್ಲವೆ? ಇದಕ್ಕೆ ನಿಮ್ಮ ಉತ್ತರವೇನು?" ಎಂದರು. "ಅವನ ಎಜ್ಯುಕೇಷನ್‌ಗೆ ಧಕ್ಕೆಯಾಯಿತು ಅದು ಸರಿ. ಆದರೆ ಉಳಿದ ನಾಲ್ವತ್ತು ಹುಡುಗರ ಎಜ್ಯುಕೇಷನ್ ನಿರ್ಬಾಧಿತವಾಯಿತು. ನಾನು ಓರ್ವ ಹುಡುಗನ ಶಿಕ್ಷಣ ಹಾಳಾದರೂ ಚಿಂತೆಯಿಲ್ಲ, ಈ ನಾಲ್ವತ್ತು ಹುಡುಗರ ಭವಿಷ್ಯ ಹಾಳಾಗಬಾರದೆಂದು ಅವನನ್ನು ಹೊರಗೆ ಕಳಿಸುವ ಸೂಕ್ತಮಾರ್ಗ ಕಂಡೆ" ಎಂದೆ. ಅಜೀಜ್‌ಖಾನ್ ನಕ್ಕುಬಿಟ್ಟ. ಆ ಮನುಷ್ಯ ನಗುವವನೇ ಅಲ್ಲ; ಬಲು ಗಂಟು ಮುಖದವನು. ಅಷ್ಟಕ್ಕೇ ಅವನು ಬಿಡಲಿಲ್ಲ "ಅವನಿಗೆ ಶಿಕ್ಷಣ ಸಿಗಲೇಬಾರದೇನು ಹಾಗಾದರೆ?" ಅಂದ. "ಸಿಗಬೇಕು. ಅದಕ್ಕೆ ಮನೆಯ ತಂದೆ-ತಾಯಿಯರು ಮತ್ತು ಶಾಲೆಯ ಸರ್ವ ಉಪಾಧ್ಯಾಯರ ಸಹಕಾರ ಬೇಕು. ಈ ಒಂದು ಪಾಠವೇಳೆಯಲ್ಲೇ ಅವನ ಕಿಡಿಗೇಡಿತನವನ್ನು ಸರಿಪಡಿಸುವುದು ವ್ಯರ್ಥಶ್ರಮ. ಅದಕ್ಕಾಗಿಯೇ ನಾನು ನಿಮಗೆ ನನ್ನ ಸಂವಿಧಾನ ಕ್ರಮ ಗೊತ್ತಾಗಲೆಂದು ಮೊದಲು ಸಾಮೋಕ್ತಿ ಹೇಳಿದೆ. ಜಗ್ಗಲಿಲ್ಲ, ಸ್ಥಳಾಂತರಿಸಿದೆ. ಅದಕ್ಕೂ ಬಗ್ಗಲಿಲ್ಲ, ಕೊನೆಗೆ ಲಘು ಶಿಕ್ಷೆಕೊಟ್ಟೆ, ಅದಕ್ಕೂ ಮಣಿಯಲಿಲ್ಲ. ಕೊನೆಗೆ ತರಗತಿಯಿಂದ ಹೊರಹಾಕಿದೆ. ಶಿಕ್ಷಣದಲ್ಲಿ ಇದು ಸಮರ್ಥನೀಯ ಮಾರ್ಗವೆಂದು ನನ್ನ ನಂಬುಗೆ" ಎಂದೆ. ನನಗೆ ಮಾತನಾಡುವುದನ್ನು ಯಾರೂ ಕಲಿಸಲೇ ಬೇಕಾದುದಿಲ್ಲವಲ್ಲ! ಅದರಿಂದ ಅಜೀಜ್‌ಖಾನನಿಗೆ ಬಹಳ ತೃಪ್ತಿಯಾಗಿರಬೇಕು. "ನೀವು ಯಾವ ಊರ ಮೇಷ್ಟ್ರು" ಅಂದ. ಅದಕ್ಕೆ ನಾನು "ಪ್ರೈವೇಟ್ ಸ್ಟೂಡೆಂಟ್" ಎಂದೆ. ಅವನು ಬಹು ಆಶ್ಚರ್ಯದಿಂದ "ಏನು! ನೀನು ಪ್ರೈವೇಟೊ!" ಎಂದ, ಹುಬ್ಬು ಎತ್ತರಿಸಿ. ಹೌದೆಂದೆ. ಪಕ್ಕದ ಇನ್ನೊಬ್ಬ ಎಗ್ಜಾಮಿನರ್‌ರೊಡನೆ ಏನೇನೊ ಇಂಗ್ಲೀಷಿನಲ್ಲಿ ಮಾತನಾಡಿದ. ಅದರ ಅರ್ಥ ನನಗಾಗಲಿಲ್ಲ. ಆಮೇಲೆ "ನಿನಗೆ ಕೆಲ್ಸ ಕೊಟ್ಟರೆ ಹೋಗುತ್ತೀಯೋ" ಎಂದ. ನಾನು ತಡಮಾಡದೆ "ಇಂದೇ ಕೊಟ್ಟರೆ ಇಂದೇ ಕೆಲಸಕ್ಕೆ ಹಾಜರ್" ಎಂದೆ ನಗುತ್ತ. ಅವನು ಪಕಪಕ ನಗುತ್ತ "ಹೋಗಪ್ಪ ತುಂಬಾ ಸಂತೋಷ" ಎಂದುಬಿಟ್ಟ. ತಂಟೆಕೋರ ಹುಡುಗನನ್ನು ನಾನು ಹೊರಗೆ ಕಳಿಸಿ ಪಾಠ ಪ್ರಾರಂಭಿಸಿದ ಬಗೆಗೆ ಬಹುಶಃ ಅವರು ಇವನು ಶಾಲಾಸಂವಿಧಾನವನ್ನು, ಶಿಕ್ಷಣತತ್ತ್ವವನ್ನು ಚೆನ್ನಾಗಿ ಅರಿತ ಓರ್ವವ್ಯಕ್ತಿ ಎಂದು ಭಾವಿಸಿದನೆಂದು ತರ್ಕ ಮಾಡಿದೆ. ಬಹುಶಃ ಇಂಗ್ಲೀಷಿನಲ್ಲಿ ಮಾತಾಡಿದ್ದು ಇದೇ ವಿಷಯ ಇರಬೇಕೆಂದು ಭಾವಿಸಿದೆ. ಹೀಗೆ ಜಿಲ್ಲಾ ಎಜ್ಯುಕೇಷನ್ ಆಫೀಸರ್‌ರೊಡನೆ ಧೈರ್ಯವಾಗಿ ಮಾತನಾಡುತ್ತಿರುವುದನ್ನು ಕಿಡಕಿಯಿಂದ ನೋಡುತ್ತಿದ್ದ ನಮ್ಮ ಉಪಾಧ್ಯಾಯರಿಬ್ಬರು ಬಹು ಸಂತೋಷಗೊಂಡು ನಾನು ಹೊರಗೆ ಬರುವುದನ್ನೇ ದಾರಿ ಕಾಯುತ್ತಿದ್ದರು. ಹೊರಗೆ ಬಂದೊಡನೆ 'ಎಕ್ಸ್‌ಲೆಂಟ್' ಎನ್ನುತ್ತ ನನ್ನನ್ನು ಶ್ಲಾಘಿಸುತ್ತ ಅವರೇ ಪಕ್ಕದ ಹೋಟಲ್‌ಗೆ ಕರೆದೊಯ್ದು ತಿಂಡಿ-ಕಾಫಿ ಕೊಡಿಸಿ, ಹೊಟ್ಟೆ ಹುಣ್ಣಾಗುವಂತೆ ನಕ್ಕರು. ನಾನೂ ನಕ್ಕಿದ್ದೇ ನಕ್ಕಿದ್ದು. ಅಜೀಜ್‌ಖಾನ್ ಸಾಹೇಬರೊಡನೆ ಆಗ ಮಾತನಾಡುವುದಕ್ಕೆ ಉಪಾಧ್ಯಾಯರೆಲ್ಲರೂ ಹೆದರುತ್ತಿದ್ದರು.

ತುಮಕೂರು ಟ್ರೈನಿಂಗ್ ಕಾಲೇಜಿನಲ್ಲಿ ನಾನು ಇರುವಷ್ಟು ಕಾಲ 'ಪ್ರಾಕ್ಟಿಸಿಂಗ್' ಸ್ಕೂಲಿನಲ್ಲಿ ನಾನು ಕೊಡುತ್ತಿದ್ದ ಪಾಠವನ್ನು ನೋಡಲು ಕೃಷ್ಣಮೂರ್ತಿ ಅನ್ನುವ ಮಾಸ್ತರರು ಉಳಿದ ವಿದ್ಯಾರ್ಥಿಗಳಿಗೆಲ್ಲ "ಆ ಎರೇಸೀಮೆ ಅಯ್ಯ ಇದ್ದಾನಲ್ಲ! ಅವನ ಪಾಠವನ್ನು ಲಕ್ಷ್ಯವಿಟ್ಟು ನೋಡಿ. ಅವನು ಬರೆದ ಪಾಟಿ, ಅವನು ಹಾಕುವ ಪ್ರಶ್ನೆಗಳ ಮಾದರಿ ಮತ್ತು ತರಗತಿ ಕೊಠಡಿಯಲ್ಲಿ ಸಂವಿಧಾನವನ್ನು ಗಮನಿಸಿ, ಅದನ್ನು ಅನುಸರಿಸಿ ಎಂದು ಎಲ್ಲರಿಗೂ ಹೇಳುತ್ತಿದ್ದುದನ್ನು ಎರಡು ಮೂರು ಬಾರಿ ಕೇಳಿದ್ದೇನೆ. ಅವರು ಒಂದು ಸಲ ನಾನು ಕೊಟ್ಟ ವಿಮರ್ಶಾಪಾಠಕ್ಕೆ ವಿಮರ್ಶೆ ಬರೆಯುತ್ತ ಕೊನೆಯಲ್ಲಿ "ನಾನು ಹನ್ನೆರಡು ವರ್ಷಗಳಿಂದೀಚೆಗೆ ಇಂಥ ಮಾದರಿ ಪಾಠವನ್ನು, ಪಾಠ ಕೊಡುವವರನ್ನು ಕಂಡಿರಲಿಲ್ಲ" ಎಂದು ಶ್ಲಾಘಿಸಿದ್ದರು. ಇವರು ಸಾಮಾನ್ಯ ಉಪಾಧ್ಯಾಯರಲ್ಲ, ಶ್ರೇಷ್ಠ ಉಪಾಧ್ಯಾಯರೆಂದು ಕೀರ್ತಿತರು. ನಿರ್ಮಾಪಕರು. ಇಪ್ಪತ್ತು ವರ್ಷಗಳು ಟ್ರೈನಿಂಗ್ ಸ್ಕೂಲುಗಳಲ್ಲಿ ಶಿಕ್ಷಣತತ್ವ ಬೋಧನಕ್ರಮ ವಿಷಯಗಳನ್ನು ಪಾಠ ಹೇಳಿದ ದಿವ್ಯ ಅನುಭವವಿತ್ತು. ಪ್ರಸಿದ್ಧ ಶಿಕ್ಷಣತಜ್ಞರು ಬರೆದ ಬೋಧನಾಕ್ರಮವನ್ನು ತರ್ಕಬದ್ಧವಾಗಿ ಖಂಡಿಸುವ ಮತ್ತು ಶ್ಲಾಘಿಸುವ ಕೆಲಸ ಮಾಡುತ್ತಿದ್ದರು. ಇವರಂತೆ ಇನ್ನೊಬ್ಬ ಅರಿತು ನುರಿತ ಸಂವಿಧಾನಶಾಸ್ತ್ರ ಪಾರಂಗತರೆಂದು ಬೇಕಾದರೆ ಹೇಳಬಹುದಾದ ಓರ್ವ ಉಪಾಧ್ಯಾಯರು ನನಗೆ ಆಗ ಅಲ್ಲಿ ದೊರೆತದ್ದು ನನ್ನ ಪುಣ್ಯವೆಂದು ಭಾವಿಸಿದ್ದೇನೆ. ಅವರೇ ಎಂ.ಜಿ.ಕೆ. ಎಂದು ಪ್ರಸಿದ್ಧರಾಗಿದ್ದ ಎಂ.ಜಿ. ಕೃಷ್ಣರಾವ್ ಎಂಬುವರು. ಇವರ ಪ್ರಭಾವ ನನ್ನ ಮೇಲೆ ಬಹುಮಟ್ಟಿಗೆ ಆದುದನ್ನು ನಾನು ಇಂದಿಗೂ ನೆನೆಸಿಕೊಳ್ಳುತ್ತೇನೆ.

ನಮ್ಮ ಪ್ರಾಕ್ಟಿಕಲ್ ಪರೀಕ್ಷೆ ಇಷ್ಟಕ್ಕೇ ಮುಗಿಯಲಿಲ್ಲ. ಕೊನೆಯದಾಗಿ ಐವತ್ತು ಅಂಕಗಳ ಅರ್ಧ ವರ್ಷೀಯ ಡ್ರಾಯಿಂಗ್ ಪರೀಕ್ಷೆಯೊಂದು ನಡೆಯತೊಡಗಿತು. ನಮಗೆಲ್ಲ ಒಂದೊಂದು ಕ.ಹ.ಯನ್ನು ತೋರಿಸಿದರು. ಅಲ್ಲಿ ನಮ್ಮ ರಿಜಿಸ್ಟರ್ ನಂಬರ್ ನಮೂದಿತವಾಗಿತ್ತು. ಪ್ರಶ್ನೆ ಇಷ್ಟೇ "ಒಂದು ಅರಣ್ಯ, ಅರಣ್ಯ ಮಧ್ಯದಲ್ಲೊಂದು ಕೆರೆ, ಕೆರೆಗೆ ನೀರಿಗೆಂದು ಬಂದ ಒಂದು ಜಿಂಕೆ. ಜಿಂಕೆಯನ್ನು ನೋಡಿ ದೂರದಲ್ಲಿ ಓಡಿಬರುತ್ತಿರುವ ನಾಯಿ" ಇಷ್ಟನ್ನು ಅರ್ಧಘಂಟೆಯಲ್ಲಿ ಚಾಕ್‌ಪೀಸ್‌ನಿಂದ ನಾವು ರೂಪಿಸಬೇಕಾಗಿತ್ತು. ಮುಖ್ಯವಾದುದನ್ನು ಡ್ರಾಯಿಂಗ್ ಮೊದಲು ಬರೆಯಬೇಕಷ್ಟೆ. ನಾನು ಮೊದಲು ಕೆರೆ. ಅನಂತರ ನೀರು ಕುಡಿಯಲು ಬಗ್ಗುತ್ತಿರುವ ಜಿಂಕೆ, ಆಮೇಲೆ ನಾಯಿಯನ್ನು ಚಿತ್ರಿಸಿದೆ. ಅನಂತರ ಅರಣ್ಯದ ಹಿನ್ನೆಲೆ, ದೂರದಲ್ಲಿ ಕಾಣುವ ಒಂದು ಗುಡ್ಡದ ಸಾಲು, ಹಾರುವ ಹಕ್ಕಿಗಳು ಎರಡು ಮೂರನ್ನೂ ಚಿತ್ರಿಸಿ ಬಿಳುಪು ಕಪ್ಪು ಮತ್ತು ಮೊದಲೇ ಯೋಚಿಸಿ ಒಯ್ದಿದ್ದ ಹಸಿರು ಹಳದಿ ಗುಲಾಬಿ ಬಣ್ಣದ ಚಾಕ್‌ಪೀಸ್‌ಗಳನ್ನು ಬಳಸಿ ಒಳ್ಳೆ ಚಿತ್ರವನ್ನು ಬರೆದೆ. ಹಿಂದೆ ಹಿರೇಕಾಂಶಿಯಲ್ಲಿದ್ದಾಗಲೇ ನಾಟಕದ ಪರದೆ ಮತ್ತು ಸೈಡ್ ಪೀಸ್‌ಗಳನ್ನು ಬರೆದ ಮನುಷ್ಯನಲ್ಲವೆ ನಾನು!. ಆ ಕಲೆಯನ್ನು ನಾರ್ಮಲ್ ಸ್ಕೂಲ್‌ಗೆ ಬಂದ ಮೇಲೆ ಡ್ರಾಯಿಂಗ್ ಉಪಾಧ್ಯಾಯರ ಸ್ನೇಹ ಮಾಡಿ ಹೆಚ್ಚಾಗಿ ಬೆಳೆಸಿಕೊಂಡು, ಎಷ್ಟೋ ಜನ ಉಪಾಧ್ಯಾಯರಿಗೆ ಕಥಾ ಚಿತ್ರಗಳೇ ಮೊದಲಾದ ಪಾಠೋಪಕರಣಗಳನ್ನು ತಯಾರಿಸಿಕೊಟ್ಟು ಸ್ವಲ್ಪ ಪುಡಿಗಾಸು ಸಂಪಾದಿಸುತ್ತಿದ್ದೆ. ಇಂಥ ನನಗೆ ಇವರು ಕೊಟ್ಟ ಈ ಪ್ರಶ್ನೆ ಒಂದು ಲೆಕ್ಕವೇ ಆಗಿರಲಿಲ್ಲ. ಕಾಲಕ್ಕೆ ಸರಿಯಾಗಿ ಚಿತ್ರ ಮುಗಿಸಿ ಕಾಲೇಜಿನಿಂದ ಹೊರಗೆ ಬಂದು ನನ್ನ ಚಿತ್ರವಿರುವ ಕ.ಹ.ಯ ಸಮಪೀದಲ್ಲಿರುವ ಕಿಡಿಕಿಯ ಹತ್ತಿರ ಹಿಂದೆ ನಿಂತುಕೊಂಡೆ. ಸಾಮಾನ್ಯವಾಗಿ ಶಿಕ್ಷಕರೆಲ್ಲ ಈ ಕೆಲಸ ಮಾಡುತ್ತಿದ್ದರು. ನಾನೂ ನಿಂತೆ.

ಪರೀಕ್ಷಕರ ಮೂರು ಜನಗಳ ಬೋರ್ಡು ನನ್ನ ಚಿತ್ರದ ಹತ್ತಿರ ಬಂತು. ಆ ಮೂವರಲ್ಲಿ ನನ್ನನ್ನು ಬಹುಮೆಚ್ಚಿಕೊಂಡಿದ್ದ ನಮ್ಮ ಕಾಲೇಜಿನ ಉಪಾಧ್ಯಾಯರೇ ಆಗಿದ್ದ ಕೃಷ್ಣಮೂರ್ತಿಯವರೊಬ್ಬರು. ಉಳಿದ ಇಬ್ಬರು ಬೇರೆ ಬೇರೆ ಕಡೆಗಳಿಂದ ಬಂದಿದ್ದವರು. ಈ ಮೂವರ ಸರಾಸರಿ ಅಂಕವೇ ನಮಗೆ ಸಲ್ಲುವಂತಹುದು. ಹೊರಗಿನಿಂದ ಬಂದವರು ಎಷ್ಟೆಷ್ಟು ಮಾರ್ಕ್ಸ್ ಕೊಟ್ಟರೋ ನನಗೆ ತಿಳಿಯದು. ನಮ್ಮ ನಚ್ಚಿನ ಉಪಾಧ್ಯಾಯರು ಅವರೊಡನೆ ಚರ್ಚೆಗೆ ನಿಂತು "ನೂರಕ್ಕೆ ನೂರರಷ್ಟು ಈ ಚಿತ್ರಕ್ಕೆ ಕೊಡಬೇಕು" ಎಂದು ಚರ್ಚೆಯಲ್ಲಿ ಗಟ್ಟಿಬಾಯಿ ಮಾತನಾಡಿದ್ದು ಕೇಳಿತು ನನಗೆ. "ತೋರಿಸಿ! ಈ ಚಿತ್ರದಲ್ಲಿ ಪ್ರಶ್ನೆಪತ್ರಿಕೆಗೆ ವಿರುದ್ಧವಾದೆಲ್ಲಿದೆ? ಒಳ್ಳೆಯ ಪ್ರಮಾಣಬದ್ಧವಾಗಿ ಪ್ರಕೃತಿ ಚಿತ್ರವಿದೆ. ಜಿಂಕೆ ಮತ್ತು ನಾಯಿಗಳು ಸ್ಪಷ್ಟವಾಗಿವೆ. ಕೆರೆ-ಕೆರೆಯ ನೀರನ್ನು ಚಿತ್ರಿಸುವಲ್ಲಿ ವಿದ್ಯಾರ್ಥಿ ಸಫಲನಾಗಿದ್ದಾನೆ. ಆದ್ದರಿಂದ ನೂರಕ್ಕೆ ನೂರು ಕೊಡಲೇಬೇಕು" ಎಂದು ಹಟ ಹಿಡಿದುಬಿಟ್ಟರು. ಕೊನೆಗೆ ನೂರಕ್ಕೆ ತೊಂಬತ್ತರಷ್ಟು ಅಂದರೆ ಐವತ್ತಕ್ಕೆ ನಾಲ್ವತ್ತೆಂಟು ಅಂಕ ಕೊಡಲು ಬೋರ್ಡು ಒಪ್ಪಿತು. ಹೀಗೆ ಯಶಸ್ವಿಯಾಗಿ ವಿ.ಟಿ.ಸಿ. ಪರೀಕ್ಷೆ ಮುಗಿಸಿದ ನಾನು ದ್ವಿತೀಯ ರ್‍ಯಾಂಕ್‌ನಲ್ಲಿ ತೇರ್ಗಡೆ ಹೊಂದಿದ್ದು ಸ್ವಲ್ಪ ಅಸಮಾಧಾನವಾಯಿತಾದರೂ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ರಿಜಲ್ಟ್ ಬಂದ ದಿನ ನಮ್ಮ ಹೆಡ್‌ಮಾಷ್ಟರವರಾದ ಸೀತಾರಾಮಯ್ಯನವರು ತಮ್ಮ ಮನೆಗೆ ನನ್ನನ್ನು ಆಹ್ವಾನಿಸಿ, ಕಾಫಿಕೊಟ್ಟು "ನಿಮ್ಮಂಥ ವಿದ್ಯಾರ್ಥಿಗಳು ಸಿಗುವುದು ಬಹಳ ಅಪರೂಪ" ಇತ್ಯಾದಿ ಮಾತುಗಳಿಂದ ಶ್ಲಾಘನೆಯ ಸುರಿಮಳೆ ಸುರಿಸಿದರು. ಅವರು ಆಗ ಕೊಟ್ಟ ಒಂದು ಮೆಚ್ಚುಗೆಯ ವೈಯಕ್ತಿಕ ಅರ್ಹತಾ ಪತ್ರ ನನ್ನಲ್ಲಿ ಇನ್ನೂ ಇದೆ. ಅವನ್ನು ನೋಡಿದಾಗಲೆಲ್ಲ ನನ್ನ ಹಿಂದಿನ ಪಾದರಸದಂತಹ ಚಟುವಟಿಕೆಗಳ ಚಿತ್ರ ಚಿತ್ತಭಿತ್ತಿಯ ಮೇಲೆ ನಿಂತು ನನಗೆ ನಾನೇ ನಗುವಂತೆ ಮಾಡುತ್ತದೆ. ಆ ಅರ್ಹತಾ ಪತ್ರದ ಪೂರ್ಣಪಾಠವನ್ನು ಕೊಟ್ಟಿದ್ದೇನೆ.

## *District Normal Shcool, TUMKUR*

Date : 7.8.1946

I am glad to certify Mr. Chennappa Mudukappa Yereseeme was a student in the III year class (V.T.C.) of this institution during the year 1945-46. In the public examination (I & II V.T.C. Exams) of 1945 & 1946, he has passed in I class and takes II rank amongst the candidates passing in I class in II V.T.C. exams, through this institution. His character and behaviour were excellent and served as a model for his classmates. He has a great ability as a platform speaker and his oration is as effective as it is quickly flowing and convincing equally well. He also gives very good Harikatha performance that attract all equally well. It is my duty to wish him a happy future and may God bless him with that.

***N. Seetharamayya***
Head Master
District Normal School
TUMKUR

ಮುಂದೆ ನನಗೆ ಜಿಲ್ಲಾ ವಿದ್ಯಾಧಿಕಾರಿಗಳು ತೊಂಡಗೆರೆ (ತುಮಕೂರು ತಾಲ್ಲೂಕು) ಪ್ರಾಥಮಿಕ ಶಾಲಾ ಉಪಾಧ್ಯಾಯ ಸ್ಥಾನ ಸ್ವೀಕರಿಸಲು ಅಪ್ಪಣೆ ಪತ್ರ ಕಳಿಸಿದರು. ಅದರ ಪ್ರಕಾರ ಕೊಟ್ಟರು. ಅಲ್ಲಿ ತಾರೀಖು 24.8.1946 ರಂದು ಕೆಲಸಕ್ಕೆ ಹಾಜರಾಗಿ ಉಪಾಧ್ಯಾಯನಾಗಿ ಸೇವೆ ಸಲ್ಲಿಸತೊಡಗಿದ್ದೊಂದು ಬೇರೆ ಇತಿಹಾಸ. ಅದನ್ನು ಮುಂದೆ ವಿವರಿಸುತ್ತೇನೆ. ಆ ಊರಿನ ಪಟೇಲರೂ, ಸದ್ಗೃಹಸ್ಥರೂ ಆಗಿದ್ದ ಪಟೇಲ್ ಸಿದ್ಧವೀರಪ್ಪ ಮತ್ತು ಅವರ ಮಾವಂದಿರಾದ ಈಶ್ವರ ಪಟೇಲ್ ಇಬ್ಬರ ಆದರಾತಿಥ್ಯದಲ್ಲಿ ಸುಖವಾಗಿ ಕಾಲ ಕಳೆಯತೊಡಗಿದೆ. ಊಟ ವಸತಿ ಮೊದಮೊದಲು ಅವರ ಮನೆಯಲ್ಲಿ ಏರ್ಪಾಡಾಯಿತು. ಅನಂತರ ವಸತಿಗಾಗಿ ನನಗೆ ಬೇರೊಂದು ಮನೆಯನ್ನೇ ರಿಪೇರಿಮಾಡಿಕೊಟ್ಟರು. ಅವರೊಡನೆ ಇಂದಿಗೂ ಅತ್ಯಂತ ಮಧುರ ವಿಶ್ವಾಸವನ್ನು ಉಳಿಸಿಕೊಂಡಿದ್ದೇನೆ. ಅವರ ಮಕ್ಕಳು ಮೊಮ್ಮಕ್ಕಳೆಲ್ಲ ಈಗಲೂ ನನ್ನನ್ನು ಪೂಜ್ಯ ಭಾವದಿಂದಲೇ ಕಾಣುತ್ತಿದ್ದಾರೆ.

### *ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನನ್ನ ಚಟುವಟಿಕೆಗಳು*

ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಬಂದ ಮೇಲೆ ಶಿವಮೊಗ್ಗದಲ್ಲಿ ಅರಳಿದ್ದ ನನ್ನ ಪ್ರತಿಭೆಯ ಕಾರ್ಯಗಳಿಗೆಲ್ಲ ಒಂದು ಮನ್ನಣೆ, ಘನತೆ ಬಂದುದು. ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ನಾನು ಆಶ್ರಯಿಸಿದ ಮೇಲೆ. ತೋಂಟದಾರ್ಯ ವಿದ್ಯಾವರ್ಧಿನೀ ಸಭೆಯ ಮೂಲಕ ನಡೆಯುವ ಕಾರ್ಯಚಟುವಟಿಕೆಗಳಿಗೆಲ್ಲ ನಾನೇ ಮುಂದಾಳಾದೆ. ಒಂದು ಕೈಬರವಣಿಗೆಯ ಮಾಸಪತ್ರದ ಸಂಪಾದಕನನ್ನಾಗಿ ನನ್ನನ್ನೇ ಮಾಡಿದರು. 'ಕಿರಣ' ಎಂಬ ಹೆಸರಿನ ಆ ಪತ್ರಿಕೆಯ ಕೆಲವು ಸಂಚಿಕೆಗಳನ್ನು ತಂದದ್ದಾಯಿತು.

### *ದೀರ್ಘವಾದ ಒಂದು ಪ್ರವಾಸ*

ತೋಂಟದಾರ್ಯ ವಿದ್ಯಾವರ್ಧಿನೀ ಸಭೆಯ ಉದ್ದೇಶಗಳಲ್ಲಿ ಒಂದಾದ ಗ್ರಾಮಾಂತರ ಪ್ರದೇಶಗಳಲ್ಲಿ ಸಂಸ್ಕೃತಿ, ಸಾಹಿತ್ಯ, ಧರ್ಮಪ್ರಸಾರ ಕಾರ್ಯ ಮಾಡುವ ಕೆಲಸಕ್ಕೆ ನಾನೇ ಹೋಗಬೇಕೆಂದು ತೀರ್ಮಾನಿಸಲ್ಪಟ್ಟಿತು. ನಾನು ಆಗಿನ ಕಾರ್ಯದರ್ಶಿಯಾದ ರೇಣುಕಾರಾಧ್ಯನನ್ನೂ (ಈತ ಶ್ರೀಮಠದ ಸಹಾಯದಿಂದ ಎಂ.ಬಿ.ಬಿ.ಎಸ್, ಎಂ.ಡಿ ಮಾಡಿಕೊಂಡು ಡಾಕ್ಟರನಾಗಿ ಹುಬ್ಬಳ್ಳಿ ಕೆ.ಎಂ.ಸಿ.ಯಲ್ಲಿ ಅನೇಕ ವರ್ಷ ಸೇವೆ ಸಲ್ಲಿಸಿ, ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಗೆ ವರ್ಗವಾಗಿ ಬಂದು ಮಧ್ಯವಯಸ್ಸಿನಲ್ಲಿಯೇ ಮೃತನಾದ) ಇನ್ನೊಬ್ಬ ಮಿತ್ರನೂ ಪ್ರತ್ಯುತ್ಪನ್ನಮತಿಯೂ ಆಗಿದ್ದ ಕೃಷ್ಣಾಚಾರಿ (ಮಠದ ವಿದ್ಯಾರ್ಥಿಯಾಗಿ, ಗ್ರಾಜ್ಯುಯೇಟ್ ಆಗಿ, ಸರಕಾರೀ ಕೆಲಸಕ್ಕೆ ಸೇರಿ ನಿವೃತ್ತನಾಗಿ ಈಗ ತುಮಕೂರಿನಲ್ಲಿದ್ದಾನೆ) ಎಂಬುವವನನ್ನೂ ಜೊತೆಯಲ್ಲಿ ಕರೆದುಕೊಂಡು ಪುರುಷನಹಳ್ಳಿ ಸುತ್ತಮುತ್ತಣ ಹಳ್ಳಿಗಳು (ಹೆಸರು ಮರೆತಿವೆ), ಕನಕಪುರ (ಸುತ್ತಣ ಹಳ್ಳಿಗಳು), ಶ್ರೀರಂಗಪಟ್ಟಣ ಸಮೀಪದ ಹಾದಿಸೆಟ್ಟಿಹಳ್ಳಿ, ಚಿಕ್ಕಾರಳ್ಳಿ ಮೊದಲಾದ ಕಡೆಗಳಲ್ಲಿ ಶಿವಕೀರ್ತನೆ, ಉಪನ್ಯಾಸಾದಿಗಳನ್ನು ಮಾಡಿಕೊಂಡು ಯಶಸ್ವಿಯಾಗಿ ಹಿಂದಿರುಗಿದ್ದೊಂದು ದೊಡ್ಡ ಇತಿಹಾಸ.

ಕಾನಕಾನಹಳ್ಳಿ (ಕನಕಪುರ) ಪಟ್ಟಣದಲ್ಲಿ ಅನೇಕ ಶಿವಾನುಭಾವಿಗಳು ಇದ್ದ ಆ ಕಾಲದಲ್ಲಿ ಅಲ್ಲಿನ ದೇಗುಲಮಠದ ಶ್ರೀ ನಿ.ಪ್ರ.ಶ್ರೀ ಮಹಾಲಿಂಗಸ್ವಾಮಿಗಳ ಅಧ್ಯಕ್ಷತೆಯಲ್ಲಿ

ಭವ್ಯವಾಗಿ 'ಈಶ್ವರಾನುಗ್ರಹ'ವೆಂಬ ಶಿವಕಥೆ ನಡೆದುಹೋಯಿತು. ಈ ಸಮಯಕ್ಕಾಗಲೇ ನಾನು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿದ್ದ ಮಹಾಮಹಾವಿದ್ವಾಂಸರುಗಳ ಸಂಸರ್ಗ ಫಲವಾಗಿ ತತ್ತ್ವಶಾಸ್ತ್ರ, ವಚನಶಾಸ್ತ್ರಗಳ ಅಭ್ಯಾಸ ಮಾಡಿಬಿಟ್ಟಿದ್ದೆನಾಗಿ ಶಿವಮೊಗ್ಗದಲ್ಲಿದ್ದಾಗ ಬಿಡುತ್ತಿದ್ದ ಹಾಸ್ಯ ಪ್ರಧಾನ ಮಾತು, ವ್ಯರ್ಥ ಬುರುಡೆ ಮಾತುಗಳನ್ನು ಹಿಂದೆ ಸರಿಸಿ ಸುಸಂಗತ ವಿಷಯಗಳನ್ನು ಸೋದಾಹರಣವಾಗಿ ಹೇಳುವ ಕಲೆಯನ್ನು ಮೈಗೂಡಿಸಿಕೊಂಡಿದ್ದೆನಾದ್ದರಿಂದ ಕಾನಕಾನಹಳ್ಳಿಯಲ್ಲಿ ಪಾರಾದೆ. ಇಲ್ಲದಿದ್ದರೆ ಅಲ್ಲಿ ನನ್ನನ್ನು ಹೆಜ್ಜೆ ಹೆಜ್ಜೆಗೂ ತಡೆದು ನಿಲ್ಲಿಸುವ ಅರಿತು ನುರಿತ ಶಿವಾನುಭಾವಿಗಳು ಇದ್ದರು. 'ಹರಿಹರನ ಗಿರಿಜಾ ಕಲ್ಯಾಣ' ಕಾವ್ಯವನ್ನು ಓದಿ ಬಹು ಪ್ರೌಢರೀತಿಯಲ್ಲಿ ಕಥೆ ಮಾಡುವುದಕ್ಕೆ ಬೇಕಾದ ಸಾಮಗ್ರಿಗಳನ್ನೆಲ್ಲ ಆರಿಸಿಕೊಂಡು, ಮೂಲ ಸಾಹಿತ್ಯಾಧಾರದ ಮೇಲೆಯೇ ಕಥೆ ಮಾಡುತ್ತಿದ್ದೆನಾಗಿ ನನ್ನ ಮಾತಿಗೊಂದು ಸೊಗಸು, ಬನಿ, ಬೆಡಗು ಬಂದಿತ್ತು. ಜೊತೆಗೆ ಹೊಸದಾಗಿ ಶಕುಂತಳೋಪಾಖ್ಯಾನ, ಬೇಡರ ಕಣ್ಣಪ್ಪ, ತಿರುನೀಲಕಂಠಾದಿ ಕಥೆಗಳನ್ನು ಬರೆದುಕೊಂಡು ಅಭ್ಯಾಸ ಮಾಡಿದ್ದೆ. ವೃಷಭೇಂದ್ರ ವಿಜಯದಲ್ಲಿ ಬರುವ ಚಿಕ್ಕಮಾದಣ್ಣನ ಪ್ರಾಣದಾನದ ಕಥೆ, ಬಸವಣ್ಣನವರ ಜನನ, ಇತ್ಯಾದಿ ಕಥೆಗಳನ್ನು ಮೂಲ ಸಾಹಿತ್ಯದೊಡನೆ ಅಭ್ಯಾಸ ಮಾಡಿದ್ದೆನಾಗಿ ಈಗ ವಿದ್ವಾಂಸರೆದುರಿಗೂ ನನ್ನ ಕಂತೆಯನ್ನು ಬಿಟ್ಟು ನಿರ್ಭಯವಾಗಿ ಕಥೆ ಮಾಡುವ ಸಾಮರ್ಥ್ಯ ಬಂದಿತ್ತಾಗಿ ದೊಡ್ಡದೊಡ್ಡ ಅಂಗಡಿಗಳಿಂದ ಸಾಮಾನು ಕೊಂಡು ತಂದು ನಾನೂ ಒಂದು ಅಂಗಡಿಯನ್ನು ತೆಗೆದು ವ್ಯಾಪಾರವನ್ನು ಚೆನ್ನಾಗಿಯೇ ಗಿಟ್ಟಿಸಿಕೊಳ್ಳುತ್ತಿದ್ದೆನೆನ್ನಬಹುದು.

1940-41ರ ಸುಮಾರಿನಲ್ಲಿ ಆಕಸ್ಮಾತ್ ತಮಾಷೆಗೆಂದು ಹಳ್ಳಿಯ ಏನೂ ಅರಿಯದ ಜನಗಳ ಮಧ್ಯದಲ್ಲಿ ಮಾಡಿದ 'ಅನಸೂಯಾ' ಎಂಬ ಬುರುಡೆಕಥೆಯಿಂದ ಪ್ರಾರಂಭವಾದ ಈ ಕಲೆ 1945ನೆಯ ಇಸ್ವಿಯ ಹೊತ್ತಿಗೆ ಸ್ವಪ್ರಯತ್ನದಿಂದ ಒಂದು ಘಟ್ಟವನ್ನು ಮುಟ್ಟಿತ್ತಾದರೂ ಈಗಿನ ನನ್ನ ಸಂಗ್ರಹ, ಸಾಹಿತ್ಯಶಕ್ತಿ, ಶಾಸ್ತ್ರಜ್ಞಾನ ಎಳ್ಳಷ್ಟೂ ಸಾಲದೆಂದು ನನಗೆ ಗೊತ್ತಿರುವಂತೆ ಅನ್ಯರಿಗೆ ಗೊತ್ತಾಗಲಿಲ್ಲ. ಆದಕ್ಕಾಗಿ ಹಗಲಿರುಳು ನಾನು ಸಂಗ್ರಹಿಸುತ್ತಿದ್ದುದು ಬಹಳ. ಈ ನನ್ನ ಸಂಗ್ರಹ ಬುದ್ಧಿ ಮತ್ತು ಅದನ್ನು ಪ್ರಯೋಗಾತ್ಮಕ ನಿಲುವಿನಲ್ಲಿ ಪ್ರಚುರಗೊಳಿಸುವ ಉತ್ಸಾಹಗಳು ಉತ್ತರೋತ್ತರ ಮಹಾಮಹಾವಿದ್ವಾಂಸರೂ ತತ್ತ್ವಜ್ಞರೂ ಆದವರೆದುರು ಕೀರ್ತನೆ ಮಾಡಿ ಸೈ ಎನಿಸಿಕೊಂಡುದು ಸರಿಯೇ. ಧಾರವಾಡ ಮುರುಘಾಮಠದ ಮಹಾ ತತ್ತ್ವಶಾಸ್ತ್ರ ಬಲ್ಲಿದರ ಮಧ್ಯದಲ್ಲಿ, ಸಿದ್ಧಗಂಗಾಕ್ಷೇತ್ರದಲ್ಲಿ, ಸಿರಿಗೆರೆಯ ತರಳಬಾಳು , ದಾವಣಗೆರೆಯಲ್ಲಿ ಶ್ರೀ ಫ.ಗು.ಹಳಕಟ್ಟಿಯವರ ಸಮ್ಮುಖದಲ್ಲಿ ಬೆಳಗಾವಿ ನಾಗನೂರು ಮಠದಲ್ಲಿ, ಮೈಸೂರಿನ ಹತ್ತಾರು ಕಡೆಗಳಲ್ಲಿ, ಚಿತ್ರದುರ್ಗದ ಜಗದ್ಗುರುಗಳ ಸನ್ನಿಧಿಯಲ್ಲಿ, ತಿಪಟೂರಿನ ಆಶ್ರಮ ಮೊದಲಾದ ಕಡೆಗಳಲ್ಲಿ ಭವ್ಯವಾಗಿ ದಿವ್ಯವಾಗಿ ಕಥೆಗಳು ನಡೆದು ಹೋದವು. 14 ವರ್ಷ ಆಕಾಶವಾಣಿಯಲ್ಲೂ ಶಿವಕಥೆಯ ಕಾರ್ಯಕ್ರಮ ಕೊಟ್ಟೆ. ಆದರೆ ಇದನ್ನು ವೃತ್ತಿಯಾಗಿ ಮಾತ್ರ ಇಟ್ಟುಕೊಳ್ಳಲಿಲ್ಲ. ಇದನ್ನು ವೃತ್ತಿಯಾಗಿ ನಂಬಿದವರು ಸುಖವಾಗಿ ಬಾಳಲಿಲ್ಲ. ಕೊನೆ ಕೊನೆಗೆ ಮಾತನಾಡುವ ಶಕ್ತಿ ಕಳೆದುಕೊಂಡಾಗ ಅವರು ನಿರುಪಯೋಗ ವಸ್ತುಗಳಾದುದನ್ನು ಕಂಡಿದ್ದೆ. ನನಗೆ ಕಾಯಂ ವೃತ್ತಿಗಾಗಿ ಶಿಕ್ಷಣಕ್ಷೇತ್ರ ಬಾಗಿಲು ತೆರೆದೇ ಇತ್ತು. ಅಲ್ಲಿದ್ದು ಬೇಕಾದರೆ ಬಿಡುವಾದಾಗ ಈ ವೃತ್ತಿಯನ್ನು ಒಂದು ಹವ್ಯಾಸವಾಗಿ ಇಟ್ಟುಕೊಳ್ಳ

ಬೇಕೆಂದೇ ನನ್ನ ಮನೀಷೆಯಾಗಿತ್ತಾಗಿ. ಹಾಗೆಯೇ ಆ ಕಲೆಯನ್ನು ಜೀವನದುದ್ದಕ್ಕೂ ಜೀವಂತವಾಗಿರಿಸಿಕೊಂಡು ಬಂದಿದ್ದೆ. ಇದು ನನಗೆ ಜೀವನದಲ್ಲಿ ಬಹು ಲಾಭ ಮಾಡಿದ್ದಂತೂ ನಿಜ. ಹಣಕ್ಕಾಗಿ ಇದನ್ನು ಹಿಡಿದು ಶಿಕ್ಷಣಕ್ಷೇತ್ರದಲ್ಲಿ ಅಲಕ್ಷ್ಯವನ್ನೆಂದೂ ಮಾಡಲಿಲ್ಲ. ಒಂದು ವೇಳೆ ಕೀರ್ತನ ಕಲೆಯನ್ನು ನಾನು ಕೈ ಬಿಟ್ಟೇನು. ಶಿಕ್ಷಣಕ್ಷೇತ್ರವನ್ನು ಕೈಬಿಡುವ ಸ್ಥಿತಿಯಲ್ಲಿರಲಿಲ್ಲ. ಅಲ್ಲಿ ನನ್ನ ಉತ್ಸಾಹ ಅತ್ಯಧಿಕ. ಅಲ್ಲಿ ನಾನು ಅನೇಕ ಪ್ರಯೋಗಾತ್ಮಕ ನಿಲುವಿನಿಂದ ಕೆಲಸ ಮಾಡಿ ಯಶಸ್ವಿಯಾದೆನೆಂದು ನನಗೇ ಹಿಡಿಸಲಾರದ ತೃಪ್ತಿಯನ್ನೊದಗಿಸಿತು. ನನ್ನನ್ನು ಎಜ್ಯುಕೇಷನ್ ಡಿಪಾರ್ಟ್‌ಮೆಂಟ್ ಗುರುತಿಸಿ ಗೌರವದಿಂದ ಕಂಡಿತು. ಸಂದರ್ಭಾನುಸಾರ ಮುಂದೆ ಆ ಬಗೆಗೆ ಸ್ವಲ್ಪ ಮಾಹಿತಿ ಕೊಡುತ್ತೇನೆ.

ತೋಂಟದಾರ್ಯ ವಿದ್ಯಾವರ್ಧಿನೀ ಸಭೆಯಿಂದ ಹತ್ತು ಹದಿನೈದು ದಿನಗಳು ದೀರ್ಘ ಪ್ರವಾಸ ಮಾಡಿ ಅಲ್ಲಿನ ಜನರ ಶ್ಲಾಘನೆಯನ್ನೆಲ್ಲ ಹೊತ್ತು ಮಠಕ್ಕೆ ಬಂದು ಶ್ರೀಗಳವರಿಗೆ ವರದಿಯನ್ನು ಒಪ್ಪಿಸಿದೆವು. ಶ್ರೀಗಳವರು ಬಹು ಸಂತೋಷಪಟ್ಟರು. ಅದೇ ವರ್ಷ ಬೇಸಿಗೆಯಲ್ಲಿ ನಮ್ಮ ಪರೀಕ್ಷೆಗಳೆಲ್ಲ ಮುಗಿದ ಮೇಲೆ ಅವರ ಭಿಕ್ಷಾಟನೆಯ ಪ್ರವಾಸದಲ್ಲಿ ನನ್ನನ್ನೂ ಸೇರಿಸಿಕೊಂಡುಬಿಟ್ಟರು. ಹಳ್ಳಿಗಳ ಭಿಕ್ಷಾಟನೆಗೆ ಹೋದಾಗ ಅಲ್ಲಿ ಮೂರು ಹೊತ್ತೂ ಪೂಜೆ, ಎಲ್ಲರಿಗೂ ತೀರ್ಥಪ್ರಸಾದ ಕೊಡುವಿಕೆ, ಆಮೇಲೆ ಏನಾದರೂ ನಮಗೆ ಹೇಳಿ ಎಂದು ಕೇಳಿ ರಾತ್ರಿ ಭಾಷಣಕ್ಕೆ ನಿಲ್ಲಿಸಿ, ನಿದ್ರೆಗೆಡಿಸುವುದು, ಈ ಮೊದಲಾದ ಕಾರ್ಯಗಳಿಂದ ಶ್ರೀಗಳವರಿಗೆ ಅನಾರೋಗ್ಯವಾಗುತ್ತಿತ್ತೆಂದು ಗಮನಿಸಿದ್ದ ನಾನು, ನಾಲ್ಕು ಐದು ತಾಸುಗಳವರೆಗೆ ಕಿಕ್ಕಿರಿದು ಸೇರುತ್ತಿದ್ದ ಜನಗಳ ಮಧ್ಯದಲ್ಲಿ ಕಥೆ ಮಾಡಿ ನಗಿಸಿ, ಕುಣಿಸಿ, ಕುಪ್ಪಳಿಸುವಂತೆ ಮಾಡಿ ಬರುತ್ತಿದ್ದೆ. ಇದರಿಂದ ಶ್ರೀಗಳವರಿಗೆ ವಿರಾಮ ಸಿಗುತ್ತಿತ್ತು. ಇಲ್ಲಿ ಮಾತ್ರ ಊರಿಂದಲೂ ಏನೂ ಕೇಳುತ್ತಿರಲಿಲ್ಲ, ನನಗೇನಾದರೂ ಕಾಣಿಕೆ ಕೊಟ್ಟರೆ ಅದನ್ನು ಶ್ರೀ ಸ್ವಾಮಿಗಳಿಗೇ ಅರ್ಪಿಸಿ ಬಿಡುತ್ತಿದ್ದೆ. ಹೀಗೆ ಮಠದಲ್ಲಿ ಕೇವಲ ಹತ್ತು ತಿಂಗಳು ವಿದ್ಯಾರ್ಥಿಯಾಗಿದ್ದ ನಾನು ಮಠದ ಕಾರ್ಯಗಳಲ್ಲಿ ಯಾವಜ್ಜೀವವೂ ಸೇವೆ ಸಲ್ಲಿಸುವ ಪರಮಲಾಭವಾದದ್ದಾಗಿ ಬಹುತೃಪ್ತಿಪಡುತ್ತಿದ್ದೇನೆ. ಅವರೊಬ್ಬ ಮಹಾನುಭಾವರು, ಅನಿಮಿತ್ತ ಬಂಧುಗಳು. ಕಾಯೇನ-ವಾಚಾ-ಮನಸಾ ತ್ರಿಕರಣ ಶುದ್ಧಿಯಿಂದ ದಾಸೋಹಂಭಾವದ ನಿಲವಿನಲ್ಲಿ ನಿಂತವರು. ಕ್ರಿಯಾಮಗ್ನರಾಗಿದ್ದ ಕರ್ಮಯೋಗಿಗಳು, ಜೋಳಿಗೆಯ ಬಲದಿಂದಲೇ ಹಗಲು ರಾತ್ರಿಯೆನ್ನದೆ ಶ್ರಮಿಸಿ, ನ ಭೂತೋ ನ ಭವಿಷ್ಯತಿ ಅನ್ನುವಂತೆ ಅನ್ನದಾಸೋಹ ಮಾಡುವ ಅಪ್ರತಿಮ ಯೋಗೀಶ್ವರರು; ನಿರಹಂಭಾವ-ನಿರೀಹಂಭಾವ ಬಂಧುರರು. ಸರ್ವಜೀವ ದಯಾಪರರು. ಎಲ್ಲಕ್ಕೂ ಹೆಚ್ಚಾಗಿ ತ್ರಿಕಾಲಲಿಂಗಪೂಜಾ ದುರಂಧರರು. ಅವರ ಈ ಎಲ್ಲ ಲೋಕೋಪಕಾರ, ಲೋಕಸಂಗ್ರಹಕಾರಕ ಅನುಪಮ ನಡೆ-ನುಡಿಗಳಿಂದ ಅವರ ಸ್ಥಾನ ಬಹು ಎತ್ತರಕ್ಕೇರಿತ್ತು. ಇಂಥವರ ಸೇವೆ ಲಭ್ಯವಾದುದೇ ನನ್ನ ಪುಣ್ಯವೆಂದು ಭಾವಿಸಿದ್ದ ನಾನು ಶ್ರದ್ಧಾಭಕ್ತಿ ವಿಶ್ವಾಸಗಳಿಂದ ನನ್ನ ಶಕ್ತಿಯ ಪರಿಮಿತಿಯಲ್ಲಿ ಸೇವೆ ಮಾಡುತ್ತ ಇಂದೂ ಅವರ ಕೃಪಾಶ್ರಯದಲ್ಲೇ ಇದ್ದೇನೆ.

### *ತೊಂಡಗೆರೆಯ ಶಾಲಾಉಪಾಧ್ಯಾಯನಾಗಿ ಸೇವೆ*

ತೊಂಡಗೆರೆಗೆ ಒಂದು ಶಾಲೆಯನ್ನೇನೋ ಸರಕಾರ ಹೊಸದಾಗಿಕೊಟ್ಟಿತು. ಆ ಶಾಲೆಗೆ ನಾನೇ ಹೆಡ್‌ಮಾಸ್ತರ, ನಾನೇ ಆಸಿಸ್ಟೆಂಟ್ ಮಾಸ್ತರನಾಗಿ ಹೋದೆ. ಅದೆಲ್ಲ ಸರಿ. ಅಲ್ಲಿಯೂ

ಶಾಲಾ ಕಟ್ಟಡವಾಗಲಿ, ತಕ್ಕಷ್ಟು ಪೀಠೋಪಕರಣಗಳಾಗಲಿ ಇರಲಿಲ್ಲ. ಮೀಟರ್‌ಗೇಜ್ ರೈಲು ಬೋಗಿಯಂತೆ ಉದ್ದವಾಗಿದ್ದ ಒಂದು ಮನೆಯಲ್ಲಿ ಇಪ್ಪತ್ತೈದು ಮೂವತ್ತು ಹುಡುಗರನ್ನಿಟ್ಟುಕೊಂಡು ಶಾಲೆಯನ್ನು ಪ್ರಾರಂಭಿಸಿಬಿಟ್ಟೆ. ಅದು ಹೊಸದಾಗಿ ಸರಕಾರದಿಂದ ಮಂಜೂರಾದ ಶಾಲೆ. ನಾನೂ ಹೊಸದಾಗಿ ಮಂಜೂರಾದ ಟ್ರೈನಿಂಗ್ ಪಡೆದ ಶಿಕ್ಷಕನಾದ್ದರಿಂದ ಶಾಲೆಗೆ ಹೋದ (24.8.1946)ದಿನದಿಂದಲೇ ಕಾಯಂ ಮಾಸ್ತರನೇ ಆಗಿಬಿಟ್ಟೆ. ಶಾಲೆಯನ್ನು ಬಹು ಶಿಸ್ತಿಗೆ ಒಳಪಡಿಸಿಕೊಂಡು ಬೆಳಿಗ್ಗೆ ಸೂರ್ಯನಮಸ್ಕಾರ, ಲಘು ವ್ಯಾಯಾಮ - ಇವೆಲ್ಲ ಹಳ್ಳಿಯ ಜನಗಳ ಗಮನ ಸೆಳೆಯುವ ಪ್ರಥಮ ಕಾರ್ಯಗಳಾದವು. ಶಾಲೆ ಬಿಡುವಾಗ ಪ್ರತಿದಿನ ಸಾಯಂಕಾಲ ಹಿಂದೆ ನಾನು ಹಿರೇಕಾಂಶಿ ಶಾಲೆಯಲ್ಲಿದ್ದಾಗ ಅನುಸರಿಸುವ ಮಾರ್ಗವನ್ನೇ ಅನುಸರಿಸುತ್ತ 'ಪ್ರಲೋಚಿ' (ಬಾಯಿಪಾಠ) ಹೇಳಿಸಿಯೇ ಶಾಲೆ ಬಿಡುತ್ತಿದ್ದೆ. ಏಕೋಪಾಧ್ಯಾಯ ನಾದ್ದರಿಂದ ಶಾಲೆಯನ್ನು ಒಂದೊಂದು ಘಂಟೆ ಹೆಚ್ಚಾಗಿಯೇ ಮಾಡುತ್ತಿದ್ದೆ. ಗಡಿಯಾರ ನೋಡಿ ಶಾಲೆಯ ಭವಿಷ್ಯ ನಿರ್ಧರಿಸುತ್ತಿದ್ದಿಲ್ಲ, ಶಾಲೆಯ ಭವಿಷ್ಯ ನೋಡಿ ಗಡಿಯಾರದತ್ತ ದೃಷ್ಟಿ ಹೊರಳಿಸುತ್ತಿದ್ದೆ. ಇದರಿಂದ ಹಳ್ಳಿಯ ಜನರಿಗೆ ಶಾಲೆಯ ಬಗೆಗಿರುವ ನನ್ನ ಆಸಕ್ತಿ ತನ್ನಿಂದ ತಾನೇ ಗೊತ್ತಾಗುತ್ತಿತ್ತು. ಶಾಲೆಯ ಕೀರ್ತಿ ಹೆಚ್ಚಿತು. ಅಕ್ಕಪಕ್ಕದ ಹಳ್ಳಿಯ ಹುಡುಗರು ಈ ಶಾಲೆಗೇ ಬಂದು ಬಂದು ಸೇರತೊಡಗಿದರು. ನನ್ನ ದಿನದ ಇಪ್ಪತ್ತನಾಲ್ಕು ಘಂಟೆ ಕಾಲವನ್ನು ಶಾಲೆಯ ಅಭಿವೃದ್ಧಿ, ಮಕ್ಕಳ ಯೋಗಕ್ಷೇಮಕ್ಕಾಗಿಯೇ ವಿನಿಯೋಗಿಸತೊಡಗಿದ್ದುದು ಆ ಊರ ಶಿಕ್ಷಣಕ್ಷೇತ್ರದಲ್ಲಿ ಆಸಕ್ತಿ ಹೊಂದಿದ್ದ ಹಿರಿಯರೆಲ್ಲ ಬಹುತೃಪ್ತಿ ವ್ಯಕ್ತಪಡಿಸಿ ನನ್ನಲ್ಲಿ ವಿಶೇಷ ಪೂಜ್ಯತೆ ತೋರತೊಡಗಿದರು. ಉಪಾಧ್ಯಾಯವೃತ್ತಿಗಿಳಿಯಬೇಕಾದವರು ಲೋಕದಿಂದ ತಮಗೆ ಗೌರವ ಸಲ್ಲಬೇಕೆಂದು ಬಯಸಿದರೆ, ಇವರೂ ತಮ್ಮ ವೃತ್ತಿಯಲ್ಲಿ ಲೋಕಕ್ಷೇಮಕ್ಕಾಗಿ ಅವಶ್ಯಂಭಾವಿಯಾಗಿ ತನ್ಮಯತೆಯಿಂದ ದುಡಿಯಬೇಕು. ಇಲ್ಲದಿದ್ದರೆ ವೃಥಾ ಯಾರಿಗೆ ಯಾರೂ ಗೌರವಿಸಬೇಕಾದ ಪ್ರಮೇಯವೇ ಉಳಿಯುವುದಿಲ್ಲ. ಬಹುಜನ ಉಪಾಧ್ಯಾಯರು ನಮಗೆ ಹಳ್ಳಿ-ಪಳ್ಳಿಗಳಲ್ಲಿ ಸಾರ್ವಜನಿಕರಿಂದ ಸಹಕಾರವಾಗಲಿ, ಸಹಾಯವಾಗಲಿ ಸಿಗುತ್ತಿಲ್ಲ, ಗೌರವವೂ ಸಿಗುತ್ತಿಲ್ಲ ಎನ್ನುವುದುಂಟು. ಇದು ತಪ್ಪು ಅಭಿಪ್ರಾಯ. ಅವರ ಮಕ್ಕಳ ವಿಷಯದಲ್ಲಿ ಉಪಾಧ್ಯಾಯರ ಮಮತೆ, ಕ್ಷೇಮಚಿಂತನೆ, ವಾತ್ಸಲ್ಯಾದಿ ಗುಣವಿಶೇಷಗಳು ಅಧಿಕಗೊಂಡಷ್ಟು ಗ್ರಾಮಾಂತರ ಪ್ರದೇಶದ ಜನಗಳ ವಿಶ್ವಾಸಾದಿಗಳೂ ಅಧಿಕಗೊಂಡು ಉಪಾಧ್ಯಾಯರನ್ನೇ ಅವು ಹುಡುಕಿಕೊಡು ಬರುತ್ತವೆ ಅನ್ನುವುದು ವಾಸ್ತವಾಂಶ. ನಾವು ಬಾಗದೆ ಅವರೇ ಬಾಗಿ ಬರಬೇಕೆಂದರೆ ಹೇಗೆ? ನನ್ನ ಅನುಭವದಲ್ಲಿ ಉಪಾಧ್ಯಾಯರ ನಡೆ-ನುಡಿ, ಕರ್ತವ್ಯಕ್ಷಮತೆಗಳು ಅವನಿಗೆ ಊಹಾತೀತವಾಗಿ ಗೌರವವನ್ನು ತಂದುಕೊಡುತ್ತವೆ ಎಂಬುದಂತೂ ಸತ್ಯ.

ತೊಂಡಿಗೆರೆಯಲ್ಲಿಯೂ ನನಗೆ ಅಪಾರ ವಿಶ್ವಾಸ ಮಾನ-ಮನ್ನಣೆಗಳು ಊರವರಿಂದ ಸಿಕ್ಕಿತು. ನನಗೆ ಉಚಿತ ಆಶನ-ವಸತಿಗಳ ಸೌಲಭ್ಯವನ್ನು ಊರಿನವರು ಮಾಡಿಕೊಟ್ಟರು. ಮೊದಲು ನಾನು ಪ್ರಾರಂಭಿಸಿದ್ದ ಶಾಲಾ ಕಟ್ಟಡ (ಮನೆಯೊಂದನ್ನು ಶಾಲಾ ಕಟ್ಟಡವಾಗಿ ಮಾಡಿಕೊಂಡ ಕಟ್ಟಡ) ಉಪಯೋಗವಿಲ್ಲದ್ದೆಂದು ಕಂಡುಬಂದ ಮೇಲೆ ಊರಿನವರಿಗೆ ಬೇರೆ ಕಟ್ಟಡ ವ್ಯವಸ್ಥೆ ಮಾಡಿರೆಂದು ತಿಳಿಸಿದಾಗ ಬೇರೊಂದು ದೇವಾಲಯವನ್ನು ವ್ಯವಸ್ಥೆ ಮಾಡಿದರು. ಅಧಿಕಗೊಂಡ ಮಕ್ಕಳ ಸಂಖ್ಯೆಗನುಗುಣವಾಗಿ ಅದೂ ಸಾಲದಾಯಿತು. ಆ

ಕಟ್ಟಡಕ್ಕೆ ಕಿಟಕಿಗಳೇ ಸಾಕಷ್ಟಿರಲಿಲ್ಲವಾಗಿ ನಾನು ದಟ್ಟನೆಲೆಯುಳ್ಳ ಹಿಪ್ಪೇಮರದ ತೋಪಿಗೇ ನನ್ನ ಶಾಲೆಯನ್ನು ಕೊಂಡೊಯ್ದೆ. ಗುಡಿಯ ಮುಂಭಾಗದಲ್ಲಿ ಮಕ್ಕಳ ಬೆಳಗಿನ ಪ್ರಾರ್ಥನೆ, ಸೂರ್ಯ ನಮಸ್ಕಾರ ವ್ಯಾಯಾಮಾದಿ ಕಾರ್ಯಕ್ರಮಗಳು ಮುಗಿದ ಮೇಲೆ ಕಪ್ಪು ಹಲಗೆಯೇ ಮೊದಲಾದ ಪಾಠೋಪಕರಣಗಳನ್ನು ಐದುಹತ್ತು ನಿಮಿಷಗಳಲ್ಲಿ ಹಿಪ್ಪೇ ತೋಪಿಗೆ ಸಾಗಿಸಿ ಅಲ್ಲಿ ಪಾಠ-ಪ್ರವಚನ ಪ್ರಾರಂಭಿಸಿದುದು ಊರಿನವರೆಲ್ಲರ ಗಮನ ಸೆಳೆಯಿತು. ಅವರು ನನ್ನ ಕಾರ್ಯಕುಶಲತೆಗೆ ಮೆಚ್ಚಿಕೊಂಡರು.

### *ಶಾಲಾ ತನಿಖಾಧಿಕಾರಿಗಳ ಆಗಮನ*

ನಮ್ಮ ಸ್ಕೂಲು ಹೆಬ್ಬೂರು ರೇಂಜಿಗೆ ಸೇರಿತ್ತು. ಆ ರೇಂಜಿಗೆ ಅತ್ಯಂತ ಕುಶಲಮತಿಗಳೂ, ಕರ್ತವ್ಯನಿಷ್ಠರೂ, ನ್ಯಾಯನಿಷ್ಠುರಿಗಳು, ಶಿಕ್ಷಣಕ್ಷೇತ್ರದಲ್ಲಿಯೇ ಒಳ್ಳೆಯ ಹೆಸರು ಮಾಡಿದವರಾದ ಶ್ರೀ ಎಂ.ಆರ್. ರಾಮಯ್ಯನವರು ಇನ್‌ಸ್ಪೆಕ್ಟರ್‌ರಾಗಿದ್ದರು. ಒಮ್ಮೆ ಅವರು ಸೈಕಲ್ ಮೇಲೆ ಇದ್ದಕ್ಕಿದ್ದಂತೆ ಶಾಲಾ ತಪಾಸಣೆಗೆ ಬಂದುಬಿಟ್ಟರು. ಆ ದಿನ ಶಾಲೆಯಿರಲಿಲ್ಲ. ಶಾಲೆಯ ಬಾಗಿಲಿಗೆ "ಹೊರಸಂಚಾರ" ಎಂದು ಒಂದು ಹಾಳೆಯಲ್ಲಿ ಬರೆದು ಅಂಟಿಸಿ ನಾನು ಶಾಲಾಮಕ್ಕಳನ್ನೆಲ್ಲ ಕರೆದುಕೊಂಡು ಹೊರಸಂಚಾರಕ್ಕೆ ಹೋಗಿದ್ದೆ. (ಏಕೆಂದರೆ ಹೊರಸಂಚಾರಕ್ಕೆಂದು ಕೆಲವು ಉಪಾಧ್ಯಾಯರು ಹೋಗಿ ಹುಡುಗರನ್ನು ಆಡಲೋ, ತಿರುಗಾಡಲೋ ಬಿಟ್ಟು ಅವರು ಒಯ್ದುಕೊಟ್ಟ ಬುತ್ತಿಯನ್ನು ಪಟ್ಟಾಗಿ ತಿಂದು ತೇಗಿ ನಿದ್ರೆ ಮಾಡಿ ಮನೆಗೆ ಬರುತ್ತಿದ್ದ ಎಷ್ಟೋ ಪ್ರಸಂಗಗಳನ್ನು ನೋಡಿದವರು ಬಹುಶಃ ನಾನೂ ಅಂಥ ಉಪಾಧ್ಯಯನೋ ಏನೋ ಎಂದುಕೊಂಡು ಬಂದಿರಬೇಕು ಎಂದು ನಾನು ಯೋಚಿಸುತ್ತಿದ್ದೇನೆ. ಏಕೆಂದರೆ ಅವರೇ ಅಂಥ ಪ್ರಸಂಗಗಳನ್ನು ನನ್ನೆದುರಿಗೆ ಹೇಳಿದ್ದರಿಂದ ಈ ಅಂಶ ಗೊತ್ತಾಯಿತು.) ರಾಮಯ್ಯನವರು ಸಂಶಯಗೊಂಡಿರಬೇಕು ಒಂದೋ ಅಥವಾ ನನ್ನ ಹೊರಸಂಚಾರ ವಿಧಾನವನ್ನು ಪ್ರತ್ಯಕ್ಷ ನೋಡಲೆಂದೋ ನಾನು ಹೋದ ದಿಕ್ಕನ್ನು ಯಾರು ಯಾರಿಂದಲೋ ತಿಳಿದುಕೊಂಡು ಮಾರ್ಚ್ ತಿಂಗಳ ಆ ಉರಿಬಿಸಿಲಲ್ಲಿ ಧೂಳಿನಿಂದ ಕೂಡಿದ ಹೊಲದ ದಾರಿಯಲ್ಲೇ ಸೈಕಲ್ ತುಳಿದುಕೊಂಡು ಬಂದರು. ಸುತ್ತಲೂ ದೃಷ್ಟಿಯನ್ನು ಬೀರುತ್ತ ಬರುತ್ತಿದ್ದರು. ಬೆವರಿನಿಂದ ತೊಯ್ದು ತೊಪ್ಪೆಯಾಗಿದ್ದರು. ಊರಿನಿಂದ ಸುಮಾರು ಮೂರು ಮೈಲು ದೂರವಿರುವ ಒಂದು ಹಳ್ಳಿಯ ದಂಡೆಯ ಹೊಂಗೆಮರಗಳ ತೋಪನ್ನು ಕಂಡು ಇಲ್ಲಿ ಬೀಡುಬಿಟ್ಟಿದ್ದ ನಮ್ಮ ಸ್ಥಳಕ್ಕೇ ಗುರಿಯಿಟ್ಟು ಬಂದುಬಿಟ್ಟರು. ನಾನು ಹಳ್ಳದ ತಗ್ಗಿನಲ್ಲಿ ತಂಪಾದ ಹೊಂಗೆ ನೆರಳಿನಲ್ಲಿ ಕುಳಿತದ್ದು ಯಾರ ಕಣ್ಣಿಗೂ ಕಾಣುವಂತಿರಲಿಲ್ಲ. ಜನರ ಕಣ್ಣಿಗೆ ಕಾಣದಂತೆಯೇ ಇದ್ದು ನಮ್ಮ ಕೆಲಸ ಮುಗಿಸಿಕೊಂಡು ಬರಬೇಕೆಂಬುದೂ ನನ್ನ ಆಸೆಯಾಗಿತ್ತು. ಆದ್ದರಿಂದ ಅಂಥ ಸ್ಥಳ ಹುಡುಕಿದ್ದೆ.ಅಲ್ಲಿ ನೀರೂ ಸಮೃದ್ಧವಾಗಿತ್ತು. ಅಷ್ಟು ಹೊತ್ತಿಗೆ ನಾನು ಮಕ್ಕಳಿಗೆ ವಿವಿಧ ರೀತಿಯ ಕಲ್ಲುಗಳು, ಹಳ್ಳದಲ್ಲಿ ಸಿಕ್ಕಬಹುದಾದ ಕಪ್ಪೆಚಿಪ್ಪು ಇತ್ಯಾದಿಗಳು, ಹೂವುಗಳು, ವನಸ್ಪತಿಗಳು, ಬಣ್ಣದ ಕಲ್ಲುಗಳು, ವಿವಿಧ ಗಿಡಗಳು, ಮೊದಲಾದವನ್ನು ಸಂಗ್ರಹ ಮಾಡಿಸಿ, ಅವರನ್ನೆಲ್ಲ ನನ್ನ ಸುತ್ತ ಮುತ್ತ ಹರಡಿಕೊಂಡು ಕುಳಿತು ಒಂದೊಂದೇ ವಿಷಯ ತಕ್ಕೊಂಡು ವಸ್ತುಗಳನ್ನು ಪ್ರತ್ಯಕ್ಷ ತೋರಿಸುತ್ತ ಪ್ರಕೃತಿ ವೀಕ್ಷಣ (ನೇಚರ್ ಸ್ಟಡಿ) ಪಾಠ ಮಾಡುತ್ತಿದ್ದೆ. ಪಾಪೋಸು ಕಳ್ಳಿ, ಲೋಳೆಸರ, ರಕ್ಕಸಬಾಳೆ, ಮುಂಗರೋಳಿ ಮೊದಲಾದ ವನಸ್ಪತಿಗಳನ್ನು, ಔಷಧೋಪಚಾರಕ್ಕೆ ಉಪಯೋಗಿಸುವ ಅಡುಸೋಗೆ, ಬೇವು, ಅಮೃತವಲ್ಲಿ,

ವಿಷ್ಣುಕಾಂತಿಯಂಥ ವನಸ್ಪತಿಗಳನ್ನು ಸಂಗ್ರಹಿಸಿದೆ. ಒಂದೊಂದಾಗಿ ವಿವರಿಸುತ್ತ ಮೂರು ಲೋಕದ ಜಂಜಡದಿಂದ ದೂರಪಿರುವವರಂತಾಗಿ ಶಿಕ್ಷಣ ಕಾರ್ಯದಲ್ಲಿ ತನ್ಮಯನಾಗಿ ಹೋಗಿದ್ದೆ. ಪರಾಗರೇಣು ಸ್ಪರ್ಶಕ್ಕೆ ವಿಷಯಕ್ಕೆ ಧತ್ತೂರದ ಹೂವು ಹೀಚು, ಕಾಯಿ, ಗಿಡ ಇವನ್ನು ಕಷ್ಟಪಟ್ಟು ಸಂಗ್ರಹಿಸಿ ಸ್ಪಷ್ಟವಾಗಿ ಅವರಿಗೆ ಎಲ್ಲ ಭಾಗಗಳನ್ನೂ ತೋರಿಸುತ್ತ ವಿವರಿಸುತ್ತಿದ್ದ ಸಮಯಕ್ಕೆ ರಾಮಯ್ಯನವರ ಸೈಕಲ್ ಗಂಟೆಯ ಧ್ವನಿ ನಮ್ಮೆಲ್ಲರ ಸಮಾಧಿಯನ್ನು ಇದ್ದಕ್ಕಿದ್ದಂತೆ ಭಂಗಗೊಳಿಸಿಬಿಟ್ಟರು. ಎಲ್ಲರೂ ತಮ್ಮ ದೃಷ್ಟಿಯನ್ನು ವಿಷಯದಿಂದ ಕೀಳಲಾರದೆ ಕಿತ್ತು ಸೈಕಲ್‌ಬೆಲ್ ಧ್ವನಿಯ ಕಡೆಗೆ ಹೊರಳಿಸಿದಾಗ ಕಂಡವರು ಶಾಲಾ ಇನ್‌ಸ್ಪೆಕ್ಟರ್‌ರಾಗಿದ್ದರು. ಹುಡುಗರೆಲ್ಲ ಇನ್‌ಸ್ಪೆಕ್ಟರ್ - ಇನ್‌ಸ್ಪೆಕ್ಟರ್ ಎಂದುಬಿಟ್ಟರು. ನಾನು ಕಯ್ಯಲ್ಲಿ ಹಿಡಿದ ದತ್ತೂರದ ಗಿಡ ಸಮೇತವಾಗಿ ಎದ್ದು ನಿಂತೆ. ಬಂದವರು ಇನ್‌ಸ್ಪೆಕ್ಟರರೇ ಎಂದು ಗೊತ್ತಾದ ಕೂಡಲೇ ಎರಡು ಹೆಜ್ಜೆ ಮುಂದೆ ಹೋಗಿ ಸೈಕಲ್‌ನ್ನು ಕೆಳಗಿಳಿಸಿ ತರಲು ಇಬ್ಬರು ವಿದ್ಯಾರ್ಥಿಗಳನ್ನು ಓಡಿಸಿದೆ. ವಿದ್ಯಾರ್ಥಿಗಳು ಅವರ ಕೈಯ ಸೈಕಲನ್ನು ಮೆಲ್ಲನೆ ಕೆಳಕ್ಕೆ ಸಾಗಿಸಿಕೊಂಡು ಬರುತ್ತಿದ್ದಂತೆ ನಾನು ಮೇಲೆ ಹತ್ತಿ ದಾರಿ ಹಿಡಿದು ಕೆಳಕ್ಕೆ ಕರೆತಂದೆ. ಸಂಗ್ರಹಿಸಿದ ಸಾಮಗ್ರಿಗಳನ್ನು ಕಂಡು ಪ್ರಭಾವಿತರಾಗಿ ಹೋದರು. "ಮೇಷ್ಟ್ರೇ, ಸ್ಪೆಷಲ್ ಆದ ಈ ಗುಪ್ತಸ್ಥಳವನ್ನು ಹೇಗೆ ಹುಡುಕಿದಿರಿ ಮಹಾರಾಯರೇ! ಏನು ಅಗಮ್ಯ ಸ್ಥಳವಿದು ಅಬ್ಬಾ!" ಎಂದು ಉದ್ಗಾರ ತೆಗೆಯುತ್ತಿದ್ದಂತೆ, ನಾನು "ನಾನು ಇವರನ್ನೆಲ್ಲ ಕರೆದುಕೊಂಡು ಬಂದದ್ದು ಪ್ರಕೃತಿವೀಕ್ಷಣದಲ್ಲಿ ಇವರಿಗೆ ಶಾಸ್ತ್ರೀಯ ಜ್ಞಾನವನ್ನುಂಟು ಮಾಡಲು, ಅದಕ್ಕೆ ರಮ್ಯವಾದ ಸ್ಥಳವನ್ನೇ ಹುಡುಕಬೇಕಲ್ಲ ಸರ್" ಎಂದು ನಗುತ್ತ ಹೇಳಿ, ಈ ಸ್ಥಳವನ್ನು ಈ ಗಿಡ-ಗಂಟೆಗಳನ್ನು, ಕಲ್ಲು ಚಿಪ್ಪುಗಳನ್ನು ಇವರು ಎಂದೂ ನೋಡಿಲ್ಲ. ನೋಡಿದ ವಸ್ತು ಸ್ವರೂಪ, ರಚನೆ, ಪ್ರಕೃತಿಯಲ್ಲಿ ಅದರ ಸ್ಥಾನ, ವನಸ್ಪತಿಗಳ ಜೀವನ, ಬೀಜಪ್ರಸಾರ, ಬೀಜಪ್ರಸರಣಕ್ಕೆ ಪ್ರಕೃತಿಯ ರಚನೆ....ಇತ್ಯಾದಿ ವಿಷಯ ತಿಳಿಸುವುದರ ಮೂಲಕವೇ ಪೂರ್ವಜ್ಞಾನವನ್ನು ಶಾಸ್ತ್ರೀಯಗೊಳಿಸಬೇಕಲ್ಲವೆ? ಆದ್ದರಿಂದ ಜನಗಳ ಸುಳಿದಾಟದಿಂದ ಇವರ ಪಾಠ ವಿಷಯದಲ್ಲಿ ಇವರ ಸಮಾಧಿಗೆ ಭಂಗಬಾರದ ರೀತಿಯಲ್ಲಿರುವ ಈ ಸ್ಥಳವನ್ನು ಇವರೆಲ್ಲರ ಸಲಹೆಯ ಮೂಲಕ ಇಷ್ಟುದೂರ ಬರಬೇಕಾಯಿತೆಂದು ವಿವರಿಸಿದಾಗ ಅವರು ನಗುತ್ತ "ನಾನಿಂದು ತಪ್ಪು ಮಾಡಿಬಿಟ್ಟೆ" ಎಂದರು. ನನಗೆ ಸ್ವಲ್ಪ ಗಾಬರಿಯೇ ಆಗಿ "ಏಕೆ, ಸರ್! ಏನು ಸಮಾಚಾರ" ಎಂದೆ. "ಏನೂ ಇಲ್ಲ, ಇಂದು ನಾನು ಇಲ್ಲಿಗೆ ಬಂದು ನಿಮ್ಮ ಸಮಾಧಿಯನ್ನು ಭಂಗಮಾಡಿ ನಿಮ್ಮ ಅಮೂಲ್ಯ ಪ್ರಕೃತಿ ವೀಕ್ಷಣ ಕಾರ್ಯಕ್ರಮಕ್ಕೇ ವಿಘ್ನ ತಂದಂತಾಯಿತು"ಎಂದರು. "ನಾನು ಆ ದೃಷ್ಟಿಯಿಂದ ಅನ್ನಲಿಲ್ಲ ಸ್ವಾಮಿ, ತಾವು ತಪ್ಪು ತಿಳಿಯಬಾರದು" ಎಂದೆ. ಅವರು ಸಹೃದಯರಾಗಿಯೇ ಆಡಿದ್ದೆಂದ ಮೇಲೆ ನನಗೆ ಅರ್ಥವಾಯಿತು. ರಾಮಯ್ಯನವರು ಇನ್‌ಸ್ಪೆಕ್ಟರರು, ನಾನೊಬ್ಬ ಉಪಾಧ್ಯಾಯ. ಅವರು ಹೇಳಿದ್ದಕ್ಕೆಲ್ಲ 'ಜೀ ಹುಜೂರ್' ಅನ್ನುವ ವ್ಯಕ್ತಿ ನಾನಾಗಿರಲಿಲ್ಲ. ನಾನು ಈಗ ಹಿರೇಕಾಂಶಿಯಲ್ಲಿದ್ದಾಗಿನ ಮಾಸ್ತರನಾಗಿರಲಿಲ್ಲ; ಮೂರು ವರ್ಷಗಳು ಕಷ್ಟಪಟ್ಟು ಶಿಕ್ಷಕ ಟ್ರೈನಿಂಗಿನಲ್ಲಿ ಓದಿ ಮೈಸೂರು ರಾಜ್ಯಕ್ಕೇ ದ್ವಿತೀಯ ರ್‍ಯಾಂಕ್ ಗಳಿಸಿ ಪ್ರಬುದ್ಧ ಶಿಕ್ಷಕನಾಗಿದ್ದೇನೆಂಬ ಆತ್ಮಪ್ರತ್ಯಯದಿಂದ ತುಂಬಿ ತುಳುಕುತ್ತಿದ್ದೆ. ತಲೆ ತುಂಬ ಶಾಲಾಸಂವಿಧಾನ, ಮನತುಂಬ ಶಿಕ್ಷಣತತ್ತ್ವ, ಕ್ರಿಯೆತುಂಬ ಬೋಧನಾವಿಧಾನದ ಚಿಂತನೆಯೇ ಹೊರಹೊಮ್ಮು

ನಾನು ಹೊಸವ್ಯಕ್ತಿಯೇ ಆಗಿದ್ದೆ. ಹೀಗೆನ್ನುವುದು ಗರ್ವದಿಂದ. ಅಥವಾ ನಾನು ಬೃಹಸ್ಪತಿಯೆಂದಲ್ಲ, ಶಿಕ್ಷಣಕ್ಷೇತ್ರದಲ್ಲಿ ಎಷ್ಟು ಮಾಡಿದರೂ ಕಡಿಮೆಯೇ, ಎಷ್ಟು ಓದಿದರೂ ಕಡಿಮೆಯೇ. ಎಂಥ ಪ್ರತಿಭಾಶಾಲಿಯನ್ನೂ ತಬ್ಬಿಬ್ಬುಗೊಳಿಸುವಂತಹುದು. ಆ ದೃಷ್ಟಿಯಿಂದ ನಾನು ಪೂರ್ಣ ತಿಳಿದವನೆಂದರೆ ಸೋಲುವುದು ಅಲ್ಲಿಯೇ. ಆ ಅಭಿಪ್ರಾಯದಲ್ಲಿ ಈ ಮಾತನ್ನು ಹೇಳುತ್ತಿಲ್ಲ. ನನ್ನ ಕರ್ತವ್ಯದ ಆಳ-ನೀಳಗಳನ್ನು ತೂಗಿ ಲೆಕ್ಕಹಾಕಿ ಅದರ ನಿರ್ವಹಣೆಯಲ್ಲಿ ನನ್ನ ಪಾತ್ರದ ಜವಾಬ್ದಾರಿಯೇನೆಂಬುದನ್ನು ಅರಿತು ಆಚರಿಸುವ ದೃಷ್ಟಿಯಿಂದ, ಕರ್ತವ್ಯದ ಘನತೆಯನ್ನು ಅರಿತು ಆಚರಿಸುವುದರಲ್ಲಿ ರಾಮಯ್ಯನವರೂ ಅತ್ಯಂತ ನಿಸ್ಪೃಹರು, ಸಹೃದಯರು, ಗುಣಪಕ್ಷಪಾತಿಗಳು. ಹದಿನೈದು ದಿನಗಳ ಮೊದಲು ಹೆಬ್ಬೂರು ರೇಂಜ್ ಉಪಾಧ್ಯಾಯರುಗಳ ಮಾಸಿಕ ಸಮಾವೇಶ. ಬಿದನಗೆರೆಯಲ್ಲಾದಾಗ ನಾನೂ ನಾಲ್ಕನೆಯ ತರಗತಿಗೆ ಮಾದರಿ ಪದ್ಯಪಾಠವನ್ನು ಕೊಟ್ಟ ನಂತರ "ತರಗತಿ ಕೊಠಡಿಯಲ್ಲಿ ಉಪಾಧ್ಯಾಯ" ಎಂಬ ವಿಷಯದ ಬಗೆಗೆ ಒಂದು ಘಂಟೆ ಮಾಡಿದ ಉಪನ್ಯಾಸದ ಬಗೆಗೆ ಅವರು ಪ್ರಭಾವಿತರಾಗಿ ಹೋದರು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ನನ್ನ ಮಾದರಿ ಪಾಠದ ಬಗೆಗೂ ಉಪನ್ಯಾಸದ ಬಗೆಗೂ, ಶ್ಲಾಘನೆಯ ಸುರಿಮಳೆ ಸುರಿಸುತ್ತ "ಉಪಾಧ್ಯಾಯರೆಂದರೆ ಹೀಗಿರಬೇಕು". ಧಾರವಾಡದ ಗಂಡುಭಾಷೆಯಲ್ಲಿ ಉಪಾಧ್ಯಾಯರ ಬಗೆಗೆ ಹೇಳಿದ ಅನೇಕ ಸಂವಿಧಾನಾತ್ಮಕ ಮತ್ತು ಶಿಕ್ಷಣತತ್ತ್ವ ವಿಚಾರಾತ್ಮಕ ಸಲಹೆಗಳು ಅರ್ಥಪೂರ್ಣವಾದುವು. ಪ್ರತಿಯೊಬ್ಬ ಶಿಕ್ಷಕರೂ ಈ ಸಲಹೆಗಳನ್ನು ಗಮನದಲ್ಲಿಟ್ಟು ತಮ್ಮ ತಮ್ಮ ಕರ್ತವ್ಯವನ್ನು ಅರ್ಥಪೂರ್ಣವಾಗಿ ಮಾಡಿ ಮುಗಿಸುವ ಮನೋಭಾವ ಬೆಳೆಸಿಕೊಳ್ಳಬೇಕು" ಎಂದು ಮನವಿ ಮಾಡಿದುದು ನನಗೆ ಬಹು ಉತ್ತೇಜನ ಕೊಟ್ಟಿತು. ಉಪಾಧ್ಯಾಯ ವೃತ್ತಿಯಲ್ಲಿಯೇ ನನ್ನ ಜೀವಿತ ಸವೆಸಬೇಕೆಂದಿದ್ದ ಮನೋಭಾವ ಕಾರಣವಾಗಿ ಹಿರೇಕಾಂಶಿಯಿಂದಲೇ ನಾನು ಅನೇಕ ಪ್ರಯೋಗಗಳನ್ನು ಮಾಡಿ ಅದರಲ್ಲಿ ನನಗೇ ತೃಪ್ತಿಯಾಗುವಷ್ಟರಮಟ್ಟಿಗೆ ಯಶಸ್ಸನ್ನು ಸಾಧಿಸಿದ್ದೆ. ಮಾನವರಿಯದ ಕಳ್ಳತನವಿಲ್ಲವೆಂದು ದೊಡ್ಡವರು ಹೇಳುತ್ತಾರೆ. ಕಳ್ಳತನ ಮಾಡದೆ ಆತ್ಮವಿಶ್ವಾಸದಿಂದ ಮಾಡಿದ ಕಾರ್ಯ ಮನುಷ್ಯನಿಗೆ ತೃಪ್ತಿಕೊಡುತ್ತದಲ್ಲವೆ! ನನ್ನ ಮಟ್ಟಿಗೆ ನನಗೆ ಬಹಳ ತೃಪ್ತಿಯಂತೂ ಆಗಿತ್ತು. ಆತ್ಮತೃಪ್ತಿ ದೊಡ್ಡದು. ಕಳ್ಳತನಕ್ಕೆ ಆತ್ಮತೃಪ್ತಿ ಸಿಗುವುದಿಲ್ಲ. ಅದು ಒಳಗೆ ಕುಳಿತು ನೀನು ಕಳ್ಳತನ ಮಾಡುತ್ತಿದ್ದೀಯೆ ಎಂದು ಚುಚ್ಚುತ್ತಲೇ ಇರುತ್ತದೆ. ವಿಚಾರ ಮಾಡಿ. ಈ ದಿನ ರಾಮಯ್ಯನವರು ನನ್ನ ಹೊರಸಂಚಾರದ ಕಾರ್ಯಕ್ರಮಗಳನ್ನೆಲ್ಲ ಕಂಡು ಪ್ರಭಾವಿತರಾಗಿ ಶ್ಲಾಘನೆಗಳ ಸುರಿಮಳೆ ಸುರಿಸಿಬಿಟ್ಟರು. ಅನಂತರದ ದಿನಗಳಲ್ಲಿ ರಾಮಯ್ಯನವರ ನನ್ನ ಸ್ನೇಹ ಅತಿಮಧುರವಾಯಿತು. ನನ್ನ ಶಾಲೆಗೆ ಅವರು ಮತ್ತೆ ಒಂದೆರಡು ಸಲ ಬಂದದ್ದುಂಟು. ಊರಿನವರಿಗೆ ಶಾಲಾ ಕಟ್ಟಡದಂತಹ ಸಲಹೆ ಕೊಟ್ಟಿದ್ದುಂಟು. ನನ್ನ ಕೆಲಸಕಾರ್ಯಗಳಲ್ಲಿ ಚಕಾರಶಬ್ದ ಎತ್ತಲಿಲ್ಲ.

ಮುಂದೆ ಅವರು ಬೆಂಗಳೂರಿಗೆ ಬಂದರು. ಕಾರ್ಪೋರೇಷನ್ ಶಾಲೆಗಳ ಶಿಕ್ಷಣಾಧಿಕಾರಿಗಳಾದರು. ಆಗ ನಾನು ಬರೆದ 'ಜೇನು' ಎಂಬ ಪುಸ್ತಕದ ಸಾವಿರಾರು ಪ್ರತಿಗಳನ್ನು ಕೊಂಡು ತಮ್ಮ ವೃತ್ತಿಯ ಕಾಲೇಜುಗಳಿಗೆ ಹಂಚಿದ್ದುಂಟು. ನಾನು ಬೆಂಗಳೂರಿಗೆ ಬಂದೆ. ನಾವು ಅನೇಕ ಸಲ ಪರಸ್ಪರ ಭೆಟ್ಟಿಯಾಗಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ವಿಚಾರ ವಿನಿಮಯ ಮಾಡಿದ್ದೇವೆ. ಅವರ ಕಣ್ಣು ಮಧ್ಯಂತರದಲ್ಲಿಯೇ ಹೋದವು. ಕುರುಡರ ಲಿಪಿಯನ್ನು ಅಭ್ಯಾಸ ಮಾಡಿದರು. ಈ ಸಮಯದಲ್ಲಿ ಎರಡು ಪುಸ್ತಕ ಬರೆದು ಅವನ್ನು

ತಿದ್ದಿಕೊಡಲು ಗುಣದೋಷ ವಿಮರ್ಶಿಸಲು ನನ್ನನ್ನೇ ಆರಿಸಿಕೊಂಡರು. ನಾನು ಶಕ್ಯವಿದ್ದಷ್ಟು ಆ ಕೆಲಸ ಮಾಡಿಕೊಟ್ಟ ಮೇಲೆ ಅವನ್ನು ಅಚ್ಚುಹಾಕಿಸಿ ಅವುಗಳ ಬಿಡುಗಡೆ ಪರಿಷತ್ತಿನಲ್ಲಿ ಆದಾಗ ನನ್ನನ್ನೇ ಕರೆದು ಮುಖ್ಯ ಅತಿಥಿಯನ್ನಾಗಿ ಮಾಡಿದರು. ಆಗಾಗ ಹೆಂಡತಿಯೊಡನೆ ಇಂದಿಗೂ ಮನೆಗೆ ಬಂದು ಹೋಗುತ್ತಿದ್ದಾರೆ. ಇದೆಲ್ಲ 1946ರಲ್ಲಿ ನಾನು ಪ್ರಾಥಮಿಕ ಶಾಲಾ ಉಪಾಧ್ಯಾಯನಾಗಿ ಅವರ ಮೇಲೆ ಬೀರಿದ ಪ್ರಭಾವ ಕಾರಣಗಳೇ. ಆ ದಿನಗಳ ಶಿಕ್ಷಣ ಕ್ಷೇತ್ರ - ಇಂದಿನ ಶಿಕ್ಷಣ ಕ್ಷೇತ್ರದ ಬಗೆಗೆ ವಿಚಾರ ವಿಮರ್ಶೆ ಮಾಡುತ್ತ ಬಹಳಷ್ಟು ನೊಂದು ನುಡಿಯುತ್ತಿದ್ದಾರೆ. ಇಂಥ ಸಹೃದಯರಾದ ರಾಮಯ್ಯನವರ ಸ್ನೇಹ ನನ್ನನ್ನು ಬಹುಪ್ರಭಾವಿತನನ್ನಾಗಿ ಮಾಡಿದೆ.

***ಕನ್ನಡ ಪಂಡಿತ ಸೆಲೆಕ್ಷನ್ ಪರೀಕ್ಷೆಗೆ ನನ್ನನ್ನು ಕಳಿಸಿದುದು***

ನಾನು ಧಾರವಾಡ ಪ್ರಾಂತದಿಂದ ಮೈಸೂರು ಪ್ರಾಂತಕ್ಕೆ ಬಂದ ಧ್ಯೇಯೋದ್ದೇಶ ಕನ್ನಡ ಪಂಡಿತ ಪರೀಕ್ಷೆ ಓದಬೇಕೆಂಬುದೇ ಆಗಿತ್ತೆಂಬುದನ್ನು ಈ ಹಿಂದೆ ವಿವರಿಸಿದ್ದೇನೆ. ಈಗ ನನಗೆ ಯಾರೂ ನೀವು ಔಟ್ ಆಫ್ ಸ್ಟೇಟಿನವರು ಎನ್ನುವ ಒಂದು ಅನರ್ಹತೆಯಂತೂ ಇರಲಿಲ್ಲ. ಇಲ್ಲಿ ಕೆಲಸಕ್ಕೆ ಸೇರಿದ್ದರಿಂದ ಆ ಅನರ್ಹತೆ ಮಾಯವಾಗಿ ನಾನೀಗ ಅಪ್ಪಟ ಮೈಸೂರಿಯನ್ ಆಗಿ ಹೋಗಿದ್ದೆ. ಹಿಂದಿನ ಆತಂಕದ ದಿನಗಳು ಕಳೆದುಹೋಗಿದ್ದವು. ಇಲ್ಲಿ ನಾನು ಓರ್ವ ಪ್ರೈಮರಿ ಶಾಲಾ ಉಪಾಧ್ಯಾಯನಾಗಿ ನನ್ನ ಜೀವಿತವನ್ನು ಸವೆಸಬೇಕೆಂಬುದಂತೂ ಅಲ್ಲವೇ ಅಲ್ಲ. ಇಲ್ಲಿ ಕೆಲಸಕ್ಕೆ ಸೇರಿದ್ದು ಪಂಡಿತ ಪರೀಕ್ಷೆ ಓದಲು ಸರಕಾರದಿಂದಲೇ ಚುನಾಯಿತನಾಗಿ ಹೋಗಬೇಕೆಂಬ ಉದ್ದೇಶದ್ದು. ಒಂದು ದಿನ ಹೆಬ್ಬೂರಿಗೆ ಹೋಗಿ ರಾಮಯ್ಯನವರಿಗೆ ನನ್ನ ಉದ್ದೇಶಗಳನ್ನೆಲ್ಲ ಹೇಳಿದೆ. ಅವರು ಅವಶ್ಯ ನಿಮ್ಮ ಅರ್ಜಿಯನ್ನು ಜಿಲ್ಲಾ ವಿದ್ಯಾಧಿಕಾರಿಗಳಿಗೆ ಶಿಫಾರಸು ಮಾಡಿ ಕಳಿಸಿಕೊಡುತ್ತೇನೆ. ನಿಮ್ಮಂಥ ಪ್ರತಿಭಾಶಾಲಿಗಳಲ್ಲದೆ ಅಲ್ಲಿ ಇನ್ನಾರು ಹೋಗಬೇಕು ಎಂದು ನನ್ನಿಂದ ಅರ್ಜಿಯನ್ನು ಪಡೆದು ತಾವೇ ಅದರ ಮೇಲೆಯೇ ಶಿಫಾರಸು ಮಾಡಿ, 'ಗೇ' ಪುಸ್ತಕದಲ್ಲಿ ರಿಜಿಸ್ಟರು ಮಾಡಿಕೊಂಡು ಲಕೋಟೆಯಲ್ಲಿಟ್ಟು, ತಾವೇ ಅಡ್ರೆಸ್ಸು ಬರೆದು ಅದೇ ದಿನವೇ ನನ್ನ ಕಣ್ಣೆದುರಿಗೇ ಪೋಸ್ಟಿಗೆ ಕಳಿಸಿಬಿಟ್ಟರು. ರಾಮಯ್ಯನವರು ಗುಮಾಸ್ತರು ಮಾಡಬೇಕಾದ ಎಷ್ಟೋ ಕೆಲಸಗಳನ್ನು ಸ್ವತಃ ತಾವೇ ಮಾಡಿಬಿಡುತ್ತಿದ್ದರು. 1947ರ ಫೆಬ್ರುವರಿಯಲ್ಲಿ ಸೆಲೆಕ್ಷನ್ ಪರೀಕ್ಷೆ ಮೈಸೂರಿನ ಟ್ರೇನಿಂಗ್ ಕಾಲೇಜ್‌ನಲ್ಲಿ ನಡೆಯುವುದಿತ್ತು. ಒಂದೇ ವಾರದಲ್ಲಿ ಜಿಲ್ಲಾ ವಿದ್ಯಾಧಿಕಾರಿಗಳಿಂದ ನೀವು ನಿಮ್ಮ ಸ್ವಂತ ಖರ್ಚಿನಲ್ಲಿ ಸೆಲೆಕ್ಷನ್ ಪರೀಕ್ಷೆಗೆ ಹೋಗಬಹುದೆಂದು ಅಪ್ಪಣೆ ಬಂದೇ ಬಿಟ್ಟಿತು. ನನ್ನ ಉದ್ದೇಶ ಸಾಧನೆ ಹೇಗೆ ಸುಗಮವಾಗುತ್ತ ಬಂದಿತೆಂಬುದರ ಬಗೆಗೆ ನನಗೆ ಹಿಡಿಸಲಾರದ ಆನಂದವಾಯಿತಾದರೂ, ಮುಂದೆ ಸೆಲೆಕ್ಷನ್ ಪರೀಕ್ಷೆಯಲ್ಲಿ ಯಶಸ್ಸು ಸಿಗುವಂತೆ ಮಾಡಬೇಕಾದ ಪ್ರಯತ್ನದ ಕಡೆಗೆ ಮನಸ್ಸು ಕೆಲಸ ಮಾಡತೊಡಗಿತು. ಸೆಲೆಕ್ಷನ್ ಪರೀಕ್ಷೆಗೆ ನೂರಾರು ಜನ ಬರುತ್ತಾರೆ. ಅನೇಕ ಘಟಾನುಘಟಿಗಳು ಸೇರುತ್ತಾರೆ. ಯಾರ ಯಾರ ಶಿಫಾರಸುಗಳು ಎಂಥೆಂಥವೋ. ಆರಿಸಬೇಕಾದದ್ದು ಕೇವಲ ನಾಲ್ಕೇ ಜನರು. ಈ ವಿಷಯ ತಲೆಯಲ್ಲಿ ಕೆಲಸ ಮಾಡತೊಡಗಿತು.

ಒಂದು ದಿನ ತುಮಕೂರಿಗೆ ಹೋದಾಗ ನಾರ್ಮಲ್ ಸ್ಕೂಲಿನ ನನ್ನ ಉಪಾಧ್ಯಾಯರೊಬ್ಬರು (ಹೆಸರು ಮರೆತಿದೆ) ಅವರು ಮಹಾಸಾತ್ವಿಕರು. ಅವರು ನಮಗೆ

ಚರಿತ್ರೆ, ಭೂಗೋಳ ವಿಷಯಗಳ ಬೋಧನಾ ಕ್ರಮದ ಪಾಠ ತೆಗೆದುಕೊಳ್ಳುತ್ತಿದ್ದರು. ಅತ್ಯಂತ ಸರಳ ಸ್ವಭಾವದ ಅವರು ಕಾಲೇಜಿನಲ್ಲಿ ನನ್ನನ್ನು ಬಹಳ ಪ್ರೀತಿಸುತ್ತಿದ್ದರು. ಆಕಸ್ಮಾತ್ ಅವರು ಪೇಟೆಯಲ್ಲಿ ಸಿಕ್ಕು, ನನ್ನನ್ನು ಮನೆಗೆ ಕರೆದುಕೊಂಡು ಹೋದರು, ಹೋದೆ. ಬಹಳ ಉಪಚಾರ ಮಾಡಿದರು. ಮನೆಯಲ್ಲಿ ಬಿಸಿಬಿಸಿ ಉಪ್ಪಿಟ್ಟು ಕಾಫಿಯ ಉಪಚಾರವನ್ನು ನಡೆಸಿ, ನನ್ನ ಕೆಲಸ ಮಾಡುತ್ತಿರುವ ಊರು ಅಲ್ಲಿನ ಜೀವನ ಇತ್ಯಾದಿಗಳ ಬಗೆಗೆ ಬಹುವಿಶ್ವಾಸದಿಂದ ಕೇಳಿ, ನನ್ನ ಬಗೆಗೆ ಶ್ಲಾಘನೆಯ ಮಾತುಗಳನ್ನು ಆಡಿ ಸಂತೋಷಪಡಿಸಿದರು. ಅವರೆದುರಿಗೆ ಮುಂದಿನ ನನ್ನ ಕನ್ನಡ ಪಂಡಿತ ಪರೀಕ್ಷೆಯ ಸೆಲೆಕ್ಷನ್ ಪರೀಕ್ಷೆಯ ಪ್ರಸ್ತಾಪ ಮಾಡಿದೆ. ಆ ಕೂಡಲೇ ಅವರು ನಗುತ್ತ "ಅರೆರೆ! ಹೀಗೇನು! ಅಲ್ಲಿ ಉಪಾಧ್ಯಾಯರಾಗಿರುವ ಚೆನ್ನಕೇಶವಯ್ಯನವರು ನಮ್ಮ ಚಿಕ್ಕಪ್ಪನವರೇ ಆಗಬೇಕಪ್ಪ! ಅವರಿಂದ ನಿನಗೇನಾಗಬೇಕು ಹೇಳು?" ಎಂದು ತಾವೇ ಎಲ್ಲ ಹೇಳಿಬಿಟ್ಟರು. ಆಗ ನಾನು ಅತ್ಯಂತ ವಿನಮ್ರಭಾವದಿಂದ ಸತ್ಸಂಕಲ್ಪಕ್ಕೆ ಎಲ್ಲೆಲ್ಲಿಂದಲೋ ಸಹಾಯ ಸಂಪತ್ತು ಒದಗಿ ಬಂದೇ ಬರುತ್ತದೆಂಬುನ್ನು ಮನದಲ್ಲಿ ನೆನೆಯುತ್ತ "ಅಲ್ಲಿ ಓದಲು ಸೀಟು ಸಿಗುವುದು ಬಹಳ ಕಷ್ಟಕರ ಕೆಲಸವೆಂದು ಕೇಳಿದ್ದೇನೆ. ಅಲ್ಲಿ ಸೀಟು ದೊರಕಿಸಿಕೊಡುವ ವಿಷಯದಲ್ಲಿ ತಾವು ನನಗೆ ಸಾಹಯಮಾಡುವುದಾದರೆ ಬಹಳ ಉಪಕಾರವಾಗುವುದು" ಎಂದುಬಿಟ್ಟೆ. ಇಗೋ ಈಗಲೇ ನಮ್ಮ ಚಿಕ್ಕಪ್ಪನವರಿಗೆ ಕಾಗದ ಬರೆದು ಕೊಡುತ್ತೇನೆ. ನೀವು ಅವರನ್ನು ಕಂಡು ಮಾತಾಡಿ. ಇವರಿಗೆ ಸ್ಥಾನ ಕೊಡಿಸೇ ಕೊಡಿಸಬೇಕೆಂದೇ ಬರೆಯುತ್ತೇನೆಂದು ಆ ಕೂಡಲೇ ಬರೆಯುವುದಕ್ಕೆ ಪ್ರಾರಂಭಿಸಿಬಿಟ್ಟರು. ಆ ಕ್ಷಣದಲ್ಲಿ ನಾನು ಉತ್ಕಂಠಿತನಾಗಿಹೋದೆ. ಈ ನನ್ನ ಸಂಕಲ್ಪ ಅನೇಕ ವರ್ಷಗಳಿಂದ ನನ್ನಲ್ಲಿ ಉಂಟಾದದ್ದು. ಈ ಸಂಕಲ್ಪವನ್ನು ಈಡೇರಿಸಿಕೊಳ್ಳಲು ನಾನು ಪಟ್ಟ ಶ್ರಮ ಊಹಾತೀತವಾದುದಾಗಿತ್ತು. ನಮ್ಮ ಮಾಸ್ತರರು ಅವರ ಚಿಕ್ಕಪ್ಪನವರಿಗೆ ಒತ್ತಾಯ ಮಾಡಿಯೇ ಕಾಗದ ಬರೆದು ಕೊನೆಯಲ್ಲಿ ಇವರು VTCಯ ಮೂರು ಪರೀಕ್ಷೆಗಳಲ್ಲಿ ರ್‍ಯಾಂಕು ಗಳಿಸಿದ ಹೆಗ್ಗಳಿಕೆಯುಳ್ಳವರು. ಉತ್ತಮ ಭಾಷಣಕಾರ ಇತ್ಯಾದಿ ಶ್ಲಾಘನೆಗಳೂ ಇದ್ದವು. ನನ್ನ ನಚ್ಚಿನ ವಿದ್ಯಾರ್ಥಿ, ಪ್ರತಿಭಾಶಾಲಿ, ಉತ್ತಮ ದರ್ಜೆಯ ಉಪಾಧ್ಯಾಯ ಇತ್ಯಾದಿ ಏನೆಲ್ಲ ಬರೆದುಬಿಟ್ಟಿದ್ದರು. ಆ ಪತ್ರವನ್ನು ತೆಗೆದುಕೊಂಡು ಮೈಸೂರು ಸೆಲೆಕ್ಷನ್ ಪರೀಕ್ಷೆಗೆ ಹೋದೆ. ಹೋದ ದಿವಸವೇ ರಾತ್ರಿ ಚನ್ನಕೇಶವಯ್ಯನವರ ಮನೆ ಹುಡುಕಿಕೊಂಡು ಹೋಗಿ ಮನೆಯಲ್ಲಿ ಕಂಡು ಹೃದಯ ಉಕ್ಕಿ ಬಂತು. ಶಾಂತಿಯೇ ಮೈವೆತ್ತು ಬಂದಂತಿತ್ತು ಅವರ ಮುಖಮುದ್ರೆ. ಅತ್ಯಂತ ಶ್ರದ್ಧಾಭಕ್ತಿ ಪೂರ್ವಕವಾಗಿ ಜೀವನ ನಡೆಸಿಕೊಂಡು ಬಂದ ಸುಸಂಸ್ಕೃತ ಜೀವ ಎಂಬುದು ಅವರ ನಡೆನುಡಿಗಳಲ್ಲಿ ವ್ಯಕ್ತವಾಗುತ್ತಿದ್ದುದರಿಂದ ನನಗೆ ಆ ಕ್ಷಣದಲ್ಲಿ ಭಕ್ತಿ ಉದ್ರೇಕಗೊಂಡಿದ್ದಂತೂ ನಿಜ. ಈ ಭಕ್ತಿ ಕಾರ್ಯಸಾಧನೆಗೋಸ್ಕರ ಮೂಡಿದ ಕಪಟಭಕ್ತಿಯಂತೂ ಅಲ್ಲ. ಪೂರ್ಣವ್ಯಕ್ತಿನಿಷ್ಠವಾದ ಭಕ್ತಿ ಅದಾಗಿತ್ತು. ಆದ್ದರಿಂದ ಅವರ ಪಾದ ಮುಟ್ಟಿ ನಮಸ್ಕರಿಸಿಬಿಟ್ಟೆ. ಇಷ್ಟರ ಮೇಲಿಂದಲೇ ಅವರಿಗೆ ನನ್ನ ಬಗೆಗೆ ಇವನಲ್ಲಿ ಸಂಸ್ಕೃತಿಯೆಂಬುದೊಂದು ಇದೆ ಎಂದು ಭಾವಿಸಿದಲ್ಲಿ ಸಾಕು. ಇವರು ಪ್ರತಿದಿನವೂ ಅರಮನೆಗೆ ಜಯಚಾಮರಾಜ ಒಡೆಯರವರ ಧರ್ಮಪತ್ನಿಯವರಿಗೆ ಕನ್ನಡ ಸಾಹಿತ್ಯ ಸಂಸ್ಕೃತಿಯ ಬಗೆಗೆ ಪಾಠ ಹೇಳಲು ಹೋಗುವ ಘನ ವಿದ್ವಾಂಸರೂ, ಆಚಾರ ನಿಷ್ಠರೂ ಆದ ಸಾತ್ವಿಕ ಜೀವ ಎಂಬುದು ಆಮೇಲೆ ನನಗೆ ಬೇರೆಬೇರೆ ಮೂಲಗಳಿಂದ ತಿಳಿದು ಬಂತು. ಅವರು ನನಗೆ, ನಿಮಗೆ ಸಂಸ್ಕೃತ ಬರುತ್ತದೆಯೇ? ಎಂದು ಪ್ರಶ್ನಿಸಿದರು. ನಾನು "ಸಂಸ್ಕೃತ ಓದಿಲ್ಲ ಹಿಂದೀ ಓದಿದ್ದೇನೆ. ಅಕ್ಷರ

ಮಾಲೆ ಎಲ್ಲಾ ಗೊತ್ತು" ಎಂದೆ. ಅದಕ್ಕವರು ನಕ್ಕು ಹಿಂದಿ ಯಾವ ಉಪಯೋಗಕ್ಕೂ ಇಲ್ಲಿ ಬರುವುದಿಲ್ಲ. "ಆಗಲಿ ನೋಡೋಣ ಹೋಗು" ಎಂದು ಹೇಳಿ ಕಳಿಸಿಕೊಟ್ಟರು.

ನನ್ನ ಈ ತಂತ್ರದಿಂದ ಸೀಟು ಸಿಗುವುದು ದುಸ್ತರವಾದರೆ ಮುಂದೆ ಸಿದ್ಧಗಂಗಾ ಶ್ರೀಗಳಿಂದ ಆಗಿನ ಡಿ.ಪಿ.ಐ. ಅವರಾದ ಕಸ್ತೂರಿ ರಾಜ ಸೆಟ್ಟಿಯವರಿಗೇ ಹೇಳಿಸಿ ಒಂದು ಸೀಟನ್ನು ಪಡೆದೇ ತೀರಬೇಕೆಂಬ ಪ್ರಚಂಡ ಸಾಹಸ ಭರಿತ ಮನಸ್ಸಿನವನಾಗಿದ್ದೆ. ಏಕೆಂದರೆ ಈ ಸಲ ನನಗೆ ಸೀಟು ಸಿಗದಿದ್ದರೆ ಇನ್ನೆರಡು ವರ್ಷಗಳ ಮೇಲೆ ಸೆಲೆಕ್ಷನ್ ಪರೀಕ್ಷೆಗೆ ಬರಬೇಕಾಗಿತ್ತು. ಎರಡೆರಡು ವರ್ಷಕ್ಕೊಮ್ಮೆ ಆ ಪರೀಕ್ಷೆಗಳಿಗೆ ಪ್ರೈಮರಿ ಶಾಲೆಯಲ್ಲಿ ಇದ್ದು ಕೆಲಸ ಮಾಡಬೇಕಾಗಿತ್ತು ಮುಂದೆ ಹೇಗೋ ಎಂತೋ! ಕಾವಿನಲ್ಲಿ ಕಾವು. ಈಗಲೇ ಸರ್ವಪ್ರಯತ್ನಗಳನ್ನು ಮಾಡಿ ಸ್ಥಾನದೊರಕಿಸಿಕೊಳ್ಳುವ ಸಂಕಲ್ಪ - ಪ್ರಯತ್ನ ಪ್ರಬಲವಾದುವು.

ಮರುದಿನ ಸೆಲೆಕ್ಷನ್ ಪರೀಕ್ಷೆಗೆ ಒಟ್ಟು ಒಂದು ನೂರ ಹತ್ತು ಜನ ಸಂಸ್ಥಾನದ ನಾನಾ ಮೂಲೆಗಳಿಂದ ಬಂದಿದ್ದರು. ಅವರ ಆಟೋಪ-ಬಡಾಯಿ-ಕೀರ್ತಿಗಳನ್ನು ಕಂಡೇ ನನಗೆ ಹೆದರಿಕೆಯಾಯಿತು. ಮೊದಲು ಒಂದು ಸಂಸ್ಕೃತ ಪೇಪರು, ಅನಂತರ ಎರಡು ಕನ್ನಡ ಪೇಪರುಗಳೆಂದು ಜ್ಞಾಪಕ. ಅವುಗಳಿಗೆ ನಾವು ಉತ್ತರ ಬರೆಯಬೇಕಾಗಿತ್ತು. ಕನ್ನಡ ಪತ್ರಿಕೆಗಳಿಗೆ ಉತ್ತರ ಬರೆಯುವುದು ನನಗೆ ಸಮಸ್ಯೆಯಾಗಿರಲಿಲ್ಲ.

ಸಂಸ್ಕೃತ ಪೇಪರಿನದೇ ಹೆದರಿಕೆಯಾಗಿತ್ತು. ಸಂಸ್ಕೃತ ಪ್ರಶ್ನೆಪತ್ರಿಕೆ ಕೈಗೆ ಬಂದೊಡನೆ ನಾನು ಬೆವೆತು ಹೋದೆ, ಗಂಟಲೇ ಒಣಗಿದಂತಾಯಿತು. ಏನೂ ತಿಳಿಯಲಿಲ್ಲ. ಲಿಪಿ ಮಾತ್ರ ಓದಲಿಕ್ಕೆ ಬರುತ್ತಿತ್ತು. ಅರ್ಥವೇ ಆಗುತ್ತಿರಲಿಲ್ಲ. ಅಂದಾಜಿನ ಮೇಲೆ ಅದರಲ್ಲಿನ ಅರ್ಥವಾಗುವ ಒಂದೊಂದೇ ಶಬ್ದದ ಸುಳುಹು ಹಿಡಿದು ಎರಡು ಘಂಟೆಯ ಪೂರ್ಣ ಅವಧಿಯವರೆಗೆ ಯೋಚಿಸಿ ಯೋಚಿಸಿ ಏನೇನೋ ಬರೆದು ಮೂರು ನಾಲ್ಕು ಹಾಳೆಗಳನ್ನು ತುಂಬಿಸಿದ್ದಂತೂ ನಿಜ. ಅದರಲ್ಲಿ ಸರಿಗಿಂತ ತಪ್ಪೇ ಅಧಿಕವಾಗಿರಬೇಕು. ಎಷ್ಟೋ ಜನ ಪೇಪರು ಬಹಳ ಸುಲಭವೆಂದು ಒಂದೊಂದೇ ಘಂಟೆಯಲ್ಲಿ ಬರೆದು ಬಿಸಾಡಿ ಹೋಗಿ ಬಿಟ್ಟರು. ನನಗೆ ಅದು ಅಗಿದು ನುರಿಸಲಾರದ ತುತ್ತಾಗಿ ಕುಟು ಕುಟು ಎಂದು ಬರೆಯುತ್ತಲೇ ಕುಳಿತಿದ್ದೆ. ಕೊನೆಗೆ ಉತ್ತರಪತ್ರಿಕೆಯನ್ನು ಕೊಟ್ಟವನೇ ನಾನಿರಬೇಕು.

ಅನಂತರ ಮಧ್ಯಾಹ್ನ ಕನ್ನಡದ ಪ್ರಥಮ ಪತ್ರಿಕೆ ಕೈಗೆ ಬಂತು. ಪತ್ರಿಕೆ ನೋಡಿ ಇದರಲ್ಲಿ ಯಶಸ್ಸು ಸಾಧಿಸುತ್ತೇನೆಂಬ ಆತ್ಮವಿಶ್ವಾಸ ಮೂಡಿತು. ರುದ್ರಭಟ್ಟನ ಜಗನ್ನಾಥ ವಿಜಯ, ಷಡಕ್ಷರ ಕವಿಯ ರಾಜಶೇಖರ ವಿಳಾಸ, ಲಕ್ಷ್ಮೀಶನ ಜೈಮಿನಿ ಭಾರತದ ಬಗೆಗಿನ ಪ್ರಶ್ನೆಗಳೇ ಅಧಿಕವಾಗಿದ್ದವು. ಈ ಕಾವ್ಯಗಳ ಅನೇಕ ಪದ್ಯಗಳನ್ನು ನಾನು ಮುಲ್ಕೀ ಪರೀಕ್ಷೆಯ ಕಾಲಕ್ಕಾಗಲೇ ಸಾಕಷ್ಟು ಓದಿದ್ದೆ. ಒಂದೆರಡು ಪದ್ಯಗಳು ನಾನು ಹಿಂದೆ ಓದಿದವುಗಳೇ ಇದ್ದವು. ಇವೆಲ್ಲವಕ್ಕೂ ಆಗಿನ ನನ್ನ ಜ್ಞಾನದ ಪರಿಮಿತಿಯಲ್ಲಿ ಉತ್ತರಿಸಿದೆ. ಎರಡು ತಾಸಿನಲ್ಲಿ ಹೆಚ್ಚಿನ ಪುಟಗಳನ್ನು ಪಡೆದು ಬರೆದದ್ದೇ ಬರೆದದ್ದು. ಕೊನೆಗೆ ಹದಿನಾಲ್ಕೊ-ಹದಿನೈದೋ ಪುಟಗಳಿಂದ ಕೂಡಿದ ಉತ್ತರ ಪತ್ರಿಕೆ ಕೊಟ್ಟು ಹೊರಬಂದೆ. ಮರುದಿನ ವ್ಯಾಕರಣ, ಛಂದಸ್ಸು, ಅಲಂಕಾರ, ಪ್ರಬಂಧದ ಪ್ರಶ್ನೆಪತ್ರಿಕೆ ಕೈಗೆ ಬಂತು. ಅದರಲ್ಲಿ ಅಲಂಕಾರ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಬರೆಯಲು ಶಕ್ತಿ ಸಾಲಲಿಲ್ಲವಾದರೂ ಅಂದಾಜಿನ ಮೇಲೆ ಅದೂ ಸಹಿತವಾಗಿ ಉಳಿದ

ವಿಷಯಗಳ ಬಗೆಗೆ ಚನ್ನಾಗಿಯೇ ಉತ್ತರಿಸಿದ ಹನ್ನೆರಡು ಹದಿಮೂರು ಪುಟಗಳಷ್ಟು ಉತ್ತರ ಪತ್ರಿಕೆಕೊಟ್ಟು ಬಂದೆ. ನನ್ನ ಈ ಪರೀಕ್ಷೆ ಯಶಸ್ವಿಗೊಳ್ಳುವ ಆಸೆಯೊಂದು ಮೂಡಿತು.

ಆಮೇಲೆ ಆಗ ಮೈಸೂರಿನಲ್ಲಿಯೇ ಕ್ಯಾತನಹಳ್ಳಿ ಸಾಹುಕಾರ ಸಿದ್ಧಲಿಂಗಪ್ಪನವರ ಸಂಸ್ಕೃತ ಪಾಠಶಾಲೆಯ ಒಂದು ಭಾಗದಲ್ಲಿದ್ದುಕೊಂಡು ಸಾಹಿತ್ಯ ಸಂಸ್ಕೃತಿ ಸಂಶೋಧನ ಕಾರ್ಯದಲ್ಲಿ ನಿರತರಾಗಿದ್ದವರೂ ನನ್ನನ್ನು ಬಾಲ್ಯದಿಂದಲೂ ವಾತ್ಸಲ್ಯದಿಂದ ಕಂಡು ನನ್ನ ಉತ್ಕರ್ಷಕ್ಕೆ ಹಿರಿಹಿರಿ ಹಿಗ್ಗುತ್ತಿದ್ದ ಶಿವಾನುಭಾವಿ, ನೂತನ ಪುರಾತನ, ಸದ್ಧರ್ಮದೀಪಿಕೆ ಸಂಪಾದಕ ಶ್ರೀ ಚೆನ್ನಮಲ್ಲಿಕಾರ್ಜುನರ ಕೊಠಡಿಗೆ ಹೋಗಿ ಅವರಿಗೆ ನಮಸ್ಕರಿಸಿ ನನ್ನ ವೃತ್ತಾಂತವನ್ನೆಲ್ಲ ತಿಳಿಸಿದೆ. ಅವರು ತುಂಬಾ ಸಂತೋಷಪಟ್ಟು ನನ್ನನ್ನು ತಮ್ಮ ಕೊಠಡಿಯಲ್ಲೇ ಇರು, ಸ್ವಲ್ಪ ಕೆಲಸವಿದೆ ಎಂದು ಹೇಳಿ ಉಳಿಸಿಕೊಂಡರು ಎರಡು ದಿನ ಅಲ್ಲೇ ಇದ್ದೆ. ಮರುದಿನ ಅವರು ಆಗಿನ ಗೌರ್ನಮೆಂಟ್ ಪ್ರೆಸ್ ಡೈರೆಕ್ಟರಾಗಿದ್ದ ಶ್ರೀ ಗುರುಬಸಪ್ಪನವರ ಮನೆಗೆ ನನ್ನನ್ನು ಕರೆದುಕೊಂಡು ಹೋದರು. ಗುರುಬಸಪ್ಪನವರು ಶ್ರೀ ಚನ್ನಮಲ್ಲಿಕಾರ್ಜುನರಲ್ಲಿ ಅತ್ಯಂತ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಶ್ರೀ ಚೆನ್ನಮಲ್ಲಿಕಾರ್ಜುನರು ಅವರಿಗೆ ವಿದ್ಯಾಗುರುಗಳೆಂಬುದೇ ಈ ಭಕ್ತಿಗೆ ಕಾರಣವಾಗಿತ್ತು. ಚೆನ್ನಮಲ್ಲಿಕಾರ್ಜುನರು ನನ್ನನ್ನು ಉಳಿಸಿಕೊಂಡದ್ದು. ಗುರುಬಸಪ್ಪನವರಿಗೆ ನನ್ನ ಪರಿಚಯ ಮಾಡಿಸಿ ಅವರ ಮೂಲಕ ನನಗೆ ಸೀಟು ಸಿಗುವುದಕ್ಕೆ ಅನುಕೂಲವಾದರೂ ಆಗಬಹುದೆಂಬ ಉದ್ದೇಶಕ್ಕಾಗಿಯೇ ಎಂದು ನನಗೆ ಆಮೇಲೆ ತಿಳಿಯಿತು. ಗುರುಬಸಪ್ಪನವರಿಗೆ ನನ್ನ ವೃತ್ತಾಂತವನ್ನೆಲ್ಲ ಹೇಳಿದರು. ಅವರು ಆಗಬಹುದು. ನಾನು ಅದಕ್ಕೆಲ್ಲ ವ್ಯವಸ್ಥೆ ಮಾಡುತ್ತೇನೆ ಎಂದು ಆಶ್ವಾಸನೆಯನ್ನು ಕೊಟ್ಟುಬಿಟ್ಟರು. ಆಗ ನನ್ನ ಆನಂದಕ್ಕೆ ಪಾರವೇ ಇಲ್ಲವಾಯಿತು.

ನಾನು ಮರುದಿನವೇ ರಜಾ ಇಲ್ಲವೆಂದು ಚತನ್ನಮಲ್ಲಿಕಾರ್ಜುನರಿಗೆ ತಿಳಿಸಿ ಊರಿಗೆ ಹೊರಟು ಬಂದು ಕೆಲಸಕ್ಕೆ ಹಾಜರಾಗಿ ನನ್ನ ಕಾರ್ಯದಲ್ಲಿ ನಿರತನಾದೆ. ಮುಂದೆ ಶಿವಸಂಕಲ್ಪದಿಂದ ನನಗೆ ಪಂಡಿತಪರೀಕ್ಷೆಯಲ್ಲಿ ಓದಲು ಸ್ಥಾನ ಸಿಕ್ಕ ಬಗ್ಗೆ ಮತ್ತು ಜೂನ್ ಒಂದನೆಯ ತಾರೀಖಿನಂದು ಟ್ರೈನಿಂಗ್ ಕಾಲೇಜಿಗೆ ಬಂದು ಕೆಲಸಕ್ಕೆ ಹಾಜರಾಗಬೇಕೆಂಬ ಬಗ್ಗೆ ಕಾಗದ ಬಂತು. ಇಲ್ಲಿಗೆ ನನ್ನ ಜೀವನದ ಮತ್ತೊಂದು ಅಧ್ಯಾಯ ಪ್ರಾರಂಭವಾಯಿತೆಂದುಕೊಂಡೆ.

ಕ್ರಿಯಾಸಿದ್ಧಿಸ್ಸತ್ವೇ ಭವತಿ ಮಹತಾಂ ನೋಪಕರಣೇ ಎಂಬ ಆರೋಕ್ತಿ ಜ್ಞಾಪಕಕ್ಕೆ ಬಂತು. ಕಳೆದ ಹತ್ತು ವರ್ಷಗಳಿಂದ ಯಾವ ಒಂದು ದೊಡ್ಡಗುರಿಯನ್ನಿಟ್ಟುಕೊಂಡು ಹಗಲೂ ಇರುಳು ಕನವರಿಸುತ್ತಿದ್ದೆನೋ, ಆ ಬಯಕೆ ಈಡೇರಿದ ಆ ಗಳಿಗೆಯಲ್ಲಿ ನಾನು ಮಾನಸಿಕವಾಗಿ ತುಂಬಾ ಹರ್ಷೋತ್ಸಾಹ ಸಂಜನಿತ ಸಾತ್ವಿಕೋದ್ರೇಕದಿಂದ ಬೀಗಿ ಬಳುಕಿ ಹೋದುದಂತೂ ನಿಜವಾದ ಸಂಗತಿ. ಹೆಬ್ಬೂರಿಗೆ ಹೋಗಿ ರಾಮಯ್ಯನವರನ್ನು ಕಂಡು ಎಲ್ಲ ವಿಷಯವನ್ನು ವೇದ್ಯವರಿಕೆ ಮಾಡಿದೆ. ಅವರು ನನ್ನನ್ನು ತೊಂಡಗೆರೆ ಶಾಲೆಯಿಂದ ರಿಲೀವ್ ಮಾಡಿ ಆ ಕೂಡಲೆ ರಿಲೀವ್ ಆರ್ಡರು ಮತ್ತು ಎಲ್.ಪಿ.ಸಿ. ಸರ್ವಿಸ್ ರಿಜಿಸ್ಟರ್ ಸಹಿತ ಸಿದ್ಧಮಾಡಿಸಿ ಇವನ್ನು ಜೂನ್ ಒಂದರಂದು ಟ್ರೈನಿಂಗ್ ಕಾಲೇಜಿಗೇ ಕಳಿಸುತ್ತೇವೆ. ನಿಮ್ಮ ಕಯ್ಯಲ್ಲಿ ಕೊಡಬಾರದೆಂದು ಹೇಳಿ ಆಶೀರ್ವದಿಸಿ ಕಳಿಸಿಕೊಟ್ಟರು. ತುಮಕೂರಿಗೆ ಬಂದು ನಮ್ಮ

ಉಪಾಧ್ಯಾಯರಿಂದ ಬೀಳ್ಕೊಂಡೆ. ಅನಂತರ ಸಿದ್ಧಗಂಗಾ ಕ್ಷೇತ್ರಕ್ಕೆ ಬಂದು ಶ್ರೀಗಳವರಿಗೆ ಸಾಷ್ಟಾಂಗಪ್ರಣಾಮ ಮಾಡಿ ನನ್ನ ಈ ಸಾಧನೆಯ ಬಗ್ಗೆ ತಿಳಿಸಿದೆ. ಅವರು ಬಹಳ ಹರ್ಷಪಟ್ಟು ಚೆನ್ನಾಗಿ ಓದುವಂತೆಯೂ ಆಗಾಗ ಮಠಕ್ಕೆ ಬರುವಂತೆಯೂ ತಿಳಿಸಿ ಆಶೀರ್ವದಿಸಿ ಕಳಿಸಿಕೊಟ್ಟರು. ಮೈಸೂರಿನಲ್ಲಿ ಊಟ ಮತ್ತು ವಸತಿಗಾಗಿ ಕ್ಯಾತನಹಳ್ಳಿ ಸಾಹುಕಾರ್ ಸಿದ್ಧಲಿಂಗಪ್ಪನವರ (K.S.S) ಪಾಠಶಾಲೆಯ ವಿದ್ಯಾರ್ಥಿನಿಲಯದಲ್ಲಿ ಇರುವುದಕ್ಕಾಗಿ ಸುತ್ತೂರು ಶಿವರಾತ್ರಿ ರಾಜೇಂದ್ರ ಸ್ವಾಮಿಗಳಿಗೆ ಒಂದು ಪತ್ರ ಕೊಟ್ಟು ಅಲ್ಲೇ ಇರು ಎಂದು ಹೇಳಿದರು. ಹೋಗುವಾಗ "ದುಡ್ಡುಕಾಸಿನ ಕೊರತೆಯಿದ್ದರೆ ತೆಗೆದುಕೊಂಡು ಹೋಗು" ಎಂದರು. ಅನ್ಯಾದೃಶವಾದ ಈ ಅನಿಮಿತ್ತ ಬಂಧುವಿನ ಅಪಾರ ಕಾರುಣ್ಯಕ್ಕೆ ಮನದಲ್ಲೇ ಸಹಸ್ರನಮನ ಸಲ್ಲಿಸಿ "ಎಲ್ಲಾ ಇದೆ ಬುದ್ಧಿ, ತಮ್ಮ ಆಶೀರ್ವಾದವೊಂದೇ ಈಗ ಬೇಕಾಗಿರುವುದು" ಎಂದೆ. ಶ್ರೀಗಳವರು ನಕ್ಕು ಆಗಲಿ ಹೋಗಿ ಬಾ ಎಂದು ಕಳಿಸಿಕೊಟ್ಟರು. ಶ್ರೀಗಳವರು ನನ್ನ ಮಾತಿಗೆ ಬಹಳ ನಗುತ್ತಿದ್ದರು. ನಾನು ಕಥೆ ಮಾಡುವಾಗ ಸಾಮಾನ್ಯರನ್ನು ನಗಿಸುವ ತಂತ್ರ ಶ್ರೀಗಳಿಗೂ ಗೊತ್ತಾಗಿತ್ತಲ್ಲವೆ? ಅದನ್ನು ನೆನೆಸಿಕೊಂಡು ನಾನು ಮಾತಾಡುವಾಗಲೆಲ್ಲ ನಗುತ್ತಿದ್ದರು ಅಥವಾ ನಾನೇ ಅವರು ನಗುವಂತೆ ಮಾತಾಡುತ್ತಿದ್ದೇನೋ! ಅಂಥ ಪರಮಕಾರುಣ್ಯಮೂರ್ತಿ, ತ್ರಿವಿಧ ದಾಸೋಹಿ, ಅನಿಮಿತ್ತಬಂಧುವಿನ ಸಾನ್ನಿಧ್ಯದಿಂದ ದೂರ ಹೋಗುತ್ತಿದ್ದೆನಲ್ಲಾ! ಎಂಬ ಮಾನಸಿಕ ಉಮ್ಮಳದೊಡನೆಯೇ ಅವರ ಆಶೀರ್ವಾದವನ್ನು ಶಿರೋಧಾರ್ಯವನ್ನಾಗಿ ಮಾಡಿಕೊಂಡು ಮೈಸೂರಿಗೆ ಬಂದು ಕೆ.ಎಸ್. ಎಸ್. ಪಾಠಶಾಲೆಯ ವಿದ್ಯಾರ್ಥಿನಿಲಯದಲ್ಲಿ ಆಶನವಸತಿಗಳ ಸೌಕರ್ಯಗಳನ್ನು ಸಿದ್ಧಗಂಗಾ ಶ್ರೀಗಳವರ ಕೃಪಾವಿಶೇಷದಿಂದ ಪಡೆದು, ಮರುದಿನ ಟ್ರೈನಿಂಗ್ ಕಾಲೇಜಿಗೆ ಸೇರಿ ಕನ್ನಡ ಪಂಡಿತ ತರಗತಿಯ ವಿದ್ಯಾರ್ಥಿಯೆನಿಸಿ ಕೃತಾರ್ಥತೆ ಪಡೆದವನಾಗಿ ವಿದ್ಯಾಭ್ಯಾಸವನ್ನು ಮುಂದುವರಿಸಿದೆ.

# ಅಧ್ಯಾಯ - 8

## ಮೈಸೂರಿನಲ್ಲಿ ಕನ್ನಡಪಂಡಿತ ತರಗತಿ ವಿದ್ಯಾರ್ಥಿಯಾಗಿ...

ಮೈಸೂರಿಗೆ 1947ನೆಯ ಮೇ ತಿಂಗಳ ಕೊನೆಯ ವಾರದಲ್ಲಿ ಬಂದು ಇಳಿದೆ. ನನ್ನನ್ನು ಬಾಲ್ಯದ ದಿನಗಳಿಂದಲೂ ಅನಿಮಿತ್ತ ಬಂಧುವಾಗಿ ಕಂಡ ಸದ್ಧರ್ಮದೀಪಿಕೆ ಸಂಪಾದಕ ಶ್ರೀ ಚೆನ್ನಮಲ್ಲಿಕಾರ್ಜುನರ ಸಮೀಪದಲ್ಲಿಯೇ ಇರುವ ಸೌಭಾಗ್ಯವನ್ನು ದೇವರೇ ಉಂಟುಮಾಡಿದನೆಂದು ಬಹುವಾಗಿ ಹಿಗ್ಗಿ ಹೋದೆ. ಪ್ರಥಮತಃ ನಾನು ಇಲ್ಲಿ ಕಂಡದ್ದೇ ಇವರನ್ನು. ಎಲ್ಲ ವಿಚಾರವನ್ನು ಅವರಿಗೆ ತಿಳಿಸಿದೆ. ಅವರಿಗೂ ಅತ್ಯಂತ ಸಂತೋಷವಾಯಿತು. "ಚೆನ್ನಾಗಿ ಓದಿ ಯಶಸ್ಸು ಪಡೆ" ಎಂದು ಆಶೀರ್ವದಿಸಿದರು. ಆಗ ನನಗೆ ಕಗ್ಗತ್ತಲೆಯಲ್ಲಿ ಸೂರ್ಯೋದಯವಾದಂತೆ, ಗಾಳಿಯೇ ಇಲ್ಲದ ವೈಶಾಖದ ಬೇಗೆಯಲ್ಲಿ ಪಡುವಣ ದಿಕ್ಕಿನ ಗಾಳಿ ಬೀಸಿದಂತಾಯಿತು. ಆದಷ್ಟು ಇವರ ಕೆಲಸದಲ್ಲಿ ನೆರವಾಗಿ, ನಾಲ್ಕು ವರ್ಷ ಇಲ್ಲಿ ಓದಿ, ನನ್ನ ನಡುಗಾಲದ ಓದುವಿಕೆಯ ಬರಗಾಲವನ್ನು ಪರಿಹರಿಸಿಕೊಂಡು ಮುಂದುವರಿಯಬೇಕೆಂಬ ದೃಢಸಂಕಲ್ಪಭರಿತನಾದೆ. ಶ್ರೀ ಚನ್ನಮಲ್ಲಿಕಾರ್ಜುನ ಅವರು ಆ ಕೂಡಲೆ ನನಗೆ ಶಬ್ದಮಣಿದರ್ಪಣವನ್ನು ತಾವೇ ಕೈಯಿಂದ ಬರೆದಿಟ್ಟುಕೊಂಡಿದ್ದ ಶಬ್ದಾನುಶಾಸನದ ಸೂತ್ರ ವೃತ್ತಿವಿವರಣೆಯನ್ನೊಳಗೊಂಡ ಶಬ್ದಾನುಶಾಸನವನ್ನು ಕೈಗೆ ಇತ್ತು "ಈ ಪುಸ್ತಕಗಳನ್ನೇನೂ ಕೊಳ್ಳಬೇಡ. ಹಿಂದೆ ನಾನು ಅಪ್ಪರ್ ಸೆಕಂಡರಿ ಪರೀಕ್ಷೆಗಾಗಿ ಓದುವಾಗಿನ ಈ ಪುಸ್ತಕಗಳನ್ನು ಹಾಗೇ ಇಟ್ಟಿದ್ದೆ" ಎಂದರು. ನಾನು ಅವೆರಡೂ ಪುಸ್ತಕಗಳನ್ನು ತೆಗೆದುಕೊಂಡೆ. ಅವುಗಳಲ್ಲಿ ಶಬ್ದಾನುಶಾಸನವನ್ನು ನನ್ನ ಓದು ಮುಗಿದ ಮೇಲೆ ಹಿಂದಿರುಗಿಸಿದೆ. ಶಬ್ದಮಣಿ ದರ್ಪಣ ನನ್ನಲ್ಲೆ ಉಳಿಯಿತು. ಆ ಗ್ರಂಥವನ್ನು ಇಂದಿಗೂ ಇಟ್ಟಿದ್ದೇನೆ. ಆ ಗ್ರಂಥವನ್ನು ನೋಡಿದಾಗಲೆಲ್ಲ ಶ್ರೀ ಚೆ. ಅವರ ನಿಕಟದಲ್ಲಿದ್ದು ಬಾಳಿದ ನನ್ನ ಬಾಳಿನ ಮಹತ್ವದ ದಿನಗಳೆಲ್ಲ ಮನದ ಮುಂದೆ ಬಂದು ನಿಲ್ಲುತ್ತವೆ. ಕ್ಷಣಕಾಲ ಸ್ತಂಭೀಭೂತನಾಗುತ್ತೇನೆ. ಚೆನ್ನಮಲ್ಲಪ್ಪನವರು ನನ್ನಲ್ಲಿಟ್ಟ ಈ ವಾತ್ಸಲ್ಯ 1932ರಿಂದಲೂ ಬೆಳೆದು ಬಂದದ್ದು. ನಾನು ಆ ಊರ ಮಠದಲ್ಲಿದ್ದಾಗ ಪ್ರಥಮತಃ ಇವರ ಪುಸ್ತಕ ಮಾರಾಟ ಪ್ರಸಂಗದಲ್ಲಿ ಬೀಜಾರೋಪಣವಾಗಿ ಮುಂದೆ ಹಾವೇರಿಯ ಹುಕ್ಕೇರಿಮಠದ ಶಿವಬಸವ ಸ್ವಾಮಿಗಳವರ ಆಪ್ತ ಸೇವಕನಾಗಿ ಅವರ ಮಠದಲ್ಲಿಯೇ ಇದ್ದು ವಿದ್ಯಾಭ್ಯಾಸ ಮಾಡುವ ಕಾಲದಲ್ಲಿ ಗಿಡವಾಗಿ, ನನ್ನ ವಿದ್ಯಾಭ್ಯಾಸ ಮುಗಿದ ಮೇಲೆ ಅವರ ಪ್ರೆಸ್ಸಿನಲ್ಲಿಯೇ ಇದ್ದಾಗ ವೃಕ್ಷವಾಗಿತ್ತು. ಅವರು ನನ್ನನ್ನು ದತ್ತುಪುತ್ರನನ್ನಾಗಿ ಸ್ವೀಕರಿಸಲು ಮನಸ್ಸು ಮಾಡಿದ್ದು ನನ್ನ ನಡೆನುಡಿಗಳನ್ನು ನಾಲ್ಕೈದು ವರ್ಷ ನೋಡಿದ ಮೇಲೆಯೇ. ಮುಂದೆ ನಾನು ಮೈಸೂರು ರಾಜ್ಯಕ್ಕೆ ವಿದ್ಯಾಭ್ಯಾಸಕ್ಕೆ ಹೋದಾಗ ನನ್ನ ಫೀಜು ತಪ್ಪಿಸಿ, ಸ್ಕಾಲರ್‌ಷಿಪ್ ದೊರೆಯುವುದಕ್ಕೆ ಸಹಾಯಕವಾಗಲೆಂದು ಎರಡು ಎಕರೆ ಗದ್ದೆಯನ್ನು ನನ್ನ ಹೆಸರಿಗೆ ತಾವೇಸ್ವತಃ ಖರ್ಚಿಟ್ಟು ಖಾತೆ ಮಾಡಿಸಿದ ಪ್ರಸಂಗವೂ ಅಸೀಮವಾತ್ಸಲ್ಯಕ್ಕೆ ಕಾರಣವೇ. ಚೆನ್ನಮಲ್ಲಪ್ಪನವರು ಹಾವೇರಿಯನ್ನು ತ್ಯಜಿಸಿ ಮೈಸೂರಿಗೆ ಹೋಗಿ ಅಲ್ಲಿಂದ ತಮ್ಮ ಪತ್ರಿಕೆ ಹೊರಡಿಸುವ ಸಂಕಲ್ಪ ಮಾಡಿದುದಕ್ಕೂ ಕಾರಣವೊಂದುಂಟು. ಅಲ್ಲಿ ಓರ್ವ ಶ್ರೀಮಂತ ಸ್ವಾಮಿಗಳವರು "ನಿಮಗೆ ಪ್ರೆಸ್ಸು ಮತ್ತು ಒಂದು ಮನೆಯನ್ನು ಮಾಡಿಕೊಡುತ್ತೇನೆ. ಅಲ್ಲಿದ್ದು ನೀವು ನಿಮ್ಮ ಪತ್ರಿಕೆ

ನಡೆಸಬಹುದೆಂದು" ಹೇಳಿ ಕರೆಯಿಸಿಕೊಂಡಿದ್ದರಂತೆ. ಅಲ್ಲಿಗೆ ಶ್ರೀ ಚೆ. ಅವರು ಹೋಗಿ ಅನೇಕ ದಿನಗಳು ಸ್ವಂತ ಪ್ರೆಸ್ ಇಲ್ಲದೆ ಕಂಡ ಕಂಡವರ ಪ್ರೆಸ್ಸುಗಳಲ್ಲಿ ಪತ್ರಿಕೆಯನ್ನು ಮುದ್ರಣಮಾಡಿಸಿ ಹೊರತರುತ್ತಿದ್ದುದು ಅದುವರೆಗೆ ತೀರಾ ಕಷ್ಟಕರ ಕೆಲಸವಾಗಿತ್ತು. ಸ್ವಾಮಿಗಳಿಗೆ ಮೊದಲು ತಿಳಿಸಿ ಕರೆತಂದಂತೆ ಪ್ರೆಸ್ಸನ್ನು ಮನೆಯನ್ನು ಮಾಡಿಕೊಡಲು ಒತ್ತಾಯಿಸಿದಾಗ ಸ್ವಾಮಿಗಳು "ಪ್ರೆಸ್ಸನ್ನು ಮತ್ತು ಪತ್ರಿಕೆಯನ್ನು ನೋಡಿಕೊಳ್ಳುವರನ್ನಾದರೂ ಕರೆಸಿ ಮಾಡಿಕೊಡೋಣ" ಎಂದರಂತೆ. ಆಗ ಶ್ರೀ ಚೆ. ಅವರು ನನ್ನನ್ನೇ ಕರೆಸಿದ್ದರು. ಆಗ ನಾನು ತೊಂಡಗೆರೆಯ ಪ್ರಾಥಮಿಕ ಶಾಲೆಯ ಉಪಾಧ್ಯಾಯನಾಗಿ ಹೊಸದಾಗಿ ನೇಮಕಾತಿ ಹೊಂದಿದ್ದೆ. "ನೀನು ಆ ಕೆಲಸ ಬಿಟ್ಟು ಬಂದು ಬಿಡು. ಮೈಸೂರಿನಲ್ಲಿ ಪ್ರೆಸ್ ಮಾಡಿಕೊಡುತ್ತೇನೆ. ಮುಂದೆ ಈ ಪತ್ರಿಕೆಯನ್ನು ನಡೆಸಿಕೊಂಡು ಹೋದರಾಯಿತು. ಉತ್ತರೋತ್ತರ ಅಭಿವೃದ್ಧಿಗೊಳ್ಳುತ್ತೀಯೆ" ಎಂದು ಕಾಗದ ಬರೆದದ್ದರ ಮೇಲೆ ನಾನು ಕೆಲವುದಿನ ರಜಾಹಾಕಿ ಹೋಗಿದ್ದೆ. ಆದರೆ ನಾನು ಪ್ರೆಸ್ ನಡೆಸಿಕೊಂಡು ಹೋಗುವ ಗಳಿಗೆ ಕೂಡಿಬರಲಿಲ್ಲ. ಅಷ್ಟರಲ್ಲಿ ನಮ್ಮ ಶಾಲಾ ಇನ್‌ಸ್ಪೆಕ್ಟರರಿಂದ "ನೀವು ಹೊಸದರಲ್ಲಿ ಶಾಲೆಗೆ ರಜಾ ಹಾಕಿ ಹೋಗಿದ್ದೀರಿ. ಇನ್ನು ಒಂದು ವಾರದಲ್ಲಿ ಬಂದು ಕೆಲಸಕ್ಕೆ ಹಾಜರಾಗದಿದ್ದಲ್ಲಿ ನಿಮ್ಮನ್ನು ವಜಾ ಮಾಡಲಾಗುವುದು" ಎಂಬ ಪತ್ರ ಬಂದದ್ದನ್ನು ಶ್ರೀ ಚೆ. ಅವರಿಗೆ ತೋರಿಸಿದಾಗ, "ಹೋಗಪ್ಪಾ ಬೇಗ ಹೋಗಿ ಕೆಲಸಕ್ಕೆ ಹಾಜರಾಗು" ಎಂದು ಹೇಳಿ ಕಳಿಸಿಕೊಟ್ಟುಬಿಟ್ಟರು. ನಾನು ಬಂದು ಕೆಲಸಕ್ಕೆ ಸೇರಿಕೊಂಡೆ. ಈ ಎಲ್ಲ ವಿಷಯಗಳನ್ನು ನಾನು ಸವಿವರವಾಗಿ ನಾನೇ ಬರೆದ "ಶ್ರೀ ಚನ್ನಮಲ್ಲಿಕಾರ್ಜುನರು" ಎಂಬ ಗ್ರಂಥದಲ್ಲೂ, ದೇವೀರಪ್ಪ ಮತ್ತು ನನ್ನಿಂದ ಸಂಪಾದಿಸಲ್ಪಟ್ಟು ಹುಬ್ಬಳ್ಳಿ ಮೂರು ಸಾವಿರ ಮಠದಿಂದ ಪ್ರಕಟಿಸಲ್ಪಟ್ಟ "ಮಹಾನುಭಾವಿ ಚೆನ್ನಮಲ್ಲಿಕಾರ್ಜುನರು" ಗ್ರಂಥದಲ್ಲೂ ಸವಿವರವಾಗಿ ಹೇಳಿಕೊಂಡಿದ್ದೇನೆ. ಇಂಥ ಓರ್ವ ಪ್ರಬುದ್ಧಚೇತನದ, ಓರ್ವ ಶಿವಾನುಭಾವಿಯ ನಿಕಟಕ್ಕೆ ಮೈಸೂರಿಗೆ ಬಂದು ಬಿಟ್ಟೆನಲ್ಲಾ! ಎಂಬ ಸಂತೋಷ ನನ್ನನ್ನು ಮೈಮರೆಸಿಬಿಟ್ಟಿತ್ತು. ಅನಂತರ ನಾನು ಮೈಸೂರಿನಲ್ಲಿ ಸರಕಾರಿ ಮುದ್ರಣಾಲಯದ ಸೂಪರಿಂಟೆಂಡೆಂಟ್ ಆಗಿದ್ದ ಶ್ರೀ ಡಿ. ಎಸ್. ಗುರುಬಸಪ್ಪನವರನ್ನು ಕಂಡೆ. ಅವರು ಶ್ರೀ ಚೆ. ಅವರಲ್ಲಿ ಅಗಾಧಭಕ್ತಿಯನ್ನು ಹೊಂದಿದ್ದು ಅವರಿಗೆ ಬಹುಮಟ್ಟಿಗೆ ನೆರವು ನೀಡುವವರಲ್ಲಿ ಒಬ್ಬರಾಗಿದ್ದರು. ಅವರು ಉತ್ತರೋತ್ತರ ನನಗೂ ಸಹಾಯಕರಾಗುವವರೆಂದು ಅವರನ್ನು ಹೋಗಿ ಕಂಡೆ. ಅವರ ಪರಿಚಯ ನನಗಾದದ್ದೂ ಶ್ರೀ ಚೆ. ಅವರ ಮೂಲಕವೇ. ಅವರು ನನ್ನನ್ನು ಗೌರವಾದರಗಳಿಂದ ಕಂಡು ನನಗೆ "ನಿನಗೇನಾದರೂ ಅನಾನುಕೂಲವಾದರೆ ಬಂದು ನನ್ನನ್ನು ಕಾಣು" ಎಂದು ಹೇಳಿದ್ದರು. ನಾನು ಅಲ್ಲಿರುವಷ್ಟು ಕಾಲವೂ ಗುರುಬಸಪ್ಪನವರು ನನಗ ಹಿತಚಿಂತಕರಾಗಿ ಅನೇಕ ಬಗೆಯಲ್ಲಿ ನೆರವಾದರೆಂಬುದನ್ನು ಹೇಳಲೇಬೇಕಾಗಿಲ್ಲ. ಹೀಗೆ ಮೈಸೂರಿನಲ್ಲಿ ನನಗೆ ಶ್ರೀ ಚೆ. ಮತ್ತು ಶ್ರೀ ಗುರುಬಸಪ್ಪನವರು ಮನೆಯ ಬಂಧುಗಳಂತೆ ಆಗಿಹೋದರು. ಇವರೇ ನನಗೆ ಮೈಸೂರಿನಲ್ಲಿ ಪ್ರಥಮತಃ ನಮ್ಮವರೆನಿಸಿದವರು ಯಾರ ಪರಿಚಯವೂ ನನಗಿರಲಿಲ್ಲ. ನನ್ನ ಸುಖದುಃಖ, ಹಾನಿವೃದ್ಧಿ - ಏನೆಲ್ಲ ನೋಡಿಕೊಳ್ಳುವ ಪರಮಾಪ್ತರಾಗಿದ್ದರು. ಈ ಹಿಂದಿನ ದಿನಗಳಲ್ಲಿ ಶ್ರೀ ಚೆ. ಅವರ ಮೀಮಾಂಸೆಯ ಅರಿವು ಆಗಬೇಕಾಗಿರಲಿಲ್ಲ. ಪ್ರೌಢವಯಸ್ಕನಾಗಿ ಯೋಚಿಸುವ ಈ ಸಮಯದಲ್ಲಿ ಚನ್ನಮಲ್ಲಿಕಾರ್ಜುನರ ವ್ಯಕ್ತಿತ್ವ ಭವ್ಯ ದಿವ್ಯವೆನಿಸಿತು. ಬಸವಾದಿ ಪ್ರಮಥರ ಕಾಲದಲ್ಲಿದ್ದ ಅನೇಕ ಶರಣರ ಬಗೆಗೆ ಗ್ರಂಥಗಳಲ್ಲಿ ಓದಿ ತಿಳಿಯುತ್ತಿದ್ದ ಈ ಕಾಲದಲ್ಲಿ ಇಂಥ ವ್ಯಕ್ತಿಗಳು ಇರಲು ಶಕ್ಯವೇ? ಎಂಬ ಅನುಮಾನ

ಚೆನ್ನಮಲ್ಲಿಕಾರ್ಜುನರನ್ನು ಅತ್ಯಂತ ಸಮೀಪ ದಿಂದ ಮೈಸೂರಿನಲ್ಲಿ ಕಾಣುವ ಸಮಯದಲ್ಲಿ ಪರಿಹಾರವಾಯಿತು. ಅಂಥ ಘನವಾದ ದಿವ್ಯವ್ಯಕ್ತಿತ್ವ ಅವರದು. ಅವರು ನೂತನ ಪುರಾತನರಾಗಿಯೇ ಕಾಣತೊಡಗಿದರು. ಶ್ರೀ ಸಿದ್ಧಗಂಗಾ ಶ್ರೀಗಳವರ ಮೂಲಕ ಸುತ್ತೂರು ಶಿವರಾತ್ರಿ ರಾಜೇಂದ್ರ ಸ್ವಾಮಿಗಳೂ ಮತ್ತು ಮಹಾವಿದ್ವಾಂಸರೂ, ದಾರ್ಶನಿಕರೂ ಎನಿಸಿದ್ದ ಅರಮನೆ ಪಂಚಗವಿಮಠದ ಸ್ವಾಮಿಗಳಾದ ಗೌರೀ ಶಂಕರಸ್ವಾಮಿಗಳೂ ಪರಿಚಯಗೊಂಡರು. ಒಟ್ಟಿನಲ್ಲಿ ಅತ್ಯಂತ ಪ್ರತಿಷ್ಠಿತ ವ್ಯಕ್ತಿಗಳ ಪರಿಚಯಭಾಗ್ಯ ನನ್ನದಾಗಿ ನನ್ನ ವ್ಯಕ್ತಿತ್ವವಿಕಾಸಕ್ಕೆ ಮೈಸೂರು ನಗರ ಕಾರಣವಾದದ್ದು ನನ್ನ ಪುಣ್ಯವಿಶೇಷವೆನ್ನಬೇಕು. ಘನತರ ವ್ಯಕ್ತಿತ್ವದ ಪರಿಸರದಲ್ಲಿ ಯಾರು ತಾನೆ ಮೇಲೇಳಲಾರರು! ನಾನು ಬಹಳವಾಗಿ ಬೆಳೆದು ಬಿಟ್ಟೆ. ಸರಸ ಸಜ್ಜನಿಕೆ, ದೊಡ್ಡತನ ನನ್ನ ತನದಲ್ಲಿ ಸಂಗಮಗೊಂಡು ನಾನೂ ಮೈಸೂರಿನಲ್ಲಿ ಪ್ರತಿಷ್ಠಿತ ವ್ಯಕ್ತಿಯೇ ಆಗಿಬಿಟ್ಟೆ. ಸಾರ್ವಜನಿಕ ಸಭೆ ಸಮಾರಂಭಗಳಿಗೆ ನನ್ನನ್ನು ಉಪನ್ಯಾಸಕ್ಕೋ, ಶಿವಕಥೆಮಾಡಲೋ ಕರೆಯತೊಡಗಿದರು. ಅಲ್ಲೆಲ್ಲ ಹೋಗಿ ಕಾರ್ಯಕ್ರಮದಲ್ಲಿ ಭಾಗವಹಿಸಿ ಬರುತ್ತಿದ್ದೆ.

### *ತರಗತಿಯಲ್ಲಿ ಮೊದಲ ನಾಲ್ಕೈದು ತಿಂಗಳು*

ಕನ್ನಡ ಪಂಡಿತ ತರಗತಿಯಲ್ಲಿ ಸೇರಿದ ಕೆಲವೇ ದಿನಗಳಲ್ಲಿ ಸಂಸ್ಕೃತ ವಿಷಯ ನನ್ನ ಪಾಲಿಗೆ ಉಕ್ಕಿನ ಕಡಲೆಯಾಗಿ ಪರಿಣಮಿಸಿ ಬಿಟ್ಟಿತು. ಮೊದಲ ವರ್ಷವೇ ಬಾಣಭಟ್ಟನ ಕಾದಂಬರಿಯ ಸಂಗ್ರಹ ಐವತ್ತು ಪುಟ, ಕಾಳಿದಾಸನ ಕುಮಾರ ಸಂಭವ. ಭಾಸನ ಪ್ರತಿಮಾನಾಟಕ, ಲಘು ಸಿದ್ಧಾಂತ ಕೌಮುದಿ, ಮುಂತಾದ ಪ್ರೌಢ ಸಂಸ್ಕೃತ ಗ್ರಂಥಗಳು ೀರ್ಣವಾಗುವುದೇ ಕಷ್ಟವಾಯಿತು. ತರಗತಿಯಲ್ಲಿ ಕೆಲವರು ಅಲ್ಪಸ್ವಲ್ಪ ಪೂರ್ವಭಾವಿಯ ಗಿ ಸಂಸ್ಕೃತ ಓದಿದವರಿಗೆ ಅವುಗಳ ಅರ್ಥವಾಗುತ್ತಿತ್ತೋ ಏನೋ! ನನಗೆ ಮಾತ್ರ ಅರ್ಥವಾಗುವುದೇ ಕಷ್ಟವಾಯಿತು. ಹೇಗಪ್ಪಾ ಪಂಡಿತ ಪರೀಕ್ಷೆಯಲ್ಲಿ ಓದಿ ಪಾರಾಗುವುದು ಎನ್ನಿಸಿಬಿಟ್ಟಿತ್ತು. ಉಪಾಧ್ಯಾಯರು ಕೆಲವರು ಅರ್ಥವಾಗದಂತೆಯೂ ಹೇಳಿ ತಮ್ಮ ಪಾಂಡಿತ್ಯ ಪ್ರದರ್ಶನ ಮಾಡಿ ಹೋಗುತ್ತಿದ್ದರು. ನಾನು ಕಣ್ ಕಣ್ ಬಿಡುವಂತಾಯಿತು. ಶ್ರೀನಿವಾಸಾ ಚಾರ್ಯರೆಂಬುವರು ಮೊದಲನೆಯ ದಿನವೇ ನನ್ನನ್ನು ಬೆದರಿಸಿ ಬಿಟ್ಟರು. ನಾನು ವಿ.ಟಿ.ಸಿ ಪರೀಕ್ಷೆಯಲ್ಲಿ ರ್‍ಯಾಂಕ್ ಪಡೆದು ಬಂದುದನ್ನು ಅವರ ಇನ್ನಿತರ ಸಹ ಉಪಾಧ್ಯಾಯರಿಂದ ತಿಳಿದು "ಯಾರಯ್ಯಾ ಅವರು, ವಿಟಿಸಿಯಲ್ಲಿ ರ್‍ಯಾಂಕ್ ಪಡೆದು ಬಂದವರು?" ಎಂದು ಪ್ರಶ್ನಿಸಿದರು. ನಾನು ಎದ್ದುನಿಂತು "ನಾನೇ ಸಾರ್" ಎಂದೆ. ಪಕಪಕ ನಕ್ಕು "ನೀನೇನೋ! ಪಂಡಿತ ಪರೀಕ್ಷೆ ಎಂದರೆ ವಿಟಿಸಿ ಅಲ್ಲಯ್ಯೋ! ಆ ರ್‍ಯಾಂಕ್ ಗೀಂಕ್ ಇಲ್ಲಿ ಏನೂ ಕೆಲಸ ಮಾಡುವುದಿಲ್ಲ. ನೀನು ಸಂಸ್ಕೃತ ಓದಿದ್ದೀಯೋ? ಎಲ್ಲಿ ಹರಿಶಬ್ದ ನಡೆಸು?" ಎಂದುಬಿಟ್ಟರು. ನಾನು ಬೆವೆತು ಹೋದೆ. ಬಾಯಿಯೇ ಹೊರಡದಾಯಿತು. ನನಗೆ ಶಬ್ದ ನಡೆಸುವುದು ಸಾಧ್ಯವಿಲ್ಲದೆ ತಲೆಕೆಳಗು ಮಾಡಿ ನಿಂತುಬಿಟ್ಟೆ. "ಹರಿಶಬ್ದ ನಡೆಸಲಿಕ್ಕೆ ಬರದಿದ್ದರೆ ನೀನು ಪಂಡಿತ ಪರೀಕ್ಷೆಯಲ್ಲಿ ಹೇಗಯ್ಯ ಪಾಸಾಗ್ತೀಯಾ?". ಆ ಸಮಯದಲ್ಲಿ ಕ್ಷಣಕಾಲ ನಡುಕ ಬಂದರೂ ನನ್ನ ಮೊಂಡು ಧೈರ್ಯ ಎಂದು ಈ ಮೊದಲು ಹೇಳಿದ್ದೇನಲ್ಲ! ಆ ಧೈರ್ಯ ನೆರವಿಗೆ ಬಂತು. ಆ ಸಮಯದಲ್ಲಿ ಆ ಉಪಾಧ್ಯಾಯರಿಗೆ ಮರುಉತ್ತರ ಕೊಡದೆ ಸುಮ್ಮನಾಗಿಬಿಟ್ಟೆ. ಒಂದು ರೀತಿಯಲ್ಲಿ ಅಪಮಾನ, ಭಯವೂ ನನ್ನನ್ನು ಕಾಡಿತು. ಉಳಿದ

ನನ್ನ ಸಹಪಾಠಿಗಳು ನನಗಿಂತಲೂ ಸಂಸ್ಕೃತ ಸಾಮಾನ್ಯ ಜ್ಞಾನ ಪಡೆದವರೆಂದು ನನಗೆ ಹೊಳೆಯಲಿಲ್ಲ. ನಾನೊಬ್ಬನೇ "ರಾಮಃ-ರಾಮೌ-ರಾಮಾಃ" ಬಾರದಿದ್ದವನೆಂಬುದರ ಅರಿವಾಯಿತು. ಓಹೋ! ನಾನು ಹಿಂದೆ ಬಿದ್ದೆ ಎನ್ನಿಸಿತು. ಏನಾದರೂ ಮಾಡಿ ಸಂಸ್ಕೃತ ಭಾಷೆಯಲ್ಲಿ ನಾನು ಮುಂದುವರಿಯಬೇಕು. ಅದಕ್ಕಾಗಿ ಬಹಳಷ್ಟು ಕಾಲವನ್ನು, ದೇಹಶ್ರಮವನ್ನು ಲೆಕ್ಕಿಸದೆ ಅಭ್ಯಾಸ ಮಾಡಬೇಕೆಂದು ಸಂಕಲ್ಪ ಮಾಡಿಕೊಂಡೆ.

ಮರುದಿನ ಅದೇ ಶ್ರೀನಿವಾಸಾಚಾರ್ಯರು ಬಾಣಭಟ್ಟನ ಕಾದಂಬರೀ ಸಂಗ್ರಹ ಪಾಠಕ್ಕೆ ಬಂದರು. ಅವರು ಮಹಾವಿದ್ವಾಂಸರು. ಸಂಸ್ಕೃತ, ಕನ್ನಡ, ಇಂಗ್ಲೀಷ್ ಮೂರು ಭಾಷೆಗಳನ್ನು ಬಲ್ಲವರು. ಅವರಿಗೆ ಗ್ರಂಥ ಸಹಾಯ ಬೇಕಾಗಿರಲೇ ಇಲ್ಲ. ವ್ಯಾಕರಣ ಅಲಂಕಾರದಲ್ಲೂ ಅಪ್ರತಿಹತ ಸಾಮರ್ಥ್ಯ, ಮೇಲಾಗಿ ವಿಶಿಷ್ಟಾದ್ವೈತ ಸಿದ್ಧಾಂತ ದಿಗ್ದಂತಿಗಳಲ್ಲಿ ಒಬ್ಬರು. ಬಿರುದು-ಬಾವಲಿಗಳೇ ಅವರನ್ನು ಹುಡುಕಿಕೊಂಡು ಬಂದಿದ್ದವು. ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿದ್ದು ಅನೇಕ ಕನ್ನಡ ಪ್ರಾಚೀನ ಗ್ರಂಥ ಸಂಪಾದನೆ ಮಾಡಿರುವ ಶೇಷಾಚಾರ್ಯರ ತಮ್ಮಂದಿರೆಂದು ಆಮೇಲೆ ನಮಗೆ ತಿಳಿಯಿತು. ಬಾಣಭಟ್ಟನ ಕಾದಂಬರಿಯ ಮೊದಲ ಐದಾರು ವಾಕ್ಯಗಳನ್ನು "ಆಸೀದಶೇಷ ನರಪತಿಶಿರಸ್ಸಮಭ್ಯರ್ಚಿತ ಶಾಸನಃ ಪಾಕಶಾಸನ ಇವಾಪರಃ ಚತುರ್ಧಿಮಾಲಾಮೇಖಲಾಯಾ ಭುವೋಭರ್ತಾಃ ಪ್ರತಾಪಾಮರಾಗಾವನತ ಸಮಸ್ತ ಸಾಮಂತ ಚಕ್ರಃ, ಚಕ್ರವರ್ತಿ ಲಕ್ಷಣೋ ಪೇತಶ್ಚಕ್ರಧರ ಇವ ಕರಕಮಲೋಪಲಕ್ಷ್ಯಪೂರ್ಣ ಶಂಖಚಕ್ರ ಲಾಂಛನಃ...." ಹೀಗೆ ಉದ್ದಕ್ಕೆ ಪುಸ್ತಕ ಗಿಸ್ತಕ ನೋಡದೆ ಉದ್ದಕ್ಕೆ ಹೇಳುತ್ತಿರುವಾಗ ನನಗಂತೂ ಕಣ್ ಕಣ್ ಬಿಡುವಂತಾಯಿತು. ಅವರ ಉಚ್ಚಾರ ರೀತಿ, ಅತ್ಯಂತ ಜಟಿಲ ಸಂಯುಕ್ತವರ್ಣ ವಿಶಿಷ್ಟ ದೀರ್ಘ ದೀರ್ಘತರ ಸಮಸ್ತ ಪದಗಳನ್ನೂ ಉಸುರು ಬಿಡದಂತೆ ಲೀಲಾಜಾಲವಾಗಿ ಹೇಳುತ್ತಿರುವ ಬಗ್ಗೆ ಇವೇ ನನ್ನನ್ನು ಹುಚ್ಚನನ್ನಾಗಿಸಿಬಿಟ್ಟವು. ಹೀಗೆ ಒಂದೆರಡು ನಿಮಿಷಗಳವರೆಗೆ ಒಂದು ವಾಕ್ಯವೃಂದ (ಪ್ಯಾರಾಗ್ರಾಫ್) ವನ್ನು ಓದಿ ಪಕಪಕ ನಕ್ಕು "ಯಾರಿಗೆ ಎಷ್ಟೆಷ್ಟು ಅರ್ಥವಾಯಿತ್ರಯ್ಯ" ಎಂದು ಎಲ್ಲರನ್ನೂ ನೋಡಿ ನಕ್ಕರು. ನಾವು ನಕ್ಕ ಶಾಸ್ತ್ರ ಮಾಡಿದೆವು. ಆಗ ನನಗೆ ಹೊಳೆದಿದ್ದು ಹೀಗೆ: ಇವರ ಹಾಗೆಯೇ ಈ ಗದ್ಯಭಾಗವೇ ಆಗಲಿ ಇನ್ನಿತರ ಪದ್ಯಗಳಾದ ಕುಮಾರಸಂಭವಾದಿ ಗ್ರಂಥಗಳೇ ಆಗಲಿ ಮೊದಲು ಚೆನ್ನಾಗಿ ಬಾಯಿಗೆ ಬಂದುಬಿಟ್ಟರೆ ನಾಲಗೆಗೆ ಅರ್ಥ ಸಂಸ್ಕಾರ ಬಂದ ಹಾಗೆಯೇ ಎಂಬ ಗುಟ್ಟು ಹೊಳೆಯಿತು. ಹಿಂದೆ ನಾವು ಪ್ರೈಮರಿ, ಆರು ಮತ್ತು ಏಳನೇ ತರಗತಿಯಲ್ಲಿ ಓದುತ್ತಿದ್ದಾಗ "ಕ್ರಮಮಂ ಕೈಕೊಳ್ಳಲೆಂದು ಪುಟ್ಟಿ ರಣದೊಳ್ ಸಾವನ್ನೆಗಂ ಮಾಣ್ದೊಡಕ್ರಮಮಕ್ಕುಂ ಕ್ರಮಮಕ್ಕುಮೇ ಕ್ರಮಮನಾನೇಗೈದಪೆಂ ಹಿಕ್ರಮಂ...." ಇತ್ಯಾದಿ ಪಂಪಭಾರತದ ಪದ್ಯಗಳು ಉಕ್ಕಿನ ಕಡಲೆಗಳೇ. ಆದರೆ ಅವೆಲ್ಲ ನನ್ನ ಕಂಠಸ್ಥ ಮಾಡಿಕೊಂಡ ಕಾರಣವಾಗಿ ದಿನೇ ದಿನೇ ಅವುಗಳ ಸತ್ವಪೂರ್ಣ ಅರ್ಥದ ಅರಿವಾಗುತ್ತಿತ್ತು. ಷಡಕ್ಷರಿ, ಹರಿಹರ, ರತ್ನಾಕರನ ಅಪರಾಜಿತೇಶ್ವರ ಶತಕ, ರತ್ನಾಕರಾಧೀಶ್ವರ ಶತಕಗಳ ಕಠಿಣ-ಕಠಿಣತಮ ಪದ್ಯಗಳೆಲ್ಲ ನಮಗೆ ಕನಸಿನಲ್ಲಿ ಕೇಳಿದರೂ ಪಟಪಟ ಹೇಳುವಷ್ಟು ಬಾಯಿಪಾಠವಾಗಿದ್ದರೂ ಓದುವ ಕಾಲದಲ್ಲಿ ಉಕ್ಕಿನ ಕಡಲೆಗಳೇ ಆಗಿದ್ದವು. ಹಾಗೆಯೇ ಇದು ಕೂಡ. ನಾನು ಏನಾದರೂ ಸಾಹಸ ಮಾಡಿ ಕಠಿಣವಾದ ಸಂಸ್ಕೃತದ ಈ ಪಠ್ಯಭಾಗವನ್ನೆಲ್ಲ ಕನ್ನಡ ಲಿಪಿಯಲ್ಲಿ ಬರೆದುಕೊಂಡಾದರೂ ಬಾಯಿಪಾಠ ಮಾಡಬೇಕೆಂದು

ಸಂಕಲ್ಪಿಸಿ ಎರಡು ಮೂರು ತಿಂಗಳಲ್ಲಿ ಅದ್ಭುತ ಪ್ರಗತಿಯೆನ್ನುವಂತೆ ಸಾಧಿಸಿಬಿಟ್ಟೆ. ಅದಕ್ಕಾಗಿ ರಾತ್ರಿ ಮೂರು ಘಂಟೆಗೆ ಎದ್ದು ಕಠಿಣಭಾಗಗಳನ್ನೆಲ್ಲ ಒಂದೊಂದನ್ನೂ ಎಂಟೆಂಟು ಹತ್ತು ಹತ್ತು ಸಲ ಓದುವುದು ಕೈಬಿಟ್ಟು ಮತ್ತೊಂದನ್ನು ಎಂಟೆಂಟು ಹತ್ತು ಹತ್ತು ಸಲ ಓದುವುದು ಕೈ ಬಿಡುವುದು. ಹೀಗೆ ಬೆಳಗಾಗುವವರೆಗೆ ಬಾಯಿಪಾಠ ಮಾಡುವ ಒಂದು ದೊಡ್ಡ ಕಾರ್ಯಕ್ರಮ ಹಾಕಿಕೊಂಡು ಓದತೊಡಗಿದೆ. ನಾನಿದ್ದುದು ಶ್ರೀ ಜೆ. ಅವರಿಗೆ ಪತ್ರಿಕೆ ನಡೆಸಲು ಕೊಟ್ಟಿದ್ದ ಬಾದಾಮಿ ನಂಜಪ್ಪನವರ ವಾಣಿವಿಲಾಸ ಮೊಹಲ್ಲಾದೊಳಗಿನ ಕಟ್ಟಡದಲ್ಲಿಯೇ. ನನ್ನ ಕೊಠಡಿ ಮಹಡಿಯ ಮೇಲೆ ಇತ್ತು. ಸುತ್ತಮುತ್ತ ಹತ್ತಿಪ್ಪತ್ತು ಸಾಮಾನ್ಯ ಮನೆಗಳು ಇದ್ದವು. ನನ್ನ ಓದುವಿಕೆ ಅವರಿಗೆಲ್ಲ ನಿದ್ರಾಭಂಗವುಂಟು ಮಾಡುತ್ತದೆಂದು ಆ ಮನೆಯವರಲ್ಲಿ ಕೆಲವರು ತಕರಾರು ಮಾಡತೊಡಗಿದರು. ಕೆಲವರು "ಅಯ್ಯೋ ಪಾಪ! ಓದೋ ಹುಡುಗರಿಗೆ ಹೀಗೆಲ್ಲ ನಾವು ಕಂಪ್ಲೆಂಟ್ ಮಾಡಿದರೆ ಹೇಗೆ? ಓದಿಕೊಳ್ಳಲಿ ಬಿಡಿ! ನಮ್ಮ ಕಿವಿಗೂ ನಾಲ್ಕು ಮಾತು ಬೀಳುತ್ತವೆ. ನಾಲ್ಕಾರು ದಿನ ಹೀಗೆ ನಮಗೆ ಕಿರಿಕಿರಿ ಎನಿಸಿದರೂ ಮುಂದೆ ತನ್ನಿಂದ ತಾನೇ ಅದೆಲ್ಲ ಮರೆತು ನಿದ್ರೆ ಬಂದೇ ಬರುತ್ತದೆ. ಮೇಲಾಗಿ ಅಷ್ಟು ರಾತ್ರಿಯಲ್ಲೇ ಓದುವುದನ್ನು ನೋಡಿಕೊಂಡು ನಮ್ಮ ಈ ಸೋಂಭೇರಿ ಮಕ್ಕಳೂ ಓದುವುದನ್ನು ಕಲಿತಾರು" ಎಂದು ಕೆಲವರು ನನ್ನ ಪರವಾಗಿ ಮಾತನಾಡಿದವರು ಇಲ್ಲದೇ ಇಲ್ಲ. ಆದರೂ ನಾನು ಅಲ್ಲಿಯೂ ಮೊಂಡತನ ತೋರಿಸಿಕೊಂಡು ಸ್ವಲ್ಪ ಕಡಿಮೆ ಧ್ವನಿಯಲ್ಲಿ ಓದತೊಡಗಿಯೇ ಬಿಟ್ಟೆ. 'ನನ್ನ ಕೊಠಡಿಯಲ್ಲಿ ನನ್ನ ಪಾಡಿಗೆ ನಾನು ಓದಿಕೊಂಡರೆ 'ಇವರಪ್ಪನ ಗಂಟೇನು ಹೋಯ್ತು?' ಎಂಬ ಮನೋಭಾವ, ಅದಕ್ಕಾಗಿ ಪ್ರತಿಭಟಿಸಲೂ ಸಿದ್ಧನಾಗಿ ಬಿಟ್ಟಿದ್ದೆ. ಹಾಗೆ ಇನ್ನೊಬ್ಬರಿಗೆ ಕಿರಿಕಿರಿಯುಂಟಾಗುವಂತೆ ವ್ಯವಹರಿಸುವುದು ಸರಿಯೋ ತಪ್ಪೋ ಅನ್ನುವ ನಿರ್ಣಯಕ್ಕೆ ನಾನು ಬಂದಿರಲೇ ಇಲ್ಲ, ಬರುವಂತೆಯೂ ಇರಲಿಲ್ಲ. ಅಷ್ಟರಮಟ್ಟಿಗೆ ಆ ಕ್ರಿಯೆಯಲ್ಲಿ ನನ್ನ ತನ್ಮಯತೆ ಬೆಳೆದು ಹೋಗಿತ್ತು. ಯಾರನ್ನೂ ಲೆಕ್ಕಿಸದೆ ಮೂರು ತಿಂಗಳು ತಪಸ್ಸಿನಂತೆ ಈ ಕ್ರಿಯೆ ಮಾಡಿದೆ. ರಜೆ ದಿನಗಳಲ್ಲಿ, ಉಳಿದ ದಿನಗಳಲ್ಲಿ, ಕಾಲೇಜಿಗೆ ಹೋಗುವಾಗ ಬರುವಾಗ ಇದೇ ಚಿಂತನೆಯಲ್ಲಿ ಕಾಲ ಕಳೆದೆ. ಆಗ ನನ್ನ ನಾಲಿಗೆಗೊಂದು ಸಂಸ್ಕೃತ ಬಂತು. ಸಂಸ್ಕೃತವನ್ನು ತಡೆಬಡೆಯಿಲ್ಲದೆ (ನನ್ನ ಪಠ್ಯವಿಷಯ ವ್ಯಾಪ್ತಿಯಲ್ಲಿ) ಓದುವುದನ್ನು ಕಲಿತುಬಿಟ್ಟೆ. ಆಗ ತರಗತಿಯಲ್ಲಿ ನಾನು ಹಿಂದೆ ಬಿದ್ದಿಲ್ಲ. ಮುಂದೆಯೂ ನಾನು ಹಿಂದೆ ಬೀಳಲಾರೆ! ಎಂಬ ಮನೋಭಾವ ಬಲಿಯತೊಡಗಿತು.

### *ಓರ್ವ ವಿದ್ಯಾರ್ಥಿ ನನಗೆ ಪಂಡಿತ ಪರೀಕ್ಷೆಯೇ ಬೇಡವೆಂದು ಓಡಿಹೋದುದು*

ಈ ಸಂದರ್ಭದಲ್ಲಿ ಇನ್ನೊಂದು ಸ್ವಾರಸ್ಯಕರ ವಿಷಯವನ್ನು ಹೇಳಲೇಬೇಕು. ಪಂಡಿತ ಪರೀಕ್ಷಾ ಕಾಲೇಜಿನ ಇತಿಹಾಸದಲ್ಲಿಯೇ ಅಲ್ಲಿ ಹರಿಜನ, ಗಿರಿಜನಾಂಗಗಳ ಓರ್ವ ವಿದ್ಯಾರ್ಥಿಯೂ ತಯಾರಾಗಿ ಹೊರಗೆ ಬಂದಿರಲಿಲ್ಲವೆಂದು ತೋರುತ್ತದೆ. ಮೊದಮೊದಲು ಇಡೀ ಮೈಸೂರು ಸಂಸ್ಥಾನಕ್ಕೆ ಕೇವಲ ನಾಲ್ಕು ಜನಗಳನ್ನು ಮಾತ್ರ ಆರಿಸಿಕೊಂಡು ಅವರಿಗೆ ನಾಲ್ಕು ವರ್ಷ ಶಿಕ್ಷಣ ಕೊಟ್ಟು, ಟ್ರೈನಿಂಗ್ ಕಾಲೇಜುಗಳಿಗೆ ಕಳಿಸುತ್ತಿದ್ದರು. ಇದಕ್ಕೂ ಪೂರ್ವದಲ್ಲಿ ಓರ್ವ ಸೀನಿಯರ್ ಕನ್ನಡ ಪಂಡಿತರು, ಓರ್ವ ಸೀನಿಯರ್ ಸಂಸ್ಕೃತ ವಿದ್ವಾನ್ ಪದಪೀಠದವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಭಡತಿ ಪಡೆದು ಹೋಗುವ ಪರಿಪಾಠವಿತ್ತಂತೆ. ನಾವು ಅಲ್ಲಿಗೆ ಹೋಗುವ ಹೊತ್ತಿಗೆ ಅದೂ ನಿಂತು ಹೋಗಿತ್ತು. ಇದಕ್ಕೆ ಕಾರಣ ಓರ್ವ

ಪ್ರಭಾವೀ ಪಂಡಿತರಿಗೂ ಬಿ.ಎಂ. ಶ್ರೀಕಂಠಯ್ಯನವರಿಗೂ ನಡೆದ ಸ್ಪರ್ಧೆಯೇ ಕಾರಣವಾಗಿತ್ತು. ಆಗಿನ ಪಂಡಿತರೇನು ಸಾಮಾನ್ಯರಾಗಿರಲಿಲ್ಲ. ಕನ್ನಡ ಪಂಡಿತರಾಗಿದ್ದವರೆಲ್ಲ ಸಾಮಾನ್ಯವಾಗಿ ಸಂಸ್ಕೃತದಲ್ಲಿ ಒಂದೆರಡು ಶಾಸ್ತ್ರಗಳಲ್ಲಿ ವಿದ್ವಾಂಸರಾದವರೇ ಇರುತ್ತಿದ್ದರು. ಇವರಿಗೂ ಯೂನಿವರ್ಸಿಟಿ ಕನ್ನಡ-ಸಂಸ್ಕೃತ ಸ್ನಾತಕೋತ್ತರ ಪದವೀಧರರಿಗೂ ಅಲಂಕಾರ, ಛಂದಸ್ಸು, ಕಾವ್ಯಮೀಮಾಂಸೆ, ವ್ಯಾಕರಣಾದಿ ಶಾಸ್ತ್ರೀಯ ವಿಚಾರಗಳಲ್ಲಿ ವಾದ ವಿವಾದಗಳು ನಡೆಯುತ್ತಿದ್ದುವಂತೆ. ಇಂಥ ಓರ್ವ ಕನ್ನಡ-ಸಂಸ್ಕೃತದಲ್ಲಿ ಘನ ವಿದ್ವಾಂಸ ಬಿ.ಎಂ.ಶ್ರೀ. ಅವರೊಡನೆ ಶಾಸ್ತ್ರ ವಿಚಾರದಲ್ಲಿ ಸಡ್ಡು ಹೊಡೆದು ವಾದವಿವಾದಕ್ಕೆ ನಿಂತುಬಿಟ್ಟರಂತೆ. ಮುಂದೆ ಈ ಪಂಡಿತ ವರ್ಗವನ್ನೇ ವಿಶ್ವವಿದ್ಯಾಲಯಗಳಿಗೆ ಪ್ರಮೋಷನ್ (ಭಡತಿ) ಕೊಟ್ಟು ಕಳಿಸುವ ಸರಕಾರದ ಏರ್ಪಾಡನ್ನೇ ನಿಲ್ಲಿಸಿಬಿಟ್ಟರಂತೆ. ನಾವು ಸರಕಾರದಿಂದ ಆರಿಸಲ್ಪಟ್ಟು ಹೋದ ವರ್ಷ ಸರಕಾರ ಎಂಟು ಜನರನ್ನು ಆರಿಸಿ ಕಳಿಸಿಬಿಟ್ಟಿದ್ದೊಂದು ಆ ತರಗತಿಗಳ ವಿಚಾರದಲ್ಲಾದ ದೊಡ್ಡಕ್ರಾಂತಿಯೆನ್ನಬಹುದು. ಎಲ್ಲ ಎಂಟು ಜನರೂ ಆಗಿನ ಪ್ರೈಮರಿ ಮಿಡಲ್ ಸ್ಕೂಲುಗಳಲ್ಲಿ ಕೆಲಸ ಮಾಡಿದವರೇ ಆಗಿದ್ದರು. ಅದರಲ್ಲಿ ಇಬ್ಬರು ಸ್ತ್ರೀಯರು, ಆರು ಜನ ಗಂಡಸರು ಅಷ್ಟೆ. ನಮಗೆಲ್ಲ ಉಪಾಧ್ಯಾಯರಾದವರು ನಿಜವಾಗಿ ಘನ ವಿದ್ವಾಂಸರೇ. ಆದರೆ ಅವರು ಹೇಳುವ ವಾದ ಮಾತ್ರ ಹಳೆಗಾಲದ ರೀತಿ ನೀತಿಯನ್ನು ಅನುಸರಿಸಿದ್ದು. ಬೋಧನಾಕ್ರಮ-ಶಿಕ್ಷಣತತ್ತ್ವ-ಸಂವಿಧಾನಗಳು ಅವರ ಪಾಠಕ್ಕೆ ಅನ್ವಯವಾಗುತ್ತಿರಲಿಲ್ಲ. ಒಬ್ಬಿಬ್ಬರನ್ನು ಬಿಟ್ಟರೆ ಉಳಿದವರು ಕುರ್ಚಿ ಬಿಟ್ಟು ಕಪ್ಪುಹಲಗೆಯತ್ತ ಸುಳಿದವರೇ ಅಲ್ಲ. ಇನ್‌ಸ್ಪೆಕ್ಷನ್ ಕಾಲಕ್ಕೂ ಮೇಲಧಿಕಾರಿಗಳು ಅವರಿಂದ ನೋಟ್ಸ್ ಆಫ್ ಲೆಸೆನ್ಸ್ ವಗೈರೆ ಎಂದೂ ಕೇಳಿದವರೂ ಅಲ್ಲ. ಇವರು ಬರೆಯುವವರೂ ಅಲ್ಲ. ಅಷ್ಟು ಪ್ರಭಾವಶಾಲಿಗಳು ಈ ಪಂಡಿತರುಗಳು. ಇವರಿಗೆಲ್ಲ ಅರಮನೆಯ ಸಂಬಂಧ ಒಂದಿಲ್ಲೊಂದು ರೀತಿಯಿಂದ ಇರುತ್ತಿತ್ತು. ಮಹಾರಾಜರ ಕೃಪೆಗೆ ಬಿದ್ದವರೂ ಅನೇಕರಿದ್ದರು. ಹೀಗಾಗಿ ಇವರ ತಂಟೆಗೆ ಯಾರೂ ಹೋಗುತ್ತಿರಲಿಲ್ಲ. ಪ್ರಿನ್ಸಿಪಾಲರೂ ಅಷ್ಟೆ. ಇವರ ಮೇಲೆ ನಿಗಾ ಇಡಬೇಕಾದ ಪರಿಸ್ಥಿತಿಯೇ ಇರಲಿಲ್ಲ. ಮೇಲಾಗಿ ಇವರಾರೂ ಶಾಲಾ ಕರ್ತವ್ಯದ ಬಗೆಗೆ ಅಶ್ರದ್ಧೆ ತೋರಿಸುತ್ತಲೂ ಇರಲಿಲ್ಲ.

ಇಂಥ ಸನ್ನಿವೇಶದಲ್ಲಿ 1947ನೆಯ ಇಸ್ವಿಯ ನಮ್ಮ ಗುಂಪಿಗೆ ಓರ್ವ ಹರಿಜನ ವಿದ್ಯಾರ್ಥಿ ಒಂದೆರಡ ತಿಂಗಳು ತಡೆದು ಕಾಲೇಜಿಗೆ ಸೆಲೆಕ್ಷನ್ ಪಡೆದು ಬಂದು ಸೇರಿಬಿಟ್ಟ. ಆಗ ಮೈಸೂರು ಸಂಸ್ಥಾನದಲ್ಲಿದ್ದ ಓರ್ವ ಹರಿಜನ ಪ್ರಭಾವೀ ವ್ಯಕ್ತಿ ತಮ್ಮ ಸಮಾಜದ ವಿದ್ಯಾರ್ಥಿಗಳಿಗೂ ಪಂಡಿತ ಪರೀಕ್ಷೆಯಂಥ ಪ್ರೌಢವಿದ್ಯಾಪ್ರದಾನ ತರಗತಿಯಲ್ಲಿ ಪ್ರಾತಿನಿಧ್ಯ ಬೇಕೆಂದು ಆಗಿನ ಮಹಾರಾಜಾ ಸರ್ಕಾರದಲ್ಲಿ ಬಡಿದಾಡಿ ಆ ಸ್ಥಾನ ಕೊಡಿಸಿದ್ದರು. ಆದ್ದರಿಂದಲೇ ತಿಂಗಳೊಪ್ಪತ್ತು ತಡವಾಗಿ ಅವನು ತರಗತಿಗೆ ಬಂದ. ವಿನಯಶಾಲಿ, ಒಳ್ಳೆಯ ಗೃಹಸ್ಥನೇ ಆತ. ಅವನು ಬಂದ ಹೊಸದರಲ್ಲಿಯೇ ನನ್ನೊಡನೆ ಬಹಳ ಹೊಂದಿಕೊಂಡು ವಿಶ್ವಾಸಿಯಾಗಿಬಿಟ್ಟ. ವಿಶ್ವಾಸಕ್ಕೆ ಅರ್ಹನೂ ಆಗಿದ್ದ. ನನ್ನ ಪಕ್ಕದಲ್ಲಿಯೇ ಕುಳಿತುಕೊಂಡ. ಅವನು ವಿ.ಟಿ.ಸಿ. ಟ್ರೈನಿಂಗನ್ನು ಮೂರುವರ್ಷ ಓದಿ ತೇರ್ಗಡೆ ಹೊಂದಿ ಪ್ರಾಯಮರಿ ಸ್ಕೂಲಿನಲ್ಲಿ ಕೆಲಸ ಮಾಡಿದ ಅನುಭವವಿತ್ತು. ಸಂಸ್ಕೃತದ ಗಂಧವೇ ಇದ್ದಿಲ್ಲ. ನನಗಾದರೋ ಶಿವಕೀರ್ತನೆ ಇತ್ಯಾದಿ ಕಾರ್ಯಕ್ರಮಗಳಿಗಾದರೂ ಸಂಸ್ಕೃತ ಇವರಿಗೆ ಬರುತ್ತದಲ್ಲಾ! ಎಂದು

ಜನಗಳಿಗೆ ತೋರಿಸಿಕೊಳ್ಳುವುದಕ್ಕಾದರೂ ನಾಲ್ಕಾರು ಸುಭಾಷಿತಗಳನ್ನೋ ಸೀತೆಯ ನಾಲ್ಕು ಅನುಷ್ಟುಪ್ ಶ್ಲೋಕಗಳನ್ನೋ ಬೇರೆಯವರಿಂದ ಕೇಳಿ ತಿಳಿದು, ಬರೆದುಕೊಂಡು ಬಾಯಿಪಾಠ ಮಾಡಿ ಆ ಎಂಟು ಹತ್ತು ಶ್ಲೋಕಗಳ ಬಲದ ಮೇಲೆ ಜನಗಳನ್ನು ಹೆದರಿಸಿಕೊಂಡು ನನ್ನ ಸಂಸ್ಕೃತದ ದಿಮಾಕು ತೋರಿಸಿಕೊಳ್ಳುತ್ತಿದ್ದೆ. ಈ ಪ್ರಾಣಿಗೆ ಅದೂ ಇಲ್ಲ, ಏನೂ ಇಲ್ಲ. ಇಲ್ಲಿನ ಸಂಸ್ಕೃತ-ವ್ಯಾಕರಣ-ಅಲಂಕಾರ-ಛಂದಸ್ಸು-ಗದ್ಯ-ಪದ್ಯ-ನಾಟಕ-ಸಾಹಿತ್ಯ-ಚರಿತ್ರೆ-ಇತ್ಯಾದಿ ನೂರುನೂರು ಅಂಕಗಳ ಆರು ವಿಷಯಗಳ ಗ್ರಂಥಗಳನ್ನು ನೋಡಿಯೇ ಎದೆಯೊಡೆದುಕೊಂಡುಬಿಟ್ಟ. ಮೇಲಾಗಿ ಮಧ್ಯಂತರದಲ್ಲಿ ಬಂದವನಾದ್ದರಿಂದ ಕಣ್ಣು ಕಟ್ಟಿ ಕಾಡಿನಲ್ಲಿ ಬಿಟ್ಟಂತಾಗಿತ್ತು. ಅವನಿಗೆ ಯಾಕಾದರೂ ಈ ಅನಿಷ್ಟ ವಿದ್ಯೆ ಕಲಿಯಲು ಬಂದೆನೋ ಎಂದು ಅನಿಸಿರಲೂ ಬೇಕು. ಕುಮಾರಸಂಭವದ ಮೊದಲ ಪದ್ಯವಾದ "ಅಸ್ತ್ಯುತ್ತರಸ್ಯಾಂ ದಿಸಿರೇವರಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ...." ಇತ್ಯಾದಿ ಆದಿಶ್ಲೋಕವನ್ನೇ ಅವನಿಗೆ ಕಲಿಸಲು ನಾನು ಪಟ್ಟ ಪಾಡು ಹೇಳತೀರದು. ನಮ್ಮ ಕೊಠಡಿಗೆ ಬಂದು "ಏನಾದರೂ ಮಾಡಿ ನನಗೆ ಸಹಾಯ ಮಾಡಿ" ಎಂದು ಗೋಗರೆಯತೊಡಗಿದ. ನನಗೆ ಆ ಬಡಪ್ರಾಣಿಯ ಅಸಹಾಯಕ ಸ್ಥಿತಿಯ ಬಗೆಗೆ ಸಂಕಟವಾಗುತ್ತಿತ್ತು. ಕಾದಂಬರಿ, ಪ್ರತಿಮಾ ನಾಟಕಗಳಂತೂ ಉಕ್ಕಿನ ಕಡಲೆಗಳೇ ಆಗಿದ್ದವು. ಇನ್ನು ಸಂಸ್ಕೃತ ವ್ಯಾಕರಣವಾದ "ಲಘುಸಿದ್ಧಾಂತ ಕೌಮುದಿ"ಯ ವಿಚಾರವನ್ನು ಕೇಳಲೇ ಬೇಕಾಗಿಲ್ಲ. ಪಂಡಿತರುಗಳು ಕೆಲವು ದಿನ ತಮ್ಮ ಪಾಡಿಗೆ ತಾವು ಪಾಠ ಹೇಳಿಕೊಂಡು ಹೋಗಿಬಿಡುತ್ತಿದ್ದರು. ಕಣ್ ಕಣ್ ಬಿಡುತ್ತ ಕುಳಿರುತ್ತಿದ್ದ ಈತ ಮಾತ್ರ ಯಾವುದಕ್ಕೂ ಸ್ಪಂದಿಸಲು ಶಕ್ತಿ ಸಾಲದೆ ಯೋಗಿಯಂತೆ ನಿರ್ಲಿಪ್ತನಾಗಿಬಿಡುತ್ತಿದ್ದ. ಕಾಲೇಜು ಬಿಟ್ಟೊಡನೆ ನನ್ನನ್ನು ಅನುಸರಿಸಿ ಬಂದು ಸಂಸ್ಕೃತ ಕಲಿಯಲು ಏನು ಮಾಡಬೇಕೆಂದು ಪ್ರಶ್ನಿಸತೊಡಗಿದ. ಸಂಸ್ಕೃತ ಲಿಪಿಗಳು ಗೊತ್ತಿದ್ದರೂ ಬರವಣಿಗೆಯನ್ನು ಓದಲು ಬರುತ್ತಿರಲಿಲ್ಲ. ಆಗ ನಾನು ಅವನಿಗೆ ನಾನು ಅನುಸರಿಸುತ್ತಿದ್ದ ತಂತ್ರ ಅಂದರೆ ಕನ್ನಡಲಿಪಿಯಲ್ಲಿ ಕುಮಾರಸಂಭವ-ಕಾದಂಬರಿ-ಪ್ರತಿಮಾ ನಾಟಕ ಪದ್ಯಗಳನ್ನೆಲ್ಲ ಅವನಿಗೆ ಕೊಟ್ಟು ಬಾಯಿಪಾಠ ಮಾಡಲಿಕ್ಕೆ ಹಚ್ಚಿದೆ. ಆದರೆ ಅನ್ನುವುದಕ್ಕೇ ಬರುತ್ತಿರಲಿಲ್ಲ. ನಾನು ಹಲವಾರು ಸಲ ಅವನಿಗೆ ಪ್ರೈಮರಿ ಶಾಲೆಯಲ್ಲಿ ಮಕ್ಕಳಿಗೆ ಹೇಳಿಕೊಡುವ ಪಾಠದಂತೆ ಹೇಳುವುದಕ್ಕೆ ಮೊದಲು ಮಾಡತೊಡಗಿದೆ. ಇದರಿಂದ ನನಗೇ ಸ್ವಲ್ಪ ಪ್ರಯೋಜನವಾಯಿತಾಗಲಿ ಅವನಿಗೆ ಆಗಲೇ ಇಲ್ಲ. ಕುಮಾರಸಂಭವದ ಮೊದಲ ಐದು ಪದ್ಯಗಳನ್ನು ಬಾಯಿಪಾಠ ಮಾಡಿಸುವ ಶಕ್ತಿಯಾಗಲಿ, ಕಾದಂಬರಿಯ ಮೊದಲ ಪ್ಯಾರಾಗ್ರಾಫ್ ಬಾಯಿಪಾಠ ಮಾಡಿಸುವ ಸಾಮರ್ಥ್ಯವಾಗಲಿ ನನಗೇ ಇಲ್ಲದಾಗಿ ಹೋಯಿತು. ಅವನು ಪಡುವ ಕಷ್ಟವನ್ನೆಲ್ಲ ನೋಡಿ ನನ್ನ ಮನಸ್ಸು ಕರಗಿ ಹೋಯಿತು. ಹತ್ತು ಹನ್ನೆರಡು ವರ್ಷ ಪ್ರೈಮರಿ ಶಾಲಾ ಶಿಕ್ಷಕನಾಗಿ ಅಷ್ಟು ಇಷ್ಟು ಸಾಮಾಜಿಕ ಮಾನ-ಮನ್ನಣೆ ಗಳಿಸಿದ್ದ. ಎರಡು ಮೂರು ಮಕ್ಕಳ ತಂದೆಯಾಗಿದ್ದ ಅವನಿಗೆ ಈ ತರಗತಿಗಳಲ್ಲಿ ಅಸಹನೀಯ ಅವಮರ್ಯಾದೆಯುಂಟಾಗುವ ಸನ್ನಿವೇಶ ಪ್ರಾಪ್ತವಾಗಿ ಹೋಯಿತು.

ಸುಮಾರು ಒಂದು ತಿಂಗಳು ಕಳೆದಿರಬಹುದು. ಒಂದು ದಿನ ಶ್ರೀನಿವಾಸಾಚಾರ್ಯರು ಬಾಣನ ಕಾದಂಬರಿಯಲ್ಲಿ ಪಾಠ ಮಾಡಿದ ಒಂದು ಭಾಗವನ್ನು ಓದು ಎಂದು ಹೇಳಿ ಎದ್ದು ನಿಲ್ಲಿಸಿಬಿಟ್ಟರು. ಎಷ್ಟೇ ಪ್ರಯತ್ನಪಟ್ಟರೂ ಓದಲಾಗಲಿಲ್ಲ. ತಡಬಡಿಸಿ ಒಂದೊಂದೇ ಅಕ್ಷರ

ಜೋಡಿಸ ಹೋದರೂ ಪದೋಚ್ಚಾರ ಅಬದ್ಧವಾಗಿ ಹೋಗುತ್ತಿತ್ತು. ಕುಮಾರಸಂಭವವನ್ನು ಕೈಗೆ ಕೊಟ್ಟು ಮೊದಲ ಪದ್ಯವನ್ನು ಓದಿ ಹೇಳು ಅಂದರು. 'ಅಸ್ತ್ಯುತ್ತರಸ್ಯಾಂ....' ಈ ಶಬ್ದವನ್ನೇ ಉಚ್ಚರಿಸಲಿಕ್ಕಾಗದೆ ತಡಬಡಿಸಿ ನಿಂತುಬಿಟ್ಟ. ಮುಖ ಅಪಮಾನದಿಂದ' ಕಂದಿಕುಂದಿ ಹೋಯಿತು. ಶ್ರೀನಿವಾಸಾಚಾರ್ಯರಿಗೂ ಸಿಟ್ಟು ನೆತ್ತಿಗೇರಿ ಹೋಯಿತು. "ಏಯ್ ಪಂಡಿತ ಪರೀಕ್ಷೆ ಎಂದರೆ ಪಡಿಕಾಯಿ ಅಂತಾ ತಿಳಿದಿದ್ದಿಯೇನೋ" ಅಂದೇ ಬಿಟ್ಟರು. ಆತನ ಕಣ್ಣಂಚಿನಲ್ಲಿ ನೀರು ಬಂದುವು. ಅವರು ತರಗತಿ ಬಿಟ್ಟು ಹೊರಟು ಹೋದೊಡನೆ ಇವನೂ ತರಗತಿ ಬಿಟ್ಟು ಹೊರಗೆ ಹೋಗಿ ನಾನು ಬರುವ ದಾರಿಯಲ್ಲಿನ ಒಂದು ಹೋಟಲಿನ ಮುಂಭಾಗದಲ್ಲಿ ನಿಂತಿದ್ದ. ಐದು ಘಂಟೆಗೆ ತರಗತಿ ಮುಗಿದ ಮೇಲೆ ಇವನನ್ನೇ ಮನಸ್ಸಿನಲ್ಲಿ ಭಾವಿಸುತ್ತ ಹೊರಟೆ. ನನ್ನನ್ನು ಕಂಡು ಕೂಗಿ ಬೆನ್ನುಹತ್ತಿದ. ಅರಮನೆ ಹತ್ತಿರದ ಉದ್ಯಾನಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಕುಳಿತುಕೊಂಡ. ನಾನೂ ಕುಳಿತೆ. ಅಳುವುದಕ್ಕೆ ಪ್ರಾರಂಭಿಸಿಬಿಟ್ಟ. ಆತನ ಮನಸ್ಥಿತಿಯನ್ನು ಅರ್ಥಮಾಡಿಕೊಂಡ ನಾನು ಸಮಾಧಾನ ಹೇಳಿದೆ. ಅನೂಹ್ಯ ಅಪಮಾನ, ಮುಂದೆ ಈ ತರಗತಿಯಲ್ಲಿ ವಿದ್ಯಾಭ್ಯಾಸ ಮಾಡಲು ಶಕ್ಯವಾಗುವುದಿಲ್ಲವೆಂಬ ಅಧೈರ್ಯ ಇವುಗಳಿಂದ ಏನೂ ತೋಚದವನಂತೆ ತಲೆಯ ಮೇಲೆ ಕೈಹೊತ್ತು ಕುಳಿತು "ಸರ್, ಈ ದಿನ ತರಗತಿಯಲ್ಲಿ ನನಗೆ ಏನು ಸಿಟ್ಟು ಬಂದಿತ್ತು ಗೊತ್ತೆ, ಆ ಸೂ...ಮಗನನ್ನು ಹೊಟ್ಟೆ ಬಗಿದು ಬಿಡಲೇ ಎನಿಸಿತ್ತು" ಎಂದ. ಆಗ ನಾನು "ಹಾಗೆಲ್ಲ ಭಾವಿಸಬೇಡ. ನೀನು ಮುಂದೆ ಹೆದರಬೇಕಾಗಿಲ್ಲ. ನಾನೆಲ್ಲ ನಿನಗೆ ದಾರಿ ತೋರಿಸುತ್ತೇನೆ. ಅರ್ಥವಾಗದಿದ್ದರೂ ಚಿಂತೆಯಿಲ್ಲ. ಕೆಲವು ಸಂಸ್ಕೃತ ಭಾಗವನ್ನು ಶುದ್ಧವಾಗಿ ಉಚ್ಚರಿಸಿ ಬಾಯಿಪಾಠವಾಗುವಂತೆ ಪ್ರಯತ್ನಿಸುತ್ತೇನೆ. ಆಮೇಲೆ ಎಲ್ಲ ಸರಿಹೋಗುತ್ತೆ" ಎಂದೆ. ಅವನು ಬಹುಶಃ ಓದುವ ಆಸೆ ಬತ್ತಿಸಿಕೊಂಡೇ ಬಿಟ್ಟಿದ್ದನೆಂದು ತೋರುತ್ತದೆ. "ನಡೀರಿ ಸರ್ ಕಾಫಿ ಕುಡಿಯೋಣ" ಎಂದು ಹೇಳಿ ಕರೆದುಕೊಂಡು ಹೋದ. ಇಬ್ಬರೂ ಸೇರಿ ತಿಂಡಿ ಕಾಫಿಯನ್ನು ಮಾಡಿದೆವು. ನಾನು ಅವನಿಂದ ಬಿಲ್ ಕೊಡಗೊಡಲಿಲ್ಲ. ಒತ್ತಾಯ ಮಾಡಿ ನಾನೇ ಕೊಟ್ಟೆ.

ಮರುದಿನ ತರಗತಿಗೆ ಬರಲಿಲ್ಲ. ಶ್ರೀನಿವಾಸಾಚಾರ್ಯರು ತರಗತಿಗೆ ಬಂದು "ಎಲ್ಲಯ್ಯಾ ಅವನು?" ಎಂದರು. ಅವರ ಮುಖದಲ್ಲಿ ನಿನ್ನೆಯ ದಿನ ಅವನ ವಿಷಯದಲ್ಲಿ ವರ್ತಿಸಿದ ರೀತಿ, ಮಾತನಾಡಿದ ಮಾತು ನೋವುಂಟು ಮಾಡಿದಂತೆ ಕಾಣಿಸಿತು. ಅಷ್ಟೆ. ಮುಂದೆ ಅವರು ಏನೂ ಮಾತನಾಡದೆ ಪಾಠಮಾಡಿ ಹೊರಟುಹೋದರು. ಪುನಃ ಅವನು ತರಗತಿಗೆ ಬರಲೇ ಇಲ್ಲ. ಹತ್ತು ಹದಿನೈದು ದಿನಗಳ ಮೇಲೆ ಅವನು ಕನ್ನಡ ಪಂಡಿತ ಪರೀಕ್ಷೆಯ ಆಸೆ ಬಿಟ್ಟಿದ್ದಷ್ಟೇ ಅಲ್ಲ ಎಜ್ಯುಕೇಷನ್ ಡಿಪಾರ್ಟ್‌ಮೆಂಟಿಗೇ ಶರಣು ಹೊಡೆದು ಪೋಲೀಸ್ ಡಿಪಾರ್ಟ್‌ಮೆಂಟಿಗೆ ಸೇರಿಕೊಂಡನೆಂದು ಯಾರೋ ತಿಳಿಸಿದರು. ಪುನಃ ಎಂದೂ ಅವನು ನನಗೆ ಸಿಗಲೇ ಇಲ್ಲ.

## ನನ್ನ ಭಾಷೆಗೆ ತರಗತಿಯವರೆಲ್ಲ ಹೆದರುತ್ತಿದ್ದರು

1943ರಲ್ಲಿ ನಾನು ಶಿವಮೊಗ್ಗೆಗೆ ಬಂದು ನಾರ್ಮಲ್ ಸ್ಕೂಲ್ ಸೇರಿದಾಗಲೇ ಅಲ್ಲಿನ ವಿದ್ಯಾರ್ಥಿಗಳಿಗೆಲ್ಲ ನನ್ನ ಭಾಷೆ ಒರಟಾಗಿ ಕಾಣುತ್ತಿತ್ತು. ಜನ್ಮಾರಭ್ಯ ಇಪ್ಪತ್ತಮೂರು ವರ್ಷಗಳಿಂದ ಕಲಿತ ಭಾಷೆಯ ಧ್ವನಿ-ರೀತಿ, ಕೆಲವು ಅಪೂರ್ವ ಜಿರುನುಡಿಗಳು, ಕೆಲವು

ಕಾರದಂತಹ ಬೈಗುಳಗಳು ನನ್ನ ಬಾಯಿಂದ ಸಾಮಾನ್ಯವಾಗಿ ಆಗಾಗ ಹೊರಬರುತ್ತಿದ್ದವು. ಹಳ್ಳಿಯ ವಾತಾವರಣದಲ್ಲಿ, ಅದರಲ್ಲೂ ವ್ಯವಸಾಯಗಾರರಾದ ಸಾಮಾನ್ಯ ಜನಗಳ ಮಧ್ಯದಲ್ಲಿ ಬೆಳೆದ ನನಗೆ ನಯ-ನಾಜೂಕಿನಿಂದ ಮಾತಾಡಿಸಿ ಗೊತ್ತೇ ಇರಲಿಲ್ಲ. ಕೀರ್ತನೆ-ಗೀರ್ತನೆ ಕಾಲದಲ್ಲಿ ಸಾಹಿತ್ಯಶೈಲಿ, ಗಾಂಭೀರ್ಯಯುಕ್ತ ಮಾತು-ಕತೆಯನ್ನು ಪಳಗಿಸಿಕೊಂಡಿದ್ದೆನಾಗಲೀ ವ್ಯವಹಾರದಲ್ಲಿ ವ್ಯಾವಹಾರಿಕ ಒರಟೊರಟು ಭಾಷೆಯನ್ನೇ ಉಪಯೋಗಿಸುತ್ತಿದ್ದೆ. ಎಷ್ಟೋ ಸಲ ನನ್ನ ಮಾತುಗಳನ್ನು ಕೇಳುವ ಉದ್ದೇಶದಿಂದ ರೂಢಿಸಿಕೊಂಡು ಮಾತನಾಡಿಸಿ ಆ ಉಪಾಧ್ಯಾಯರೆಲ್ಲ ನಗುವುದಕ್ಕೆ ಒಂದು ಸಂದರ್ಭ ಕಲ್ಪಿಸಿಕೊಳ್ಳುತ್ತಿದ್ದರು. ನಾನು ನನ್ನದೇ ಆದ ಶೈಲಿಯಲ್ಲಿ ಮಾತನಾಡಿ ಅವರನ್ನು ನಗಿಸುತ್ತಿದ್ದೆ. ಗಣಿತ ಮತ್ತು ಭೂಮಿತಿ (ಜಾಮೆಟ್ರಿ)ಯ ನನ್ನ ಮಾತುಗಳು ಅವರಿಗೆ ಚಕ್ಕುಲಿಗುಡಿಸಿಬಿಡುತ್ತಿದ್ದವು. ಗಣಿತದಲ್ಲಿ ಅಪೂರ್ಣಾಂಕದ ಲೆಕ್ಕವನ್ನು ಬಾಯಿಂದ ಹೇಳುವಾಗ ತಡಬಡವಿಲ್ಲದೆ ಹೇಳುತ್ತಿದ್ದ ನನ್ನ ಬಾಯನ್ನೇ ಅವರು ನೋಡುತ್ತಿದ್ದರು. ಅಧಿಕ-ಗುಂಡಲೆ-ಉಣೆ-ಭಾಗಿಲೆ ಎಂಬ ಮರಾಠಿಯಿಂದ ಕನ್ನಡಕ್ಕೆ ಬಂದ ಗಣಿತಸಂಜ್ಞೆಗಳು ಅವರಿಗೆ ಪೂರ್ಣ ಹೊಸವು. ಅವರು ಪ್ಲೆಸ್-ಇಂಟು-ಮೈನಸ್-ಡಿವಡೆಡ್ ಬೈ ಎಂದು ಇಂಗ್ಲೀಷಿನ ಬೆನ್ನುಬಿದ್ದು ವ್ಯವಹರಿಸುತ್ತಿದ್ದರಿಂದ ಅವರ ಮಾತುಗಳು ನನಗೆ ಮೊದಮೊದಲು ತೊಡಕನ್ನೇ ಉಂಟುಮಾಡುತ್ತಿದ್ದವು. 1¾ ಎಂಬ ಈ ಅಪೂರ್ಣಾಂಕವನ್ನು ನಾನು 'ಒಂದು ಪೂರ್ಣಾಂಕ್ ಮೂರು ನಾಲ್ಕಾಂಶ್' ಎಂದರೆ ಅವರು "ಒಂದು ನಾಲ್ಕನೇ ಮೂರು' ಎಂದು ಓದುತ್ತಿದ್ದರು. ಉದ್ದುದ್ದದ ಅಪೂರ್ಣಾಂಕದ ಲೆಕ್ಕಗಳನ್ನು ಓದುವಾಗ ಅವರು ಪೂರ್ಣ ಇಂಗ್ಲೀಷಿನಲ್ಲಿಯೇ ಹೆಚ್ಚಾಗಿ ಹೇಳುತ್ತಿದ್ದುದಂತೂ ನನಗೆ ಏನೇನೂ ಅರ್ಥವಾಗುತ್ತಿರಲಿಲ್ಲ. ಕನ್ನಡ ಮರಾಠಿ ಭಾಷಾ ಶಬ್ದಗಳಿಂದ ಹೇಳುತ್ತಿದ್ದ ನನ್ನ ರೀತಿ ಅವರಿಗೆ ಅರ್ಥವಾಗುತ್ತಿರಲಿಲ್ಲ. ನನ್ನ ಬಾಯನ್ನೇ ನೋಡುತ್ತಿದ್ದರು. ನನ್ನ ಈ ಓದುವಿಕೆ ಅವರಿಗೆ ಅತ್ಯಂತ ಅಚ್ಚರಿಗೊಳಿಸುತ್ತಿತ್ತು; ಬಿದ್ದುಬಿದ್ದು ನಗುತ್ತಿದ್ದರು. 'ಭೂಮಿತಿ' ಅನ್ನುವ ಶಬ್ದ ಅವರಿಗೆ ಅರ್ಥವಾಗದಿದ್ದುದು ಆಶ್ಚರ್ಯವೇ ಸರಿ. ಅವರು 'ಜಾಮೆಟ್ರಿ' ಅನ್ನುತ್ತಿದ್ದರೆ ವಿನಾ ಭೂಮಿತಿ ಎಂದು ಎಂದೂ ಕರೆಯುತ್ತಿರಲಿಲ್ಲ. Lಅಕಡ = Lಡಕಬ ಎಂಬುದನ್ನು ನಾನು 'ಅಕಡ ಕೋನ್ ಬರೋಬರಿ ಡಕಬ ಕೋನ್' ಎಂದಾಗ ಪಕಪಕ ಬಾಯಿಬಿಡುತ್ತಿದ್ದರು. ಅವರು ಇದನ್ನು 'ಕೋನ್ ಏಸಿಡಿ ಇಜ್ ಇಕೋಲ್ಟ್ ಟು ಕೋನ್ ಡಿಸಿಬಿ' ಎನ್ನುತ್ತಿದ್ದರು. ಈ ವಾಕ್ಯವೂ ನನ್ನ ಕಿವಿಯನ್ನು ಜಕ್ಕುಲಿಸಿಬಿಡುತ್ತಿತ್ತು. ಈ ಎಲ್ಲ ಭಾಷೆಯ ತೊಡಕುಗಳನ್ನು ದಾಟಿ ಒಂದೆರಡು ತಿಂಗಳಲ್ಲಿ ನಾನು ಅವರ ಜಾಡನ್ನು ಅನುಸರಿಸಿದರೂ ವ್ಯಾವಹಾರಿಕ ಭಾಷೆ ತಿದ್ದಿಕೊಳ್ಳುವುದು ಕಷ್ಟವಾಗಿ ಎರಡು ವರ್ಷಗಳ ಅವಧಿಯಲ್ಲಿ ಸಾಮಾನ್ಯವಾಗಿ ಮೈಸೂರು ಸೀಮೆಯ ಭಾಷೆಗೆ ನನ್ನ ಭಾಷೆಯನ್ನು ಒಗ್ಗಿಸಿಕೊಂಡು ಹೌದು ಕಣೋ, ಅಲ್ಲ ಕಣಪ್ಪ, ಹೌದು ಸ್ವಾಮಿ, ಅಲ್ಲ ಸ್ವಾಮಿ ಇತ್ಯಾದಿ ಕೆಲವು ಮಾತುಗಳನ್ನು ಅಭ್ಯಾಸ ಮಾಡಿ ಅವರು ಧಾರವಾಡದ ಕಡೆಯವರ ಭಾಷೆಯ ವಿಷಯದಲ್ಲಿ ವ್ಯಂಗ್ಯದ ಮೂಲಕ ಮಾಡುವ ಚೇಷ್ಟೆಯನ್ನು ಕಡಿಮೆ ಮಾಡಿಕೊಂಡೆ. ಮುಂದೆ ತುಮಕೂರಿಗೆ ಹೋದಾಗ ಅಲ್ಲಿಯ ಭಾಷೆಗೂ ಹೊಂದಿಕೊಂಡೆ. ತುಮಕೂರಿನ ಕಡೆ ನನ್ನ ಭಾಷೆಯನ್ನು ಗಂಡುಭಾಷೆ, ಹಾಗೆ ಹೀಗೆಂದು ತಾರೀಫ್ ಮಾಡುವವರೂ ಇದ್ದರು. ಅಲ್ಲಿ ಹೊಸದಾಗಿ ಪ್ರೈಮರಿ ಸ್ಕೂಲ್ ಉಪಾಧ್ಯಾಯ ವೃತ್ತಿಗೆ ತೊಡಗಿದಾಗ ನನ್ನ ಚಟುವಟಿಕೆಗಳಿಗೆ ಮತ್ತು ಭಾಷಣಗಳಿಗೆ ಜನವೆಲ್ಲ ಮುಗ್ಧರಾಗಿ ಹೋಗುತ್ತಿದ್ದರು. ಉಪಾಧ್ಯಾಯ ಸಂಘಗಳಲ್ಲಿ

ನಾನು ಮಾಡಿದ ಉಪನ್ಯಾಸಗಳನ್ನು ಕೇಳಿ ಆಗ ನಮಗೆ ಇನ್‌ಸ್ಪೆಕ್ಟರ್ ಆಗಿದ್ದ ಶ್ರೀ ಎಂ.ಆರ್. ರಾಮಯ್ಯನವರು ಪ್ರಭಾವಿತರಾಗಿ ಉಪಾಧ್ಯಾಯರೆಂದರೆ ಹೀಗಿರಬೇಕು. ಇವರ ಭಾಷೆ ಗಂಡುಭಾಷೆ. ಪ್ರಭಾವೀ ಭಾಷೆ...ಇತ್ಯಾದಿ ಶ್ಲಾಘನೆಗಳ ಸುರಿಮಳೆಯನ್ನೇ ಸುರಿಸುತ್ತಿದ್ದರು. ಈ ವಿಷಯವನ್ನು ಈ ಹಿಂದೆ ತಿಳಿಸಿದ್ದೇನೆ. ಆದರೆ ಧಾರವಾಡದ ಕಡೆಯ ಕೆಲವು ಬೈಗುಳಗಳು ಮಾತ್ರ ಪ್ರಸಂಗವಲ್ಲಿ ಬಾಯಿಗೆ ತಾನಾಗಿಯೇ ಬಂದುಬಿಡುತ್ತಿದ್ದವು.

ಮೈಸೂರಿಗೆ ಬಂದಮೇಲೆ ಇಲ್ಲಿಯ ಭಾಷೆ, ಧ್ವನಿ, ಸ್ವಾಮಿ, ಬುದ್ಧಿ ಶಬ್ದಗಳನ್ನು ಧಾರಾಳವಾಗಿ ಉಪಯೋಗಿಸಿ ಮಾತನಾಡುವುದನ್ನು ಅಭ್ಯಸಿಸಿ ಮಾತಿನಲ್ಲಿ ಉಪಯೋಗಿಸುತ್ತಿದ್ದರೂ ಪ್ರಸಂಗದಲ್ಲಿ ಥುತ್ ಎಂದು ಧಾರವಾಡದ ಕೆಲವು ಬೈಗುಳ ಹಾಂಗ - ಹಿಂಗ- ಅಂವಾ - ಇಂವಾ - ಅಂವಗ - ಇಂವಗ, ಯಾಕೋ ತಮ್ಮಾ ಯಾಕ್ಲೇಲೇ ಕೆಟ್ಟಿ ಸೂ....ಮಗನೇ ಇತ್ಯಾದಿ ವ್ಯಾವಹಾರಿಕ ಮಾತುಗಳು 'ಹೋಗಲೇ ಮಂಗ್ಯಾನ ಮಗನ, ಮುಸ್ಯಾನ ಮಗನ....ಮೊದಲಾದ ಶಬ್ದಗಳು ನನ್ನ ಶ್ರೀಮುಖದಿಂದ ಬಹಿರ್ಗತವಾಗುತ್ತಲೇ ಇದ್ದವು. ಒಂದು ದಿನ ನಮ್ಮ ತರಗತಿಗೆ ಉಪಾಧ್ಯಾಯರೊಬ್ಬರು ಬರಲಿಲ್ಲ. ಒಂದು ಪೀರಿಯಡ್ ಹರಟೆಯಲ್ಲಿ ಕಾಲ ಕಳೆಯುತ್ತಿದ್ದೆವು. ಇಬ್ಬರು ಹೆಂಗಸರು ನಮ್ಮ ಹರಟೆಯಲ್ಲಿ ಪಾಲ್ಗೊಂಡಿದ್ದರು. ಅವರಿಬ್ಬರೂ ಬಹಳ ಗಂಭೀರೆಯರು, ಧೀರುಗಳು, ಸುಸಂಸ್ಕೃತರು. ನಾನು ಒಂದು ಉದ್ವೇಗದಲ್ಲಿ "ಯಾಂವಾನ್ಲೇ ಅಂವಾ ಅವನೌನ...." ಇತ್ಯಾದಿಯಿಂದ ಪ್ರಾರಂಭವಾಗುವ ಒಂದು ದೊಡ್ಡ ಬೈಗುಳವನ್ನು ಅನಿಚ್ಛೆಯಿಂದ ಪ್ರಯೋಗಿಸಿಯೇ ಬಿಟ್ಟೆ. ನನ್ನನ್ನೇದರೂ ಅಂದುಕೊಳ್ಳಿ. ಇಂಥ ಬೈಗುಳ ಆಗಾಗ ನನ್ನ ಬಾಯಿಂದ ಬರುತ್ತಿದ್ದವು. ಗಂಡಸರ ಮಾತಿನಲ್ಲಿ ಹೆಂಗಸರಿಗೆ ಆ ಬೈಗುಳ ಸಿಡಿಲು ಬಡಿದಂತೆ ಆಗಿರಬೇಕು. ಗಪ್‌ಚುಪ್ ಬಾಯಿಮುಚ್ಚಿ ಭಯವಿಹ್ವಲರಾಗಿ ಕಡೆಗಣ್ಣಿನಿಂದ ನನ್ನನ್ನು ನೋಡಿ ನಾಚಿಕೊಂಡವರಂತೆ, ಕೋಪಗೊಂಡವರಂತೆ ತಲೆತಗ್ಗಿಸಿಬಿಟ್ಟರು. ಹೊರಳಿಯೂ ನಮ್ಮ ಕಡೆ ಮುಖ ಮಾಡಲಿಲ್ಲ. ನೆತ್ತಿಗಣ್ಣಿನಿಂದ ಒಂದೆರಡು ಸಲ ನನ್ನ ಮುಖ ನೋಡಿದಂತೆ ಮಾಡಿ ಮೌನಮುದ್ರೆ ಧಾರಣ ಮಾಡಿದರು. ಎಂಟು ಹತ್ತು ದಿನಗಳವರೆಗೆ ತರಗತಿಯಲ್ಲಿ ಮೌನಮುದ್ರೆ ಧರಿಸಿ, ತಾವಾಯಿತು ತಮ್ಮ ಪಾಠ ಪ್ರವಚನವಾಯಿತು. ಇಷ್ಟರ ಮಟ್ಟಿಗೇ ಆಗಿಬಿಟ್ಟರು. ನನ್ನ ತಪ್ಪಿನ ಅರಿವಾಗಿ ನಾನೂ ನಾಚಿಹೋದೆ. ಮುಂದೆ ನಾನು ಮಾತನಾಡುವಾಗ ಬಹಳ ಎಚ್ಚರವಹಿಸಿದೆ. ಆದಷ್ಟು ಪರುಷವಾಕ್ಯ ಪ್ರಯೋಗ ಮಾಡುವುದಾಗಲಿ ಆಗಾಗ ಥುತ್ ಎಂದು ನಾಲಗೆಯ ಮೇಲೆ ಅಯಾಚಿತವಾಗಿಯೇ ಬರುವ ಸಾಮಾನ್ಯ ಬೈಗುಳಗಳನ್ನಾಗಲಿ ಕಡಿಮೆ ಮಾಡಿಕೊಂಡೆ. ನನ್ನ ತಿಳುವಳಿಕೆಯಲ್ಲಿ ನಾನು ಪ್ರಯೋಗಿಸುತ್ತಿದ್ದ ಬೈಗುಳದ ಕೆಲವು ಮಾತುಗಳಿಗೆ ಅರ್ಥವೇ ಇರಲಿಲ್ಲ. ಅದೊಂದು ರೀತಿಯ ಗ್ರಾಮ್ಯ ಪ್ರಯೋಗದಲ್ಲಿ ಎಂದಿನಿಂದಲೋ ನನ್ನಲ್ಲಿ ಸೇರಿಕೊಂಡಿರುವ ಕೆಲವು ಮಾತುಗಳು ಅಷ್ಟೇ. ಆದರೆ ಅವುಗಳ ಅರ್ಥವನ್ನು ವಿಶ್ಲೇಷಿಸಲು ಕುಳಿತಾಗ ಅವು ತೀರಾ ಅಪಪ್ರಯೋಗಗಳೇ, ಸಭ್ಯತೆಯ ಮಾತುಗಳೇ ಅಲ್ಲ. ಕೊಳಕು ಅರ್ಥದವು. ಇಷ್ಟರ ಮೇಲಿಂದ ಆ ಸ್ತ್ರೀಯರಿಬ್ಬರೂ ನನ್ನನ್ನು ಅಸಭ್ಯನೆಂದೇನೂ ತಿಳಿಯಲಿಲ್ಲ. ಕಾಲ ಕಳೆದಂತೆ ನನ್ನ ಸ್ವಭಾವವನ್ನು ಅರ್ಥಮಾಡಿಕೊಂಡು ನನ್ನಲ್ಲಿ ಅಪರಿಮಿತ ವಿಶ್ವಾಸವಿಟ್ಟು ಮನೆಯ ಜನವೇ ಆಗಿ ಹೋದರು. ಗೌರಮ್ಮ ಎಂಬ ಮಹಿಳೆ ಸದ್ಗೃಹಸ್ಥ ಮನೆಯವಳು. ಅವರ ಮನೆಯ ಓರ್ವ ಸದಸ್ಯನನ್ನಾಗಿ ಸ್ವೀಕರಿಸಿದರು ಎನ್ನಬೇಕು. 40 ವರ್ಷ ಕಳೆದರೂ

ಇಂದಿಗೂ ಅವರು ನಮ್ಮ ಸಂಸಾರ ಸಂಬಂಧ ಇಟ್ಟುಕೊಂಡಿದ್ದಾರೆ. ನಮ್ಮ ಮಕ್ಕಳು ಮರಿಗಳೂ ಅವರಿಗೆ ಹೊಂದಿಕೊಂಡಿದ್ದಾರೆ. ಹೀಗೆ ನನ್ನ ಭಾಷೆಯನ್ನು ಶಿವಮೊಗ್ಗ ನಾಡು, ತುಮಕೂರು ನಾಡು, ಮೈಸೂರು ನಾಡುಗಳಿಗೆ ಹೊಂದಿಸಿಕೊಳ್ಳಲು ಹೆಣಗಿದೆ. ಕೊನೆಗೆ ಸರಿಪಡಿಸಿಕೊಂಡರೂ ಕೆಲವು ಮೂಲಭೂತ ಧ್ವನಿಗಳು, ಪ್ರಯೋಗಗಳು ಐವತ್ತು ವರ್ಷ ಕಳೆದರೂ ಇಂದೂ ನನ್ನಲ್ಲಿ ಉಳಿದೇ ಉಳಿದಿವೆ. ಈಗಲೂ ಬೆಂಗಳೂರು ಜನಗಳೊಂದಿಗೆ ಮಾತನಾಡಲು ತೊಡಗಿದಾಗ ನಿಮ್ಮೂರು ಯಾವುದು ಎಂದು ಕೇಳಿಯೇ ಬಿಡುತ್ತಾರೆ. ಧಾರವಾಡದ ಕಡೆ ಹೋಗಿ ಮಾತನಾಡಿದಾಗ ಎಲ್ಲಿಯಾದರೂ ಉಪನ್ಯಾಸಕ್ಕೆ ನಿಂತಾಗ ನನ್ನ ಮಾತು ಕೇಳಿ 'ಆಹಾ! ಎಷ್ಟು ಮೃದುವಾದ ಮಾತುಗಳು' ಅನ್ನುತ್ತಾರೆ. ಹೀಗೆ ನನ್ನ ಭಾಷೆ ಅಪ್ಪಟ ಧಾರವಾಡದ್ದೂ ಅಲ್ಲ, ಮೈಸೂರು ಕಡೆಯದೂ ಅಲ್ಲವೆನ್ನುವಂತಾಗಿ ಹೋಗಿದೆ. ಇಷ್ಟರಮಟ್ಟಿಗಾದರೂ ನಾನು ಭಾಷೈಕ್ಯ ಸಾಧಿಸಿದ್ದೇನಲ್ಲ! ಎನ್ನಿಸಿದೆ. ಈ ಭಾಗದ ಜನಗಳಿಗೆ ಗಂಡುಮೆಟ್ಟಿನ ಭಾಷೆ ಎನಿಸಿದರೆ, ಧಾರವಾಡ ಕಡೆಯವರಿಗೆ ಬಹುಸ್ವಾರಸ್ಯಕರ ಮೃದುಭಾಷೆಯೆನಿಸಿದೆ. ಇದೇನೋ ಇರಲಿ.

### *ಸಿದ್ಧಗಂಗೆಯಲ್ಲಿ ಸಿಲ್ವರ್‌ಜ್ಯೂಬಿಲಿ ಮಹೋತ್ಸವ*

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಕೇವಲ ಹತ್ತು ತಿಂಗಳು ಮಾತ್ರ ವಿದ್ಯಾಭ್ಯಾಸ ಮಾಡಿದ ಹಳೆಯ ವಿದ್ಯಾರ್ಥಿ ಎನಿಸಿದ್ದರೂ ಮಠದ ಸಂಬಂಧದ ವಿಚಾರದಲ್ಲಿ ಅಚ್ಚಳಿಯದ ಭಕ್ತಿಭಾವ ಬೆಳೆದಿತ್ತು. ಶ್ರೀಗಳವರ ಮಾನವೀಯತೆ, ಅಸಹಾಯಕರಿಗೆ ಮಾಡುತ್ತಿದ್ದ ಸಕಾಲಿಕ ಸಹಾಯ, ದೀನದಲಿತರ ವಿಚಾರದಲ್ಲಿದ್ದ ಕಾರುಣ್ಯಭಾವ, ಬಹು ದೂರದಿಂದ ಬಂದು ಮಠದಲ್ಲಿ ವಿದ್ಯಾಭ್ಯಾಸ ಮಾಡಿದವನೆಂದು ನನ್ನಲ್ಲಿ ತೋರುತ್ತಿದ್ದ ವಾತ್ಸಲ್ಯ ಭಾವ, ಅವರ ತಪೋನಿಷ್ಠೆ, ಕರ್ತವ್ಯ ಶ್ರದ್ಧೆ, ಶ್ರಮಜೀವನ, ಭಿಕ್ಷಾಟನ ಮಾಡಿ ಸರ್ವಸಮಾಜಗಳ ಮಕ್ಕಳನ್ನು ಪೋಷಿಸುತ್ತಿದ್ದ ಅಪರಿಮಿತ ಉತ್ಸಾಹ, ಅಂಥ ದುರ್ಧರ ಸಮಯದಲ್ಲೂ ಮಠದ ದಾಸೋಹ ವ್ಯವಸ್ಥೆಯ ವಿಷಯದಲ್ಲಿನ ಅವರ ಅಪಾರ ಪರಿಶ್ರಮ ಒಂದೇ-ಎರಡೇ. ಯಾವ ಮುಖದಿಂದಲೂ ಅವರು ನನಗೆ ಆಕಾಶದೆತ್ತರಕ್ಕೆ ಬೆಳೆದ ಯೋಗಶರೀರಿಗಳಾಗಿ ಕಂಡವರು. ಯಾವಜ್ಜೀವವೂ ನನ್ನ ಶಕ್ತಿ ಸಾಮರ್ಥ್ಯ ಪರಿಮಿತಿಯಲ್ಲಿ ಸೇವೆ ಮಾಡಬೇಕಾದ ಆದರ್ಶವಿದೊಂದೇ ಎಂದು ನಿರ್ಧರಿಸಿ ಶ್ರದ್ಧಾಭಕ್ತಿಪೂರ್ವಕ ಸೇವೆ ಮಾಡುತ್ತಿದ್ದೆ. ಶ್ರೀಮಠದ ಸಂಸ್ಕೃತ ಕಾಲೇಜಿನ ಮತ್ತು ವೇದ ಪಾಠಶಾಲೆಯ ಹಾಗೂ ಉಚಿತ ವಿದ್ಯಾರ್ಥಿನಿಲಯಗಳ ಬೆಳ್ಳಿ ಮಹೋತ್ಸವವನ್ನು ವಿಜೃಂಭಣೆಯಿಂದ ಮಾಡುವ ಕಾರ್ಯಕ್ರಮವಿಟ್ಟುಕೊಂಡರು. ಆ ಕಾರ್ಯದಲ್ಲಿ ನನ್ನ ಸೇವೆಯನ್ನು ಅಪೇಕ್ಷಿಸಿ ಮೈಸೂರಿನಿಂದ ಕರೆಸಿಕೊಂಡರು. ನನಗೂ ರಜೆ ಬಂದಿತ್ತು.

ಆ ಕಾಲದಲ್ಲಿ ನಾನು ಅಲ್ಲಿ ಪ್ರಕಟಿಸಿದ ನೆನಪಿನ ಸಂಚಿಕೆಯೊಂದಕ್ಕೆ, ಅಡವಿ ಸ್ವಾಮಿಗಳ ವಿಚಾರವಾಗಿ ಲೇಖನ ಬರೆದೆ. ಅದು ಶ್ರೀಗಳವರ ಮನಸ್ಸನ್ನು ಬಹಳ ಸೆಳೆಯಿತು. ಅದುವರೆಗೆ ಈ ಭಾಗದಲ್ಲಿ ಅಡವಿಸ್ವಾಮಿಗಳು ಎಲ್ಲಿಯವರು ಎಂಬ ವಿಚಾರವೇ ಗೊತ್ತಿರಲಿಲ್ಲ. ನಿಜವಾಗಿ ಅವರು ಧಾರವಾಡ ಜಿಲ್ಲೆ ಹಾನಗಲ್ಲ ತಾಲೂಕು ಕೂಡಲದವರು. ಅಲ್ಲಿಂದ ಅವರು ಗುಬ್ಬಿಗೆ ಬಂದು ಅಲ್ಲಿ ಒಂದು ಮಠ ಸ್ಥಾಪಿಸಿ ಅನಂತರ ಸಿದ್ಧಗಂಗೆಗೆ 19ನೇ ಶತಮಾನದ ಉತ್ತರಾರ್ಧದಲ್ಲಿ ಬಂದವರೆಂಬುದನ್ನು, ಇಲ್ಲಿ ಬಂದು ಆಗ ಇಲ್ಲಿದ್ದ ಸ್ವಾಮಿಗಳವರ ನಿಸ್ಸಹಾಯಕತೆ, ಮುಗ್ಧತ್ವವನ್ನು ಕಂಡು ಇಲ್ಲಿಯೇ ದಾಸೋಹ ವ್ಯವಸ್ಥೆಯನ್ನು

ಮಾಡುತ್ತ ಉಳಿದವರೆಂಬುದೇ ನನ್ನ ಲೇಖನದ ಮುಖ್ಯ ಸಾರಾಂಶವಾಗಿತ್ತು. ಈ ಹೊಸ ವಿಷಯ ಶ್ರೀಗಳವರನ್ನು ಆಕರ್ಷಿಸಿತು. ಆಗ ಮಠಕ್ಕೆ ಬಂದಿದ್ದ ಬಸವನಾಳ ಶಿವಲಿಂಗಪ್ಪ (ಎಸ್.ಎಸ್. ಬಸವನಾಳ)ನವರು ಮತ್ತೂ ಮಲ್ಲಾಬಾಂದಿ ವೀರಭದ್ರಪ್ಪನವರೂ ನನ್ನ ಈ ಅಭಿಪ್ರಾಯವನ್ನು ಶ್ಲಾಘಿಸಿದರು. ಬಸವನಾಳರು ಸಿದ್ಧಗಂಗೆಯ ಅಡವೀ ಸ್ವಾಮಿಗಳನ್ನು ನಿಮ್ಮ ಊರಿನವರನ್ನಾಗಿ ಮಾಡಿಕೊಂಡುಬಿಟ್ಟೆಯಲ್ಲಪ್ಪೋ ಎಂದುದು ಜ್ಞಾಪಕ. ಏಕೆಂದರೆ ಅಡವೀ ಸ್ವಾಮಿಗಳಿದ್ದ ಕೂಡಲ ಹಾಗೂ ನಮ್ಮೂರಾದ ಹರವಿ ಎರಡೂ ಅವಳಿ ಜವಳಿ ಊರುಗಳಂತೆ ಇದ್ದವು. ಕೇವಲ 2-3 ಫರ್ಲಾಂಗು ದೂರದಲ್ಲಿ ಇದ್ದ ಹಳ್ಳಿಗಳಾಗಿದ್ದವು.

ಅನಂತರ ಶ್ರೀಶ್ರೀಗಳವರು ನನ್ನನ್ನು ತಿಪಟೂರಿಗೆ ತೆಂಗಿನಕಾಯಿ ಭಿಕ್ಷೆ ಮತ್ತು ಧನ ಸಂಗ್ರಹ ಮಾಡಿಕೊಂಡು ಬರಲು ಕಳಿಸಿದರು. ಅಲ್ಲಿ ಬಹು ನೈಪುಣ್ಯದಿಂದ ಕಾರ್ಯ ನಿರ್ವಹಿಸಿದೆ. ಪ್ರತಿ ವರ್ಷಕ್ಕಿಂತಲೂ ಹೆಚ್ಚಿಗೆ ಕಾಯಿ ಕೊಬ್ಬರಿ ಅಲ್ಲಿ ಸಂಗ್ರಹವಾದುದಲ್ಲದೆ ಗಣನೀಯವಾಗಿ ಹಣಸಂಗ್ರಹವೂ ಆಯಿತು. ಶ್ರೀಮಠಕ್ಕೆ ತಂದುಹಾಕಿದೆ. ಇದಂತೂ ಶ್ರೀಗಳವರಿಗೆ ಬಹಳ ಮೆಚ್ಚುಗೆಯಾಯಿತು. ಹೀಗಾಗಲು ಈ ಭಾಗಕ್ಕೇ ಅಪರಿಚಿತವಾದ ಈತ ಯಾವ ಚಾತುರ್ಯದಿಂದ ಇಷ್ಟೊಂದು ಸಂಗ್ರಹಿಸಿದನೆಂಬುದೇ ಆಗಿತ್ತು. ಹೀಗೆ ನನಗೆ ನಿಯೋಜಿಸಿದ ಅನೇಕ ಕಾರ್ಯಗಳನ್ನು ನಿರ್ವಹಿಸಿ ಸಿಲ್ವರ್ ಜ್ಯೂಬಿಲಿ ಉತ್ಸವದಲ್ಲಿ ನನ್ನ ಸೇವೆ ಸಲ್ಲಿಸಿದೆ. ಈ ಮಹೋತ್ಸವ ನಿಮಿತ್ತ ಮಠದ ವಿದ್ಯಾರ್ಥಿಗಳೇ ಕಲಿತಿದ್ದ ಮಾರ್ಕಂಡೇಯ ನಾಟಕ ಪ್ರದರ್ಶನ ಸಮಯದಲ್ಲಿ ಸ್ಟೇಜಿನಲ್ಲಿ ನಾಟಕ ನಿರ್ದೇಶನ ಮಾಡುತ್ತಿದ್ದ ಕಾಲದಲ್ಲಿ ಒಂದು ದೊಡ್ಡ ಮೊಳೆಯನ್ನು ತುಳಿದುಬಿಟ್ಟೆ. ಮೊಳೆ ಕಿತ್ತು ತಾತ್ಕಾಲಿಕ ಔಷಧೋಪಚಾರ ಮಾಡಿಕೊಂಡು ಬಟ್ಟೆ ಕಟ್ಟಿಕೊಂಡು ನಾಟಕ ಪೂರ್ಣ ಮುಗಿಸಿದ್ದಾಯಿತು. ಮರುದಿನ ಕಾಲು ಬಹಳ ನೋವಾಯಿತು. ಅದಕ್ಕೆ ಮುಂದೆ ಸಕಾಲಿಕವಾಗಿ ಯಾವ ಚಿಕಿತ್ಸೆಯನ್ನೂ ಕೊಡಲಿಲ್ಲ. ತೊಡೆಯಲ್ಲಿ ಗ್ರಂಥಿಗಳು ಉಬ್ಬಿಕೊಂಡು ಬಹಳ ನೋವನ್ನುಂಟು ಮಾಡಿತು. ಕಾರ್ಯಕ್ರಮಗಳನ್ನೆಲ್ಲ ಮುಗಿಸಿಕೊಂಡು ಮೈಸೂರಿಗೆ ಬಂದುಬಿಟ್ಟೆ. ನನಗೆ ನೋವಾಗಿದ್ದ ವಿಚಾರವನ್ನು ಶ್ರೀಗಳವರಿಗೆ ತಿಳಿಸಲೂ ಇಲ್ಲ. ಈ ನೋವೆಲ್ಲ ಕೆಲವು ದಿನ ಇರುತ್ತದೆ, ಆಮೇಲೆ ಎಲ್ಲ ಸರಿಹೋಗುತ್ತದೆ ಎಂದೇ ಉದಾಸೀನವಾಗಿದ್ದು ಬಿಟ್ಟೆ.

ನನಗೆ ಹೀಗೆ ಏನಾದರೂ ಶಾರೀರಿಕ ತೊಂದರೆಗಳಾದಾಗ ನಾನು ಚಿಕಿತ್ಸೆ ಮಾಡಿಸಿದವನೇ ಅಲ್ಲ. ಆಸ್ಪತ್ರೆಗಳಿಗೂ ನನಗೂ ಬಹುದೂರ. ನಾನು 21 ವರ್ಷವಾಗುವವರೆಗೂ ಆಸ್ಪತ್ರೆ-ಡಾಕ್ಟರರು ಎಂಬುದೇ ಗೊತ್ತಿರಲಿಲ್ಲ. ಬಾಲ್ಯದಿಂದ ನಾನು ಬೆಳೆದುಬಂದ ಬಗೆಯೇ ಅಂತಹದು. ಬಾಲ್ಯದಲ್ಲಿ ಜ್ವರ, ಕೆಮ್ಮು ನೆಗಡಿ, ಹೊಟ್ಟೆನೋವು, ಭೇದಿ ಏನೇ ಆಗಲಿ ಅದಕ್ಕೆಲ್ಲ ನಮ್ಮ ತಾಯಿಯ ಔಷಧಗಳೇ ಕೆಲವು ಮದ್ದಾಗಿರುತ್ತಿದ್ದವು. ತಾಯಿ ಓದಿದವಳಲ್ಲ, ಬರೆದವಳಲ್ಲ. ಹಿಂದಿನಿಂದ ಹಳ್ಳಿಯ ಜನರು ಸಾಮಾನ್ಯವಾಗಿ ಕೊಡುತ್ತ ಬಂದಿದ್ದ ಔಷಧಗಳೇ ಅವು. ಕೆಮ್ಮು ಉಂಟಾದೊಡನೆ ಬೇಲಿಯ ಮೇಲಿನ ಕುಂಟಿಗನ ಸೊಪ್ಪು ಒಂದೆರಡೆಲೆ ತರುವುದು, ಅದರಲ್ಲೊಂದು ಮೆಣಸಿನ ಕಾಳು, ಒಂದು ಬೇಳೆ ಬೆಳ್ಳುಳ್ಳಿ, ಒಂದು ಉಪ್ಪಿನ ಹರಳು ಹಾಕಿ ಮುಚ್ಚಿ ಬಾಯಲ್ಲಿಟ್ಟು "ಕಣ್ಣುಮುಚ್ಚಿ ಕಚಕಚ ತಿಂದು ನುಂಗು ಹೋಗುತ್ತ, ಅದೇನು ಮಾಡುತ್ತೆ" ಎಂದು ತಿನ್ನಿಸಿಬಿಟ್ಟರಾಯಿತು ಕೆಮ್ಮು ವಾಸಿ. ಜ್ವರ ಬಂದರೆ ಬೇವಿನ ಚಕ್ಕೆ ತರಿಸಿ ಅದಕ್ಕೆ ಸ್ವಲ್ಪ ಜೀರಿಗೆ ಮೆಣಸು ಹಿಪ್ಪಿ ಇತ್ಯಾದಿ ಹಾಕಿ ಕಷಾಯ ಮಾಡಿ ಗಟ್ಟಿಯಾಗಿ

ಮೂಗು ಹಿಡಿದು ಬಾಯಿಗೆ ಹೊಯ್ದುಬಿಡುತ್ತಿದ್ದಳು. ಹೊಲಕ್ಕೆ ಹೋದಾಗ ಅಲ್ಲೇನಾದರೂ ಹೊಟ್ಟೆನೋವು ಇತ್ಯಾದಿ ಹೇಳಿದರಾಯಿತು. ಅಲ್ಲಿಯೇ ಬೆಳೆದು ನಿಂತಿರುತ್ತಿದ್ದ ಹೊನ್ನಾವರಿಕೆ (ತಂಗಡಿ) ನಾಲ್ಕಾರು ಮುಗುಡು ಹರಿದುತಂದು ಬಾಯಲ್ಲಿ ಹಾಕಿ ಅಗಿದುತಿಂದು ನುಂಗು ಎಂದರಾಯಿತು. ಹೊಟ್ಟೆನೋವು ಮಂಗಮಾಯ. ಕೋಲಿಗಳನ್ನು ತುಳದೋ, ನಡೆಸಿಕೊಂಡೋ ಕಾಲು ಗಾಯ ಮಾಡಿಕೊಂಡರೆ ಆ ಕೂಡಲೇ "ಅತ್ತ ಕಡೆ ಹೋಗಿ ಗಾಯದ ಮೇಲೆ ಕಾಲುಮಡಿ (ಮೂತ್ರಮಾಡಿ) ಮಡಿದುಕೊಂಡು ಬಾ ಹೋಗು, ಅದೇನು ಮಾಡುತ್ತೆ" ಎಂದುಬಿಟ್ಟರಾಯಿತು. ಆದರಂತೆ ಮಾಡಿ ಬಟ್ಟೆ ಕಟ್ಟಿಕೊಂಡರಾಯಿತು. ಗಾಯ ವಾಸಿಯೇ. ಒಮ್ಮೊಮ್ಮೆ ಗಾಯಕ್ಕೆ ವೀಳ್ಯದೆಲೆಯನ್ನು ಅಲ್ಲಿಯೇ ಬಾಯಲ್ಲಿ ತಿಂದು ಅದನ್ನು ಗಾಯದ ಮೇಲೆ ಹಾಕಿ ಬಟ್ಟೆ ಕಟ್ಟುತ್ತಿದ್ದುದೂ ಉಂಟು. ಹೀಗೆ ಹಳ್ಳಿಯ ಮದ್ದುಗಳಲ್ಲಿಯೇ ಕಾಯಿಲೆ ಕಳೆದುಕೊಂಡು ಆಸ್ಪತ್ರೆಗಳ ಮುಖವನ್ನೇ ಕಾಣದ ನಾನು ಆಸ್ಪತ್ರೆ ಕಂಡದ್ದು ಇಪ್ಪತ್ತೊಂದು ವರ್ಷದವನಾದಾಗ ಮಾತ್ರ.

ಮಲೆನಾಡಿನ ಹಿರೇಕಾಂಶಿ ಶಾಲಾ ಮಾಸ್ತರನಾದಾಗ ಅಲ್ಲಿನ ಭಯಂಕರ ಮಲೇರಿಯಾಕ್ಕೆ ತುತ್ತಾಗಿಬಿಟ್ಟೆ. ಮಲೇರಿಯಾ ಹೆಚ್ಚಾಗಿ ಹಾಸಿಗೆ ಹಿಡಿದುಬಿಟ್ಟಾಗ ಹಾವೇರಿಗೆ ಹೋಗಿ ಚಿಕಿತ್ಸೆ ಮಾಡಿಸಿದ್ದುಂಟು. ಆಗಲೇ ಇಂಜೆಕ್ಷನ್ ತಕ್ಕೊಂಡದ್ದು. ಅದಕ್ಕೂ ಮೊದಲು ಇಂಜೆಕ್ಷನ್ ತಕ್ಕೊಂಡದ್ದೇ ಇಲ್ಲ. ಹೀಗೆ ಬೆಳೆದಿರುವ ನಮಗೆ ಸಣ್ಣಪುಟ್ಟ ಈ ಮೊಳೆ ತುಳಿದ ಗಾಯದ ಬಗೆಗೆ ಅಲಕ್ಷ್ಯ ಮಾಡಿದ್ದು ವಿಪರೀತಕ್ಕಿಟ್ಟುಕೊಂಡು 'ಹದಗಡಲೆ' ಅಂದರೆ ತೊಡೆಯ ಗ್ರಂಥಿಗಳು ಉಬ್ಬಿಕೊಂಡು ಕೊನೆಗೆ ಶಸ್ತ್ರಚಿಕಿತ್ಸೆಗೆ ಮೈಸೂರು ಕೆ.ಆರ್. ಆಸ್ಪತ್ರೆ ಸೇರಬೇಕಾಗಿ ಬಂದು ಮೂರು ತಿಂಗಳ ಕಾಲ ತೊಂದರೆ ಅನುಭವಿಸಿ ವಿದ್ಯಾಭ್ಯಾಸದಲ್ಲಿ ಸ್ವಲ್ಪ ಹಿಂದೆ ಬಿದ್ದೆ ಅನ್ನಿಸಿತು. ಆದರೂ ಎರಡು ವರ್ಷಗಳ ಆ ಜೂನಿಯರ್ ಪಂಡಿತ ಪರೀಕ್ಷೆಯಲ್ಲಿ ಮೊದಲ ದರ್ಜೆಯಲ್ಲಿ ತೇರ್ಗಡೆ ಏನೋ ಆಯಿತು. ನನಗೆ ಆಗ ಬಂದ ಅಂಕಗಳು ಮಾತ್ರ ತೃಪ್ತಿ ನೀಡಲಿಲ್ಲ. ಮುಂದೆ ಸೀನಿಯರ್ ಪಂಡಿತ ಪರೀಕ್ಷೆಯಲ್ಲಿ ಸತತ ಪರಿಶ್ರಮ ಪಟ್ಟು ಓದಿದೆ. ಮೊದಲ ದರ್ಜೆಯಲ್ಲಿ ಎರಡನೇ ರ್‍ಯಾಂಕ್ ಗಳಿಸಿ ತೇರ್ಗಡೆ ಹೊಂದಿದೆ. ಸಾಹಿತ್ಯ ಚರಿತ್ರೆಯಲ್ಲಿ ಶೇಕಡಾ 93 ಅಂಕ ಕೊಟ್ಟ ಎಂ.ಆರ್. ಶ್ರೀನಿವಾಸಮೂರ್ತಿಯವರು ಎಗ್ಸಾಮಿನರ್ಸ್ ಬೋರ್ಡಿನಲ್ಲಿ ಈ ಹುಡುಗ ಕಾಪಿ ಮಾಡಿರಬಹುದೆಂದು ಅನುಮಾನಪಟ್ಟರಂತೆ. ಏಕೆಂದರೆ ಆ ಪೇಪರ್‌ನಲ್ಲಿ ನಾನು 40 ಶಬ್ದಮಣಿದರ್ಪಣದ ಕಂದಪದ್ಯಗಳನ್ನು ಉದ್ಧರಿಸಿ ಪ್ರಬಂಧಗಳನ್ನು ಬರೆದಿದ್ದೆ. ಅಲ್ಲದೆ ಯಾವ ಕವಿಯ ಶೈಲಿಯ ಬಗೆಗೆ ಬರೆದಾಗಲೂ ಅವರ ಗ್ರಂಥದ ಅನೇಕ ಪದ್ಯಗಳನ್ನು ಉದಾಹರಿಸಿದ್ದೆನೆಂಬುದೂ ಒಂದು ಕಾರಣವಂತೆ. ಈ ಎಲ್ಲ ಪದ್ಯಗಳು ಸಾಮಾನ್ಯವಾಗಿ ನಾನು ಪ್ರೈಮರಿ ಸ್ಕೂಲ್ನಲ್ಲಿದ್ದಾಗ ಓದಿ ಬಾಯಿಪಾಠ ಮಾಡಿಕೊಂಡಂಥವುಗಳು. ಆಗಿನ ಪ್ರಾಥಮಿಕ ಶಾಲಾ ಪಠ್ಯಪುಸ್ತಕಗಳಲ್ಲಿ ಕನ್ನಡದ ದೊಡ್ಡ ದೊಡ್ಡ ಕವಿಗಳ ಪದ್ಯಭಾಗಗಳು ಇರುತ್ತಿದ್ದವು ಮತ್ತು ಅವೆಲ್ಲ ಕಡ್ಡಾಯವಾಗಿ ಬಾಯಿಪಾಠವಾಗಲೇ ಬೇಕಾಗಿತ್ತು. ಆಮೇಲೆ ಆ ಬೋರ್ಡಿನಲ್ಲಿಯೇ ಇದ್ದ ನಮ್ಮ ಉಪಾಧ್ಯಾಯರೊಬ್ಬರು ಎಂ.ಆರ್. ಶ್ರೀನಿವಾಸಮೂರ್ತಿ ಯವರ ಸಂಶಯವನ್ನು ಸೂಕ್ತ ಉತ್ತರ ನೀಡಿ ಪರಿಹರಿಸಿದರಂತೆ. ಎಲ್ಲ 15 ಪೇಪರ್‌ಗಳಲ್ಲಿ ನಾನು ಶೇಕಡಾ 75ಕ್ಕಿಂತ ಕಡಿಮೆ ಅಂಕ ಪಡೆದಿರಲಿಲ್ಲವೆಂಬುದೂ ಅವರ ಸಂಶಯವನ್ನು ಹೊಡೆದೋಡಿಸಲು ಕಾರಣವಾಯಿತಂತೆ.

## ಹೆಚ್. ದೇವೀರಪ್ಪ ಮತ್ತು ಬಸವನಾಳ ಮಾಸ್ತರರ ಗಾಢಪರಿಚಯ

ಮೈಸೂರಿನಲ್ಲಿದ್ದ ಕಾಲದಲ್ಲಿ ನನ್ನ ಕೀರ್ತನೆಯ ಕಾರ್ಯಕ್ರಮಗಳನ್ನು ಮುಂದುವರಿಸಿಕೊಂಡೇ ಬಂದಿದ್ದೆ. ಈಗ ನನ್ನ ಕೀರ್ತನೆ, ನನ್ನ ಸಾಹಿತ್ಯಾಭ್ಯಾಸದ ಕಾರಣವಾಗಿ ಶಾಸ್ತ್ರೀಯವಾಗಿರುತ್ತಿತ್ತು. ದೊಡ್ಡ ದೊಡ್ಡ ಕವಿಗಳ ಸಾಹಿತ್ಯವನ್ನು ಧಾರಾಳವಾಗಿ ಬಳಸುತ್ತಿದ್ದೆನಾಗಿ ಕಾವ್ಯಶ್ರೀ ಕೇಳುವವರಲ್ಲಿ ಕುತೂಹಲ ಕೆರಳುವಂತಿರುತ್ತಿತ್ತು. ಬಾಣಭಟ್ಟನ ಕಾದಂಬರಿ, ಕಾಳಿದಾಸನ ಕುಮಾರಸಂಭವ, ಶಾಕುಂತಲಾದಿ ವಿಖ್ಯಾತ ಕಾವ್ಯಭಾಗಗಳ ಸಹಕಾರ ನನ್ನ ಕೀರ್ತನೆಗೆ ಆಗಾಗ ಒದಗಿಬರುತ್ತಿತ್ತು. ಹರೀಶ್ವರ-ರಾಘವಾಂಕ-ಷಡಕ್ಷರ ದೇವರುಗಳ ಕಾವ್ಯಾಭ್ಯಾಸವನ್ನು ಮನಮುಟ್ಟಿ ಮಾಡಿದ್ದರಿಂದ ಆ ಕವಿಗಳ ......ಅಲಂಕಾರಿಕ ಭಾಷಾ ಸಂಪತ್ತು, ಹರವು ತಮ್ಮ ಕಾವ್ಯಗಳಲ್ಲಿ ತಂದ ಪ್ರತಿಮೆ ಪದೋಪಾದಿಗಳನ್ನು ಅನೇಕ ಪ್ರಸಂಗಗಳಲ್ಲಿ ಧಾರಾಳವಾಗಿ ಪ್ರಯೋಗಿಸುವಿಕೆ ಇತ್ಯಾದಿ ಸುಂದರ ಅಲಂಕಾರ ಚಿತ್ರಣಗಳನ್ನು ಕಥೆಯಲ್ಲಿ ಧಾರಾಳವಾಗಿ ಬಳಸಿಕೊಳ್ಳುತ್ತಿದ್ದೆನಾಗಿ ಬಹುಜನರ ಮೆಚ್ಚುಗೆ ಗಳಿಸುತ್ತ ನಡೆದಿತ್ತು.

ಒಮ್ಮೆ ಕ್ಯಾತನಹಳ್ಳಿ ಸಾಹುಕಾರ ಸಿದ್ಧಲಿಂಗಪ್ಪನವರ (KSS) ಸಂಸ್ಕೃತ ಪಾಠಶಾಲೆ ಮತ್ತು ವಿದ್ಯಾರ್ಥಿನಿಲಯಗಳ ಸಭಾಂಗಣದಲ್ಲಿ ನನ್ನ ಕೀರ್ತನ ಏರ್ಪಾಡಾಗಿತ್ತು. ಅದೇ ಕಾಲದಲ್ಲಿ ಎಸ್.ಎಸ್. ಬಸವನಾಳರು, ಮಲ್ಲಾಬಾದಿ ವೀರಭದ್ರಪ್ಪನವರು ಮೈಸೂರಿಗೆ ಬಂದಿದ್ದರು. ಇವರಿಬ್ಬರೂ ಆಗ ಓರಿಯಂಟಲ್ ರೀಸರ್ಚ್ ಬ್ಯೂರೋದಲ್ಲಿ ಕೆಲಸ ಮಾಡುತ್ತಿದ್ದ ದೇವೀರಪ್ಪನವರೊಡನೆ ನನ್ನ ಕೀರ್ತನ ಕೇಳಲು ಬಂದು ಕುಳಿತುಬಿಟ್ಟರು. ಆ ದಿನದ ನನ್ನ ಕಥೆ ಗಿರಿಜಾ ಕಲ್ಯಾಣ. ಹರೀಶ್ವರನ ಗಿರಿಜಾ ಕಲ್ಯಾಣದ ಕಥೆಯನ್ನು ಕಾಳಿದಾಸನ ಕುಮಾರಸಂಭವ, ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದಲ್ಲಿ ಬರುವ 'ಗಿರಿಜಾ ಕಲ್ಯಾಣಸಂಧಿ'ಯ ಸಾಹಿತ್ಯದೊಡನೆ ಬಹಳ ವಿದ್ವತ್ಪೂರ್ಣ ಭಾಷೆಯಲ್ಲಿ ಮಾಡುತ್ತಿದ್ದೆ. ಈ ನನ್ನ ಶೈಲಿಯನ್ನು ಬಸವನಾಳರು ಬಹಳ ಮೆಚ್ಚಿಕೊಂಡು ಕೀರ್ತನ ಮುಗಿಯುವವರೆಗೂ ಕುಳಿತಿದ್ದು ಮುಗಿದ ಮೇಲೆ ಮನಮುಟ್ಟಿ ಶ್ಲಾಘಿಸಿ "ನಿಮ್ಮನ್ನೊಮ್ಮೆ ಧಾರವಾಡದ ಮುರುಘಾಮಠದಲ್ಲಿ ಪ್ರತಿವರ್ಷ ನಡೆಯುವ ಶಿವಾನುಭವ ಕಾರ್ಯಕ್ರಮಕ್ಕೆ ಕರೆಸಿಕೊಳ್ಳುತ್ತೇವೆ, ತಪ್ಪಿಸಿಕೊಳ್ಳಬಾರದು. ಮುಂದೆ ಸಮಾಜದಲ್ಲಿ ನಮ್ಮ ಸಂಸ್ಕೃತಿ, ಸಾಹಿತ್ಯ ಪ್ರಚುರಕರಾಗಬೇಕಾಗುತ್ತದೆ. ಈಗಲೇ ನಿಮ್ಮನ್ನೆಲ್ಲ ನಾವು ಸಮಾಜಕ್ಕೆ ಕಾಣುವಂತೆ ಮಾಡಬೇಕಲ್ಲವೆ? ಆದ್ದರಿಂದ ಧಾರವಾಡಕ್ಕೆ ಬರಮಾಡಿಕೊಳ್ಳುತ್ತೇವೆ. ನಿಮ್ಮಲ್ಲಿ ಬಂಡವಾಳ ಬಹಳ ಇದೆ ಎಂಬುದು ಇಂದಿನ ನಿಮ್ಮ ಕಥೆ ಕೇಳಿ ನಮಗೆ ಮನವರಿಕೆಯಾಗಿದೆ" ಎಂದು ಹೇಳಿ ಹೋದರು. ಅದರಂತೆ 1952ರಲ್ಲಿ ಧಾರವಾಡದ ಮುರುಘಾಮಠಕ್ಕೆ ಹೋದುದೂ ಉಂಟು. ಆದರೆ ಬಸವನಾಳರು ಸ್ವಲ್ಪ ಮುಂಚೆ ಲಿಂಗೈಕ್ಯರಾಗಿ ಹೋಗಿದ್ದರು. ಮಮ್ಮಲ ಮರುಗಿದೆ. ಬಸವನಾಳ ಮಾಸ್ತರರ ದೊಡ್ಡತನಕ್ಕೂ ಸಹೃದಯತೆಗೂ ನನಗೆ ಅಪಾರ ಗೌರವಭಾವಗಳುಂಟಾದವು.

ಮುರುಘಾಮಠದ ಕಾರ್ಯಕ್ರಮದಲ್ಲಿ ನಾನು ಮಾಡಬೇಕಾದ ಭಾಷಣ ವಿಷಯ 'ಹರೀಶ್ವರನ ಗಿರಿಜಾ ಕಲ್ಯಾಣದಲ್ಲಿ ಶಿವಾನುಭವ' ಎಂಬುದನ್ನು ಪೂರ್ವಭಾವಿಯಾಗಿ ಸೂಚಿಸಿ ಬರಲು ಸಮ್ಮತಿಯೇ ಎಂದು ಕೇಳಿದ್ದರು. ಒಪ್ಪಿಗೆ ಕೊಟ್ಟೆ. ನನ್ನ ಭಾಷಣ 1952ನೇ ಫೆಬ್ರುವರಿ ನಾಲ್ಕೋ ಅಥವಾ ಐದನೇ ತಾರೀಖೋ ಆಗಿರಬೇಕು. ಅಂದು ಇಟ್ಟುಕೊಂಡ ಕಾರ್ಯಕ್ರಮದ ಮುದ್ರಿತ ಪ್ರತಿಯನ್ನು ಪ್ರವಾಸ ಭತ್ಯೆಯನ್ನು ಕಳಿಸಿಕೊಟ್ಟರು. ಹೋಗಿ

ಅತ್ಯುತ್ಸಾಹದಿಂದ ಕಾರ್ಯಕ್ರಮ ನಿರ್ವಹಿಸಿದೆ. ಮೃತ್ಯುಂಜಯಸ್ವಾಮಿಗಳಿಗೆ ಯಾರೋ ಇವರು ಕೀರ್ತನೆ ಮಾಡುತ್ತಾರೆ, ಬಹಳ ಸ್ವಾರಸ್ಯವಾಗಿರುತ್ತದೆ ಎಂದಿದ್ದರಂತೆ. ಸ್ವಾಮಿಗಳು ನೀವು ಇನ್ನೊಂದು ದಿನ ಇಲ್ಲುಳಿದು ಕಥೆ ಮಾಡಿಯೇ ಹೋಗಬೇಕೆಂದರು. ನಾನು ಅಲ್ಲಿ ನಿಲ್ಲುವಂತಿರಲಿಲ್ಲ. ತಿಪಟೂರು ಹೈಸ್ಕೂಲಿಗೆ ನನ್ನ ವರ್ಗಾವಣೆಯಾಗಿ ಅಲ್ಲಿ ಶೀಘ್ರವಾಗಿ ಕೆಲಸಕ್ಕೆ ಹಾಜರಾಗ್ಬೇಕಾಗಿತ್ತು. ಈ ವಿಷಯವನ್ನು ಶ್ರೀಗಳಿಗೆ ತಿಳಿಸಿದರೂ ಅವರು "ಮರುಘೇಶ ಇದ್ದಾನೆ. ಕಥೆ ಮಾಡಿಯೇ ಹೋಗಬೇಕು" ಎಂದರು. ಉಳಿದು ಸಿದ್ಧರಾಮೇಶ್ವರ ಕಥೆ ಮಾಡಿದೆ. ಶ್ರೀಗಳು ಬಹಳ ಸಂತೋಷ ವ್ಯಕ್ತಪಡಿಸಿ ಸಂಭಾವನೆ ಕೊಟ್ಟು ಹರಸಿ ಕಳಿಸಿದರು. ಆದರೆ ಒಂದೇ ವ್ಯಥೆಯೆಂದರೆ ಬಸವನಾಳ ಮಾಸ್ತರರ ಹಾಜರಾತಿ ಇಲ್ಲದ್ದು. ಸಿದ್ಧರಾಮನ ಜನನದ ನನ್ನ ವರ್ಣನೆ ಕೇಳಿ ಮೃತ್ಯುಂಜಯಪ್ಪನವರು ಆಹಾ! ಅಪ್ಪಾ ಉದಯಗೊಂಡನೆಂದು ಕುಣಿದಾಡಿದ್ದು ನನ್ನ ಮುಂದೆ ಇಂದೂ ಕುಣಿಯುತ್ತಿದೆ.

ಬಸವನಾಳರು ಮೈಸೂರಿನಲ್ಲಿ ಇರುವಾಗಲೇ ಅವರನ್ನು ದೇವೀರಪ್ಪನವರನ್ನು ಊಟಕ್ಕೆ ಆಹ್ವಾನಿಸಿಬಿಟ್ಟೆ. ಅವರು ಚೇಷ್ಟೆ ಮಾಡಿದರು. "ಏನಪ್ಪ, ನೀನೀನ್ನೂ ವಿದ್ಯಾರ್ಥಿ, ಮನೆ ಮಾಡಿಲ್ಲ, ಮಠ ಮಾಡಿಲ್ಲ, ಹಾಸ್ಟಲಿನಲ್ಲಿ ಓದಿಕೊಂಡು ಊಟ ಮಾಡಿ ಕಾಲ ಕಳೆಯುವ ನೀನು ನಮ್ಮನ್ನೆಲ್ಲ ಊಟಕ್ಕೆ ಆಹ್ವಾನಿಸುವುದರಲ್ಲಿ ಅರ್ಥವೇನಿದೆ? ಏನೂ ಬೇಡ, ಮುಂದೆ ಗೃಹಸ್ಥರಾಗಿ ಮನೆ-ಮಠ ಮಾಡಿ ವ್ಯವಸ್ಥಿತ ಜೀವನ ನಡೆಸಿದ ಮೇಲೆ ಕರೆ, ಬರುತ್ತೇವೆ" ಎಂದರು. ನಾನು ಕೇಳಲಿಲ್ಲ, ಒಪ್ಪಿಸಿಬಿಟ್ಟೆ. ಶ್ರೀ ಚೆನ್ನಮಲ್ಲಿಕಾರ್ಜುನರವರನ್ನು ಒಪ್ಪಿಸಿದೆ. ಅವರು ಏನು ಮಾಡುತ್ತೀಯ? ಹೇಗೆ ಮಾಡುತ್ತೀಯ? ಅವರನ್ನೆಲ್ಲ ಊಟಕ್ಕೆ ಕರೆದಿದ್ದೀಯ. ನನ್ನನ್ನು ಕರೆದಿದ್ದೀಯಲ್ಲಾ! ಎಂದರು. ನಾನು ಮಾಡಿದ ಏರ್ಪಾಡನ್ನು ಅವರಿಗೆ ತಿಳಿಸಿದೆ.

ಹಾವೇರಿಯವರಾದ ಫಾಲಾಕ್ಷ ದೇವರೆಂಬುವರು ಚೆನ್ನಮಲ್ಲಿಕಾರ್ಜುನರವರು ಇದ್ದ ಬದಾಮಿ ನಂಜಪ್ಪನವವ ಛತ್ರದ ಒಂದು ಭಾಗದಲ್ಲಿ ಇದ್ದರು. ಅವರಿಗೂ ನನಗೂ ಅತ್ಯಂತ ಗಾಢವಾದ ಮೈತ್ರಿ. ಅಡಿಗೆ ಮಾಡುವುದರಲ್ಲಿ ಅತ ನಿಸ್ಸೀಮಪುರುಷ. ಪೂರ್ವಭಾವಿಯಾಗಿ ಅವರಲ್ಲಿ ಹೋಗಿ "ನಾನು ಧಾರವಾಡದಿಂದ ಇಲ್ಲಿಗೆ ಬಂದಿರುವ ಬಸವನಾಳರು - ಅವರ ಸಂಗಡವೇ ಇರುವ ಮಲ್ಲಾಬಾದಿ ವೀರಭದ್ರಪ್ಪ, ಹೆಚ್. ದೇವೀರಪ್ಪ ಮತ್ತು ಚೆನ್ನಮಲ್ಲಿಕಾರ್ಜುನರು-ಇವರನ್ನು ಊಟಕ್ಕೆ ಕರೆಯಬೇಕೆಂದಿದ್ದೇನೆ, ನೀವು ಆ ದಿನ ಪ್ರಶಸ್ತವಾಗಿ ಹೋಳಿಗೆ ಅಡಿಗೆ ಮಾಡಿ ಈ ನನ್ನ ಗಣಪರ್ವವನ್ನು ನಡೆಸಿಕೊಡುತ್ತೀರಾ?" ಎಂದು ಕೇಳಿದೆ. ಅವರು ಸಂತೋಷವಾಗಿ ಒಪ್ಪಿ ಆಗಲಿ ಎಂದಿದ್ದರು. ಈ ಬಲದ ಮೇಲಿಂದ ಇಷ್ಟು ಜನಕ್ಕೆ ಆಮಂತ್ರಣ ಕೊಟ್ಟದ್ದು. ಅವರಿಗೆಲ್ಲ ಇವನು ಹೇಗೆ ಮಾಡುತ್ತಾನೆ ಎಂಬ ಸಂಶಯ ಬಂದಿರುವುದು ಸಹಜವೇ. ಚನ್ನಮಲ್ಲಪ್ಪನವರು ನಾನು ಮಾಡಿದ ಏರ್ಪಾಡನ್ನು ಒಪ್ಪಿ ಆಗಬಹುದು ಎಂದಿದ್ದರು.

ಫಾಲಾಕ್ಷ ದೇವರು ಹೇಳಿದಂತೆ ಎಲ್ಲಾ ಸಾಮಾನುಗಳನ್ನೂ ತಂದು ಅವರ ಕೊಠಡಿಗೆ ಹಾಕಿದೆ. ಅಡಿಗೆಯನ್ನು ಬಹು ಶ್ರದ್ಧೆಯಿಂದ ಮಾಡಿಬಿಟ್ಟರು. ಹೋಳಿಗೆ ಮಾಡುವುದರಲ್ಲಿ ಫಾಲಾಕ್ಷ ದೇವರು ಪ್ರಸಿದ್ಧರು. ನಾನು ಹಾವೇರಿ-ಹುಕ್ಕೇರಿ ಮಠದಲ್ಲಿದ್ದು ವಿದ್ಯಾಭ್ಯಾಸ

ಮಾಡುವ ಕಾಲದಲ್ಲೇ ಅವರ ಪರಿಚಯ ಮಾಡಿಕೊಂಡಿದ್ದೆ. ಹುಕ್ಕೇರಿ ಮಠದಲ್ಲಿ ವಿಶೇಷ ಊಟದ ವ್ಯವಸ್ಥೆ ಮಾಡಬೇಕಾದ ಕಾಲದಲ್ಲಿ ಶ್ರೀ ಶಿವಬಸವ ಸ್ವಾಮಿಗಳು ಇವರನ್ನು ಕರೆಸಿ ಅಡಿಗೆ ಮಾಡಿಸಿ ಬಂದ ದೊಡ್ಡ ದೊಡ್ಡಸ್ವಾಮಿಗಳಿಗೆ, ಅತಿಥಿಗಳಿಗೆ ತೃಪ್ತಿಪಡಿಸಿ ಕಳಿಸುತ್ತಿದ್ದರು. ಇವರು ಮಾಡಿದ ಹೋಳಿಗೆ ಊಟ ಮಾಡಲು ಮನುಷ್ಯ ಪಡೆದು ಬಂದಿರಬೇಕು ಅನ್ನುವಂತಿದ್ದವು ಇವರ ಹೋಳಿಗೆ. ಆದರೆ ಅವರು ಹೇಳಿದಂತೆ ಅವರಿಗೆ ಸಾಮಾನು ಜೋಡಿಸಿಕೊಡಬೇಕು. ಹೋಳಿಗೆಸಾರಂತೂ ಸ್ವಾದಪೂರ್ಣವಾಗಿರುತ್ತಿತ್ತು. ಅದೇನೋ ನಳಪಾಕ ಅನ್ನುತ್ತಾರಲ್ಲ! ಆ ಪಾಕಶಾಸ್ತ್ರವನ್ನು ಓದಿಕೊಂಡಿದ್ದರೋ ಏನೋ ಎನ್ನಿಸುತ್ತಿತ್ತು ಇವರ ಅಡಿಗೆ ಊಟ ಮಾಡಿದವರಿಗೆ. ಇವರು ಹಾವೇರಿಯನ್ನು ಬಿಟ್ಟು ಎಲ್ಲಿ ಎಲ್ಲಿಯೋ ತಿರುಗಾಡಿ ಬಂದು ಮೈಸೂರಿನಲ್ಲಿ ಬಾದಾಮಿ ನಂಜಪ್ಪನವರ ಛತ್ರದಲ್ಲಿ ಸ್ನಾನ-ಅಡಿಗೆ-ಪೂಜೆಯ ವ್ಯವಸ್ಥೆಯಿರುವ ಒಂದು ಭಾಗವನ್ನು ಬಿಡಿಸಿಕೊಂಡು ಝಂಡಾ ಊರಿ ಒದ್ದಾಡಿಕೊಂಡು ಜೀವನ ನಡೆಸುತ್ತಿದ್ದರು. ನನ್ನಲ್ಲಿ ಬಹು ಸಲಿಗೆಯಿಂದ ವರ್ತಿಸುತ್ತಿದ್ದರು. ಇವರು ಹೋಳಿಗೆ-ಅನ್ನ-ಸಾರು-ಪಲ್ಲೆ-ತರಕಾರಿ ಇತ್ಯಾದಿ ಪರಿಕರಗಳನ್ನೆಲ್ಲ ಸಿದ್ಧಮಾಡಿಬಿಟ್ಟರು. ಅಡಿಗೆ ಮನೆ ಘಮಘಮ ಎನ್ನುತ್ತಿತ್ತು. ಶ್ರೀ ಚೆನ್ನಮಲ್ಲಿಕಾರ್ಜುನರ ಸ್ನಾನಾದಿಗಳನ್ನು ಮಾಡಿಸಿದೆ. ಶಿವಪೂಜೆ ಮುಗಿಸಿದರು. ಶ್ರೀ ಚನ್ನಮಲ್ಲಿಕಾರ್ಜುನರ ಶಿವಪೂಜೆ ಶಾಸ್ತ್ರಸಮ್ಮತವಾದದ್ದು ಸುಮಾರು ಒಂದು ಒಂದೂವರೆ ಘಂಟೆ ಪೂಜೆ ಮಾಡುತ್ತಿದ್ದರು. ಇವರ ಶಿವಪೂಜೆ ಮುಗಿಯುವಷ್ಟರಲ್ಲಿ ಬಸವನಾಳರೂ, ದೇವೀರಪ್ಪನವರೂ ಬಂದರು. ಊಟಕ್ಕೆ ಕುಳಿತರು. ನಾನು ಸ್ನಾನ ಮಾಡಿ ಮೈಗೆಲ್ಲ ವಿಭೂತಿ ಧರಿಸಿಕೊಂಡು ಎಲ್ಲರಿಗೂ ತೃಪ್ತಿಯಾಗುವಂತೆ ಬಡಿಸಿದೆ. ನಗುತ್ತ ನಗುತ್ತ ಅನೇಕ ಸ್ವಾರಸ್ಯಕರ ಸಂಭಾಷಣೆ ಮಾಡುತ್ತ ಎಲ್ಲರೂ ಊಟ ಮಾಡಿದರು. ಚನ್ನಮಲ್ಲಿಕಾರ್ಜುನರು ಊಟ ಮುಗಿಸಿ ಅದೇ ಛತ್ರದಲ್ಲಿದ್ದ ತಮ್ಮ ಕೊಠಡಿಗೆ ಹೋಗಿಬಿಟ್ಟರು. ಚೆನ್ನಮಲ್ಲಿಕಾರ್ಜುನರು ಹೊರಗಡೆಯ ಆಮಂತ್ರಣ ಸ್ವೀಕರಿಸಿ ಊಟಕ್ಕೆ ಹೋದರೆ ಮಾಡಿದ ಎಲ್ಲ ಭಕ್ಷ್ಯ ಭೋಜ್ಯಗಳನ್ನೂ ಸ್ವೀಕರಿಸುತ್ತಿದ್ದರು ಆದರೆ ತಾವು ಸ್ವಂತ ತಯಾರು ಮಾಡುವ ಊಟ ವಿಚಿತ್ರವಾಗಿರುತ್ತಿತ್ತು. ಒಂದೇ ಪಾತ್ರೆಯಲ್ಲಿ ಅಕ್ಕಿ ಬೇಳೆ ಹುಳಿ ಉಪ್ಪು ಕಾರ, ಬೇಕಾದರೆ ಸ್ವಲ್ಪ ತರಕಾರಿಯೋ ಸೊಪ್ಪನ್ನೋ ಹಾಕುತ್ತಿದ್ದುಂಟು. ಈ ಬಗೆಗೆ ನಾನು ಬರೆದ ಶ್ರೀ ಮಹಾನುಭಾವಿ ಚನ್ನಮಲ್ಲಿಕಾರ್ಜುನ ಗ್ರಂಥದಲ್ಲಿ ಪೂರ್ಣ ವಿವರಿಸಿದ್ದೇನೆ. ಚನ್ನಮಲ್ಲಪ್ಪನವರನ್ನು ಕಳಿಸಿ ನಾನು ಊಟ ಮಾಡಿಬಂದೆ. ನನ್ನೊಡನೆ ಸ್ವಲ್ಪ ಹೊತ್ತು ಮಾತನಾಡಿ ಬಸವನಾಳರೂ, ದೇವೀರಪ್ಪನವರೂ, ಮಲ್ಲಾಬಾದಿ ವೀರಭದ್ರಪ್ಪನವರೂ ಹೊರಟು ಹೋಗುತ್ತ ಹೋಗುವಾಗ ಪುನಃ "ಧಾರವಾಡಕ್ಕೆ ಬರುವುದನ್ನು ಮರೆಯಬೇಡಪ್ಪ, ನಿಮ್ಮಂಥವರನ್ನು ನಾವು ಮುಂದೆ ಬಿಡಬೇಕಾಗಿದೆ. ನಮ್ಮ ಕಾಲ ಮುಗಿಯಿತು. ಇನ್ನು ನೀವೆಲ್ಲ ತಯಾರಾಗಬೇಕು. ನಿಮಗೆಲ್ಲ ವೇದಿಕೆಗಳಿಗೆ ತರುವ ಈ ಕೆಲಸವನ್ನು ನಮ್ಮಂಥವರು ಮಾಡಬೇಕು ಅಲ್ಲವೇ!" ಎಂದು ನಗುನಗುತ್ತ ಅಡಿಕೆ-ಎಲೆ ಜಗಿಯುತ್ತ ಹೋದರು. ಬಸವನಾಳರ ಮತ್ತು ದೇವೀರಪ್ಪನವರ ಪರಿಚಯ ಹೀಗೆ ನನಗೆ ಆಯಿತು. ಮಲ್ಲಾಬಾದಿಯವರ ಪರಿಚಯ ಬಹು ದಿನದಿಂದ ಇತ್ತು. ದೇವೀರಪ್ಪನವರು 1988ರಲ್ಲಿ ಲಿಂಗೈಕ್ಯರಾಗುವವರೆಗೂ ನನ್ನೊಡನೆ ಬಹಳ ವಿಶ್ವಾಸವಿಟ್ಟುಕೊಂಡೇ ಇದ್ದರು. 1967ರಲ್ಲಿ ಅವರು ಬೆಂಗಳೂರಿನಲ್ಲಿಯೇ ವಾಸ್ತವ್ಯ ಹೂಡಿದ ಮೇಲಂತೂ ದಿನದಿನವೂ ಇಬ್ಬರೂ ಸಂಧಿಸುತ್ತಿದ್ದೆವು. ಇಬ್ಬರೂ ಸೇರಿ "ಷಟ್‌ಸ್ಥಲವಲ್ಲಭ", "ಮಹಾನುಭಾವಿ ಚನ್ನಮಲ್ಲಿಕಾರ್ಜುನರು" ಎಂಬ ಪುಸ್ತಕಗಳನ್ನು

ಸಂಪಾದಿಸಿದೆವು. ಅವರ ಎಲ್ಲ ಹಳೆಯ ಪ್ರಕಟಣೆಗಳನ್ನೂ ಬೆಂಗಳೂರಿನಲ್ಲಿ ಪರಿಷ್ಕೃತಗೊಳಿಸಿ ಮುದ್ರಿಸುವ ಕಾಲದಲ್ಲಿ ಎಲ್ಲ ವಿಷಯದಲ್ಲೂ ಸಲಹೆ-ಸಹಕಾರ ಪಡೆಯುತ್ತಿದ್ದರು. ಬಹು ಆತ್ಮೀಯತೆಯಿಂದ 21 ವರ್ಷಕಾಲ ಇಲ್ಲಿಯೂ ಬಾಳಿದೆವು.

### *ಶ್ರೀ ಗೌರೀಶಂಕರಸ್ವಾಮಿಗಳೊಡನಾಟ*

ಶ್ರೀ ಗೌರೀಶಂಕರಸ್ವಾಮಿಗಳು ಬಾಲ್ಯದಲ್ಲಿಯೇ ಮೈಸೂರಿನ ಚಾಮುಂಡಿ ಬೆಟ್ಟದ ತಪ್ಪಲು ಪ್ರದೇಶದಲ್ಲಿರುವ ಅರಮನೆಯ ಆಡಳಿತಕ್ಕೊಳಪಟ್ಟ 'ಅರಮನೆ ಪಂಚ ಗವಿಮಠ' ಎಂಬ ಹೆಸರಿನ ಮಠಕ್ಕೆ ಸ್ವಾಮಿಗಳಾಗಿ, ಕಾಶಿಗೆ ವಿದ್ಯಾಭ್ಯಾಸಕ್ಕೆ ಹೋಗಿ ಅಲ್ಲಿ ಅಖಂಡ ಮೂವತ್ತುಮೂರು ವರ್ಷಗಳು ವಿದ್ಯಾಭ್ಯಾಸ ಮಾಡಿ ಅಪಾರ ಪಾಂಡಿತ್ಯವನ್ನು ಕನ್ನಡ-ಸಂಸ್ಕೃತ-ಇಂಗ್ಲೀಷ್ ಭಾಷೆಗಳಲ್ಲಿ ಪಡೆದು 1946ರಲ್ಲಿ ಮೈಸೂರಿಗೆ ಬಂದಿದ್ದರು. ಅವರು ಮೈಸೂರಿಗೆ ಬಂದಾಗ ಅದ್ಭುತ ಸ್ವಾಗತದಿಂದ ಮೈಸೂರಿನ ಜನತೆ ಬರಮಾಡಿಕೊಂಡಿತು. ಅವರು ಬನಾರಸದಲ್ಲಿ ಆರು ಆಚಾರ್ಯ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದ್ದರು. ಸಂಸ್ಕೃತದಲ್ಲಿ ಅವರು ಭಾಷಣಕ್ಕೆ ನಿಂತರೆ ತಾರ್ಕಿಕಶೈಲಿಯಲ್ಲಿ ನಿರರ್ಗಳವಾಗಿ ಮಾತನಾಡುವ ಅವರ ವಿದ್ವತ್ಪ್ರತಿಭೆಗೆ ಸಭಿಕರು ಕಣ್ ಕಣ್ ಬಿಡುವಂತಾಗುತ್ತಿತ್ತು. ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ದೊಡ್ಡ ದೊಡ್ಡ ವಿದ್ವಾಂಸರು ಅವರ ಭಾಷಣದ ಶೈಲಿಗೆ, ಪ್ರಯೋಗಕ್ಕೆ, ಶಾಸ್ತ್ರಜ್ಞಾನಕ್ಕೆ ತಲೆದೂಗಿ ಹೋಗುತ್ತಿದ್ದರು. ಅಲ್ಲಿ ಬಂಕಾಪುರದ ಯಜ್ಞೇಶ್ವರ ಶಾಸ್ತ್ರಿ ಎಂಬ ವಿದ್ವಾಂಸರು ನನ್ನನ್ನೇ....... ನಮ್ಮೂರಿನ ಪಕ್ಕದವರೇ ಆದ್ದರಿಂದ ನನ್ನಲ್ಲಿ ಬಹು ಆತ್ಮೀಯತೆಯಿಂದ ವರ್ತಿಸುತ್ತಿದ್ದ ಅವರು ಗೌರೀಶಂಕರಸ್ವಾಮಿಗಳವರ ಭಾಷಣದ ಬಗೆಗೆ "ನಾನು ಇಂಥ ವಿದ್ವಾಂಸರು ಹಿಂದಿನ ಕಾಲದಲ್ಲಿ ಇದ್ದಾರೆಂದು ಕೇಳಿ ತಿಳಿದಿದ್ದೆ. ಈಗ ವಿದ್ವತ್ಪ್ರತಿಭೆಗಳು ಇಷ್ಟೊಂದು ಇಲ್ಲ ಎಂಬ ಒಂದು ಸಂಶಯವನ್ನು ಇವರನ್ನು ನೋಡಿಯೇ ಕಳೆದುಕೊಂಡೆ. ಇಷ್ಟೊಂದು ಘನಪಾಂಡಿತ್ಯದ ಅಪೂರ್ವ ವ್ಯಕ್ತಿಯನ್ನು ಕಂಡದ್ದೇ ಒಂದು ಸುಯೋಗವೆಂದು" ನನ್ನೆದುರಿಗೆ ವರ್ಣನೆ ಮಾಡುತ್ತ ಸಂಸ್ಕೃತದಲ್ಲಿ ಈ ಮಟ್ಟದಲ್ಲಿ ಮಾತನಾಡುವವರನ್ನು ನಾನು ಇಂದಿಗೂ ನೋಡಿಲ್ಲ ಎಂದು ಉದ್ಗಾರ ತೆಗೆದರು. ಬಹುಶಃ ಅವರಿಗೆ ಜಗತ್ತಿನ ದರ್ಶನಗಳೆಲ್ಲಾ ಕರತಲಾಮಲಕವೆಂದೂ ತಿಳಿಸಿದರು. ಇದರ ಪ್ರತ್ಯಕ್ಷ ನಿದರ್ಶನವನ್ನು ನಾನೂ ಕಂಡೆ. ಒಮ್ಮೆ ಒಂದು ಸಭೆಯಲ್ಲಿ ವೀರಶೈವ ತತ್ವಶಾಸ್ತ್ರದ ಬಗೆಗೆ ಮಾತನಾಡುವಾಗ ಪ್ರಭುದೇವರ -

*ಬಿಳಿಯ ಮುಗಿಲ ಕರಿಯ ನಕ್ಷತ್ರದಲ್ಲಿ ಉರಿಯ ಅಂಕುರದೋರಿತ್ತು;*
*ಅದು ಹೊಸತಿಲ ಜ್ಯೋತಿಯಂತೆ ಮೂರು ಮತ್ತಾರಾಗಿ ಮೊಳಗಿ ಬೆಳಗಿತ್ತು:*
*ಅರಿದೊಡೆ ಘನ ಅರಿಯದಿರ್ದಡೆ ಘನಕ್ಕೆ ಘನ;*
*ಇವರರಿವ ಚೆನ್ನಬಸವಣ್ಣ ಬಲ್ಲ. ಬೆಸಗೊಂಬ ಬಾರಾ ಸಿದ್ಧರಾಮಯ್ಯ!*

- ಈ ಬೆಡಗಿನ ವಚನದ ವಾಕ್ಯಾರ್ಥ ಮಾಡುವಾಗ ಬಹುಶಃ ಭಾರತ ದರ್ಶನಗಳಲ್ಲಿ, ಜಗತ್ತಿನ ಪ್ರಮುಖ ದರ್ಶನಗಳ ತೌಲನಿಕ ಅಧ್ಯಯನದ ವಿಶಿಷ್ಟ ವಾಣಿಯಲ್ಲಿ ನಾಲ್ಕುವರೆ ತಾಸು ಸಿದ್ಧರಾಮ ಸಂಪಾದನೆಯ ಬಗೆಗೆ ಮಾತನಾಡಿದ ಮಾತುಗಳು ಇಂದೂ ನನ್ನ ಕಿವಿಯಲ್ಲಿ ಮಾರ್ದನಿಸುತ್ತಿವೆ.

ಬನಾರಸದಲ್ಲಿ ಇವರು ಇದ್ದ ಮನೆಯ ಹತ್ತಿರವೇ ಇದ್ದ ಭಗವಾನ್ ದಾಸರೆಂಬುವರ ಮನೆಯಲ್ಲಿ ಗಾಂಧಿಯವರು ಬನಾರಸಿಗೆ ಬಂದಾಗಲೆಲ್ಲ ಉಳಿದುಕೊಳ್ಳುತ್ತಿದ್ದರಂತೆ. ಭಗವಾನ್ ದಾಸರಿಗೂ ಗೌರೀಶಂಕರ ಸ್ವಾಮಿಗಳಿಗೂ ಅತ್ಯಂತ ವಿಶ್ವಾಸ. ಶ್ರೀದಾಸರು ಇವರ ವಿದ್ವತ್ತಿಗೆ, ಶಾಸ್ತ್ರಜ್ಞಾನಕ್ಕೆ ಬಹಳ ಮೆಚ್ಚಿಕೊಂಡು ಅನೇಕ ವೇಳೆ ಇವರಿಂದಲೇ ಸಂಶಯ ನಿವೃತ್ತಿ ಮಾಡಿಕೊಳ್ಳುತ್ತಿದ್ದರಂತೆ. ಅವರ ಮೂಲಕ ಗಾಂಧಿಯವರ ಪರಿಚಯ ಮಾಡಿಕೊಂಡಿದ್ದರು. ಗಾಂಧಿಯವರಿಗೆ ಅನೇಕ ವೇಳೆ ಭಾರತೀಯ ತತ್ವಶಾಸ್ತ್ರದಲ್ಲಿ ಉಂಟಾಗುತ್ತಿದ್ದ ಸಂಶಯಗಳನ್ನು ನಿವಾರಣೆ ಮಾಡುತ್ತಿದ್ದರು. ಆಚಾರ್ಯ ಕೃಪಲಾನಿಯವರಂತೂ ಗೌರೀಶಂಕರ ಸ್ವಾಮಿಗಳನ್ನು ಬಹಳ ಪ್ರೀತಿಸುತ್ತಿದ್ದು ಅವರು ಕರ್ನಾಟಕ ಪ್ರವಾಸಕ್ಕೆ ಬಂದಾಗಲೆಲ್ಲ ಇವರನ್ನು ಕಂಡು ಹೋಗುತ್ತಿದ್ದರು. ಇಂಥ ಘನ ವಿದ್ವಾಂಸರ ಪರಿಚಯ ಶ್ರೀ ಸಿದ್ಧಗಂಗಾ ಶ್ರೀಗಳವರ ಮೂಲಕ ನನಗೆ ಆಯಿತು. ಕಾರಣವಾಗಿ ನನ್ನಲ್ಲಿ ಬಹು ವಾತ್ಸಲ್ಯವಿಟ್ಟುಕೊಂಡಿದ್ದರು. "ಸತ್ಸಂಗಜಾನಿ ನಿಧನಾನ್ಯಪಿ ತಾರಯಂತೆ" ಎಂಬ ಸುಭಾಷಿತ ಸಂಸ್ಕೃತದಲ್ಲಿ ಉಂಟು. ಇವರ ಸಂಸರ್ಗ ನನ್ನನ್ನು ಉದ್ಧಾರ ಮಾಡಿತೆಂದು ಭಾವಿಸಿದ್ದೇನೆ. ನಾನು ಮೈಸೂರಿನಲ್ಲಿರುವಷ್ಟು ಕಾಲ ಅವರ ಹತ್ತಿರ ಹೋಗುತ್ತಿದ್ದೆ. ಅರ್ಧ ಘಂಟೆ ಮುಕ್ಕಾಲು ಘಂಟೆಯವರೆಗೆ ಲೋಕಾಭಿರಾಮವಾಗಿ ಮಾತನಾಡುತ್ತಿದ್ದರು. ನನ್ನ ಪಠ್ಯಪುಸ್ತಕಗಳಾವುವೆಂದು ತಿಳಿದು ಅವುಗಳ ಮೇಲೆ ಪ್ರಶ್ನೆಯನ್ನು ಹಾಕುತ್ತಿದ್ದರು. ನನ್ನ ಅಸಮರ್ಪಕ ಉತ್ತರದಿಂದ ತೃಪ್ತರಾಗದೆ ಅದರ ಬಗೆಗೆ ನನಗೆ ಅಜೀರ್ಣವಾಗುವಷ್ಟು ವಿವರಣೆ ಕೊಡುತ್ತಿದ್ದರು.

ಒಮ್ಮೆ ರೂಪಕಾಲಂಕಾರದ ನಿಷ್ಕೃಷ್ಟಲಕ್ಷಣ ಹೇಳು ಎಂದರು. ನಿಷ್ಕೃಷ್ಟಲಕ್ಷಣವೇನೆಂದು ನನಗೆ ಗೊತ್ತಿದ್ದರೆ ತಾನೆ ನಾನು ಹೇಳುವುದು? ತಡಬಡಿಸುತ್ತ "ವಿಷಯ್ಯಭೇದ ತಾದ್ರೂಪ್ಯರೂಪಕಂ ವಿಷಯಸ್ಯಯತ್......" ಎನ್ನುತ್ತಿದ್ದಂತೆ "ಅದು ಬೇಡಪ್ಪ! ಅದು ಚಂದ್ರಾಲೋಕದಲ್ಲಿನ ರೂಪಕಾಲಂಕಾರದ ಲಕ್ಷಣ ಸೂತ್ರವಾಯಿತು. ....ನಿಮಗೆ ಪಠ್ಯಪುಸ್ತಕವಾದರೆ ಅದರಲ್ಲಿ ವ್ಯಾಖ್ಯಾನದಲ್ಲಿ ನಿಷ್ಕೃಷ್ಟಲಕ್ಷಣವಿದೆಯಲ್ಲಾ! ಅದನ್ನು ಓದಿಲ್ಲವೆ?" ಎಂದುಬಿಟ್ಟರು. ನಾನು 'ಇಲ್ಲ' ಎಂದೆ. "ಅದನ್ನು ಸರಿಯಾಗಿ ತಿಳಿದುಕೊಳ್ಳದಿದ್ದರೆ ಅಲಂಕಾರದಲ್ಲಿ ನೀವೆಲ್ಲ ಪಂಡಿತರೆಂದು ಯಾರಿಂದ ಕರೆಸಿಕೊಳ್ಳುತ್ತೀರಿ" ಎಂದುಬಿಟ್ಟರು. ಸಾಕಷ್ಟು ಸಲಿಗೆ ಇದ್ದುದರಿಂದ ನಗುತ್ತ "ಏನೂ ಗೊತ್ತಿಲ್ಲದವರ ಕಡೆಯಿಂದ" ಎಂದುಬಿಟ್ಟೆ. ನಗತೊಡಗಿದರು. ಅನಂತರ ಅವರೇ "ಅವಗೀತಬಿಂಬ ವಿಶಿಷ್ಟವಿಷಯ ಧರ್ಮಿಕಾಹಾರ್ಯಾರೋಪ ನಿಶ್ಚಯ ವಿಷಯೀಭೂತ ಉಪಮಾನ ಶಾದ್ರೂಪ್ಯಾನ್ಯಕರದ್ರೂಪಕಮಿತಿತುನಿಷ್ಕರ್ಷಃ" ಎಂದುಬಿಟ್ಟರು. ಅದರ ತಳಬುಡ ನನಗೆ ಅರ್ಥವಾಗಲಿಲ್ಲ. ಅನಂತರ ಅರ್ಧ ಘಂಟೆ ವಾಕ್ಯಾರ್ಥ ಮಾಡಿ ಸೂತ್ರದಲ್ಲಿ ಸಮನ್ವಯಗೊಳಿಸಿದಾಗ ನನ್ನ ತಲೆ ಚಿಟ್ಟೆಂದು ಹೋಯಿತು. ನಾನು ಹೀಗೆ ದಳಪ್ರಯೋಜನವಿಡಿದು ಅಭ್ಯಾಸ ಮಾಡಿದವನಲ್ಲ, ಅಂಥ ಪಾಠವನ್ನೂ ನಮಗೆ ಉಪಾಧ್ಯಾಯರು ಹೇಳಿರಲೂ ಇಲ್ಲ. ಸಾಮಾನ್ಯವಾಗಿ ರೂಪಕವೆಂದರೇನು? ಅದರಲ್ಲಿ ಎಷ್ಟು ಪ್ರಕಾರ? ಅವುಗಳ ಉದಾಹರಣೆಗಳಾವುವು? ಎಂದು ತಿಳಿದು ಪರೀಕ್ಷೆಯ ದೃಷ್ಟಿಯಿಂದ ಬಾಯಿಪಾಠ ಮಾಡಿಕೊಂಡಿರುವರು. ಅಲ್ಲದೆ ನಮಗಿರುವ ಹದಿನೈದು ಪೇಪರ್‌ಗಳಲ್ಲಿ ಎಲ್ಲರನ್ನೂ ಕೂಲಂಕಷವಾಗಿ ಎರಡು ವರ್ಷಗಳಲ್ಲಿ ತಿಳಿದುಕೊಳ್ಳುವ ಸಮಯವಾದರೂ ಎಲ್ಲಿ? ನನ್ನ ಈ ವಾದವನ್ನು ಒಪ್ಪಿದರಾದರೂ ಒಂದಾನೊಂದು ಅಲಂಕಾರದ ಪೂರ್ಣಸ್ವರೂಪ

ಅರ್ಥವಾಗಬೇಕಾದರೆ ದಳಪ್ರಯೋಜನವೊಂದೆ, ಅದರ ಸೂಕ್ಷ್ಮವನ್ನು ಗ್ರಹಿಸಬೇಕಾದುದು ಮುಖ್ಯವೆಂದು ಇನ್ನಿತರ ಅನೇಕ ಅಲಂಕಾರಗಳ ನಿಷ್ಕೃಷ್ಟ ಲಕ್ಷಣಗಳ ಪ್ರಸ್ತಾಪವೆತ್ತಿ ತಿಳಿಸಿದರು. ಆದರೆ ನನಗೇನೂ ಅದು ತಿಳಿಯಲಿಲ್ಲ; ಇಂದಿಗೂ ತಿಳಿಯುತ್ತಿಲ್ಲ. ಇಂಥ ಘನಪಂಡಿತರ ಸಹವಾಸದೊಡನೆ ಕೆಲಕಾಲ ಕಳೆಯುವ ಸೌಭಾಗ್ಯವುಂಟಾದದ್ದು ನನ್ನ ಪುಣ್ಯ ವಿಶೇಷವೆಂದು ಇಂದಿಗೂ ಭಾವಿಸುತ್ತಿದ್ದೇನೆ.

ಒಂದು ರಜೆಯ ದಿನ ಅವರನ್ನು ಕಾಣಲು ಹೋದೆ. ಆಗ ಅವರು ತಮ್ಮ ಗವಿಮಠದಲ್ಲಿರದೆ ಚಾಮುಂಡಿ ದೇವಾಲಯದ ಸಮೀಪದ ಗಿಡಮರಬಳ್ಳಿಗಳಿಂದ ಮನೋಹರವಾಗಿ ರಾರಾಜಿಸುತ್ತಿದ್ದ ಬಂಗಲೆಯೊಂದರಲ್ಲಿದ್ದುಕೊಂಡು ಗೀತಾಭಾಷ್ಯವನ್ನು ಶಕ್ತಿ ವಿಶಿಷ್ಟಾದ್ವೈತಪರವಾಗಿ ಬರೆಯುವ ಕಾರ್ಯದಲ್ಲಿ ತೊಡಗಿದ್ದರು. ಅರಮನೆಯವರು ಅವರ ಬರವಣಿಗೆಯ ಕೆಲಸಕ್ಕೆ ಮಠದಲ್ಲಿದ್ದರೆ ಬರುವ ಹೋಗುವ ಜನಗಳ ಕಾರಣವಾಗಿ ಭಂಗ ಬಂದೀತೆಂದು ಭಾವಿಸಿ ಸ್ವಾಮಿಗಳ ಇಚ್ಛೆಯ ಮೇರೆಗೆ ಆ ಬಂಗಲೆಯನ್ನು ಸುಸಜ್ಜಿತಗೊಳಿಸಿಕೊಟ್ಟಿದ್ದರು. ನಾನು ಅಲ್ಲಿಗೆ ಹೋದೆ. ನನ್ನನ್ನು ದೂರದಿಂದಲೇ ನೋಡಿ "ಬಾರಯ್ಯ ಅಣ್ಣಾ, ಒಳ್ಳೆ ಹೊತ್ತಿಗೇ ಬಂದೆ! ಬಾ, ಕುಳಿತುಕೋ! ನನಗೂ ಇಷ್ಟು ಹೊತ್ತು ಬರವಣಿಗೆ ಮಾಡಿ ತಲೆಕೆಟ್ಟಿತ್ತು. ಸ್ವಲ್ಪ ಹೊತ್ತು ವಿನೋದವಾಗಿ ಕಾಲ ಕಳೆಯೋಣ. ನೋಡು ಈ ದಿನ 16ನೇ ಅಧ್ಯಾಯ, ಅಧ್ಯಾಯದ ಪರಮಾತ್ಮನನ್ನು ಅರಿತು ಸೇವಿಸುವುದಕ್ಕೆ ಅಧಿಕಾರಿಗಳು ಅನಧಿಕಾರಿಗಳಾರು ಎಂಬ ವಿಷಯದ ಮೇಲೆ ಭಾಷ್ಯ ಪ್ರಾರಂಭಿಸಿದ್ದೇನೆ. ಇಲ್ಲಿಯವರೆಗೆ ಬಂದಿದ್ದೇನೆ. ಕೇಳು ಓದುತ್ತೇನೆ ಎಂದು ಪ್ರಾರಂಭಿಸಿದರು. 'ತದವಚ್ಛೇದಾವಚ್ಛಿನ್ನತ್ವ' ವೆನ್ನುವ ತಾರ್ಕಿಕ ಶೈಲಿಯಲ್ಲಿ ತಡಬಡಿಲ್ಲದೆ ಓದುತ್ತ ಓದುತ್ತ ಪದೇ ಪದೇ ನನ್ನ ಮುಖ ನೋಡುತ್ತ ಬೆಪ್ಪಾಗಿ ಕುಳಿತುಕೊಂಡಿದ್ದ ನನ್ನ ಮುಖಭಾವ ಭಂಗಿಗೆ ನಸುನಗೆ ನಗುತ್ತ ಓದುತ್ತಲೇ ಇದ್ದರು. ನನಗೂ ತಲೆ ಚಿಟ್ಟೆಂದು ಹೋಗಿತ್ತು. "ನೋಡಯ್ಯಾ ಅಣ್ಣಾ, ಭಾಷ್ಯಕಾರರೆಲ್ಲ ತಮ್ಮ ತಮ್ಮ ಭಾಷ್ಯಗಳಲ್ಲಿ ಗೀತೆಯ ಅರ್ಥ ಮಾಡುವಾಗ ಬ್ರಹ್ಮಸೂತ್ರಾರ್ಥ ಮಾಡುವಾಗಲಾಯಿತು ತಮ್ಮ ತಮ್ಮ ಸಿದ್ಧಾಂತಗಳಿಗನುಗುಣವಾಗಿಯೇ ಎಳೆದೆಳೆದು ಅರ್ಥ ಮಾಡುತ್ತ ಅನ್ಯ ಸಿದ್ಧಾಂತಗಳನ್ನು ಸ್ವಧರ್ಮೋತ್ಕೃಷ್ಟತೆಯ ವೈಶಿಷ್ಟ್ಯವನ್ನು ಎತ್ತಿ ತೋರಿಸುವುದಕ್ಕಾಗಿ ಖಂಡನ ಮಂಡನ ಮಾಡುವುದುಂಟು. ಇಲ್ಲಿ ನಾನು ಶಿವಾದ್ವೈತ ಕೇವಲಾದ್ವೈತಕ್ಕಿಂತ ಯಾವ ಯಾವ ಕಾರಣಗಳಿಂದ ಶ್ರೇಷ್ಠವೆಂದು ಹೇಳುವ ನಿಮಿತ್ತ ಶಂಕರಾಚಾರ್ಯರ ಭಾಷ್ಯದ ಅಭಿಪ್ರಾಯಗಳನ್ನು ಖಂಡಿಸಿದ್ದೇನೆ ನೋಡು" ಎಂದು ಪುನಃ ಹಿಮಗಿರಿಯ ನಿರ್ಝರಗಳ ಭೋರ್ಗರೆವ ನಿನಾದದಂತೆ ದೀರ್ಘ ದೀರ್ಘತರ ಸಮಸ್ತ ಪದ ವಿಶಿಷ್ಟ ತಾರ್ಕಿಕ ಶೈಲಿಯ ಅಜಾಂಡ ಶಬ್ದಜಾಲಭರಿತ ವಾಕ್ಯಗಳು ಪುಂಖಾನುಪುಂಖವಾಗಿ ಹೊರಬರುತ್ತಿದ್ದವು. ನಾನು ಕಣ್ ಕಣ್ ಬಿಡುತ್ತ ತಡೆಯಲಾಗದೆ "ಬುದ್ಧಿ, ನನಗೇನೂ ಅರ್ಥವಾಗುತ್ತದೆಂದು ಇದನ್ನು ನನ್ನೆದುರಿಗೆ ಓದುತ್ತೀರಿ. ಇದುವರೆಗೆ ತಾವು ಓದಿದರ ತಳಬುಡ ಏನೇನೂ ನನಗೆ ಅರ್ಥವಾಗಲಿಲ್ಲ" ಎಂದುಬಿಟ್ಟೆ. ಅವರು ಓದುವುದನ್ನು ಬಿಟ್ಟು ಪಕಪಕ ನಗುತ್ತ "ನನಗೇನೂ ಅರ್ಥವಾಗಿಲ್ಲವೆಂದು ಹೇಳಬಹುದಾದರೂ ಅರ್ಥವಾಗಿದೆಯಲ್ಲ! ಅದೇ ಸಂತೋಷದ ಸಂಗತಿ. ಓದಿದ್ದನ್ನು ಕೇಳಿ, ಬಹಳ ಚೆನ್ನಾಗಿ ಬಂದಿದೆ. ಅರ್ಥ ಸ್ಫುಟವಾಗಿದೆ ಎಂದು ಅರ್ಥ ಗ್ರಹಿಸದೆಯೇ ಗ್ರಹಿಸಿದವರಂತೆ ಹೇಳುವ ಬೂಟಾಟಿಕೆಯ ಮಾತು ಹೇಳಲಿಲ್ಲವಲ್ಲಾ! ಅದೇ

ಸಂತೋಷದ ಸಂಗತಿ. ನೋಡಣ್ಣ, ನೀನು ಬಂದೆ. ಯೋಚಿಸುತ್ತ ಬಹಳ ಹೊತ್ತಿನಿಂದ ಕುಳಿತಿದ್ದ ನನ್ನ ಮನಸ್ಸಿಗೂ ಸ್ವಲ್ಪ ವಿರಾಮ ಬೇಕಾಗಿತ್ತು. ನಿನ್ನೊಡನೆ ಮಾತನಾಡುತ್ತ ಸ್ವಲ್ಪ ನಗುವುದಕ್ಕೆ ಅವಕಾಶ ಕಲ್ಪಿಸಿಕೊಂಡೆ. ಇಲ್ಲಿ ಇನ್ನೊಂದು ಮುಖ್ಯ ವಿಚಾರ ಗಮನಿಸಬೇಕು. ಏನನ್ನೇ ಬರೆಯಲಿ ಅದು ನಿರ್ದುಷ್ಟವಾಗಿರಬೇಕು. ನಿಷ್ಪೃಷ್ಟವಾಗಿರಬೇಕು. ಪುನಃ ಪುನಃ ಅದನ್ನು ಓದಿ ಓದಿ ಆಗಿರಬಹುದಾದ ತಪ್ಪುಗಳನ್ನು ತಿದ್ದಬೇಕು. ಭಾವಕ್ಕೆ ತಕ್ಕ ಭಾಷೆ ಬಳಕೆಯಾಗಿದೆಯೆ? ಉಚಿತಪದವು ಯೋಗವಾಗಿದೆಯೆ? ಎಂಬುವನ್ನು ಗಮನಿಸುವುದು ಬರವಣಿಗೆಗಾರನ ಜವಾಬ್ದಾರಿಯ ಕೆಲಸ. ಶಬ್ದಶಕ್ತಿ ಬಹು ದೊಡ್ಡದು, ನನ್ನ ಪದ ಪ್ರಯೋಗಗಳನ್ನು ಒರೆಗೆ ಹಚ್ಚುವ ವಿದ್ವಾಂಸರು ಮುಂದೆ ಹುಟ್ಟಬಹುದಲ್ಲ! ನೀನು ಭವಭೂತಿಯ ಉತ್ತರರಾಮಚರಿತೆ ಓದಿದ್ದೇನೆ ಅನ್ನುತ್ತೀಯೆ. "ಕಾಲೋದ್ಯಯಂ ನಿರವಧಿಃ ವಿಪುಲಾಚಪೃಥ್ವೀ" ಎಂದಿಲ್ಲವೆ? ಆತ ಮುಂದಿನ ಕಾಲದ ವಿದ್ವಾಂಸರು ನನ್ನ ಈ ಬರವಣಿಗೆಯನ್ನು ಓದಿ, ನನ್ನ ಅಭಿಪ್ರಾಯಗಳನ್ನು ಚೂರು ಚೂರು ಮಾಡಿ ಬಿಡಲಾರರೇ? ಆದ್ದರಿಂದ ನಾನು ನನ್ನ ಬರವಣಿಗೆಗಳನ್ನು ಪದೇ ಪದೇ ಓದಿ ನಾನೇ ತಿದ್ದುತ್ತಿರುತ್ತೇನೆ. ತಿದ್ದಲು, ತಪ್ಪು ಗಮನಿಸಲು ಅನ್ಯರ ಕೈಗೂ ಕೊಡಬಾರದು. ನೀನು ಬಂದೆ, ನಿನ್ನೆದುರಿಗೆ ಓದಿದೆ. ಒಂದೆರಡು ತಪ್ಪು ಸಿಕ್ಕವು. ಅದನ್ನು ತಿದ್ದಿದೆ. ನಿನಗೆ ಇದೆಲ್ಲ ತಿಳಿಯಲೆಂದೇ ನಾನು ಓದಿದೆನೆಂದೇನೂ ತಿಳಿಯಬೇಡ. ನನ್ನ ಮುಂದೆ ತಲೆಹಾಕುತ್ತ ಕುಳಿತವನೊಬ್ಬನಿದ್ದಾನೆಂದು ಕಲ್ಪಿಸಿಕೊಂಡೇ ನಾನು ಓದುತ್ತಿದ್ದೆನಷ್ಟೇ. ಹೋಗಲಿ ಬಿಡು! ಏನು ನಿನ್ನ ಅಭ್ಯಾಸ ಚೆನ್ನಾಗಿ ನಡೆದಿದೆಯೇ?" ಇತ್ಯಾದಿ ಸ್ವಲ್ಪ ಹೊತ್ತು ಸರಸ ಸಂಭಾಷಣೆಗೆ ತೊಡಗಿ, ಯೋಗಕ್ಷೇಮ ವಿಚಾರಿಸಿ, "ಇಗೋ ಅರಮನೆಯಿಂದ ಮಠಕ್ಕೆಂದು ಏನೇನೋ ಕಳಿಸಿದ್ದಾರೆ. ತಿನ್ನುವವರು ಇಲ್ಲಿ ಯಾರಿದ್ದಾರೆಂದು ಕಳಿಸುವರೋ ಏನೋ! ಈ ಸಂಬಾರ ಪುಡಿ ಇಷ್ಟೊಂದು ಬಿದ್ದಿದೆ. ನೀನು ಹೇಗಿದ್ದರೂ ಮನೆ ಮಾಡಿ ಗೃಹಸ್ಥನಾಗಿದ್ದೀಯೆ. ಇದನ್ನು ತೆಗೆದುಕೊಂಡು ಹೋಗೆಂ"ದು ಒಂದು ದೊಡ್ಡ ಪೊಟ್ಟಣ ಸಂಬಾರ ಪುಡಿಯನ್ನು ನಾಲ್ಕೈದು ಕೆ.ಜಿ.ಯಷ್ಟು ಆಲೂಗಡ್ಡೆಯನ್ನು ಒಂದು ಕೈಚೀಲ ಕೊಟ್ಟು ತುಂಬಿಕೊಂಡು ಹೋಗೆಂದರು. ಹಾಗೆ ಮಾಡಿದೆ. ಇದು 1949ನೆಯ ಇಸವಿಯಲ್ಲಿ ನಡೆದ ಘಟನೆ.

ಹೀಗೆ ಗೌರೀಶಂಕರ ಸ್ವಾಮಿಗಳವರನ್ನು ಆಗಾಗ ಕಂಡು ಅವರೊಡನೆ ಮಾತನಾಡಿ ಬರುವ ಭಾಗ್ಯ ನನ್ನದಾಗಿತ್ತು. ಒಮ್ಮೆ ಹೋದಾಗ ಮಹಾದೇವಿಯಕ್ಕನ ಬಗೆಗೆ ಅವರು ಬರೆದಿದ್ದ ಚಂಪೂಕಾವ್ಯವನ್ನು ಓದಿದ್ದರು. ಅದು ಮಾತ್ರ ನನಗೆ ತಿಳಿಯುತ್ತಿತ್ತಾಗಿ ಅದರ ಅನೇಕ ವರ್ಣನಾ ಭಾಗಗಳನ್ನು ಕೇಳಿ ಬೆಕ್ಕಸಬೆರಗಾದೆ. ನನ್ನ ಪಂಡಿತ ಪರೀಕ್ಷೆ ಮುಗಿದು ಫಲಿತಾಂಶ ಬಂದ ಮೇಲೆ ಅವರನ್ನು ಕಂಡು "ನಾನು ಮೊದಲ ದರ್ಜೆಯಲ್ಲಿ ಎರಡನೇ ರ್‍ಯಾಂಕ್ ಗಳಿಸಿದೆ"ನೆಂದು ಹೇಳಿದಾಗ ಮೊದಲ ರ್‍ಯಾಂಕನ್ನೇಕೆ ಪಡೆಯಲಿಲ್ಲ ಎನ್ನುತ್ತ "ಅಯ್ಯಾ ನೋಡು, ನಿನಗೆ ಈ ಪಂಡಿತ ಪರೀಕ್ಷೆಗೆ ಓದಲು ಅರ್ಹತೆ ಬಂತು. ಇನ್ನು ಮುಂದೆ ಇದುವರೆಗೆ ನೀನು ಓದಿದ ಶಾಸ್ತ್ರ ಗ್ರಂಥಗಳನ್ನು ಪದೇ ಪದೇ ಓದು, ಓದಿದ್ದನ್ನೇ ಓದು. ದನಗಳು ಅಡವಿಯಲ್ಲಿ ಮೇಯುವುದಕ್ಕೆ ಹೋಗಿ ಹುಲ್ಲು ಸೊಪ್ಪನ್ನು ಬಾಯಿಂದ ಕರೆಕರೆದು ಮುದ್ದೆಮಾಡಿ ನುಂಗಿದಂತೆ ನಿನ್ನ ಇದುವರೆಗಿನ ಓದು. ಅವು ಮನೆಗೆ ಹೋಗಿ ಮಲಗಿ ಜಬಕಜಬಡಾಗಿ ನುಂಗಿದ್ದನ್ನು ಪುನಃ ಬಾಯಿಗೆ ತಂದು ಮೆಲುಕುಹಾಕಿ ಸಣ್ಣನಾಗಿಸಿ ನುಂಗಿ. ರಕ್ತಗತ ಮಾಡಿಕೊಳ್ಳುತ್ತವೆ. ಹಾಗೆ ಶಾಸ್ತ್ರಗ್ರಂಥಗಳನ್ನು ಹೇಗೆ ಹೇಗೋ ಜಗಿದು ನುಂಗಿದ

ನೀನು ಪುನಃ ಓದಿ ಒರೆಗೆ ಹಚ್ಚಿ ಶಾಸ್ತ್ರಜ್ಞಾನವನ್ನು ರಕ್ತಗತ ಮಾಡಿಕೋ" ಎಂದು ಹೇಳಿ ಆಶೀರ್ವದಿಸಿ ಕಳಿಸಿಕೊಟ್ಟರು. ಅವರ ಆಶೀರ್ವಾದದಂತೆ ಇಂದಿಗೂ ನಾನು ಓದಿದ ಗ್ರಂಥಗಳನ್ನು ಪದೇಪದೇ ಅಭ್ಯಾಸ ಮಾಡುತ್ತಲೇ ಇದ್ದೇನೆ. ಜೊತೆಗೆ ಬೇರೆಬೇರೆ ಆಧಾರ ಗ್ರಂಥಗಳನ್ನೂ ಅಭ್ಯಾಸ ಮಾಡುತ್ತಲೇ ಇದ್ದೇನೆ. ಅದರ ಪ್ರಯೋಜನ ಅಷ್ಟಿಷ್ಟೆಂದು ಹೇಳಲಾರೆ. ಓದಿದಂತೆಲ್ಲ ಹೊಸ ಹೊಸ ಅನುಭವದ ಆವಿಷ್ಕಾರ ನನ್ನಲ್ಲಿ ಆಗುತ್ತಲೇ ಇರುತ್ತದೆ. ಅಪಾರ ಜ್ಞಾನರಾಶಿಯ ಅಗಾಧ ಅನುಭವದ ಬೆಳಕು ನನ್ನ ಕಣ್ಣನ್ನು ಕೋರೈಸುತ್ತಲೇ ಇದೆ. ಈ ಜ್ಞಾನನಿಧಿ ಗೌರೀಶಂಕರ ಸ್ವಾಮಿಗಳು ಮುಂದೆ ಬಹುದಿನ ಇರಲಿಲ್ಲ. ನಾನು ತಿಪಟೂರು ಹೈಸ್ಕೂಲಿಗೆ ಉಪಾಧ್ಯಾಯನಾಗಿ ಹೋದಾಗ ಒಮ್ಮಿಂದೊಮ್ಮೆಗೆ ಗೌರೀಶಂಕರ ಸ್ವಾಮಿಗಳು ಲಿಂಗೈಕ್ಯರಾದರೆಂಬ ಪತ್ರಿಕೆಗಳಲ್ಲಿನ ವರದಿಯನ್ನು ಕಂಡು ಕಣ್ಣೀರು ಸುರಿಸುತ್ತ ಮೈಸೂರಿಗೆ ಓಡಿದೆ. ಅಷ್ಟರಲ್ಲಿ ಅವರ ಸಮಾಧಿಯ ಪೂಜೆ ನಡೆದಿತ್ತು. ಅವರು ಲಿಂಗೈಕ್ಯರಾದಾಗ ಅವರಿಗೆ ಕೇವಲ ಐವತ್ತು - ಐವತ್ತೆರಡು ವರ್ಷ, ಅಷ್ಟೆ.

ಅವರಿಗೆ ಕರುಳಿನ ಕ್ಯಾನ್ಸರ್ ಬೇನೆ ಬಂತು. ಅದಕ್ಕಾಗಿ ಮೈಸೂರು ಅರಮನೆಯವರು ವೆಲ್ಲೂರು ಆಸ್ಪತ್ರೆಗೆ ಒಯ್ದರು. ನೀರಿನಂತೆ ಧನವ್ಯಯ ಮಾಡಿದರು. ಆದರೂ ಅವರ ಭೌತಶರೀರವನ್ನು ಉಳಿಸಲಾಗಲಿಲ್ಲ. ಅವರು ಬರೆದ ಗ್ರಂಥಗಳಲ್ಲಿ ಅಕ್ಕಮಹಾದೇವಿ ಚಂಪೂಚರಿತದ ಅರ್ಧ ಭಾಗದ ವಿನಾ ಒಂದೂ ಉಳಿಯಲಿಲ್ಲ. ಎಲ್ಲಿ ಮಂಗಮಾಯವಾದುವೋ ದೇವರೇ ಬಲ್ಲ. ಗೀತಾ ಭಾಷ್ಯವೂ ಸಿಗಲಿಲ್ಲ. ಅವೆಲ್ಲ ಏನಾದುವೆಂಬುದು ಇಂದಿಗೂ ಚಿದಂಬರ ರಹಸ್ಯವಾಗಿಯೇ ಉಳಿದಿದೆ. ಮೈಸೂರಿನಲ್ಲಿ ತಿಪ್ಪೇರುದ್ರಸ್ವಾಮಿಯವರ ಸಂಪಾದಕತ್ವದಲ್ಲಿ ಹೊರಬಂದ ಸುತ್ತೂರು ಶ್ರೀಗಳವರ ಸಂಭಾವನಾ ಗ್ರಂಥ 'ಪ್ರಸಾದ'ಕ್ಕೆಂದು ನಾನೇ ಕೊಟ್ಟ ಮೊದಲ ಲೇಖನವನ್ನು ಇವರ ಬಗೆಗೆ ಬರೆದೆ. ಅಲ್ಲಿ ಅವರ ಬಗೆಗೆ ಒಂದು ಸ್ಥೂಲ ಪರಿಚಯವನ್ನು, ಗದಗಿನ ತೋಂಟದಾರ್ಯ ಶ್ರೀಗಳು ಪ್ರಕಟಿಸಿದ ಗೌರೀಶಂಕರರು ಗ್ರಂಥದಿಂದಲೂ ಇವರ ಬಗೆಗೆ ತಿಳಿಯಬಹುದು.

### *ಮೈಸೂರಿನಿಂದ ಹಿರೇಕಾಂಶಿಗೆ ಕರೆಸಿಕೊಂಡುದು*

ಮೈಸೂರಿನಲ್ಲಿ ನಾನು ವಿದ್ಯಾಭ್ಯಾಸ ಮಾಡುವ ಕಾಲದಲ್ಲಿ ಒಮ್ಮೆ ಆರ್ಥಿಕ ದುಃಸ್ಥಿತಿಗೆ ಒಳಗಾಗಿಬಿಟ್ಟೆ. ಅದಕ್ಕೆ ಕಾರಣಗಳೂ ಅನೇಕ. ನನಗೆ ಆಗ ಬರುತ್ತಿದ್ದ ಸಂಬಳ ಮೂವತ್ತು ನಾಲ್ಕೋ ಅಥವಾ ಮೂವತ್ತೈದೋ ಅಷ್ಟೆ. ಪ್ರೈಮರಿ ಶಾಲಾ ಶಿಕ್ಷಕನಾಗಿ ಐದು ವರ್ಷ ಸೇವೆ ಸಲ್ಲಿಸಿದವನಿಗೆ ಆಗ ಅಷ್ಟೇ ಸಿಗುತ್ತಿದ್ದ ಸಂಬಳ. ನನ್ನ ತಮ್ಮನೊಬ್ಬನನ್ನು ಸಿದ್ಧಗಂಗೆಯಲ್ಲಿ ಸೇರಿಸಿದ್ದೆ. ಅವನು ಹೈಸ್ಕೂಲ್ ತರಗತಿಗಳಲ್ಲಿ ಓದುತ್ತಿದ್ದ. ಅವನೊಬ್ಬ ನವಾಬ. ಅವನ ಖರ್ಚಿನಲ್ಲಿ ಇತಿಮಿತಿ ಇರಲಿಲ್ಲ. ಹೈಸ್ಕೂಲ್ ವಿದ್ಯಾರ್ಥಿ ಸಂಘದ ಎಲೆಕ್ಷನ್‌ಗೆ ಆಗ ವಾಲ್‌ಪೋಸ್ಟರ್ ವಗೈರೆ ಮಾಡಿಸಿ ಅನೇಕ ಜನ ಪ್ರಚಾರಕರನ್ನಿಟ್ಟುಕೊಂಡು ಡೋಲ್‌ಬಜಾರ ಮಾಡಿದವನು. ಅವನ ಖರ್ಚಿಗಾಗಿ ನಾನೇ ಹಣ ಕಳಿಸಬೇಕಾಗಿತ್ತು. ಅಲ್ಲದೆ ನನಗೆ ಹೊಟ್ಟೆ ನೋವು ಪ್ರಾರಂಭವಾಗಿ ಬಹು ಹಿಂಸೆ ಕೊಟ್ಟುಬಿಟ್ಟಿತು. ಅದಕ್ಕಾಗಿ ಬಹಳಷ್ಟು ಹಣ ಖರ್ಚು ಮಾಡಬೇಕಾಗಿ ಬಂತು. ಮೂರನೆಯದಾಗಿ ರಂಗನಾಥಾಚಾರ್ ಎಂಬ ಓರ್ವ ಸಂಸ್ಕೃತ ಪಂಡಿತರಿಗೆ ನೂರು ರೂಪಾಯಿ ಕೊಟ್ಟು ಬಾಣ ಕಾದಂಬರಿ, ಕಿರಾತಾರ್ಜುನೀಯಾದಿ ಪಠ್ಯಗ್ರಂಥಗಳಲ್ಲಿನ ನನ್ನ ಪಠ್ಯ ವಿಷಯಕ್ಕೆ ಸಂಬಂಧಿಸಿದ ಅನೇಕ ಚಿಕ್ಕ ಚಿಕ್ಕ ಪ್ರಬಂಧ

ಬರೆಯಿಸಿಕೊಂಡುಬಿಟ್ಟೆ. ಸೀನಿಯರ್ ಪಂಡಿತ ಪರೀಕ್ಷೆಯನ್ನು ಸಂಸ್ಕೃತ ಪಠ್ಯಭಾಗದ ಉತ್ತರಗಳೆಲ್ಲ ಸಂಸ್ಕೃತದಲ್ಲಿಯೇ ಇರಬೇಕಾಗಿತ್ತು. ಆ ಕಾರಣಕ್ಕಾಗಿ ಈ ಯತ್ನ. ಆದ್ದರಿಂದ ಹಿರೇಕಾಂಶಿಗೆ ಆರ್ಥಿಕ ಮುಗ್ಗಟ್ಟೆಂದು ಕಾಗದ ಬರೆದಿದ್ದೆ. ಸರ್ವವಿಧದಲ್ಲೂ ನನಗೆ ಹಿತಚಿಂತಕರು ಅವರೇ ಆಗಿದ್ದರು. ಅವರು ಊರೊಟ್ಟಿನ ಒಂದು ಗೂಳಿಯನ್ನು ಮಾರಾಟ ಮಾಡಿ ಎರಡುನೂರು ರೂಪಾಯಿ ಸಂಗ್ರಹಿಸಿ ನನ್ನನ್ನು ಊರಿಗೆ ಕರೆಸಿಕೊಂಡೇ ಹಣ ಕೊಡಬೇಕೆಂದು ತೀರ್ಮಾನಿಸಿ, ಸಾಮಾನ್ಯವಾದ ಒಂದು ಕಾಗದ ಬರೆದರೆ ಬರಲಿಕ್ಕಿಲ್ಲವೆಂದೋ ಅಥವಾ ನನ್ನನ್ನು ಪರೀಕ್ಷಿಸಲೆಂದೋ ನನ್ನ ಆಪ್ತ ಹಿರಿಯರಲ್ಲೊಬ್ಬರಾದ ಗಿಣಿವಾಲ ಈರಪ್ಪನಿಗೆ ಬಹಳ ಖಾಯಿಲೆಯೆಂದೂ, ಸದಾ ನಿಮ್ಮನ್ನೇ ಬಡಬಡಿಸುತ್ತಾನೆಂದೂ ಅವರು ಬರೆದ ಕಾಗದದ ತಾತ್ಪರ್ಯವಾಗಿತ್ತು. ಆ ಕಾಗದವನ್ನೋದಿ ನಾನು ಬಹಳ ಗಾಬರಿಗೊಂಡೆ. ಆ ರಾತ್ರಿಯೇ ರೈಲುಹತ್ತಿ ಶಿವಮೊಗ್ಗಕ್ಕೆ ಬಂದು ಅಲ್ಲಿಂದ ಮರುದಿನ ಬೆಳಿಗ್ಗೆ ಹುಬ್ಬಳ್ಳಿಗೆ ಆನವಟ್ಟಿ ಮುಖಾಂತರ ಹೋಗುತ್ತಿದ್ದ 'ಮುಜಾವರ' ಬಸ್ ಹತ್ತಿ ಮಧ್ಯಾಹ್ನ ಎರಡು ಘಂಟೆಗೆ ಹಿರೇಕಾಂಶಿ ತಲುಪಿದೆ. ಊರು ಹೊಕ್ಕಿರಲಿಲ್ಲ, ಊರ ಮುಂದೆ ಹೊಲದಲ್ಲಿ ಕೆಲಸ ಮಾಡುತ್ತಿದ್ದವರ ಬಳಿ ಹೋಗಿ "ಈರಪ್ಪನವರಿಗೆ ಹೇಗಿದೆ?" ಎಂದೆ. ಒಬ್ಬ "ಅವನಿಗೇನಾಗಿದೆ ಧಾಡಿ" ಎಂದುಬಿಟ್ಟ. "ಇದೇನು ಹೀಗೆ ಹೇಳುತ್ತೀಯಲ್ಲ ಅವನಿಗೆ ಬಹಳ ಕಾಯಿಲೆಯೆಂದು ಸುದ್ದಿ ಬಂದಿದೆ!" ಎಂದೆ. "ಅಯ್ಯೋ ಮಾರಾಯಾ ಹೋಗತ್ತ! ಈಗ ಒಂದು ತಾಸಿನ ಮುಂದೆ ನೋಡಿದೆ, ಊರಾಗ ತಿರುಗ್ಯಾಡ್ತಿದ್ದ" ಎಂದುಬಿಟ್ಟ. ಇದ್ದ ಮೂರುನಾಲ್ಕು ಜನ ಹೀಗೇ ಎಂದುಬಿಟ್ಟರು. ಮನಸ್ಸಿಗೆ ನೆಮ್ಮದಿಯಾಯಿತು. ಊರು ಹೊಕ್ಕೆ. ಅದೇ ಮನುಷ್ಯ ಮನೆ ಕಡೆಯಿಂದ ನನ್ನೆದುರೇ ಬಂದು ನಕ್ಕದ್ದೇ ನಕ್ಕದ್ದು. "ನೋಡ್ರೀ ಮಾಸ್ತರ, ನಿಮ್ಮನ್ನ ನೋಡೋ ಹಾಂಗಾತು. ಬಾಳ ದಿನದಿಂದ ಊರ ಕಡೆ ಬರಲೇ ಇಲ್ಲ. ಅದೇನೋ ರೂಪಾಯಿ ತೊಂದರೆ ಗಿಂದರೆ ಅಂತ ಕಾಗದ ಬರ್ದಿದ್ದೆ. ಗೌಡ್ರಿಗೆ ಅವರಿಗೆ ಇವರಿಗೆ ಹೇಳ್ದೆ. ಅವರೆಲ್ಲ ಸೇರಿ ಊರೊಟ್ಟಿನ ಗೂಳಿ ಮಾರಿ ಇನ್ನೂರು ರೂಪಾಯಿ ಮಾಡ್ಕೊಂಡು ಊರಿಗೆ ಕರ್ಸೇ ಕೊಡಬೇಕು ಅಂದ್ರು. ಆ ಮಂಗ್ಯಾಗಳು ಅದಾರಲ್ಲ ಮಾದಣ್ಣಾರ ಪುಟ್ಯಾ, ಓದೋಗೌಡ್ರ ಬಸನಗೌಡಾಗೀಡಾ ಎಲ್ಲರು ಸೇರಿಕೊಂಡು ನನಗ ಜಡ್ಡು ಬಾಳಾಗೈತೆಂತ ಕಾಗ್ದಾ ಬರ್ದುಬಿಟ್ರು. ನಾಯೇನಾಡ್ಲೆಪಾ. ನೋಡು ನಾನು ಕ್ವಾಣ ಇದ್ದಾಂಗ ಅದನಿ" ಎಂದು ನಗತೊಡಗಿದ. ಅವರ ಹೆಂಡತಿ ಪಾರ್ವತಮ್ಮ ಅವರ ಮಕ್ಕಳೆಲ್ಲ ನಕ್ಕದ್ದೇ ನಕ್ಕದ್ದು. ನಾನು ಶಿವಮೊಗ್ಗದಲ್ಲಿಯೇ ಕಾಯಿಲೆಯವರಿಗೆ ಎಂದು ಮೋಸಂಬಿ, ಕಿತ್ತಳೆ ಏನೇನೋ ಹಣ್ಣು ಒಯ್ದಿದ್ದೆ. ಅವನ್ನೆಲ್ಲ ಸುರುವಿದೆ. ಪಾರ್ವತಮ್ಮ "ಮೊದ್ಲು ಜಡ್ಡಿನವರಿಗೆ ರಸಾ ಮಾಡಿ ಕುಡ್ಸರವ್ವೋ" ಎಂದು ನಗುತ್ತ "ಏಳೇಳ್ರಿ ಊಟಾ ಮಾಡೇಳ್ರಿ" ಎಂದು ಊಟಕ್ಕೆಬ್ಬಿಸಿಬಿಟ್ಟರು. ಮೈಸೂರಿನಿಂದ ಬಂದ ಸುದ್ದಿ ಕೇಳಿ ಅನೇಕರು ಗಿಣಿವಾಲ ಈರಪ್ಪನ ಮನೆ ತುಂಬಿಬಿಟ್ಟರು. ಆ ದಿನ ಅಲ್ಲಿದ್ದ ಮರುದಿನ ಊರಿನವರಿಗೆಲ್ಲ ಹೇಳಿ ಅವರು ಕೊಟ್ಟ ಎರಡುನೂರು ರೂಪಾಯಿ ತಕ್ಕೊಂಡು ಮೈಸೂರಿಗೆ ಬಂದುಬಿಟ್ಟೆ. ಇಂಥ ಹಿತಚಿಂತಕರನ್ನು ಮರೆಯಲಾದೀತೇ? ಆ ಊರುಬಿಟ್ಟು 46 ವರ್ಷವಾದರೂ ಆ ಇಡೀ ಊರ ಸಂಬಂಧ ನನ್ನೊಡನೆ ಹಚ್ಚಹಸುರಾಗಿಯೇ ಉಳಿದಿದೆ. ಆದರೆ ಇಂದು ಊರು ಬಹು ಜೀರ್ಣಗೊಂಡಿದೆ. ಎಲ್ಲ ರೀತಿಯಿಂದಲೂ ಸಮೃದ್ಧವಾಗಿರುವ ಒಳ್ಳೊಳ್ಳೆಯ ಮನೆತನಗಳವರು ದಟ್ಟದಾರಿದ್ರ್ಯ ಅನುಭವಿಸುತ್ತಿದ್ದಾರೆ. ಸಾತ್ವಿಕರೂ, ಸತತೋದ್ಯೋಗಿಗಳೂ ಆದ ಅವರಿಗೆ ಸರಿಯಾಗಿ ಮಳೆ ಬೆಳೆಯಿಲ್ಲದೆ ಪರಿತಪಿಸುತ್ತಿರುವ

ಸುದ್ದಿಗಳು ಈಗ ನನಗೆ ಬರುತ್ತಿವೆ. ಆ ನೋವು ನನ್ನನ್ನು ಈಗಲೂ ಕೊರೆಯುತ್ತಿದೆ. ಹೋದ ವರ್ಷ ಎರಡು ಪ್ರಸಿದ್ಧ ಮನೆತನದವರು ತಮ್ಮ ಆರ್ಥಿಕ ದುಃಸ್ಥಿತಿಯನ್ನು ವಿವರಿಸಿ ಕಾಗದ ಬರೆದರು. ಆಗ ನಾನು ನನ್ನ ತೊಂದರೆಯಲ್ಲಿಯೇ ಒಂದು ಸಾವಿರ ರೂಪಾಯಿಯನ್ನು ಅವರಿಬ್ಬರಿಗೂ ಕಳಿಸಿದೆ. ಆಗ ನನಗೆ ವಾಪಸು ಬರಬೇಕೆಂದೇನೂ ಬಯಸಿ ಕಳಿಸಿಲ್ಲ. ಕಳೆದ ನಾಲ್ವತ್ತು ವರ್ಷಗಳ ಅವಧಿಯಲ್ಲಿ ಹತ್ತಾರು ಸಲವಾದರೂ ಆ ಊರಿಗೆ ಹೋಗಿ ಎಲ್ಲರ ಯೋಗಕ್ಷೇಮ ವಿಚಾರಿಸಿ ಬರುತ್ತಿದ್ದೆ. ಅನಾರೋಗ್ಯದ ಕಾರಣವಾಗಿ ಆ ದೂರದ ಪ್ರವಾಸ ಸಾಧ್ಯವಿಲ್ಲವಾಗಿ ಪತ್ರ ವ್ಯವಹಾರವಿಟ್ಟುಕೊಂಡಿದ್ದೇನೆ.

### ಚೆನ್ನಮಲ್ಲಿಕಾರ್ಜುನರ ಸೇವಾಕಾಂಕ್ಷೆ

ನನ್ನ ಬಿಡುವಿನ ವೇಳೆಯಲ್ಲಿ ಶ್ರೀ ಚೆನ್ನಮಲ್ಲಿಕಾರ್ಜುನ ಅವರ ಸೇವೆಯನ್ನೇನಾದರೂ ಮಾಡೋಣವೆಂದು ಆಗಾಗ ಅವರ ಪತ್ರಿಕಾ ಆಫೀಸಿಗೆ ಹೋಗುತ್ತಿದ್ದೆ. ಆದರೆ ಅವರು ನನ್ನ ಸೇವೆಗೆ ಒಪ್ಪುತ್ತಿರಲಿಲ್ಲ. ನಿನ್ನ ಓದೇ ಬಹಳ. ಪಂಡಿತ ಪರೀಕ್ಷೆಗೆ ಬಹಳ ಓದಬೇಕು. ನೀನು ಓದಿ ಜಾಣನಾಗಿಬಿಟ್ಟರೆ ಅಷ್ಟೇ ಸಾಕು ಎಂದು ನಗುತ್ತ ಹೇಳಿ ಕಳಿಸಿಬಿಡುತ್ತಿದ್ದರು. ಈ ಬಗೆಗೆ ನನ್ನ ಮಹಾನುಭಾವಿ ಚನ್ನಮಲ್ಲಿಕಾರ್ಜುನರು, ಚನ್ನಮಲ್ಲಿಕಾರ್ಜುನರು ಎಂಬೆರಡೂ ಪುಸ್ತಕಗಳಲ್ಲಿ ವಿವರಿಸಿದ್ದೇನೆ. ಒಂದೆರಡು ಪ್ರಸಂಗಗಳನ್ನು ಮಾತ್ರ ಪದೇ ಪದೇ ಹೇಳಬೇಕೆಂದೆನಿಸುತ್ತದೆ.

ಒಮ್ಮೆ ಎರಡು ಮೂರು ದಿನಗಳ ರಜೆ ನನಗೆ. ಕೊತಡಿಗೆ ಹೋದೆ. ಮಧ್ಯಾಹ್ನ 12ರ ಸಮಯ. ಸ್ನಾನ ಶಿವಪೂಜೆಗಳಿಗೆ ಏಳುವ ಸಮಯ. "ಏನು ಬಂದೆಪ್ಪ" ಅಂದರು ಮೆಲುದನಿಯಲ್ಲಿ. "ನಿಮ್ಮ ಬಟ್ಟೆ ದುಪ್ಪಟ್ಟಿ ಎಲ್ಲವನ್ನೂ ತೊಳೆಯೋಣ, ಕೊಳೆ ಬಹಳ ಎಂದು ಬಂದೆ". "ಅಲ್ಲಿ ಸೋಪು ಇದೆ. ಅದನ್ನು ತಕ್ಕೊಂಡು ಸೋಪು ಹಚ್ಚಿ ಸ್ವಲ್ಪ ಹೊತ್ತು ನೆನೆಬಿಟ್ಟು ಕುಸುಮಿ ಜಾಲಾಡಿ ಒಣಹಾಕಿಬಿಡು. ರಪರಪ ಕಲ್ಲಿಗೆ ಬಡಿಯಬೇಡ, ಬಹುಶಕ್ತಿಯಿಂದ ಹಿಂಡಬೇಡ. ಹೊಲಿಗೆ ಎಲ್ಲಾ ಹರಿಯುತ್ತದೆ.....ಹಾಗೆ ಹೀಗೆ ಸ್ವಲ್ಪ ಹೊತ್ತು ತಾವು ತಮ್ಮ ಬಟ್ಟೆ ತೊಳೆದುಕೊಳ್ಳುವ ವಿಧಾನದ ಟ್ರೈನಿಂಗ್ ಕೊಟ್ಟರು. ಅಸ್ತು ಎಂದುಕೊಂಡ ನಾನು ಅವರ ನಿಬಂಧನೆಗಳನ್ನೆಲ್ಲ ಮುರಿದುಬಿಟ್ಟೆ. ಅವರು ನಲ್ಲಿಯ ಕೆಳಗೆ ಕುಳಿತು ತಣ್ಣೀರು ಸ್ನಾನಮಾಡಿ ಮಡಿಯುಟ್ಟು ಮಹಡಿಯನ್ನೇರಿ ಒಂದು ಭಾಗದ ಬಿಸಿಲ ಮಚ್ಚಿನ ಮೇಲೆ ತಮ್ಮ ಪೂಜೆ-ಅಡಿಗೆ-ಊಟಕ್ಕಾಗಿ ಮಾಡಿಕೊಂಡ ಮನೆ ಹೊಕ್ಕು ಪೂಜೆಯಲ್ಲಿ ತೊಡಗಿಬಿಟ್ಟರು. ಅವರು ಹೊರಗೆ ಬರುವುದು ಮೂರು ಘಂಟೆ ಸುಮಾರಿಗೆ. ನನಗೀಗ ಮೂರು ತಾಸುಗಳ ದೀರ್ಘ ಸಮಯ ಸಿಕ್ಕುಹೋಯಿತು. ಒಂದು ದೊಡ್ಡ 'ಸನ್‌ಲೈಟ್' ಸೋಪು ತಂದು ಅವರ ಎರಡು ಉರುಟು ಬಟ್ಟೆಯ ಅಂಗಿಗಳು, ಕೋಟು, ಸೆಲ್ಲೆ, ದುಪ್ಪಟ್ಟಿ, ವಸ್ತ್ರ, ಉಂಡಿರುಮಾಲು ಎಲ್ಲವನ್ನೂ ತೊಳೆದು ತೊಳೆದು, ಮೆತ್ತಗೆ ಕಲ್ಲ ಮೇಲೆ ಚಪ್ಪರಿಸಿ, ಶುಭ್ರಗೊಳಿಸಿ ಬಿಸಿಲಿಗೆ ಒಣಹಾಕಿಬಿಟ್ಟೆ. ಒಂದೇ ಘಂಟೆಯಲ್ಲಿ ಎಲ್ಲ ಒಣಗಿದವು. ಸ್ವಲ್ಪ ಹಸಿಯಿರುವಾಗಲೇ ಅಂಗಿ ಕೋಟುಗಳನ್ನು ತೀಡಿ ತಿದ್ದಿ ಇಸ್ತ್ರಿ ಮಾಡಿದ ಹಾಗೆ ಮಾಡಿ ಪುನಃ ಒಣಗಿಸಿ ಅವರು ಬರುವ ವೇಳೆಗಾಗಲೇ ಎಲ್ಲವನ್ನೂ ಮಡಿಸಿ ಅವರು ಕುಳಿತುಕೊಳ್ಳುವ ಕುರ್ಚಿಯ ಪಕ್ಕದ ಬೆಂಚಿನ ಮೇಲೆ ಇಟ್ಟು ನಾನು ಸ್ನಾನ ಮುಗಿಸಿ ಅವರು ಶಿವಪೂಜೆ ಮನೆಯಿಂದ ಹೊರಗೆ ಬರುವುದನ್ನು

ಕಾಯುತ್ತ ಕುಳಿತೆ. ಬಂದು ನೋಡಿ ಒಮ್ಮೆ ನಕ್ಕರು. ನಾನು ಅವರಿಗೆ ಪಂಚೆ ಅಂಗಿಗಳನ್ನು ತೆಗೆದು ಉಡಲು ಕೊಟ್ಟೆ. ಉಟ್ಟುಕೊಂಡು ಕುರ್ಚಿಯ ಮೇಲೆ ಕುಳಿತು ರುಮಾಲು ಸುತ್ತುತ್ತ "ಇವತ್ತು ನನ್ನನ್ನು ಒಳ್ಳೆ ಮದುವೆಯ ಗಂಡು ಕಾಣುವಂತೆ ಮಾಡಿಬಿಟ್ಟಿದ್ದೀಯ ಬಿಡಪ್ಪಾ!" ಎಂದು ನಗುತ್ತ "ನೀನೂ ಇದ್ದೀಯೆ ಎಂದು ಪ್ರಸಾದ ಹೆಚ್ಚಾಗಿಯೇ ಮಾಡಿದ್ದೇನೆ. ಹೋಗಿ ಪ್ರಸಾದ ತೆಗೆದುಕೋ" ಎಂದರು. ಅವರ ಪ್ರಸಾದದ ವೈಖರಿ ಅವರದೇ ಆಗಿತ್ತು. ಇದರ ಅನುಭವ ನನಗೆ ಅವರು ಹಾವೇರಿಯಲ್ಲಿರುವಾಗಲೇ ನೋಡಿ ಅರಿತಿದ್ದೆ. ಉಂಡು ಅನುಭವಿಸಿದ್ದೆ. ಇಂದು ಪ್ರಸಾದ ತೆಗೆದುಕೋ ಎನ್ನುತ್ತಾರೆ. ಹೆಚ್ಚು ಮಾಡಿದ್ದೇನೆ ಎನ್ನುತ್ತಾರೆ. ಒಲ್ಲೆ ಅನ್ನುವುದು ಯುಕ್ತವಲ್ಲವೆಂದು ಅವರ ಅಡಿಗೆಮನೆ ಹೊಕ್ಕೆ. ಆ ಪ್ರಸಾದವೋ ಒಂದೇ ಪಾತ್ರೆಯಲ್ಲಿ ಅಕ್ಕಿ ಬೇಳೆ ತರಕಾರಿ ಉಪ್ಪು ಕಾರ ಹುಳಿ ಸಾಂಬಾರ ಅಡಿಗೆಗೆ ಏನೇನು ಉಪಯೋಗಿಸಬಹುದೋ ಅದೆಲ್ಲ ಹಾಕಿ ಮಾಡಿದ ವಿಚಿತ್ರವಾದ ಕೂಟು. ಏಷ್ಟೇ ಆಗಲಿ ಮನುಷ್ಯನಿಗೆ ಹಸಿವೆ ಎಂಬುದೊಂದುಂಟಲ್ಲ! ಆ ಪ್ರಸಾದವನ್ನು ತಟ್ಟೆಗೆ ಹಾಕಿಕೊಂಡೆ. ಒಂದೆರಡು ತುತ್ತು ತಿಂದೆ. ಹಸಿದ ಅಂದಿನ ನನ್ನ ಹೊಟ್ಟೆಗೆ ಅದು ಪ್ರಸನ್ನ ಪರಿಣಾಮದ ಪ್ರಸಾದವಾದದ್ದಂತೂ ನಿಜ. ರುಚಿ ಎಂಬುದು ಹಸಿವೆಯೋ. 'ಹೊಟ್ಟೆ ತುಂಬಿದವರಿಗೆ ಹುಗ್ಗಿ ಮುಳ್ಳುಮುಳ್ಳು' ಎಂಬುದೊಂದು ಗಾದೆ ಉಂಟು. ನನಗೆ ಹೊಟ್ಟೆ ಹಸಿದಿತ್ತು. ಅಂತೂ ಇಂತೂ ಆ ಪ್ರಸಾದವನ್ನೆಲ್ಲ ಮುಗಿಸಿ ಪಾತ್ರೆ ತೊಳೆದು ಅಡಿಗೆ ಮನೆಯನ್ನು ಗುಡಿಸಿ ಓರಣಗೊಳಿಸಿ ಬಂದೆ. ಶ್ರೀ ಚೆನ್ನಮಲ್ಲಿಕಾರ್ಜುನ ಅವರು ಬಟ್ಟೆ ಧರಿಸಿ ಕುರ್ಚಿಯ ಮೇಲೆಯೇ ಕುಳಿತು ತಮ್ಮ ಐದು ಹತ್ತು ನಿಮಿಷಗಳ ಕಣ್ಣು ಮುಚ್ಚುವ ಶಾಸ್ತ್ರ ಮುಗಿಸಿ ಏನನ್ನೋ ಬರೆಯುತ್ತ ಕುಳಿತು ನಾನು ಬಂದೊಡನೆ ಲೆಕ್ಕಣಿಕೆಯನ್ನು ಕೆಳಗಿಟ್ಟು ಮತ್ತೊಮ್ಮೆ ತಮ್ಮ ಬಟ್ಟೆ ನೋಡಿಕೊಂಡು ನಕ್ಕು ಈ ದಿನ ಬಹುಶ್ರಮ ವಹಿಸಿ ಬಟ್ಟೆ ತೊಳೆದು ಮದುವೆಯ ಗಂಡುಮಾಡಿಬಿಟ್ಟೆ ಎಂದು ಪುನಃ ಹೇಳಿ, ನೀನಿನ್ನು ಹೋಗಿ ನಿನ್ನ ಅಭ್ಯಾಸ ನೋಡಿಕೋ. ನಾನು ಓರಿಯಂಟಲ್ ರಿಸರ್ಚ್ ಬ್ಯೂರೋಕ್ಕೆ ಹೋಗಬೇಕೆಂದರು. ಅವರನ್ನು ಕಳಿಸಿ ನಾನು ನನ್ನ ಕೊಠಡಿಗೆ ಹೋದೆ.

ಅವರು ಈತ ಬೇರೆ ಸೋಪುತಂದು ನಾನು ಹೇಳಿದ ಸಲಹೆ ಮಿಕ್ಕಿ ಬಟ್ಟೆ ತೊಳೆದನೆಂದು ತಿಳಿದರೋ ಏನೋ, ಮತ್ತೊಮ್ಮೆ ನನಗೆ ಬಟ್ಟೆ ತೊಳೆಯಲು ಮಾತ್ರ ಕೊಡಲೇ ಇಲ್ಲ. ಒಮ್ಮೆ ಇವರ ಆಫೀಸಿನ ಅವ್ಯವಸ್ಥೆಯನ್ನೆಲ್ಲ ಸರಿಪಡಿಸೋಣವೆಂದು ಹೇಳಿ ಒತ್ತಾಯಪಡಿಸಿದೆ. ಮಹಡಿಯ ಮೇಲಿನ ಒಂದು ದೊಡ್ಡ ಕೊಠಡಿಯೇ ಇವರ ಆಫೀಸು, ಲೈಬ್ರರಿ, ಗುಡಾವುನ್, ಮಲಗುವ ಮನೆ ಎಲ್ಲಾ ಆಗಿತ್ತು. ಅದರಲ್ಲಿ ತುಂಬಾ ಇವರ ಪ್ರಕಟಣೆಗಳು, ಖರ್ಚಾಗದೆ ಉಳಿದ ಪತ್ರಿಕೆಗಳು, ಓಲೆಗರಿಗಳು, ಕಾಗದದ ರೀಲುಗಳು ಏನೆಲ್ಲ ತುಂಬಿ ಹೋಗಿತ್ತು. ಈ ಅಪಾರ ಗ್ರಂಥರಾಶಿ ಅವ್ಯವಸ್ಥೆಯಿಂದ ಹೇಗೆಂದರೆ ಹಾಗೆ ಚೆಲ್ಲಾಡಿ ಕುಳಿತಿತ್ತು. ಅದರ ಮಧ್ಯದಲ್ಲಿ ಅಂಕುಡೊಂಕಾದ ದಾರಿಯೊಂದು ಬಿಸಿಲ ಮಚ್ಚಿನ ಕಡೆ ಸಾಗಿತ್ತು. ಅಲ್ಲಿ ಶ್ರೀ ಚಿ. ಅವರ ಶಿವಪೂಜೆ, ಸ್ನಾನ, ಅಡಿಗೆ ಮನೆಯ ಭಾಗವಿತ್ತು. ಶ್ರೀ ಚಿ. ಅವರು ನನ್ನ ಈ ಕೆಲಸಕ್ಕೆ ಒಪ್ಪಿಗೆ ಕೊಟ್ಟದ್ದು ಕೆಲವು ಕರಾರುಗಳೊಂದಿಗೆ. ಯಾವ ಕಾಗದಗಳನ್ನೂ ಕಸದಲ್ಲಿ ಚೆಲ್ಲಬಾರದು. ಅನುಪಯುಕ್ತವೆಂದು ಕಂಡುಬಂದ ಕಾಗದಗಳಾದರೂ ನನಗೆ ತೋರಿಸಿ ಅನಂತರ ಅವನ್ನು ಸಣ್ಣ ಸಣ್ಣ ಕಂತೆಗಳನ್ನಾಗಿ ಕಟ್ಟಿ, ಒಲೆ ಉರಿಗಾಗಿ ಬೇರೊಂದು ಕಡೆಯಲ್ಲಿ ಹೊಂದಿಸಿಡಬೇಕು ಇತ್ಯಾದಿ.

ನನ್ನ ಕೆಲಸ ಪ್ರಾರಂಭಿಸಿದೆ. ಮೊದಲು ಅವರ ಪ್ರಕಟಣೆಗಳನ್ನೆಲ್ಲ ಪ್ರತ್ಯೇಕ ಪ್ರತ್ಯೇಕವಾಗಿ ವಿಂಗಡಿಸಿ ಒಂದು ಕಂತೆ ಸೆಣಬು ಹುರಿತಂದು ಪ್ರತ್ಯೇಕ ಕಟ್ಟಿಟ್ಟೆ. ಖರ್ಚಾಗದೆ ಉಳಿದ ಸದ್ಧರ್ಮ ದೀಪಿಕೆಗಳನ್ನು ಕ್ರಮವಾಗಿ ಹೊಂದಿಸಿ ಅವುಗಳ ಹೊರೆಗಳನ್ನು ಕಟ್ಟಿ ಇಟ್ಟೆ. ಓಲೆಗರಿಗಳು, ರೆಫರೆನ್ಸ ಪುಸ್ತಕಗಳನ್ನು ಇದೇ ರೀತಿಯಲ್ಲಿ ಹೊಂದಿಸಿ ಉಳಿದ ಚೂರುಪಾರು ಕಾಗದಗಳು ಸಮೇತವಾಗಿ ಎಲ್ಲ ಕಸವನ್ನೂ ಹೊಡೆದುಕೊಂಡು ಬಂದು ಒಂದು ಕಡೆ ದುಂಡಗೆ ಮಾಡಿದೆ. ಅನಂತರ ಮೇಲೆ ಹೇಳಿದ ಎಲ್ಲ ಪುಸ್ತಕಗಳೂ, ಪತ್ರಿಕೆಗಳೇ ಮೊದಲಾದವುಗಳನ್ನು ಒಂದೊಂದು ಭಾಗದಲ್ಲಿ ಗೋಡೆಯಂತೆ ಹೊಂದಿಸಿ ಒಟ್ಟಿ ಆ ಕೊಠಡಿಯಲ್ಲಿ ಮೂರುನಾಲ್ಕು ಭಾಗಗಳನ್ನಾಗಿ ಮಾಡಿದೆ. ಬಿಸಿಲು ಮಚ್ಚಿಗೆ ಹೋಗುವ ದಾರಿಯನ್ನು ಸ್ವಲ್ಪ ಅಗಲ ಮಾಡಿ ನೇರಗೊಳಿಸಿದೆ. ಓಲೆ ಪುಸ್ತಕದ ಹೊರೆಗಳನ್ನು ಸಾಲಾಗಿ ಇಟ್ಟ ಜಾಕಾಯಿ ಪೆಟ್ಟಿಗೆಗಳ ಮೇಲೆ ಸಾಲಾಗಿ ಜೋಡಿಸಿದೆ. ಅನಂತರ ಕಸದ ಗುಡ್ಡೆಯನ್ನು ಪರೀಕ್ಷಿಸಲು ಕುಳಿತೆ. ಅಲ್ಲಿಗೆ ಶ್ರೀ ಚೆ. ಅವರೂ ಬಂದರು. ಅವರು ಆ ಕಾಗದಗಳಲ್ಲಿ ಉಪಯುಕ್ತವಾದುದನ್ನು ಆರಿಸಿಕೊಳ್ಳುತ್ತಿದ್ದರು. ಉಳಿದದನ್ನು ಪಕ್ಕಕ್ಕೆ ಸರಿಸಿ "ಇದನ್ನು ಕಂತೆ ಕಟ್ಟಿ ಒಟ್ಟಿಬಿಡು. ಇವು ಸೌದೆಯ ಕೆಲಸ ಮಾಡುತ್ತವೆ" ಎಂದು ಹೇಳುತ್ತಿದ್ದರು. ಒಂದು ಚಿಕ್ಕ ಬಿಳಿ ಹಾಳಿಯಿದ್ದರೂ ಏನನ್ನಾದರೂ ಬರೆಯಲು ಬರುತ್ತದೆಂದು ತೆಗೆದು ಇಡುತ್ತಿದ್ದರು.

ನಾನು ದೊಡ್ಡದೊಂದು ಗುಡ್ಡೆಯಲ್ಲಿ ಉಪಯುಕ್ತ ಕಾಗದಗಳನ್ನು ಹುಡುಕಿ ಅದರಂತೆ ವರ್ಗೀಕರಿಸುತ್ತಿದ್ದಾಗ ಒಂದು ಹಳೆಯ ದೊಡ್ಡ ಲಕೋಟೆ ಸಿಕ್ಕಿತು. ಇದೇನೆಂದು ಅದರೊಳಗಿನ ಕಾಗದ ಹೊರತೆಗೆದು ಅದರಲ್ಲಿ ಎಪ್ಪತ್ತೈದು ರೂಪಾಯಿ ನೋಟುಗಳು ಸಿಕ್ಕವು. ಅವನ್ನು ಅವರಿಗೆ ತೋರಿಸುತ್ತ "ಇದೇನು ಇದರಲ್ಲಿ ರೂಪಾಯಿ ನೋಟುಗಳಿವೆಯಲ್ಲಾ!" ಎಂದೆ. "ಎಲ್ಲಿತ್ತಪ್ಪ ಅದು! ನೋಡು ಹಿಂದೆ ಕಳೆದುಕೊಂಡೆ. ಎಷ್ಟೋ ದಿನ ಹುಡುಕಿದೆ ಸಿಗಲಿಲ್ಲ. ಇವತ್ತು ಶಿವನೇ ಹುಡುಕಿಸಿಕೊಟ್ಟ ನೋಡು" ಎಂದರು. ಅವರಿಗೆ ಕಳೆಯುವವನೂ ಶಿವನೇ, ಹುಡುಕಿಸಿಕೊಡುವವನೂ ಶಿವನೇ. ಹೀಗೇ ಅವರು ತಮ್ಮ ಜೀವನ ರೂಪಿಸಿಕೊಂಡಿದ್ದರು. ಯಾವುದಕ್ಕೂ ಕೊರಕೊರ ಎನ್ನುತ್ತಿದ್ದಿಲ್ಲ. ಅವರ ಜೀವನದಲ್ಲಿ ಅನೇಕ ಕಠಿಣ ಪ್ರಸಂಗಗಳು ಬರುತ್ತಿದ್ದವು. ಅವೆಲ್ಲ ಶಿವನ ಪ್ರಸಾದವೆಂದೇ ಅಂದುಕೊಳ್ಳುತ್ತಿದ್ದರು. ಇದೇ ಅವರ ಜೀವನದ ಗುಟ್ಟಾಗಿರುತ್ತಿತ್ತು.

ಆಮೇಲೆ ಆ ಕವರಿನಲ್ಲಿ ಹಳೆಗಾಲದ ಕಾಲಾಣೆ ಕಾರ್ಡುಗಳು ಅರ್ಧ ಆಣೆಯ ಕವರುಗಳು ಕೆಲವು ಸ್ಟಾಂಪುಗಳು ಇದ್ದವು. ಅವನ್ನು ಅವರ ಕೈಗೆ ಕೊಟ್ಟೆ. ಅವರು "ಇವನ್ನು ಯಾವಾಗಲೋ ಶಿರಾಳಕೊಪ್ಪದಲ್ಲಿದ್ದಾಗ ಕೊಂಡು ಇಟ್ಟಿದ್ದೆ. ಹಾಗೇ ಇದ್ದವು. ಇವನ್ನೂ ಬೇಕಾದರೆ ನೀನು ಉಪಯೋಗಿಸಬಹುದು" ಎನ್ನುತ್ತ ಕೈಗೆ ಕೊಟ್ಟರು. ನಾನು ತೆಗೆದುಕೊಂಡೆ. ಅನಂತರ ಒಂದೆರಡು ಬುಟ್ಟಿಯಷ್ಟು ಧೂಳು, ಕಸ ಎಲ್ಲವನ್ನೂ ಹೊರಗೆ ಚೆಲ್ಲಿ ನಿರುಪಯುಕ್ತ ಕಾಗದಗಳನ್ನೆಲ್ಲ ಕಂತೆಕಟ್ಟಿ ಒಂದು ಕಡೆ ಒಟ್ಟಿದೆ. ನಾಲ್ಕೈದು ತಾಸುಗಳಷ್ಟು ಈ ಕೆಲಸ ಮಾಡಿದ ಮೇಲೆ ನಕ್ಕು "ನಮ್ಮ ಈ ಕೊಠಡಿಯಲ್ಲಿ ನಾಲ್ಕೈದು ಚಿಕ್ಕ ಕೊಠಡಿಗಳೇ ಆದುವು ಬಿಡು. ಈ ದಿನ ಬಹಳ ಶ್ರಮಪಟ್ಟೆ. ಇನ್ನು ನೀನು ಹೋಗಪ್ಪ ನಿನ್ನ ಅಭ್ಯಾಸ ಮಾಡಿಕೋ" ಅಂದುಬಿಟ್ಟರು. ನಾನು ನನ್ನ ಕೊಠಡಿಗೆ ಬಂದೆ. ಆ ದಿನ ನನಗೆ ಬಹಳ ತೃಪ್ತಿಯೆನಿಸಿತು. ನಾನು ಅವರ ಸೇವೆಗೆ ಮನಸ್ಸು ಮಾಡಿದ್ದು ಮತ್ತಾವ ಪ್ರತ್ಯಾಸೆಯಿಂದಲ್ಲವೇ ಅಲ್ಲ. ಅವರಂಥ

ಓರ್ವ ಆದರ್ಶ ಪುರುಷರ. ಶಿವಶರಣರ ಸಹವಾಸ ನನಗುಂಟಾಗಿದೆಯಲ್ಲ! ಅದೇ ನನ್ನ ಪುಣ್ಯವೆಂದುಕೊಂಡು ಅವರ ಅಸಹಾಯಸ್ಥಿತಿಯಲ್ಲಿ ನನ್ನ ಕೈಲಾದ ಸೇವೆ ಮಾಡಬೇಕೆಂಬ ಸ್ವಯಂ ಪ್ರೇರಣೆಯದಾಗಿತ್ತು.

**ನನ್ನ ಮನೆಯಲ್ಲಿ ಶ್ರೀ ಬಿ. ಅವರ ಶಿವಪೂಜೆ**

ನಾನು 1950ರಲ್ಲಿ ಮದುವೆಯಾಗಿ ಮೈಸೂರಿನಲ್ಲಿ ಮನೆಮಾಡಿಬಿಟ್ಟೆ. ದಂಪತಿಗಳಾದ ನಾವಿಬ್ಬರೂ ಅವರ ಆಶೀರ್ವಾದ ಪಡೆಯಬೇಕೆಂಬ ಇಚ್ಛೆಯಾಯಿತು. ನಾನು ಅವರಲ್ಲಿಗೆ ಹೋಗಿ, ಬೇರೆ ಮನೆ ಮಾಡಿದ್ದೇನೆ. ಅಲ್ಲಿಗೆ ದಯಮಾಡಿಸಿ ತಮ್ಮ ಶಿವಪೂಜೆ ಮುಗಿಸಿಕೊಂಡು ಬರಬೇಕೆಂದು ಬೇಡಿಕೊಂಡೆ. ಅದಕ್ಕವರು "ಏಕಪ್ಪ ತೊಂದರೆ ತಕ್ಕೊಳ್ಳುತ್ತೀಯೆ. ಹೊಸದಾಗಿ ಬಂದಿದ್ದೀಯೆ, ಸ್ವಲ್ಪದಿನ ಸನ್ನಿವೇಶಕ್ಕೆ ಹೊಂದಿಕೊಂಡು ವ್ಯವಸ್ಥಿತ ಗೃಹಸ್ಥಜೀವನಕ್ಕೆ ಪ್ರಾರಂಭವಾದಾಗ ಬರೋಣವಂತೆ. ಈಗೇಕೆ ಅವಸರ" ಎಂದರು. "ಕರೆದುಕೊಂಡು ಬರಬೇಕೆಂದು ನನ್ನ ಹೆಂಡತಿಯದೇ ಒತ್ತಾಯ. ತಾವು ಬಂದು ಹೊಸಮನೆ ಪ್ರವೇಶಿಸಿದಂತಾಯಿತು. ನಮಗೆ ಆಶೀರ್ವದಿಸಿದಂತೆಯೂ ಆಯಿತು. ನಿಮ್ಮ ಶಿವಪೂಜೆ ಅಲ್ಲಾದರೆ ಆ ಮನೆಯಲ್ಲಿದ್ದ ದೆವ್ವ ಗಿವ್ವ ಓಡಿ ಹೋಗಲೆಂದೇ ಬಯಸಿ ಕರೆಯಬಂದೆ ಅಂದೆ. ನಗುವುದಕ್ಕೆ ಪ್ರಾರಂಭಿಸಿ "ನಡೆಯಪ್ಪ ಹಾಗಾದರೆ" ಎಂದು ಶಿವಪೂಜಾ ಸಾಮಗ್ರಿಗಳನ್ನೆಲ್ಲ ತಕ್ಕೊಳ್ಳ ಹೇಳಿದರು. ನಾನು ಅವನ್ನು ತಕ್ಕೊಂಡು ಕರೆದುಕೊಂಡು ಹೊರಗೆಬಂದು "ಒಂದು ಟಾಂಗಾ ತರುತ್ತೇನೆ" ಎಂದೆ. "ಟಾಂಗಾ ಏಕಪ್ಪ ಆನೆ ಕರೋಹಟ್ಟಿ ಹತ್ತಿರ ಮನೆ ಇದೆ ಅನ್ನುತ್ತೀಯೆ; ನಡೆದೇ ಹೋದರಾಯಿತು" ಎಂದು ನಡೆಯುತ್ತಲೇ ಬಂದರು.

ಸ್ನಾನ-ಶಿವಪೂಜೆಯೆಲ್ಲ ಮುಗಿದ ಮೇಲೆ ಅವರಿಗೆ ಪ್ರಸಾದ ಎಡೆ ಮಾಡಲು ನನ್ನ ಹೆಂಡತಿ ಎಲ್ಲ ಅಡಿಗೆ ಸಾಮಗ್ರಿಗಳನ್ನು ಓರಣವಾಗಿ ಅವರ ಮುಂದಿಟ್ಟು ನಮಸ್ಕಾರ ಮಾಡಿದಳು. ನಾನೂ ಅವರ ಸಂಗಡವೇ ಊಟಕ್ಕೆ ಕುಳಿತೆ. ಅವರಿಗೆ ತೃಪ್ತಿಯಾಯಿತು. "ಚನ್ನಪ್ಪ, ನಿನ್ನ ಹೆಂಡತಿ ಬಹಳ ಜಾಣೆ. ಶರಣ ಸಂಪ್ರದಾಯ ತಿಳಿದಿದ್ದಾಳೆ" ಎಂದರು. ನಾನು ನಕ್ಕು "ಸಿದ್ಧಾಪುರದ ಶರಣ ಸಂಪ್ರದಾಯದವರ ಮನೆಯಲ್ಲಿಯೇ ಬೆಳೆದವಳಲ್ಲವೇ?" ಎಂದೆ. ಅವರು ನಕ್ಕರು. ಅವಳು ಊರಿಂದ ಬರುವಾಗ ತಂದಿದ್ದ ಗವಲಿ-ಗವಳಿಗೆಗಳ ಪ್ರತ್ಯೇಕ ಪಾಯಸ, ಕುಸಿಬೆ ಹಾಲು ಓಂಡಿ ಅರಿಸಿಣ ಎಲೆ ಹಾಕಿ ಮಾಡಿದ ಅಕ್ಕಿ ಹುಗ್ಗಿ, ಬದನೆಕಾಯಿ ಪಲ್ಯ, ಅನ್ನ ಸಾರು, ಕಡ್ಡಲಿ ಪಚ್ಚಡಿ, ಬಾಳಕದ ಕರಿದ ಮೆಣಸಿನ ಕಾಯಿ ಎರಡು ಮೂರು ಪ್ರಕಾರದ ಸಂಡಿಗೆ, ಹೆಸರುಹಿಟ್ಟಿನ ಸಂಡಿಗೆ ಇತ್ಯಾದಿ ಏನೆಲ್ಲ ಬಡಿಸಿದಳು. ಅವರು "ಏನಮ್ಮ ಎಷ್ಟೊಂದು ಪ್ರಕಾರದ ಪ್ರಸಾದ ತಯಾರಿಸಿ ಬಿಟ್ಟಿರುವೆಯಲ್ಲಾ! ಬಹಳ ಜಾಣೆ. ಇಷ್ಟು ಚಿಕ್ಕ ವಯಸ್ಸಿನಲ್ಲಿ ಶ್ರದ್ಧೆಯಿಂದ ನೀನು ಮಾಡಿದ ಈ ಪ್ರಸಾದ ಪರಿಕರ ಸಂತೋಷವುಂಟು ಮಾಡುವಂತಹುದು" ಎಂದರು. ನನ್ನ ಹೆಂಡತಿಗೆ ಉತ್ಸಾಹವೋ ಉತ್ಸಾಹ. ಶ್ರದ್ಧೆಯಿಂದ ಎಡೆಮಾಡಿದ್ದೂ ಮಾಡಿದ್ದೇ. ಕರ್ಪೂರ ಹಚ್ಚಿ ನಮಸ್ಕಾರ ಹಾಕಿ ಶರಣು ಶರಣಾರ್ಥಿ ಎಂದಳು. ಬಹಳ ಸಂತೋಷದಿಂದ ಊಟ ಮಾಡಿದರು. ಕರಿದ ಮೆಣಸಿನಕಾಯಿ ಆ ದಿನ ಅವರಿಗೆ ಬಹಳ ರುಚಿ ಹತ್ತಿದುವೆಂದು ತೋರುತ್ತದೆ. ಎರಡು ಮೂರು ಸಲ ಎಡೆ ಮಾಡಿಸಿಕೊಂಡರು. ಅವಳಿಗೆ ಕಾರವಿರುವ ಇವನ್ನು ತಿನ್ನುವರೋ ಇಲ್ಲವೋ ಎಂದು ಒಂದೊಂದೇ ಇಡುತ್ತಿದ್ದಳು.

ಅವಳು ಬಹು ಲೆಕ್ಕಾಚಾರದ ಹೆಂಗಸಂತೂ ನಿಜವೇ ನಿಜ. ಮೂರು ಜನಕ್ಕೆ ಸರಿಯಾಗಿ ಆರು ಮೆಣಸಿನಕಾಯಿ ಮಾತ್ರ ಕರಿದಿದ್ದಳೆಂದು ತೋರುತ್ತದೆ. ಅವೆಲ್ಲ ಮುಗಿದ ಮೇಲೆ ಚನ್ನಮಲ್ಲಪ್ಪನವರು 'ಮೆಣಸಿನಕಾಯಿ ತಾರಮ್ಮ' ಅಂದುಬಿಟ್ಟರು. ಅವಳು ಗಾಬರಿಗೊಂಡು ಓಡಿಹೋಗಿ ಒಲೆಯ ಮೇಲೆ ಎಣ್ಣೆ ಇಟ್ಟು ಒಲೆ ಊದುತ್ತಿರುವುದು ಗೊತ್ತಾಗಿಬಿಟ್ಟಿತು. ಅಡಿಗೆ ಮನೆ ದೂರ ಇರಲಿಲ್ಲ. ಆ ಕೂಡಲೇ "ಮಗೂ, ಬಾಮ್ಮಾ ಮೆಣಸಿನಕಾಯಿ ಬೇಡ ಬಾ. ಈಗ ಕರಿಯಲು ಹೋಗಬೇಡ" ಎಂದು ಕರಿಯಗೊಡಲಿಲ್ಲ. ಉಳಿದ ಸಾಮಗ್ರಿಗಳೊಡನೆ ತೃಪ್ತಿಯಾಗಿ ಪ್ರಸಾದ ಸ್ವೀಕರಿಸಿ, ಸ್ವಲ್ಪ ಹೊತ್ತು ಅಲ್ಲೇ ವಿಶ್ರಮಿಸಿ, ಮಾತನಾಡಿ ಹೊರಟರು. ಇಬ್ಬರೂ ನಮಸ್ಕರಿಸಿ ಧನ್ಯತೆ ಪಡೆದೆವೆಂದುಕೊಂಡೆವು. ಈ ಸಂದರ್ಭದಲ್ಲಿ ನನ್ನ ಮಮತೆಯ ರಾದ್ಧಾಂತವನ್ನಿಲ್ಲಿ ಹೇಳಿಕೊಳ್ಳಲೇಬೇಕು. ರಾದ್ಧಾಂತವೆಂದು ಏಕೆ ಹೇಳಿದೆ? ಇದನ್ನು ನೆನೆಸಿಕೊಳ್ಳಬಾರದೆಂದು ಎಲ್ಲೂ ನಾನು ಪ್ರಸ್ತಾಪ ಮಾಡಿರಲಿಲ್ಲ. ಅದನ್ನು ನೆನೆಸಿಕೊಂಡರೇ ನನಗೆ ಜಿಗುಪ್ಸೆ. ನನ್ನ ಜೀವನದಲ್ಲಿ ನನಗೆ ಬಹುದೊಡ್ಡ ಆಘಾತವನ್ನುಂಟು ಮಾಡಿದ ಪ್ರಸಂಗವೇ ನನ್ನ ಮದುವೆ, ಆದ್ದರಿಂದ ಆ ಕಹಿ ಪ್ರಸಂಗವನ್ನೂ ನೆನೆಯದೆ ಆದಷ್ಟು ಮರೆತು ಮರೆತು ಜೀವನ ರೂಪಿಸಿಕೊಳ್ಳುತ್ತಿದ್ದೆ. ಇಲ್ಲಿ ಅದನ್ನು ಹೇಳದಿದ್ದರೆ ನನ್ನ ಈ ಬರವಣಿಗೆ ಹೇಗೆ ಪೂರ್ಣವಾದೀತು?

### ಸಿದ್ಧಾಪುರದಲ್ಲಿ ರಾದ್ಧಾಂತದ ನನ್ನ ಮದುವೆ

16ನೆಯ ವಯಸ್ಸಿನಲ್ಲೇ ನಮ್ಮ ಮಾವನ ಮಗಳೊಬ್ಬವನ್ನು ನನಗೆ ಕಟ್ಟಲು 1937ರಲ್ಲಿಯೇ ನಮ್ಮ ಮನೆಯವರು ಪ್ರಯತ್ನಿಸಿದರು. ಆಗಿನ ನಮ್ಮ ಮನೆಯ ದಾರಿದ್ರ್ಯ ಪರಮಾವಧಿಗೇರಿದ್ದ ಕಾಲ ಅದು. ನಮ್ಮ ವ್ಯವಸಾಯವೆಲ್ಲ ಕುಸಿದುಬಿದ್ದಿತ್ತು. ಹಂದಿಗನೂರು ದೇಸಾಯಿಯವರ ಹೊಲ ಮಾಡಿ ಅತಿವೃಷ್ಟಿ-ಅನಾವೃಷ್ಟಿ ಕೀಟಬಾಧೆಗಳ ಕಾರಣವಾಗಿ ನಾಲ್ಕೈದು ವರ್ಷ ಕರಿಸಾಲಾಗಿ ಕೈಗೆ ಏನೂ ಹತ್ತದೆ ದುಡಿದದ್ದನ್ನೆಲ್ಲ ದೇಸಾಯರಿಗೆ ಸಲ್ಲಿಸಿ ಸಾಲಗಾರರಾಗಿ ನಮ್ಮ ಮನೆ ಹೊಲವನ್ನೇ ಕಬಳಿಸಲು ದೇಸಾಯಿಯರು ಪ್ರಯತ್ನಿಸಿದಾಗ ಸಾಲ ಸೋಲ ಮಾಡಿ ಅವರಿಗೆ ಕೊಡಬೇಕಾದ ಲಾವಣಿ ಹಣ ತೀರಿಸಿ ನಮ್ಮ ಮನೆ ಹೊಲವನ್ನು ಉಳಿಸಿಕೊಂಡು ಕೂಲಿ ಕುಂಬಳಿ ಮಾಡಿ ಕಾಲ ಹಾಕುತ್ತಿದ್ದ ದಾರುಣ ಕಾಲ ಅದು. ಆಗ ನಾನು ಹಗಲು ರಾತ್ರಿಯೆನ್ನದೆ ದುಡಿಯುತ್ತಿದ್ದೆ. ನಮ್ಮೂರ ಹೊಳೆಯ ದಂಡೆಯ ಮುಕ್ಕಾಲು ಎಕರೆ ಜಮೀನಿನಲ್ಲಿ ಬದನೆ ಗಿಡ ಹಚ್ಚಿ ಎರಡು ಏತ ಹಾಕಿ, ಬಹಳ ಆಳದಲ್ಲಿಂದ ಹೊಳೆ ನೀರನ್ನು ಮೇಲಕ್ಕೆತ್ತಿ ಗಿಡಕ್ಕೆ ನೀರು ಹಾಯಿಸುವ ಏರ್ಪಾಡು ಮಾಡಿದೆ. ಮುಲ್ಕೀ ಪರೀಕ್ಷೆ ಪಾಸಾಗಿ ಬಂದವನೆಂಬ ಹಣೆಪಟ್ಟಿ ಹಚ್ಚಿಕೊಂಡು ಹಳ್ಳಿಯ ಮಟ್ಟದಲ್ಲಿ ದೊಡ್ಡ ವಿದ್ಯಾವಂತನೆನ್ನಿಸಿಕೊಂಡಿದ್ದ ನನ್ನ ದುಡಿಮೆಯನ್ನು ಕಂಡು ನಮ್ಮೂರವರೆಲ್ಲ ಬಹಳವಾಗಿ ಶ್ಲಾಘಿಸುತ್ತಿದ್ದರು. ಈ ವಿಷಯವನ್ನು ಹಿಂದಿನ ಪುಟಗಳಲ್ಲಿ ವಿವರಿಸಿದ್ದೇನೆ. ಬದನೇ ಗಿಡದ ಬೆಳೆ ಆ ಕಾಲದಲ್ಲಿ ನ ಭೂತೋ ನಭವಿಷ್ಯತಿ ಅನ್ನುವಂತೆ ಬೆಳೆದು ಆ ಭಾಗದಲ್ಲಿ ದಾಖಲೆ ಸ್ಥಾಪಿಸಿಬಿಟ್ಟಿತು. ಕಾಯಿ ಹರಿದು ಮಾರಾಟ ಮಾಡುವುದೂ ಸಾಧ್ಯವಿಲ್ಲದಷ್ಟು ಹುಲುಸಾದ ಬೆಳೆ ಬೆಳೆಯಿತು. ಸುತ್ತಮುತ್ತ ಸಂತೆಗಳಿಗೆ ದುಡ್ಡಿಗಾಗಿ ಮತ್ತು ಹಳ್ಳಿಹಳ್ಳಿಗಳಿಗೆ ಧಾನ್ಯಕ್ಕಾಗಿ ಅವ್ಯಾಹತವಾಗಿ ಮಾರಾಟಕ್ಕೆ ತೊಡಗಿದೆ. ನಾಲ್ಕಾರು ಜನ ಕೂಲಿಯ ಜನಗಳನ್ನು ಗೊತ್ತುಮಾಡಿಕೊಂಡಿದ್ದೆ. ನಮ್ಮ ಮನೆಯ ಹೊಲದಲ್ಲಿ ಸೆರೆ ಕಾಳಾಗದಿದ್ದರೂ ಆ ವರ್ಷವೆಲ್ಲ

ಇಪ್ಪತ್ತು-ಇಪ್ಪತ್ತೆರಡು ಜನರಿರುವ ನಮ್ಮ ಮನೆತನವನ್ನು ಹೊಲದವಪಿಗೆ ಅರ್ಧ ಕೊಟ್ಟೂ ಕೂಡ ಸಾಕಿ ಸಲಹಿತು. ದುಡಿಯಲಿಕ್ಕೆ ಮನೆಯವರಿಗೆಲ್ಲ ಕೈತುಂಬ ಕೆಲಸವಿಲ್ಲದಂತಾಗಿ ಹೋಯಿತು. ಎಲ್ಲ ಕೆಲಸ ನಾನೇ ಮಾಡುತ್ತಿದ್ದೆ. ಆಗ ನಾನು ಯೋಚಿಸಿದ್ದು ಹೀಗೆ. ಈಗ ನಾನು ಮನೆಯಲ್ಲಿದ್ದರೆ ಉಳಿದವರಿಗೆ ಕೆಲಸವಿಲ್ಲದಂತಾಗಿ ಮನೆಹಿಡಿದು ಕೂಡ್ರಬೇಕಾಗುತ್ತದೆ, ಕೂಲಿಗೆ ಕರೆಯುವವರೂ ಇಲ್ಲ. ನಾನಿನ್ನು ಊರುಬಿಟ್ಟು ಬೇರೆ ಎಲ್ಲಾದರೂ ಹೋಗಿ ದುಡಿದು ತಂದು ಮನೆಯ ಈ ದುಸ್ಸಹವಾದ ದಾರಿದ್ರ್ಯ ಪರಿಹಾರಕ್ಕಾಗಿ ಪ್ರಯತ್ನಿಸಬೇಕೆಂದು ಯೋಚಿಸಿ 1938ರಲ್ಲಿಯೇ ಮನೆಬಿಟ್ಟು ಹೊರಡಲು ಯತ್ನಿಸಿದೆ. ಇಂಥ ಸ್ಥಿತಿಯಲ್ಲಿ ಮನೆಯವರ ಕಟ್ಟಿಗೊಳಪಟ್ಟು ಮದುವೆಯ ಗುದ್ದಿಯನ್ನು ಕೊರಳಿಗೆ ಕಟ್ಟಿಕೊಂಡು ತಿರುಗುವುದು ದುಸ್ಸಹವಾಗುತ್ತದೆ. ಮದುವೆಯ ಈ ಕೆಸರಿನಲ್ಲಿ ಸಿಕ್ಕುಹಾಕಿಕೊಳ್ಳುವುದೇ ಬೇಡವೆಂದು ಖಂಡತುಂಡಾಗಿ ಸಾಧ್ಯವಿಲ್ಲವೆಂದು ಊರುಬಿಟ್ಟು ಹೋಗಿ ಮೊದಲು ಹಾನಗಲ್ಲು ತಾಲ್ಲೂಕು ಹೊಸೂರಿನಲ್ಲೂ, ಅನಂತರ ಹಿರೇಕಾಂಶಿಯಲ್ಲೂ ಶಾಲೆ ಹಾಕಿ ಸಾಧಿಸಿದ ಸಾಧನೆಯನ್ನು ಈ ಹಿಂದೆ ವಿವರಿಸಿದ್ದೇನೆ.

ಹಿರೇಕಾಂಶಿಯಲ್ಲಿ ಉಪಾಧ್ಯಾಯನಾಗಿದ್ದಾಗ ಮತ್ತೊಮ್ಮೆ ಬೇರೆ ಎರಡು ಕಡೆಯಲ್ಲಿ ಹೆಣ್ಣು ನೋಡಿಕೊಂಡು ಬಂದು ಹೆಣ್ಣಿನ ತಂದೆಯ ಸಹಿತ ನಮ್ಮ ದೊಡ್ಡಪ್ಪ ಬಂದು ಮದುವೆಯ ಪ್ರಸ್ತಾಪ ಮಾಡಿದ. ಅವನು ಹೇಳಿದ್ದು ಹೀಗೆ; "ತಮ್ಮಾ ಕೈಯಾಗಿದ್ದ ಹೆಣ್ಣು ಹೋಗಿಬಿಡ್ತಾವ. ಏನರ ಗುದ್ಯಾಡಿ ನಾಕೈದು ನೂರು ರೂಪಾಯಾಗ ಈ ವರ್ಷ ಮದ್ವಿ ಮಾಡಿಬಿಡನಪ" ಎಂದುಬಿಟ್ಟ. ಆಗಲೂ ನಾನು ಖಂಡಿತ ಸಾಧ್ಯವಿಲ್ಲ, ನಾನಿನ್ನೂ ಓದುವುದಿದೆ. ಓದಿ ಮುಗಿದ ಮೇಲೆ ಹೇಳುತ್ತೇನೆ. ಆಗ ಮಾಡಿ, ಅಥವಾ ನಾನೇ ನಿಮಗೇನೂ ಭಾರ ಬೀಳದಂತೆ ನನ್ನ ಮದುವೆಯನ್ನು ನಾನೇ ಮಾಡಿಕೊಳ್ಳುತ್ತೇನೆಂದೆ. ಅದಕ್ಕೆ ನಮ್ಮ ದೊಡ್ಡಪ್ಪ ಉಸಿರೆತ್ತಲಿಲ್ಲ. ಏಕೆಂದರೆ ಅವನಿಗೆ ನನ್ನ ಸಹಾಯ ಬೇಕಾಗಿತ್ತು. ನಾನೂ ಕೂಡ ಹಿರೇಕಾಂಶಿಯಿಂದ ಬರುವ ಉತ್ಪತ್ತಿಯಲ್ಲಿ ಒಂದು ಕಾಸನ್ನೂ ಅನ್ಯಥಾ ಬಳಸದೆ ಊರಿಗೆ ಕಳಿಸುತ್ತಿದ್ದೆ. ಪ್ರತಿವರ್ಷ ಹತ್ತಿಪ್ಪತ್ತು ಚೀಲ ಬತ್ತ ಕಳಿಸುತ್ತಿದ್ದೆ. ಇದರಿಂದ ನಮ್ಮ ಮನೆಯ ದಾರಿದ್ರ್ಯ ಬಹುಮಟ್ಟಿಗೆ ನಿವಾರಣೆಯಾಗಿತ್ತು. ಈ ಮುಲಾಜಿನಿಂದ ನಗುತ್ತಲೇ ಬಂದ ದಾರಿಯಿಂದ ಹೆಣ್ಣಿನ ತಂದೆಯನ್ನು ಕರೆದುಕೊಂಡು ಹೋಗಿಬಿಟ್ಟ. ಹೆಣ್ಣಿನ ತಂದೆ ಇಷ್ಟಕ್ಕೇ ಕೈ ಬಿಡಲಿಲ್ಲ. ಊರಲ್ಲೆಲ್ಲ ಮುಂದಾದರೂ ನಾನು ಅವನಿಗೆ ಹೆಣ್ಣು ಕೊಡುವವನೇ ಎಂದು ಊರಿನಲ್ಲಿ ನಂಟಿನ ವ್ಯವಹಾರ ನಡೆಸಿಯೇ ಬಿಟ್ಟಿದ್ದ. ಅವರು ಸ್ವಲ್ಪ ಬಂಡವಾಳ ಇದ್ದ ಮನೆತನದವರು. ಅವರ ನಂಟು ನಮ್ಮ ದೊಡ್ಡಪ್ಪನಿಗೆ ಬೇಕಾಗಿತ್ತೆಂದು ತೋರುತ್ತದೆ. ಹೀಗಾಗಿ ನಾನು ಪೇಚಿನಲ್ಲಿ ಸಿಕ್ಕಿದ್ದೆ. ಒಂದು ಸಲ ನಮ್ಮ ದೊಡ್ಡಪ್ಪ ಬಂದಾಗ ಅವನಿಗೆ ಹೇಳಿದೆ: "ನಮ್ಮ ಆಪತ್ತಿನ ಸ್ಥಿತಿಯಲ್ಲಿ ನಮ್ಮನ್ನು ಯಾರೂ ನೋಡಲಿಲ್ಲ; ಈಗ ಅವರಿಗೆ ಒಂದು ಹೆಣ್ಣು ಕೊಟ್ಟು ಕೈತೊಳೆದುಕೊಳ್ಳುವ ಆತುರವಿರಬಹುದು. ಸ್ವತಃ ನಾನು ದುಡಿದು ನಮ್ಮ ಮನೆತನವನ್ನು ಮೇಲೆತ್ತಬೇಕೆಂಬ ಛಲದವನು. ಅವರು ಶ್ರೀಮಂತರಾದರೇನು ಅವರಿಗೆ ಕೈಯೊಡ್ಡುವವನೂ ನಾನಲ್ಲ. ಈಗ ಅವರ ನಂಟನ್ನು ನೀವು ಒಪ್ಪಿಕೊಂಡು ನನ್ನನ್ನು ಪೇಚಿಗೆ ಸಿಕ್ಕಿಸಬೇಡಿ. ನನ್ನ ಮೇಲೆ ನಕಾರಾತ್ಮಕವಾದ ಎಲ್ಲ ಭಾರಹಾಕಿ ನಿಮ್ಮ ಪಾಡಿಗೆ ನೀವು ಅವರ ಸಂಬಂಧದ ಕೈತೊಳೆದುಕೊಂಡು ಬಿಡಿ. ನನಗಂತೂ ಅವರ ನಂಟಿನಲ್ಲಿ ವಿಶ್ವಾಸವಿಲ್ಲ. ನನ್ನ

ಮದುವೆ ಎಂಬುದನ್ನು ನೀವು ಮನಸ್ಸಿನಲ್ಲೇ ತಾರದೆ ನಿರ್ಲಿಪ್ತರಾಗಿಬಿಡಿ ಎಂದು ಹೇಳಿ ಕಳಿಸಿದೆ. ಅದರಂತೆ ವರ್ತಿಸಿದ. ಅವರು ಕೊನೆಗೆ ಬೇರೆ ಕಡೆಗೆ ಆ ಹೆಣ್ಣನ್ನು ಕೊಟ್ಟು ಲಗ್ನ ಮಾಡಿಕೊಂಡರು.

ಹಿರೇಕಾಂಶಿಯಿಂದ ಒಮ್ಮೆ ಎರಡು ಗಾಡಿ ಕಟ್ಟಿಕೊಂಡು ಜೋಗದ ದಬದಬೆಯನ್ನು ನೋಡಲು ಹೋದ ಪ್ರಸ್ತಾಪ ಮಾಡಿದ್ದೇನೆ. ಆಗ ಸಿದ್ದಾಪುರದಲ್ಲಿದ್ದ ನಮ್ಮ ಸೋದರತ್ತೆ ಮಗ ಮಲ್ಲಪ್ಪ ಸೆಟ್ಟಿ ಅನ್ನುವವರ ಮನೆಗೆ ಹೋದಾಗ ಅವರ ಸಾಕುಮಗಳೊಬ್ಬಳು ಇದ್ದಳು. ಅವಳು ಇನ್ನೂ ಚಿಕ್ಕ ಹುಡುಗಿ. ಹತ್ತು ಹನ್ನೆರಡರ ಪ್ರಾಯವಿರಬೇಕು. ಆ ಹುಡುಗಿಯನ್ನು ನಮ್ಮ ಹಿರೇಕಾಂಶಿ ಬಳಗಕ್ಕೆ ತೋರಿಸಿ ಈ ಹುಡುಗಿಯನ್ನು ನಾವು ನಮ್ಮ ಚನ್ನಪ್ಪನಿಗೆ ಕೊಡಬೇಕೆಂದು ಮಾಡಿದ್ದೇವೆ ಎಂದುಬಿಟ್ಟರು. ಆ ಹುಡುಗಿ ಅಳುತ್ತ ಹೋಯಿತು. ಆ ಹುಡುಗಿಯ ತಂದೆ-ತಾಯಿಯರಿಬ್ಬರೂ ಮಲೇರಿಯಾ ಬೇನೆಯಿಂದ ಸತ್ತುಹೋಗಿದ್ದರು. ಅವಳಿಗೆ ಒಬ್ಬ ತಮ್ಮ ಓರ್ವ ತಂಗಿಯೂ ಕೂಡ ಇದ್ದರು. ಬೇಕಾದಷ್ಟು ಆಸ್ತಿ-ಪಾಸ್ತಿ ಇತ್ತು ನಿಜ. ನಮ್ಮ ಮಾವನ ಹೆಂಡತಿಯ ಅಕ್ಕನೇ ಆ ಮಕ್ಕಳ ತಾಯಿ. ಹೀಗಾಗಿ ಆ ಮಕ್ಕಳ ರಕ್ಷಣೆಯ ಹೊಣೆ ಹೊತ್ತು ಸಿದ್ಧಾಪುರ ಪೇಟೆಯ ಅವರ ಮನೆಯಲ್ಲಿಯೇ ಇದ್ದು ಆ ಮಕ್ಕಳನ್ನು ನೋಡಿಕೊಳ್ಳುತ್ತಿದ್ದರು. ಒಳ್ಳೆಯ ವೈಭವದ ಜೀವನವನ್ನು ನಡೆಸುತ್ತಲಿದ್ದರು. ಅವರ ವೈಭವದ ಜೀವನಕ್ಕೆ ಅರ್ಧಮರ್ಧ ಆ ಮನೆಯ ಐಶ್ವರ್ಯವೂ ಕರಗಿತ್ತು. ಇವರಿಗೆ ಮಕ್ಕಳಿರಲಿಲ್ಲ. ಈ ಸುದ್ದಿ ಹಾಗೂ ಹೀಗೂ ಹಬ್ಬಿತ್ತು. ಎಂಟೊಂಬತ್ತು ವರ್ಷಗಳ ಮೇಲೆ ಈ ಸುದ್ದಿ ಪುಟಿದೆದ್ದಿತು. ಹುಡುಗಿ ದೊಡ್ಡದಾಗಿತ್ತು. ಈಗಾಗಲೇ ಗೌರ್ನಮೆಂಟ್ ನೌಕರಿಯಲ್ಲಿದ್ದು ಮೈಸೂರಿನ ಓದು ಮುಗಿದ ಮೇಲೆ ಗೌರವಾರ್ಹ ನೌಕರಿಗೆ ಏರಲಿರುವ ಮತ್ತು ಸುಲಭವಾಗಿ ಸಿಗಲಿರುವ ನನ್ನಂಥವ ಅವರಿಗೆ ದೊರೆಯುವಂತಿರಲಿಲ್ಲ. ಕಾರಣ, ತಂದೆ-ತಾಯಿ ಇಲ್ಲದ ಮಕ್ಕಳು ನಮಗೇಕೆ! ನಮಗೇಕೆ! ಎಂದು ಅನೇಕರು ಬಂದು ಬಂದು ಹೋಗಿದ್ದರಂತೆ. ಈಗ ಅವರಿಗೆ ನನ್ನ ಮೇಲೆ ಎಲ್ಲಿಲ್ಲದ ಪ್ರೀತಿ-ವಿಶ್ವಾಸ ಸಹಾಯಧನ....ಇತ್ಯಾದಿ ಆಸೆ ಆಮಿಷಗಳ ಸರಮಾಲೆಯನ್ನೇ ಸುರಿಸಲು ಸಿದ್ಧಾಪುರದಿಂದ ನಮ್ಮ ಮಾವ, ಮಾವನ ಹೆಂಡತಿ ಬಂದು ಇದ್ದಕ್ಕಿದ್ದಂತೆ ಪ್ರತ್ಯಕ್ಷರಾಗಿಬಿಟ್ಟರು. ಎರಡುಮೂರು ದಿನ ಕ್ಯಾಂಪ್ ಹಾಕಿಯೇ ಬಿಟ್ಟರು. ನನಗೆ ಎಲ್ಲಿಲ್ಲದ ಗೌರವ, ಪ್ರೀತಿ-ವಿಶ್ವಾಸ ಏನೆಲ್ಲ ನಡೆದು ಹೋಯಿತು.

ಆಗ ನಾನು ಹೇಳಿದೆ, "ಮಾವಾ, ನೋಡು. ನಾವು ಬಡವರು, ಮೇಲಾಗಿ ಹಳ್ಳಿಯವರು. ನಮ್ಮ ಮನೆತನ ನೆಲಕಚ್ಚಿದ್ದು ನಿಮಗೆ ಗೊತ್ತೇ ಇದೆ. ಶತಾಯುಗತಾಯ ಆ ಮನೆತನವನ್ನು ಮೇಲೆತ್ತುವ ಸಂಕಲ್ಪ ನನ್ನದು. ಈಗ ನಾನು ಯಾವುದಾದರೂ ನಮ್ಮ ಮನೆ ಸಂಸ್ಕೃತಿಗೆ ಹೊಂದಿಕೆಯಾಗಬಲ್ಲ ಹುಡುಗಿಯನ್ನೇ ಮದುವೆಯಾಗಬೇಕೆಂದು ತೀರ್ಮಾನಿಸಿದ್ದೇನೆ. ಇನ್ನೂ ಎರಡು ವರ್ಷ ನನ್ನ ಈ ಓದು ಇದೆ. ಆಮೇಲೆ ನೋಡೋಣ. ಈಗ ಆ ಪ್ರಸ್ತಾಪ ಬೇಡ ಎಂದೆ. ಅವರು ಕೇಳಬೇಕಲ್ಲ. ನಿಮ್ಮಿಂದ ನಾವು ಏನನ್ನೂ ನಿರೀಕ್ಷಿಸುವುದಿಲ್ಲ. ನಮ್ಮ ಹುಡುಗಿಯನ್ನು ನೋಡಿಯೇ ಇದ್ದೀಯೆ. ಹಳ್ಳಿಗೂ ಹೊಂದಿಕೊಳ್ಳುತ್ತದೆ ಪಟ್ಟಣಕ್ಕೂ ಹೊಂದಿಕೊಳ್ಳುತ್ತದೆ. ಹಾಗೆ ಹೀಗೆ ಹೇಳಿ 20-25 ತೊಲೆ ಬಂಗಾರದ ದಾಗೀನುಗಳನ್ನು ಅವಳಿಗಾಗಿ ಮಾಡಿಸಿದ್ದೇವೆ. ನಾಗಮುರಿ, ವಂಕಿ, ಪದಕದ ಸರ...ಏನೆಲ್ಲ ಅವಳ ಮೈಮೇಲೆ ಹಾಕಿ ನಾವೇ ಎರಡೂ ಖರ್ಚಿಟ್ಟು ಲಗ್ನ ಮಾಡಿಕೊಡುತ್ತೇವೆ. ನಿಮ್ಮ ಮೇಲೆ ಭಾರ

ಹಾಕುವುದಿಲ್ಲ. ನಿಮ್ಮದೂ ಬಿದ್ದ ಮನೆತನ. ನಿಮಗೂ ಲಾಭ. ನಮಗೂ ನಮ್ಮ ಸಂಬಂಧ ಜಾರಿಹೋಗದಂತಾಗುತ್ತದೆ. ಹಾಗೆ-ಹೀಗೆ ಒಂದಲ್ಲ. ಅವರು ಕಲಿತ ಚಾತುರ್ಯವನ್ನೆಲ್ಲ ಉಪಯೋಗಿಸಿಬಿಟ್ಟರು. ಈ ವಿಷಯದಲ್ಲಿ ನಮ್ಮ ಮಾವನ ಹೆಂಡತಿಯ ಮಾತು ಒಪ್ಪವಿಟ್ಟಂತೆ. ಅವಳ ಆಳ-ನೀಳಗಳೇ ಸಾಮಾನ್ಯರಿಗೆ ಅರ್ಥವಾಗುವಂತಹವಲ್ಲ. ಅಷ್ಟು ಚತುರೆ ಮಾತಿನಲ್ಲಿ. ಕಣ್ಣೀರು ಹಾಕುವುದೇನು? ಮಾತಿನಲ್ಲಿ ಸಕ್ಕರೆ ಸವಿಯನ್ನು ಸುರಿಸುವುದೇನು? ಕೌಶಲ ಹೆಣ್ಣು ಜಾತಿಗೆ ಕಲಿಸದೇ ಬರುವ ಒಂದು ವಿದ್ಯೆ ಎಂದು ಕಾಳಿದಾಸ ಸುಮ್ಮನೆ ಹೇಳುತ್ತಿದ್ದನೆ? ಎರಡು ಮೂರು ದಿನವಿದ್ದು ನನ್ನ ಉಪಚಾರಕ್ಕಾಗಿ ಹಣವನ್ನು ಧಾರಾಳವಾಗಿ ವಿನಿಯೋಗಿಸಿ ನನಗೆ ಸಿನಿಮಾ ನೋಡುವ ಚಟವಿಲ್ಲದಿದ್ದರೂ ಸಿನಿಮಾ ತೋರಿಸಿ, ನಾಟಕಕ್ಕೂ ಕರೆದುಕೊಂಡು ಹೋಗಿ ಮೂರುದಿನ ನನ್ನ ಓದನ್ನು ಹಾಳುಮಾಡಿ, ನನ್ನ ಅನೇಕ ಮಿತ್ರರನ್ನು ಕಂಡು ಅವರಿಂದಲೂ ನನಗೆ ಉಪದೇಶವಾಗುವಂತೆ ಜಾಣಾಕ್ಷತನ ಮಾಡಿ ಮುಕ್ಕಾಲು ಭಾಗ ನನ್ನನ್ನು ಹಣ್ಣು ಮಾಡಿದರು. ಕೊನೆಗೆ ನಾನು ನಮ್ಮ ತಂದೆ, ದೊಡ್ಡಪ್ಪ ಒಪ್ಪಬೇಕು ಅಂದರೆ ನಾನು ಲಗ್ನವಾಗುವುದು. ಇಲ್ಲ ಎಂದರೆ ಇಲ್ಲ ಎಂಬ ಷರತ್ತಿನ ಮೇಲೆ ಒಪ್ಪಿಗೆಕೊಟ್ಟು ಅವರನ್ನು ಸಾಗುಹಾಕಿದೆ. ನಿಮ್ಮ ದೊಡ್ಡಪ್ಪ-ತಂದೆಯವರನ್ನು ಒಪ್ಪಿಸುವ ಭಾರ ನಮ್ಮ ಮೇಲಿರಲಿ ಎಂದು ಹೇಳಿದರು. ಹೊರಟುಹೋದ ಅವರು ಒಂದು ರಾದ್ಧಾಂತದ ಮದುವೆ ಮಾಡಿ ನನ್ನ ಜೀವನೋತ್ಸಾಹದ ಬಹುಭಾಗವನ್ನು ಕಂದಿಸಿ ಕುಂದಿಸಿಬಿಟ್ಟರು.

ಕೆಲವೇ ದಿನಗಳಲ್ಲಿ ವ್ಯಾಪಾರ ಕುದುರಿಸಿ 1950ನೇ ಇಸ್ವಿ ಮೇ ತಿಂಗಳು ಆರನೆಯ ತಾರೀಖೆಂದು ಜ್ಞಾಪಕ. ಆ ದಿನ ಲಗ್ನವಿಟ್ಟುಕೊಂಡೇಬಿಟ್ಟರು. ಮದುವೆಯೆಂದರೆ ನಾವು ಬರಿಗೈಯಿಂದ ಹೋಗಲಾದೀತೆ? ಹೆಣ್ಣಿಗೆ ವೀಳ್ಯದ ಸೀರೆ, ಧಾರಿ ಸೀರೆ, ತಾಯಿಸೀರೆ...ಏನೇನೋ ಇದೆಯಲ್ಲ ಅದನ್ನಾದರೂ ಮಾಡಿಕೊಳ್ಳುವುದು ಬೇಡವೇ? ನನ್ನ ಮದುವೆಗೆಂದು ಹಿರೇಕಾಂಶಿಯವರು ಅಭಿಮಾನದಿಂದ ಸ್ವಲ್ಪ ಹಣಕೊಟ್ಟರು. ನಮ್ಮ ಮನೆಯಲ್ಲಿ ಆಗಲೂ ದಾರಿದ್ರ್ಯದ ಬೇಗೆ, ಮೊದಲಿನಷ್ಟಲ್ಲದಿದ್ದರೂ ಇತ್ತು. ಇದಕ್ಕಾಗಿ ಸಾಲಸೋಲ ಮಾಡಬೇಡಿರೆಂದು ನಾನು ಇನ್ನೂರು ರೂಪಾಯಿ ಹಿರೇಕಾಂಶಿಯವರಿಂದ ಪಡೆದುಕೊಟ್ಟೆ. ಮನೆಯವರು ಅಲ್ಪಸ್ವಲ್ಪ ಕೂಡಿಸಿ ಸೀರೆ ಕುಪ್ಪಸ, ಬಟ್ಟೆ-ಬರೆ, ಮಾಂಗಲ್ಯ, ವೀಳ್ಯಕ್ಕಾಗಿ ಸಕ್ಕರೆ-ಎಲೆ-ಅಡಿಕೆ ಏನೇನೋ ಮದುವೆ ಸಂಭಾರ ಹೊತ್ತುಕೊಂಡು ಸಿದ್ಧಾಪುರಕ್ಕೆ ಹೋದೆವು. ನಮ್ಮವರು ಹೇಳಿಕೇಳಿ ಹಳ್ಳಿಯ ಬಳಗ. ಪೇಟೆಯವರು ಥಳಕು ಬಳಕು ಚಮಕು ಇಲ್ಲದ ಸಾಮಾನ್ಯ ಜನ ಅಲ್ಲವೆ? ಬೀಗರಾದ ನಮ್ಮನ್ನು ಎದುರುಗೊಳ್ಳಲು ಬಂದಾಗಲೇ ಪೇಟೆಯವರ ತಿರಸ್ಕಾರದ ಮುಖಮುದ್ರೆಯನ್ನೂ, ಚೇಷ್ಟೆಯ ಪಿಸುದನಿಯನ್ನೂ ಆಲಿಸುವಂತೆ ಆಗಿಹೋಯಿತು. ತನ್ನ ತಾಯಿಯ ತಮ್ಮನೇ ಆದ ನಮ್ಮ ದೊಡ್ಡಪ್ಪನ ವೇಷ-ಭೂಷಣಗಳನ್ನು ಕಂಡು ನಮ್ಮ ಮಾವ ಅನ್ನಿಸಿಕೊಳ್ಳುವ ಪ್ರಾಣಿಯೇ ಮೂಗುಮುರಿದು "ಹಳ್ಳಿ ಜನಾ ನೀವು, ನಿಮಗೆ ಏನೂ ತಿಳಿಯುವುದಿಲ್ಲ" ಎಂದು ಬಿಟ್ಟನಂತೆ. ನಮ್ಮೂರ ವೃದ್ಧ ಶಾಲಾ ಮಾಸ್ತರರಾದ ಬಸವಣ್ಣಪ್ಪ ಎಂಬುವರು ನನ್ನ ಮೇಲಿನ ಅಭಿಮಾನದಿಂದ ಲಗ್ನಕ್ಕೆ ಬಂದರೆ ಅವರನ್ನು ಕಂಡು ಅಣಗಿಸಿಬಿಟ್ಟರಂತೆ ಯಾರೋ ಒಬ್ಬಿಬ್ಬರು. ಇವೆಲ್ಲ ಒಂದೊಂದಾಗಿ ಕಿವಿಗೆ ಬಿದ್ದವು. ನಾವು ಸಿದ್ಧಾಪುರಕ್ಕೆ ಬಂದ ದಿನ ರಾತ್ರಿಯೇ ಮೊದಲು ವೀಳ್ಯ ಪ್ರಸ್ತವಾಗಬೇಕಲ್ಲವೆ? ಆ ದಿನ ನಾವು ಒಯ್ದು ಸೀರೆ ತೀರಾ ಕಡಿಮೆ ಬೆಲೆಯೆಂದು ಅದರ ಮೇಲೆ ಪ್ರಥಮತಃ ಟೀಕೆ-ಟಿಪ್ಪಣಿ

ಪ್ರಾರಂಭವಾಗಿಬಿಟ್ಟಿತು. ಈ ಮೊದಲು ಅವರು ನಮಗೆ ನೀವೇನಾದರೂ ತಂದರೆ ತನ್ನಿ, ಇಲ್ಲದಿದ್ದರೆ ಇಲ್ಲ ಎಂದು ಹೇಳಿದವರು. ಈಗ ನಾವು ಬರಿಗೈಯಿಂದ ಹೋಗುವುದು ಮರ್ಯಾದೆಯಲ್ಲವೆಂದು ಒಯ್ಯಬೇಕಾದುದನ್ನೆಲ್ಲ ಒಯ್ದು ನಿಯಮದ ಪ್ರಕಾರ ವ್ಯವಹರಿಸಿದ್ದರೂ, ಆ ಊರಿನ ಕೆಲವು ಪ್ರೌಢೆಯರ ಮಾತು ಕೇಳಿ ಹೀಗೆಲ್ಲ ನಮ್ಮನ್ನು ಹೀಯಾಳಿಸುತ್ತಾರೆಂದು ಅನಂತರ ಗೊತ್ತಾದ ಸಂಗತಿ. ನಾನಂತೂ ಅವರನ್ನು ಏನನ್ನೂ ಕೇಳಿದವನಲ್ಲ. ಮರುದಿನ ಧಾರೆ ಮುಹೂರ್ತದಲ್ಲೂ ಅಷ್ಟೆ. ನಾವು ಧಾರೆಸೀರೆಯೆಂದು ತೋಪಿನ ಸೆರಗಿನ ಸೀರೆ ಒಯ್ದಿದ್ದರೂ ಅದಕ್ಕೂ ತಕರಾರು. ಹೀಗೆಲ್ಲ ರಾದ್ಧಾಂತವೆಬ್ಬಿಸಿಬಿಟ್ಟರು. ಹಳ್ಳಿಯವರು ಪಟ್ಟಣದ ಹೆಣ್ಣಿನವರ ಮನೆಗೆ ಲಗ್ನಕ್ಕೆ ಹೋದರೆ ಹಳ್ಳಿಯವರನ್ನು ಅಪಹಾಸ್ಯ ಮಾಡುತ್ತಿದ್ದುದನ್ನು ಅನೇಕ ಪ್ರಸಂಗಗಳಲ್ಲಿ ಕೇಳಿದ ನನಗೇ ಈಗ ಅದು ತಿರುಗಿದುದನ್ನು ಅರಿತು ಬಹಳ ಬೇಸರವಾಯಿತು. ಒಂದೆರಡು ಸಲ ಅವರ ಮಹಡಿಯ ಮೇಲೆ ಹೋಗಿ ಅತ್ತುದೂ ಉಂಟು. ನನ್ನ ಹಿರೇಕಾಂಶಿಯ ಬಂಧುಗಳೂ ಕೆಲವರು ಬಂದವರು ಕೋಪಗೊಂಡು 'ನಿಮಗೆ ಬೇರೆ ಎಲ್ಲೂ ಹೆಣ್ಣು ಸಿಗುತ್ತಿರಲಿಲ್ಲವೇನು?' ಎಂದದ್ದೂ ಉಂಟು. ಹಳ್ಳಿಯವರಾದ ಅವರೂ ಈ ಅಪಮಾನದ ಸೆಕೆ ಬಡಿಸಿಕೊಂಡರು.

ಮಾವನಾದ ಮಲ್ಲಪ್ಪಸೆಟ್ಟಿಯನ್ನು ಬಾಲ್ಯದಲ್ಲಿ ನಮ್ಮ ದೊಡ್ಡಪ್ಪನೇ ಎತ್ತಿ ಆಡಿಸಿದ್ದವನು. ನಮ್ಮೂರಿನಲ್ಲಿ ಅವನನ್ನು ಎಲ್ಲಪ್ಪ ಎಂದು ಇಷ್ಟೇ ಕರೆಯುತ್ತಿದ್ದರು. ಸಿದ್ಧಾಪುರದ ಹೆಣ್ಣನ್ನು ಲಗ್ನವಾದ ಮೇಲೆ ಸಿದ್ಧಾಪುರದಲ್ಲಿ ಮಲ್ಲಪ್ಪ ಸೆಟ್ಟಿಯಾಗಿದ್ದ. ತನ್ನ ಅಕ್ಕನ ಮಗನಲ್ಲವೆ ಆದ್ದರಿಂದ; ಅಲ್ಲದೆ ಆಗ ಅವರು ಕಡುಬಡವರಾದ್ದರಿಂದ ನಮ್ಮ ಮನೆತನದ ಆಶ್ರಯದಲ್ಲೇ ಇದ್ದವರು; ನಮ್ಮ ಹಿರಿಯರೇ ಅವರಿಗೊಂದು ಮನೆ ಬಿಟ್ಟುಕೊಟ್ಟಿದ್ದರು. ಬಾಲ್ಯದ ಸಲಿಗೆಯಿಂದ ನಮ್ಮ ದೊಡ್ಡಪ್ಪ ಏಕವಚನದಲ್ಲಿ ಅವನಿಗೆ "ಎಲ್ಲಾ" ಅಂದುಬಿಟ್ಟನಂತೆ. ಅದಕ್ಕಾಗಿ ರಾದ್ಧಾಂತವೆಬ್ಬಿಸಿ ಹಳ್ಳಿಜನಕ್ಕೆ ಏನೇನೂ ಗೊತ್ತಿರುವುದಿಲ್ಲ ಗಮಾರರು! ಎಂದು ನಮ್ಮ ದೊಡ್ಡಪ್ಪನ ಮೇಲೂ ರೇಗಾಡಿಬಿಟ್ಟನಂತೆ. ನಾನು ಈ ಮದುವೆಯೇ ಬೇಡವೆಂದು ಎದ್ದು ಹೋಗಲು ಮನಸ್ಸು ಮಾಡಿದೆ. ಕೆಲವು ವಿವೇಕಿಗಳು ಬಂದು, ಬುದ್ಧಿ ಹೇಳಿ ಹಾಗೆಲ್ಲ ಮಾಡಬೇಡಿ, ಏನೋ ಬರುತ್ತೆ ಹೋಗುತ್ತೆ. ಯಾರೂ ಇಲ್ಲದ ಮಕ್ಕಳು. ಮಕ್ಕಳಿಗೆ ಅನ್ಯಾಯವಾಗುತ್ತದೆ ಎಂದು ಹೇಳಿದ ಮಾತಿನಿಂದಾಗಿ ಸುಮ್ಮನಾದೆ. ನಮ್ಮ ದೊಡ್ಡಪ್ಪ ಧಾರಾ ಮುಹೂರ್ತ ಆದ ಮೇಲೆ ಊಟ ವಗೈರೆ ಏನೂ ಮಾಡದೆ ಎಲ್ಲರನ್ನೂ ಕರೆದುಕೊಂಡು ಊರಿಗೆ ಹೊರಟು ನನಗೆ "ತಮ್ಮ ಹೆಣ್ಣು ಕರೆದುಕೊಂಡು ಊರಿಗೆ ಬಂದುಬಿಡು. ನಾವು ಈ ಮೂರ್ಖನ ಮನೆಯಲ್ಲಿ ಊಟ ಮಾಡುವುದಿಲ್ಲ. "ನಾವು ಆಡಿಸಿದ ಕೋತಿ ನಮಗೇ ಹಲ್ಲುಕಿರಿದುಬಿಟ್ಟಿತು" ಅನ್ನುವ ಗಾದೆ ಆಯ್ತು. ನೀನೇನೂ ಮನಸ್ಸಿಗೆ ಬೇಸರಪಟ್ಟುಕೊಳ್ಳಬೇಡ" ಏನೇನೋ ಸಮಾಧಾನ ಹೇಳಿ ಹೋದ. ಮದುವೆ ಮುಗಿದು ಮೂರು ನಾಲ್ಕು ದಿನ ಅಲ್ಲಿ ಕಳೆಯಲಾರದೆ ಕಾಲ ಕಳೆದೆ. ಸಿದ್ಧಾಪುರ ಪಕ್ಕದ ಹೊಸೂರಿನ ಅಣ್ಣಾಜಿ ಗೌಡರೆಂಬ ಸಭ್ಯ ಶ್ರೀಮಂತರ ಪರಿಚಯವಾಗಿತ್ತಾಗಿ ಅವರ ಆದರೋಪಚಾರಗಳಲ್ಲಿ ಎರಡು ಮೂರು ದಿನ ಹೇಗೆ ಹೇಗೋ ಕಾಲಕಳೆದು ನನ್ನ ಹೆಂಡತಿಯನ್ನು ಕರೆದುಕೊಂಡು ನಮ್ಮ ಊರಿಗೆ ಬಂದು ಅವಳನ್ನು ನಮ್ಮ ಮನೆಯಲ್ಲಿ ಬಿಟ್ಟು ಮೈಸೂರಿಗೆ ಹೊರಟು ಬಂದುಬಿಟ್ಟೆ. ಹುಡುಗಿಯೇನೋ ಸಂಸ್ಕಾರಿ. ಅವಳು ನನಗೆ ತನ್ನ ಚಿಕ್ಕಮ್ಮನ ಬಗೆಗೆ ಅನಂತರ ಬಹಳಷ್ಟು ಆಪಾದನೆ ಮಾಡಿ

ನೀವೇನೂ ಮನಸ್ಸಿಗೆ ತಿಳಿದುಕೊಳ್ಳಬೇಡಿ ಎಂದೂ ಸಮಾಧಾನ ಹೇಳಿದಳು. ನಾನು ಅವರಿಂದ ಒಂದು ಜೊತೆ ಸಾಮಾನ್ಯ ಪಂಚೆ, ಒಂದು ಕೋಟು, ಒಂದು ಷರ್ಟ್ ಇದರ ಮೇಲೆ ಏನನ್ನೂ ಪಡೆದಿರಲಿಲ್ಲ. ಮಗಳನ್ನು ಕಳಿಸುವಾಗ ಅವರು ಕೊಡಲು ಹೇಳಿದ ಬಂಗಾರದ ಒಂದು ದಾಗೀನೂ ಇರಲಿಲ್ಲ. ನಾನು ಆವಳನ್ನು "ವಂಕಿ-ಟೀಕೆ ಎಲ್ಲವನ್ನು ಕೊಡುತ್ತೇವೆ ಎಂದಿದ್ದರಲ್ಲ, ಅವನ್ನು ಏಕೆ ಹಾಕಿ ಕಳಿಸಲಿಲ್ಲ" ಎಂದು ಕೇಳಿದೆ. "ಕೊಡುತ್ತಾರಂತೆ. ಅಲ್ಲಿ ಇಲ್ಲಿ ತಿರುಗಾಡುತ್ತೀರಿ, ಭದ್ರವಾದ ಮನೆಗಿನೆ ಇಲ್ಲ. ಮುಂದೆ ನೀವು ಯೋಗ್ಯವಾದ ನೌಕರಿ ಮಾಡುವ ಊರಿನಲ್ಲಿ ನೆಲಸಿದ ಮೇಲೆ ಒಯ್ಯುವಿಯಂತೆ ಈಗ ಬೇಡ ಎಂದರು" ಎಂದು ತಿಳಿಸಿತು. ಅದಕ್ಕೂ ನಾನೂ ತಲೆಕೆಡಿಸಿಕೊಳ್ಳಲಿಲ್ಲ. "ನಾವು ಹುಟ್ಟಾ ಬಂಗಾರ ಕಂಡವರೂ ಅಲ್ಲ. ಕೊಂಡವರೂ ಅಲ್ಲ. ಅದು ನಮ್ಮ ಮೈಗೆ ಒಗ್ಗಿ ಬರುವುದೂ ಇಲ್ಲ. ಹೋಗಲಿ ಬಿಡು" ಎಂದು ಹೇಳಿ ನಗಿಸಿದೆ.

ಇದು ಒಂದು ರೀತಿಯಿಂದ ನಿಜವೂ ಆಗಿತ್ತು. ಕೇವಲ ವ್ಯವಸಾಯವೊಂದರಿಂದಲೇ, ಅದೂ ಕೂಡ ಬೇರೆಯವರ ಹೊಲದ ಮೇಲೆಯೇ ಬೆಳೆದು ನಿಂತ ನಮ್ಮ ವ್ಯವಸಾಯದ ಜೀವನದಲ್ಲಿ ದುಡಿಮೆಯ ಬಹುಪಾಲನ್ನು ಜಮೀನುಮಾಲೀಕರಿಗೆ ಕೊಟ್ಟು ನಮಗೆ ಉಳಿಯುತ್ತಿದ್ದುದು ಅಹನ್ಯಹನಿ ಜೀವನಕ್ಕೆ ಬೇಕಾದ ಧಾನ್ಯ ವಗೈರೆ ಅಷ್ಟೆ. ಅದರಲ್ಲಿಯೂ ಒಂದೆರಡು ವರ್ಷ ಬೆಳೆ ಕೈಗೆ ಹತ್ತದಿದ್ದಾಗ ನಮ್ಮ ಕಷ್ಟ ಯಾವ ವೈರಿಗೂ ಬೇಡ. ಎಲ್ಲವನ್ನೂ ಹೊಲದ ಒಡೆಯರಿಗೆ ಅಳೆದು ನಾವು ಕಂಬಳಿ ಜಾಡಿಸುತ್ತ ಬರಬೇಕಾಗಿತ್ತು. ಇಂಥ ಬಡ ರೈತರ ಪರಿಸರದಲ್ಲಿ ಹುಟ್ಟಾ ವ್ಯವಸಾಯಗಾರರ ಮಧ್ಯದಲ್ಲಿ ಬೆಳೆದು ಬಂದ ನನಗೆ ಬಂಗಾರವೆಂದರೆ ಅದು ನಮ್ಮಂಥವರಿಗಲ್ಲ, ನಮ್ಮ ಮೈಗೆ ಅದು ಆಗಿಬರದು ಎನ್ನುವ ಮನೋಭಾವ ಹುಟ್ಟಿನ ಜೊತೆಗೇ ಅಂಟಿಬಂದಿದ್ದ ಒಂದು ಸಂಸ್ಕಾರವೋ ಇನ್ನೊಂದೋ ಏನೋ ಆಗಿತ್ತು. ಆದ್ದರಿಂದ ಬಂಗಾರಕ್ಕಾಗಿ ತಲೆಕೆಡಿಸಿಕೊಳ್ಳಲಿಲ್ಲ. ಇಂದಿಗೂ ನಾನು ಬಂಗಾರ ಕಂಡವನೂ ಅಲ್ಲ. ನನ್ನ ಮಕ್ಕಳಿಗೆಂದು ಒಂದು ತೊಲ ಬಂಗಾರವನ್ನೂ ನಾನು ಕೊಂಡಿಲ್ಲ, ಕೊಳ್ಳುವುದಿಲ್ಲ.

ನಾನು ನಮ್ಮೂರಿನಲ್ಲಿ ನಾಲ್ಕಾರುದಿನ ಕಾಲ ಕಳೆದು ನಮ್ಮವಳನ್ನು ಅಲ್ಲಿಯೇ ಬಿಟ್ಟು ಮೈಸೂರಿನಲ್ಲಿ ಮನೆ ಮಾಡಿ ಬಂದು ಕರೆದುಕೊಂಡು ಹೋಗುತ್ತೇನೆಂದು ಹೇಳಿ ಮೈಸೂರಿಗೆ ಬಂದುಬಿಟ್ಟೆ. ನಾನು ಮೈಸೂರಿಗೆ ಹೋದ ಮೇಲೆ ಬೇಗ ಮನೆ ಸಿಗಲಿಲ್ಲ. ಒಂದು ತಿಂಗಳು ತಡವಾಗಿ ಸಿಕ್ಕಿತು. ಅಷ್ಟರಲ್ಲಿ ನಮ್ಮ ಮಾವನೋ ಇನ್ನಾರೋ ಬಂದು ಮೊದಲ ಸಲ ತವರುಮನೆಗೆ ತಿಂಗಳು ತುಂಬುವುದರೊಳಗಾಗಿ ಕರೆದುಕೊಂಡು ಹೋಗಬೇಕೆನ್ನುವ ನಿಯಮವಂತೆ. ಆ ನೇಮ ಪಾಲಿಸಲು ಕರೆದುಕೊಂಡು ಹೋಗಿಬಿಟ್ಟರೆಂದು ತಿಳಿದುಬಂತು. ನಾನು ಸಿದ್ಧಾಪುರದವರಿಗೆ 'ನನಗೆ ಸಿದ್ಧಾಪುರಕ್ಕೆ ಬರಲು ಬಿಡುವಿಲ್ಲ; ನಮ್ಮ ಕಾಲೇಜು ಅಭ್ಯಾಸ ಭರದಿಂದ ಸಾಗಿದೆ. ಇದೇ ಕೊನೆಯ ವರ್ಷದ ಪರೀಕ್ಷೆಯ ಅಭ್ಯಾಸ. ಬಿಡುವಿಲ್ಲದೆ ಓದಬೇಕು.' ಹಾಗೆ ಹೀಗೆಂದು ಅಲ್ಲಿಗೆ ಹೋಗಲು ಮನಸ್ಸಿಲ್ಲದೆ ಒಂದೆರಡು ಪುಟ ತುಂಬ ಸುಳ್ಳುಪಳ್ಳನ್ನೆಲ್ಲ ಸೇರಿಸಿ ಕಾಗದ ಬರೆದು ನೀವೇ ಕರೆದುಕೊಂಡು ಬಂದು ಬಿಟ್ಟುಹೋಗಬೇಕೆಂದು ತಿಳಿಸಿಬಿಟ್ಟೆ. ಮುಂದೆ ಏಳೆಂಟು ದಿನದಲ್ಲಿ ಅತ್ತೆ ಅನ್ನಿಸಿಕೊಂಡ ಆ ಪ್ರಾಣಿ ನನ್ನ ಹೆಂಡತಿಯನ್ನು ಕರೆದುಕೊಂಡು ಮುಸುಗುಡುತ್ತಲೇ ಬಂದುಬಿಟ್ಟಳು. ಮೊದಲ ದಿನ ಹೆಂಡತಿಯನ್ನು ನನ್ನ

ಸನಿಹಕ್ಕೂ ಬರಗೊಡದ ಹಾಗೆ ಮಾಡಿಬಿಟ್ಟಳು. ಚಿಕ್ಕಮ್ಮ ಎಂದರೆ ಹೆತ್ತ ತಾಯಿಯಂತಿದ್ದ ಆಕೆ ಆ ಹುಡುಗಿಗೆ "ನಾನು ಹೋದ ಮೇಲೆ ಗಂಡ ಹೆಂಡತಿ ಕೂಡಿ ಬಾಳುವುದು ಇದ್ದೇ ಇದೆ. ನಾನು ಹೋಗುವವರೆಗೆ ನನ್ನ ಜೊತೆಗೇ ಇರಮ್ಮ ನನಗೊಬ್ಬಳಿಗೇ ಪರಸ್ಥಳದಲ್ಲಿ ಭಯ" ಎಂದಿದ್ದಳಂತೆ. ಇಂಥ ಅಲೌಕಿಕ ದುರಹಂಕಾರಿ ಆ ಹೆಂಗಸು. ಇದೇ ಮೈಸೂರಿಗೆ ಹಿಂದೆ ನನ್ನ ಒಪ್ಪಿಗೆ ಕೇಳಲು ಬಂದಾಗಿನ ಅವಳ ಮುಖವಾಡವೇ ಒಂದು ರೀತಿಯಿತ್ತು, ಲಗ್ನದ ಸಮಯದಲ್ಲಿ ಅದರ ವಿರುದ್ಧ ಸ್ವಭಾವ ತೋರಿದಳು. ಈಗಂತೂ ಹೃದಯಶೂನ್ಯಳೂ, ಮಾನವಸಹಜ ಸೂಕ್ಷ್ಮಭಾವನೆಗಳನ್ನೇ ಅರಿಯದ ಶಠೆಯಂತೆ, ಕುಲೀನಳಲ್ಲದವಳಂತೆ, ಅನಾಗರಿಕಳಂತೆ ನನಗೆ ಕಂಡದ್ದಂತೂ ನಿಜ. ಮನೆಗೆ ಬಂದ ಮೇಲೆ ನಾನೂ ಅವಳಂತೆ ತಿರಸ್ಕರಿಸಬಾರದಷ್ಟೆ. ಎಲ್ಲವನ್ನೂ ನುಂಗಿಕೊಂಡು ಸುಮ್ಮನೆ ಇದ್ದೆ. ಒಂದೆರಡು ದಿನ ಇಟ್ಟುಕೊಂಡು ಅಲ್ಲಿಂದ ತೊಲಗಿಸಿಬಿಟ್ಟೆ. ಅನಂತರ ನನ್ನ ಹೆಂಡತಿಯಿಂದ ಎಳೆ ಎಳೆಯಾಗಿ ಎಳೆದೆಳೆದು ಅವಳ ವ್ಯಕ್ತಿತ್ವದ ಪರಿಚಯ ಮಾಡಿಕೊಂಡೆ. ಇದೇ ಕೊನೆ ಪುನಃ ಅವಳ ಮುಖವನ್ನೇ ನಾನು ನೋಡದಿರುವ ಸೌಭಾಗ್ಯವನ್ನು ದೇವರು ನನಗೆ ಉಂಟುಮಾಡಿಬಿಟ್ಟ.

ಇಂಥ ರಾದ್ಧಾಂತರದ ಮದುವೆ ನನಗಾದದ್ದು; ಆದರೆ ಹುಡುಗಿ ಸಂಸ್ಕಾರಿ ಹೃದಯವುಳ್ಳದ್ದು, ಬಾಲ್ಯದಿಂದ ಚಿಕ್ಕಮ್ಮನ ಕಾಟ ಸಹಿಸಿ ಸಹಿಸಿ ಸದ್ಯ ಯಾವಾಗ ಮನೆ ಬಿಟ್ಟೇನೋ ಎನ್ನಿಸಿತ್ತಂತೆ. ಆದರೆ ತನ್ನ ತಂಗಿ-ತಮ್ಮಂದಿರಿಗಾಗಿ ಪದೇ ಪದೇ ಅಳುತ್ತಿದ್ದುದು ಕಂಡುಬರುತ್ತಿತ್ತು. ನಾನು ಆಕೆಗೆ ಸುಳ್ಳೇ ಆದರೂ ಇನ್ನೂ ಕೆಲ ದಿನಗಳಾದ ಮೇಲೆ ನನಗೆ ಹೈಸ್ಕೂಲ್ಗೆ ಅಪಾಯಿಂಟ್ ಆಗುತ್ತದೆ. ಆಗ ಇಬ್ಬರನ್ನೂ ಕರೆಸಿಕೊಂಡು ಹತ್ತಿರ ಇಟ್ಟುಕೊಳ್ಳೋಣ ಎಂದು ಸಮಾಧಾನ ಮಾಡುತ್ತಿದ್ದೆ. ಆದರೆ ಅದಕ್ಕೆ ಆತಂಕ ವ್ಯಕ್ತಪಡಿಸುತ್ತ "ಆಗ ನಮ್ಮ ಚಿಕ್ಕಮ್ಮ ಸುಮ್ಮನಿದ್ದಾಳೆಯೇ? ನನ್ನ ಪ್ರಾಣ ತೆಗೆದುಬಿಡುತ್ತಾಳೆ. ಅಲ್ಲದೆ ಅಲ್ಲಿಯ ಎರಡು ಮನೆ, ಗದ್ದೆ ಬೇರೆ ಇದೆ. ಅದರ ಗತಿ ಏನು?" ಇತ್ಯಾದಿ ಎಲ್ಲವನ್ನು ಮುಗ್ಧಭಾವದಿಂದ ಏನೇನೋ ನೆನೆಸಿಕೊಂಡು ಅಳುವುದಕ್ಕೆ ಪ್ರಾರಂಭ. ಆಮೇಲೆ ನನ್ನ ಏನೋ ತತ್ವಾಲೋಚಿತ ಸಮಾಧಾನ. ಹೀಗೆ ಕೆಲವು ದಿನ ಸಿಹಿಕಹಿಗಳ ಸಮರಸದೊಡನೆ ನಮ್ಮ ನೂತನ ಗೃಹಸ್ಥ ಗೃಹಿಣೀಪರ ಜೀವನ ಸಾಗಿತ್ತು. ಹದಿನೆಂಟು ಹತ್ತೊಂಭತ್ತು ಪ್ರಾಯದವಳಾಗಿದ್ದರೂ ಲೌಕಿಕಾನುಭವ ವಿಶಿಷ್ಟವಾಗಿದ್ದ ಅವಳ ಭಾವನೆಗಳು ನನ್ನನ್ನು ಚಕಿತಗೊಳಿಸುತ್ತಿದ್ದವು.

ಒಂದುದಿನ ಶಾಕುಂತಲ ನಾಟಕವನ್ನು (ಬಸವಪ್ಪ ಶಾಸ್ತ್ರಿ ವಿರಚಿತ ಕನ್ನಡಾನುವಾದ) ಅವಳ ಕೈಗೆ ಕೊಟ್ಟು ಶಕುಂತಲೆ ತನ್ನ ಗಂಡನ ಮನೆಗೆ ಹೊರಟು ನಿಂತಾಗಿನ ಸಂದರ್ಭವನ್ನು ಓದುವುದಕ್ಕೆ ಹಚ್ಚಿದೆ. ತಿಳಿಯದಿದ್ದ ಅರ್ಥವನ್ನು ನನ್ನಿಂದ ಕೇಳುತ್ತ ಓದತೊಡಗಿದಾಗ ಅವಳ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿವುದನ್ನು ಕಂಡೆ. ಕೊನೆಗೆ ಬಿಕ್ಕಿ ಬಿಕ್ಕಿ ಅತ್ತುದೂ ಉಂಟು. "ಅಯ್ಯೋ, ನನ್ನಿಂದ ಓದಲಾಗುವುದಿಲ್ಲಪ್ಪ, ಅಳುವುದಕ್ಕೆ ಹಚ್ಚುತ್ತದೆ" ಎಂದು ಎದ್ದು ಹೋಗಿ ತುಂಬ ಹೊದೆದು ಮಲಗಿದ ಆ ಜೀವ ಯಾವ ತನ್ನ ಜೀವನದ ಅನುಭವವನ್ನು ಮೆಲಕು ಹಾಕಿ ಕಣ್ಣೀರು ಹಾಕಿತೋ ಹೊದ್ದುಕೊಂಡ ದುಪ್ಪಟ್ಟಿಯೇ ಬಲ್ಲುದು, ಹಾಸಿಗೆಯೇ ಬಲ್ಲುದು. ನಾನೂ ಕೂಡ ಅವಳು ಭಾವಜೀವನದ ಎಲ್ಲ ಸೂಕ್ಷ್ಮ ನರನಾಡಿಗಳ ಅನುಭವ ಪಡೆಯಲೆಂದು ಭಾವಿಸಿ ಅವಳು ಆ ಸಮಾಧಿಯಿಂದ ಬಹಿರ್ಮುಖತೆಗೆ ಬರುವ ತನಕ ಅವಳ ಹತ್ತಿರಕ್ಕೂ ಸುಳಿಯಲಿಲ್ಲ. ಇವಳ ಈ ಕೆಲವು ಅತ್ಯುತ್ತಮ ಗುಣ-ಸ್ವಭಾವಗಳ ಕಾರಣ

ವಾಗಿ ಮದುವೆಯಲ್ಲಿ ನನಗೂ ನಮ್ಮ ಊರಿನವರಿಗೂ, ದೊಡ್ಡಪ್ಪ-ಮಾಸ್ತರ ಮೊದಲಾದವರಿಗಾದ ಅಪರಾಧ ಸಹಸ್ರಗಳನ್ನೂ ಮರೆತುಬಿಟ್ಟೆ.

ಅವಳು ಜೀವಂತವಿರುವವರೆಗೆ ನೀರು ತರುವ ಅನುವು ಆಪತ್ತುಗಳಲ್ಲಿ ಅವಳ ಸಹಾಯಕ್ಕೆ ಹೋಗಿ ನಿಂತು ಅಷ್ಟು ಇಷ್ಟು ಕೆಲಸ ಮಾಡುವ ನನ್ನ ಪ್ರಯತ್ನಗಳನ್ನು ನಡೆಯಗೊಡಲಿಲ್ಲ. ನೀವು ಹೋಗಿ "ಹೆಂಗಸರ ಕೆಲಸ ಹೆಂಗಸರಿಗೆ, ಗಂಡಸರ ಕೆಲಸ ಗಂಡಸರಿಗೆ" ಎಂದು ನಗುತ್ತ ಹೇಳಿ, ಎಷ್ಟೇ ಶ್ರಮದ್ದಾಗಿರಲಿ ತಾನೇ ಮಾಡಿಕೊಳ್ಳುವಾಗಿನ ಅವಳ ಸಹೃದಯತೆಗೆ, ಕರ್ತವ್ಯಬುದ್ಧಿಗೆ ನಾನು ಸುಖಿ ಎಂದು ಮನಸ್ಸಿನಲ್ಲಿ ಅಂದುಕೊಂಡು ಉತ್ಸಾಹಿತನಾಗಿದ್ದೂ ಉಂಟು. ದೊಡ್ಡವರು ಹೇಳುವುದುಂಟು 'ರತ್ನಗಳಲ್ಲೆಲ್ಲ ಸ್ತ್ರೀರತ್ನವೇ ಶ್ರೇಷ್ಠ' ಎಂದು. ಚಾಣಕ್ಯ 'ನ ಸ್ತ್ರೀ ರತ್ನ ಸಮಂತರತ್ನಂ' ಎಂದು ಸೂತ್ರ ಹೇಳಿ ಆ ರತ್ನ ದುರ್ಲಭ ಎಂದೂ ಮುಂದೆ ಹೇಳಿದ. ರತ್ನ ಎಲ್ಲ ಕಡೆಗೂ ಎಲ್ಲರಿಗೂ ಲಭ್ಯವಾಗುವುದಿಲ್ಲ, ಎಲ್ಲೋ ಕೆಲವು ಕಡೆ ಕೆಲಕೆಲವರಿಗೆ ಸಿಗುವುದುಂಟು. ಅನೇಕರಿಗೆ ರತ್ನದಂತೆ ಕಾಣುವ ಗಾಜಿನ ಚೂರು, ಬಳೆಚೂರು ಇವೂ ಇಲ್ಲದಿದ್ದರೆ ಒಡಕು ಹಂಚಿನ ಚೂರು ಸಿಗುತ್ತವೆ. ನನಗೆ ಸಿಕ್ಕ ಈ ಹೆಂಡತಿ ಸ್ತ್ರೀರತ್ನವೇ ಆಗಿರಬೇಕೆಂದು ಆ ಕಾಲಕ್ಕಾದರೂ ಅನ್ನಿಸಿದ್ದು ನಿಜ. ತಿಂಗಳೊಪ್ಪತ್ತಿನಲ್ಲಿ ನನ್ನ ಮನಸ್ಸನ್ನೆಲ್ಲ ಗೆದ್ದ ಹೆಂಗಸವಳು. ನಾನು ಕಠಿಣಕ್ಕೆ ಕಠಿಣ, ಮೃದುಗೆ ಮೃದುಸ್ವಭಾವದ ವಿಚಿತ್ರ ವ್ಯಕ್ತಿ. ಇಂಥ ಹುಡುಗಿ ನನ್ನೊಡನೆ ಪ್ರೀತಿ-ವಿಶ್ವಾಸಗಳಿಂದ ಇರುವುದೇ ಅವರ ಚಿಕ್ಕಮ್ಮನಿಗೆ ಆಗುತ್ತಿರಲಿಲ್ಲವಂತೆ. ಗಂಡನನ್ನು ಕಟ್ಟಿಕೊಂಡ ಮೇಲೆ ಎಷ್ಟು ಬೇಗ ಸಾಕಿ ಸಲಹಿದ ನಮ್ಮನ್ನೇ ಮರೆಯ ಹತ್ತಿದೆಯಲ್ಲಮ್ಮಾ! ಎಂದುಬಿಟ್ಟಳಂತೆ. ಇದನ್ನೆಲ್ಲ ಕೇಳಿ ಇವಳ ಹೊಲಸುಬುದ್ಧಿಯ ವಿಷಯದಲ್ಲಿ ಹೇಸಿಗೆಯಾಗಿ ಇಂಥ ಪಿಶಾಚಿಗಳೂ ಉಂಟೆ? ಎನ್ನುವಂತಾಗುತ್ತಿತ್ತು.

ಮನೆಗೆ ಬಂದ ಮಹಾಶರಣ ಚನ್ನಮಲ್ಲಿಕಾರ್ಜುನರ ಮನಸ್ಸನ್ನು ತನ್ನ ವಿನಯ, ಭಕ್ತಿ, ಆಹಾರಪರಿಕರ ತಯಾರಿಕೆ, ಶರಣಜನ ಸಜ್ಜನಿಕೆಯಿಂದ ಒಂದೆರಡು ಗಂಟೆಗಳಲ್ಲಿ ಗೆದ್ದುಬಿಟ್ಟವಳು ಇವಳೇ. ಹೆಸರು, ಹೊಳೆಬಸಮ್ಮ ಎಂಬುದು ತಮ್ಮ ಮನೆದೇವರೆಂದು ಹೇಳಿಕೊಳ್ಳುತ್ತಿದ್ದ ಯಾವುದೋ ಹೊಳೆಯ ದಂಡೆಯ ಮೇಲಿನ ವೃಷಭೇಶ್ವರ ದೇವರ ಹೆಸರಂತೆ. ಆದರೆ ಈ ಸೌಭಾಗ್ಯವತಿ ಬಹುದಿನ ಬಾಳುವ ಸೌಭಾಗ್ಯವನ್ನು ದೇವರಿಂದ ಪಡೆದು ಬಂದಿರಲಿಲ್ಲವೆಂದು ತೋರುತ್ತದೆ.

ನಾನು ತಿಪಟೂರು ಹೈಸ್ಕೂಲಿನ ಉಪಾಧ್ಯಾಯನಾಗಿ 1952ನೇ ಫೆಬ್ರುವರಿ ತಿಂಗಳ 6ನೆಯ ತಾರೀಖಿನಂದು ಕೆಲಸಕ್ಕೆ ಹಾಜರಾಗಿ ಕೆಲ ದಿನಗಳು ಕಳೆಯುತ್ತಿದ್ದ ಹಾಗೆಯೇ ಅವರ ತಮ್ಮ ಶಿವಾನಂದ ಸಿದ್ದಾಪುರದಿಂದ ಬಂದ. ಅವನನ್ನು ಪ್ರೀತಿಯಿಂದ ಬರಮಾಡಿಕೊಂಡ ಈ ಶ್ರೀಮತಿ ಒಂದೆರಡು ದಿನ ಇಟ್ಟುಕೊಂಡು ಪ್ರೀತಿ-ವಿಶ್ವಾಸಗಳ ಸುರಿಮಳೆಯನ್ನೇ ಸುರಿಸಿ ಪ್ರಸನ್ನಗೊಳಿಸಿದಳು. ಆ ಹುಡುಗನನ್ನು ಇಲ್ಲಿಗೆ ಕಳಿಸಿದ್ದು ಮತ್ತಾವುದಕ್ಕೂ ಅಲ್ಲ. ಪೂರ್ಣ ಗರ್ಭಿಣಿಯಾಗಿದ್ದ ಇವಳನ್ನು ಹೆರಿಗೆಗೆ ಕರೆಸದಿದ್ದರೆ ಊರವರೇನೆಂದುಕೊಂಡಾರೆಂದು ಕರೆಯ ಕಳಿಸಿದ್ದರಂತೆ. ಆಗ ನಾನು ಈ ವಿಷಯದಲ್ಲಿ ಪೂರ್ವಾನುಭವಿಗಳಾದ ಓರ್ವ ಉಪಾಧ್ಯಾಯರಲ್ಲಿ ಪ್ರಸ್ತಾಪ ಮಾಡಿದೆ. ಅವರು ಹೇಳಿದರು "ನೋಡಿ ಇದು ಮೊದಲ

ಹೆರಿಗೆ. ಹೇಗೋ ಏನೋ. ಇಲ್ಲಿ ಸುಸಜ್ಜಿತವಾದ ಆಸ್ಪತ್ರೆಯಿದೆ. ಅಲ್ಲಿ ಹೆರಿಗೆ ಆಸ್ಪತ್ರೆ ಇಲ್ಲ ಎನ್ನುತ್ತೀರಿ. ಏನಾದರೂ ಹೆಚ್ಚು ಕಡಿಮೆ ಆದರೆ ಹೇಗೆ? ಇದೂ ಅಲ್ಲದೆ ತಾಯಿ ಕೂಡ ಆ ಮಗುವಿಗೆ ಇಲ್ಲ ಎನ್ನುತ್ತೀರಿ. ಹಡೆದ ತಾಯಿಯೇ ತಾಯಿ ಕಣ್ರೇ! ಅವರಿದ್ದರೆ ಶ್ರದ್ಧೆಯಿಂದ ಬಾಣಂತಿಯನ್ನು ನೋಡಿಕೊಳ್ಳುತ್ತಾರೆ ವಿನಾ ಅನ್ಯರು ಇದೊಂದು ಕಾಟವೆಂದು ಭಾವಿಸುವುದೇ ಹೆಚ್ಚು. ನೋಡಿ, ವಿಚಾರಿಸಿ ನಿಮಗೆ ಸೂಕ್ತ ಬಂದಂತೆ ಮಾಡಿ. ನನ್ನ ಅಭಿಪ್ರಾಯ ಕೇಳಿದರೆ ನಿಮಗೆ ಸಿಗುವುದು ನಕಾರಾತ್ಮಕ ಉತ್ತರ" ಎಂದು ಭವಿಷ್ಯವನ್ನು ಕಂಡವರಂತೆ ನುಡಿದುಬಿಟ್ಟರು. ಅದೇ ಸರಿಯೆಂದು ನಾನು ಮನೆಗೆ ಬಂದು ಹುಡುಗನಿಗೆ 'ಅಪ್ಪಾ ಬೇಡ, ನಿಮ್ಮಕ್ಕನ ಹೆರಿಗೆಗೆ ಇಲ್ಲಿ ಎಲ್ಲಾ ತಕ್ಕ ವ್ಯವಸ್ಥೆ ಮಾಡುತ್ತೇನೆ. ನಿಮ್ಮೂರಲ್ಲಿ ಆಸ್ಪತ್ರೆ ಇಲ್ಲ ಎನಿಲ್ಲ. ಇಲ್ಲಿನ ಆಸ್ಪತ್ರೆ ಚೆನ್ನಾಗಿದೆ. ಇಲ್ಲಿಯೇ ಹೆರಿಗೆ ಆಗಿಬಿಡಲಿ. ಆಮೇಲೆ ಕರೆದುಕೊಂಡು ಹೋಗುವಿಯಂತೆ. ಈಗ ನೀನೊಬ್ಬನೇ ಹೋಗಿ ಕಳಿಸಲಿಲ್ಲವೆಂದು ಹೇಳಿಬಿಡು" ಎಂದೆ. ಹುಡುಗ ಅಳುವುದಕ್ಕೇ ಪ್ರಾರಂಭಿಸಿಬಿಟ್ಟ. ಏನು ಸಮಾಧಾನ ಮಾಡಿದರೂ ಸುಮ್ಮನಾಗಲೇ ಇಲ್ಲ. ತಮ್ಮನ ಅಳುವನ್ನು ಕಂಡು ಅಕ್ಕನೂ ಅಳುವುದಕ್ಕೆ ಪ್ರಾರಂಭ. ಬಿಕ್ಕಿ ಬಿಕ್ಕಿ ಅಳುತ್ತ ಕಣ್ಣು ಕೆಂಪಗೆ ಮಾಡಿಕೊಂಡು ಮೂಗಿನಿಂದ ಬೀಳುವ ಸಿಂಬಳವನ್ನು ಎಡಗೈಯಿಂದ ತೆಗೆದುಹಾಕುತ್ತ ಮೂಲೆಯನ್ನು ಸೇರಿ ಕುಳಿತುಬಿಟ್ಟಳು. ಈ ಸನ್ನಿವೇಶ ಕಂಡು ನನಗೂ ಕಸಿವಿಸಿಯೆನಿಸಿತು. ಎಂಥದೇ ಆಗಲಿ ತವರುಮನೆಯೆಂದರೆ ಎಲ್ಲ ಹೆಣ್ಣುಮಕ್ಕಳಿಗೂ ಆಸೆಯಲ್ಲವೇ? ತಾನು ಬಸುರಿಯಾಗಿ ಹುಟ್ಟಿದೂರಿನಲ್ಲಿ ಉಬ್ಬಿನಿಂದ ಕೆಲವುದಿನ ಎಲ್ಲರ ಕಣ್ಣಿಗೆ ಬೀಳುವುದು ಸ್ತ್ರೀ ಸಹಜವಾದ ಒಂದು ಪ್ರವೃತ್ತಿಯೇ ಅಲ್ಲವೆ? ಕಳಿಸದಿದ್ದರೆ ಪದೇಪದೇ ಇವಳು ಮಾನಸಿಕವಾಗಿ ಕುಸಿಯುವುದೂ ಉಂಟು. ಆ ಅಸಂತೋಷವೇ ಇವಳಿಗೊಂದು ರೋಗವಾಗಿ ಪರಿಣಮಿಸಿ ಈ ಅಪಾಯಕಾರಿಕ ಸನ್ನಿವೇಶದಲ್ಲಿ ಇನ್ನೇನಾದರೂ ತೊಂದರೆಗಿಟ್ಟುಕೊಂಡರೆ ಹೇಗೆ? ಇತ್ಯಾದಿ ನೂರಾರು ಯೋಚನೆ ಯೋಜನೆಗಳ ತುಮುಲದಲ್ಲಿ ಅಳೆದು ಸುರಿಯುವ ಕೆಲಸ ಮಾಡಿದೆ. ಕೊನೆಗೊಮ್ಮೆ ಕಳಿಸುವುದೇ ಸರಿ, ದೇವರು ಮಾಡಿದ್ದಾಗಲೆಂದು ಇವರಿಬ್ಬರ ಜೊತೆಗೆ ನನ್ನ ತಮ್ಮನನ್ನು ಜೊತೆಮಾಡಿ ಸಾಗರದವರೆಗೆ ಟಿಕೀಟ್ ಕೊಡಿಸಿ, ಗಾಡಿ ಹತ್ತಿಸಿ ಭಾರವಾದ ಮನಸ್ಸಿನಿಂದ ಮನೆಗೆ ಬಂದೆ. ಏಪ್ರಿಲ್ 1952ನೇ ಒಂದನೇ ಅಥವಾ ಎರಡನೇ ತಾರೀಖು ಇರಬೇಕು ನಾನು ಕಳಿಸಿದ್ದು. ನನ್ನ ತಮ್ಮ ಸುಖವಾಗಿ ಸಿದ್ದಾಪುರ ತಲುಪಿದರೆಂಬ ಸುದ್ದಿಯನ್ನು ತಂದ. ಆದರೇನು? ನಮ್ಮ ಉಪಾಧ್ಯಾಯರ ಭವಿಷ್ಯವೇ ನಿಜವಾಯಿತು. 18-4-52ನೆಯ ಕರಾಳದಿನದ ರಾತ್ರಿ ಹನ್ನೆರಡು-ಒಂದು ಘಂಟೆಯ ಸಮಯವಾಗಿರಬಹುದು. ಮೂತ್ರ ವಿಸರ್ಜನೆಗೆ ಬಚ್ಚಲು ಮನೆಗೆ ಬಂದಳಂತೆ. ರಾತ್ರಿಯಲ್ಲಿ ಬಹು ಭಯಪಡುತ್ತಿದ್ದ ಅವಳು ರಾತ್ರಿ ದೇಹಾವಸರವಾದಾಗಲೆಲ್ಲ ನನ್ನನ್ನು ಎಬ್ಬಿಸಿಕೊಂಡು ಹೋಗಿಯೇ ಬಿಡುತ್ತಿದ್ದವಳು, ಆ ದಿನ ಒಬ್ಬಳೇ ಪಡಸಾಲೆಯಲ್ಲಿ ಮಲಗಿದ್ದಳಂತೆ. ಅವರ ತಮ್ಮ ತಂಗಿ ಬೇರೊಂದು ಕಡೆಯಲ್ಲಿ, ಚಿಕ್ಕಮ್ಮ-ಚಿಕ್ಕಪ್ಪ ತಮ್ಮ ಸುಸಜ್ಜಿತ ಶಯ್ಯಾಗೃಹದಲ್ಲಿ ಮಲಗಿದ್ದರಂತೆ. ಅವರ ಮನೆಯ ಹಿತ್ತಿಲು ಅರಣ್ಯಕ್ಕೆ ಹೊಂದಿಕೊಂಡ ಹಾಗೆ ಇತ್ತು. ಬಚ್ಚಲ ಮನೆ ಹೊರಗೆ ಇತ್ತು. ಅದರ ಭದ್ರತೆಗೆ ಸುತ್ತಲೂ ಬೆಳೆದ ಅಡಿಕೆ ದಬ್ಬೆಗಳಿಂದ ಮಾಡಿದ ತಡಿಕೆ ಸುತ್ತಲೂ ಇತ್ತು. ಅಗಲವಾದ ಕಿಂಡಿಗಳಿಂದ ಅರಣ್ಯವೆಲ್ಲ ಕಾಣುತ್ತಿತ್ತು. ಭಯಗೊಂಡವರ ಕಣ್ಣಿಗೆ ಮೋಟುಮರವೂ ಕೂಡ ಭೂತವೇ ತಾನೇ! ಮೂತ್ರ ವಿಸರ್ಜನೆಗೆ

ಹೋದ ಇವಳು ಅರಣ್ಯ ಮಧ್ಯದಲ್ಲಿ ಯಾವುದೋ ಭಯಂಕರ ರೂಪ ಕಂಡ ಹಾಗಾಯಿತಂತೆ. ಅಬ್ಬರದಲ್ಲಿ ಚಿಟ್ಟನೆ ಚೀರಾಡುತ್ತ ಓಡಿ ಮನೆಯೊಳಗೆ ಹೋಗುವ ಅವಸರದಲ್ಲಿ ಬಿದ್ದು, ಗಾಯಗೊಂಡು ನಡುಗುತ್ತ ಹಾಸಿಗೆಯ ಮೇಲೆ ಬಡಬಡಿಸುತ್ತ ಅಮ್ಮಾ-ಅಪ್ಪಾ ಎಂದು ಮಲಗಿ ಜ್ವರವೂ ಬಂದು ಬೆಳಗಾಗುವ ಹೊತ್ತಿಗೆ ಹೊಟ್ಟೆಯಲ್ಲಿ ಮಗು ಸತ್ತು ತಾನೂ ಮಗುವಿನೊಂದಿಗೆ ಬೆಳಗಿನ ಜಾವ ಇಲ್ಲವಾಗಿ ಹೋಗಿಬಿಟ್ಟಳು. ನನಗೆ ಟೆಲಿಗ್ರಾಂ ಮಾಡಿದರಂತೆ. ಆ ಟೆಲಿಗ್ರಾಂ ನನಗೆ ತಲುಪಿದ್ದು ಮಧ್ಯಾಹ್ನ 12-30ರ ಸುಮಾರಿಗೆ. ಅದನ್ನು ನೋಡಿದೊಡನೆ ನನ್ನ ಕೈಕಾಲು ಅಲ್ಲಾಡದಂತಾಯಿತು. ತಕ್ಷಣ ರೈಲ್ವೇ ಸ್ಟೇಷನ್‌ಗೆ ಹೋಗಿ ಸಿದ್ದಾಪುರಕ್ಕೆ ಹೋಗುವುದು ಅರ್ಥವಿಲ್ಲವೆಂದು ಮನವರಿಕೆಯಾಯ್ತು. ಏಕೆಂದರೆ ನಾನು ಸಿದ್ದಾಪುರ ಮುಟ್ಟುವುದು 20ನೇ ತಾರೀಖು ಎಂಟು-ಒಂಬತ್ತು ಘಂಟೆಯ ಸುಮಾರಿಗೆ. ಅಲ್ಲಿಯವರೆಗೆ ಗರ್ಭಿಣಿ ಸ್ತ್ರೀಯ ಅಂತ್ಯಕ್ರಿಯೆಯಾಗದೆ ಇರುವುದಿಲ್ಲ ಎಂದು ಭಾವಿಸಿ ಹಾವೇರಿಗೆ ಟಿಕೇಟ್ ತಕ್ಕೊಂಡು ರಾತ್ರಿ 10 ಘಂಟೆಗೆ ಹಾವೇರಿ ತಲುಪಿ ಬೆಳಿಗ್ಗೆ ಎಂಟು ಘಂಟೆಗೆ ನಮ್ಮೂರನ್ನು ತಲುಪಿದೆ. ನಮ್ಮ ದೊಡ್ಡಪ್ಪ, ಅಪ್ಪ ಇಬ್ಬರೂ ಸಿದ್ದಾಪುರಕ್ಕೆ ಹೋಗಿ 19ನೇ ತಾರೀಖು ಮಧ್ಯಾಹ್ನ ನಂತರ ಆದ ಅಗ್ನಿಸ್ಪರ್ಶ ಕ್ರಿಯೆಯಲ್ಲಿ ಭಾಗವಹಿಸಿ ಊರಿಗೆ ಬಂದುಬಿಟ್ಟಿದ್ದರು. ಅವರ ಬಾಯಿಂದ ಎಲ್ಲ ವೃತ್ತಾಂತವರಿದು ಕೈಕೈ ಹಿಸುಕಿ ಬಿಸುಸುಯ್ದು ನಾಲ್ಕಾರು ಹನಿ ಕಣ್ಣೀರಿನ ತರ್ಪಣವನ್ನು ಆ ಹುಡುಗಿಯ ಶುದ್ಧಾತ್ಮಕ್ಕೆ ಸಮರ್ಪಿಸಿಬಿಟ್ಟೆ. ಬಾಲ್ಯದಲ್ಲಿ ತಂದೆ-ತಾಯಿಗಳ ವಾತ್ಸಲ್ಯದಿಂದ ವಂಚಿತವಾಗಿದ್ದ ಒಂದು ಹೆಣ್ಣುಜೀವ ಪ್ರಾಯಕ್ಕೆ ಬಂದು ನನ್ನಲ್ಲಿ ವಾತ್ಸಲ್ಯಾಮೃತಪಾನ ಮಾಡಿಸಿ ಬಾಳಿ ಬದುಕಬೇಕೆಂಬ ನೂರಾರು ಬಯಕೆಗಳನ್ನು ಹೊತ್ತುಬಂದು ಕೊನೆಗೆ ತನ್ನ ತವರಿನಲ್ಲಿಯೇ ವಿಧಿವಶವಾಗಿ ಹೋದ ಸಂಕಟವನ್ನು ಯಾರ ಮುಂದೆ ನಾನು ಹೇಳಬೇಕು, ಮನದಲ್ಲಿಯೇ ಕರಗಿಸಿಕೊಂಡೆ.

ಇದಕ್ಕೇ ನಾನು ಮೊದಲು ಹೇಳಿದ್ದು, ನನ್ನ ಒಂದು ರಾದ್ಧಾಂತದ ಮದುವೆ ಮಾಡಿ ಕಂದಿಸಿಬಿಟ್ಟರೆಂದು. ಈ ಆಘಾತವನ್ನು ಸಹಿಸಲಾರದೆ ಕೆಲವು ದಿನ ನಾನು ಹುಚ್ಚನಂತೆ ಏಕಾಂಗಿಯಾಗಿ ಶಾಲೆಯಿಲ್ಲದಾಗ ಕಾಡು-ಮೇಡು ಸುತ್ತಿದ್ದುಂಟು. ತೆಂಗಿನ ತೋಟಗಳಲ್ಲಿ ಅಲೆದಾಡಿ ಕೆಲಹೊತ್ತು ಮೌನವಾಗಿ ಕುಳಿತದ್ದೂ ಉಂಟು. ಏನೋ ಅಮೂಲ್ಯ ವಸ್ತುವನ್ನು ಕಳೆದುಕೊಂಡವನಂತೆ ಶಕ್ತಿಯ ಒಂದೂ ಪಾರ್ಶ್ವವೇ ಇಲ್ಲವಾದವನಂತೆ. ಪೊರೆಬಂದ ಕಣ್ಣಿನವನಂತೆ ಏನೇನೋ ಆಗಿಬಿಟ್ಟೆ. ಪುನಃ ಮಕ್ಕಳಿಗೆ ಪಾಠ ಹೇಳುವ ಆನಂದದಲ್ಲಿ ಎಲ್ಲವನ್ನೂ ಮರೆಯುತ್ತ ಮರೆಯುತ್ತ 1953ರಲ್ಲಿ ದ್ವಿತೀಯ ಲಗ್ನ ಮಾಡಿಕೊಂಡೆ. ಇದೇ ನನ್ನ ಗೃಹಸ್ಥಾ ಜೀವನದ ರಾದ್ಧಾಂತ. ಇಂದಿಗೂ ಸ್ಮತಿ ಗುಹೆಯ ಯಾವುದೋ ಮೂಲೆಯಲ್ಲಿ ಹೊಳೆಬಸಮ್ಮ ಅರೆಗತ್ತಲೆಯಲ್ಲಿ ಕುಳಿತು ಚಿಕ್ಕ ಮಗುವೊಂದನ್ನೆತ್ತಿಕೊಂಡು ಅದನ್ನು ಚಕ್ಕಳಿಗೊಳಿಸಿ ನಗಿಸುತ್ತ, ತಾನೂ ನಗುತ್ತ ನನ್ನನ್ನು ನೋಡುವ ಅಸ್ಪಷ್ಟ ಚಿತ್ರವೊಂದು ಕನಸಿನ ಸಾತ್ವಿಕ ಭೂತವಾಗಿ ಕಾಡುವಂತೆ ಕಾಡಿ ಪುನಃ ಕಣ್ಮರೆಯಾಗುತ್ತದೆ. ಈ ಎರಡೂ ಮದುವೆಗಳಲ್ಲಿ ನಾನು ನನ್ನ ಮನೆಯ ಮೇಲೆ ಖರ್ಚು-ವೆಚ್ಚ ಹೇರಲಿಲ್ಲ. ಎರಡೂ ನನ್ನ ಸಂಗ್ರಹಿಸಲ್ಪಟ್ಟ' ದುಡ್ಡಿನಿಂದಲೇ ಮುಗಿದುಹೋದವು.

ಇದೇನು, ನಾನು ಮೈಸೂರಿನ ಓದಿನ ಚರಿತ್ರೆ ಹೇಳ ಹೊರಟು ಹರಿಕಥೆಯಲ್ಲಿ ಅಡ್ಡ ಕತೆಯನ್ನೇ ಮಂಗಳಾರತಿಯವರೆಗೆ ಹೇಳುವ ಕಲೆಯ ಕೀರ್ತನಕಾರನಂತೆ ತಿಪಟೂರು

ಹೈಸ್ಕೂಲಿನ ಉಪಾಧ್ಯಾಯ ಚರಿತ್ರೆಗೆ ಹಾರಿಬಿಟ್ಟೆನಲ್ಲ. ಹೌದು ಪ್ರಸಂಗ ಹಾಗೆ ಬಂತು. ಶ್ರೀ ಚನ್ನಮಲ್ಲಿಕಾರ್ಜುನರ ಮನಸ್ಸನ್ನು ಗೆದ್ದ ಒಂದು ಹೆಣ್ಣು ನನ್ನ ಮನೆ ಬೆಳಗಲು ಬಂದಿದ್ದಳೆಂಬ ಉತ್ಸಾಹ ಬಲಿಯಿತು. ಆ ಜಾಡು ಹಿಡಿದು ಹಾಗೇ ಸ್ವಲ್ಪ ಮುಂದಕ್ಕೆ ಹೋಗಿ ಅವಳ ಅವತಾರವನ್ನು ಅದು ಮುಗಿಯುವವರೆಗೆ ಹೇಳಿಬಿಡೋಣ ಎಂಬ ಬಯಕೆಯಾಗಿ ಹೇಳಿಬಿಟ್ಟೆ, ಕ್ಷಮಿಸಿ. ಅರ್ಧಕ್ಕೇ ಆ ಕಥಾಪ್ರವಾಹ ನಿಲ್ಲಿಸಿದರೆ ರಸಭಂಗವಾದೀತೆಂದು ನೀವು ಕೋಪಗೊಂಡೀರೆಂದೂ ತಿಳಿದೆ. ಇಗೋ ತಿರುಗಿ ಹಿಂದಕ್ಕೆ ಬರುತ್ತೇನೆ.

### ಗ್ರಹಚಾರ ಕಡಿಮೆಯಾಗಿ ಬನವಾಸಿ ನೋಡುವ ಬಯಕೆಯಾಯಿತು

ಮೈಸೂರಿನ ನಮ್ಮ ಕಾಲೇಜಿಗೆ ರಜಾ ಬಂದಾಗಲೆಲ್ಲ ನಾನು ನನ್ನ ಉತ್ಕರ್ಷ ಕಂಡು ಹಿರಿಹಿರಿ ಹಿಗ್ಗುತ್ತಿದ್ದ ಹಿರೇಕಾಂಶಿ, ಹೊಸೂರುಗಳಲ್ಲಿ ಏಳೆಂಟು ದಿನಗಳಾದರೂ ಕಾಲ ಕಳೆಯುವುದು ಅವರಿಗೂ ಬೇಕಾಗಿತ್ತು, ನನಗೂ ಬೇಕಾಗಿತ್ತು. ಹೀಗೆ 1949ನೇ ಇಸ್ವಿ ಮೇ ತಿಂಗಳಲ್ಲಿ ಹೊಸೂರಿನಲ್ಲಿ ನಾಲ್ಕೈದು ದಿನ ಇದ್ದೆ. 10 ವರ್ಷಗಳ ಹಿಂದೆ ನಾನು ಬನವಾಸಿಯನ್ನೊಮ್ಮೆ ಪಂಪನ ವಿಕ್ರಮಾರ್ಜುನ ವಿಜಯವನ್ನು ಓದಿ ಸೊಗಯಿಸಿ ಬಂದ ಮಾಮರವನ್ನು, ಚಿಗುರಿ ಬೆಳೆದು ನಿಂತ ಎಲೆಬಳ್ಳಿ, ಅಡಿಕೆ, ತೆಂಗು, ಪಂಪನ ಕಣ್ಣಿಗೆ ಬಿದ್ದಂಥವು ನನ್ನ ಕಣ್ಣಿಗೆ ಬೀಳಬಹುದು. ಆ ನಾಡಿನ ಸೌಂದರ್ಯಕ್ಕೆ ಮರುಳಾಗಿ ಪಂಪ ಮನಮುಟ್ಟಿ ಹೊಗಳಿದುದು ಸತ್ಯವೋ ಅಲ್ಲವೋ ನಾನೇಕೆ ಟೆಸ್ಟ್ ಮಾಡಬಾರದು? ಎಷ್ಟೇ ಆಗಲಿ. ನಾನು ಈಗ ಕನ್ನಡ ಪಂಡಿತ ಪರೀಕ್ಷೆಯ ವಿದ್ಯಾರ್ಥಿಯಲ್ಲವೇ? ಎಂದುಕೊಂಡು ನಮ್ಮ ಸೆಟ್ಟರ ಮೂರುಜನ ಮಕ್ಕಳೊಡನೆ ಸೈಕಲ್ಲುಗಳ ಮೇಲೆ ಹೊರಟೆವು. ಹೊಸೂರಿನಿಂದ ಕಚ್ಚಾ ಬಂಡಿಮಾರ್ಗದಲ್ಲಿ ಹೋದರೆ ಏಳೆಂಟು ಮೈಲು ದೂರ ಅಷ್ಟೆ. ಜಲ್ಲಿಕಲ್ಲು ರಾಜಮಾರ್ಗದಿಂದ ಹದಿನೈದು ಮೈಲು ಸೈಕಲ್ಲು ತುಳಿಯುವುದೇಕೆಂದು ಒಳದಾರಿಯಿಂದಲೇ ಹೋದೆವು. ಹೋಗುವಾಗ ಸೊಗಯಿಸಿಬಂದ ಮಾಮರ ಅಲ್ಲಲ್ಲಿ ಕಂಡುಬಂದವು. ತೋಟಗಳೂ ಕಂಡವು. ಕವಿ ಕಂಡ ಉತ್ಪ್ರೇಕ್ಷೆಯ ಸೊಬಗು ಇರಲು ಶಕ್ಯವೇ? ಅವನ ಕನಸಿನ ಪ್ರಪಂಚ ಇನ್ನೂ ಹುಟ್ಟೇ ಇಲ್ಲ. ಅವನದೇ ಒಂದು ಶಬ್ದಬ್ರಹ್ಮಾಂಡ ಅದು. ನೀರು-ನೆಲ-ಬಾನಿನಲ್ಲಿ ಇಲ್ಲದ್ದು ಮತ್ತು ಬ್ರಹ್ಮನ ಸೃಷ್ಟಿಯ ನೇಮವನ್ನು ಮೀರಿದ್ದಲ್ಲವೇ ಕವಿಯ ಬ್ರಹ್ಮಾಂಡ. ನನ್ನನ್ನು ಮೈಮರೆಯುವಂತೆ ಮಾಡಿತು. ಅಡಿಕೆ ತೆಂಗಿನ ತೋಟಗಳು ಅಷ್ಟೊಂದು ಸಮೃದ್ಧ ಅನ್ನದಿದ್ದರೂ ಇದ್ದವು ತಕ್ಕ ಮಟ್ಟಿಗೆ. ಹೀಗೇಕೆ? ಎಂದು ಒಬ್ಬನನ್ನು ಅಲ್ಲಿ ಪ್ರಶ್ನಿಸದೆ "ಏನು ಸ್ವಾಮಿ, ಈಗಿನ ಕಾಲದ ಜನರು ದುಡಿಮೆ ಮಾಡೋರಲ್ಲಪ್ಪೋ; ಕಿಸೆಯಲ್ಲಿ ನಾಲ್ಕಾರಾಣೆ ಹಾಕ್ಕೊಂಡು ಹೊಸೂರಿಗೋ ಬನವಾಸಿಗೋ ಹೋಗಿ ದೋಸೆ-ವಡೆ-ಚಹಾ ಕಾಫಿ ಕುಡಿಯೋ ನಾಲಗೆ ಚಾಪಲ್ಯಕ್ಕೆ ಒಳಗಾಗಿ ಸುಮ್ಮ ಸುಮ್ಮನೇ ತಿರುಗುತ್ತೆ. ಚೈನಿಜನ ಬಹಳ. ಓಹೋ! ಶರ್ಟು ಕೋಟು ರುಮಾಲೇನು, ಕ್ರಾಪೇನು, ಕೈಯಲ್ಲಿ ಬೀಡಿ ಬೆಂಕಿಪೊಟ್ನವೇನು? ಇಂಥ ಹೊಸಾ ತಳಿ ಬೆಳೀತಾ ಇದೆ. ಇವರು ಹೊಲ ಮನೇಲಿ ಮೈ ಬಗ್ಸೋರಲ್ಲಪ್ಪಾ. ಏನೋ ಒಂದು ಥರಾ. ನಮ್ಮ ಭೂಮಿತಾಯಿ ಬಡವಿ ಅಲ್ಲ ಸ್ವಾಮಿ, ಬಡವಿ ಅಲ್ಲ. ದುಡಿಯದಿದ್ದ ಕಳ್ಳ ಭಡವಗಳೇ ಬಡವ್ರು ಅನ್ನಿ. ಏನೋ ಮೈಸೂರು ಕಡೆ ಮಾತಾಡ್ತೀರಿ" ಅಂದ. ... ಆ ಕಡೆಗೆ ಈ ಆರೇಳು ವರ್ಷದಿಂದ ಕಾಲಾ ಕಳೀತಾ. ಮಾತು ಮೈಸೂರ ಕಡೆ ಮಾತಿನ ರಾಗದಲ್ಲಿ ಬರ್ತಾ ಇವೆ ಅಲ್ವೇ" ಅಂದೆ. "ಅದೇ ಅದೇ ನಾ ಹೇಳಿದ್ದು 'ಬರ್ತಾ

ಇವೆ ಅಲ್ವೆ' ಈ ಮಾತು ಅದರ ಎಳಕಲು ಫೇಟ್ ಮೈಸೂರು ಕಡೇದೇನೆ. "ಇಲ್ಲಿ ಯಾವೂರಾಯ್ತು" ಎಂದ. "ನಾವು ಹೊಸೂರು ಸೆಟ್ರ ಬೀಗರು. ಹಿಂದೆ ಹಿರೇಕಾಂಶಿಯಲ್ಲಿ ಮಾಸ್ತರ್ ಆಗಿದ್ದೆ. ಈಗ ಮೈಸೂರಿನಲ್ಲಿದ್ದೇನೆ. ಬನವಾಸಿ ನೋಡೋಣ ಎಂದು ಹೊರಟಿದ್ದೇನೆ" ಎಂದೆ. "ನೀವು ಹಿರೇಕಾಂಶಿ ಮಾಸ್ತರು ಎಂದರೆ ನೆನಪಾಯ್ತು. ಈಗ ಏಳೆಂಟು ವರ್ಷದ ಮುಂದ ತುಮರಿಕೊಪ್ಪದಾಗ ಒಂದು ಭಾರಿ ಆಟಾ ಆಡ್ಸಿದಿರಲ್ಲ ಸಂಪೂರ್ಣ ರಾಮಾಯಣ ಅಂತ. ನೀವು ಆ ಮಾಸ್ತರೋ ಬೇರೆ ಇನ್ನೊಬ್ರೋ". "ಅವನೇ ನಾನು, ಆಡಿಸಿದ್ದು". "ವಾಹವ್ವಾ, ನಮ್ಮ ಮಲೆನಾಡಿಗೇ ಫಸ್ಟ್ ಆಟ ನೋಡ್ರೀ ಮಾಸ್ತರ ಅದು. ಆ ಲಂಕಾ ಸುಟ್ಟದ್ದೇನು, ಹನುಮಂತ ಸೀತಾದೇವಿ ಹುಡುಕ್ಕೊಂಡು ಲಂಕಾ ಪಟ್ಣಕ್ಕ ಹಗ್ಗದ ಮೇಲೆ ಕುಣೀತಾ ಹೋದದ್ದೇನು? ನಾವು ಇಲ್ಲೇ ಶಕುನವಳಿಯವರು. ನಾನು ಆಟಾ ನೋಡಾಕ ಬಂದಿದ್ದೆ. ಅದಕ್ಕೇ ಕೇಳ್ದೆ. ಬನ್ನಿ ಅಡಿಕಿ ಎಲಿ ಹಾಕ್ತೀರಾ" ಎಂದು ಕುಳ್ಳಿರಿಸಿ ಎಲೆ ಅಡಿಕೆ ಕೊಟ್ಟ. ತಂಬಾಕ ಡಬ್ಬೀನು ಕೈಗೆ ಕೊಟ್ಟು ತಂಬಾಕ ಕಟು ಬಹಳ ಘಾಟು, ಸ್ವಲ್ಪ ಹಾಕ್ರಿ ಅಂದ. ನಾನು ಈ ಹೊತ್ತಿನಲ್ಲಿ ತಂಬಾಕ ಬೇಡ ಅಂತ ಡಬ್ಬಿ ವಾಪಸು ಕೊಟ್ಟೆ.

ಮುಂದುವರಿದು ಆತ "ಸ್ವಾಮಿ ನೋಡ್ರಿ ಕಾಡು ಕಡ್ದು ಕಡ್ದು ಇದ್ಲೀಬಟ್ಟಿ ಹಾಕುವ ವರ್ಷಂಪ್ರತಿ ನೂರಾರು ಎಕರೆ ಕಾಡು ಬೈಲಾಗ ಹತ್ತೇತಿ. ಕಾಡಿನ ಹುಲಿ, ತೋಳ, ಚಿರ್ತ ಊರು ಬೀಳಾಕ ಹತ್ಯಾವು. ಆನೆ ಬತ್ತದ ಗದ್ದಿಗೆ, ಹುಲ್ಲುಬಣವಿ ಕಬ್ಬಿನ ತೋಟಕ ಬಿದ್ದಾವು. ಕಾಡು ಒತ್ತಾಗಿದ್ದರೆ ಅವಕ್ಕ ಅಲ್ಲಲ್ಲೇ ಹೊಟ್ಟೆಗೆ ಸಿಕ್ಕೇ ಸಿಗತಿತ್ತು. ಹತ್ತಿಪ್ಪತ್ತು ವರ್ಷದ ಮುಂದ ಹ್ಯಾಗಿತ್ತು ನಮ್ಮ ಈ ಭಾಗದ ಕಾಡು! ಅಬ್ಬಾ! ಮಧ್ಯಾಹ್ನದಾಗ ಕತ್ಲು ಕವಿದಿರ್ತಿತ್ತು. ಮಾವು ಹಲಸು ತುಮರಿ ಕವಳಿ ನೇರಿಳೆಹಣ್ಣಿಗೂ ಬರ ಇರ್ಲಿಲ್ಲ. ಮಾವಿನ ಮರಗಳ್ನಂತೂ ತುಂಡರಿಸಿ ಕೊರಿಸಿ ಹಲ್ಗೆ ಮಾಡಿ ಮಾಡಿ ಅದೆಲ್ಲಿಗೋ ಹೇರ್ಸಿಕೊಂಡು ಹೋಗ್ತಾರಪಾ. ಎಲ್ಲಿಗ್ಹೋಗ್ತೈತೋ ಏನೋ ಅಷ್ಟೊಂದು ಸರಕು" ಎಂದು ಅರಣ್ಯ ನಾಶ ಪ್ರಾರಂಭವಾಗುತ್ತಿರುವುದರ ಸೂಚನೆ-ವ್ಯಥೆ ನೋವುಗಳೊಡನೆಯೇ ನಮಗೆ ಬೀಳ್ಕೊಟ್ಟ. ನಾವು ಜಡೆ ಊರಿಗೆ ಬಂದು ಅಲ್ಲಿ ಸ್ವಲ್ಪ ದೂರದಲ್ಲಿಯೇ ಇರುವ ಬನವಾಸಿ ಹೊಕ್ಕೆವು. ಹಿಂದೆ ನೋಡಿದಾಗ ನನ್ನ ಕಣ್ಣಿಗೆ ಬನವಾಸಿ ಸಾಮಾನ್ಯ ಹಾಳೂರೆಂದು ಕಂಡಿದ್ದೇನೋ ನಿಜ. ಇಂದು ಐತಿಹಾಸಿಕ ಪ್ರಜ್ಞೆ, ಸಾಂಸ್ಕೃತಿಕ ಅರಿವುಗಳ ದೃಷ್ಟಿಯಿಂದ ಬಹಳ ಮಹತ್ವದ್ದಾಗಿ ಕಂಡು ಮೈಮರೆಸಿತು. ಬಹಳಷ್ಟು ಸ್ಥಳೀಯ ಸನ್ನಿವೇಶಗಳ ಜೀವಂತ ದರ್ಶನವಾಯಿತು. ಕದಂಬ ದೊರೆಗಳ ಗತವೈಭವದ ರೂಪು-ರೇಷೆಗಳು ಊಹಾಲೋಕದಲ್ಲಿ ಮರೆಯುವಂತಾದುದು ಸತ್ಯ. ಹಾಳು ದೇಗುಲ, ದಿಬ್ಬ, ಗುಡಿ ಗುಂಡಾರ ಕೊನೆಗೆ ಮಧುಕೇಶ್ವರ ದೇವರ ಗುಡಿಗೆ ಬಂದಾಗ ಅಲ್ಲಮ ಕುಳಿತು ಮದ್ದಳೆ ಬಾರಿಸಿದ್ದು ಈ ಬಾಗಿಲುಗಳ ಹೊರಭಾಗದ ಈ ಕಟ್ಟೆಯ ಮೇಲೇ ಇರಬೇಕು. ಮಾಯಾದೇವಿ ನೃತ್ಯ ಗರ್ಭಗುಡಿಯ ಮುಂಭಾಗದ ಈ ವಿಶಾಲವಾದ ನವರಂಗದಲ್ಲೇ ಇರಬೇಕು ಎಂದು ನನಗೆ ನಾನೇ ಏನೇನೋ ನೂರಾರು ಕಲ್ಪನೆಗಳಿಂದ ಸಾಹಿತ್ಯ ಕಥೆಗಳಿಗೂ ಸ್ಥಾನ ವಿಶೇಷಕ್ಕೂ ಸಂಬಂಧ ಕಲ್ಪಿಸಿಕೊಳ್ಳುತ್ತ ನನ್ನ ಹುಟ್ಟೂರು ಹತ್ತಿರವೇ ಹರಿದು ಬರುತ್ತಿದ್ದ ವರದಾ ನದಿಯು ಅಲ್ಲೇ ಮಧುಕೇಶ್ವರನ ಮುಂದೆಯೂ ಹರಿಯುತ್ತಿರುವುದನ್ನು ಮನ ಉಬ್ಬಿ ಕಣ್ತಣಿಯೆ ದೂರದಿಂದಲೇ ನೋಡಿ ಕೈಮುಗಿದೆ. ಕೆಳಗೆ ಇಳಿದು ಮುಖಮಾರ್ಜನೆ ಮಾಡಿಕೊಂಡು ಸ್ವಲ್ಪ ನೀರನ್ನು ಕುಡಿಯಬಹುದಿತ್ತು. ಅಷ್ಟರಲ್ಲಿ ಬಹುದೊಡ್ಡ ಮಳೆಬಿದ್ದು ನನ್ನ ತಿರುಗಾಟವನ್ನು ಮೊಟಕು ಮಾಡಿತು. ನಮ್ಮ ಸೆಟ್ಟರ ಮಕ್ಕಳೂ ತಿರುತಿರುಗಿ ದಣಿದಿದ್ದರು.

ಇಷ್ಟು ಹೊತ್ತಿಗೆ ಆ ಊರಿನ ಪ್ರತಿಷ್ಠಿತ ವ್ಯಾಪಾರಿಗಳೊಬ್ಬರು ಸೆಟ್ಟರ ಮಕ್ಕಳನ್ನು ಗುರುತು ಹಿಡಿದು ಮನೆಗೆ ಕರೆದುಕೊಂಡು ಹೋಗಿಬಿಟ್ಟರು. ನಾನೂ ಹೋದೆ. ಆತ ನಮಗೆಲ್ಲ ಅಕ್ಕಿರೊಟ್ಟಿ ಪಲ್ಯ ತುಪ್ಪ ಮೊಸರು ಚಟ್ನಿಗಳ ಪುಷ್ಕಳ ಭೋಜನ ಮಾಡಿಸಿ ಗಂಧಸಾಲಿ ಅಕ್ಕಿ ಅನ್ನ, ಮಲೆನಾಡಿನ ಪ್ರಸಿದ್ಧ ಹುರುಳಿ ಕಟ್ಟಿನ ಸಾರನ್ನು ಊಟ ಮಾಡಿಸಿದ. ಹೊಟ್ಟೆ ಬಿರಿಯುವಂತೆ ಉಂಡ ನಾವು ಸಾಯಂಕಾಲ 5 ಘಂಟೆಯ ಸುಮಾರಿಗೆ ಹೊಸೂರು ಕಡೆಗೆ ಹೊರಟೆವು. ಹುಡುಗರಿಗೆ "ಮಳೆ ಬಂದಿದೆ, ಸ್ವಲ್ಪ ದೂರವಾದರೂ ಚಿಂತೆಯಿಲ್ಲ ಹೊಸಕೊಪ್ಪದ ಮಾರ್ಗವಾಗಿ ಹೋಗೋಣ. ಏಳುಗಂಟೆ ಹೊತ್ತಿಗೆ ಊರು ತಲುಪಿಬಿಡುತ್ತೇವೆ ಒಳದಾರಿ ಬೇಡ" ಎಂದೆ. ಆ ಹುಡುಗರೋ ದಡ್ಡರೂ ಅಲ್ಲ, ಬುದ್ಧಿವಂತರೂ ಅಲ್ಲ, ದೊಡ್ಡವರೂ ಅಲ್ಲ, ಚಿಕ್ಕವರೂ ಅಲ್ಲ. ಒಂದು ರೀತಿಯ ಕಪೀಶ್ವರವತಾರಿಗಳೇ. "ಹೋಗ್ರೀ! ನಿಮಗೊಂದು ಹುಚ್ಚು. ಮಳೆ ಬಂದರೇನಾಯ್ತು, ಕೆಸರಿಲ್ಲ ಏನಿಲ್ಲ. ಮಳೆಬಿದ್ದು ಆಗಲೆ ಸುಮಾರು ಎರಡುಮೂರು ತಾಸಾತು. ಆಗಲೆ ನೆಲ ಆರಿ ದಾರಿ ಗಡುಸಾಗಿದೆ. ಇಲ್ಲೇ ಒಳಗೇ ಹೋದರೆ ಒಂದು ತಾಸಿನಾಗ ಊರು ಬೀಳ್ತೀವಿ" ಅಂದುಬಿಟ್ಟರು. ನಾನು ನಿರುಪಾಯನಾಗಿ ಸೈಕಲ್ ಹತ್ತಿದೆ. ಒಂದು ಮೈಲಿಯವರೆಗೆ ಕಾಲುದಾರಿಯಲ್ಲಿ ಹಾಗೂ ಹೀಗೂ ಇಳಿದು ಹತ್ತಿ ನಿರಾತಂಕವಾಗಿ ಸಾಗಿದೆವು. ಆಮೇಲೆ ಗ್ರಹಚಾರ ಒಕ್ಕರಿಸಿಬಿಟ್ಟಿತು. ಕರಲು ಮಣ್ಣಿನ ಗದ್ದೆ ಬೈಲು ಸ್ವಲ್ಪ ದೂರ ಇತ್ತು. ಅಲ್ಲಿ ಸೈಕಲ್ ಇಳಿದು ತಳ್ಳುತ್ತ ನಡೆದೆವು. ಆ ಕರಿಯ ಮಣ್ಣಿನ ಕಿಟ್ಟದಂತಹ ಕೆಸರು ಗಾಲಿಗೆ ಮೆತ್ತಿಕೊಳ್ಳತೊಡಗಿತು. ಆಯಿತು ಸೈಕಲ್ಲಿನ ಗತಿ. ತಲೆಯ ಮೇಲೇ ಹೊರಬೇಕು. ಕಡ್ಡಿಯಿಂದ ಕೆಸರು ತೆಗೆದು ತಳ್ಳಿಕೊಂಡು, ಒಂದು ಗದ್ದೆ ಹಾಳೆ ದಾಟಲೂ ಆಗುತ್ತಿರಲಿಲ್ಲ. ಪುನಃ ಮೆತ್ತಿಕೊಂಡು ಗಾಲಿ ತಿರುಗದಂತೆಯೇ ಮಾಡುತ್ತಿತ್ತು.

ಹಾಗೂ ಹೀಗೂ ಜಡೆ ತಲುಪಿದೆವು. ಅಷ್ಟು ಹೊತ್ತಿಗಾಗಲೇ ಮಬ್ಬುಗತ್ತಲಾಗುತ್ತ ಬಂದಿತ್ತು. ಅಲ್ಲಿಗಾಗಲೇ ಬೆವೆತು ಹೋಗಿದ್ದೆವು. ಅಲ್ಲಿನ ಹೋಟೆಲೊಂದರಲ್ಲಿ ಚಹಾ ಕುಡಿದು ಸಿದ್ಧರಾದೆವು. ಮುಂದಿನ ಮಾರ್ಗ ಕಲ್ಲುಜಲ್ಲಿ ಹಾಕಿದ್ದರಿಂದ ಸುಖವಾಗಿ ಸೈಕಲ್ಲೇರಿ ಅರ್ಧತಾಸಿನಲ್ಲಿ ಹೊಸೂರನ್ನು ಸೇರುತ್ತೇವೆಂಬ ಭರವಸೆ ಹೊಂದಿದೆವು. ಸೈಕಲನ್ನೆಲ್ಲ ಸ್ವಚ್ಛಮಾಡಿಕೊಂಡು ಹತ್ತಿದೆವು. ಒಂದೆರಡು ಫರ್ಲಾಂಗ್ ದೂರ ಹಾಗೂ ಹೀಗೂ ಹೋದೆವು. ಮುಂದೆ ಬಹು ದೊಡ್ಡ ಗಂಡಾಂತರ ನಮ್ಮ ಈ ಉತ್ಸಾಹಕ್ಕೆ ಮಣ್ಣೆರಚಿಬಿಟ್ಟಿತು. ಮುಂದಿನ ಮಾರ್ಗದ ರಿಪೇರಿಯಾಗಿ ಅಕ್ಕಪಕ್ಕದ ಮಣ್ಣು ಕಡಿದು ದಾರಿಗೆಲ್ಲ ಚೆಲ್ಲಿಬಿಟ್ಟಿದ್ದರು. ಇದು ಗಮನದಲ್ಲಿರಲಿಲ್ಲ. ಆ ಕರ್ಲು ಮಣ್ಣೆಲ್ಲ ನೆನೆದು ಕೆಸರಾಗಿಬಿಟ್ಟಿತ್ತು. ಅಷ್ಟು ಹೊತ್ತಿಗೆ ಚಿಟಿಪಿಟಿ ಮಳೆಯೂ ಪ್ರಾರಂಭವಾಗಿಬಿಟ್ಟಿತು. ಅರ್ಧಮರ್ಧ ತೊಯ್ದು ಹೋದೆವು. ಸೈಕಲ್ ಇಳಿಯಲೇಬೇಕಾಯಿತು. ಇಳಿದು ದಬ್ಬಿಕೊಂಡು ಹೊರಟೆವು. ಇಲ್ಲಿಯ ಕೆಸರು ಮಣ್ಣಂತೂ ಇನ್ನೂ ಜಿಗಟಿನದು. ನಾಲ್ಕು ಸುತ್ತು ಚಕ್ರಗಳು ಉರುಳದಂತಾಗಿ ಹೋಯಿತು. ಕೆಸರೇ ಕೆಸರು. ಏನು ಮಾಡಬೇಕೆಂದು ತಿಳಿಯಲಿಲ್ಲ. ಅಕ್ಕಪಕ್ಕದಲ್ಲಿ ಭಯಂಕರ ಕಾಡು. ಕತ್ತಲು ಕವಿಯಿತು. ಪುಣ್ಯಕ್ಕೆ ಚಂದ್ರ ಮೋಡದ ಮರೆಯಲ್ಲಿದ್ದರೂ ಅಲ್ಪ ಸ್ವಲ್ಪ ಬೆಳಕು ಇತ್ತು. ನಾನು ಸೈಕಲ್ ಹೊತ್ತು ಹುಡುಗರಿಗೂ ಸೈಕಲ್ ಹೊರ ಹೇಳಿದೆ. ಅವರು ಸ್ವಲ್ಪ ದೂರ ಹೊತ್ತು ಸಾಧ್ಯವಾಗುವುದಿಲ್ಲವೆಂದು ಸಿಟ್ಟಿನಿಂದ ಸೈಕಲ್ಲನೆತ್ತಿ ಒಗೆದು ಅಳುತ್ತ ನಿಂತುಬಿಟ್ಟರು. ಸರಿ, ಈಗ ನನಗೆ ಪೇಚು ಬಂತು. "ಬೇಡ ಒಳ್ಳೆಯ ಮಾರ್ಗದಲ್ಲಿ ಸ್ವಲ್ಪ ದೂರವಾದರೂ

ಹೋಗೋಣವೆಂದರೆ ಹಟ ಹಿಡಿದು ಇದೇ ದಾರಿಯಿಂದ ಬಂದುದಕ್ಕೆ ಈಗ ಅನುಭವಿಸಿ" ಎಂದು ಅವರನ್ನೆಲ್ಲ ಗದರಿಸಿ ಮುಂದಿನ ಮಾರ್ಗವೇ ತೋರದೆ, ನಾನೂ ಸೈಕಲ್ಲನ್ನು ಕೆಳಗಿಳಿಸಿ, ಸ್ವಲ್ಪ ಹೊತ್ತು ಪಕ್ಕದ ಹುಲ್ಲಿನ ಮೇಲೆ ಕುಸಿದು ಕುಳಿತುಬಿಟ್ಟೆ. ಅವರೂ ಕುಳಿತುಬಿಟ್ಟರು. ಈಗ ಉಳಿದಿರುವುದು ಒಂದೇ ಮಾರ್ಗ. ಈ ಸೈಕಲ್ಲುಗಳನ್ನು ಒಂದೊಂದಾಗಿ ಹೊತ್ತು ಒಂದೆರಡು ಫರ್ಲಾಂಗ್ ದೂರ ಹೋಗಿ ಅಲ್ಲಿರುವ ನೀರಿಗೆ ಹಾಕಿ, ಗಾಲಿಗೆ ಹತ್ತಿದ ಮಣ್ಣು ಮೊದಲಾದವನ್ನು ತೊಳೆದು, ತೆಗೆದು ಮುಂದೆ ಹೊರಡಬೇಕು, ಇಷ್ಟೇ ಉಳಿದ ಮಾರ್ಗ ಎಂದು ಅವರಿಗೆ "ನೀವು ಇಲ್ಲೇ ಕುಳಿತಿರ್ರಿ, ಈ ನಾಲ್ಕೂ ಸೈಕಲ್ಲುಗಳನ್ನು ಒಂದೊಂದಾಗಿ ಹೊತ್ತು ಮುಂದೆ ಇರುವ ನೀರಿನ ಗುಂಡಿಯೋ, ಝರಿಯೋ ಸಿಕ್ಕಲ್ಲಿ ಹಾಕಿ ತೊಳೆದು ಮುಂದಕ್ಕೆ ಹೋಗೋಣ" ಎಂದು ಒಂದು ಸೈಕಲ್ ಹೊತ್ತು ನಡೆದೆ. ಹುಡುಗರು "ಅಯ್ಯೋ! ನಮಗೆ ಹೆದರಿಕೆ. ನಾವು ಇಲ್ಲಿ ಕೂಡ್ರಲಿಕ್ಕೆ ಆಗೋದೇ ಇಲ್ಲ. ನಿಮ್ಮ ಕೂಡಲೇ ಬರುತ್ತೇವೆ" ಎಂದು ಅಳುತ್ತ ನನ್ನ ಹಿಂದೆ ಹಿಂದೆಯೇ ಬರತೊಡಗಿದರು. ಸೈಕಲ್ ಹೊತ್ತು ಕೆಸರಿನಲ್ಲಿ ನಡೆಯುವುದಕ್ಕಂತೂ ಅವರಿಗೆ ಆಗಲೇ ಇಲ್ಲ.

ನಾನು ಒಂದು ಸೈಕಲ್ ಹೊತ್ತು ಮೂವರನ್ನು ಹಿಂದೆ ಕರೆದುಕೊಂಡು ಕೆಸರು ತುಳಿಯುತ್ತ ಮುಂದೆ ನಡೆದು ಮುಂದೆ ಸುಮಾರು ಎರಡು ಫರ್ಲಾಂಗ್ ದೂರದಲ್ಲಿ ಒಂದು ದೊಡ್ಡ ನೀರಿನ ಗುಂಡಿಯಲ್ಲಿ ಸೈಕಲ್ ಒಗೆದು "ನೀವು ಮೂವರೂ ಈ ಸೈಕಲ್ ತೊಳೆದು ಸ್ವಚ್ಛಮಾಡಿಕೊಂಡಿರ್ರಿ. ನಾನು ನಿಮ್ಮ ಸೈಕಲ್‌ಗಳನ್ನು ಒಂದೊಂದಾಗಿ ಹೊತ್ತು ತರುತ್ತೇನೆ" ಎಂದು ಹೇಳಿ ಹಿಂದಕ್ಕೆ ಹೊರಟೆ. ಅವರು "ಅಯ್ಯೋ! ಮಾಸ್ತರೇ, ಸಾಧ್ಯವಿಲ್ಲ. ನಮಗೆ ಇಲ್ಲಿ ನಿಮ್ಮನ್ನು ಬಿಟ್ಟು ಇರಲು ಸಾಧ್ಯವಿಲ್ಲ. ಭಯ. ಆಗೋ ಅಲ್ಲಿ ನೋಡಿ...!" ಎಂದು ಅಲ್ಲಿನ ಅಸಂಖ್ಯಾತ ಮಿಂಚುಹುಳಗಳ ಆರಿ ಆರಿ ಹೊತ್ತಿಕೊಳ್ಳುತ್ತಿದ್ದ ದೂರದ ವಿದ್ಯುದ್ದೀಪ ಸಮೂಹಗಳಂತೆ ಕಾಣುವ ದೃಶ್ಯಗಳನ್ನು ಕಂಡು ತೋರಿಸುತ್ತ "ಸಾಧ್ಯವಿಲ್ಲ. ನಾವೂ ನಿಮ್ಮೊಡನೆಯೇ ಬರುತ್ತೇವೆ" ಎಂದು ಹಿಂದೆಬಿದ್ದುಬಿಟ್ಟರು. ನಾನು ಅವರನ್ನು ಕರೆದುಕೊಂಡು ಹಿಂದಕ್ಕೆ ಹೋಗಿ ಮತ್ತೊಂದು ಸೈಕಲ್ ಹೊತ್ತುಕೊಂಡು ಇವರನ್ನು ಕರೆದುಕೊಂಡು ಬಂದು ಇಲ್ಲಿ ಚೆಲ್ಲಿದೆ. ಬೆವೆತು ಹೋದೆ. ಬನವಾಸಿಯಲ್ಲಿ ಭದ್ರವಾಗಿ ನಾಲ್ಕೈದು ರೊಟ್ಟಿ ಭರಪೂರ ಗಂಧಸಾಲಿ ಅಕ್ಕಿಯ ಅನ್ನ ಉಂಡು ಭದ್ರನಾಗಿದ್ದರಿಂದ ತಡೆದುಕೊಂಡೆ. ಹೀಗೆ ಮೂರು ಸೈಕಲ್ ಹೊತ್ತು ತಂದು ನೀರಿಗೆ ಹಾಕಿ ಅರ್ಧ ಗಂಟೆ ಅವನ್ನೆಲ್ಲ ತೊಳೆದು ಸ್ವಚ್ಛ ಮಾಡಿ, ಆ ಮಾರ್ಗದ ಪಕ್ಕದಲ್ಲಿನ ಕಾಲುದಾರಿಯಲ್ಲಿ ಸ್ವಲ್ಪ ದೂರ ಇವರನ್ನು ಕರೆದುಕೊಂಡು ತಳ್ಳಿಕೊಂಡು ನಡೆದೆವು. ಆದರಲ್ಲಿಯೇ ಮುಂದೆ ನಾನು ಹೊರಟರೆ ಎಲ್ಲಕ್ಕೂ ಹಿಂದಿದ್ದವನು ನನಗೆ ಹಿಂದೆ ಬರಲು ಭಯ ಎನ್ನುತ್ತಿದ್ದ. ನಾನು ಹಿಂದುಳಿದು ಮುಂದೆ ಬಿಟ್ಟರೆ ಎಲ್ಲಕ್ಕೂ ಮುಂದೆ ಹೋಗುವುದಕ್ಕೆ ನನಗೆ ಭಯ ನನಗೆ ಭಯ ಎಂದು ನಿಂತುಬಿಡುತ್ತಿದ್ದರು.

ಈ ಗೊಂದಲದಲ್ಲಿ ಹಾಗೂ ಹೀಗೂ ಒಂದು ಮೈಲು ನಡೆದುಬರುತ್ತಿದ್ದಂತೆ ಮತ್ತೆ ಕೆಸರು ಮೆತ್ತುವಂತಹ ಮತ್ತೊಂದು ಸನ್ನಿವೇಶ ಪ್ರಾಪ್ತವಾಯಿತು. ಅಲ್ಲಿಯೂ ಈ ಮೊದಲು ಅನುಸರಿಸಿದ ನೀತಿಯನ್ನೇ ಅನುಸರಿಸಬೇಕಾಯಿತು. ಅಷ್ಟು ಹೊತ್ತಿಗಾಗಲೇ ರಾತ್ರಿ ಒಂದು ಗಂಟೆಯಾಯಿತು. ಬನವಾಸಿಯಿಂದ ಕೇವಲ ಒಂದು ತಾಸಿನಲ್ಲಿ ಬರಬೇಕಾದ ದಾರಿಯನ್ನು ಎಂಟು ತಾಸು ನಾನು ಅನಂತ ಪರಿಶ್ರಮದಿಂದ ದುಃಖ ಸಂಕಟಗಳಿಂದ ಈ ಏನೂ ತಿಳಿಯದ

ಶ್ರೀಮಂತ ಮಕ್ಕಳೊಡನೆ ಅತಿಕ್ರಮಿಸಿ ಕೊನೆಗೂ ರಾತ್ರಿ ಎರಡು ಘಂಟೆಯ ಸುಮಾರಿಗೆ ಊರು ಸೇರಿದ ಪ್ರವಾಸ ಕಥನ ಈಗಲೂ ನನ್ನ ನೆನಪಿನಾಳದಲ್ಲಿ ಹಚ್ಚ ಹಸುರಾಗಿ ಉಳಿದಿದೆ. ಸೆಟ್ಟರ ಆ ಮಕ್ಕಳೆಲ್ಲ ದೊಡ್ಡವರಾಗಿದ್ದಾರೆ. ನನಗೆ ಸಿಕ್ಕಾಗಲೆಲ್ಲ ಅವರೂ ನೆನೆಸಿಕೊಂಡು ನಕ್ಕದ್ದೇ ನಕ್ಕದ್ದು.

## ಸಂಸ್ಕೃತದಲ್ಲಿ ನಡೆದ ಚರ್ಚಾಕೂಟದಲ್ಲಿ ನನ್ನ ಪ್ರತಾಪ

ಕನ್ನಡ ಪಂಡಿತ ಸೀನಿಯರ್ ಕ್ಲಾಸಿನಲ್ಲಿದ್ದಾಗ ಮೈಸೂರು ಮಹಾರಾಜ ಕಾಲೇಜಿನಲ್ಲಿ ನಡೆದ ಒಂದು ಸಂಸ್ಕೃತದಲ್ಲಿಯೇ ಚರ್ಚಿಸಬೇಕಾದ ಚರ್ಚಾಕೂಟದಲ್ಲಿ ಟ್ರೈನಿಂಗ್ ಕಾಲೇಜಿನಿಂದ ನನ್ನನ್ನೇ ಚುನಾಯಿಸಿ ಕಳಿಸಿಕೊಟ್ಟರು. ಆ ಚರ್ಚಾಕೂಟ ರಾಜ್ಯಮಟ್ಟದ್ದು. ಘಟಾನುಘಟಿಗಳಾದ ಸಂಸ್ಕೃತ ವಿದ್ವಾಂಸ ವಿದ್ಯಾರ್ಥಿಗಳು ಬಂದಿದ್ದರು. ನಾನು ಕೇವಲ ಮೂರು ವರ್ಷ ಮಾತ್ರ ಸಂಸ್ಕೃತ ಓದಿದ ವಿದ್ವಾಂಸ ಅಷ್ಟೆ. ಆದರೆ ಯಾರೂ ನಮ್ಮ ಕಾಲೇಜಿನಿಂದ ಹೋಗುವ ಧೈರ್ಯ ಮಾಡದಿದ್ದರಿಂದ ಈ ರಣರಂಗದ ವೀರೋಚಿತ ವೀಳ್ಯವನ್ನು ನಾನೇ ಸ್ವೀಕರಿಸಬೇಕಾಯಿತು. ಇಂಥ ಪ್ರಸಂಗಗಳಲ್ಲಿ ನನಗೆ ಮೊಂಡುಧೈರ್ಯ ಬಹಳ. ಈ ಮೊಂಡುಧೈರ್ಯ ಎಂದು ಏಕೆ ಹೇಳುತ್ತೇನೆಂದರೆ ವಿಘ್ನ ಭಯ, ಸೋಲಿನ ಭಯ ಆವರಿಸಿ ಎಲ್ಲರಲ್ಲೂ ಹಿಂದೆ ಹಿಂದೆ ಸರಿದರೆ ಅದೇ ಒಂದು ಕೆಟ್ಟ ಅಭ್ಯಾಸದಿಂದ ಮನುಷ್ಯ ಪ್ರಗತಿ ಸಾಧಿಸಲಾರನೆಂದೇ ನನ್ನ ತೀರ್ಮಾನ. ಸೋಲಾದರೂ ಚಿಂತೆಯಿಲ್ಲ, ವಿಘ್ನ ಬಂದೊದಗಿದರೂ ಚಿಂತೆಯಿಲ್ಲ, ಅನುಭವವಾದರೂ ಆಗುತ್ತದಲ್ಲ! ಸಂಸ್ಕೃತ ಭಾಷೆಯನ್ನು ವ್ಯಾವಹಾರಿಕವಾಗಿ ಹೇಗೆ ಬಳಸುತ್ತಾರೆ? ಚರ್ಚೆಯ ಗುಣಮಟ್ಟವೇನು? ವಿದ್ಯಾರ್ಥಿ ದೆಸೆಯಲ್ಲಿದ್ದವರು ಹೇಗೆ ಆ ಭಾಷೆಯನ್ನು ಬಳಸಬಲ್ಲರು ಎಂಬುದರ ಮೀಮಾಂಸೆಯಾದರೂ ಆಯಿತಲ್ಲ ಎಂಬುದು ನನ್ನ ತೀರ್ಮಾನ. ಅದಕ್ಕಾಗಿ ಧೈರ್ಯವಾಗಿ ಒಪ್ಪಿಕೊಂಡು ಹೋದೆ.

ಚರ್ಚಾ ವಿಷಯ : "ಅದ್ಯತನ ವಿಶ್ವವ್ಯಾಪೀ ಅಶಾಂತಿಃ ಭಾರತೀಯ ಸಂಸ್ಕೃತಿ ಮನುಸ್ಮೃತ್ಯೈವ ಪರಿಹರ್ತವ್ಯಾ" ಎಂದು. ಆಗಿನ ಮಹಾರಾಜಾ ಕಾಲೇಜಿನ ಸಂಸ್ಕೃತ ಪ್ರೊಫೆಸರ್ ಆಗಿದ್ದ ತಿರುನಾರಾಯಣ ಅಯ್ಯಂಗಾರ್ ಅವರೇ ಅಧ್ಯಕ್ಷರು. ಅನೇಕ ಕಡೆಗಳಿಂದ ಪರ, ವಿರೋಧವಾಗಿ ಒಟ್ಟು ಹದಿನಾರು ಜನಗಳು ಬಂದಿದ್ದರು. ಈ ವಿಷಯವನ್ನು ವಿರೋಧಿಸಿ ಮಾತನಾಡಬೇಕಾಗಿದ್ದ ನನಗೆ ಮೂಲ ಬಂಡವಾಳ ಕಿರಾತಾರ್ಜುನೀಯದಲ್ಲಿ ದ್ರೌಪದಿಯು ಧರ್ಮಭೀಮಾದಿಗಳನ್ನು ಕುರಿತು, ಕ್ಷಾತ್ರತೇಜವನ್ನು ಮರೆತು ಕ್ಷತ್ರಿಯನಾದವನು ವರ್ತಿಸುವುದಕ್ಕಿಂತ ಮುನಿಗಳಾಗಿ ಅರಣ್ಯ ಸೇರುವುದೇ ಲೇಸು ಎಂದು ಝಂಕಿಸುವ ಪ್ರಸಂಗದ ಕೆಲವು ಅಭಿಪ್ರಾಯಗಳು. ಕಿರಾತಾರ್ಜುನೀಯ ನಮಗೆ ಪಠ್ಯಗ್ರಂಥವಾಗಿತ್ತು. ಆ ಭಾಗ ವ್ಯಾಖ್ಯಾನ ಸಹಿತ ನನಗೆ ಹರಕು ಮುರುಕಾಗಿ ಬಾಯಿಗೆ ಬರುತ್ತಿತ್ತು. ಅಥವಾ ಚರ್ಚಾಕೂಟಕ್ಕೇ ಮೊದಲು ನಾಲ್ಕೈದು ದಿನಗಳು ಕುಳಿತು ಉರುಹೊಡೆದು ಏನೇನೋ ಮಾಡುತ್ತಿದ್ದೆ. ಭಾರಿ ಸಂಸ್ಕೃತ ಓದಿದವರನ್ನು ಹೆದರಿಸಿಕೊಳ್ಳುವ ಬಾಯಿ ಬಡಕತನವೂ ನನ್ನಲ್ಲಿ ಮೂಲತಃ ಇದ್ದೇ ಇತ್ತು. ಗೊತ್ತಿಲ್ಲದ ವಿಷಯದ ಬಗ್ಗೆಯೂ ಗೊತ್ತಿರುವವನಂತೆ ಅರ್ಧಘಂಟೆಯಾದರೂ ಭಾಷಣ ಬಿಗಿಯುವ ಭಂಡತನ ನನ್ನಲ್ಲಿ ಮೊದಲಿನಿಂದ ಕಲಿತ ವಿದ್ಯೆಯೇ ಅಲ್ಲವೇ? ಕೃಷ್ಣದೇವರಾಯನ ಆಸ್ಥಾನಕ್ಕೆ ಬಂದಿದ್ದ ಬೇರೆದೇಶದ ವಿದ್ವಾಂಸರೊಡನೆ

ಚರ್ಚೆಗೆ ಹೋದ ತೆನ್ನಾಲಿರಾಮಕೃಷ್ಣನಂತೆ ಭರ್ಜರಿ ಖಾದಿ ಜುಬ್ಬಾ, ಖಾದಿ ಪಂಚೆ ಉಟ್ಟು ಕ್ಯಾತನಹಳ್ಳಿ ಸಾಹುಕಾರ ಸಿದ್ಧಲಿಂಗಪ್ಪನವರ ಸಂಸ್ಕೃತ ಪಾಠಶಾಲೆಯಲ್ಲಿ ಹಿರಿಯ ಉಪಾಧ್ಯಾಯರಾಗಿದ್ದ ಕೃಷ್ಣಶಾಸ್ತ್ರಿಗಳ ಹತ್ತಿರ ಕೇಳಿ ತಂದಿದ್ದ ಭರ್ಜರಿ ಶಾಲೊಂದನ್ನು ಹೊದ್ದು ಹಣೆಗೆ ವಿಭೂತಿ ಜಡಿದು ಹೋಗಿ, ಎಲ್ಲರಿಗೂ ಗಂಭೀರವಾಗಿ ನಮಸ್ಕರಿಸಿ ಕುಳಿತೆ. ಎಲ್ಲರೂ ನನ್ನ ಮುಖವನ್ನೇ ಮಿಕಿಮಿಕಿ ನೋಡಹತ್ತಿದರು. ಕೆಲವರು ನನ್ನ ಹಾಗೆ ಶಾಲು ಹೊದ್ದುಕೊಂಡು ಬಂದಿದ್ದರೂ ಯಾರ ಶಾಲುಗಳೂ ನನ್ನ ಶಾಲಿನಂತೆ ಇರಲಿಲ್ಲ. ಭಂಡವಾಳ ಅಷ್ಟಕ್ಕಷ್ಟೇ ಆದರೂ ಮೇಲ್ನೋಟಕ್ಕೆ ಭರ್ಜರಿ ಶಾಲು ಹೊತ್ತ ನಾನೂ ಭರ್ಜರಿಯಾಗಿ ಕಾಣುತ್ತಿದ್ದೆ. ಕೃಷ್ಣಶಾಸ್ತ್ರಿಗಳಿಗೆ ಅವರ ಘನ ವಿದ್ವತ್ತನ್ನು ಪರಿಗಣಿಸಿ ದೊಡ್ಡ ಸಭೆಯೊಂದರಲ್ಲಿ ಯಾರೋ ಕೊಟ್ಟಿದ್ದ ಬಹು ಬೆಲೆಬಾಳುವ ಶಾಲು ಅದು. ಅದನ್ನು ಇತರರಿಗೆ ಕೊಡಬಾರದು ನಿಜ. ಕೃಷ್ಣಶಾಸ್ತ್ರಿಗಳಿಗೆ ನನ್ನಲ್ಲಿ ಬಹಳ ವಾತ್ಸಲ್ಯ, ನನ್ನ ಧೈರ್ಯವನ್ನು ಬಹಳ ಮೆಚ್ಚಿಕೊಂಡಿದ್ದವರಲ್ಲಿ ಅವರೊಬ್ಬರು. ಆದ್ದರಿಂದ ನನ್ನ ಕೋರಿಕೆ ಮನ್ನಿಸಿ ಒಂದೆರಡು ಗಂಟೆಗಳು ಕೊಟ್ಟಿದ್ದರು.

ಸರಿ, ಚರ್ಚಾಕೂಟವೆಲ್ಲ ಸಂಸ್ಕೃತ ಭಾಷೆಯಲ್ಲಿಯೇ. ಕಾರ್ಯದರ್ಶಿ ಪ್ರಾಸ್ತಾವಿಕ ಭಾಷಣ ಮಾಡಿ ಆದ್ಯರ ಪರಿಚಯವನ್ನು ಸಂಸ್ಕೃತದಲ್ಲಿಯೇ ತಡಬಡಿಸಿ ಕಿಂತು-ಪರಂತು...ಎಂದು ಏನೇನೋ ಹೇಳಿ ಮುಗಿಸಿ ಚರ್ಚೆಯನ್ನು ಪ್ರಾರಂಭಿಸಬಹುದೆಂದು ಹೇಳಿ ಕುಳಿತರು. ನನ್ನದು ವಿರೋಧಪಕ್ಷದಲ್ಲಿದ್ದ ಹೆಸರು. ನಾನು 'ಶಾಂತಿ'ಯಿಂದ ವಿಶ್ವವ್ಯಾಪೀ ಅಶಾಂತಿ ಸಾಧ್ಯವಿಲ್ಲ. ಶಿವವ್ಯಾಪಿಯಾದ ಅಶಾಂತಿಯನ್ನು ಕ್ರಿಯೋಚಿತ ಶೌರ್ಯವೀರ್ಯಾದಿ ಗಳಿಂದಲೇ ಸ್ಥಾಪಿಸಬೇಕಾದದ್ದು ಎಂದು ಮಾತನಾಡಬೇಕಾಗಿತ್ತು. ನನ್ನ ಸರದಿ ಬಂತು. ಎದ್ದು ನಿಂತೆ. ಹಿಂದೆ ಮಾತಾಡಿದವರು ಕೆಲವರು ಚೆನ್ನಾಗಿ ಮಾತನಾಡಿದ್ದರು. ಕೆಲವರು ಆ! ಊ! ಎಂದು ಏನೇನೋ ಹೇಳಿದರು. ಗದುಗಿನ ನಾರಣಪ್ಪ ಮತ್ಸ್ಯಯಂತ್ರ ಭೇದಮಾಡಿ ದ್ರೌಪದಿಯನ್ನು ಗೆಲ್ಲಬೇಕಾಗಿದ್ದ ಸಮಯದಲ್ಲಿ 'ಧೋತ್ರ ದರ್ಭೆಯ ಗೊರವ ಸಂವರಿಸುತ್ತ ಸಭೆಯಿಂದೆದ್ದನಾ ಪಾರ್ಥ' ಎನ್ನುವ ಹಾಗೆ ನಾನೂ ಅಂಗಿ ಗುಂಡಿ ಗಿಂಡಿ ಸರಿಪಡಿಸಿಕೊಂಡು, ಗಂಟಲನ್ನು ಅಹಹ! ಉಹುಹು! ಎಂದು ಸರಿಪಡಿಸಿಕೊಂಡು ಎದ್ದು ನಿಂತು ಮೊದಲ ಮಾತಿನಲ್ಲೇ "ಕೋ ನಾಮ ಅಯಂ ಶಾಂತಿಃ ಕಿಂಕರ್ತುಶಕ್ಯೋಭವತ್ಯಯಂ ಶಾಂತಿ ಶಾಂತಿರಿತಿ ಶಬ್ದಂ ಋಷಿಜನೋಚಿತಂ ನತು ಕ್ಷತ್ರಿಯಾಣಾ ಮುಕ್ತಿಃ...." ಇತ್ಯಾದಿ ಲಿಂಗ ವಚನ ವಿಭಕ್ತಿಗಿಭಕ್ತಿ ಎಲ್ಲ ವ್ಯಾಕರಣ ಕಟ್ಟುಪಾಡುಗಳೇನೇ ಇರಲಿ, ಅವನ್ನು ಲೆಕ್ಕಿಸದೆ ಮೊದಲೇ ಕಿರಾತಾರ್ಜುನೀಯದ ದ್ರೌಪದಿಯ ಕೆಲವು ಮಾತುಗಳನ್ನು ಬೆರೆಸಿ ದಡದಡದಡ ನುಡಿಯಲು ಪ್ರಾರಂಭಿಸಿಬಿಟ್ಟೆ. ಎಲ್ಲರೂ ಮುಖಮುಚ್ಚಿ ನಗುವುದಕ್ಕೆ ಪ್ರಾರಂಭ. ಅಧ್ಯಕ್ಷರಾದ ಪ್ರೊ. ತಿರುನಾರಾಯಣಯ್ಯಂಗಾರರಂತೂ ನಕ್ಕದ್ದೇ ನಕ್ಕದ್ದು. ಕೊನೆಗೆ "ಅದ್ಯತನ ವಿಶ್ವವ್ಯಾಪಿನೀ ಅಶಾಂತಿಃ ಕ್ಷತ್ರಿಯೋಚಿತ ಶೌರ್ಯವೀರ್ಯ ಪರಾಕ್ರಮಾದೇವ ಪರಿಹರ್ತವ್ಯಾ ನತು ಪ್ರಾಚೀನ ಭಾರತೀಯ ಮುನಿಜನೋಚಿತ ಸತ್ಯ ಅಹಿಂಸಾದಿ ಋಜುಸ್ವಭಾವಕ್ರಿಯೇಣ" ಎಂದುಬಿಟ್ಟೆ. ಬಹಳ ಹೊತ್ತು ನಕ್ಕೇ ನಕ್ಕರು. ಅವರು ನಕ್ಕದ್ದರ ಮೂಲ ಕಾರಣ ನನಗೆ ಬೇಗ ಗೊತ್ತಾಗಲೇ ಇಲ್ಲ. ಎಲ್ಲರೂ ನನ್ನನ್ನು ಹುಳುಹುಳು ನೋಡತೊಡಗಿದರು. ಬಹುಶಃ ನಾನೇನೋ ತಪ್ಪು

ಹೇಳಿರಬಹುದೋ ಏನೋ. ಅಂಥಾ ಪ್ರಮಾದ ನನ್ನಿಂದ ಏನೂ ಆದಂತಿಲ್ಲವಲ್ಲ ಎಂದು ನಾನೇ ನನ್ನನ್ನು ಎಷ್ಟೇ ವಿಮರ್ಶಿಸಿಕೊಂಡರೂ ನನಗೆ ಅರ್ಥವಾಗಲೇ ಇಲ್ಲ. ಪಕ್ಕದಲ್ಲಿ ಕುಳಿತ ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜಿನ ವಿದ್ವಾಂಸರು "ಶಾಂತಿ ಶಬ್ದ ಸ್ತ್ರೀಲಿಂಗ. ನೀವು ಎತ್ತುತ್ತಲೇ ಅದನ್ನು ಪುಲ್ಲಿಂಗ ಮಾಡಿ 'ಕೋನಾಮ ಅಯಂ ಶಾಂತಿ' ಅಂದದ್ದಲ್ಲದೆ ಪುನಃ ಮುಂದೆ 'ಕಿಂ ಕರ್ಮಂ ಶಕ್ಯೋ ಭವತ್ಯಯಂ' ಎಂದು ಹೇಳಿಬಿಟ್ಟಿರಿ. "ಕಾ ನಾಮ ಇಯಂ ಶಾಂತಿಃ" ಅನ್ನಬೇಕು. 'ಕಿಂ ಕರ್ತುಂ ಶಕ್ಯಾ ಭವತಿ ಇಯಂ' ಅಲ್ಲವೇ...ಎಂದು ಏನೇನೋ ನನ್ನ ತಪ್ಪುಗಳನ್ನು ಹೇಳಿ. ಈ ನಿಮ್ಮ ತಪ್ಪಿಗಾಗಿ ಮತ್ತು ತಪ್ಪಾದರೂ ಹೆದರದೆ ಉತ್ಸಾಹದಿಂದ ಮೇಜು ಕುಟ್ಟಿ ಕುಟ್ಟಿ ಮಾತನಾಡುವ ರೀತಿಗೂ ಎಲ್ಲರೂ ನಗುವಂತಾಯಿತು ಎಂದು ಹೇಳಿದೊಡನೆ ನನ್ನ ತಪ್ಪಿಗಾಗಿ ನನ್ನ ಎದೆ ಡವಡವ ಬಡಿದು ನಾಲಿಗೆ ಒಣಗಿ ತುಟಿಯ ಮೇಲಾಡತೊಡಗಿತು. ನನ್ನ ಡೌಲು. ಧಿಮಾಕು ಎಲ್ಲ ಕುಗ್ಗಿತ್ತು. ಆದರೂ ಒಣ ಧೈರ್ಯದಿಂದ ನನ್ನ ಒಳಗಿನ ಭಯ-ಭೀತಿಯನ್ನು ಹೊರಗೆ ತೋರಗೊಡದೆ ಗಂಭೀರವಾಗಿಯೇ ಇದ್ದು, ಕಠಿಣತಮವಾದ ಸಂಸ್ಕೃತ ವಕ್ತೃತ್ವದಲ್ಲಿ ತಪ್ಪು ಎಲ್ಲರೂ ಮಾಡುತ್ತಾರೆ. ಅಷ್ಟು ಹೊತ್ತು ತಪ್ಪೋ ಸರಿಯೋ ಸಂಸ್ಕೃತದಲ್ಲಿ ಮಾತನಾಡಿದೆನೋ ಇಲ್ಲವೋ! ಅದೇ ದೊಡ್ಡದು. ತಿಳಿದವರು ಈ ಬಗೆಗೆ ತಪ್ಪು ತಿಳಿಯಬಾರದು. ಕೇವಲ ಮೂರು ವರ್ಷ ಮಾತ್ರ ಸಂಸ್ಕೃತ ಓದಿ ನಾಲ್ಕನೇ ವರ್ಷದಲ್ಲಿಯೂ ಸಂಸ್ಕೃತ ಓದುತ್ತಿರುವ ನನಗೆ ಸಂಸ್ಕೃತ ಸರಸ್ವತಿ ಇಷ್ಟು ಒಲಿದು ಬಂದುದೇ ದೊಡ್ಡದಲ್ಲವೇ? ಎಂಬ ಧಿಮಾಕಿನ ಒಳನುಡಿ ಹೇಳುತ್ತಿತ್ತು. 'ಅಖಾಡಕ್ಕೆ ಬರುವ ಜಟ್ಟಿ ಕುಸ್ತಿಯಲ್ಲಿ ಬೀಳಲಿ, ಆದರೆ ಕುಸ್ತಿ ಆಟದ ಪಟ್ಟುಗಳನ್ನು ಚೆನ್ನಾಗಿ ತಿಳಿದಿದ್ದಾನೆ ಅಂದರೆ ಸಾಕಲ್ಲವೇ? ಸಂಸ್ಕೃತ ಚರ್ಚಾಕೂಟಕ್ಕೆ ಬರುವಾಗ ನಾಮಲಿಂಗಾನುಶಾಸನದ ಸಾಮಾನ್ಯ ಶುದ್ಧಿಯ ಬಗೆಗಾದರೂ ಯೋಚಿಸಿಕೊಂಡು ಬಂದು ಮಾತನಾಡಬೇಕಾಗಿತ್ತು' ಎಂದು ಇನ್ನೊಂದು ಬುದ್ಧಿವಾದ ನನ್ನಲ್ಲೇ ಪ್ರತಿಧ್ವನಿಸುತ್ತಿತ್ತು. ಚರ್ಚಾಕೂಟವೆಲ್ಲ ಮುಗಿಯಿತು. ನನಗೆ ಬಹುಮಾನ ಬರಲಿಲ್ಲ ನಿಜ. ಅಧ್ಯಕ್ಷರು ನನ್ನ ಹೆಸರೆತ್ತಿ ಮಾತನಾಡಿದ್ದು ನನಗೆ ಬಹುಮಾನ ಬಂದುದಕ್ಕಿಂತಲೂ ಹೆಚ್ಚೆಂದು ಮನಸ್ಸಿನಲ್ಲಿ ಸಮಾಧಾನ ಮಾಡಿಕೊಂಡು ಬಂದೆ. ಅಧ್ಯಕ್ಷರು ಟ್ರೈನಿಂಗ್ ಕಾಲೇಜಿನಿಂದ ಬಂದ ವಿದ್ಯಾರ್ಥಿ ಚನ್ನಪ್ಪ ಎಂಬುವವರು ಬಹು ಉತ್ಸಾಹಿಗಳು. ವಕ್ತೃತ್ವ ಕಲೆ ಚೆನ್ನಾಗಿದೆ. ಆದರೆ ಅವರು ಶಬ್ದಗಳ ಲಿಂಗಾದಿಗಳನ್ನು ಸರಿಯಾಗಿ ಮಾತನಾಡಿದ್ದರೆ ಚೆನ್ನಾಗಿತ್ತು, ಹಾಗೆ ಹೀಗೆ ಹೇಳಿ ನನಗೂ ಸ್ವಲ್ಪ ಉತ್ಸಾಹ ಬರುವಂತೆ ಮಾತನಾಡಿದರು. ಅದೇ ನನಗೆ ಬಹುಮಾನವೆಂದುಕೊಂಡು ಶಾಲು ಜಾಡಿಸಿ ಮಡಚಿ ಕೈಚೀಲದಲ್ಲಿ ತುಂಬಿಕೊಂಡು ನನ್ನ ಪಾಡಿಗೆ ನಾನು ಲೋಕಾಭಿರಾಮವಾಗಿ ಫುಟ್‌ಪಾತ್ ಏರಿ ನಡೆದು ಕೆ.ಎಸ್.ಎಸ್. ಪಾಠಶಾಲೆ ಸೇರಿ ಕೃಷ್ಣಶಾಸ್ತ್ರಿಗಳಿಗೆ ರಿಪೋರ್ಟನ್ನೆಲ್ಲ ಒಪ್ಪಿಸಿದೆ. ನಾನು ಮಾಡಿದ ತಪ್ಪನ್ನು ಕೇಳಿ ಅವರೂ ನಕ್ಕು ನಕ್ಕುಬಿದ್ದರು. ತಪ್ಪುಗಳು ಎಂಥವರಿಗೂ ಆಗುತ್ತವೆ. ನೀನು ಆ ಸಭೆಯಲ್ಲಿ ಧೈರ್ಯವಾಗಿ ನಿಂತು ನಿನಗೆ ತೋಚಿದ ರೀತಿಯಲ್ಲಿ ಅಷ್ಟು ಸಂಸ್ಕೃತ ವಾಕ್ಯಗಳನ್ನಾದರೂ ಭಾವಿಸಿ ಹೇಳಿ ವಿಷಯದಲ್ಲಿ ಪ್ರವೇಶಿಸಿದೆಯಲ್ಲಾ! ಅದೇ ದೊಡ್ಡದು. ಮುಂದೆ ಪ್ರಯತ್ನ ಮಾಡಿ ಆ ಶಕ್ತಿಯನ್ನು ಅಭಿವೃದ್ಧಿಪಡಿಸಿಕೋ..ಇತ್ಯಾದಿ ಹಿತನುಡಿ ನುಡಿದು ನಕ್ಕು ಕಳಿಸಿದರು ಅನ್ನಿ. ಹೀಗಿತ್ತು ನನ್ನ ಉತ್ಸಾಹ ಆಗ.

## ಮೈಸೂರು ಸುತ್ತಮುತ್ತ ಶಿವಕೀರ್ತನ ಚಟುವಟಿಕೆ

ಮೈಸೂರಿನಲ್ಲಿ ನಾಲ್ಕುವರ್ಷ ಓದುತ್ತಿದ್ದ ಸಮಯದಲ್ಲಿ ಅಲ್ಲಿ ಅನೇಕ ಕಡೆ ಶಿವಕೀರ್ತನೆಗಳ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದೆನೆಂದು ಈ ಪೂರ್ವದಲ್ಲಿ ಹೇಳಿದ್ದೇನೆ. 1941-1942ರ ಸುಮಾರಿನಲ್ಲಿ ಕೆಲ ಕೀರ್ತನಕಾರರು ಮಾಡುತ್ತಿದ್ದ ಶೈಲಿ-ಹಾಸ್ಯ-ಕಥೆ ಹೇಳುವ ರೀತಿ, ಅವರ ವಿಶಿಷ್ಟವಾದ ಧ್ವನಿಯ ಎಳೆತ ಸಂಗೀತದ ರೀತಿ-ನೀತಿಗಳನ್ನು ಮನಸ್ಸಿನಲ್ಲಿಯೇ ಮೆಲುಕು ಹಾಕಿ ಹಾಕಿ ನಾನೇಕೆ ಈ ಜನಪ್ರಿಯ ಕಸುಬೊಂದನ್ನು ಕಲಿಯಬಾರದೆಂದು ಯಾವುದೋ ಗಳಿಗೆಯಲ್ಲಿ ಕತೆ ಮಾಡಿ ಸೈ ಎನಿಸಿಕೊಂಡ ವಿವರಗಳನ್ನು ಹಿಂದೆ ಹೇಳಿದ್ದೆನಷ್ಟೇ. ಆಗ ಬೇಕಾದಷ್ಟು ತಪ್ಪುಗಳು ನನ್ನ ಮುಖಾರವಿಂದ ನಿರ್ಗಮನವಾಗುತ್ತಿದ್ದವಷ್ಟೆ. ಪಂಡಿತ ಪರೀಕ್ಷೆಯಲ್ಲಿ ಪ್ರೌಢ ಕನ್ನಡ ಮತ್ತು ಸಂಸ್ಕೃತ ಗ್ರಂಥಾವಲೋಕನ ಮಾಡುತ್ತ ಮಾಡುತ್ತ ನಾನು ಹಿಂದಿನ ದಿನಗಳಲ್ಲಿ ಮಾಡುತ್ತಿದ್ದ ತಪ್ಪುಗಳು ನನಗೇ ಅರ್ಥವಾಗತೊಡಗಿದವು. ಇನ್ನು ಮೇಲೆ ಕನ್ನಡ ಪಂಡಿತರೆನಿಸಿಕೊಂಡು ತಪ್ಪು ತಪ್ಪು ಹೇಳುವುದಾಗಲೀ, ಬುರುಡೆ ಬಿಡುವುದಾಗಲಿ ಮಾಡಿದರೆ ಬೆಲೆ ಬರುವುದಿಲ್ಲವೆಂದು ವ್ಯವಸ್ಥಿತವಾಗಿ ಕಥೆ ಮಾಡುವ ರೀತಿ-ನೀತಿಗಳನ್ನು ನಾನೇ ಮನಸ್ಸಿನಲ್ಲಿ ಭಾವಿಸಿ ಪ್ರೌಢರೀತಿಯಲ್ಲಿ ಮೈಸೂರಿನಲ್ಲಿ ಕಾರ್ಯಕ್ರಮಗಳನ್ನು ನಡೆಸುತ್ತ ಬರುತ್ತಿದ್ದೆ. ಮೊದಮೊದಲು ಮೈಸೂರು ಜನತೆಯೆದುರು ಕಥೆ ಮಾಡಲು ಅಂಜಿಕೆ ಬರುತ್ತಿತ್ತು. ಆದರೆ ನಾನು ಮೊದಲೇ ಹೇಳಿದ್ದೇನಲ್ಲ ಮೊಂಡುಧೈರ್ಯ ಅಂತ. ಅದರ ಬಲವೊಂದು ನನಗೆ ಹೆದರುವುದೇಕೆ? ಒಮ್ಮೆ ತಪ್ಪುತ್ತೆ, ಆಮೇಲೆ ಸರಿಹೋಗುತ್ತೆ. ನುಗ್ಗುವುದೇ ಸಾಹಸಿಯಾದವನ ಕಾರ್ಯವೆಂದು ಅದು ಹೇಳುತ್ತಿತ್ತು. ಕೆ.ಎಸ್.ಎಸ್. (ಕ್ಯಾತನಹಳ್ಳಿ ಸಾಹುಕಾರ್ ಸಿದ್ಧಲಿಂಗಪ್ಪ) ಪಾಠಶಾಲೆಯಲ್ಲಿ, ಕುಂದೂರು ಮಠದಲ್ಲಿ ಸುತ್ತಮುತ್ತಣ ಹಳ್ಳಿಹಳ್ಳಿಗಳಲ್ಲಿ ಕಥೆ ಮಾಡಿದ್ದುಂಟು. ಒಮ್ಮೆ ದೂರದ ಹದಿನಾರು ಎಂಬ ಊರಿನಲ್ಲಿ (ಹದಿನಾಡು ಎಂಬುದು ಜನರ ಬಾಯಲ್ಲಿ ಹದಿನಾರು ಆಗಿತ್ತು) ಅತ್ಯುತ್ತಮ ಕಥೆ ಮಾಡಿದೆ. ಆ ಕಥೆ ನನಗೆ ಬಹು ಆತ್ಮಪ್ರತ್ಯಯ ತುಂಬಿತು. ಹತ್ತು ಹನ್ನೆರಡು ಮೈಲು ದೂರದ (ನಿಖರವಾಗಿ ದೂರವೆಷ್ಟೆಂಬುದು ಜ್ಞಾಪಕವಿಲ್ಲ) ಊರಿಗೆ ಚಕ್ಕಡಿಯಲ್ಲಿ ವಾದ್ಯಗಾರರು ಸಹಿತ ನಮ್ಮನ್ನೆಲ್ಲ ಕರೆದೊಯ್ದು ಚಕ್ಕಡಿಯಲ್ಲಿ ಮೈಸೂರಿಗೆ ಪುನಃ ತಂದುಬಿಟ್ಟಿದ್ದರು. ಸಂಭಾವನೆಯನ್ನು ಕೈತುಂಬ ಕೊಟ್ಟಿದ್ದರೆಂದು ಜ್ಞಾಪಕ. ಮತ್ತೊಮ್ಮೆ ಎಡತೊರೆಯ ಅಕ್ಕನಬಳಗದ ಅಧ್ಯಕ್ಷೆಯಾದ ಬಳೆಬಸವರಾಜಪ್ಪ ಎಂಬುವವರ ಧರ್ಮಪತ್ನಿ (ಹೆಸರು ಮರೆತಿದೆ) ಅವರು ಸ್ವತಃ ಶ್ರೀಮಂತರು, ಬಹು ಉದಾರಿಗಳು, ಸಾತ್ವಿಕ ಶಿರೋಮಣಿಗಳು. ಅವರ ಧರ್ಮಬುದ್ಧಿಯ ಕಾರಣವಾಗಿ ಅವರನ್ನು ಜನ ಬಹಳ ಗೌರವಾದರಗಳಿಂದ ಕಾಣುತ್ತಿದ್ದರು. ಅವರು ನಮ್ಮ ಚೆನ್ನಮಲ್ಲಿಕಾರ್ಜುನರ ಕೆಲವು ಗ್ರಂಥ ಪ್ರಕಟಣೆಗೆ ಉದಾರ ದೇಣಿಗೆ ಕೊಟ್ಟಿದ್ದವರು. ಅಂಥವರು ಬಹುಪ್ರೀತಿಯಿಂದ ನನ್ನನ್ನು ಕಥೆಗೆ ಆಹ್ವಾನಿಸಿದರು. ವಾದ್ಯಗಾರರು ಸಹಿತ ಮೈಸೂರಿನಿಂದ ಹೋಗಿ ಅಲ್ಲಿ ಅಕ್ಕಮಹಾದೇವಿ ಕಥೆಯನ್ನು ಬಹು ಸೊಗಸಾಗಿ ಮಾಡಿದೆ. ಬಹು ಸಂತೋಷದಿಂದ ಉದಾರ ಸಾಧ್ವೀಶಿರೋಮಣಿ ಬಾಯಿತುಂಬ ಹೊಗಳಿ ನೂರಿಪ್ಪತ್ತು ರೂಪಾಯಿ ಸಂಭಾವನೆ ಕೊಟ್ಟುಬಿಟ್ಟರು. ನಾನೇನು ಮೊದಲು ಇಷ್ಟು ದುಡ್ಡೆಂದು ಕರಾರು ಮಾಡಿಕೊಂಡು ಹೋದವನಲ್ಲ. ಯಾವಾಗಲೂ ಆ ರೀತಿ ನಾನು ಮಾಡಲೇ ಇಲ್ಲ. ಈ ಬುದ್ಧಿ ನನ್ನನ್ನು ಎಷ್ಟೋ ಸಲ ಅಪಾಯಕ್ಕೂ ಗುರಿಮಾಡಿದೆ ಎನ್ನಿ. ಕೆಲವು ಕಡೆ ಮೂರು

ನಾಲ್ಕು ಘಂಟೆಗಳವರೆಗೆ ಕೂಗಾಡಿಸಿ ಬೆವರು ಇಳಿಸಿ ಕೊನೆಯಲ್ಲಿ ಒಂದು ದೊಡ್ಡ ಹೂಮಾಲೆ ಹಾಕಿ. ಇವರು ಅಂಥವರು - ಇಂಥವರು. ಸರಕಾರೀ ಕೆಲಸದಲ್ಲಿದ್ದವರು, ಸಮಾಜ ಸೇವೆಗೆ ನಡುಕಟ್ಟಿ ನಿಂತಿರುವವರು, ಹಾಗೆ ನಿಂತಿರದಿದ್ದರೂ ಅವರೇ ಹುಟ್ಟಿಸಿಕೊಂಡು ಹೇಳುತ್ತ. ಕೈತುಂಬ ಸಂಬಳವೂ ಬರುತ್ತಿದೆ. (ಹಾಗೆಂದು ಇವರಿಗೆ ಯಾವ ಮೂರ್ಖ ಹೇಳಿದನೋ? ಮೂವತ್ತೆರಡು ಮೂವತ್ತಮೂರು ರೂಪಾಯಿ ಕೈ ತುಂಬ ಸಂಬಳವೇ?). ದುಡ್ಡಿಗಾಗಿ ಉಳಿದ ಹರಿಕಥೆ ದಾಸರಂತೆ ಬಾಯಿ ಬಾಯಿ ಬಿಡುವವರಲ್ಲ - ಏನೇನೋ ಹೇಳಿ ಬಸ್ ಹತ್ತಿಸಿ ಟಿಕೇಟ್ ತೆಗೆಸಿಕೊಟ್ಟ ಉದಾಹರಣೆಗಳೂ ಉಂಟು. ಆಗ ನಾನು ಮನಸ್ಸಿನಲ್ಲಿ ದುಡ್ಡಿಗಾಗಿ ಬಾಯಿ ಬಾಯಿ ಬಿಡುವವರಲ್ಲಾ ಎಂದು ಯಾರಪ್ಪಾ ಹೇಳಿದರು? ಮೂರು ನಾಲ್ಕು ಗಂಟೆ ಕೂಗಾಡಿಸಿದ ಇವರು ಎಂಟು ಹತ್ತು ರೂಪಾಯಿಗಳನ್ನಾದರೂ ಎಲೆಯ ಮಧ್ಯದಲ್ಲಿಟ್ಟು ಕೊಟ್ಟಿದ್ದರೆ ಒಲ್ಲೆ ಅನ್ನುತ್ತಿದ್ದನೆ? ಅವರು ಹಣ ಕೊಡುವುದಕ್ಕೆ ಬಂದಾಗ ನಾನೇನಾದರೂ ಬೇಡವೆಂದಾಗ ತಾನೇ ಈ ಮಾತು ಎಂದುಕೊಳ್ಳುತ್ತ ಇಂಗು ತಿಂದ ಮಗನಂತೆ ಮನಸ್ಸಿನಲ್ಲಿ ಶಪಿಸುತ್ತ ಬಸ್‌ನಲ್ಲಿ ಕುಳಿತು ಇನ್ನೊಮ್ಮೆ ಇಂಥ ಮೂರ್ಖರು ಕರೆಯ ಬಂದರೆ ಕರಾರು ಮಾಡಿಕೊಂಡು ಪಗಡದಸ್ತಾಗಿ ಅಡ್ವಾನ್ಸ್ ಸುರಿಸಿಕೊಂಡೇ ಹೋಗಬೇಕು ಎಂದು ಯೋಚಿಸುತ್ತಿದ್ದೆ. ಆದರೆ ಯೋಗ್ಯರಾರು? ಅಯೋಗ್ಯರಾರು? ಎಂದು ನಿರ್ಣಯಿಸುವ ಚಾಕಚಕ್ಯತೆ ನನಗೆ ಗೊತ್ತಾಗುತ್ತಿರಲಿಲ್ಲ. ಎಷ್ಟೇ ಅಂದರೂ ನಾನೇನೂ ಇದೇ ವೃತ್ತಿಯಲ್ಲಿ ಜೀವನ ನಿರ್ವಹಿಸುವವನೇನೂ ಅಲ್ಲವಲ್ಲ! ಹೋಗಲಿಬಿಡಿ. ಒಂದೆರಡು ರೂಪಾಯಿ ಆದರೆ ತಟ್ಟೆ ಹಣ ಬಂದದ್ದೊಂದು ಲಾಭ. ಕಥೆ ಮಾಡುವ ಅಭ್ಯಾಸವಾದದ್ದು ಎರಡನೇ ಲಾಭ ಎಂದುಕೊಂಡು ಅಷ್ಟಷ್ಟಕ್ಕೇ ಎಲ್ಲ ಮರೆತು ಸುಮ್ಮನಾಗಿ ಬಿಡುತ್ತಿದ್ದೆ. ಎಷ್ಟೋ ಸಂದರ್ಭದಲ್ಲಿ ಕೆಲವರು ನಮ್ಮ ನಿರೀಕ್ಷಣೆಗೆ ಮೀರಿ ಎಡತೊರೆಯ ತಾಯಿ ಕೊಟ್ಟಂತೆ ಕೊಡುವ ಸಹೃದಯರೂ ಇರುತ್ತಿದ್ದರು.

ಮೈಸೂರಿನಲ್ಲಿ ಶಿವಲಿಂಗಸ್ವಾಮಿಹಿರೇಮಠ ಅವರು ಒಂದು ಸಂಘ ಮಾಡಿಕೊಂಡಿದ್ದರು. ಅದರ ಹೆಸರು ಆಧ್ಯಾತ್ಮ ಕೇಂದ್ರವೆಂದೋ ಏನೋ ಒಂದು. ಅದು ಅಗ್ರಹಾರದಲ್ಲಿ ನನ್ನ ಕೊಠಡಿಯಿಂದ ಅತಿ ಸಮೀಪದಲ್ಲೇ ಇತ್ತು. ಆಗ ಮೈಸೂರು ಸುತ್ತಮುತ್ತ ಅವರು ಬೀದಿಬೀದಿಯಲ್ಲೆಲ್ಲ ಕಥೆ ಮಾಡುತ್ತ ವಿಜೃಂಭಿಸುತ್ತಿದ್ದರು. ಅವರಿಗೂ ನನಗೂ ಅಷ್ಟೊಂದು ಪರಿಚಯವೇನೂ ಇರಲಿಲ್ಲ. ಅವರು ಒಮ್ಮೆ ನನ್ನ ಹತ್ತಿರ ಬಂದು "ನೀವು ನಮ್ಮ ಸಂಘಕ್ಕೆ ಬಂದು 'ಕುಮಾರಸಂಭವ'ದ ಶಿವಕಥೆ ಮಾಡಬೇಕು" ಎಂದು ಕೇಳಿದರು. "ನಿಮ್ಮ ಸಂಘದಲ್ಲಿ ನನ್ನ ಹರಿಕಥೆ ಏಕಪ್ಪ! ನೀವೇ ಕಥೆಯಲ್ಲಿ ಗಟ್ಟಿಗರು. ಮೈಸೂರಿನಲ್ಲೆಲ್ಲ ವಿಜೃಂಭಿಸುತ್ತಿದ್ದೀರಿ. ಬೀದಿ ಬೀದಿಗಳಲ್ಲೆಲ್ಲ ನಿಮ್ಮ ಕಥೆ ಪ್ರತಿಧ್ವನಿಸುತ್ತಿರುತ್ತದೆ. ನಿಮ್ಮ ಮುಂದೆ ನಾನೇ?" ಎಂದೆ. ಆಗ ಅವರು ನಮ್ಮ ಕಥೆಯ ಥರಾ ಬೇರೆ. ನಮ್ಮದು ಜನರಂಜನೆಗೆ ಏನೇನೋ ಆಟಪಾಟ ಆಡುವಂಥದ್ದು. ಕತೆಗಿತೆ ಅಂತಾರಲ್ಲ ಹಾಗೆ ಕತೆಗಿಂತ ಗಿತೆಯದೇ ಹೆಚ್ಚುಪಾಲು. ನಿಮ್ಮದು ಹಾಗಲ್ಲ. ಮೂಲಕಾರ್ಯವನ್ನಾಧರಿಸಿದ್ದೂ 'ಅಥಾರ್ಟೀಟಿವ್' ಎಂದು ಇಂಗ್ಲೀಷಿನಲ್ಲಿ ನಿರ್ಣಯ ಹೇಳಿಬಿಟ್ಟ. ಆಗ ನಾನು ಮನಸ್ಸಿನಲ್ಲಿ ನನ್ನ ಕಥೆಗೆ ಓರ್ವ ಕಥೆಗಾರ ಮೆಚ್ಚಿಗೆ ಸೂಚಿಸುತ್ತ 'ಅಥಾರ್ಟೀಟಿವ್' ಅಂದುಬಿಟ್ಟನಲ್ಲಾ! ಸಾಮಾನ್ಯವಾಗಿ ಓರ್ವ ಕಥೆಗಾರರು ಇನ್ನೊಬ್ಬರ ಕಥೆಗೆ ಮೆಚ್ಚಿಗೆ ಸೂಚಿಸುವುದಕ್ಕಿಂತ ಛಿದ್ರಾನ್ವೇಷಣ ಮಾಡುವುದೇ ಹೆಚ್ಚು.

ಕಥೆಯಲ್ಲಿ ಹಾಗಿರಬೇಕಾಗಿತ್ತು; ಹೀಗಿರಬೇಕಾಗಿತ್ತು; ಪೀಠಿಕೆ ಸರಿಯಾಗಿರಲಿಲ್ಲ; ಸಂಗೀತದ ರೀತಿ ಸಾಲದು; ನಗಿಸುವ ಕಥೆಗಳಂತೂ ಒಂದೂ ಚೆನ್ನಾಗಿರಲಿಲ್ಲ....ಇತ್ಯಾದಿ ಇತ್ಯಾದಿ ಏನೇನೋ ಟೀಕೆ ಟಿಪ್ಪಣೆಗಳು. ಆದರೆ ಶಿವಲಿಂಗ ಸ್ವಾಮಿ ನನ್ನ ಕಥೆಯ ನಿರೂಪಣೆಗೆ ಮತ್ತು ಕಥೆಯಲ್ಲಿ ಮೂಲಕವಿಯ ಸಾಹಿತ್ಯವನ್ನು ಬಳಸುವಿಕೆ, ಮೂಲಕ್ಕೆ ಅರ್ಥವಿವರಣೆ ಮಾಡುವ ರೀತಿಗೆ ಬಹಳ ಮನಸೋತಿದ್ದ. ಅವರೇ ಹೇಳಿದಂತೆ ಅವರ ಕಥೆ ಜನರಂಜನೆ ಪ್ರಧಾನಾಂಶಗಳಿಂದ ಕೂಡಿದ್ದರೆ ನನ್ನ ಕಥೆ ಸಾಹಿತ್ಯ, ಸಂಸ್ಕೃತಿ, ತತ್ವಶಾಸ್ತ್ರಕ್ಕೆ ಹೆಚ್ಚಾಗಿ ಒತ್ತುಕೊಡುವಂತಹುದು. ನಾನು ಗಿರಿಜಾ ಕಲ್ಯಾಣ ಮಾಡಿದರಂತೂ ದೊಡ್ಡ ದೊಡ್ಡ ವಿದ್ವಾಂಸರೂ ತಲೆದೂಗುವಂತಿರುತ್ತಿತ್ತು. ಹರೀಶ್ವರನ ಗಿರಿಜಾಕಲ್ಯಾಣ - ಕಾಳಿದಾಸನ ಕುಮಾರಸಂಭವ, ಚನ್ನಬಸವ ಪುರಾಣದ ಗಿರಿಜಾಕಲ್ಯಾಣಸಂಧಿಗಳನ್ನು ಚೆನ್ನಾಗಿ ಓದಿಕೊಂಡಿದ್ದೆ. ಕುಮಾರಸಂಭವದ ಮೊದಲೆರಡು ಅಧ್ಯಾಯಗಳ ಎಲ್ಲ ಶ್ಲೋಕಗಳು ಬಹುಶಃ ನನಗೆ ಬಾಯಿಪಾಠ ಆಗಿದ್ದವು. ಗಿರಿಜಾಕಲ್ಯಾಣದ ನೂರಾರು ಪದ್ಯಗಳು ಕಂಠಸ್ಥವಾಗಿದ್ದವು. ಚನ್ನಬಸವ ಪುರಾಣದಲ್ಲೂ ಅಷ್ಟೆ. ಮೂವತ್ತು ನಾಲ್ವತ್ತೂ ಪದ್ಯಗಳಾದರೂ ಕಂಠಸ್ಥ. ಈ ಮೊದಲೇ ಅನೇಕ ಕಡೆ ಹಿಂದೆ ಹೇಳಿದಂತೆ ಪ್ರಾಥಮಿಕ ಶಾಲೆಯ ಓದು ನನ್ನನ್ನು ಸಾಹಿತ್ಯಾಕರ್ಷಣೆಗೆ ಪ್ರಬಲ ಶಕ್ತಿಯಾಗಿತ್ತು. ಆಗಿನ ಪದ್ಯಗಳೆಲ್ಲ ಬಾಯಿಪಾಠವಾಗಿದ್ದುದು ಪಂಡಿತ ಪರೀಕ್ಷೆಗೆ ಓದಲು ಬಂದಾಗಿನಿಂದಷ್ಟೇ ಅಲ್ಲ, ಹಿಂದೆ ಓದಿ ಬಾಯಿಪಾಠ ಮಾಡಿದುದರ ಪರಿಣಾಮ ಇಂದು ಬಹೂಪಯೋಗಿ. ಕುಮಾರಸಂಭವ ಮಾತ್ರ ಪಂಡಿತ ಪರೀಕ್ಷಾ ಕಾಲದಲ್ಲಿ ಬಾಯಿಪಾಠವಾದದ್ದು.

ಶಿವನ ಸಮಾಧಿಸ್ಥಿತಿ, ಮನ್ಮಥಾಗಮನ, ನಂದೀಶ್ವರನ ಜಾಗರೂಕತೆ, ಪಾರ್ವತಿಯ ಪೂಜಾಸೇವೆ, ಮನ್ಮಥನ ಪಂಚಬಾಣಾನುಸಂಧಾನ ಪ್ರಸಂಗ ಬಂದಾಗಲೆಲ್ಲ ಜನ ಚಪ್ಪಾಳೆಗಳ ಮೇಲೆ ಚಪ್ಪಾಳೆ ತಟ್ಟಿ ಮೈಮರೆಯುತ್ತಿದ್ದರು. ಹರೀಶ್ವರನ ಗಿರಿಜಾಕಲ್ಯಾಣ ನನ್ನ ಅಚ್ಚುಮೆಚ್ಚಿನ ಕಾವ್ಯ. ಹರೀಶ್ವರನ ಕಥೆಯ ರೀತಿ, ಶೈಲಿ, ಸಂವಿಧಾನಗಳನ್ನು ಕಾಳಿದಾಸನ ಕುಮಾರಸಂಭವ ಕಥಾ ಪ್ರಸಂಗಗಳೊಡನೆ ತುಲನಾತ್ಮಕ ವಿಮರ್ಶೆಯ ಕೆಲಸವೂ ಕಥೆಯಲ್ಲಿ ನಡೆಯುತ್ತಿತ್ತು. ಹರೀಶ್ವರ ಶಿವನ ಮೇಲೆ ಮನ್ಮಥ ಏಕಕಾಲದಲ್ಲಿ ಪಂಚಬಾಣಾನುಸಂಧಾನ ಮಾಡಿ ಹೊಡೆದ ಸಂದರ್ಭ ಬಂದಾಗ ನನ್ನ ಕಥೆಗೆ ಬಣ್ಣವೇರಿಬಿಡುತ್ತಿತ್ತು. ಸಾಹಿತ್ಯ ಸುರಿಮಳೆಯಂತೆ ಸುರಿಯುತ್ತಿತ್ತು. ಕೇಳುವವರು ಬಾಯಿಬಾಯಿ ಬಿಡುತ್ತ ಕುಳಿತುಬಿಡುತ್ತಿದ್ದರು.

*ತೆಗೆದಾಕರ್ಣಾಂಬರಂ ಶಂಬರರಿಪು ನೆರೆಹೂಡಿರ್ದ ಪುಷ್ಪಾಸ್ತ್ರಮೊಂದು /*
*ಜ್ಜುಗಮಾಕಾಶಸ್ಥ ನಾಕೌಕರೊಳೊದವಿದನೂನಾರ್ತಿ ಕೂರ್ತೆಯ್ದೆ ನಿಂದಿ /*
*ರ್ಪಗಜಾಚಿತ್ತಾಭಿಲಾಷಾವಿತತಿ ನೆರೆದು ಭೂತೇಶಚಿತ್ತಾಂತರದೊಳ್ ಪೊ /*
*ಕ್ಕು ಗಭೀರೋದ್ಯತ್‌ತಪೋಬೀಜಮನತಿ ಭರದಿಂದೊತ್ತಿ ಮುತ್ತಿತ್ತು ಸುತ್ತಲು*

ಈ ಪದ್ಯವನ್ನು ಗಂಭೀರವಾಗಿ ಹಾವಭಾವಪೂರ್ಣವಾಗಿ ಹೇಳುವಾಗ ನಾನೂ ಶಿವನ ಮೇಲೆ ಬಾಣ ಬಿಡುವಾಗಿನ ಮನ್ಮಥನೇ ಆಗಿಬಿಡುತ್ತಿದ್ದೆ. ಅಷ್ಟೊಂದು ತನ್ಮಯತೆಯ ಹುಚ್ಚು ನೆತ್ತಿಗೇರಿಬಿಡುತ್ತಿತ್ತು. ಮನ್ಮಥನ ಬಾಣದ ಪರಿಣಾಮ ಈಶ್ವರನ ಸಮಾಧಿ ಭಂಗಮಾಡಿ ಬಿಟ್ಟಿತು. ಆಗ ಹೇಳುವ ಹರೀಶ್ವರನ--

"ಇಂತು ಸಕಲ ಜಗದ್ಧಿತಾರ್ಥಮಪ್ಪ ಹರಿವಿರಿಂಚಿಗಳ ಮನದ ಬಯಕೆಯುಂ, ಪಂಚಬಾಣಾನುಸಂಧಾನಮುಂ, ಪಾರ್ವತಿಯ ಮನೋರಥಮುಂ ಮುಪ್ಪುರಿಗೊಂಡು ಶಿವನ ನಿಷ್ಕ್ರಿಯಾತ್ಮಕ ನಿರುಪಾಧಿಕ ನಿರಾವರಣ ಸ್ವಾನುಭಾವ ಸಂವೇದ್ಯ ಸ್ವಯಂಪ್ರಕಾಶಮಂ ಸುತ್ತಿ ಮುತ್ತಿ ಪತ್ತಿ ಜಿಗಿಲ್ತು ಬಿಡದಿರೆ ನಿರ್ವಿಕಾರಸ್ವರೂಪನಪ್ಪ ಪರಮಂಗೆ ಸ್ವಪ್ನೋಪಮಾಹಂ ಮಮತೆ ತಲೆದೋರೆ, ಜೀವನಾಗಿ, ಜೀವನಿಂ ಪ್ರಾಣಾನಿಲಂ ಪ್ರಾಣಾನಿಲನಿಂ, ಚಿತ್ತಂ ಚಿತ್ತದಿಂದಹಂಕಾರಂ, ಅಹಂಕಾರದಿಂ ಬುದ್ಧಿ, ಬುದ್ಧಿಯಿಂ ಮನಂ ಜನಿಯಿಸಿತ್ತು. ಅಂತರಂಗ ಬಹಿರಂಗ ಭಾವಮಂ ನೆನೆಯೆ ನೆನೆವಲ್ಲಿ ಮುನ್ನಂ ಮದನನ ಪಂಚಬಾಣಂ ಪರಿತಂದು, ನೆರೆದಡಸಿ ಬೆರಸಿ ಕವಿದು ಮನಮನಿರ್ಮ್ಯೆಗಂಡು ಸಹಸ್ರಮುಖದಿಂ ಸಂಚಳಮನೀಯೆ, ನಿಲಲ್ ಬಾರದೆ ತಪೋಭರದ ಬೆಸುಗೆ ಬಿಡುವಂತೆ ಮೆಯ್ಯಸಂಪುಟ ಬಿರ್ಚಲೊಡಂ ನೋಡಿನೋಡಿ, ನೋಡಲಣ್ಮದೆ, ಪುಷ್ಪಶರಮಂ ನೂರ್ಮಡಿಸುವಂತೆ, ಪುಷ್ಪಾಂಜಲಿಯಂ ಕೊಟ್ಟಂತೆ ಕಂಪಿಸಿ ಮುಂತೆ ಮೆಯ್ಯಿಕ್ಕಿರ್ದ ಗಿರಿಜಾತೆಯಂ ಭೂತೇಶ್ವರಂ ಕಂಡು ಆನೇಕೆ? ಈ ಮಾನಿನಿಯೇಕೆ? ಈ ತಪದೊಳಿದೆಲ್ಲಿಯದೆತ್ತಣಿಂ ಬಂದುದು? ಆರಿಂದಾದುದೆಂದು ಕಾಮನಿರ್ಪ ವಾಮಭಾಗಮಂ ನಿಟಿಲಾಕ್ಷಂ ನಸುಗೋಪದಿಂದ ನೋಡಿದಾಗಳ್-

*ನೋಡದ ಮುನ್ನಂ ಕೋಪಂ । ನಾಡೆಯುಮೊತ್ತರಿಸಿ ನೀಳ್ದ*
*ನಿಟಿಲೇಕ್ಷಣದೊಳ್ । ಕೂಡೆ ಬಳೆಬಳೆದು ಸುಳಿಸುಳಿ ।*
*ಡೀಡಿರಿದೊಳಗೊಳಗೆ ಘುಳುಘುಳಿಸಿ ಕುದಿದಾಗಳ್ ।*

ಹೀಗಿರುವ ಸೊಗಸಾದ ವರ್ಣನಾ ಭಾಗವನ್ನು ತಡಬಡಿಲ್ಲದೆ ಒಂದೇ ಉಸುರಿಗೆ ಹೇಳಿ ಜನಗಳನ್ನು ಬೆಪ್ಪಾಗಿಸಿ ಬಿಡುತ್ತಿದ್ದೆ. ಈಗ ನನ್ನ ವೀರರಸವೂ ಉಕ್ಕೇರಿಬಿಡುತ್ತಿತ್ತು. ಹಾರಾಡಿ, ಕುಣಿದಾಡಿ ಬಾಣ ಬಿಟ್ಟ ವರ್ಣನೆಯನ್ನು ಅಭಿನಯಿಸುತ್ತಿದ್ದೆ. ಜನಕ್ಕೆ ಈ ಗದ್ಯಪದ್ಯ ಭಾಗದ ಅರ್ಥ ಎಷ್ಟಾಗುತ್ತಿತ್ತೋ ದೇವರೇ ಬಲ್ಲ. ಉಸುರು ಬಿಡದಂತೆ ಹೇಳುತ್ತಿದ್ದ ನನ್ನ ಬಾಯನ್ನೇ ತಾವೂ ಬಾಯಿ ತೆರೆದು, ಮೈಮರೆತು ನೋಡಿದ್ದೇ ನೋಡಿದ್ದು. ಮುಂದೆ ಬರುವ-

*ಪೊಗೆದುದು, ಪತ್ತಿದತ್ತು, ಕಿಡಿಯಿಟ್ಟುದು, ನಾಲ್ದೆಸೆದೋರಿದತ್ತು ಬಾನ್‌ಗೊಗೆದುದು,*
*ನಿಂದು ಪೊಂಬೆಳಗುಮಂ ಪರಪುತ್ತದು ಧಂಧಗಿಲ್ ಧಗಿಲ್,*
*ಧಗಿಲೆನುತಟ್ಟೆ ತಟ್ಟಿದುದು ಮುಟ್ಟಿತು ತಿಂದು ತೇಗಿದತ್ತು*
*ಆಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ ॥*

ಈ ಪದ್ಯ ಹೇಳಿ ಚಪ್ಪಾಳೆ ಗಿಟ್ಟಿಸಿಕೊಂಡು ನಾನೇ ಭಲೇ! ಎಂದುಬಿಡುತ್ತಿದ್ದೆ. ಬಹು ಸೊಗಸಾಗಿ ಕವಿ ಇಲ್ಲಿ ರಸಪ್ರತಿಪಾದನೆ ಮಾಡಿದ್ದಾನೆ ಎಂದು ವಿವರಿಸುತ್ತ ಮೇಷ್ಟ್ರ ಕೆಲಸವನ್ನು ಸ್ವಲ್ಪ ಮಾಡುತ್ತಿದ್ದೆ. ಐದಾರು ಪದ್ಯಗಳಲ್ಲಿ ಹರೀಶ್ವರ ಈಶ್ವರ ನೇತ್ರಾಗ್ನಿಯ ಪ್ರತಾಪವನ್ನು ಅದ್ಭುತ ರಮ್ಯವೆನ್ನುವಂತೆ ಮಾಡಿದ್ದಾನೆಂದು ಅವುಗಳನ್ನೆಲ್ಲ ಪಟಪಟ ಹೇಳಿ ಜನಗಳನ್ನು ಬೆಪ್ಪಾಗಿಸಿ ಬಿಡುತ್ತಿದ್ದೆ. ನನ್ನ ಈ ವರ್ಣನೆಗೆ ಜನ ನನ್ನ ಬಾಯನ್ನೇ ನೋಡುತ್ತ ಕುಳಿತಿರುವಂತೆ ಮಾಡುತ್ತಿದ್ದ. ಕಥೆ ಮಾಡುವವರಲ್ಲಿ ಇದೊಂದು ಗತ್ತುಗಾರಿಕೆ. ಇವನು ಅದೆಷ್ಟು ಓದಿಕೊಂಡಿದ್ದಾನಪ್ಪೋ! ಅನಿಸಿಬಿಡಬೇಕು ಜನಕ್ಕೆ ಎಂಬುದೇ ಇವನ ಇಚ್ಛೆ. ಅದರ ಅರ್ಥ ಅವರಿಗೂ ಆಗೋದಿಲ್ಲ, ಇವನಿಗೂ ಒಮ್ಮೊಮ್ಮೆ ಗೊತ್ತಿಲ್ಲದಿರುವುದೂ ಉಂಟು.

ಹರಿಹರನ ಈ ಅದ್ಭುತ ರಮ್ಯವರ್ಣನೆಯನ್ನು ಗಮನಿಸಿ. ಹಂಪೆಯ ಇನ್ನೊಬ್ಬ ದೊಡ್ಡಕವಿ ವಿರೂಪಾಕ್ಷ ಪಂಡಿತ ತನ್ನ ಚನ್ನಬಸವ ಪುರಾಣದಲ್ಲಿ ಗಂಗಾಧರ ಲೀಲೆಯಲ್ಲಿ ಒಂದು ವಾರ್ಧಕ ಷಟ್ಪದಿಯಲ್ಲಿ ಶಿವನ ನೇತ್ರಾಗ್ನಿಯು ಹರಿದುಹೋದ ರೀತಿ ಸೊಗಸಾದ ಚಿತ್ರವನ್ನು ಕೊಡುತ್ತದೆ.

"ನಿಟಿಲಾಕ್ಷಮರೆದೆರೆಯೆ ತುಂಬಿದುದು ಬ್ರಹ್ಮಾಂಡ । ಘಟದೊಳಗೆ ಬೆಳಗು
ಬೆಳಗಿಂದುಷ್ಣಮುಷ್ಣದಿಂ । ಪುಟನೆಗೆದು ಬಳೆವ ಪೊಗೆ ಹೊಗೆಯೊಳುರಿ
ಉರಿಯೊಳಿರದೇಳ್ವ ಕಿಡಿ ಕಿಡಿಗಳೊಳಗೆ । ಲಟಕಟಿತ ಶಿಖಿಯ ನಾಲಗೆ ಪೆಚ್ಚೆ
ಭುಗಿಭುಗಿಲ್ । ಚಿಟಿಚಿಟಿಲ್ ಛಿಳಿಛಿಳಿಲ್ ಸಿಮಿಸಿಮೆಂದು ಛಟ ।
ಛಟಧಗಂ ಧಗಧಗೆಂದೆಂಬ ನಾನಾ ಘೋಷಮುಣ್ಮಿದುದನೇನೆಂಬೆನು."

ಈ ಪದ್ಯವನ್ನು ಹೇಳಿ ಶಿವನ ನೇತ್ರಾಗ್ನಿಯು ಭಯಂಕರ ಸ್ವರೂಪ ವರ್ಣನೆಗೆ ಇದನ್ನು ಜೋಡಿಸಿ ಈ ಬೆಂಕಿ ಮನ್ಮಥನನ್ನು ಒಮ್ಮೆಲೆ ಸುಟ್ಟು ಬೂದಿಯನ್ನಾಗಿ ಮಾಡಿತೆಂದು ಹೇಳಿಬಿಡುತ್ತಿದ್ದೆ. ಇದು ಜನರ ಮನಸ್ಸಿಗೆ ಬಹಳ ಹಿಡಿಸಿಬಿಡುತ್ತಿತ್ತು. ಕಾಳಿದಾಸನು ಕುಮಾರಸಂಭವದಲ್ಲಿ ನೇತ್ರಾಗ್ನಿಯ ಪ್ರಕಾಶವನ್ನು ಇಷ್ಟೊಂದು ಭವ್ಯಗೊಳಿಸಿಲ್ಲ. ಅಲ್ಲಿ ಅವನು

ತಪಃ ಪರಾಮರ್ಶವಿವೃದ್ಧ ಮನ್ಯೋರ್ಭ್ರೂಭಂಗದುಷ್ಪ್ರೇಕ್ಷ್ಯ ಮುಖಸ್ಯ ತಸ್ಯ ॥
ಸ್ಫುರನ್ನುದರ್ಚಿಃ ಸಹಸಾತೃತೀಯಾದಕ್ಷ್ಣಃ ಕೃಶಾನುಃ ಕಿಲನಿಷ್ಪಪಾಕ ॥

ಈ ಒಂದೇ ಪದ್ಯದಲ್ಲಿ ಏನೇನು ಹೇಳಬೇಕೋ ಅದನ್ನೆಲ್ಲ ಹೇಳಿಬಿಟ್ಟಿದ್ದಾನೆ. ಹೀಗೆಂದು ನನ್ನ ಅತ್ಯಂತ ನಚ್ಚಿನ ಕವಿಯಾದ ಹರೀಶ್ವರನ ಪ್ರತಾಪವನ್ನೂ ಹೆಚ್ಚು ಮಾಡಿ ಹೇಳುವ ಸಾಹಸವನ್ನೂ ಮಾಡುತ್ತಿದ್ದೆ. ನನ್ನ ವಿಶೇಷ ಅಭ್ಯಾಸದ ಇನ್ನೊಬ್ಬ ಕವಿ ಷಡಕ್ಷರದೇವ. ಇವನ ಕಾವ್ಯಭಾಗವನ್ನು ಹೇಳುವಾಗ ನನ್ನ ಉತ್ಸಾಹಕ್ಕೆ ಗರಿ ಮೂಡುತ್ತಿದ್ದವು. ವೀರ-ಅದ್ಭುತ ರಸಪ್ರತಿಪಾದನೆಗೆ ಒಳ್ಳೆಯ ಅವಕಾಶವಿರುವ ಈ ಕಥೆ ಕಾಳಿದಾಸನ ಲೆಕ್ಕಣಿಕೆಯಿಂದ ಇನ್ನೊಂದೆರಡು ಪದ್ಯ ಬಂದಿದ್ದರೆ ಚನ್ನಾಗಿರುತ್ತಿತ್ತೇನೋ ಎನ್ನಿಸುತ್ತದೆ ಎಂದು ಸ್ವಲ್ಪ ವಿಮರ್ಶಕನ ಕೆಲಸವನ್ನೂ ಕಥೆಯಲ್ಲಿ ಹೇಳುತ್ತ ಮುಂದೆ ಹೋಗಿಬಿಡುತ್ತಿದ್ದೆ. ಹೀಗೆ ಮೈಸೂರು, ಮೈಸೂರು ಸುತ್ತಮುತ್ತ ನಾನೋರ್ವ ಕೀರ್ತನಕಾರನಾಗಿ ಜನರ ಕಣ್ಣಿಗೆ ಬಿದ್ದು ಅಷ್ಟು ಇಷ್ಟು ಪುಡಿಗಾಸು ಗಿಟ್ಟಿಸಿಕೊಳ್ಳುತ್ತಿದ್ದೆ. ನನ್ನ ಓದುವ ಪ್ರಧಾನ ಕೆಲಸಕ್ಕೇ ನನ್ನ ಬಹುಪಾಲು ಮೀಸಲಾಗಿತ್ತಲ್ಲದೆ, ಈ ಹರಿಕಥೆ ದಾಸ ಕೆಲಸವನ್ನೇನಿದ್ದರೂ ಒಂದು ಹವ್ಯಾಸವಾಗಿ ಆಗಾಗ ತಮಾಷೆಗೆ ಮಾಡುತ್ತಿದ್ದೆ ಎಂದು ಇಟ್ಟುಕೊಳ್ಳಬಹುದು. ಬೀದಿಗಿಳಿದು ಕಥೆ ಮಾಡುವ ಹವ್ಯಾಸವನ್ನು ಮುಂದೆಯೂ ಮಾಡಲಿಲ್ಲ. ಆ ಕೆಲಸಕ್ಕೆ ಇನ್ನೂ ಬೇರೆಬೇರೆ ಶಕ್ತಿಗಳು ಬೇಕು. ಅಲ್ಲಿಯ ಕೇಳುವ ಜನದ ರೀತಿನೀತಿಗಳೇ ಬೇರೆ. ಅಲ್ಲಿ ಬುರುಡೆ ಬಿಡುವುದಕ್ಕೆ ಎಲ್ಲ ವರ್ಗದವವನ್ನು ನಗಿಸುವುದಕ್ಕೆ ಇನ್ನೂ ಏನೇನೋ ಬೇಕು ಅನ್ನಿ. ಅದು ನನ್ನಿಂದ ಅಸಾಧ್ಯ. ನನ್ನದು ಸಾಹಿತ್ಯ ಪ್ರಧಾನ ಕಥೆ.

### ಮೈಸೂರು ಮಹಾಲಿಂಗಪ್ಪನ ಪರಿಚಯ

ಹೀಗೆ ನಾನು ಅಲ್ಲಿ ಇಲ್ಲಿ ಕಥೆ ಮಾಡುವುದನ್ನು ನೋಡಿದ್ದ ಮತ್ತು ದೂರ ನಿಂತು ಕೇಳಿದ್ದ ಕೋಳುಗುಂದದ ಬಸವರಾಜ ಎಂಬುವ ವ್ಯಕ್ತಿ ಒಮ್ಮೆ ನನ್ನನ್ನು ಗೋಡೆಕೆರೆಗೆ ಕಥೆಗೆ

ಕರೆದೊಯ್ದುಬಿಟ್ಟ. ನನಗೆ ಮೈಸೂರಿನಿಂದ ಅಷ್ಟುದೂರ ಹೋಗಲು ಇಚ್ಛೆಯಿರಲಿಲ್ಲವಾದರೂ ಆತನ ಒತ್ತಾಯಕ್ಕೆ ಮಣಿದು ಹೋಗಲೇಬೇಕಾಯಿತು, ಹೊರಟೆ. ಬಸವವಾಜ ಅರಸೀಕೆರೆಯಲ್ಲಿ ಇದ್ದ. ಹೊಲ-ತೋಟ ಎಲ್ಲಾ ಕೋಳಗುಂದದಲ್ಲಿ. ವಿಚಿತ್ರಪುರುಷ. ಅವನಿಗೆ ರೈಲ್ವೆ ಡಿಪಾರ್ಟ್‌ಮೆಂಟಿನ ಗಾರ್ಡ್, ಸ್ಟೇಷನ್ ಮಾಸ್ತರ್, ಟಿಕೇಟ್ ಕಲೆಕ್ಟರ್ ಎಲ್ಲಾ ಗೊತ್ತು. ದುಡ್ಡಿಲ್ಲ ಕಾಸಿಲ್ಲ ನನ್ನನ್ನು ಕರೆದುಕೊಂಡು ಫಸ್ಟ್‌ಕ್ಲಾಸ್ ಡಬ್ಬಿ ಏರಿಬಿಟ್ಟ. ಅಲ್ಲಿ ಮೆತ್ತೆಯ ಸೀಟು ಮೇಲೆ ಕಾಲುಚಾಚಿ ಮಲಗಿ ಫ್ಯಾನ್ ಹಾಕಿಕೊಂಡು ನಗುತ್ತ ನನಗೂ "ಆರಾಮಾಗಿ ಅರಸೀಕೆರೆವರೆಗೆ ಮಲಗಿಬಿಡಿ. ಇವತ್ತು ಅರಸೀಕೆರೆಗೆ ಹೋಗಿ, ನಾಳೆ ಗೋಡೆಕೆರೆಗೆ ಹೋಗೋಣ" ಎನ್ನುತ್ತ ದುಡ್ಡುಕೊಟ್ಟು ಗಾಡಿ ಏರಿ ಸುಖ ಅನುಭವಿಸುವವರಿಗಿಂತ ಅಧಿಕಸುಖ ಅನುಭವಿಸುತ್ತ ಟಿಕೇಟ್ ಚಕ್ ಮಾಡುವವರು ಬಂದರೆ ಅವರೊಡನೆ ಹರಟೆ, ಅವರಿಗೆ ಸಿಗರೇಟು ಕೊಟ್ಟು ಸೇದಿಸುವುದು - ಇವನ್ನೆಲ್ಲ ಮಾಡುತ್ತಿದ್ದ. ನನ್ನೆದುರಿಗೆ "ನಾನು ಬುದ್ಧಿ ಬಂದಾಗಿನಿಂದ ರೈಲ್ವೆಯಲ್ಲಿ ದುಡ್ಡನ್ನೆಂದೂ ಕೊಟ್ಟಿಲ್ಲ. ನನಗೆ ಇವರೆಲ್ಲ ಗೊತ್ತು. ನಾನೊಂದು ನಮೂನೆ ಮನುಷ್ಯ. ಹೀಗೇ ನಾನು ಟ್ರಾವೆಲ್ ಮಾಡೋದು" ಎಂದು ಜಂಭಕೊಚ್ಚಿಕೊಂಡುಬಿಟ್ಟ. ನಾನು ಮನಸ್ಸಿನಲ್ಲಿ ಇವನೊಬ್ಬ ತರಲೆ ಮನುಷ್ಯ ಅಂದುಕೊಂಡೆ. ನನಗೆ ಭಯ. ಯಾರಾದರೂ ಬಂದು 'ಟಿಕೇಟ್ ಎಲ್ಲಿ?' ಎಂದು ಕೇಳಿದರೆ ಇವರ ಕಡೆ ಬೆರಳು ಮಾಡಿ ತೋರಿಸುವ ಮೊದಲೇ ಎದೆ ಬಡಿದುಕೊಳ್ಳುತ್ತಿದೆಯಲ್ಲಾ! ಅದಕ್ಕೇನು ಮಾಡುವುದು. ಕಳ್ಳನ ಜೀವ ಹುಳ್ಳುಳ್ಳಗೆ ಅಲ್ಲವೆ! ನಾನು ಇಂಥ ಮನುಷ್ಯನ ಬೆನ್ನು ಹತ್ತಿ ಬಂದೆನಲ್ಲಾ! ಬಂದು ಆಗಿದೆ. ಈಗ ಯೋಚಿಸಿ ಫಲವಿಲ್ಲವೆಂದುಕೊಂಡು ಭಯವಿಹ್ವಲ ನೇತ್ರವುಳ್ಳವನಾಗಿ ಎದೆಯ ದಗದಗಾಟ ಉಪಶಮನಗೊಳಿಸಿಕೊಳ್ಳುತ್ತ ಕುಳಿತೆ. ನನ್ನ ಎದೆಯ ಧಗಧಗಾಟಕ್ಕೆ ಟಿಕೇಟು ನನ್ನ ಹತ್ತಿರ ಇಲ್ಲದ್ದು, ಅದೂ ಅಲ್ಲದೆ ಮೊದಲ ದರ್ಜೆಯಲ್ಲಿ ತುಂಬಾ ಹಣ ತೆತ್ತು ಪ್ರಯಾಣ ಮಾಡುವವರಿಗಾಗಿ ಇರುವ ಕ್ಯಾರೇಜಿನಲ್ಲಿ. ನಾನು ಮೊದಲ ದರ್ಜೆಯ ಈ ಡಬ್ಬಿ ಹತ್ತಿದ್ದು ಇದೇ ಮೊದಲು. ಆಹಾ! ಈ ಡಬ್ಬಿಯ ಸೊಗಸೋ! ಮಲಗಲು ಮೆತ್ತೆ, ಕಸ ಹೊಡೆದು ಶುಭ್ರಗೊಳಿಸಿದ ಒಳಮೈ. ಶುದ್ಧವಾದ ಕಕ್ಕಸು, ಎಷ್ಟು ಬೇಕಷ್ಟು ಸುರಿಯುವ ನೀರು, ಸೆಕೆಯಾದರೆ ತಿರುಗಲು ಫ್ಯಾನ್, ಸಾಮಾನು ಗೀಮಾನು ಇಟ್ಟುಕೊಳ್ಳಲು ವ್ಯವಸ್ಥಾಬದ್ಧವಾದ ಕಾಟ್, ಕನ್ನಡಿ, ಜನಜಂಗುಳಿಯ, ಸದ್ದುಗದ್ದಲ, ಕಿರಿಚಾಟ, ಕೂಗಾಟವಿಲ್ಲದ ಪ್ರಶಾಂತ ಸುಖಾವಾಸ. ಇಂಥ ಡಬ್ಬಿಯಲ್ಲಿ ದುಡ್ಡಿಲ್ಲದ ಪ್ರವಾಸ, ಇದೆಂಥ ನ್ಯಾಯ? ಎಂದು ಮನಸ್ಸಿಗೆ ತಟ್ಟುತ್ತಿತ್ತು. ಟಿಕೆಟಿಲ್ಲದೆ ಪ್ರಯಾಣ ಮಾಡುವವರನ್ನು ರೈಲ್ವೆಯವರು ಹಿಡಿದು ಮಾನ ಕಳೆದು ಮೂರು ಕಾಸು ಮಾಡುತ್ತಿದ್ದುದನ್ನು ನಾನು ಆಗಾಗ ಕಾಣುತ್ತಿದ್ದೆ. ಈಗ ನನಗೇ ಟಿಕೇಟ್ ಇಲ್ಲದಿರುವಾಗ ಈ ಹಿಂಸೆಯನ್ನು ನಾನೇ ಹೊಂದುವ ಪರಿಸ್ಥಿತಿ ಬಂದವನಂತೆ ಮಾನಸಿಕವಾಗಿ ಕಿರಿಕಿರಿಗೊಳಗಾಗುತ್ತಿದ್ದೆ. ಇವರ ಹಿಂಸೆಯ ಸುಖವನ್ನು ಒಮ್ಮೆ ನಾನು ಬಾಲ್ಯದಲ್ಲಿ ಅನುಭವಿಸಿದ್ದೆ.

ಹಾವೇರಿಯಲ್ಲಿ ನಾನು ಏಳನೇ ತರಗತಿಯಲ್ಲಿ ಓದುವ ಕಾಲ. ನಾನು ಪ್ರಥಮದಲ್ಲಿ ರೈಲು, ರೈಲುಹಳಿಯನ್ನೂ ಕಾಣದವನು. ಕುತೂಹಲ ಬಹಳ. ರೈಲಿಗೆ ಯಾರೋ ಬರುವವರಿದ್ದಾರೆ. ಅವರನ್ನು ಕರೆತರಲೆಂದು ರೈಲುನಿಲ್ದಾಣಕ್ಕೆ ನಾನಿದ್ದ ಹುಕ್ಕೇರಿಯ ಮಠದ ಪದಾಧಿಕಾರಿಗಳು ಕಳಿಸಿದ್ದರು. ನನಗೆ ಪ್ಲಾಟ್‌ಫಾರ್ಮ್ ವಗೈರೆ ಏನೂ ಗೊತ್ತಿರಲಿಲ್ಲ. ಇನ್ನೊಬ್ಬ

ಹುಡುಗನೊಡನೆ ಜೊತೆಯಾಗಿ ಹೋಗಿದ್ದೆ. ಗಾಡಿ ಬರುವುದನ್ನೇ ನೋಡುತ್ತ ಸ್ಟೇಷನ್ ಒಳಕಟ್ಟೆಯ ಮೇಲೆ ಫ್ಲಾಟ್‌ಫಾರಂನಲ್ಲಿ ತಿರುಗಾಡುತ್ತಾ ಬೆರಗುಗಣ್ಣಿನಿಂದ ಆ ಹೊಸಪ್ರಪಂಚ ನೋಡುತ್ತಿದ್ದೆ. ರೈಲು ಬಂತು. ಬರಬೇಕಾದವರು ಬರಲಿಲ್ಲ. ಜನರ ಮಧ್ಯದಲ್ಲಿ ನುಗ್ಗಿ ಹೊರಗೆ ಹೋಗಲು ಗೇಟಿನ ಹತ್ತಿರ ನಾವಿಬ್ಬರೂ ಬಂದೆವು. ಹೊರಗೆ ಹೋಗುವ ಹೊತ್ತಿಗೆ ಬಾಗಿಲಲ್ಲಿದ್ದವನು 'ಟಿಕೇಟ್' ಎಂದ. "ಇಲ್ಲೀ ಯಾರೋ ಬರೋರಿದ್ರು, ಅವರ್ನ ಕರ್ಕೊಂಡ್ಹೋಗಾಕ ಬಂದಿದ್ವಿ" ಎಂದೆವು. ಅವನು ಇಬ್ಬರ ರಟ್ಟೆ ಹಿಡಿದು ಅಲ್ಲಿದ್ದ ಪೋಲೀಸರ ಕೈಗೆ ಒಪ್ಪಿಸಿ ತನ್ನ ಕೆಲಸ ತಾನು ಮಾಡುತ್ತ ನಿಂತ. ಹೊರಗೆ ಹೋಗುವವರು ಮುಗಿದ ಮೇಲೆ ನಮ್ಮ ಹತ್ತಿರ ಬಂದು ಇಬ್ಬರನ್ನೂ ರಟ್ಟೆ ಹಿಡಿದು ದರದರ ಎಳೆದುಕೊಂಡು ಆಫೀಸ್ ಕಡೆ ಹೊರಟ. ನಾವು ಹೆದರಿ ತುಟಿಯ ನೀರನ್ನೆಲ್ಲ ಬತ್ತಿಸಿಕೊಂಡು 'ಇಲ್ರಿ..ಇಲ್ರೀ..ಇನ್ನ ಬರದಿಲ್ರಿ' ಎಂದು ಹಲ್ಲು ಕಿರಿಯುತ್ತ ಅವನು ಎಳೆದತ್ತ ಹೋಗುತ್ತಿದ್ದೆವು. ಅವನು ಆಫೀಸಿಗೆ ಹೋಗಿ 'ಯಾವೂರಿಂದ ಬಂದ್ರಿ ಹೇಳ್ತೀರೋ ಬೇಕೋ' ಎಂದ. ನಾವು ನಡುಗುತ್ತ ಏನೆಲ್ಲ ಹೇಳಿ ಅಳುತ್ತ ನಿಂತೆವು. ಆತ ನಮಗೆ ಅಂಡುಗಳ ಮೇಲೆ ಎರಡು ಬಿಗಿದ, "ಒಳಗೆ ಬರುವಾಗ ಪ್ಲಾಟ್‌ಫಾರ್ಮ್ ಟಿಕೇಟ್ ಇಲ್ಲದೆ ಹೇಗೆ ಬಂದಿರಿ?" ಎಂದ. 'ಪ್ಲಾಟ್' ಎಂದರೇನೋ 'ಫಾರ್ಮ್' ಎಂದರೇನೋ. ಆ ಮಾತಿನ ತಳಬುಡ ಒಂದೂ ಅರ್ಥವಾಗಲಿಲ್ಲ. ನಮ್ಮ ಅಳು ಹೆಚ್ಚಾಯಿತು. ಆಗ ಅವನು "ನೀವು ನಿಮ್ಮ ಕಪಾಳಕ್ಕೆ ಮೂರು ಮೂರು ಸಲ ಮೂಗು ಹಿಡಿದು ಹೊಡೆದುಕೊಳ್ಳಿ" ಎಂದು ಹೊಡೆದುಕೊಳ್ಳುವ ವಿಧಾನ ಹೇಳಿದ. ನಾವು ಹಾಗೆ ಹೊಡೆದುಕೊಂಡೆವು. "ಹೋಗಿ ಇನ್ಮೇಲೆ ಹೀಗೆ ಸ್ಟೇಷನ್ ಒಳಕ್ಕೆ ಬಂದರೆ ನಿಮ್ಮ ಚಮಡಾ ಸುಲಿಸಿಬಿಡ್ತೇನೆ ಹುಷಾರ್!" ಎಂದು ಮತ್ತೊಮ್ಮೆ ಬೆನ್ನ ಮೇಲೆ ಚಪ್ಪರಿಸಿ ನೂಕಿಬಿಟ್ಟ. ನಾವು ಹಿಂದಕ್ಕೆ ನೋಡುವುದು ಮುಂದಕ್ಕೆ ನಡೆಯುವುದು ಮಾಡಿಕೊಂಡು ಮಠಕ್ಕೆ ಬಂದುಬಿಟ್ಟೆವು. ಅಂದಿನ ಭಯದ ಕಾರಣವಾಗಿ ಈ ರೈಲ್ವೆಯವರ ಸಹವಾಸ ಕಷ್ಟ ಎಂಬ ಭಯ ಈಗಲೂ ದಿಗ್ಗನೇಳುತ್ತಿತ್ತು. ಈ ಭಯದಲ್ಲಿಯೇ ಅರಸೀಕೆರೆ ತಲುಪಿದೆ. ಅಂಥ ಯಾವ ಅಪಾಯವೂ ಕಾಡಲಿಲ್ಲ ಎಂಬುದೊಂದೇ ಸಮಾಧಾನ.

ಅರಸೀಕೆರೆ ಬರುತ್ತಲೇ ಬಸವರಾಜಪ್ಪ ಎದ್ದು ಅಲ್ಲಿಯೇ ಶುದ್ಧವಾಗಿದ್ದ ಕಕ್ಕಸು ಮನೆಯನ್ನು ಅಶುದ್ಧಗೊಳಿಸಿ ಮುಖ-ಕೈಕಾಲುಗಳನ್ನೆಲ್ಲ ಪುಕ್ಕಟೆ ನೀರಿನಲ್ಲಿಯೇ ತೊಳೆದು, ಶುಭ್ರಗೊಳಿಸಿಕೊಂಡು ಡ್ರೆಸ್ ಮಾಡಿಕೊಂಡ. ನಾನು ಇವನ ಈ ವೈಖರಿಗಳನ್ನೆಲ್ಲ ನೋಡಿ, ಪಕಿಪಿಕಿಯಾಗಿ ರೈಲು ನಿಂತ ಮೇಲೆ ಇಳಿದು ಅವನ ಬೆನ್ನ ಹಿಂದೆ ಹೊರಟೆ. ಆತ ತನ್ನ ಕೈಚೀಲವನ್ನೂ ನನ್ನ ಕೈಗೆ ಕೊಟ್ಟ. ಅದರ ತುಂಬಾ ಮೈಸೂರಿನಲ್ಲಿ ಕೊಂಡ ಸಾಮಾನು ತುಂಬಿದ್ದವು. ನಾನು ಒಲ್ಲೆ ಅನ್ನುವಂತೆಯೇ ಇರಲಿಲ್ಲ. ಮನಸ್ಸಿನಲ್ಲಿ "ಈತ ನನ್ನನ್ನು ಓರ್ವ ಕೂಲಿಯಂತೆಯೂ ನಡೆಸಿಕೊಳ್ಳಲಿಕ್ಕೆ ಪ್ರಾರಂಭಿಸಿದನಲ್ಲಾ!" ಎಂದುಕೊಂಡು ಒಳಗೊಳಗೇ ಶಪಿಸುತ್ತ, ಮುಂದೆ ಇವನು ನನ್ನನ್ನು ಹೇಗೆ ನಡೆಸಿಕೊಳ್ಳುವನೋ ಏನೋ ಎಂದು ಶಂಕೆಗೊಳಗಾಗುತ್ತ ನಡೆದೆ. ದಾರಿಯಲ್ಲಿ ಸಿಕ್ಕ ಒಬ್ಬಿಬ್ಬರಿಗೆ "ಇವರು ಶಾಸ್ತ್ರಿಗಳು. ಶಿವಕಥೆ ಚೆನ್ನಾಗಿ ಮಾಡ್ತಾರೆ. ಗೋಡೆಕೆರೆ ಮಠದಲ್ಲಿ ಕಥೆ ಮಾಡಿಸೋಕೆ ಕರಕೊಂಡು ಬಂದೆ" ಎಂದು ಪರಿಚಯ ಮಾಡಿ ನನ್ನನ್ನು ಶಾಸ್ತ್ರಿಯ ಪಟ್ಟಕ್ಕೇರಿಸಿಬಿಟ್ಟದ್ದೂ ಉಂಟು. ಶಿವಕಥೆ ಮಾಡುವವರೆಲ್ಲ ಶಾಸ್ತ್ರಿಗಳೇ. ಅವರಿಗೆ ಶಾಸ್ತ್ರ ಗೊತ್ತಿರಲಿ ಇಲ್ಲದಿರಲಿ, ಹರುಕು ಮುರುಕು

ಕಥೆ ಮಾಡುವ, ಶಾಸ್ತ್ರದ ಗಂಧವೇ ಇಲ್ಲದ ಒಡಕು ಬಾಯಿಯ ಕಥೆಗಾರರೂ ಶಾಸ್ತ್ರಿಗಳು ಎಂಬ ಹಣೆಪಟ್ಟಿಯನ್ನು ತಾವೇ ಹಚ್ಚಿಕೊಂಡು ನಿಮ್ಮ ಹೆಸರೇನು? ಕೇಳಿದರೆ ಹೆಸರಿನ ಮುಂದೆ ಶಾಸ್ತ್ರಿಗಳು ಎಂದು ಜೋಡಿಸಿ ಹೇಳುವುದುಂಟು.

ಅರಸೀಕೆರೆಯಲ್ಲಿ ಒಂದು ದಿನ ಉಳಿದು ಗೋಡೆಕೆರೆಗೆ ಹೋಗಿ ಅಲ್ಲಿನ ಮಠದಲ್ಲಿ ಒಂದು ಕಥೆ ಮಾಡಿದೆ. ಕಥೆಯೇನೋ ಭವ್ಯವಾಗಿಯೇ ನಡೆಯಿತು. ಕಥೆಯೆಲ್ಲ ಮುಗಿದ ಮೇಲೆ ಓರ್ವ ವಯಸ್ಕ ವಾಚಾಳಿವ್ಯಕ್ತಿ ಹತ್ತಿರ ಬಂದರು. ದೊಡ್ಡ ಕಂಬಿಪೇಟಾ, ಕ್ಲೋಸ ಕಾಲರ್ ಬಿಳಿಯ ಕೋಟು. ಶುಧ್ಧಪಂಚೆ, ರೇಷ್ಮೆಸೆಲ್ಲೆ ಹೊದ್ದು ಅತಿ ಠೀವಿಯಿಂದ ಕೂಡಿದ್ದರು. ಅವರ ನಗುವಿನಲ್ಲಿ, ಮಾತಿನಲ್ಲಿ ಇವರು ಮರವನ್ನು ಕೂಡ ಮಾತನಾಡಿಸುವ ವ್ಯಕ್ತಿ ಎಂಬುದು ಎದ್ದು ಕಾಣುತ್ತಿತ್ತು. ಒಂದು ಮಾತಿನಲ್ಲಿ ಮುಗಿಯುವುದನ್ನು ನಾಲ್ಕೈದು ಮಾತು ಜೋಡಿಸಿ ಹೇಳಿದ್ದೇ ಹೇಳಿದ್ದು. ಇಂಥವರು ನಗುತ್ತ ನಗುತ್ತ ಬಂದು ಕೈಹಿಡಿದು "ಭಾಳಾ ಸಂತೋಷ, ಭಾಳಾ ಸಂತೋಷ. ನೀವೇ ತಾನೇ ಮೈಸೂರಲ್ಲಿರೋರು. ಚೆನ್ನಮಲ್ಲಪ್ಪನವರು ಹೇಳ್ತಾ ಇದ್ರು. ಕಥೆ ಚೆನ್ನಾಗಿ ಮಾಡ್ತಾರೇ ಅಂತಾ. ಅಬ್ಬಾ! ಚೆನ್ನಾಗಿತ್ತು. ನಾನು ತಿಪಟೂರಿನವನು. ನನ್ನ ಹೆಸರು ಮೈಸೂರು ಮಾಲಿಂಗಪ್ಪ ಅಂತಾ. ಮೈಸೂರಿನಲ್ಲಿ ನಮ್ಮ ದೊಡ್ಡ ಮನೆ ಇದೆ. ತುಮ್ಮನೇರಿಳೀ ಸಾಹುಕಾರರ ಹಾಸ್ಪಲ್ ಇದೆಯಲ್ಲ! ಅದರ ಪಕ್ಕದ ದೊಡ್ಡಮನೆ ನಮ್ಮದೇ. ಚೌಬೀನೆ ವ್ಯಾಪಾರಿ ಎಂ.ಎಸ್. ಸಿದ್ಧಪ್ಪ ಬಾಡಿಗೆ ಇದ್ದಾರೆ. ನಾನು ಮೈಸೂರಿನಲ್ಲೇ ಹೆಚ್ಚಾಗಿರುತ್ತೇನೆ. ಮೈಸೂರಿಗೆ ಬಂದಾಗ ನಿಮ್ಮನ್ನು ನೋಡುತ್ತೇನೆ" ಎಂದು ತಾವೇ ತಮ್ಮ ಪೂರ್ವೋತ್ತರ ಹೇಳಿ, ಚನ್ನಮಲ್ಲಪ್ಪನವರ ಸಂಬಂಧವನ್ನು ಬೇರೆ ಹೇಳಿಕೊಳ್ಳುತ್ತ ಪರಿಚಯ ಮಾಡಿಕೊಂಡುಬಿಟ್ಟರು. ರಾತ್ರಿ ಇಬ್ಬರೂ ಕೂಡಿ ಊಟಮಾಡಿ ಅಲ್ಲಿನ ಮಠದಲ್ಲಿ ಮಲಗಿದಾಗ ಬಹಳ ಹೊತ್ತಿನವರೆಗೆ ವಟವಟ ಮಾತನಾಡಿ ನನ್ನ ನಿದ್ರೆಯನ್ನೆಲ್ಲ ಕೆಡಿಸಿದ್ದೂ ಉಂಟು ಅನ್ನಿ. ಇವರು ತಿಪಟೂರಿನ ಮೈಸೂರವರ ಮನೆತನದ ಪ್ರತಿಷ್ಠಿತ ವ್ಯಕ್ತಿ, ಹೊಲ ತೆಂಗಿನ ತೋಟ, ಹೆಂಡಿರು ಮಕ್ಕಳು ಎಲ್ಲರೂ ಇದ್ದಾರೆಂದು ಆಮೇಲೆ ತಿಳಿಯಿತು.

ಬೆಳಿಗ್ಗೆ ನನ್ನನ್ನು ಊರ ಹೊರಗಿನ ಕೆರೆಯ ಕಡೆಗೆ ಕರೆದುಕೊಂಡು ಹೋಗಿ ಕಂಡಕಂಡವರ ತೋಟ ಹೊಲ ತೊಪ್ಪಲು ಎಲ್ಲ ತಿರುಗಾಡಿಸಿ ಸಾಕು ಬೇಕೆನಿಸಿ ಬಿಟ್ಟರು. ಹೋದ ತೋಟದಲ್ಲೆಲ್ಲ ಎಳೆನೀರು ಗಿಟ್ಟಿಸುತ್ತಿದ್ದ. ಬಹುಶಃ ಆ ಊರಿನಲ್ಲಿ ಇರುವವರೆಲ್ಲ ಅವರಿಗೆ ಒಂದಿಲ್ಲೊಂದು ಸಂಬಂಧವಂತೆ. ಏಳೆಂಟು ಮನೆಗಳಲ್ಲಿ ನನ್ನೊಡನೆ ನುಗ್ಗಿ ಎಲ್ಲರಿಗೂ ಪರಿಚಯ ಮಾಡುವುದು, ಅಲ್ಲಲ್ಲಿ ಕಾಫಿ-ತಿಂಡಿಗಳನ್ನು ತಿನ್ನಿಸುವುದು, ಏನೆಲ್ಲ ಮಾಡಿಸಿಬಿಟ್ಟ. ನಾನು ಇವರೊಬ್ಬ ಬಹು ವ್ಯಾಪಕ ವ್ಯಕ್ತಿಯೆಂದು ಮನಸ್ಸಿನಲ್ಲಿ ಭಾವಿಸಿಕೊಂಡು ....ಹಿಂದಿನ ಬಾಲದಂತೆ ಆವನ ಹಿಂದೆ ಸುತ್ತಿದೆ. ಅನಂತರ ನಾನು ಹೊರಟು ಅರಸೀಕೆರೆಗೆ ಬಂದು ರೈಲು ಹಿಡಿದು ಮೈಸೂರಿಗೆ ಬಂದೆ. ಕೋಳುಗುಂದ ಬಸವರಾಜು ಅವರು ಕಥೆ ಮುಗಿದ ಮೇಲೆ ನನಗೆ ಸಂಭಾವನೆ ವಗ್ಯೆರೆ ಕೊಡಿಸಿ ಎಲ್ಲಿಗೆ ಹೋದರೋ ಕೈಗೆ ಸಿಗಲೇ ಇಲ್ಲ. ಆದರೆ ನನ್ನ ಯೋಗಕ್ಷೇಮವನ್ನು ಮೈಸೂರು ಮಹಾಲಿಂಗಪ್ಪ ನೋಡಿಕೊಂಡು ಕಳಿಸಿಕೊಡುತ್ತ ನಾನು ಮೈಸೂರಿಗೆ ಬರುತ್ತೇನೆಂದಾಗ ನಿಮ್ಮನ್ನೇ ನೋಡುತ್ತೇನೆಂದು ಹೇಳಿದ.

ಮುಂದೆ ಮೈಸೂರಿನಲ್ಲಿ ತಿಪಟೂರಿನ ಈ ಪ್ರತಿಷ್ಠಿತ ವ್ಯಕ್ತಿ ಮಹಾಲಿಂಗಪ್ಪನ ಗಾಢವಾದ ಪರಿಚಯವಾಗಿ ಹೋಯಿತು. ಒಂದು ದಿನ ಇದಕ್ಕಿದ್ದಂತೆ ನಮ್ಮ ಟ್ರೈನಿಂಗ್

ಕಾಲೇಜಿಗೆ ಬಂದು, ನೇರವಾಗಿ ಪ್ರಿನ್ಸಿಪಾಲರ ಕೊಠಡಿಗೆ ನುಗ್ಗಿ ಏನೆಲ್ಲ ತನ್ನ ಪರಿಚಯ ಹೇಳಿಕೊಂಡು ನಿಮ್ಮ ಕಾಲೇಜಿನಲ್ಲಿ ಪಂಡಿತ ಪರೀಕ್ಷೆ ಓದುತ್ತಿರುವ ಚನ್ನಪ್ಪ ಎನ್ನುವವರು ನಮ್ಮ ವಿಶ್ವಾಸಿಗಳು. ದಯವಿಟ್ಟು ಎಲ್ಲಿಗೋ ಅರ್ಜಂಟ್ ಹೋಗಬೇಕಾಗಿದೆ. ಅವರನ್ನು ಪರ್ಮಿಷನ್ ಕೊಟ್ಟು ಕಳಿಸಿಕೊಡಬೇಕೆಂದು ಕೇಳಿಕೊಂಡನಂತೆ. ಪ್ರಿನ್ಸಿಪಾಲರು ಇವನ ದೊಡ್ಡ ಕಂಬಿಪೇಟಾ, ಭರ್ಜರಿ ಕೋಟು, ಪಂಚೆ, ರೇಷ್ಮೆಶಲ್ಲೆ, ಚಾಕಚಕ್ಯತೆ ಇದನ್ನೆಲ್ಲ ಕೇಳಿ ಕುರ್ಚಿಕೊಟ್ಟು ಕುಳ್ಳಿರಿಸಿಕೊಂಡಿದ್ದು ನನ್ನನ್ನು ಕರೆಯ ಕಳಿಸಿದರು. ತರಗತಿಯಲ್ಲಿದ್ದ ನಾನು ಏಕೆ ಕರೆಯ ಕಳಿಸಿರಬಹುದೆಂದು ಗಾಬರಿಯಿಂದ ಪ್ರಿನ್ಸಿಪಾಲರ ಕೊಠಡಿ ಹೊಕ್ಕೆ. ಭರ್ಜರಿ ಕಂಬಿ ಪೇಟಾದ ಮೈಸೂರು ಮಹಾಲಿಂಗಪ್ಪ ಹಾಜರಾಗಿಬಿಟ್ಟಿದ್ದಾನಲ್ಲ! ಎಂದುಕೊಂಡು ಮೊದಲು ಪ್ರಿನ್ಸಿಪಾಲರಿಗೂ, ಆಮೇಲೆ ನಗುತ್ತಾ ಮಹಾಲಿಂಗಪ್ಪನವರಿಗೆ ನಮಸ್ಕಾರ ಹೇಳಿ ನಿಂತಿರುವಂತೆಯೇ ಪ್ರಿನ್ಸಿಪಾಲರು "ನೋಡಿ, ನಿಮ್ಮ ಸ್ನೇಹಿತರು ಬಂದಿದ್ದಾರೆ. ಅವರೂ ನೀವೂ ಎಲ್ಲಿಗೋ ಹೋಗಿಬರಬೇಕಂತೆ. ನೀವು ಹೋಗಿಬರಬಹುದು" ಎಂದು ಹೇಳಿದರು. ಮಹಾಲಿಂಗಪ್ಪ ಇಷ್ಟು ಹೇಳುತ್ತಲೇ ಎದ್ದು "ಶಾಸ್ತ್ರಿಗಳೇ, ನಿಮ್ಮನ್ನು ಹುಡುಕಿಕೊಂಡು ಬಂದೆ. ಸ್ವಲ್ಪ ಕೆಲಸವಿದೆ. ದಯವಿಟ್ಟು ಹೊರಗೆ ಹೋಗಿಬರೋಣ" ಎಂದು ಹೇಳುತ್ತ ಪ್ರಿನ್ಸಿಪಾಲರಿಗೆ ನಮಸ್ಕಾರ ಹೇಳಿ ಕೈಹಿಡಿದು ಕರೆದುಕೊಂಡು ನಡೆದೇಬಿಟ್ಟ.

ಏನೂ ಕೆಲಸವಿಲ್ಲ, ಮಹಾಲಿಂಗಪ್ಪನ ಜೊತೆಗೆ ತಿರುಗಲು ಯಾರಾದರೂ ಒಬ್ಬರಿರಲೇ ಬೇಕೆಂಬುದು ನನಗೆ ಆಮೇಲೆ ತಿಳಿದುಬಂತು. ಮೈಸೂರಿನಲ್ಲಿನ ಅರಸು ಮನೆತನಗಳೆಲ್ಲ ಇವನಿಗೆ ಪರಿಚಯ. ಎಲ್ಲರೂ ಇವರನ್ನು ವಿಶ್ವಾಸದಿಂದ ಕಂಡು ಗೌರವಿಸುತ್ತಿದ್ದರು. ರಾಜವಂಶೀಯರ ಮನೆತನಗಳಲ್ಲಿ ಅನ್ಯರ ಪ್ರವೇಶಕ್ಕೆ ವಿಧಿನಿಷೇಧಗಳಿದ್ದರೂ, ಅನೇಕವು ಮಹಾಲಿಂಗಪ್ಪನಿಗೆ ಅನ್ವಯಿಸುತ್ತಿರಲಿಲ್ಲವೆಂಬುದು ಮಹಾಲಿಂಗಪ್ಪನೊಡನೆ ಅನೇಕ ಅರಸು ಮನೆಗಳನ್ನು ಹೊಕ್ಕ ನನಗೆ ಅನುಭವಕ್ಕೆ ಬಂತು. "ಬುದ್ಧಿ! ಬುದ್ಧಿ!" ಎಂದು ಗಂಡಸರಿಗೂ, "ಅಮ್ಮಣ್ಣಿ ಅಮ್ಮಣ್ಣಿ" ಎಂದು ಸ್ತ್ರೀಯರಿಗೂ ಹೇಳುತ್ತ ಅನೇಕ ಮನೆಗಳನ್ನು ಹೊಕ್ಕು ನನ್ನನ್ನೂ ಪರಿಚಯ ಮಾಡಿಕೊಡುತ್ತ ಅವರು ಕೊಟ್ಟ ತಿಂಡಿ ತೀರ್ಥಗಳನ್ನು ತಿಂದು, ಅವರನ್ನು ಹೊಗಳಿ, ನಗಿಸಿ, ಕುಣಿಸಿ, ವಾಚಾಳಿತನ ಮೆರೆಯುತ್ತಿದ್ದ ಈ ಮಹಾಲಿಂಗಪ್ಪ ನನ್ನನ್ನು ಕೆಲವೇ ದಿನಗಳಲ್ಲಿ ಮೈಸೂರಿನ ಹತ್ತಿಪ್ಪತ್ತು ಮನೆಗಳವರಿಗೆ ಪರಿಚಯಿಸಿಬಿಟ್ಟ. ಅವನು ಮೈಸೂರಿಗೆ ಬಂದರೆ 15-20 ದಿನಗಳು ಇದ್ದುಬಿಡುತ್ತಿದ್ದ. ತನ್ನ ಬಹುದೊಡ್ಡ ಮನೆಯಲ್ಲಿ ತಾನು ಬಂದಾಗ ಉಳಿದುಕೊಳ್ಳಲು ಮಹಡಿಯ ಮೇಲೆ ಒಂದು ಸುಸಜ್ಜಿತವಾದ ಕೊಠಡಿಯನ್ನು ಬಿಡಿಸಿಕೊಂಡು ಬೀಗಹಾಕಿ ಇಟ್ಟುಕೊಂಡಿದ್ದ. ರಾತ್ರಿ ಆ ಕೊಠಡಿಗೆ ಬಂದು ಮಲಗಿ ಸ್ನಾನ, ಶಿವಪೂಜೆ ಅಲ್ಲೇ ಮುಗಿಸಿಕೊಂಡು, ಥಾಳವಾಗಿ ವಿಭೂತಿ ಪಟ್ಟ ಬಿಗಿದು, ಡ್ರೆಸ್ ಮಾಡಿಕೊಂಡು ಬೆಳಿಗ್ಗೆ ಹೊರಟರೆ, ರಾತ್ರಿಗೇ ಪುನಃ ಕೊಠಡಿಗೆ ಬರುವುದು. ತಿಂಡಿ ಒಂದು ಮನೆಯಲ್ಲಿ; ಊಟ ಇನ್ನೊಂದು ಮನೆಯಲ್ಲಿ. ಅರಸುಗಳ ಮನೆಯಲ್ಲಿ ಧಾರಾಳವಾಗಿ ಊಟ ಗಿಟ್ಟಿಸಿಬಿಡುತ್ತಿದ್ದ. ಭಂಡಬಾಯಿ ಇದ್ದರೆ ಬರದಲ್ಲಿಯೂ ಬದುಕಬಹುದೆಂದು ನಗುತ್ತ ನನ್ನೆದುರು ಹೇಳುತ್ತಿದ್ದ. ಅವನದು ಸ್ವಲ್ಪ ಹಾಗೆಯೇ, ಮಾತು ಬಹಳ ರುಚಿ. ಹೃದಯ ಪರಿಶುದ್ಧವಿತ್ತು. ಒಮ್ಮೊಮ್ಮೆ ಈ ಮನುಷ್ಯನಿಗೆ ನಾನೇಕಾದರೂ ಸಿಕ್ಕೆನೋ ಎನ್ನಿಸಿಬಿಡುತ್ತಿತ್ತು. ಒಂದೊಂದು ಸಲ ಮೈಸೂರು ಕ್ಯಾಂಪ್ ಹಾಕಿದಾಗಲೂ ನಾಲ್ಕೈದು ದಿನಗಳಾದರೂ ನಾನು ಇವನೊಡನೆ

ಸುತ್ತಬೇಕಾಗುತ್ತಿತ್ತು. ಉಳಿದಂತೆ ನೀವು ಓದಿಕೊಳ್ಳಿ ಹೋಗಿ. ಎಂದು ಕೃಪೆದೋರಿ ಕಳಿಸುತ್ತಿದ್ದ. ನನ್ನ ನೆನಪಾದಾಗಲೆಲ್ಲ ಕಾಲೇಜಿಗೆ ಬಂದು 'ಅರ್ಜಂಟ್ ಕಾರ್ಯವಿದೆ, ಈಗಲೇ ಹೊರಡಿ' ಎನ್ನುತ್ತ ಉಪಾಧ್ಯಾಯರಿಗೆ ಒಂದು ನಮಸ್ಕಾರ ಹೊಡೆದು ಸಿಹಿಮಾತಿನಿಂದ ಕಳಿಸಿಕೊಡಲು ಕೇಳಿಬಿಡುತ್ತಿದ್ದ. ಬಟ್ಟೆ ಬರೆಗಳ ಡೌಲಿಗೆ ಬೆಲೆ ಕೊಟ್ಟೋ, ಮಾತಿನ ಚಮತ್ಕಾರಕ್ಕೆ ಮರುಳಾಗಿಯೋ ಉಪಾಧ್ಯಾಯರೂ 'ಹೋಗಿಬನ್ನಿ' ಎನ್ನುತ್ತಿದ್ದರು. ಅರ್ಜಂಟ್ ಕೆಲಸ ಗಾಳಿಯಂತೆ ಸುತ್ತಾಡುವುದು ಬಿಟ್ಟರೆ ಏನೂ ಇರುತ್ತಿರಲಿಲ್ಲ. ಚೆನ್ನಮಲ್ಲಿಕಾರ್ಜುನರ ಹತ್ತಿರ ಬಂದರೆ ಆಯಿತು. ಅವರ ಕೆಲಸವನ್ನೆಲ್ಲ ಕೆಡಿಸಿ ವಟವಟ ಮಾತಾಡುತ್ತ ಬೇಕಾದದ್ದು, ಬೇಡವಾದದ್ದು ಎಲ್ಲ ಹರಟೆ ಕೊಚ್ಚಿದ್ದೂ ಕೊಚ್ಚಿದ್ದೇ. ಚೆನ್ನಮಲ್ಲಪ್ಪನವರು ಅವನ ದಾಕ್ಷಿಣ್ಯಕ್ಕೆ ಸ್ವಲ್ಪಮಟ್ಟಿಗೆ ಕಟ್ಟುಬಿದ್ದಿದ್ದರು. ಅವರ ಸದ್ಧರ್ಮದೀಪಿಕೆ ನಿಯತಕಾಲಿಕಕ್ಕೆ ಈ ಮನುಷ್ಯ ನೂರಾರು ಜನಗಳನ್ನು ಚಂದಾದಾರರನ್ನಾಗಿ ಮಾಡಿಸಿಕೊಂಡು ದುಡ್ಡು ತಂದುಕೊಡುತ್ತಿದ್ದುದೇ ಈ ದಾಕ್ಷಿಣ್ಯ. ಒಮ್ಮೊಮ್ಮೆ ಚೆನ್ನಮಲ್ಲಿಕಾರ್ಜುನರಲ್ಲಿಯೇ ಸ್ನಾನ, ಶಿವಪೂಜೆ ಮುಗಿಸಿ ಅಲ್ಲಿಯೇ ಅವರ ವಿಚಿತ್ರ ಊಟದ ರುಚಿ ನೋಡಿ, ಆ ಊಟವನ್ನು ಮನಸಾರೆ ಹೊಗಳತೊಡಗುತ್ತಿದ್ದ. ಚೆನ್ನಮಲ್ಲಿಕಾರ್ಜುನರ ಅಡಿಗೆಯ ವೈಖರಿಯನ್ನು ಈ ಪೂರ್ವದಲ್ಲಿ ಹೇಳಿದ್ದೇನೆ. ಚೆನ್ನಮಲ್ಲಿಕಾರ್ಜುನರ ನಿರ್ದೇಶನದಂತೆ ಒಂದೇ ಪಾತ್ರೆಯಲ್ಲಿ ಅಕ್ಕಿ, ಬೇಳೆ, ಕಾರ, ಉಪ್ಪು, ಸಂಬಾರ, ತರಕಾರಿ, ಎಣ್ಣೆ, ಸ್ವಲ್ಪ ಬೆಲ್ಲ, ಕರಿಬೇವು, ಕೋತಂಬ್ರಿ, ಸ್ವಲ್ಪ ಗೋದಿಹಿಟ್ಟು ...ಇತ್ಯಾದಿ ಅಡಿಗೆಗೆ ಏನೇನು ಹಾಕಬೇಕೋ ಅವನ್ನೆಲ್ಲ ಹಾಕಿ ತಿರುವುತ್ತ ಶರಣರ ವಚನಗಳನ್ನೋ ಶತಕತ್ರಯವನ್ನೋ ಹಾಡುತ್ತ ಇವನೇ ನಳಪಾಕ ಮಾಡುತ್ತಿದ್ದ. ಚೆನ್ನಮಲ್ಲಿಕಾರ್ಜುನರ ಪೂಜೆ ಮುಗಿದ ಮೇಲೆ ಅವರಿಗೆ ಊಟಕ್ಕೆ ಬಡಿಸಿ, ಅವರು ಉಂಡ ಮೇಲೆ ಇವನು ಉಳಿದ ಎಲ್ಲ ಪ್ರಸಾದವನ್ನು ತಟ್ಟೆಗೆ ಬಳಿದು ತುಂಬಿಕೊಂಡು ಊಟ ಮಾಡಿ, ಪಾತ್ರೆಗಳನ್ನು ತೊಳೆದು ಬಂದು ಅನಂತರ ತನ್ನ ಡ್ರೆಸ್ ಬಿಗಿದುಕೊಂಡು ಎದ್ದುಬಿಡುತ್ತಿದ್ದ.

ಒಮ್ಮೆ ನನ್ನನ್ನು ಕರೆದುಕೊಂಡು, ಆಗ ಆಕಾಶವಾಣಿಯಲ್ಲಿ ಕೆಲಸ ಮಾಡುತ್ತಿದ್ದ ಕಲ್ಲೋಳಿಮಠ ರಾಜಮ್ಮನವರ ಮನೆಗೆ ಹೋದ. ಆಗ ರಾಜಮ್ಮನವರ ತಾತಂದಿರು ಇದ್ದರು. ಅವರನ್ನು ಕಂಡು ಕೈ ಎತ್ತಿ ಮುಗಿಯುತ್ತಲೇ ಒಳಗೆ ಹೋಗಿ ಕುಳಿತು, ನನ್ನ ಪರಿಚಯವನ್ನು ನಭೂತೋನಭಿಷ್ಯತಿ ಅನ್ನುವಂತೆ ಮಾಡಿದ. ಅಷ್ಟರಲ್ಲಿ ರಾಜಮ್ಮನವರು ಹೊರಗಿನಿಂದ ಬಂದರು. ಅವರು ಬಂದೊಡನೆ ಅವರಿಗೂ ಎದ್ದುನಿಂತು "ಅಮ್ಮಾ ಬಹುದಿನ ಆಯಿತು. ನೋಡಿ ಹೋಗೋಣ ಎಂದು ಈ ಶಾಸ್ತ್ರಿಗಳನ್ನು ಕರೆದುಕೊಂಡು ಬಂದೆ". ಇವರು ಅಂಥವರು ಇಂಥವರು, ವಿದ್ವಾಂಸರು ಏನೆಲ್ಲ ಹೊಗಳಿ ಹೊಗಳಿ ಹೊನ್ನಶೂಲಕ್ಕೇರಿಸಿ, "ಇವರು ಒಳ್ಳೆ ಪಗಡದಸ್ತಾಗಿ ಕಥೆ ಮಾಡುತ್ತಾರೆ. ನಿಮ್ಮ ಆಕಾಶವಾಣಿಯಲ್ಲಿ ಇವರ ಕಥೆ ಮಾಡಿಸಬೇಕು ಎಂದುಬಿಟ್ಟ". ಅವರು "ಕಥೆ ಮಾಡಬೇಕಾದರೆ ಅದಕ್ಕೆ ಬೇರೆಬೇರೆ ಕೆಲವು ಪರೀಕ್ಷೆಗಳು, ಟೆಸ್ಟ್‌ಗಳು ಆಗಬೇಕಾಗುತ್ತದೆ. ಮುಂದೆ ನೋಡೋಣ. ಈಗ ಸದ್ಯ ಇವರಿಗೆ ವಚನ, ಗಾಯನ ಹಾಡಲು ಹತ್ತು ನಿಮಿಷದ ಒಂದು ಛಾನ್ಸ್ ಕೊಡಿಸುತ್ತೇನೆ. ಹಾಡಲಿ" ಎಂದು ಹೇಳುತ್ತ ಅವರ ಮನೆಯಲ್ಲಿಯೇ ಒಂದೆರಡು ವಚನ ಹಾಡಿಸಿ ನೋಡಿ. "ನಾಳೆಯೋ ನಾಡಿದ್ದೋ ನೀವು ಬಂದು ರೇಡಿಯೋ ಸ್ಟೇಷನ್‌ನಲ್ಲಿ ಕಾಣಿರಿ" ಎಂದು ಹೇಳಿದರು. ಆಗ ಮಹಾಲಿಂಗಪ್ಪ "ಅಮ್ಮಾ ಅವರನ್ನು ನಿಮಗೆ ಬಿಡುವಾದಾಗ ಹೋಗಿ ಕಂಡು ಆಕಾಶವಾಣಿ ಕಾರ್ಯಕ್ರಮಗಳಲ್ಲಿ

ಭಾಗವಹಿಸಿ" ಎಂದು ಹೇಳಿ, ಅವರು ತಂದುಕೊಟ್ಟ ತಿಂಡಿ ತೀರ್ಥ ಎಲ್ಲ ಮುಗಿಸಿ ಮತ್ತೆ ಅಲ್ಲಿಂದ ಎದ್ದು ಎಲ್ಲಿ ಎಲ್ಲಿಯೋ ನನ್ನನ್ನು ತಿರುಗಿಸಿ ಹಣ್ಣು ಮಾಡಿ ಕೈಬಿಟ್ಟ. ಹೊಟ್ಟೆ ಹಸಿದಿದ್ದರೆ ಹೋಟೆಲ್‌ಗೆ ಹೋಗುವ ಬಾಬೇ ಇಲ್ಲ. ಅವರು ಹೋಟಲ್ ತಿಂಡಿ ತಿನ್ನದಂತಹ ಶೀಲವನ್ನು ಉಳಿಸಿಕೊಂಡಿದ್ದರು. ಎಷ್ಟು ಹೊತ್ತಿದ್ದರೂ ಮನೆಯಲ್ಲಿ ಮಾಡಿದ ತಿಂಡಿ ತೀರ್ಥಗಳೇ ಆಗಬೇಕು. ನಿರ್ದಾಕ್ಷಿಣ್ಯವಾಗಿ "ಅಮ್ಮಣ್ಣಿ ನನಗೆ ಹಸಿವು. ತಿಂಡಿಯಾಗಬೇಕು" ಎಂದು ಹೇಳಿಯೇ ಬಿಡುತ್ತಿದ್ದ. ಇಷ್ಟು ಕೇಳಿದ ಮೇಲೆ ತಿಂಡಿ ಮಾಡಿಕೊಡದ ಜನಗಳುಂಟೆ? ಏನಾದರೂ ಬಿಸಿಬಿಸಿ ತಿಂಡಿ ಮಾಡಿಕೊಡುತ್ತಿದ್ದರು. ತಿನ್ನುತ್ತ ತಿಂಡಿ ಹೇಗೇ ಇರಲಿ ಬಾಯಿತುಂಬ ಹೊಗಳಿ ಹೊಟ್ಟೆ ತುಂಬ ತಿಂದು ಹೊರಬೀಳುತ್ತಿದ್ದ. ಇಂಥ ವಿಚಿತ್ರ ವ್ಯಕ್ತಿಯ ಸ್ನೇಹ ನನಗೆ ಹೇಗಾಯಿತೋ ದೇವರೇ ಬಲ್ಲ. ಅಂತೂ ಸಾಯುವವರೆಗೂ ಒಂದಿಲ್ಲೊಂದು ರೀತಿಯಿಂದ ನನ್ನೊಡನೆ ಇವನ ಸಂಬಂಧ ಹೆಣೆದಿತ್ತು.

ಇಂಥ ವಿಚಿತ್ರ ವ್ಯಕ್ತಿತ್ವದ ಮಹಾಲಿಂಗಪ್ಪ ದೊಡ್ಡ ಶ್ರೀಮಂತ. ತಿಪಟೂರಿನಲ್ಲಿ ಭವ್ಯವಾದ ಮನೆ, ಐದಾರುನೂರು ಗಿಡಗಳುಳ್ಳ ತೆಂಗಿನ ತೋಟ, ವ್ಯಾಪಾರ ಸಾಪಾರ ಇಟ್ಟುಕೊಂಡ ಮನುಷ್ಯ. ಗಂಡು ಮಕ್ಕಳಿರಲಿಲ್ಲ. ಇದ್ದ ನಾಲ್ವರು ಹೆಣ್ಣು ಮಕ್ಕಳನ್ನು ಲಗ್ನಮಾಡಿಕೊಟ್ಟು ನಾಲ್ವರು ಅಳಿಯಂದಿರೊಡನೆಯೂ ನಿಷ್ಠುರ ಕಟ್ಟಿಕೊಂಡಿದ್ದ ಮನುಷ್ಯ. ಮನೆ ಹೊಲ-ತೋಟಗಳ ಯೋಗಕ್ಷೇಮವನ್ನು ಹೆಂಡತಿ ಪುಟ್ಟತಾಯಮ್ಮ ಎನ್ನುವವರು ನೋಡಿಕೊಂಡು ತಿಪಟೂರಿನಲ್ಲಿಯೇ ಇರುತ್ತಿದ್ದರು. ಅವರು ಹೆಣ್ಣುಮಕ್ಕಳಿಗೆಲ್ಲ ಹೊಲ-ಮನೆಗಳನ್ನು ಬರೆದು ಹಂಚಿಕೊಡಬೇಕೆಂದು ಹಗಲಿರುಳು ತಗಾದೆ ಮಾಡುತ್ತಿದ್ದರು. ಆದರೂ ಇವರು "ನಾನು ಇರುವವರೆಗೆ ಯಾರಿಗೂ ತುಂಡು ಹೊಲ-ಮನೆ-ಗದ್ದೆ ಕೊಡುವುದಿಲ್ಲ. ನರಿನಾಯಿ ತಿಂದು ಹೋಗಲಿ. ಪೆನ್ನು ಎತ್ತೋದಿಲ್ಲ, ಒಂದು ಸಾಲು ಬರೆಯೋದಿಲ್ಲ" ಅನ್ನುತ್ತಿದ್ದ. ಹೆಂಡತಿ ಇವರಿಗೆ ಹೆದರಿ ಗಡಗಡ ನಡುಗುತ್ತಿದ್ದಳು. ಹೀಗೆಂದು ಇವರು ಹೆಂಡತಿಗೆ ಏನನ್ನೂ ಕಡಿಮೆಮಾಡಿರಲಿಲ್ಲ.

ಪುಟ್ಟತಾಯಮ್ಮ ಒಮ್ಮೆ ನನಗೆ ಮೈಸೂರಿನಲ್ಲಿ ಸಿಕ್ಕು, ನಾನು ಮಹಾಲಿಂಗಪ್ಪನವರೊಡನೆ ಸಲಿಗೆಯಿಂದಿರುವುದನ್ನು ಕಂಡು "ನೀವಾದರೂ ಯಜಮಾನರಿಗೆ ಹೇಳಿ ಚನ್ನಪ್ಪನವರೆ, ತೋಟಗಳೆಲ್ಲ ನೋಡುವವರಿಲ್ಲದೆ ಹಾಳಾಗಿ ಹೋಗುತ್ತಿವೆ. ಅಳಿಯಂದಿರಿಗೆಲ್ಲ ತೋಟಗಳ ಮೇಲೆಯೇ ಕಣ್ಣು. ಎಲ್ಲರಿಗೂ ಹಂಚಿಕೊಟ್ಟುಬಿಡಲಿ. ಅಳಿಯಂದಿರೆಲ್ಲ ನನ್ನ ಹೆಣ್ಣುಮಕ್ಕಳಿಗೆ ಪದೇ ಪದೇ ಹಿಂಸೆ ಮಾಡುತ್ತಿದ್ದಾರೆ" ಎಂದರು. ನಾನು ಮಹಾಲಿಂಗಪ್ಪನವರಿಗೆ ಈ ವಿಷಯವನ್ನೆಲ್ಲ ತಿಳಿಸಿದೆ. ಆಗಲೇ ಅವರು "ನನಗೆ ಸಾಧ್ಯವಿಲ್ಲ. ಯಾವನಿಗೂ ಬರೆಯೋದಿಲ್ಲ, ಅಯೋಗ್ಯರು! ಹಾಗೇ ಹಾಳಾಗಿ ಹೋದರೂ ಚಿಂತೆಯಿಲ್ಲ" ಎಂದುಬಿಟ್ಟರು. ಅವರಿಗೆ ಅಳಿಯಂದಿರ ಮೇಲೆ ಏಕೆ ಈ ಕೋಪವಿತ್ತೋ ದೇವರೇ ಬಲ್ಲ. ನಾನೂ ಆ ಬಗ್ಗೆ ಕೇಳುವುದು ಉಚಿತವಲ್ಲವೆಂದು ಕೇಳಿರಲಿಲ್ಲ. ಬಹುಶಃ ಇವರಿಗೆ ಗಂಡುಮಕ್ಕಳಿರಲೇ ಇಲ್ಲವೆಂಬ ಒಂದು ಮಾನಸಿಕ ವ್ಯಥೆ ಇತ್ತೆಂದು ತೋರುತ್ತದೆ. ಆ ವ್ಯಥೆ ಈ ರೀತಿ ಇವರನ್ನು ಅವ್ಯವಸ್ಥಿತ ಜೀವನಕ್ಕೆ ತಿರುಗಿಸಿರಬಹುದೆಂದು ಈಗಲೂ ಊಹಿಸುತ್ತೇನೆ. ಅಲ್ಲದೆ ಅವರ ಒಬ್ಬಿಬ್ಬ ಅಳಿಯಂದಿರು ಇವರಿಗೆ ಏನೇನೋ ಮಾತನಾಡಿ ತಿರಸ್ಕಾರ ಮಾಡಿದ್ದಾರೆಂದೂ, ಈ ಕಾರಣವಾಗಿ ಎಲ್ಲ ಅಳಿಯಂದಿರ ಮೇಲೆಯೂ ಇವರು ಕೋಪಗೊಂಡಿದ್ದಾರೆಂದೂ ಆಮೇಲೆ ತಿಳಿಯಿತು.

ಮಹಾಲಿಂಗಪ್ಪನವರ ಮಾತಿನ ಮೇಲಿಂದ ಮೈಸೂರು ಆಕಾಶವಾಣಿಯಲ್ಲಿ ನನ್ನ ವಚನಗಾಯನ 1949ನಯ ಇಸ್ವಿಯಲ್ಲಿ ಪ್ರಥಮವಾಗಿ ಬಿತ್ತರಗೊಂಡಿತು. 1965ರಿಂದ ಇಂದಿನವರೆಗೆ ಅನೇಕ ಕಾರ್ಯಕ್ರಮಗಳು ಬಿತ್ತರಗೊಳ್ಳುತ್ತಲೇ ಇವೆ. ಚಿಂತನ, ಭಾಷಣ, ಶಿವಕಥೆ, ರೂಪಕ, ಶೈಕ್ಷಣಿಕ, ಸಾಂಸ್ಕೃತಿಕ, ಸಾಮಾಜಿಕ ನಾಟಕ, ಮಕ್ಕಳ ಕಾರ್ಯಕ್ರಮ, ಹೀಗೆ ಎಲ್ಲ ಪ್ರಕಾರಗಳನ್ನು ಸುಮಾರು 1988ರವರೆಗೆ ನೂರಾರು ಕಾರ್ಯಕ್ರಮಗಳನ್ನು ನಾನು ನಡೆಸಿಕೊಟ್ಟಿದ್ದೇನೆ.

1952ರಿಂದ ನಾನು ತಿಪಟೂರು ಹೈಸ್ಕೂಲ್ ಉಪಾಧ್ಯಾಯನಾಗಿ ಬಂದೆ. ಅಷ್ಟು ಹೊತ್ತಿಗೆ ಮಹಾಲಿಂಗಪ್ಪನವರು ದೈಹಿಕವಾಗಿ ಬಹುಕ್ಷೀಣವಾಗಿ ಹೋಗಿದ್ದರು. ಮೊದಲಿನ ಚಟುವಟಿಕೆಗಳು ಮಾಯವಾಗಿದ್ದವು. ಆದರೂ ನನ್ನ ಮೇಲಿನ ವಿಶ್ವಾಸ ಕಡಿಮೆಯಾಗಿರಲಿಲ್ಲ. ಅನೇಕ ಸಲ ಮನೆಗೆ ಕರೆದುಕೊಂಡು ಹೋಗಿ ಅಲ್ಲಿಯೇ ಊಟೋಪಚಾರ ಮಾಡಿಸಿ ಬಹುವಿಶ್ವಾಸದಿಂದ ಕಾಣುತ್ತಿದ್ದುದೂ ಉಂಟು. ಬೇಸರವಾದಾಗಲೆಲ್ಲ ನಮ್ಮ ಮನೆಗೆ ಬಂದುಬಿಡುತ್ತಿದ್ದರು. ನನ್ನ ಪುಸ್ತಕ ರಾಶಿಯನ್ನೆಲ್ಲ ಕೆದಕಿ ತಮಗೆ ಬೇಕಾದ ಪುಸ್ತಕವನ್ನು ಎತ್ತಿಕೊಂಡು ಓದುತ್ತ ಕಾಲಕಳೆದು ಹೋಗುತ್ತಿದ್ದರು. ಅವರಲ್ಲಿ ಒಳ್ಳೆಯ ಪುಸ್ತಕಗಳ ಸಂಗ್ರಹವಿತ್ತು. ಇವನ್ನೆಲ್ಲ ನಿಮಗೆ ಕೊಡುತ್ತೇನೆಂದು ಹೇಳುತ್ತಿದ್ದರು. ಅವರ ಸ್ವಭಾವವೆಂದರೆ ತಾವು ಜೀವಂತವಾಗಿರುವವರೆಗೆ ಮಾತ್ರ ಇನ್ನೊಬ್ಬರಿಗೆ ತಮ್ಮ ಯಾವುದೇ ಆಸ್ತಿಯನ್ನು ಕೊಡುವವರಲ್ಲ. ಅದರಂತೆ ಅವರ ಪುಸ್ತಕದ ಆಸ್ತಿಯೂ ಕೂಡ. ನಾನು ತಿಪಟೂರು ಬಿಟ್ಟ ನಂತರ ಲಿಂಗೈಕ್ಯರಾದರೆಂದು ತಿಳಿದುಬಂತು. ತಿಪಟೂರಿಗೆ ಬಂದು ಅವರ ಧರ್ಮಪತ್ನಿ ಪುಟ್ಟತಾಯಮ್ಮನವರನ್ನು ಕಂಡು ಸಾಂತ್ವನಗೊಳಿಸಿದೆ. ಆದರೆ ನನಗೆ ಮಹಾಲಿಂಗಪ್ಪ ಕೊಡುತ್ತೇನೆಂದು ಹೇಳಿದ್ದ ಪುಸ್ತಕಗಳನ್ನು ಕೇಳಲಿಲ್ಲ. ಮಹಾಲಿಂಗಪ್ಪ ಪರಸ್ಪರ ವಿರುದ್ಧ ಗುಣಗಳ ವಿಚಿತ್ರವ್ಯಕ್ತಿ. ಸಾತ್ವಿಕ ಸ್ವಭಾವ. ಬಹುಶಃ ಜೀವನದಲ್ಲಿ ಅವರಿಗೆ ದೊಡ್ಡ ಅತೃಪ್ತಿಯಿದ್ದುದಂತೂ ನಿಜ. ಅವರು ತಮ್ಮ ಜೀವನದ ಉತ್ತರಾರ್ಧವನ್ನೆಲ್ಲ ಗಾಳಿಯಂತೆ ತಿರುಗಾಡುವುದನ್ನು ಬಿಟ್ಟರೆ ಇನ್ನೇನನ್ನೂ ಮಾಡಲಿಲ್ಲ. ತಿಪಟೂರಿನ ತಮ್ಮ ದೊಡ್ಡದಾದ ಹಳೆಯ ಮನೆಯ ರಿಪೇರಿಯನ್ನೂ ಮಾಡಿಸಲಿಲ್ಲ. ಈ ತರದ ಅಸೀಮ ನಿರ್ಲಕ್ಷ್ಯಭಾವಕ್ಕೆ ಅವರ ಯಾವುದೋ ಮಾನಸಿಕ ಉದಾಸೀನ ಕಾರಣವಾದುದು ತಿಳಿದವರಿಗೆ ಮಾತ್ರ ಗೊತ್ತು. ಅವರ ರೀತಿಯ ಸ್ವಭಾವಗಳು ಅಳಿಯಂದಿರು ಇತರ ದಾಯಾದಿಗಳೇ ಮೊದಲಾದವರ ನೈಷ್ಠುರ್ಯಕ್ಕೆ ಕಾರಣವಾಗಿದ್ದವು. ಇಂಥ ವಿಚಿತ್ರ ವ್ಯಕ್ತಿಗಳು ತಮ್ಮ ಕೊನೆಯ ಆರೇಳು ವರ್ಷಗಳ ಕಾಲವಂತೂ ನನ್ನೊಡನೆ ಅತ್ಯಂತ ವಿಶ್ವಾಸದಿಂದ ಇದ್ದರು. ಸುಮಾರು ಎಂಟು ಹತ್ತು ವರ್ಷಗಳಷ್ಟು ಕಾಲ ಇವರ ಸ್ನೇಹದಿಂದ ಇದ್ದ ನನಗೆ ಸಿಹಿಯಾದ ಮಾತಿನಿಂದ ಜನವನ್ನು ಗೆಲ್ಲಬಹುದೆಂಬ ಒಂದು ತತ್ತ್ವ ಮನಸ್ಸಿನಾಳಕ್ಕೆ ಇಳಿಯಿತು. ಉಳಿದಂತೆ ಇವರ ಸ್ವಭಾವ ನನಗೆ ಕೆಲವು ಸಲ ಬೇಸರಗೊಳಿಸುತ್ತಿತ್ತಾದರೂ ನಾನು ಆ ಭಾವನೆಯನ್ನು ತೋರಗೊಡದೆ ಇದ್ದುಬಿಡುತ್ತಿದ್ದೆ. ಅವರ ಗುಣದೋಷ ಕಟ್ಟಿಕೊಂಡು ನನಗೇನಾಗಬೇಕು. ಒಬ್ಬೊಬ್ಬರ ಮನಸ್ಸು ಒಂದೊಂದು ರೀತಿ. ಅವುಗಳಲ್ಲಿ ನಮಗೆ ಯಾವುದು ಬೇಕೋ ಅದನ್ನು ಆರಿಸಿಕೊಳ್ಳುವುದು ಮುಖ್ಯವೆಂದು ಅವುಗಳ ವಿಮರ್ಶೆ ಮಾಡುವುದಾಗಲಿ, ಅವರಿಂದ ದೂರವಿರುವುದನ್ನಾಗಲಿ ಮಾಡಲಿಲ್ಲ. ಅವರಿಂದ ನನ್ನ ಜೀವನಕ್ಕೆ ಅನೇಕ ಉಪಯುಕ್ತ ಶಿಕ್ಷಣವೂ ಸಿಕ್ಕಿದೆ.

# ಅಧ್ಯಾಯ - 9

## ಪಂಡಿತ ಪರೀಕ್ಷೆ ಮುಗಿಸಿ ಮತ್ತೆ ಉಪಾಧ್ಯಾಯ ವೃತ್ತಿಗೆ

1951ರ ಮೇ ತಿಂಗಳಲ್ಲಿ ನನ್ನ ಕನ್ನಡ ಪಂಡಿತ ಪರೀಕ್ಷೆ ಮುಗಿಯುವುದರ ಜೊತೆಗೆ ನನ್ನ ನಿಡುಗಾಲದ ಉತ್ಕಟಾಂಕ್ಷೆಯ ಕಾರ್ಯವನ್ನು ಯಾವ ವಿಘ್ನಗಳಿಗೂ, ಎಷ್ಟೇ ಪ್ರಬಲವಾಗಿದ್ದರೂ, ಹೆದರದೆ ಸಾಧಿಸಿಯೇ ಬಿಟ್ಟೆನಲ್ಲಾ ಎಂಬ ಹೆಮ್ಮೆಯಿಂದ ಬೀಗಿಹೋದೆ. ನಿಜವಾಗಿಯೂ ನಾನು ಆ ಕಾಲದಲ್ಲಿ ಈ ಘಟ್ಟಕ್ಕೆ ತಲುಪಿದ್ದು ಸಾಮಾನ್ಯ ಸಾಧನೆಯೂ ಆಗಿರಲಿಲ್ಲ. ನನ್ನ ಆರ್ಥಿಕ ದುಃಸ್ಥಿತಿಯ ಪರಿಸರದ ಮಧ್ಯದಲ್ಲಿ ಯಾರೂ ಗೊತ್ತಿಲ್ಲದ ದೂರದ ಸೀಮೆಯೊಂದಕ್ಕೆ ಪಾದಾರ್ಪಣೆ ಮಾಡಿ ಜನಗಳ ಸಹಕಾರದಿಂದ ಮುಖ್ಯವಾಗಿ ಶ್ರೀ ಸಿದ್ಧಗಂಗಾಕ್ಷೇತ್ರದ ಪರಮ ತಪಸ್ವಿಗಳಾದ ಶಿವಕುಮಾರ ಮಹಾಸ್ವಾಮಿಗಳವರ ಕೃಪಾವಿಶೇಷಕ್ಕೆ ಪಾತ್ರನಾಗಿ, ಅನೇಕ ಖ್ಯಾತನಾಮರ ಪರಿಚಯ ಮಾಡಿಕೊಂಡು ಚೆನ್ನಾಗಿಯೇ ಓದಿ ಸಂಕಲ್ಪವನ್ನು ಈಡೇರಿಸಿಕೊಂಡೆನಲ್ಲಾ!. ಮಹಾತ್ಮರ ಕಾರ್ಯಗಳು ಅವರ ಸತ್ವಪೂರ್ಣ ಕ್ರಿಯಾಸಿದ್ಧಿಯಿಂದ ಯಶಸ್ವಿಗೊಳ್ಳುತ್ತಾನೆಂದು ಹೇಳುತ್ತಾರೆ. ನಾನು ಮಹಾತ್ಮನಾಗಿರಲಿಕ್ಕಿಲ್ಲ ನಿಜ. ಆದರೆ ಕ್ರಿಯೆಯ ಬಗೆಗೆ ನನ್ನಲ್ಲಿದ್ದ ಅತ್ಯಂತ ಶ್ರದ್ಧಾಭಕ್ತಿಗಳು ಜಯವನ್ನು ತಂದುಕೊಟ್ಟಿವೆ ಎಂಬುದಂತೂ ನಿಶ್ಚಯವೇ. ಹೊಸಸೀಮೆ, ಹೊಸಭಾಷೆ, ಹೊಸಪರಿಸರ ಮೇಲಾಗಿ ರಾಜಕೀಯವಾಗಿ ಭಿನ್ನಪ್ರಾಂತವೊಂದಕ್ಕೆ ಅಡಿಯಿಟ್ಟು ಇಲ್ಲಿನ ಶಿಕ್ಷಣವನ್ನು ಅತ್ಯಂತ ಕಷ್ಟದಿಂದ ಸ್ಥಾನ ಸಂಪಾದಿಸಿ ಯಶಸ್ವಿ ಗಳಿಸಿದುದು ನನ್ನ ದೃಷ್ಟಿಯಿಂದಂತೂ ದೊಡ್ಡದೇ ಆಗಿತ್ತು; ಸಾಧಿಸಲಾಗದ ಸಾಧನೆಯೆನಿಸಿತ್ತು. ಇದಕ್ಕೆ ಕಾರಣ ಹಿರೇಕಾಂಶಿಯಲ್ಲಿ ನಾನು ನಾಲ್ಕು ವರ್ಷ ಅಲ್ಲಿನ ಜನಜೀವನದೊಡನೆ ಹೊಂದಿಕೊಂಡು ಯಶಸ್ವಿಯಾಗಿ ಉಪಾಧ್ಯಾಯ ವೃತ್ತಿಯನ್ನು ಮಾಡಿದುದು ನನಗೆ ಕೆಲವು ಅಮೂಲ್ಯ ಸಾಮಾಜಿಕ ಮೌಲ್ಯಗಳನ್ನು ಕಲಿಸಿಕೊಟ್ಟಿರು. ಲೋಕದ ಪ್ರೀತಿ ವಿಶ್ವಾಸ ಗಳಿಸಬೇಕಾದರೆ, ಲೋಕದ ಸಹಕಾರ ಸಂಪತ್ತನ್ನೂ ಪಡೆಯಬೇಕಾದರೆ ವ್ಯಕ್ತಿ ಕೆಲವು ವಿಶಿಷ್ಟ ಶಕ್ತಿಗಳನ್ನು ಗಳಿಸಿಕೊಳ್ಳಬೇಕಾಗುತ್ತದೆ. ಕ್ರಿಯೆ ಚಿಕ್ಕದಿರಲಿ ದೊಡ್ಡದಿರಲಿ ಅದನ್ನು ಮಾಡಿ ಮುಗಿಸುವಲ್ಲಿನ ಶ್ರದ್ಧೆ ವಿಶೇಷ ದೊಡ್ಡದು. ಬೀದಿಯ ಕಸ ಗುಡಿಸುವ ಕೆಲಸ ಲಭ್ಯವಾದರೂ, ಅಲ್ಲಿ ತೋರಬೇಕಾದ ಶ್ರದ್ಧೆಯನ್ನು ತೋರಿದಾಗಲೆ ಕ್ರಿಯೆಗೊಂದು ಸಾಮರ್ಥ್ಯವಿರುತ್ತದೆ. ನನ್ನ ಉಪಾಧ್ಯಾಯ ವೃತ್ತಿಯನ್ನು ಹಾಗೇ ಮಾಡಿದೆ. ಸಂಬಳ ಕಡಿಮೆಯೆಂದು ಉದಾಸೀನ ಮಾಡಲಿಲ್ಲ. ನಾನು ಬಾಲ್ಯದಾರಭ್ಯ ಬೆಳೆದು ಬಂದುದೇ ಹಾಗೆ. ಮನೆಯ ಕಸ, ಸೆಗಣಿ ತೆಗೆಯುವುದು, ಹೊಳೆಯಿಂದ ನೀರು ಹೊರುವುದು, ಓತ್ತಿಲ ಮುಂಚಿಗಳನ್ನು ಸ್ವಚ್ಛಗೊಳಿಸುವುದು, ಕೂಲಿ ಮಾಡುವುದು, ತಲೆಯ ಮೇಲೆ ತರಕಾರಿಯನ್ನು ಹೊತ್ತು ಊರೂರು ತಿರುಗಿ ಮಾರುವುದು - ಒಂದಲ್ಲ ಎರಡಲ್ಲ. ಎಲ್ಲ ಕೆಲಸಗಳನ್ನೂ ಮಾಡಿ ಮುಗಿಸುವ ಮಾನಸಿಕ ಸಿದ್ಧತೆ ಮಾಡಿಕೊಂಡುಬಿಟ್ಟಿದ್ದೆ. ಹೀಗೆ ನಾನು ಮಾಡಿಕೊಂಡಿದ್ದು ಎನ್ನುವುದು ಧಾರ್ಷ್ಟ್ಯವಾದೀತು. ಈ ಪೂರ್ವದಲ್ಲಿ ಒಂದು ಕಡೆ ಹೇಳಿದಂತೆ ಇವೆಲ್ಲ ನನ್ನ ತಾಯಿಯ ಅದ್ಭುತ ಕ್ರಿಯಾಯೋಗವನ್ನು ಕಣ್ಣಾರೆ ಕಂಡುದೇ ಆಗಿತ್ತು. ಆ ಕರ್ಮಯೋಗಿನಿ ನಿದ್ರೆಯ ಸಮಯವೊಂದನ್ನುಳಿದು ಸತತ ಒಂದಿಲ್ಲೊಂದು ಕಾರ್ಯದಲ್ಲೇ ತೊಡಗಿರುತ್ತಿದ್ದಳು. ಆಕೆಯ ಕ್ರಿಯೆಯಲ್ಲಿನ ಅದಮ್ಯ ಉತ್ಸಾಹದ ಬಗೆಗೆ ಈ ಹಿಂದೆ ಅನೇಕ ಮುಖದಲ್ಲಿ ಪರಿಚಯ ಮಾಡಿದ್ದೇನೆ. ಈಗ ಪುನಃ ಅದನ್ನು ಹೇಳುವುದಿಲ್ಲ. ಇಷ್ಟು ಮಾತ್ರ

ನಿಜ. ನಿಜಗುಣರು ಹೇಳುವಂತೆ "ಎಡರಡಸಿದ ವೇಳೆ ಕಡು ಧೈರ್ಯ'ವನ್ನು, ಎಂಥ ಸ್ಥಿತಿಯಲ್ಲಿಯೂ ದೇಹಿ ಎನಲೊಲ್ಲದಿರವನ್ನು ಹೊಂದಿ ಕ್ರಿಯಾಜನ್ಯ ವಸ್ತುವನ್ನೂ ಪ್ರಸಾದವನ್ನಾಗಿ ಮಾಡಿ ಸ್ವೀಕರಿಸಿ ದಟ್ಟ ದಾರಿದ್ರ್ಯವನ್ನು ಗೆದ್ದು ಮೇಲೆದ್ದವರು. ಸ್ವತಃ ತಾವೇ ದಾರಿದ್ರ್ಯದ ಕೆಸರಿನಿಂದ ಕೊಡವಿಕೊಂಡು ಆನೆಯಂತೆ ಎದ್ದು ನಿಂತವರು, ಸ್ವಾಭಿಮಾನಿಗಳು, ಕ್ರಿಯಾಯೋಗಿಗಳು - ಏನೆಲ್ಲವನ್ನೂ ಹೇಳಬಹುದು. ಇದು ಕೇವಲ ಅಭಿಮಾನವಾದ್ದರಿಂದ, ನನ್ನ ತಾಯಿಯೆಂದು ತಾಯಿಯ ಮೇಲ್ಮೆಯನ್ನು ಲೋಕಕ್ಕೆ ಪರಿಚಯಿಸಹೊರಟಿರುವ ಮಾತಲ್ಲ. ಇಂಥ ನಡೆ ಎಲ್ಲೇ ಕಂಡರೂ ಅದರ ಬಗೆಗೆ ಪೂಜ್ಯಭಾವ ತೋರಿಸುವ ಸ್ವಭಾವ ನನ್ನದು. ನನ್ನ ಹಳ್ಳಿಯ ಕೆಲವು ಏನೂ ಓದದ ಮಹಾಕ್ರಿಯಾಯೋಗಿಗಳನ್ನು ಕಂಡಿದ್ದೇನೆ. ಅವರ ಕ್ರಿಯಾಯೋಗದ ಬಗೆಗೆ ಇಂದಿಗೂ ನನಗೆ ಪೂಜ್ಯತೆಯಿದೆ.

ಒಮ್ಮೆ ನನ್ನ ತಾಯಿ ಬೆಳೆಯಾಗಿ ನಿಂತ ಹೊಲಕ್ಕೆ ಹೋಗಿ ನಿಂತು ನೋಡಿ ಅಳುತ್ತ "ವರ್ಷಗಟ್ಲೆ ಮಕ್ಳುಮರಿ ಏನ್ ತಿನ್ನಬೇಕೇ ನಮ್ಮವ್ವಾ ಭೂಮಿತಾಯಿ, ಯಾಕವ್ವಾ ನಮ್ಮ ಮ್ಯಾಲಿಷ್ಟು ಸೆಟಗೊಂಡೇ ನಮ್ಮವ್ವಾ, ನಿನಗೇನ್ಕಡ್ಮಿ ಮಾಡಿದ್ವಿ ಹೇಳು" ಎಂದು ಭೂಮಿಯೊಡನೆ ಮಾತಾಡುತ್ತ ತನ್ನ ಅಳಲು ತೋಡಿಕೊಳ್ಳುತ್ತ ಕೆಲಹೊತ್ತು ಕುಳಿತೆದ್ದು, ಅಲ್ಲಿನ ಸ್ವಲ್ಪ ಮೇವು ಬಳಿದುಕೊಂಡು ಹೊರೆಕಟ್ಟಿ ಹೊತ್ತು, "ಬೇಗಬೇಗ ದೊಡ್ಡವ್ನಾಗಿ ಸಾಲಿ ಓದಿ, ನಮ್ಮೀ ಕಷ್ಟಾ ಯಾವಾಗ ಕಳೀತೀದ್ಯೋ ಏನೋ! ನೀನೆ ದೊಡ್ಮಗ" ಎಂದು ಅನ್ನುತ್ತ ಅವರ ತಂದೆ-ತಾಯಿಗಳ ಬಡತನದ ಕಥೆ ಹೇಳುತ್ತ ಮನೆಗೆ ಬರುವಾಗ ನಾನೂ ಅಳುತ್ತಲೇ ಬಂದಿದ್ದೆ. ಮನುಷ್ಯನ ಯೋಗ್ಯತೆಯನ್ನು ಅವನು ಓದಿರಲಿ ಓದದಿರಲಿ ಅವರ ಭಾವನೆಯ ಮೇಲೆ ಯಾವ ಮುದ್ರೆಯನ್ನೊತ್ತಿ ಜೀವಿಸುತ್ತಿದ್ದರೆಂಬುದರ ಮೇಲೆ ಅವರ ಯೋಗ್ಯತೆಯನ್ನು ಅಳೆಯಬೇಕು, ಅಲ್ಲವೇ? ದಾರಿದ್ರ್ಯದ ಬಗೆಗಿದ್ದ ಆ ನನ್ನ ಕ್ರೋಧವೇ ನನ್ನ ಕ್ರಿಯೆಯಾಗಿ ಎಂದಿನಿಂದಲೂ ನನಗೆ ಕ್ರಿಯೆಯ ಬಗೆಗೆ ಬಹಳ ಉತ್ಸಾಹವನ್ನೂ, ಮಮತೆಯನ್ನೂ ಕಲಿಸಿತ್ತು. ನನ್ನಿಂದ ಯಾವುದು ಸಾಧ್ಯವಿಲ್ಲ! ಎಂಬ ಆತ್ಮಪ್ರತ್ಯಯ ಅಧಿಕವಾದುದು ಈ ನಮ್ಮ ತಂದೆ-ತಾಯಿ-ಮನೆಯ ಎಲ್ಲ ಬಳಗದ ಬವಣೆಯನ್ನು ಕಂಡು. ಅಂತೆಯೇ ಒಂಬತ್ತು ರೂಪಾಯಿ ಸಂಬಳದ ಒಂದು ಪ್ರಾಥಮಿಕ ಶಾಲಾ ಶಿಕ್ಷಕನ ಸ್ಥಾನದಲ್ಲಿ ಕುಳಿತು ನಾನು ಆಗ ಸಾಧಿಸಿದ್ದು ಬಹಳ. ಆ ನನ್ನ ಸಾಧನೆಯ ಗುಟ್ಟೇ ಉತ್ತರೋತ್ತರ ಎಲ್ಲ ಕಡೆಗೂ ಯಶಸ್ಸಿನಿಂದ ಜಯಭೇರಿ ಬಾರಿಸಿಕೊಂಡು, ಪಂಡಿತ ಪರೀಕ್ಷೆಯಲ್ಲಿ ಹಿಂದೆ ಬ್ರಾಹ್ಮಣರಲ್ಲದ ಯಾರೊಬ್ಬರೂ ಗಳಿಸದಿದ್ದ ಪ್ರಥಮ ದರ್ಜೆಯ ದ್ವಿತೀಯ ಸ್ಥಾನದ ತೇರ್ಗಡೆಯ ಫಲಿತಾಂಶ ಪಡೆದೆ. ಆ ಕಾಲದಲ್ಲಿ ಈ ಸಾಧನೆ ಬಹು ದೊಡ್ಡದಾಗಿತ್ತು. ಏಕೆಂದರೆ ಯಾವ ಅನುಕೂಲಗಳೂ ನನಗೆ ಮನೆಯಿಂದ ಸಿಗಲಿಲ್ಲ. ಅವನ್ನೆಲ್ಲ ನಾನೇ ಕಲ್ಪಿಸಿಕೊಂಡು ಮನೆಗೂ ಸಾಧ್ಯವಾದಷ್ಟು ಧನಸಹಾಯ ಮಾಡುತ್ತ, ನನ್ನ ಬಂಧುಬಳಗ ಅಣ್ಣ ತಮ್ಮಂದಿರ ಯೋಗಕ್ಷೇಮ ನೋಡುತ್ತ ಅವರನ್ನೆಲ್ಲ ಮೇಲಕ್ಕೆ ತಳ್ಳುತ್ತ, ನಾನೂ ಮೇಲಕ್ಕೇರಿದ್ದೇ ನನ್ನ ಜೀವನದ ಇತಿಹಾಸವಾಗಿದೆ. ಗೌರವವಾಗಿ ಮನೆಯವರು ಎರಡು ಹೊತ್ತು ಊಟ ಮಾಡುವ ಸ್ಥಿತಿಯನ್ನು ಕಂಡಾಗ ನನಗಾಗುತ್ತಿದ್ದ ಸಂತೋಷದ ವಿಚಾರವನ್ನು ವರ್ಣಿಸಲು ಈಗಲೂ ನನಗೆ ಶಬ್ದಗಳೇ ಸಾಲವು.

ಇಷ್ಟೆಲ್ಲ ನನ್ನ ಓದಿನ ಅಧ್ಯಾಯ ಮುಗಿಸಿ ಟ್ರೈನಿಂಗ್ ಕಾಲೇಜಿನಿಂದ ರಿಲೀವ್ ಚೀಟಿ ಪಡೆದು ಗಂಟುಮೂಟೆ ಕಟ್ಟಿಕೊಂಡು ನನ್ನ ಹೆಂಡತಿಯನ್ನು ಕರೆದುಕೊಂಡು ಸಿದ್ಧಗಂಗಾಕ್ಷೇತ್ರಕ್ಕೆ

ಬಂದುಬಿಟ್ಟೆ. ಇಷ್ಟರಲ್ಲಿ ನನ್ನ ಕೆಲಸದ ಮೊದಲಿನ ಊರಾದ ತೊಂಡಿಗೆರೆಯಲ್ಲಿದ್ದ ಸ್ಥಾನ (ಲೀನ್) ಪಾವಗಡ ತಾಲೂಕಿನ ದೊಣ್ಣಸಮುದ್ರದ ಮಿಡಲ್ ಸ್ಕೂಲಿಗೆ ವರ್ಗಾವಣೆಗೊಂಡಿತ್ತು. ಅಲ್ಲಿಗೆ ಹೋಗಿ ಡ್ಯೂಟಿ ರಿಫೋರ್ಟ್ ಮಾಡಿಕೊಂಡು ಎರಡು ಮೂರು ದಿನವಿದ್ದು ಸಿದ್ಧಗಂಗೆಗೆ ಬಂದು ತುಮಕೂರು ಡಿಸ್ಟ್ರಿಕ್ಟ್ ಎಜ್ಯುಕೇಷನಲ್ ಆಫೀಸರ್ (DEO) ಅವರನ್ನು ಕಂಡು ನಾನು "ದೊಣ್ಣಸಮುದ್ರದಲ್ಲಿ ಕೆಲಸ ಮಾಡಲು ಒಪ್ಪುವುದಿಲ್ಲ. ಒಂದು ಊರಿನಿಂದ ಸರಕಾರದ ಡೆಪ್ಯುಟೇಷನ್ ಮೇರೆಗೆ ಟ್ರೈನಿಂಗಿಗೆ ಹೋದರೆ ಅವರ ಮೊದಲಿನ ಊರಿನಿಂದ ಬೇರೆಡೆಗೆ ಲೀನ್ ಬದಲಾಯಿಸಬಾರದೆಂಬ ಸರಕಾರದ ನಿಯಮವೇ ಇರುವಾಗ ನನ್ನನ್ನು ನೀವು ಪಾವಗಡ ತಾಲೂಕಿನ ದೂರದ ಒಂದು ಊರಿಗೆ ಹೀಗೆ ನನ್ನ ಲೀನ್ ಬದಲಾಯಿಸಿದ್ದು ಸರಿಯೇ?" ಎಂದೆ. ಅವರ ಸಿಟ್ಟು ನೆತ್ತಿಗೇರಿ ಹೋಯಿತು. "ಹೌದ್ರಿ. ಹಾಕಿದಲ್ಲಿಗೆ ಹೋಗಬೇಕು. ಡಿಪಾರ್ಟ್‌ಮೆಂಟಿನ ಅನುಕೂಲದ ದೃಷ್ಟಿಯಿಂದ ಹಾಗೆ ಬದಲಾವಣೆ ಮಾಡಲೇಬೇಕಾಗುತ್ತದೆ..." ಎಂದು ಏರಿದ ದನಿಯಲ್ಲಿ ನನ್ನನ್ನು ಬೆದರಿಸಿಬಿಟ್ಟರು. ಆ ಬೆದರಿಕೆಗೆ ನಾನೇನೂ ಹೆದರಲಿಲ್ಲ. ಏಕೆಂದರೆ ನನಗೆ ಶ್ರೀ ಸಿದ್ಧಗಂಗಾ ಶ್ರೀಗಳವರ ಬೆಂಬಲದ ಬಲವಿದ್ದುದೇ ಕಾರಣವಾಗಿತ್ತು. ಅಷ್ಟರಲ್ಲಿ ಡಿ.ಇ.ಓ. ಅವರಿಗೆ ಯಾರೋ ಇನ್ನೊಬ್ಬ ಕೆಳಗಿನ ಆಫೀಸರರು "ನೀವು ಸ್ವಲ್ಪ ಹೊತ್ತು ಹೊರಗೆ ಇರ್ರಿ. ಆಮೇಲೆ ಕರೆಸಿಕೊಳ್ಳುತ್ತೇವೆ" ಎಂದು ಹೇಳಿ ಹೊರಗೆ ಕಳಿಸಿದರು. ನಾನು ಹೊರಗೆ ಬಂದು ಕುಳಿತೆ. ಬಹುಶಃ ಅವರು ಡಿ.ಇ.ಓ. ಅವರಿಗೆ ನನ್ನ ಬಗೆಗೆ ಏನು ಹೇಳಿ ಹೆದರಿಸಿದರೋ ಗೊತ್ತಿಲ್ಲ. ಸ್ವಲ್ಪ ಹೊತ್ತಿನ ಮೇಲೆ ನನ್ನನ್ನು ಕರೆಸಿ "ನಿಮಗೆ ಯಾವ ಯಾವ ಊರುಗಳಲ್ಲಿ ಕೆಲಸ ಮಾಡಲು ಇಷ್ಟ" ಎಂದು ನನ್ನನ್ನೇ ಕೇಳಿದರು. ನಾನು ಸಿದ್ಧಗಂಗೆಗೆ ಸಮೀಪದಲ್ಲಿರುವ ದೇವರಾಯಪಟ್ಟಣಕ್ಕೆ ಹಾಕಿಕೊಟ್ಟರೆ ಅನುಕೂಲ, ಇಲ್ಲದಿದ್ದರೆ ಮೊದಲು ನಾನಿದ್ದ ತೊಂಡಿಗೆರೆಗೆ ಹಾಕಿಕೊಡಿ" ಎಂದುಬಿಟ್ಟೆ. "ನಾಳೆ ಬನ್ನಿ ಆರ್ಡರ್ ಕೈಗೇ ಕೊಡುತ್ತೇವೆ. ತಕ್ಕೊಂಡು ಹೋಗಿ ಡ್ಯೂಟಿಗೆ ಜಾಯಿನ್ ಆಗಿ" ಎಂದು ಹೇಳಿ ಕಳಿಸಿದರು. ಮರುದಿನ ಹೋದೆ. ದೇವರಾಯಪಟ್ಟಣ ಪ್ರೈಮರಿ ಸ್ಕೂಲಿನ ಹೆಡ್‌ಮಾಸ್ಟರ್ ಕೆಲಸಕ್ಕೆ ಹೋಗಲು ಆರ್ಡರನ್ನು ಕೈಗೆ ಕೊಟ್ಟು ಕಳಿಸಿದರು. ಆಗ ನನ್ನ ಪ್ರಭಾವ ಅಷ್ಟರಮಟ್ಟಿಗೆ ಬೆಳೆದುಹೋಗಿತ್ತು. ಡಿ.ಇ.ಓ. ಅವರನ್ನು ಅವರ ಕೆಳಗಿನ ಅಧಿಕಾರಿ ಹೆದರಿಸಿದ್ದನೆಂದು ನನಗೆ ಆಮೇಲೆ ಗೊತ್ತಾಯಿತು. ನಾನು ಸಿದ್ಧಗಂಗಾ ಶ್ರೀಗಳವರಿಗೆ ಬಹಳ ಬೇಕಾದವನೆಂದೂ, ಪ್ರಚಂಡ ವ್ಯಕ್ತಿಯೆಂದೂ ಹೆದರಿಸಿ ಮುಂದೆ ಇವರು ಇಷ್ಟಕ್ಕೆ ಕೈಬಿಡದೆ ಡಿ.ಪಿ.ಐ. ಅವರವರೆಗೂ ಅಪೀಲು ಹೋಗಬಹುದೆಂದೂ ಹೇಳಿದ್ದರ ಮೇರೆಗೆ ಡಿ.ಇ.ಓ. ಇದೆಲ್ಲಿಯ ತರ್ಲೆ ಕೆಲಸ ಎಂದುಕೊಂಡು ನಾನು ಕೇಳಿದ ದೇವರಾಯಪಟ್ಟಣ ಶಾಲೆಯ ಹೆಡ್‌ಮಾಸ್ಟರ್ ಆಗಿ ಆರ್ಡರ್ ಮಾಡಿಬಿಟ್ಟರಂತೆ. ಪಂಡಿತ ಪರೀಕ್ಷೆ ಮಾಡಿಕೊಂಡು ಬಂದವನಾದ್ದರಿಂದ ಅಸಿಸ್ಟಂಟ್ ಮಾಸ್ಟರ್ ಆಗಿ ಹಾಕಲೂ ಅವನಿಗೆ ಸಾಧ್ಯವಾಗಲಿಲ್ಲ.

### *ದೇವರಾಯಪಟ್ಟಣದಲ್ಲಿ ಉಪಾಧ್ಯಾಯನಾಗಿ*

ತುಮಕೂರಿನಿಂದ ಆರ್ಡರ್ ತೆಗೆದುಕೊಂಡು ನಾನು ನೇರವಾಗಿ ದೇವರಾಯಪಟ್ಟಣ ಸ್ಕೂಲಿಗೇ ಬಂದುಬಿಟ್ಟೆ. ದೇವರಾಯಪಟ್ಟಣವಾಗಲಿ, ಅಲ್ಲಿನ ಶಾಲೆಯಾಗಲಿ ನನಗೆ ಹೊಸದೇನೂ ಆಗಿರಲಿಲ್ಲ. ಸಿದ್ಧಗಂಗೆಯ ಸಂಪರ್ಕ ಹೊಂದಿದ್ದ 1945ರಿಂದಲೂ ನನಗೆ ಆ

ಊರು, ಊರಿನ ಜನ, ಅಲ್ಲಿನ ಉಪಾಧ್ಯಾಯರು ಎಲ್ಲರೂ ಪರಿಚಿತರೇ, ವಿಶ್ವಾಸಿಗಳೇ. ಅಷ್ಟು ಹೊತ್ತಿಗಾಗಲೇ ಆ ಊರಲ್ಲಿ ಎರಡೂ ಮೂರು ಸಲ ಶಿವಕಥೆ, ಉಪನ್ಯಾಸ ಇತ್ಯಾದಿ ಕಾರ್ಯಕ್ರಮಗಳಿಗೆ ಬಂದು ಊರಿನವರ ಮೇಲೆಲ್ಲ ಪ್ರಭಾವ ಬೀರಿಬಿಟ್ಟಿದ್ದೆ. ಈಗ ನಾನು ಆ ಊರಿನ ಶಾಲೆಯ ಹೆಡ್‌ಮಾಸ್ಟರ್ ಆಗಿ ಬಂದರೆಂಬ ಸುದ್ದಿ ಊರಿನವರಿಗೆ ಗೊತ್ತಾದುದೇ ತಡ ಎಲ್ಲರೂ ಅತ್ಯಂತ ಉತ್ಸಾಹದಿಂದ ನನ್ನನ್ನು ಸ್ವಾಗತಿಸಿದರು. ಆದರೆ ಇದುವರೆಗೆ ಅಲ್ಲಿ ಹೆಡ್‌ಮಾಸ್ತರ್ ಆಗಿ ಕೆಲಸ ಮಾಡುತ್ತಿದ್ದ ಜೀರಯ್ಯ ಎಂಬ ಹಳೇ ಹುಲಿಗೆ ನಾನು ಬಂದದ್ದು ನುಂಗಲಾರದ ತುತ್ತಾಗಿ ಪರಿಣಮಿಸಿತು. ನಾನು ಆರ್ಡರ್ ತಂದು ಕೈಗೆ ಕೊಟ್ಟುದೇ ತಡ ಮುಖ ಕಪ್ಪಿಟ್ಟು, ಮುಖ ಮುಚ್ಚಿ ಅಳುವುದಕ್ಕೇ ಪ್ರಾರಂಭಿಸಿಬಿಟ್ಟ. ನನ್ನ ಸಂಗಡ ಆ ಊರಿನ ಮೂರುನಾಲ್ಕು ಜನ ಪ್ರತಿಷ್ಠಿತರೂ ಬಂದುಬಿಟ್ಟಿದ್ದರು. ಅವರ ಮುಂದೆ "ಅಯ್ಯೋ. ಈ ಊರಿನಲ್ಲಿ ಕಳೆದ ಹತ್ತು ಹದಿನೈದು ವರ್ಷಗಳಿಂದ ಹೆಡ್‌ಮಾಸ್ಟರ್ ಕೆಲಸ ಮಾಡಿದ್ದೆ. ಇನ್ನೊಂದು ವರ್ಷದಲ್ಲಿ ನನಗೆ ನಿವೃತ್ತಿಯಾಗುತ್ತಿದ್ದಂತೆ ಅಸಿಸ್ಟೆಂಟ್ ಮಾಸ್ಟರ್ ಆಗಿ ಇಲಾಖೆ ಹೀಗೆ ಮಾಡಬಹುದೇ?" ಎಂದು ಅವನ ವ್ಯಥೆ. ಅದನ್ನು ಬಾಯಿಬಿಟ್ಟೂ ಕೂಡ ಅಂದುಬಿಟ್ಟ. ಆಗ ನಾನು "ಜೀರಯ್ಯನವರೇ, ನಾನು ನಿಮ್ಮನ್ನು ನನ್ನ ಕೈಕೆಳಗಿನ ಉಪಾಧ್ಯಾಯರೆಂದು ಪರಿಗಣಿಸಿ ಇಲ್ಲಿ ಕೆಲಸ ಮಾಡಲು ಬಂದಿಲ್ಲ. ಇನ್ನು ಕೆಲವೇ ದಿನಗಳಲ್ಲಿ ನನಗೆ ಹೈಸ್ಕೂಲಿಗೆ ಇಲ್ಲಿಂದ ಎತ್ತುತ್ತಾರೆ. ಅಲ್ಲಿಯವರೆಗೆ ನಾನು ಕೆಲಸ ಮಾಡಲು ಒಂದು ಸ್ಥಾನ ತೋರಿಸಬೇಕಲ್ಲವೆ! ಅದಕ್ಕಾಗಿ ಇಲ್ಲಿಗೆ ಹಾಕಿದ್ದಾರೆ. ನೀವೇ ಹೆಡ್‌ಮಾಸ್ಟರ್ ಕೆಲಸ ಮಾಡಿಕೊಂಡಿರ್ರಿ. ಈ ಹೆಡ್‌ಮಾಸ್ತರ್ ಕೆಲಸ ಕಟ್ಟಿಕೊಂಡು ನಾನೇನು ಮಾಡಲಿ! ನನ್ನ ಪಾಡಿಗೆ ನಾನು ನಿಮ್ಮ ಮಾರ್ಗದರ್ಶನದಲ್ಲಿ ಕೆಲಸ ಮಾಡಿಕೊಂಡಿರುತ್ತೇನೆ, ಆಡಳಿತ ವೆಲ್ಲವನ್ನೂ ನೀವೇ ಮಾಡಿ. ನಾನು ಮಾತ್ರ ಸಹಿ ಮಾಡುವ ಕೆಲಸ ಮಾಡಿಕೊಂಡಿರುತ್ತೇನೆ" ಇತ್ಯಾದಿ ಏನೇನೋ ಹೇಳಿದೆ. ಆದರೂ ಅವನು ತನ್ನ ಮನದ ಉಮ್ಮಳವನ್ನು ಹತ್ತಿಕ್ಕಿಕೊಳ್ಳುವ ಸೌಜನ್ಯವನ್ನು ತೋರಿಸದೆ, ನನಗೆ ಚಾರ್ಜು ಕೊಟ್ಟು ಹೊರಟುಹೋಗಿಬಿಟ್ಟ. ಹೋದವನು ಡಿ.ಇ.ಓ. ಅವರನ್ನು ಕಂಡು ಏನೇನೋ ಹೇಳಿ ಅತ್ತದ್ದೂ ಅತ್ತದ್ದೇ. ಅದಕ್ಕೆ ಅವರು ಅವನಿಗೆ ಯಾವ ಸೌಲತ್ತನ್ನೂ ಕೊಡದೆ ಬೆದರಿಸಿ ಕಳಿಸಿಬಿಟ್ಟರಂತೆ. ಅವನು "ನಾನು ಇಷ್ಟುದಿನ ಹೆಡ್ ಮಾಸ್ತರ್ ಆಗಿ ಕೆಲಸ ಮಾಡಿ ನಿನ್ನೆ ಮೊನ್ನೆಯ ಈ ಹುಡುಗನ ಕೈಕೆಳಗೆ ಕೆಲಸ ಮಾಡಲೇ? ಪಂಡಿತ ಪರೀಕ್ಷೆ ಮಾಡಿಕೊಂಡು ಬಂದರೇನಂತೆ! ಸರ್ವೀಸ್ ಮುಖ್ಯವೋ, ಅರ್ಹತೆ ಮುಖ್ಯವೋ?" ಇತ್ಯಾದಿ ಕಂಡ ಕಂಡವರ ಮುಂದೆಲ್ಲ ಗಂಟಲು ಹರಿದುಕೊಂಡು ತನ್ನಷ್ಟಕ್ಕೆ ತಾನು ಸುಮ್ಮನಾಗಿ ಪುನಃ ದೇವರಾಯಪಟ್ಟಣಕ್ಕೆ ಬರಲೇ ಇಲ್ಲ. ಅವನಿಗೆ ದೇವರಾಯಪಟ್ಟಣಕ್ಕೆ ಬರುವುದಕ್ಕೆ ಅವಮಾನವಾಗಿ ಬಿಟ್ಟಿತಂತೆ. ಹೀಗಿದೆ ನಮ್ಮ ಜನಗಳ ಸೇವಾಬುದ್ಧಿ.

ಜೀರಯ್ಯ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆ ಮಾಡಿಕೊಂಡು ಆಗಿದ್ದ ಒಂದು ವರ್ಷದ್ದೋ ಎರಡು ವರ್ಷದ್ದೋ ಟ್ರೈನಿಂಗ್ ಮಾಡಿಕೊಂಡು ಅನೇಕ ಊರುಗಳಲ್ಲಿ ಕೆಲಸ ಮಾಡಿ ತನ್ನ ಸ್ವಂತ ಊರಾದ ತುಮಕೂರಿನ ಸಮೀಪದ ಈ ದೇವರಾಯಪಟ್ಟಣಕ್ಕೆ ವರ್ಗ ಮಾಡಿಸಿಕೊಂಡು ಇಲ್ಲಿ 15 ವರ್ಷಗಳಿಂದ ಕೆಲಸ ಮಾಡಿ ಇಲ್ಲಿಂದಲೇ ನಿವೃತ್ತಿ ಪಡೆಯಬೇಕೆಂದು ಇಚ್ಛೆಸಿದ್ದನಂತೆ. ಹಳೆಗಾಲದ ಒಂದು ಪೇಟಾ, ಕ್ಲೋಸ್ ಕಾಲರ್ ಕೋಟು, ಷರ್ಟ್ ಹಾಕಿಕೊಂಡು ಪಂಚೆ ಉಟ್ಟುಕೊಂಡು ಕೈಯಲ್ಲಿ ಒಂದು ಚಬುಕಿ ಹಿಡಿದುಕೊಂಡು

ಶಾಲೆಯ ಸುತ್ತುಮುತ್ತು ಸುತ್ತಿಕೊಂಡು, ಊರ ಜನಗಳೊಡನೆ ಲೀಲಾಜಾಲವಾಗಿ ಮಾತನಾಡಿಕೊಂಡು ಉಪಾಧ್ಯಾಯರನ್ನು ಹೆದರಿಸಿಕೊಂಡು ಒಂದು ದಿನವೂ ಪಾಠವನ್ನು ಮಾಡದೆ ಕಾಲ ತಳ್ಳಿಕೊಂಡು ಬಂದ ಹಳ್ಳಿಯ ಶಾಲೆಯ ಹಳೆಗಾಲದ ಉಪಾಧ್ಯಾಯ. ಇಲ್ಲಿನ ಶಾಲೆಯಲ್ಲಿ ಆರೇಳು ಜನ ಉಪಾಧ್ಯಾಯರು, ಅವರಲ್ಲಿ ಬಹಳಷ್ಟು ಜನ ಎರಡು ಮೂರು ವರ್ಷ ಸರ್ವೀಸ್ ಮಾಡಿದ ಎಸ್.ಎಸ್.ಎಲ್.ಸಿ. ಹುಡುಗರು. ಒಬ್ಬನೇ ರಂಗಪ್ಪ ಎಂಬುವನು 18-20 ವರ್ಷ ಸರ್ವೀಸ್ ಮಾಡಿದ್ದ ಅನುಭವಿ ಉಪಾಧ್ಯಾಯ. ಜೀರಯ್ಯ ಇವರನ್ನೆಲ್ಲ ತನ್ನ ಹೆಡ್‌ಮಾಸ್ತರ್ ಹುದ್ದೆಯ ದರ್ಪದಿಂದ ಹೆದರಿಸಿಕೊಂಡುಬಿಟ್ಟಿದ್ದ. ಮಾತೆತ್ತಿದರೆ, ರಿಪೋರ್ಟ್ ಮಾಡುತ್ತೇನೆ, ಇನ್‌ಸ್ಪೆಕ್ಟರಿಗೆ ಹೇಳುತ್ತೇನೆ. ಡಿ.ಇ.ಓ.ಗೆ ಹೇಳುತ್ತೇನೆ ಅಂದುಕೊಂಡು ಎಲ್ಲರನ್ನೂ ಹೆದರಿಸಿಕೊಂಡಿದ್ದ. ಇವನ ಒಣ ದರ್ಪಕ್ಕೆ ಹೆದರಿ ಉಪಾಧ್ಯಾಯರೆಲ್ಲ ಬೇಸತ್ತು ಹೋಗಿದ್ದರು. ಕಣಕಟ್ಟೆಯ ಸುಗ್ಗಿ ಬಂದರೆ ಹಿಂದಿನ ಕಾಲದ ಗಾವಠಿ ಶಾಲಾ ಉಪಾಧ್ಯಾಯರಂತೆ (ಕೂಲಿಮಠದ ಉಪಾಧ್ಯಾಯರಂತೆ) ಒಕ್ಕಲು ಮಾಡುವಾಗ ಕಣಗಳಿಗೆ ಹೋಗಿ ರಾಗಿ. ಹುರುಳಿ, ಬತ್ತ ಇವನ್ನೆಲ್ಲ ಎತ್ತಿ ಊರಿಗೆ ಸಾಗಿಸುತ್ತಿದ್ದ. ತರಕಾರಿ ಬೆಳೆಯುವವರ ಮಕ್ಕಳನ್ನು ಗುರುತಿಸಿಕೊಂಡು, ನಿಮ್ಮ ಯಾವ ಯಾವ ಹೊಲಗಳಲ್ಲಿ ಏನೇನು ಬೆಳೆಯುತ್ತಿದ್ದೀರಿ? ತರಕಾರಿ ಯಾವ ತೋಟದಲ್ಲಿದೆ? ಗುರುಗಳಿಗೆ ತರಕಾರಿ ತರಲೇ ಬಾರದೇನು? ಇತ್ಯಾದಿ ನಗುನಗುತ್ತಲೇ ಹೇಳಿ, ಅವರ ಬೆನ್ನು ಚಪ್ಪರಿಸಿ ಮುದ್ದು ಮಾಡಿ ತರಕಾರಿ ಗಿಟ್ಟಿಸಿಕೊಂಡು ಸೈಕಲ್ಲಿಗೇರಿಸಿಕೊಂಡು ಹೋಗುತ್ತಿದ್ದ. ಮಕ್ಕಳಿಗೆ ಇಷ್ಟೇ ಸಾಕಲ್ಲವೆ? ಮನೆಯಲ್ಲಿ ಕಾಡಿಬೇಡಿ ಮೂಲಂಗಿ, ಬದನೆ, ಬೆಂಡೆ ಏನೆಲ್ಲವನ್ನೂ ಅವು ಉತ್ಸಾಹದಿಂದ ತಂದು ತಂದು ತುರುಕುತ್ತಿದ್ದವು. ಅವನ ಮನೆಯ ಉಪಯೋಗಕ್ಕಿಂತ ಹೆಚ್ಚು ತರಕಾರಿ ಗಿಟ್ಟಿಸಿಕೊಂಡು ಅಕ್ಕಪಕ್ಕದ ಮನೆಗಳವರಿಗೆ ಕಡಿಮೆ ಬೆಲೆಯಲ್ಲಿ ಮಾರಿ ಸ್ವಲ್ಪ ಪುಡಿಗಾಸನ್ನೂ ಕೂಡ ಸಂಪಾದಿಸುತ್ತಿದ್ದನಂತೆ. ಒಮ್ಮೊಮ್ಮೆ ಸೈಕಲ್ ತಳ್ಳಿಕೊಂಡು ತರಕಾರಿ ತೋಟಗಳಿಗೂ ನುಗ್ಗಿ ಅಲ್ಲಿದ್ದ ಹೆಣ್ಣುಮಕ್ಕಳಿಗೋ, ಗಂಡಸರಿಗೋ ನಗುನಗುತ್ತಲೇ "ಏನು, ತರಕಾರಿ ಬೆಳೆದು ನೀವೊಬ್ಬರೇ ತಿನ್ನಬೇಕೋ. ನಿಮ್ಮ ಮಕ್ಕಳನ್ನು ಓದಿಸುವ ಮೇಷ್ಟ್ರು ತರಕಾರಿ ಕೊಳ್ಳಬೇಕೋ?" ಇತ್ಯಾದಿ ಮಾತನಾಡಿ ಅಲ್ಲಿಂದಲೇ ಫ್ರೆಷ್ ತರಕಾರಿ ಹೊತ್ತುಕೊಂಡು ಹೋಗುತ್ತಿದ್ದ. ಒಂದು ದಿನವೂ ಪಾಠಮಾಡದೆ ಒಳ್ಳೆಯ ದರ್ಪದಿಂದ ಸಾಲೆ ನಡೆಸಿಕೊಂಡು ಹೋಗುವ ಉಪಾಧ್ಯಾಯನೆಂಬ ಕೀರ್ತಿಯನ್ನು ಗಳಿಸಿದ್ದ. ಯಾವ ಕೆಲಸವನ್ನೂ ಮಾಡದೆ ಒಳ್ಳೆಯ ಉಪಾಧ್ಯಾಯನೆನ್ನಿಸಿಕೊಳ್ಳುವುದೂ, ಆದರ್ಶಶಿಕ್ಷಕನೆಂದೂ ರಾಷ್ಟ್ರ ಅಥವಾ ರಾಜ್ಯಪ್ರಶಸ್ತಿ ಗಳಿಸುವುದೂ ಒಮ್ಮೊಮ್ಮೆ ಉಂಟು. ಅದು ಆ ಉಪಾಧ್ಯಾಯನ ಜಾಣಾಕ್ಷತನವೇ ಹೊರತು ಮತ್ತೇನೂ ಅಲ್ಲ. ಇಂಥ ಜಾಣಾಕ್ಷ ಉಪಾಧ್ಯಾಯರು ಇಲಾಖೆಯಲ್ಲಿ ಇರುವುದುಂಟು. ಇಂಥವರು ಏನೂ ಗೊತ್ತಿಲ್ಲದ ಸಮಾಜದ ಮಧ್ಯದಲ್ಲಿ ಅಲ್ಲೊಬ್ಬರು, ಇಲ್ಲೊಬ್ಬರು ಕಾಣಿಸಿಕೊಳ್ಳುತ್ತಾರೆ. ಅದೇನೇ ಇರಲಿ.

ನನ್ನನ್ನು ಹಾಲಿ ಅಲ್ಲಿದ್ದ ಏಳೆಂಟು ಜನ ಉಪಾಧ್ಯಾಯರು ತುಂಬು ಹೃದಯದಿಂದ ಸ್ವಾಗತಿಸಿದರು. ಅವರೆಲ್ಲರೂ ಒಂದಿಲ್ಲೊಂದು ರೀತಿಯಿಂದ ನನ್ನ ಹೆಸರು ಕೇಳಿದವರೇ ಆಗಿದ್ದರು. ಅವರಿಗೆ ಜೀರಯ್ಯನ ಕಟಿಕಟಿ ತಪ್ಪಿದರೆ ಸಾಕೆನಿಸಿತ್ತು. ತಾನು ಕೆಲಸ ಮಾಡದೆ ಗೌಡಿಕೆ ಮಾಡಿಕೊಂಡು ತಿರುಗುತ್ತ, ಇನ್ನೊಬ್ಬರನ್ನು ಕೆಲಸ ಮಾಡಿ, ಹಾಗೆ ಮಾಡಿ, ಹೀಗೆ ಮಾಡಿ ಎಂದು ಕಿರಿಕಿರಿಗೊಳಿಸುವ ಉಪಾಧ್ಯಾಯನನ್ನು ಯಾರೂ ಗೌರವಿಸುವುದಿಲ್ಲ.

ಊರಜನಕ್ಕೆ ಅದೊಂದೂ ಬೇಕಾಗುವುದಿಲ್ಲ, ಅವರಿಗೆ ಅವರ ಹೊಲವಾಯಿತು, ತೋಟ-ಗದ್ದೆಯಾಯಿತು. ಆ ಕಾಲದಲ್ಲಿ ಸಾಮಾನ್ಯವಾಗಿ ಉಪಾಧ್ಯಾಯರೆಂದರೆ ಗ್ರಾಮಾಂತರ ಪ್ರದೇಶಗಳಲ್ಲಿ ಗೌರವಭಾವ ಇತ್ತು. ಈಗಿನಷ್ಟು ರಾಜಕೀಯ ಜನಗಳಲ್ಲಿ ತುಂಬಿರಲಿಲ್ಲ. ಏಳೆಂಟು ಜನ ಉಪಾಧ್ಯಾಯರೆದುರಿಗೆ ಊರ ಜನರಿಂದ ಅಷ್ಟು ಇಷ್ಟು ಕಾಳುಕಡಿ ತರಕಾರಿ ಇತ್ಯಾದಿ ಗಿಟ್ಟಿಸಿಕೊಂಡು ಸೈಕಲ್ ಮೇಲೆ ಹೇರಿಕೊಂಡು ಹೋಗುವುದನ್ನು ಎಲ್ಲರೂ ಕಂಡದ್ದೇ ಆಗಿತ್ತು. ಎಂಥವನೇ ಆಗಲಿ ಇಂಥ ಸಂದರ್ಭಗಳು ಎದುರಾದಾಗ ಸಹಜವಾಗಿ ನಮಗೇಕೆ ಇಲ್ಲ. ನಾವು ಈ ಊರ ಉಪಾಧ್ಯಾಯರಲ್ಲವೋ! ಹೆಡ್ ಮಾಸ್ತರ್ ಹಣೆಪಟ್ಟಿ ಹಚ್ಚಿಕೊಂಡು ಶಾಲೆಯನ್ನು ಒಬ್ಬನೇ ತಲೆಮೇಲೆ ಹೊತ್ತುಕೊಂಡವನಂತೆ ಮೆರೆದಾಡಿ ಊರವರು ಕೊಟ್ಟ ಈ ವಸ್ತುಗಳಲ್ಲಿ ನಮಗೆ ಹಿಸ್ಸೆ ಇಲ್ಲವೋ ಈ ಭಾವನೆ ಬೆಳೆಯುವುದು ಮನುಷ್ಯ ಸಹಜ ಪ್ರವೃತ್ತಿಯೇ. ಇದೆಲ್ಲವನ್ನೂ ಸಹಿಸಿಕೊಂಡಿದ್ದ ಆ ಉಪಾಧ್ಯಾಯರುಗಳು ಅವನು ರಿಲೀವ್ ಆಗಿಹೋದ ದಿನ ಒಂದು ಶನಿ ತೊಲಗಿತು ಎಂದುಕೊಂಡಿದ್ದಂತೂ ನಿಶ್ಚಯ. ಯಾರೂ ಸಂಪ್ರದಾಯದ ದೃಷ್ಟಿಯಿಂದಲಾದರೂ ಅವರಿಗೆ ಒಂದೂ ವೀಳ್ಯೆ ಕೊಡಲಿಲ್ಲ.

ನಾನು ಮರುದಿನ ಎಲ್ಲರನ್ನೂ ಮೀಟಿಂಗ್ ಕರೆದು ಕೂಡಿಸಿಕೊಂಡು ಶಾಲೆ, ಶಿಕ್ಷಣ, ಉಪಾಧ್ಯಾಯ, ಊರ ಸಂಬಂಧ, ಪೋಷಕ-ಬೋಧಕ ಕೂಟ ಏನೆಲ್ಲವನ್ನು ವಿಸ್ತಾರವಾಗಿ ಅವರೆದುರಿಗಿಟ್ಟು, "ನಾನು ಇಲ್ಲಿರುವುದು ಕೆಲ ತಿಂಗಳು ಮಾತ್ರ. ನೀವು ನಿಮ್ಮ ಸ್ಥಾನದಲ್ಲಿ ದೊಡ್ಡವರೇ. ಆದ್ದರಿಂದ ಜವಾಬ್ದಾರಿಯಿಂದ ನಿಮ್ಮ ನಿಮ್ಮ ಕೆಲಸ ಮಾಡಿಕೊಂಡು ಹೋಗಬೇಕು" ಎಂದು ಹೇಳಿ ಅವರೆಲ್ಲರಲ್ಲಿ ಹಿರಿಯನೆನಿಸಿದ್ದ ರಂಗಯ್ಯ ಎಂಬುವವರನ್ನು ಕರೆದು ನೀವು ಎಲ್ಲ ಶಾಲಾ ವ್ಯವಸ್ಥೆ, ಪತ್ರ ವ್ಯವಹಾರ, ಅಫೀಸ್ ಕೆಲಸ ನೋಡಿಕೊಳ್ಳಿ. ನನಗೆ ಒಂದೂ ಬೇಡ. ಮೇಲೆ ಕಳಿಸುವ ಕಾಗದಗಳಿಗೆ ಸಹಿ ಹಾಕುವ ಕೆಲಸ ನನ್ನದು. ನೀವೆಲ್ಲ ಆರಿಸಿಕೊಂಡು ಬಿಟ್ಟ ತರಗತಿ ನನಗೆ ಕೊಡಿ" ಎಂದು ಹೇಳಿದೆ. ಆಗ ಎಲ್ಲರ ಉತ್ಸಾಹ ಹೇಳತೀರದು. ನನಗೆ ಒಂದನೆಯ ತರಗತಿಯನ್ನೇ ಕೊಟ್ಟರು. ನಾನು ಒಂದನೇ ತರಗತಿಯಲ್ಲಿ ಪಾಠ-ಪ್ರವಚನ ಪ್ರಾರಂಭಿಸಿ ಆರೇಳು ತಿಂಗಳಲ್ಲಿ ಅತ್ಯುತ್ತಮ ಪ್ರಗತಿ ಸಾಧಿಸಿದೆ. ಅಷ್ಟೇ ಅಲ್ಲ, ಮಕ್ಕಳ ಮನಸ್ಸಿನ ಸೂಕ್ಷ್ಮ ಪದರುಗಳನ್ನು ಮನೋವಿಜ್ಞಾನಶಾಸ್ತ್ರದ ರೀತಿಯಿಂದ ಅರಿತುಕೊಳ್ಳಲು ಬಹಳಷ್ಟು ಪ್ರಯೋಜನವಾಯಿತು. ದಿನವೂ ಸಾಯಂಕಾಲ ಶಾಲೆ ಬಿಡುವ ಸಮಯದಲ್ಲಿ ಅರ್ಧಘಂಟೆ ಪ್ರದೋಚಿ ಹೇಳಿಸುವ ನನ್ನ ಹಳೆಗಾಲದ ಪ್ರಾಥಮಿಕ ಶಾಲಾ ಅನುಭವದ ಯಶಸ್ವೀ ಪ್ರಯೋಗ ಇಡೀ ಊರಿನವರ ಗಮನ ಸೆಳೆಯಿತು. ಒಂದೇ ತಿಂಗಳಲ್ಲಿ ಊರಿನ ಸಮಸ್ತರಿಗೂ ನನ್ನ ಶಕ್ತಿಯ ಅರಿವಾಯಿತು. ಶಾಲೆಯ ಹಿಂಭಾಗದಲ್ಲಿರುವ ಬೈಲಿನ ಸುತ್ತ ಊರವರ ಸಹಕಾರದಿಂದ ಬೇಲಿ ಹಾಕಿಸಿ ತೋಟ ಮಾಡಿ ಅಲ್ಲಿ ವಿವಿಧ ಗಿಡಗಳನ್ನು ಬೆಳೆಸಲು ಅನುಕೂಲ ಮಾಡಿದೆ. ಮಕ್ಕಳು ಅಲ್ಲಿ ಕೆಲಸ ಮಾಡುವುದರಲ್ಲಿ ಅತಿ ಉತ್ಸಾಹ ತೋರಿಸತೊಡಗಿದರು. ಉಪಾಧ್ಯಾಯರಿಗಾಗುವಷ್ಟು ತರಕಾರಿಯನ್ನು ಅಲ್ಲಿ ಬೆಳೆಯತೊಡಗಿದ್ದು ಎಲ್ಲರಿಗೂ ಹರ್ಷ ತಂದಿತು. ಅಲ್ಲದೆ ಮಕ್ಕಳಿಗೆ ಪ್ರಕೃತಿ ವೀಕ್ಷಣೆ, ಸಸ್ಯಗಳ ಜೀವನಗಳ ಬಗೆಗೆ ವಿವರಿಸಲು, ಜೇನುಹುಳುಗಳ ಜೀವನ ವಿಧಾನದ ಪ್ರಾತ್ಯಕ್ಷಿಕೆಗೆ ಇನ್ನೂ ಅನೇಕ ಬಗೆಯ ಶಿಕ್ಷಣದ ವಿಷಯಕ್ಕೆ ನಮ್ಮದೇ ಆದ ತೋಟದ ಬಹುಮುಖ ಪ್ರಯೋಜನವಾಯಿತು. ಈ ಕೆಲಸವನ್ನು ಎಲ್ಲ ಶಾಲೆಗಳಲ್ಲಿ ಎಲ್ಲ ಉಪಾಧ್ಯಾಯರೂ ಮಾಡಬಹುದು. ಆದರೆ ಊರವರ

ಸಹಕಾರವಿಲ್ಲದೆ ಈ ಕೆಲಸ ಮಾಡಲು ಶಕ್ಯವಿಲ್ಲ. ಇದಕ್ಕಾಗಿ ಬರುವ ಖರ್ಚು ವೆಚ್ಚಗಳನ್ನು ಪೂರೈಸಲು ಸರಕಾರದಿಂದ ಯಾವ ಪ್ರೋತ್ಸಾಹಧನವೂ ಸಿಗುತ್ತಿರಲಿಲ್ಲ. ಅದು ಇಲ್ಲವೆಂದು ಉಪಾಧ್ಯಾಯ ಸುಮ್ಮನೆ ಅಷ್ಟು ಇಷ್ಟು ಪಾಠ ಹೇಳಿ ಗಂಟೆ ಬಡಿದೊಡನೆ ಊರಿಗೆ ಓಡಿದರೆ ಶಿಕ್ಷಣಕ್ಷೇತ್ರದಲ್ಲಿ ಸಮರ್ಪಕ ಸೇವೆ ಮಾಡಿದಂತೆ ಆಗುವುದಿಲ್ಲ. ಇಂಥ ಸಂದರ್ಭದಲ್ಲಿ ತನ್ನ ವ್ಯಕ್ತಿತ್ವವನ್ನು ಊರಜನಗಳ ಸ್ನೇಹ, ಸಹಕಾರ, ಪ್ರೀತಿ, ವಿಶ್ವಾಸಗಳೊಡನೆ ಸಮೀಕರಿಸಿ ಅವರ ಸಹಕಾರಕ್ಕೆ ಯತ್ನಿಸಿದರೆ ಅದು ಸಾಧ್ಯವೆಂಬುದನ್ನು ನಾನು ಹಿಂದೆ ಹಿರೇಕಾಂಶಿಯ ಗಾವಠಿ ಶಾಲಾ ಮಾಸ್ತರನಾಗಿದ್ದಾಗಲೇ ಕಂಡುಕೊಂಡಿದ್ದೆ. ಈಗಲೂ ಆ ಪ್ರಯೋಗ ನನಗೆ ಯಶಸ್ಸು ತಂದುಕೊಟ್ಟಿತು. ಜನಗಳನ್ನು ಸ್ವಾರ್ಥದ ದೃಷ್ಟಿಯಿಂದ ಕಾಡಿ ಬೇಡಿ ಕೊಟ್ಟಷ್ಟನ್ನು ಗಂಟುಕಟ್ಟಿಕೊಂಡು ಊರಿಗೆ ಓಡುವುದು ದೊಡ್ಡದಲ್ಲ, ಮೊದಲು ಶಾಲೆಯ ಯೋಗಕ್ಷೇಮಕ್ಕಾಗಿ ಜನರ ಸಹಕಾರ ಪಡೆದು ಆಮೇಲೆ ಅವರೇ ಪ್ರೀತಿಯಿಂದ ಏನಾದರೂ ಕೊಟ್ಟರೆ ಅದನ್ನು ಒಯ್ಯಬಹುದಲ್ಲದೆ, ನಾವಾಗಿ ಯಾಚಿಸುವುದು ಭಂಡನತವಾಗುತ್ತದೆ. ನಮ್ಮ ಕ್ರಿಯೆ ಪ್ರಬಲವಾದರೆ ಹಳ್ಳಿಯ ಆ ಜನ ನಮಗೆ ಕರೆದುಕೊಟ್ಟು ಕಳಿಸುತ್ತಾರೆ. ನಾವಾಗಿ ಬೇಡುವ ಪ್ರಮೇಯವೇ ಬರುವುದಿಲ್ಲ. ಹಿಂದೆ ಹಿರೇಕಾಂಶಿಯಲ್ಲಿ ನಾನು ಯಾರನ್ನು ಏನನ್ನೂ ಬೇಡದೆಯೇ ಅವರು ಹರಗಿ ಬಿತ್ತಿ ಬೆಳೆದುಕೊಟ್ಟಿದ್ದು, ಪಟ್ಟಿಹಾಕಿಕೊಟ್ಟಿದ್ದು ಸೇರಿ ಇಪ್ಪತ್ತೈದು ಮೂವತ್ತು ಚೀಲ ಬತ್ತ ಪಡೆದುದುಂಟು. ಅದು ನಾವು ಬೇಡದೆ ಬರಬೇಕು. ಬೇಡದೆ ಬರುವುದು ಹೇಗೆ? ಎಂದು ಪ್ರಶ್ನಿಸಬಹುದು. ನಮ್ಮ ಕ್ರಿಯಾಶಕ್ತಿ ಪ್ರಬಲವಾದರೆ ಲೋಕ ಗುರುತಿಸಿ ನಮ್ಮ ನೆರವಿಗೆ ಬರುತ್ತದೆ. ಬಾರದಿದ್ದರೂ ನಮಗೆ ಕೊರಗು ಇರಬಾರದು. ನಮಗೆ ಸರಕಾರದವರೇ ಪ್ರತಿ ತಿಂಗಳು ಜೀವನಕ್ಕೆ ಕೊಟ್ಟೇ ಕೊಡುತ್ತಾದಲ್ಲವೆ? ಸರಕಾರಿ ಶಾಲೆಯಲ್ಲಿ ಕೆಲಸ ಮಾಡುವವರು ಅನ್ಯರ ಕೈ ನೋಡಲೇಬಾರದು. ತನ್ನ ಕ್ರಿಯೆಯಲ್ಲಿ ತನ್ಮಯನಾಗಬೇಕು. ಕ್ರಿಯಾತನ್ಮಯತೆ ನಮಗೆ ಯಶವನ್ನು ತಂದೇತರುತ್ತದೆ. ಬೇಡುವುದು ನಮ್ಮ ಲಘುತ್ವವನ್ನು ಸೂಚಿಸುತ್ತದೆ. ಜೀರಯ್ಯ ಹೀಗೆ ಲಘುವಾಗಿ ಹೋಗಿದ್ದ. ಅದೇ ಆ ಉಪಾಧ್ಯಾಯರ ಅಸಹನೆಗೆ ಕಾರಣವಾಗಿತ್ತು. ಅಂತೂ ನನ್ನ ಮುಖ್ಯೋಪಾಧ್ಯಾಯತ್ವ ಆರೇಳು ತಿಂಗಳು ಯಶಸ್ವಿಯಾಗಿ ನಡೆದುಹೋಯಿತು. ಇಲ್ಲಿಂದ ಮುಂದೆ ನಾನು ಓದಿದ ಓದಿನ ರೋಮಂಥನ ಕ್ರಿಯೆಯ ನನ್ನ ಜೀವನದ ಅಧ್ಯಾಯ ಪ್ರಾರಂಭವಾಯಿತು.

### ವಚನಶಾಸ್ತ್ರದಲ್ಲಿ ನನಗೆ ಅಪಾರ ಆಸಕ್ತಿ ಉಂಟಾದುದು ಹೀಗೆ

ನಾನು ಪಂಡಿತ ಪರೀಕ್ಷೆಯಲ್ಲಿ ತೇರ್ಗಡೆಗೊಂಡ ಮೇಲೆ ಗೌರೀಶಂಕರಸ್ವಾಮಿಗಳನ್ನು ಕಂಡುಬರುವುದಕ್ಕೆ ಹೋದಾಗ ಅವರು ಹೇಳಿದ್ದು, "ನೀನು ಪಂಡಿತ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾದುದು ಸರ್ಕಾರದವರ ಲೆಕ್ಕದಲ್ಲಿ. ಒಂದು ಹೈಸ್ಕೂಲಿಗೋ ಟ್ರೈನಿಂಗ್ ಸ್ಕೂಲಿಗೋ ಉಪಾಧ್ಯಾಯನಾಗಿ ಕೆಲಸ ಮಾಡುವ ಹಣೆಪಟ್ಟಿ ಕಟ್ಟಿಕೊಂಡಂತಾಯಿತು. ಆದರೆ ಯಥಾರ್ಥದಲ್ಲಿ ಪಂಡಿತ ಪರೀಕ್ಷೆ ಓದಲು ನಿನಗೆ ಈಗ ಅರ್ಹತೆ ಬಂದ ಹಾಗೆಂದು ನಾನು ನಿನಗೆ ಹೇಳುತ್ತೇನೆ. ತಿಳಿಯಿತೋ. ಇನ್ನು ಮುಂದೆ ನೀನು ಶಾಸ್ತ್ರಗ್ರಂಥಗಳನ್ನು ಚೆನ್ನಾಗಿ ಓದು, ಮನನ ಮಾಡು" ಎಂದು ಹೇಳಿದ ಮಾತಿನ ಸತ್ಯ ನನಗೆ ಈಗ ಅನುಭವಕ್ಕೆ ಬರತೊಡಗಿತು. ಶಾಸ್ತ್ರಗ್ರಂಥಗಳನ್ನೇನೋ ಆಗ ತಿರುವಿಹಾಕಿದ್ದೆ. ಆದರೆ ಅವರು ಹೇಳಿದಂತೆ ಚೆನ್ನಾಗಿ ಓದು ಎಂಬ ಮಾತು ಮಾತಾಗಿಯೇ ಉಳಿಯಿತು. ನನ್ನ ಪಾಠ-ಪ್ರವಚನಗಳು

ಪ್ರೌಢವಲ್ಲದ್ದರಿಂದ ಶಾಸ್ತ್ರ ಗ್ರಂಥಗಳನ್ನು ಓದುವ ಹವ್ಯಾಸ ಅಧಿಕಗೊಳ್ಳಲಿಲ್ಲ. ಕಥೆ, ಕೀರ್ತನ, ವಿನ್ಯಾಸ, ಲೇಖನ ಬರೆಯುವ ಹವ್ಯಾಸವನ್ನು ಪ್ರಾರಂಭಿಸಿದೆ. ಅದು ಅಷ್ಟಿಷ್ಟು ಫಲಕಾರಿ ಆಯಿತು.

1951ನೆ ಇಸ್ವಿ ಶ್ರಾವಣ ಮಾಸ ಬಂತು. ಸಿದ್ಧಗಂಗಾ ಮಠದಲ್ಲಿ 'ಪ್ರಭುಲಿಂಗ ಲೀಲೆ' ಪ್ರವಚನ ಕಾರ್ಯಕ್ರಮಕ್ಕೆ ಧೈರ್ಯ ಮಾಡಿ ಒಪ್ಪಿ ಪ್ರವಚನ ಪ್ರಾರಂಭಿಸಿಬಿಟ್ಟೆ. ಆದರೆ ಪ್ರಭುಲಿಂಗ ಲೀಲೆಯ ಪ್ರವಚನ ಸಾಮರ್ಥ್ಯ ನನಗೆ ಇನ್ನೂ ಬಂದಿರಲಿಲ್ಲ ನಿಜ. ನಾನು ಈ ಹಿಂದೆ ಅನೇಕ ಸಲ ಹೇಳಿಕೊಂಡಿರುವಂತೆ ನನ್ನ 'ಮೊಂಡು ಧೈರ್ಯ' ಹೇಳು, ಭಯವೇಕೆ? ಹೇಳುತ್ತ ಹೇಳುತ್ತ ಹೋದರೆ ತನ್ನಿಂದ ತಾನೇ ಬರುತ್ತೆ ಎಂದು ನನ್ನ ಹುರಿದುಂಬಿಸಿಬಿಟ್ಟಿತು. ಸಿಕ್ಕಷ್ಟು ಯೋಚಿಸಿದಷ್ಟು ಸಾಮಗ್ರಿ ಜೋಡಿಸಿಕೊಂಡು ಪ್ರಾರಂಭಿಸಿಬಿಟ್ಟೆ. ಮೊದಲ ದಿನ ಮಂಗಲ ಪದ್ಯಗಳನ್ನು ರಾಗವಾಗಿ ಹೇಳುತ್ತ ಚೆನ್ನಾಗಿ ವಿವರಣೆ ಮಾಡಿದೆ. ತುಮಕೂರಿನಿಂದ ಅನೇಕರು ಬರತೊಡಗಿದರು. ಮಠದ ವಿದ್ಯಾರ್ಥಿಗಳು, ಇತರ ಪರಿವಾರದವರು ಬಂದು ಚಿಗಟೇರಿ ಕಟ್ಟಡದ ಸಭಾಂಗಣದಲ್ಲಿ ಕಿಕ್ಕಿರಿದು ತುಂಬಿ ಹೋಗುತ್ತಿತ್ತು. ಒಂದೆರಡು ದಿನಗಳ ನಂತರ ಶ್ರೀಗಳವರು ಬಂದು ಕುಳಿರತೊಡಗಿದರು. ಆಗಲೇ ನನಗೆ ಎದೆ ಬಡಿದುಕೊಳ್ಳತೊಡಗಿತು. ಸಾಮಾನ್ಯ ಜನಗಳೆದುರಿಗೆ ಧೈರ್ಯವಾಗಿ ಹೇಳುತ್ತಿದ್ದ ನನಗೆ ಶ್ರೀಗಳವರೆದುರಿಗೆ ಹೇಳಲು ಧೈರ್ಯ ಬರುತ್ತಿರಲಿಲ್ಲ. ಉಳಿದ ಜನಕ್ಕೆ ಅಡ್ಡಕಥೆ, ದೃಷ್ಟಾಂತದ ಪ್ರಸಂಗಗಳನ್ನೆಲ್ಲ ಹೇಳಿ ಹಾಗೆ ಹೀಗೆ ಕಳೆಕಟ್ಟಿಸಿಕೊಂಡು ಬುರುಡೆ ಗಿರಡೆ ಸೇರಿಸಿ ಹೇಳಿ ಮುಗಿಸುತ್ತಿದ್ದೆ.

*ಭೋಗಭೂಮಿಯ ಭೋಗತನುವಿನೊ |*
*ಳಾಗದನುಪಮಕಾರ್ಯಸಿದ್ಧಿ ಕರ್ಮೋ |*
*ದ್ಯೋಗಭೂಮಿಯ ಕರ್ಮತನುವಿನಲಿಲ್ಲದದರಿಂದೆ |*
*ಯೋಗಯೋಗ್ಯರು ಯೋಚಿಸುತ ಭೂ |*
*ಭಾಗದಲಿ ಮಾನವಶರೀರಿಗ |*
*ಳಾಗಿ ಸಾಧಿಸಿ ನಿಜವನರಿವರು ಗಿರಿಜೆ ಕೇಳೆಂದ ||*

- ಈ ಪದ್ಯದ ವ್ಯಾಖ್ಯಾನ ಮಾಡುವಾಗ ತಡಬಡಾಯಿಸಿಬಿಟ್ಟೆ. ಆ ಪದ್ಯದ ತಳಬುಡ ನನಗೆ ಅರ್ಥವಾಗಿರಲಿಲ್ಲ. ಮೇಲು ಮೇಲು ಅರ್ಥವಾಗಿತ್ತು. ಸ್ವಾಮಿಗಳಿಲ್ಲದಿದ್ದರೆ ಹೇಗೆಹೇಗೊ ಕಂಡಂತೆ ಹೇಳಿ ದಾಟಿ ಹೋಗಿಬಿಡುತ್ತಿದ್ದೆ. ಶ್ರೀಗಳವರೆದುರಿಗೆ ಹಾಗೆಲ್ಲ ಬುರುಡೆ ಗಿರುಡೆ ಬಿಟ್ಟರೆ ಚೆನ್ನಾಗಿಲ್ಲವೆಂದು ತಡಬಡಾಯಿಸುತ್ತಿರುವುದನ್ನು ಶ್ರೀಗಳು ಗಮನಿಸಿ ಈ ಪದ್ಯಕ್ಕೆ ನಾನೇ ಅರ್ಥ ಹೇಳುತ್ತೇನೆಂದುಬಿಟ್ಟರು. ಸದ್ಯ, ತಲೆ ಮೇಲಿನ ಭಾರ ಹೆಗಲಿಗಿಳಿಯಿತೆಂದುಕೊಂಡು ಸುಮ್ಮನಾದೆ. ಶ್ರೀಗಳು ಬಹು ವಿಸ್ತಾರವಾಗಿ ಆ ಪದ್ಯದ ಅರ್ಥವನ್ನೂ ಆ ದಿನ ಪೂರ್ತಿ ಹೇಳಿ ಮುಗಿಸಿಬಿಟ್ಟರು.

ಶ್ರೀಗಳವರು ಹೇಳುವ ರೀತಿ ಎಲ್ಲರಿಗೂ ಸಂತೋಷಗೊಳಿಸಿತು. ಮರುದಿನದಿಂದ ನಾನು ರಾಗವಾಗಿ ಪದ್ಯಪಠನ ಮಾಡತೊಡಗಿದೆ. ಶ್ರೀಗಳವರೇ ಬಿಡುವು ಮಾಡಿಕೊಂಡು ಬಂದು ಅರ್ಥ ಹೇಳತೊಡಗಿದರು. ಶ್ರಾವಣಮಾಸ ಪೂರ್ತಿ ಹಾಗೂ ಹೀಗೂ ಮುಖ್ಯ

ಮುಖ್ಯ ಭಾಗ ಆರಿಸಿಕೊಂಡು ಪ್ರವಚನ ಪರಿಸಮಾಪ್ತಿಯ ಶಾಸ್ತ್ರ ಮುಗಿಸಿದೆವು. ಮುಕ್ತಾಯ ಸಮಾರಂಭಕ್ಕೆ ಮೈಸೂರು ಅರಮನೆ ಪಂಚಗವಿ ಮಠಾಧ್ಯಕ್ಷರಾದ ಗೌರೀಶಂಕರ ಸ್ವಾಮಿಗಳವರನ್ನು ಕರೆಸಲಾಯಿತು. ಗೌರೀಶಂಕರ ಸ್ವಾಮಿಗಳು ಬಂದು ಐದು ದಿನಗಳು ಬೆಳಗ್ಗೆ ಸಾಯಂಕಾಲ ಎರಡೂ ಹೊತ್ತು ದಿವ್ಯವಾಗಿ ಭವ್ಯವಾಗಿ ಶರಣ ಸಾಹಿತ್ಯದ ಮೇಲೆ ಉಪನ್ಯಾಸ ಕೊಟ್ಟರು. ಅವರು ಕೊಟ್ಟ ಉಪನ್ಯಾಸಗಳಲ್ಲಿ ಮುಖ್ಯವಾಗಿ 'ಗುರುವು ಬೇಕೇ ಬೇಕು', 'ಸಿದ್ಧರಾಮನ ಅಖಂಡ ಸಾಕ್ಷಾತ್ಕಾರ', 'ವಚನವಾಙ್ಮಯ',. 'ಬಸವಣ್ಣನವರ ಪಂಚಪರುಷಗಳು', 'ಮಹಾದೇವಿಯಕ್ಕನ ಜ್ಞಾನಸಂಪತ್ತು' - ಇವೇ ವಿಷಯಗಳ ಮೇಲೆ ಆಡಿದ ಮಾತುಗಳು ನನ್ನಲ್ಲಿ ವಚನಸಾಹಿತ್ಯಾಭ್ಯಾಸದಲ್ಲಿ ಅತ್ಯಾತುರತೆಯನ್ನುಂಟು ಮಾಡಿಬಿಟ್ಟವು. ಗೌರೀಶಂಕರ ಸ್ವಾಮಿಗಳು "ಉಪನ್ಯಾಸ ಮಾಡುವಾಗ ಲಕ್ಷ್ಯಕೊಟ್ಟು ಕೇಳುವ ಕೆಲಸ ಮಾಡಿ; ಭಾಷಣಗಳನ್ನು ಬರೆದುಕೊಳ್ಳಬೇಡಿ" ಎಂದು ಕಟ್ಟಪ್ಪಣೆ ಮಾಡಿಬರುತ್ತಿದ್ದರು. ನಾನು ಹೊರಗೆ ಕುಳಿತುಕೊಂಡು ಎಲ್ಲವನ್ನೂ ಸಂಕ್ಷೇಪವಾಗಿ ನನಗೊಬ್ಬನಿಗೇ ತಿಳಿಯುವಂತಹ ಶೀಘ್ರಲಿಪಿಯ ವಿಧಾನವನ್ನು ಅನುಸರಿಸಿ ಚಾಚೂತಪ್ಪದೆ ಬರೆದು ಕೊಂಡುಬಿಟ್ಟೆ. ಆ ಕಾಲದಲ್ಲಿ ನನಗೆ ಆ ಶಕ್ತಿಯಿತ್ತು. ಅದನ್ನು ಮರುದಿನವೇ ಬೇಕಾದರೆ ಯಥಾವತ್ತಾಗಿ ಬರೆದುತೋರಿಸಿಬಿಡಬಲ್ಲನಾಗಿ ಬಿಡುತ್ತಿದ್ದೆ. ವಚನಗಳ ಪ್ರಾರಂಭವನ್ನು ಮಾತ್ರ ಬರೆದುಕೊಂಡು ವಚನಗ್ರಂಥಾದಿಗಳನ್ನು ನೋಡಿ ಪೂರ್ಣಗೊಳಿಸಿಕೊಳ್ಳುತ್ತಿದ್ದೆ.

ಹೀಗೆ ಬರೆದುಕೊಂಡ ಮೇಲೆ ಮುಂದೆ ಬಿಡುವಾದಾಗಲೆಲ್ಲ ಅವುಗಳ ವಿಸ್ತೃತ ವಿವರಣೆಯನ್ನು ಬರೆಯುತ್ತ ಹೋದೆ. ಈ ಒಂದು ಪ್ರಸಂಗ ನನಗೆ ದೊರೆಯದಿದ್ದರೆ ವಚನ ಗ್ರಂಥಗಳ ಅಭ್ಯಾಸದತ್ತ ನನ್ನ ಗಮನವುಂಟಾಗುತ್ತಿತ್ತೋ ಇಲ್ಲವೋ! ಅಂತೂ ಈ ಪ್ರಸಂಗ ನನ್ನನ್ನು ವಿಶೇಷ ಓದಿಗೆ ಅನುವು ಮಾಡಿಕೊಟ್ಟಿತು. ತುಮಕೂರ ನಾಗರಿಕರು ಗೌರೀಶಂಕರ ಸ್ವಾಮಿಗಳನ್ನು ತಮ್ಮೂರ್ರಿಗೆ ಕರೆದುಕೊಂಡು ಹೋಗಿ ವೀರಭದ್ರ ದೇವಾಲಯದಲ್ಲಿ ಮಾಡಿಸಿದ 'ಬಸವಣ್ಣನವರ ಭಾವಪುರುಷ' ಎಂಬ ಉಪನ್ಯಾಸದ ವಿಷಯವನ್ನೆಲ್ಲ ಬರೆದುಕೊಂಡು ಅದನ್ನು ಅನಂತರ ಸಂಬಂಧಪಟ್ಟ ಗ್ರಂಥಗಳನ್ನು ಓದಿ ಕಥೆ ಮಾಡಲು ಒಂದು ಸುಂದರ ಹಸ್ತಪ್ರತಿ ತಯಾರುಮಾಡಿ ಸೊಗಸಾಗಿ ಶಿವಕಥೆಯ ವಸ್ತುವನ್ನಾಗಿ ಮಾಡಿಕೊಂಡೆ. ಇದು ನನ್ನ ಅತ್ಯಂತ ಪ್ರೀತಿಯ, ದೀರ್ಘಕಾಲದ ಅಭ್ಯಾಸದ ಫಲವಾಗಿ ಮಾಡುತ್ತಿದ್ದ ಕಥೆಯಾಗಿತ್ತಾಗಿ ಅಂದಿನಿಂದ ಇಂದಿನವರೆಗೆ ಸುಮಾರು ಇನ್ನೂರು ಪ್ರಯೋಗಗಳನ್ನಾದರೂ ಮಾಡಿರಬಹುದು. ಬೆಂಗಳೂರು ಆಕಾಶವಾಣಿಯಲ್ಲೇ ಇದರ ನಾಲ್ಕೈದು ಪ್ರಯೋಗಗಳನ್ನು ಮಾಡಿದ್ದೇನೆಂದು ಜ್ಞಾಪಕ. ಈ ಕಥೆಯನ್ನೊಮ್ಮೆ ದಾವಣಗೆರೆಯಲ್ಲಿ ಹಳಕಟ್ಟಿ ಫಕೀರಪ್ಪನವರ ಎದುರಿಗೇ ಮಾಡಿ ಅವರ ಪ್ರಶಂಸೆಗೂ ಪಾತ್ರನಾಗಿದ್ದೇನೆ.

ಹೀಗೆ ಗೌರೀಶಂಕರ ಸ್ವಾಮಿಗಳಿಂದ ಭಾಷಣಗಳಿಂದ ಪ್ರಭಾವಿತನಾಗಿ ತೆಗೆದುಕೊಂಡ ಟಿಪ್ಪಣಿಗಳನ್ನೇ ಸಾಂದರ್ಭಿಕ ಗ್ರಂಥಾವಲೋಕನ ಮಾಡಿ ಬೆಳೆಸಿ ಬರೆದು ಅನೇಕ ಲೇಖನಗಳನ್ನು ಬೆಂಗಳೂರಿನ ಶರಣಸಂದೇಶ, ಸಿದ್ಧಗಂಗಾ ತ್ರೈಮಾಸಿಕ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟಣೆಗೊಳ್ಳುವಂತೆ ಮಾಡಿದೆ. ಮುಂದೆ ಇವನ್ನೇ 1968ರಂದು ಆಚರಿಸಿದ ಬಸವಣ್ಣನವರ ಅಷ್ಟಮ ಶತಮಾನೋತ್ಸವ ಸಂದರ್ಭದಲ್ಲಿ ಆರು ಚಿಕ್ಕಚಿಕ್ಕ ಪುಸ್ತಕಗಳನ್ನಾಗಿ

ಪ್ರಕಟಿಸಿದೆ. ನನಗೆ ವಚನ ಸಾಹಿತ್ಯದಲ್ಲಿ ಆಸಕ್ತಿ ಹುಟ್ಟಿದುದು ಹೀಗೆ. ಈ ಸತತಾಭ್ಯಾಸ ಪ್ರಯತ್ನವೇ ನನಗೆ ಮುಂದೆ ಲೇಖನ ಕಲೆಯಲ್ಲಿ ಆಸಕ್ತಿಯುಂಟಾಗುವಂತೆ ಮೂಡಿತು. ನೂರಾರು ಪ್ರೌಢ ಲೇಖನ ಬರೆದೆ.

ವಚನಗಳಿಗೆ ಗೌರೀಶಂಕರ ಸ್ವಾಮಿಗಳಂತೆ ವಚನಗಳಿಗೆ ಅರ್ಥ ಮಾಡುವವರನ್ನು ಇನ್ನೊಬ್ಬರನ್ನು ನಾನು ನೋಡಿಲ್ಲ. ಪ್ರಭುದೇವರ ವಚನಗಳ ವಿಶ್ಲೇಷಣೆಯನ್ನು ಗೌರೀಶಂಕರ ಸ್ವಾಮಿಗಳವರ ಬಾಯಿಂದಲೇ ಕೇಳಬೇಕು. ಅಷ್ಟೊಂದು ಪಾಂಡಿತ್ಯಪೂರ್ಣವಾಗಿ ಯಥೋಚಿತ ರೀತಿಯಲ್ಲಿ ಅವರು ವಿವರಣೆ ಕೊಡುತ್ತಿದ್ದರು. ಅವರ ವಿವೇಚನೆಯಲ್ಲಿ ಜಗತ್ತಿನ ಪ್ರಮುಖದರ್ಶನಗಳಲ್ಲಿ ವಚನ ಸಾಹಿತ್ಯದ ಸ್ಥಾನವೇನೆಂಬುದನ್ನು ಮನಂಬುಗುವಂತೆ ಹೇಳುವ ಕಲೆ ಅವರಲ್ಲಿ ಪ್ರಶಂಸನೀಯವಾದುದಾಗಿರುತ್ತಿತ್ತು. ಈ ಬಗೆಗೆ ಅವರಿಂದ ರಚಿತವಾದ 'ಅಕ್ಕಮಹಾದೇವಿ ಚಂಪೂಚರಿತ' ಗ್ರಂಥ ನೋಡಿದರೆ ಯಾರಿಗಾದರೂ ಹೊಳೆದೀತು. ಮಹಾದೇವಿಯಕ್ಕನ ವಚನಗಳ ಆಧಾರದ ಮೇಲೆಯೇ ರಚಿತಗೊಂಡ ಆ ಚಂಪೂಕಾವ್ಯ ಅಪೂರ್ಣವಾದರೂ ಇದ್ದಷ್ಟು ಗ್ರಂಥ ಎಲ್ಲ ದೃಷ್ಟಿಯಿಂದಲೂ ಅಭ್ಯಾಸಯೋಗ್ಯ ಗ್ರಂಥವೇ ಆಗಿದೆ. ಈ ಶತಮಾನದಲ್ಲಿ ಚಂಪೂಶೈಲಿಯಲ್ಲಿ ಆ ಗ್ರಂಥವನ್ನು ಮಿಕ್ಕಿಸುವ ಗ್ರಂಥಕರ್ತರು ಇನ್ನೊಬ್ಬರು ಹುಟ್ಟಿಲ್ಲ. ಈ ಶತಮಾನದಲ್ಲಿ ಚಂಪೂ ಕವಿಗಳಲ್ಲೊಬ್ಬರನ್ನು ಗೌರವಿಸುವುದಾದರೆ ಅದು ಗೌರೀಶಂಕರ ಸ್ವಾಮಿಗಳೇ ಸಲ್ಲಬೇಕು. ಅಷ್ಟೇ ಅಲ್ಲ ಕನ್ನಡ, ಸಂಸ್ಕೃತ, ಇಂಗ್ಲೀಷ್, ಪ್ರಾಕೃತ, ಹಿಂದಿ, ಬಂಗಾಳಿ ಭಾಷೆಗಳ ಮೇಲೆ ಪ್ರಭುತ್ವ ಪಡೆದಿದ್ದ ಅವರನ್ನು ಮಿಕ್ಕಿಸುವ ಬಹುಭಾಷಾ ಪಂಡಿತರು ಇನ್ನೊಬ್ಬರಿರಲಿಲ್ಲವೆಂದರೆ ಅತಿಶಯೋಕ್ತಿಯಲ್ಲ, ಅಭಿಮಾನೋಕ್ತಿಯಂತೂ ಮೊದಲೇ ಅಲ್ಲ.

ಹೀಗೆ ಶ್ರೀಮಠದ ಕಾರ್ಯ-ಕಲಾಪಗಳಲ್ಲಿ ಭಾಗವಹಿಸುತ್ತ ನನ್ನ ಶಾಲಾ ಕೆಲಸವನ್ನೂ ನೋಡಿಕೊಳ್ಳುತ್ತ ಎಲ್ಲ ಊರುಗಳಲ್ಲಿ ಇದುವರೆಗೆ ಯಶಸ್ಸು ಸಾಧಿಸಿದಂತೆ ದೇವರಾಯಪಟ್ಟಣದಲ್ಲೂ ಒಳ್ಳೆಯ ಆದರ್ಶ ಉಪಾಧ್ಯಾಯನೆಂಬ ಯಶಸ್ಸನ್ನೂ ಇಲಾಖೆ ಯಿಂದಲೂ ಊರವರಿಂದಲೂ ಪಡೆದುಬಿಟ್ಟಿದ್ದು, ಕ್ರಿಯೆಯಲ್ಲಿ ನನಗೆ ಬೆಳೆದುಬಂದ ಶ್ರದ್ಧೆಯ ಪರಿಣಾಮವೇ ಆಗಿದೆ.

### ಶ್ರೀ ಸಿದ್ಧಗಂಗಾ ಶ್ರೀಗಳವರು ಕಪಿಲೆ ಎಳೆದ ಪ್ರಸಂಗ

ದೇವರಾಯಪಟ್ಟಣದಲ್ಲಿ ನಾನು ಮಾಡಿದ ಮನೆ ಎತ್ತರದ ಕಲ್ಲುಬಂಡೆಯ ಮೇಲೆ ಇತ್ತು. ಗುಡ್ಡದ ಅಖಂಡ ಕಲ್ಲು ಬಂಡೆಯ ಮೇಲೆಯೇ ಕಟ್ಟಲ್ಪಟ್ಟ ಪ್ರಾಚೀನ ಪಾಳೆಯಪಟ್ಟಣ ಊರು ದೇವರಾಯಪಟ್ಟಣ. ಅದರಲ್ಲಿ ನನ್ನ ಮನೆಯೂ ಒಂದು. ತಿಂಗಳಿಗೆ ಒಂದು ರೂಪಾಯಿ ಮಾತ್ರ ಬಾಡಿಗೆ! ಮನೆಗೆ ಎರಡು ಮೂರು ಕೊಠಡಿಗಳಿದ್ದು, ಒಂದು ಕೊಠಡಿಗೆ ಮಾತ್ರ ಬಾಗಿಲಿತ್ತು. ಉಳಿದ ಬಚ್ಚಲಮನೆ, ಅಡಿಗೆ ಮನೆಗೆ ಬಾಗಿಲುಗಳೇ ಇರಲಿಲ್ಲ. ಮಹಾದ್ವಾರವೊಂದು ಇತ್ತು. ಅದನ್ನು ಮುಚ್ಚಿಬಿಟ್ಟರೆ ಒಳಗೆಲ್ಲ ತೆರೆದ ಮನೆಯೇ. ನೆಲಗಟ್ಟು ಪ್ರಕೃತಿದತ್ತವಾದ ಕಲ್ಲು ಬಂಡೆಯೇ. ಇಂಥ ವಿಚಿತ್ರ ಮನೆ ನನಗೆ ಸಿಕ್ಕದ್ದು. ಸರಿಯಾದ ಮನೆ ಸಿಗದ್ದರಿಂದ. ಅದರಲ್ಲೇ ನಾನು ನನ್ನ ಹೆಂಡತಿ ಹೊಳೆಬಸಮ್ಮ ಮತ್ತು ನನ್ನ ಒಬ್ಬ ತಮ್ಮ ಓದುತ್ತಿದ್ದ. ಮೂವರೇ ಮನೆಯಲ್ಲಿ ಇದ್ದವರು. ಈ ನನ್ನ ಮನೆ ಎತ್ತರದಲ್ಲಿದ್ದದ್ದರಿಂದ

ದೇವರಾಯಪಟ್ಟಣದ ಹೊಲ-ಗದ್ದೆ ತೋಟದ ಸಾಲೆಲ್ಲ ಕಾಣುತ್ತಿತ್ತು. ಇದೇ ಒಂದು ಪುಣ್ಯದ ನೋಟ ನನಗೆ.

ಒಂದು ದಿನ ಶಾಲೆಬಿಟ್ಟು ಮನೆಗೆ ಬಂದು ಸ್ನಾನಮಾಡಿ ಊಟಕ್ಕೆ ತೆರಳಬೇಕೆನ್ನುವಷ್ಟರಲ್ಲಿ ಕಣ್ಣು ಆಕಸ್ಮಾತ್ ಆ ಊರಿನ ಗದ್ದೆ ಸಾಲಿನ ಕಡೆಗೆ ಹರಿಯಿತು. ಮಠದ ಗದ್ದೆಯಲ್ಲಿ ಹತ್ತಾರು ಹುಡುಗರ ಮಧ್ಯದಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳವರು ಸೇರಿಕೊಂಡು ಕಪಿಲೆ ಬಾವಿಯಿಂದ ನೀರನ್ನು ಎಳೆಯುತ್ತಿರುವ ಅಪರೂಪದ ದೃಶ್ಯ ಕಣ್ಣಿಗೆ ಬಿತ್ತು. ಅದು ಗಣೇಶ ಚತುರ್ಥಿಯ ಹಿಂದುಮುಂದಿನ ಸಮಯ, ಮಳೆ ಹೋಗಿ ಎದೆಯುದ್ದ ಬೆಳೆದು ನಿಂತ ಬತ್ತದ ಪೈರೆಲ್ಲ ಬಿಸಿಲಿನ ಬೇಗೆಯಿಂದ ಒಣಗತೊಡಗಿತ್ತು. ಶ್ರೀಗಳವರಿಗೆ ಒಣಗುತ್ತಿರುವ ಗದ್ದೆಯನ್ನು ಏನಾದರೂ ಮಾಡಿ ಬದುಕಿಸಿ, ಅಲ್ಪಸ್ವಲ್ಪ ಬತ್ತ ಬೆಳೆದುಕೊಳ್ಳಬೇಕೆಂಬ ಛಲ ಹುಟ್ಟಿತ್ತು. ಗದ್ದೆಯ ಮಧ್ಯದಲ್ಲಿ ಒಂದು ಬೈಲುಬಾವಿಗೆ ಗಡಗಡೆ ಹಚ್ಚಿ ಕಪಿಲೆಯಿಂದ ಬಾವಿಯ ನೀರನ್ನೆತ್ತಿ ಪೈರಿಗೆ ಹಾಯಿಸಬೇಕೆಂದು ಏರ್ಪಾಡು ಮಾಡಿಕೊಂಡಿದ್ದರು. ಅಲ್ಲಿ ಎತ್ತು ಕಟ್ಟಿ ಕಪಿಲೆಯನ್ನು ಎಳೆಯಲು ಬರುವಂತಿರಲಿಲ್ಲವಾಗಿ ತಾವೇ ನಿಂತು ಮಠದ ವಿದ್ಯಾರ್ಥಿಗಳ ಸಹಕಾರದಿಂದ ಕಪಿಲೆ ಎಳೆಯಲು ತಾವೇ ನಡುಕಟ್ಟಿ ನಿಂತುಬಿಟ್ಟಿದ್ದರು. ಈ ದೃಶ್ಯ ಕಂಡು ನಾನು ಸಂಕಟಗೊಂಡೆ. ನಾವೆಲ್ಲ ಜೀವಂತವಾಗಿರುವಾಗ ಶ್ರೀಗಳವರಿಂದ ಈ ಕೆಲಸ ಮಾಡಿಸುವುದು ಸರಿಯೇ? ಎಂದುಕೊಂಡು ಊಟ ವಗೈರೆ ಏನೂ ಮಾಡದೆ ಗದ್ದೆಗೆ ಓಡಿದೆ. ನನ್ನನ್ನು ಕಂಡು ಶ್ರೀಗಳವರು ನಕ್ಕು "ಗದ್ದೆಯೆಲ್ಲ ಒಣಗಿ ಹೋಗುತ್ತಿದೆ. ಈ ಬಾವಿಯ ನೀರನ್ನೆಲ್ಲ ಇಂದು ಎಳೆದರೆ ನಾಲ್ಕೈದು ಹಾಳೆಗೆ ನೀರಾಗುತ್ತದೆ. ಬೆಳಿಗ್ಗೆ ಪುನಃ ನೀರು ತುಂಬುತ್ತದೆ. ಆಗ ಪುನಃ ಎಳೆದರೆ ಮತ್ತೆ ನಾಲ್ಕೈದು ಹಾಳೆ ನೆನೆಯುತ್ತವೆ. ಹೀಗೆ ಏನಾದರೂ ಮಾಡಿ ಬತ್ತ ಬದುಕಿಸಬೇಕಾಗಿದೆ. ದಾಸೋಹಕ್ಕೆ ಬತ್ತದ ಅಭಾವ ಬಹಳವಾಗಿ ಹೋಗಿದೆ" ಎಂದು ಎಳೆಯುತ್ತಲೇ ಹೇಳಿದರು. ನನ್ನ ಕಣ್ಣಲ್ಲಿ ನೀರೂರಿತು. ಸಾರ್ವಜನಿಕರಿಗೆ ಅನ್ನ ನೀರೊದಗಿಸಲು ಈ ವೀರವಿರಕ್ತ ಸಂನ್ಯಾಸಿಗಳು ಈ ರೀತಿ ಬವಣೆ ಪಡುವಂತಾದುದೇ ಎಂದು ಮನಸ್ಸಿನಲ್ಲೇ ಅಂದುಕೊಳ್ಳುತ್ತ ಶ್ರೀಗಳವರಿಗೆ "ಬುದ್ಧಿ, ತಾವು ಕೈಬಿಡಿ. ನಾವೆಲ್ಲ ಇನ್ನೂ ಜೀವಂತವಾಗಿರುವಾಗ ತಾವು ಈಗಿರುವ ಅನೇಕ ಜವಾಬ್ದಾರಿ ಕಾರ್ಯಗಳ ಮಧ್ಯದಲ್ಲಿ ಈ ಒಂದು ದೈಹಿಕ ಶ್ರಮವನ್ನೂ ಮಾಡಕೂಡದು" ಎಂದು ಅವರನ್ನು ಬಿಡಿಸಲು ನಾನೇ ಅವರು ಹಿಡಿದ ಸ್ಥಳದಲ್ಲಿಯೇ ಹಗ್ಗ ಹಿಡಿದು ಎಳೆಯಲು ಪ್ರಾರಂಭಿಸಿದೆ. ಶ್ರೀಗಳವರು "ಇಲ್ಲ, ಇಲ್ಲ. ನೀನು ಹೋಗು. ಈಗ ಶಾಲೆ ಕೆಲಸ ಮುಗಿಸಿಕೊಂಡು ಊಟ ವಗೈರೆ ಏನೂ ಮಾಡದೆ ಬಂದ ಹಾಗಿದೆ. ಹೋಗಿ ಊಟ ಮಾಡು ಹೋಗು" ಎಂದು ಹೇಳುತ್ತ ತಾವು ಕಪಿಲೆಯನ್ನು ಎಳೆದೇ ಎಳೆಯುತ್ತಿದ್ದರು. ನಾಲ್ಕೈದು ಹುಡುಗರು ಮುಂದೆ ಮುಂದೆ ಎಳೆಯುತ್ತಿದ್ದರು. ನನಗೆ ದುಃಖ ತಡೆಯಲಾಗಲಿಲ್ಲ. ಕಣ್ಣೀರೊರೆಸಿಕೊಳ್ಳುತ್ತ ಬಲಾತ್ಕಾರವಾಗಿ ಅವರ ಕೈ ಬಿಡಿಸಲು ಯತ್ನಿಸುತ್ತ "ಬುದ್ಧಿ, ತಾವು ಕೈ ಬಿಡಲೇಬೇಕು. ಈ ಕೆಲಸವನ್ನು ಇಂದು ಈ ಎಲ್ಲ ವಿದ್ಯಾರ್ಥಿಗಳ ಸಹಕಾರದಿಂದ ಬಾವಿಯ ನೀರು ತಳಕಚ್ಚುವವರೆಗೆ ಎಳೆದೇ ಎಳೆಯುತ್ತೇನೆ" ಎಂದು ದೃಢಸಿರ್ಧಾರದ ಮಾತಿನಲ್ಲಿ ಹೇಳಿ ಅವರ ಕೈ ಬಿಡಿಸಿದೆ. ಕೈಬಿಟ್ಟು ಬದುವಿನ ಮೇಲೆ ಕುಳಿತು ಬೆವರು ಒರೆಸಿಕೊಂಡರು ಶ್ರೀಗಳವರು. "ನೋಡು ಮೂರು ನಾಲ್ಕು ದಿನಗಳಾಯಿತು ಈ ಗಡಗಡೆಯ ವ್ಯವಸ್ಥೆ ಮಾಡಿ. ಮಠದ ವ್ಯವಸಾಯಗಾರರಿಗೆ ಎಂಟು ಹತ್ತು ಜನ

ವಿದ್ಯಾರ್ಥಿಗಳೊಡನೆ ಈ ನೀರನ್ನು ಎಳೆದು ಗದ್ದೆಯ ಪೈರನ್ನು ಶಕ್ಯವಿದ್ದಷ್ಟು ಕೈಗೆ ಬರುವಂತೆ ಮಾಡಿರೆಂದು ಹೇಳಿದೆ. ಯಾರೂ ಮುಂದುವರಿದು ಬಂದು ಕೆಲಸ ಮಾಡಲಿಲ್ಲ. ನಾನೇ ಈ ನಾಲ್ಕಾರು ಜನ ಹುಡುಗರನ್ನು ಕರೆದುಕೊಂಡು ಬಂದು ಈ ಕಾರ್ಯ ಮಾಡಬೇಕಾಯಿತು. ಮಾಡುವುದೇನಿದೆ?" ಎಂದು ನೊಂದ ಧ್ವನಿಯಲ್ಲಿ ಹೇಳಿದರು.

ಶ್ರೀಗಳವರು ಗದ್ದೆಯಲ್ಲಿ ಕಪಿಲೆ ಎಳೆಯತೊಡಗಿದ್ದರೆಂಬ ಸುದ್ದಿ ಮಠದ ಹುಡುಗರಿಗೆಲ್ಲ ಇಷ್ಟು ಹೊತ್ತಿಗೆ ಗೊತ್ತಾಗಿ ಹೋಯಿತು. ನೂರಾರು ಹುಡುಗರು ಧಾವಿಸಿಬಂದುಬಿಟ್ಟರು. ನಾನು ಸ್ವಲ್ಪ ಕೋಪದಿಂದ "ಏನಾಗಿತ್ತು ನಿಮಗೆಲ್ಲ! ಶ್ರೀಗಳವರು ಈ ಕೆಲಸ ಮಾಡಬೇಕೆ? ಅವರೇನು, ಅವರ ಜವಾಬ್ದಾರಿಗಳೇನು? ಇನ್ನಿತರ ಕೆಲಸ ಕಾರ್ಯಗಳೇನು! ಇದೊಂದನ್ನು ಅರ್ಥಮಾಡಿಕೊಳ್ಳದ ನಾವಿದ್ದರೆಷ್ಟು ಸತ್ತರೆಷ್ಟು?" ಎಂದು ಗುಡುಗಾಡಿದೆ. ಸಾಮಾನ್ಯವಾಗಿ ಮಠದ ಆಗಿನ ಯಾವ ಹುಡುಗರೂ ನನ್ನ ಮಾತಿಗೆ ಎದುರು ಹೇಳುತ್ತಿರಲಿಲ್ಲ. ಅವರು ಬಂದು ನನ್ನನ್ನು ಕೈಬಿಡಿಸಿ ತಾವೆಲ್ಲ ಸೇರಿ ಸರತಿಯಿಂದ ಕಪಿಲೆ ಎಳೆದು ನಾಲ್ಕೈದು ತಾಸುಗಳಲ್ಲಿ ಬಾವಿಯ ನೀರನ್ನೆಲ್ಲ ತಳಕಾಣಿಸಿಬಿಟ್ಟರು. ಶ್ರೀಗಳು ನನ್ನನ್ನು ಮನೆಗೆ ಕಳಿಸಿ, ತಾವು ಮಠಕ್ಕೆ ಹೋಗಿ ಕಪಿಲೆ ಎಳೆಯುತ್ತಿದ್ದ ಈ ಹುಡುಗರಿಗೆಲ್ಲ ಮೂರು ನಾಲ್ಕು ಹೆಡಿಗೆಗಳಲ್ಲಿ ಚಿತ್ರಾನ್ನ ಮಾಡಿಸಿ ಕಳಿಸಿಕೊಟ್ಟುಬಿಟ್ಟರು. ಆಮೇಲೆ ಹುಡುಗರು ಗದ್ದೆಯ ಬಯಲಿನಲ್ಲಿದ್ದ ನಾಲ್ಕೈದು ಬಾವಿಗಳಿಗೆಲ್ಲ ಗಡಗಡೆ ಹಚ್ಚಿ ಕಪಿಲೆ ಹೂಡಿ ನೀರೆಳೆದು ಗದ್ದೆಗೆ ಉಣ್ಣಿಸಿ ಆಕರ್ಷಕ ಬತ್ತವನ್ನು ಬೆಳೆದುದು ಉಂಟು.

ಹೀಗೆ ಸಿದ್ಧಗಂಗಾ ಕ್ಷೇತ್ರದ ಅಧಿಪತಿಗಳು ತಮ್ಮ ದಾಸೋಹ ವ್ರತಕ್ಕೆ ಚ್ಯುತಿಬಾರದಂತೆ ಎಂತ ಶ್ರಮವನ್ನಾದರೂ ಮಾಡಿ ಲೋಕಜೀವನಕ್ಕೆ ತಮ್ಮ ಸರ್ವಸ್ವವನ್ನೂ ಅರ್ಪಿಸುತ್ತ ಬಂದುದೇ ಒಂದು ದೊಡ್ಡ ಇತಿಹಾಸ. ಈ ದಿವ್ಯಾದರ್ಶ, ಭವ್ಯಾದರ್ಶ ನನ್ನನ್ನಂತೂ ಮುಗ್ಧನನ್ನಾಗಿ ಮಾಡಿತ್ತು. ಶ್ರೀಗಳವರ ಅಗಾಧ ಲೋಕೋಪಕಾರಕ ಬುದ್ಧಿಗೆ ನಾನು ಯಾವ ತ್ಯಾಗವನ್ನಾದರೂ ಮಾಡಲು ಎಂದೋ ಸಂಕಲ್ಪ ಮಾಡಿಕೊಂಡುಬಿಟ್ಟೆನೆಂದರೆ ತಪ್ಪಲ್ಲ. ಅವರಿಗೆ ಸದಾ ತಲೆ ತುಂಬ ಸಮಾಜ ಚಿಂತನೆ. ಮೈ ತುಂಬ ಉತ್ಸಾಹ, ಬುದ್ಧಿ ತುಂಬ ಯೋಚನೆ. ತಮ್ಮ ಶ್ರಮದ ಬಗೆಗೆ ಅವರಿಗೆ ಅರಿವೇ ಇರುತ್ತಿರಲಿಲ್ಲ. ಸಮಾಜ ಹಿತಕ್ಕಾಗಿ ಹಸಿವು ನೀರಡಿಕೆ ಕಟ್ಟಿದ್ದಾರೆ. ಮೈ ಬಗ್ಗಿಸಿ ದುಡಿದಿದ್ದಾರೆ. ಇದು ಅವರ ಜೀವನ ನಿರ್ವಹಣೆಗಲ್ಲ, ಲೋಕಜೀವನ ಕ್ಷೇಮಕ್ಕೆ, ಲಾಭಕ್ಕೆ. ಕಪಿಲೆ ಎಳೆದ ಈ ಘಟನೆ ನಾನು ದೇವರಾಯಪಟ್ಟಣ ಶಾಲಾ ಹೆಡ್‌ಮಾಸ್ತರನಾಗಿ ಕೆಲಸ ಮಾಡುತ್ತಿದ್ದ ಕಾಲದಲ್ಲಿ ನಡೆದದ್ದು. ಅದು ಇಂದಿಗೂ ನನ್ನ ಸ್ಮೃತಿಪಥದಲ್ಲಿ ಹಚ್ಚ ಹಸುರಾಗಿಯೇ ಇದೆ. ನೆನೆದಾಗ ಮನಸ್ಸಿನ ಮುಂದೆ ಥುತ್ತೆಂದು ನಿಂತುಬಿಡುತ್ತದೆ. ಚಿತ್ತಭಿತ್ತಿಯಲ್ಲಿ ಸಂಸ್ಕಾರಗೊಂಡು ನಿಂತಿದೆ. ಸಿದ್ಧಗಂಗಾಶ್ರೀಗಳವರ ಹೃದಯ ಬಹು ಎತ್ತರಮಟ್ಟದ್ದು. ಅವರಿಗೆ ಸದಾ ತಮ್ಮ ಕೈಲಾದಮಟ್ಟಿಗೆ ಲೋಕಕ್ಕೆ ಉಪಕಾರ ಮಾಡಬೇಕೆಂಬುದೊಂದನ್ನು ಬಿಟ್ಟರೆ ಯಾವ ಸ್ವಾರ್ಥವನ್ನಂತೂ ನಾನು ಕಾಣಲಿಲ್ಲ. ಅವರ ಬಗೆಗೆ ನನ್ನನ್ನು ಅರ್ಪಿಸಿಕೊಂಡುಬಿಟ್ಟೆ. ಇಂದಿಗೂ ಆ ಭಾವನೆ ನನ್ನಿಂದ ಅಳಿಸಿಲ್ಲ. ಈ ಭಾವನೆಯೇ ನನ್ನಿಂದ ಅವರ ಪುರಾಣ ಬರೆಸಿದೆ. 'ಸಿದ್ಧಗಂಗಾ ಶ್ರೀ' ಗ್ರಂಥ ಯಶಸ್ಸು ಗಳಿಸಿದ್ದೂ ನನ್ನ ಈ ಭಾವನೆಯಿಂದ ಮಾಡಿಸಿದ ಕೆಲಸಕ್ಕೆ ಪ್ರತೀಕ.

## ನನ್ನ ಲೇಖನಕಲೆಗೆ ಬಣ್ಣವೇರಿತು

ನಿಜವಾಗಿ ನನ್ನ ಲೇಖನಕಲೆಗೆ ಬಣ್ಣವೇರಿದ್ದು ಗೌರೀಶಂಕರ ಸ್ವಾಮಿಗಳವರ ವಿಚಾರಧಾರೆಯನ್ನು ಟಿಪ್ಪಣಿ ತಕ್ಕೊಂಡು ಬೆಳೆಸಿ ಬರೆಯುತ್ತ ಹೋದುದರ ಪರಿಣಾಮವೇ ಆಗಿದೆ. ಒಮ್ಮೆ ಅಲ್ಲ, ನಾಲ್ಕು ಸಲ ಆ ವಿಷಯಗಳನ್ನು ಬರೆದು ಬರೆದು ಶುದ್ಧಪ್ರತಿ ತಯಾರಿಸಿಯೇ ಆಮೇಲೆ ಪ್ರಕಟಣೆಗೆ ಕಳಿಸುತ್ತಿದ್ದೆ. ಸಿದ್ಧರಾಮನ ಅಖಂಡ ಸಾಕ್ಷಾತ್ಕಾರವೆಂಬ ಲೇಖನ ರಾಮರಾಜ್ಯ ಪತ್ರಿಕೆಯಲ್ಲಿ ಎಂಟು ಸಂಚಿಕೆಗಳಲ್ಲಿ ಪ್ರಕಟಗೊಂಡಿತು. ಸಿದ್ಧಗಂಗಾ ತ್ರೈಮಾಸಿಕದಲ್ಲಿ ಪ್ರಕಟಗೊಂಡಿತು. ಅನಂತರ ಅದನ್ನು ಒಂದು ಚಿಕ್ಕ ಪುಸ್ತಕವನ್ನಾಗಿ ಪ್ರಕಟಿಸಿದೆ. ಗೌರೀಶಂಕರ ಸ್ವಾಮಿಗಳು ನನಗೆ ಎಂದೋ ಹೇಳಿದ್ದ ಯಾವುದೇ ಲೇಖನವಾಗಲಿ, ಪುಸ್ತಕವಾಗಲಿ ಒಮ್ಮೆಲೇ ಪ್ರಕಟವಾಗಬಾರದು. ಅದನ್ನು ಒಮ್ಮೆ ಬರೆದು, ತಿದ್ದಿ, ಪುನಃ ಬರೆದು ನಿರ್ದುಷ್ಟವೆಂದು ಮನಸ್ಸಿಗೆ ತೃಪ್ತಿ ಕಂಡ ಮೇಲೆಯೇ ಪ್ರಕಟಗೊಳಿಸಬೇಕೆಂದು ಹೇಳಿದ ಮಾತಿನ ಸತ್ಯ ನನಗೆ ಕ್ರಿಯಾತ್ಮಕ ನಿಲವಿನಲ್ಲಿ ಅಡಿಯಿಟ್ಟಾಗಲೇ ಮನವರಿಕೆಯಾಯಿತು. ಗೌರೀಶಂಕರ ಸ್ವಾಮಿಗಳ ಭಾಷಣದ ಎಲ್ಲ ಅಂಶಗಳನ್ನೂ ಅನೇಕ ಸಲ ಬರೆದು ಎಲ್ಲವನ್ನೂ ಪ್ರಕಟಿಸಿದೆ. ಕೊನೆಯಲ್ಲಿ ಚಿಕ್ಕ ಚಿಕ್ಕ ಪುಸ್ತಕಗಳನ್ನಾಗಿ ಪ್ರಕಟಿಸಿದೆ. ಇದರಿಂದ ನನ್ನ ವಕ್ತೃತ್ವ ಕಲೆಗೂ ಅಮೂಲ್ಯ ಶಕ್ತಿ ಬಂತು. ಸೈದ್ಧಾಂತಿಕ ನಿಲುವಿನಲ್ಲಿ ಸಂಸ್ಕಾರ ಅಧಿಕಗೊಂಡಿತು. ದರ್ಶನಜ್ಞಾನ ಜಾಗೃತವಾಯಿತು. ಜೊತೆಗೆ ಅನ್ಯ ವಿಷಯಗಳಲ್ಲಿ ನನ್ನ ಲೇಖನ ಕಲೆ ಚಿಗುರಲು ಮೊದಲಾಯಿತು. ಪಂಡಿತ ಪರೀಕ್ಷೆಯಲ್ಲಿ ಓದಿದ ಉತ್ತರ ರಾಮ ಚರಿತ್ರೆಯ ಮೇಲೆ "ಉತ್ತರೋರಾಮಚರಿತೇ ಭವಭೂತಿರ್ವಿಶಿಷ್ಯತೇ" ಎಂಬ ಶಿರೋನಾಮೆಯ ದೀರ್ಘಲೇಖನ ಬರೆದೆ. ಅದನ್ನು ರಾಮರಾಜ್ಯ ಪತ್ರಿಕೆ ಎಂಟೊಂಬತ್ತು ಕಂತುಗಳಲ್ಲಿ ಪ್ರಕಟಿಸಿತು. ಸಿದ್ಧಗಂಗಾ ತ್ರೈಮಾಸಿಕದಲ್ಲೂ ಪ್ರಕಟಗೊಂಡಿತು. ಇದನ್ನು ಪುಸ್ತಕರೂಪದಲ್ಲಿ ಪ್ರಕಟಿಸಬೇಕೆಂದಿದ್ದೆ. ಆರ್ಥಿಕ ದುಃಸ್ಥಿತಿಯ ಮೂಲಕ ಪ್ರಕಟಿಸಲಿಲ್ಲ.

ಗೌರೀಶಂಕರ ಸ್ವಾಮಿಗಳವರ ಭಾಷಣಗಳಿಂದ ಜಾಗೃತಗೊಂಡ ನನ್ನ ಲೇಖನ ಮತ್ತು ವಕ್ತೃತ್ವ ಕಲೆಗೆ ಬಣ್ಣವೇರಿದಂತೆ ಇನ್ನಿತರ ಕೆಲವು ಗ್ರಂಥಗಳ ಸತತಾಭ್ಯಾಸ ಪ್ರಯತ್ನ ನನಗೆ ಉತ್ತಮ ಶಕ್ತಿಯನ್ನು ಗಳಿಸಿ ಕೊಟ್ಟಿತು. ಅವುಗಳಲ್ಲಿ ಮುಖ್ಯವಾಗಿ ವೆಂಕಣ್ಣಯ್ಯನವರಿಂದ ಕನ್ನಡಕ್ಕೆ ಭಾಷಾಂತರಿಸಲ್ಪಟ್ಟ ರವೀಂದ್ರನಾಥ ಠಾಕೋರರ 'ಪ್ರಾಚೀನ ಸಾಹಿತ್ಯ' ವೆಂಬ ಚಿಕ್ಕದಾದ ಚೊಕ್ಕಗ್ರಂಥ. ಅಲ್ಲದೆ ನರಸಿಂಹಯ್ಯನವರಿಂದ ಕನ್ನಡಕ್ಕೆ ತರ್ಜುಮೆಗೊಂಡ ಇವರವೇ ಆದ ಕೆಲವು ಪ್ರಬಂಧಗಳು, ನವಕಲ್ಯಾಣಮಠದ ಕುಮಾರಸ್ವಾಮಿಗಳವರ ವೀರಶೈವ ದರ್ಶನ, ಮೀನ್‌ಕಣ್, ಮುಂಕಣ್, ಕಾಲಪ್ರವಾಹ, ಷಡಕ್ಷರ ಕವಿಯ ರಾಜಶೇಖರ ವಿಳಾಸ, ಶಬರ ಶಂಕರ ವಿಳಾಸ, ಹರಿಹರನ ಗಿರಿಜಾಕಲ್ಯಾಣ ಮತ್ತು ಬಸವರಾಜ ದೇವರ ರಗಳೆಯೇ ಮೊದಲಾದ ರಗಳೆಗಳು, ಕಾಳಿದಾಸನ ಕುಮಾರ ಸಂಭವ, ಶಾಕುಂತಲಗಳು ನನ್ನ ಮಾತಿಗೆ, ಲೆಕ್ಕಣಿಕೆಗೆ ಒಂದು ಶಕ್ತಿಯನ್ನು ತಂದಿತ್ತವು. ಉತ್ತರೋತ್ತರ ನಾನು ಒಳ್ಳೊಳ್ಳೆ ವಿಚಾರ ಸಾಹಿತ್ಯ ಗ್ರಂಥಗಳನ್ನೇ ಹೆಚ್ಚಾಗಿ ಓದಿದೆ. ಕಾದಂಬರಿಗಳಲ್ಲಿ ತ.ರಾ.ಸು. ಬರೆದ ನಾಲ್ಕೈದು ಐತಿಹಾಸಿಕ ಕಾದಂಬರಿಗಳು ಪುಟ್ಟಸ್ವಾಮಪ್ಪನವರ ಬಸವಣ್ಣನವರ ಬಗೆಗೆ ಬರೆದವುಗಳನ್ನು ಮಾತ್ರ ಓದಿದೆ. ಉಳಿದ ಕಾದಂಬರಿಗಳನ್ನು ಕೈಯಲ್ಲಿ ಮುಟ್ಟಲಿಲ್ಲವೆಂದರೂ ತಡೆದೀತು. ನನಗೆ ತುಂಬಾ ಹಿಡಿಸಿದ ಗದ್ಯಶೈಲಿ ಎಂದರೆ ಎಂ.ಆರ್.

ಕೃಷ್ಣಶಾಸ್ತ್ರಿಗಳ ವಚನಭಾರತದ್ದು. ಸರಳವೂ ಸತ್ವಯುತವೂ ಆದ ಆ ಗದ್ಯಶೈಲಿಗೆ ನಾನು ಮಾರುಹೋದೆ. ಶೃಂಗಾರವನ್ನು ದೊಡ್ಡದು ಮಾಡಿ ಬರೆದ ಕೆಲವರ ಪುಸ್ತಕಗಳನ್ನು ಕೈಯಿಂದಲೂ ಮುಟ್ಟಲಿಲ್ಲ. ಮೇಲ್ಕಾಣಿಸಿದ ಉತ್ತಮ ಪುಸ್ತಕಗಳ ಅಧ್ಯಯನದ ಫಲವಾಗಿ ದತ್ತವಾದ ಶೈಲಿಯಿಂದ ಸಂಸ್ಕಾರಗೊಂಡ ಬರವಣಿಗೆಯ ಕಲೆಯಿಂದ ನೂರಾರು ಲೇಖನಗಳನ್ನು ನಾನೂ ನನ್ನ ಪರಿಮಿತಿಯಲ್ಲಿ ಬರೆದೆ. ಇವೆಲ್ಲವುಗಳಲ್ಲಿ ನನ್ನ ದೃಷ್ಟಿಯಿಂದ ಅತ್ಯಂತ ಸುಂದರ ಭಾಷೆಯ ಭಾವದ ಪುಸ್ತಕವೆಂದರೆ ಠಾಗೋರರ 'ಪ್ರಾಚೀನ ಸಾಹಿತ್ಯ'ವೇ. ಆ ಪುಸ್ತಕವನ್ನು ಇಪ್ಪತ್ತು ಮೂವತ್ತು ಸಲ ಓದಿರಬಹುದು. ಈಗಲೂ ಓದುತ್ತಲೇ ಇದ್ದೇನೆ. ಓದಿದಂತೆ ಹೊಸಹೊಸ ಭಾವನೆಗಳು ನನ್ನಲ್ಲಿ ಸ್ಫುರಿಸುತ್ತಿರುತ್ತವೆ. ಒಂದೊಂದು ವಾಕ್ಯದ ಸೌಂದರ್ಯವನ್ನು ಅರಗಿಸಿಕೊಳ್ಳಲೂ ನಾನು ಘಂಟೆಗಟ್ಟಲೆ ಮೆಲುಕು ಹಾಕಿ ಆನಂದಾನುಭೂತಿ ಪಡೆದಿದ್ದೇನೆ.

### ತಿಪಟೂರು ಹೈಸ್ಕೂಲಿಗೆ ನಾನು ಬಡತಿಗೊಂಡದ್ದು

ದೇವರಾಯಪಟ್ಟಣದ ಪ್ರೈಮರಿ ಶಾಲೆಯಲ್ಲಿ ಎಂಟು ತಿಂಗಳು ಕೆಲಸ ಮಾಡಿದ ಮೇಲೆ 1952ನೇ ಫೆಬ್ರುವರಿ ಮೊದಲ ವಾರದಲ್ಲಿ ನನಗೆ ಪ್ರಮೋಷನ್ ಕೊಟ್ಟು ಅರವತ್ತು ರೂಪಾಯಿ ಸಂಬಳದ ಮೇಲೆ ತಿಪಟೂರು ಗೌರ್ನಮೆಂಟ್ ಹೈಸ್ಕೂಲಿಗೆ ವರ್ಗ ಮಾಡಿದ ಆರ್ಡರ್ ಬಂತು. ಆದರೆ ಇದೇ ಫೆಬ್ರುವರಿಯ ಮೊದಲ ವಾರದಲ್ಲಿಯೇ ಧಾರವಾಡದ ಮುರುಘಾಮಠದ ಶಿವಾನುಭವ ಸಮ್ಮೇಳನದಲ್ಲಿ 'ಹರಿಹರನ ಗಿರಿಜಾ ಕಲ್ಯಾಣದಲ್ಲಿ ಶಿವಾನುಭವ ದೃಷ್ಟಿ' ಎಂಬ ವಿಷಯದ ಮೇಲೆ ಭಾಷಣ ಮಾಡಲು ಒಪ್ಪಿಗೆ ಕೊಟ್ಟಿದ್ದೆನಾಗಿ ಅದನ್ನು ತಪ್ಪಿಸಿಕೊಳ್ಳಲು ಮನಸ್ಸು ಬಾರದೆ ಹೋಗಲೇಬೇಕೆಂದು ತೀರ್ಮಾನಿಸಿದೆ. ಏಕೆಂದರೆ, ಇದು ಬಸವನಾಳ ಮಾಸ್ತರರು ನನಗೆ ಮೈಸೂರಿನಲ್ಲಿ ಓದುವಾಗಲೇ ಒಪ್ಪಿಸಿದ್ದುದಾಗಿತ್ತು. ಆದರೆ ಬಸವನಾಳರು ಅಷ್ಟು ಹೊತ್ತಿಗಾಗಲೇ ಲಿಂಗೈಕ್ಯರಾಗಿ ಹೋಗಿದ್ದರು. ಈ ಆಹ್ವಾನವನ್ನು ತಪ್ಪಿಸಲು ಮನಸ್ಸೇ ಬರಲಿಲ್ಲ. ಧಾರವಾಡಕ್ಕೆ ಭಾಷಣ ವಿಷಯವನ್ನೆಲ್ಲ ಸಿದ್ಧಪಡಿಸಿಕೊಂಡು ಬಹುಶಃ ಫೆಬ್ರುವರಿ ಮೂರು ನಾಲ್ಕನೆಯ ತಾರೀಖೆಂದು ತೋರುತ್ತದೆ. (ಹಿಂದೆ ಇದನ್ನು ಸಂಕ್ಷೇಪತಃ ಹೇಳಿದ್ದೇನೆ). ರೈಲಿನಿಂದ ಇಳಿದು ಜಟಕಾದಲ್ಲಿ ಮುರುಘಾಮಠಕ್ಕೆ ಬಂದ ಕೂಡಲೇ ಅಲ್ಲಿ ನನ್ನನ್ನು ಎದುರುಗೊಂಡವರು ಕರ್ಜಗಿ ಮಠದ ಸ್ವಾಮಿಗಳೇ. ಅವರು "ನೀವೇ ಚನ್ನಪ್ಪನವರೇನು?" ಎಂದರು. "ಹೌದು ಸ್ವಾಮಿ" ಎಂದೆ. ಅವರು ನನ್ನನ್ನು ಇಳಿಸಿ ನನ್ನ ಹೋಲ್ಡಾಲಿಗೆ ಕೈಹಾಕಿ ಎತ್ತಿ ಹೆಗಲ ಮೇಲೆ ಇಟ್ಟುಕೊಂಡೇ ಬಿಟ್ಟರು. ಅವರ ಮುಖದ ಮೇಲಿನ ಭವ್ಯವಾದ ಗಡ್ಡ, ಉಟ್ಟ ಕಾವಿಯ ಕಫನಿ - ಇವನ್ನು ಕಂಡು ಇವರು ಯಾವುದೋ ಮಠದ ಸ್ವಾಮಿಗಳೆಂದು ತಿಳಿದು ಇವರ ಮೇಲೆ ನನ್ನ ಹಾಸಿಗೆ ಹೊರಿಸಬಹುದೇ ಎಂದು ನಾನು "ಅಯ್ಯೋ! ಸ್ವಾಮಿ ಬೇಡ ಬೇಡ, ನನ್ನ ಹಾಸಿಗೆ ಕೊಡಿ. ನಾನು ಹಿಡಿದುಕೊಂಡು ಬರುತ್ತೇನೆ" ಎಂದು ಕೊಸರಾಡಿದೆ. ಅವರು ಕೊಡಲಿಲ್ಲ. ಅವರು "ನಾವು ಸ್ವಾಮಿಗಳಾಗಿರಬಹುದು. ನೀವು ಈ ಮಠದ ಅತಿಥಿಗಳು. ಗುರುಗಳು ಮಠಕ್ಕೆ ಬಂದ ಅತಿಥಿಗಳ ಸೇವೆ ಮಾಡಬಾರದೇನು? ನಮಗೆ ಮೃತ್ಯುಂಜಯಪ್ಪಗಳು ಕಲಿಸಿರುವ ಮೊದಲ ಪಾಠವೇ ಸೇವೆ. ಸೇವೆ ಎಂದರೆ ಕುಳಿತು ಗೌಡಿಕೆ ಮಾಡುವುದಲ್ಲ. ಕೈಮುಟ್ಟಿ, ಮನಮುಟ್ಟಿ, ದೈಹಿಕವಾಗಿ ಅದನ್ನು ಆಚರಿಸಬೇಕೆನ್ನುತ್ತಾರೆ. ನೀವು ಸುಮ್ಮನೆ ಬನ್ನಿ" ಎಂದು ಧಕ್ ಧಕ್ ಹೆಜ್ಜೆಹಾಕುತ್ತ ನಡೆದೇ

ಬಿಟ್ಟರು. ನಾನು ಕಣ್‌ಕಣ್ ಬಿಟ್ಟೆ. ಅನಂತರ ನನಗಾಗಿ ಗೊತ್ತುಪಡಿಸಿದ್ದ ಕೊಠಡಿಗೆ ಹೋಗಿ ಹಾಸಿಗೆಯನ್ನಿಟ್ಟು "ಇದೇ ನಿಮಗಾಗಿ ಗೊತ್ತುಪಡಿಸಿರುವ ಕೊಠಡಿ. ನೀವು ದೂರದ ಪ್ರವಾಸ ಮಾಡಿಬಂದಿದ್ದೀರಿ. ಮೊದಲು ಸ್ನಾನ ಮಾಡಿ ಪ್ರಸಾದ ತಕ್ಕೊಂಡು ವಿಶ್ರಾಂತಿ ಪಡೆಯಿರಿ" ಎಂದು ಹೇಳುತ್ತ ಬಂದವರೆ ಸೇವೆಗಾಗಿ ಸಿದ್ಧನಾಗಿ ನಿಂತಿದ್ದ ಓರ್ವ ಸ್ವಯಂಸೇವಕನನ್ನು ಕರೆದು "ಇಗೋ ಅಪ್ಪಾ, ಅವರು ಸಿದ್ಧಗಂಗೆಯಿಂದ ಬಂದಿದ್ದಾರೆ. ಇವರ ಸ್ನಾನ, ಪೂಜೆ, ಊಟ, ಉಪಾಹಾರ, ಕಾಫಿ ಇತ್ಯಾದಿಗಳ ವ್ಯವಸ್ಥೆಯನ್ನು ನೀನು ಮಾಡಬೇಕು" ಎಂದು ಹೇಳಿಬಿಟ್ಟರು. ಅನಂತರ ಹುಡುಗರನ್ನು ಕೇಳಿ ಇವರು ಕರ್ಜಗಿ ಮಠದ ಸ್ವಾಮಿಗಳೆಂಬುದನ್ನು ತಿಳಿದೆ. ವೀರವಿಕ್ತರಾದವರಿಂದ ಸೇವೆ ಮಾಡಿಸಿಕೊಂಡೆನಲ್ಲ ಎಂಬ ಅಳುಕು ಮನಸ್ಸಿಗೆ ಉಂಟಾದುದಂತೂ ನಿಶ್ಚಯ. ನನಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ನನ್ನನ್ನು ಆ ಮಠದವರು ಆಗ ಕಂಡ ರೀತಿ, ತೋರಿದ ಆತೀಯತೆ, .ಮಾಡಿದ ಅನುಕೂಲ್ಯ ಇವೆಲ್ಲ ನನ್ನನ್ನೇ ಹುಚ್ಚನನ್ನಾಗಿಸಿಬಿಟ್ಟವು. ಹೀಗೂ ಉಂಟೆ? ಎನ್ನುವಂತಾಯಿತು. ಇದೆಲ್ಲ ಮಹಾಪ್ರಭಾವಶಾಲಿ ವೀರವಿರಕ್ತ...ಅಥಣೀ ಶಿವಯೋಗಿ ಕೃಪಾಶೀರ್ವಾದ, ಪರಿಶುದ್ಧ ಹೃದಯರಾಗಿದ್ದ ಶ್ರೀ ಮೃತ್ಯುಂಜಯ ಸ್ವಾಮಿಗಳ ಪ್ರಭಾವವೆಂದುಕೊಂಡೆ. ಅವರ ಪರಿಸರದಲ್ಲಿದ್ದ ಸ್ವಾಮಿಗಳನ್ನೆಲ್ಲ ಸಾಮಾಜಿಕ ಸೇವೆಯನ್ನು ಮನಮುಟ್ಟಿ, ಕೈಮುಟ್ಟಿ ಮಾಡಬೇಕೆಂದು ಕಟ್ಟುನಿಟ್ಟು ಮಾಡಿಬಿಟ್ಟಿದ್ದರು.

ನಿಜವಾಗಿ ಮೃತ್ಯುಂಜಯ ಸ್ವಾಮಿಗಳು ಪರಿಶುದ್ಧಾಂತಃಕರಣರು. ಹಸುಮಕ್ಕಳಂಥ ಮನಸ್ಸಿನ ಇವರು ಅತ್ಯದ್ಭುತ ಕ್ರಿಯಾಶೀಲರೂ, ಸಮಾಜ ಸಂಘಟಕರೂ, ಶಿವಪೂಜಾದುರಂಧರರೂ ಆಗಿ ಸಮಸ್ತ ವೀರಶೈವ ಸಮಾಜದವರ ಮನಸ್ಸನ್ನೇ ಗೆದ್ದವರು. ಅನ್ಯಮತದವರ ಗೌರವಾದರಗಳಿಗೂ ಭಕ್ತಿಗೂ ಪಾತ್ರರಾದವರು. ತಮ್ಮ ಮಠದ ಎಲ್ಲ ಕಾರ್ಯಕ್ರಮಗಳನ್ನು ಬಹು ಶಿಸ್ತಿನಿಂದಲೂ, ಘನತೆ ಗಂಭೀರತೆಗಳಿಂದ ನಿರ್ವಹಿಸುತ್ತಿದ್ದರು. ಪ್ರಚಂಡವಾದ ಜನಗಳಿಂದ ಕೂಡಿದ ಆ ಸಭೆ ಸದಾ ಶಾಂತ ಗಂಭೀರವಾಗಿರುತ್ತಿತ್ತು. ಎಲ್ಲರೂ ನೆಲದ ಮೇಲೆಯೇ ಕೂತು ಆಲಿಸುವ ವ್ಯವಸ್ಥೆ ಆ ಮಠದ್ದು. ಕುರ್ಚಿಗಳು ನೋಡಲೂ ಅಲ್ಲಿ ಇಲ್ಲ. ಉಪನ್ಯಾಸಕರು ಕೂಡಲು ಮಠದ ಕಟ್ಟೆಯ ಮೇಲೆ ಪ್ರತ್ಯೇಕ ಸ್ಥಳ, ಮೂರ್ತಿಗಳಿಗೆ, ಪ್ರತಿಷ್ಠಿತ ವಿದ್ವಾಂಸರಿಗೆ, ಸ್ತ್ರೀಯರಿಗೆ ಗೊತ್ತಾದ ಬೇರೆ ಬೇರೆ ಸ್ಥಳಗಳ ಏರ್ಪಾಡು ಆ ಮಠದ ಸಭೆಯ ಒಂದು ವೈಶಿಷ್ಟ್ಯವೆನ್ನಬೇಕು.

ಸಾಯಂಕಾಲದ ನನ್ನ ಉಪನ್ಯಾಸ ಕಾರ್ಯಕ್ರಮ ಪ್ರಾರಂಭವಾಯಿತು. ನನಗಿಂತ ಮೊದಲು ಆರ್.ಸಿ. ಹಿರೇಮಠ ಮತ್ತು ಇನ್ನೊಬ್ಬರ ಉಪನ್ಯಾಸಗಳು ಮುಗಿದವು. ನನ್ನ ಉಪನ್ಯಾಸದ ಸರದಿ ಬಂತು. ಹರೀಶ್ವರನ ಗಿರಿಜಾ ಕಲ್ಯಾಣದ ಪ್ರಮುಖ ಭಾಗಗಳು ಶಿವಕೀರ್ತನೆಯ ದೃಷ್ಟಿಯಿಂದ ನನಗೆ ಬಹಳಷ್ಟು ಬಾಯಿಪಾಠವಾಗಿದ್ದುವು. ಕನ್ನಡ ಪಂಡಿತ ಪರೀಕ್ಷೆಯಲ್ಲಿ ಕುಮಾರ ಸಂಭವ ನಮ್ಮ ಪಠ್ಯಪುಸ್ತಕವಾದುದಾಗಿತ್ತು. ಅದರಲ್ಲಿನ ಮೊದಲೆರಡು ಅಧ್ಯಾಯದ ಬಹುಭಾಗ ಕಂಠಪಾಠವಾಗಿತ್ತು. ಮೂರು, ನಾಲ್ಕು, ಐದನೆಯ ಅಧ್ಯಾಯದಲ್ಲಿನ ಅನೇಕ ಭಾಗಗಳನ್ನು ಶಿವಕೀರ್ತನೆಯ ದೃಷ್ಟಿಯಿಂದ ಬಾಯಿಪಾಠ ಮಾಡಿದ್ದೆನಾಗಿ ಕಾಳಿದಾಸನ ವರ್ಣನೆ ಮತ್ತು ಹರೀಶ್ವರನ ವರ್ಣನೆಯ ತೌಲನಿಕ ವಿಮರ್ಶೆಯ ಸಂದರ್ಭ ಬಂದಾಗಲೆಲ್ಲ ಕಾಳಿದಾಸನ ಹತ್ತಿಪ್ಪತ್ತು ಸುಂದರ ಶ್ಲೋಕಗಳನ್ನು ನನ್ನ ಭಾಷಣದ ತುಂಬೆಲ್ಲ ನಿಚ್ಚಳವಾಗಿ ನಿದರ್ಶನ ಕೊಡುತ್ತ ಭಾಷಣ ಮಾಡುತ್ತ ಮಾಡುತ್ತ ಸಭೆಯ ಗಮನವನ್ನೆಲ್ಲ ಸೆಳೆದು

ಉತ್ಸಾಹದ ಕಡಲಿನಲ್ಲಿ ಮುಳುಗಿಸಿಬಿಟ್ಟೆನೆಂಬುದು ಸ್ವಶ್ಲಾಘನೆಯ ವಿಷಯವಲ್ಲ. ಜೊತೆಗೆ ಕೆಲವು ಪ್ರಸಂಗಗಳಲ್ಲಿ ಬಾಣನ ಪ್ರಭಾವ ಹರೀಶ್ವರನ ಮೇಲೆ ಆಗಿರುವ ಭಾಗಗಳನ್ನು ಹೇಳುವಾಗ ಬಾಣ ಕಾದಂಬರಿಯ ಬಹುಭಾಗವನ್ನು ಕಂಠಪಾಠ ಮಾಡಿದ್ದ ನಾನು ಆಯಾ ಸುಂದರ ಭಾಗಗಳನ್ನೆಲ್ಲ ತಡಬಡಿಲ್ಲದೆ ಹೇಳಿ ಸಭೆಯನ್ನು ಆಶ್ಚರ್ಯಗೊಳಿಬಿಟ್ಟೆನೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದೇನೆ. ಅಂದಿನ ಆ ಸನ್ನಿವೇಶ ನನ್ನನ್ನು ಅತ್ಯುತ್ಸುಕನನ್ನಾಗಿಸಿಬಿಟ್ಟಿತು. ಕೇಳುವವರ ಆಸಕ್ತಿ ಅಧಿಕವಾಗುತ್ತಿದ್ದಂತೆ ಹೇಳುವ ನನ್ನ ಆಸಕ್ತಿಯೂ ಗರಿಗೆದರಿ ಪುಂಖಾನುಪುಂಖವಾಗಿ ಮೂಲ ಸಾಹಿತ್ಯವನ್ನೇ ಹಿಡಿದು ಮಾತನಾಡಿದುದು ಇಂದೂ ನನಗೆ ಒಂದು ಹೆಮ್ಮೆಯ ಪ್ರಸಂಗವೇ ಆಗಿತ್ತೆಂಬುದನ್ನು ಜ್ಞಾಪಿಸಿಕೊಳ್ಳುತ್ತಿದ್ದೇನೆ. ಪಾರ್ವತಿಯ ಬಾಲ್ಯವನ್ನು ವರ್ಣಿಸುವ ಸಂದರ್ಭ ಬಂದಾಗ ನನ್ನ ಉತ್ಸಾಹ ಇಮ್ಮಡಿಸುತ್ತಿತ್ತು. ಹರಿಹರ ಮಹಾಕವಿಯ..

ಸಾಮರ್ಥ್ಯದ ಬಿಳ್ತಿನಂತೆ, ಸೌಂದರ್ಯದಂಕುರದಂತೆ, ಸೌಕುಮಾರ್ಯದ ಪಲ್ಲವದಂತೆ, ಸಾಹಿತ್ಯದ ಕುಸುಮದಂತೆ, ಸತ್ಯದ ಫಲದಂತೆ, ಭೂಮಿಯ ಬಿಣ್ಪಿನಂತೆ, ಸಲಿಲದ ತಣ್ಪಿನಂತೆ, ಗಗನದ ಪೆಂಪಿನಂತೆ, ಪಯೋನಿಧಿಯ ನುಣ್ಪಿನಂತೆ, ಪವಮಾನನುಸಿರಿನಂತೆ, ಪಾವಕನ ತೇಜದಂತೆ, ಚಂದ್ರನ ಬಲದಂತೆ, ದಿವಸೇಂದ್ರನ ಕಿರಣದಂತೆ, ಪರಮಾತ್ಮನ ಪರಿಣಾಮದಂತೆ, ಲೋಕದಾಲೋಕದಂತೆ, ಸಲ್ಲಕ್ಷಣದ ಲಾವಣ್ಯದಂತೆ, ಬೆಳ್ದಿಂಗಳ ಬಣ್ಣದಂತೆ, ವಸಂತನ ಗದ್ಯದಂತೆ, ಮಲಯಾನಿಲನ ಮಹಿಮೆಯಂತೆ, ಮಕರಧ್ವಜನ ಮದದಂತೆ, ಕುಸುಮಬಾಣದ ಕುಶಲದಂತೆ, ಪುಣ್ಯದ ಜೀವದಂತೆ, ಶಿವಜ್ಞಾನದ ದೇಹದಂತೆ, ಸಾಲೋಕ್ಯದ ಸವಿಯಂತೆ, ಸಮೀಪ್ಯದ ಸೀಮೆಯಂತೆ, ಸಾರೂಪ್ಯದ ಸುಧೆಯಂತೆ, ಸಾಯುಜ್ಯದ ನಿಲವಿನಂತೆ, ಶಿವನ ಸುಖದಂತೆ, ಮುಕ್ತಿಯ ಮುಖದಂತೆ, ಕಾಂತಿಯ ಲತೆಯಂತೆ, ನಿರುಪಾಧಿಕ ಜ್ಯೋತಿಯಂತೆ, ಸಕಲ ಜಗನ್ಮಾತೆಯಪ್ಪ ಗಿರಿಜಾತೆ ಶೈಶವ ಲೀಲೆಯನ್ನೊಳಕೊಂಡು ತೊಳತೊಳಗಿ ಬೆಳಬೆಳಗಿ, ನಳನಳಸಿ ಬಳೆಯುತ್ತಿರ್ದಳ್"

ಈ ಗದ್ಯಭಾಗವನ್ನು ಉಸಿರು ಬಿಡದಂತೆ ತಡಬಡಿಲ್ಲದೆ ಗುಡುಗುಡಿಸಿಬಿಟ್ಟೆ. ಒಮ್ಮೆಲೆ ಸಭೆ ದೀರ್ಘಕಾಲ ಚಪ್ಪಾಳೆತಟ್ಟಿ ಒಬ್ಬರ ಮುಖವನ್ನೊಬ್ಬರು ನೋಡಿ ತಲೆಹಾಕಿದ್ದೂ ಹಾಕಿದ್ದೇ. ಇದರ ಅರ್ಥಕ್ಕಿಂತ ಸಾಹಿತ್ಯದ ಸೊಬಗೇ ಜನವನ್ನೆಲ್ಲ ಮರುಳು ಮಾಡಿಬಿಟ್ಟಿತೆಂದು ನಾನು ಭಾವಿಸಿದೆ. ಇದೊಂದು ನನ್ನ ಭಾಷಣದ ಅಥವಾ ಕಥೆಯ ಪಟ್ಟು. ಹರಿಹರ ಮಹಾಕವಿಯ ಸೊಗಸೇ ಅಂತಹುದು. ಭಾಷಣಕಾರರು ಸಭೆಯನ್ನು ಭಾಷೆಯ ಬೃಹದ್ಭಾವದಲ್ಲಿ ಪುಂಖಾನುಪುಂಖವಾಗಿ ಯಾವುದೇ ಒಂದು ವಸ್ತುವಿನ ದೀರ್ಘ ವರ್ಣನೆ ಮಾಡಿದಾಗ ಜನ ಭಾಷೆಯ ಮೋಡಿಗೆ ಮರುಳಾಗಿ ಮೈಮರೆಯುವುದೂ ಉಂಟು. ನಾನು ಇಂಥ ಕೆಲವು ಪಟ್ಟುಗಳನ್ನು ಆಗಾಗ ಉಪಯೋಗಿಸಿ ಜನರ ಗಮನವನ್ನು ನನ್ನ ಭಾಷಣದ ಕಡೆ ಆಕರ್ಷಿಸಿಬಿಡುವ ಒಂದು ಗತ್ತು ಕಲಿತಿದ್ದೆ. ಆ ಗತ್ತುಗಾರಿಕೆ ಈ ಸಭೆಯಲ್ಲೂ ಕೆಲಸ ಮಾಡಿತು. ಇದರ ಅರ್ಥಕ್ಕಿಂತ ಸಾಹಿತ್ಯದ ಸೊಬಗಿಗೆ ಮರುಳಾದವರೇ ಹೆಚ್ಚು. ಶಿವನ ಕೈಲಾಸವನ್ನು ವರ್ಣಿಸುವಾಗ ಯಾರಿಗೂ ತಿಳಿಯದ, ನನಗೇ ಪೂರ್ಣ ಅರ್ಥವಾಗದಿದ್ದ ಷಡಕ್ಷರ ಕವಿಯ ರಾಜಶೇಖರ ವಿಳಾಸದ ಹದಿನಾಲ್ಕನೆಯ ಅಧ್ಯಾಯದಲ್ಲಿರುವ -

ಮತ್ತಮಮು ಸಂತತ ಸಮಧಿಗತ ಭರ್ಮಕೂರ್ಮಸಕರ್ಮ ಪರಿಚಲತ್
ಪೃಥುಳತರ ಶಫರ ಕರಿನಿಕರ ಮಕರ ಸುಕರ ಹಿಮಕರಧವಳಮರಾಳ ಮಂಜುಳ
ಮದಮಧುಕರಪ್ರಕರ ಮಧುರರವಪರಿಗತ ನಿಜರಜಃಪುಂಜ ಪಿಂಜರಿತ
ಜಳಕನಕ ಕಮಳಕುಮುದ ಕಲ್ಹಾರವಿಸರ ಸರಳ ತರತರಂಗ ರಂಗದಭಂಗ

ಶೈವಲಲಿತಾಲಿತಾನ ವಿಳಸಿತ ವಿರಸ್ವಪಕೀಯ ಮಹನೀಯ ಗಾಂಭೀರ್ಯ ಪರಿಹಸಿತ
ಸುಧಾಶರಧಿಪುರ ಶ್ರೀ ಪರಿಖಾತವಲಯಲಲಿತ ಪುರೋಪವನ ಕಂಪಿತ ಸರಸ
ರಸಾಲತರು ಸಲ್ಲಸಿತ ಸಮುಲ್ಲಸಿತ ಪಲ್ಲವಪ್ರತಾನಪ್ರತಿಬಿಂಬ ಕದಂಬ ಪದ್ಮರಾ
ಗಾಯಿತ ಸ್ಫಟಿಕಮಣಿಮಯ ವಿಶಾಲ ಸಾಲಾಟ್ಟಾಲ ಚಾರುತರ ಚತುರ್ದ್ವಾರಸಾರನಿಗಮ...."

ಈ ಸಂಸ್ಕೃತ ಗದ್ಯ ಖಂಡವನ್ನೋದಿ ಜನಗಳಿಗೆ ಮಂಕುಬೂದಿಯನ್ನೆರಚಿ ನನ್ನ ಭಾಷಣ ಕಾರ್ಯಕ್ಕೆ ಸುಗಮ ದಾರಿಯನ್ನು ಮಾಡಿಕೊಂಡು ಬಹು ದೊಡ್ಡ ವಿದ್ವಾಂಸ ಖ್ಯಾತಿಯನ್ನು ಸುಲಭದರಲ್ಲಿಯೇ ಗಳಿಸಿ ಕೈ ಚಪ್ಪಾಳೆ ತಟ್ಟಿಸಿಕೊಂಡದ್ದೇ ತಟ್ಟಿಸಿಕೊಂಡದ್ದು. ಹೀಗೆಂದ ಮಾತ್ರಕ್ಕೆ ನನ್ನ ಭಾಷಣ ಬರಿಬುರುಡೆಯೆಂದು ಭಾವಿಸಬಾರದು. ಇಂಥದೇನಿದ್ದರೂ ಜನರ ಗಮನವನ್ನು ನನ್ನ ಭಾಷಣದ ಕಡೆ ಸೆಳೆದುಕೊಳ್ಳಲು; ಸ್ವಲ್ಪ ಹೊತ್ತು ಕಚಗುಳಿಗುಟ್ಟಿಸುವ ಹರಿಕಥೆದಾಸರ ಅಡ್ಡಕಥೆಯ ಮಾದರಿ ಎಂದು ತಿಳಿಯಬೇಕು. ಇಂಥ ಸಾಹಿತ್ಯದ ಒಂದು ರೀತಿಯ ಗೆಜ್ಜೆಯ ಕುಣಿತ ಮಾಡಿ........ಶಬ್ದಾಜಾಲದ ಬೆಡಗು ಬಿನ್ನಾಣಗಳತ್ತ ಗಮನ ಸೆಳೆದು ಕವಿಯ ಅಪಾರ ಪಾಂಡಿತ್ಯ, ವರ್ಣನಾ ಕೌಶಲ್ಯ ಕೌತುಕಗಳ ಸ್ಥೂಲ ಪರಿಚಯ ಮಾಡಿ ಗಂಭೀರ ವಿಷಯಕ್ಕೆ ಬಂದುಬಿಡುತ್ತಿದ್ದೆ. ದೊಡ್ಡ ದೊಡ್ಡ ವಿದ್ವಾಂಸರ ಭಾಷಣಗಳು ತುಂಬಿದ ಸಭೆಯಲ್ಲಿ ನೀರಸಗೊಂಡು ಯಾವಾಗ ಈ ಮಹಾರಾಯ ಬಾಯಿಮುಚ್ಚಿಕೊಂಡು ಕುಳಿತಾನಪ್ಪ! ಅನ್ನಿಸುವುದು ಇಂಥ ಪಟ್ಟುಗಳನ್ನು ಅವರು ಅಭ್ಯಾಸ ಮಾಡಿ ಪ್ರಯೋಗ ಮಾಡದಿರುವುದು. ಅಂಥವರ ಭಾಷಣಗಳು ಏನಿದ್ದರೂ ಆಸಕ್ತರಾದ ಕೆಲವೇ ಜಿಜ್ಞಾಸುಗಳ ಮಧ್ಯಕ್ಕೆ ಬೇಕಾದವು. ಭಿನ್ನರುಚಿಯ ಭಿನ್ನ ಸಂಸ್ಕೃತಿಯ ಸಾರ್ವಜನಿಕ ಜನಸಮೂಹಕ್ಕಲ್ಲ. ಮೇಲೆ ಹೇಳಿದ ನನ್ನ ಪಟ್ಟುಗಳು ಅರ್ಥ ತಿಳಿಯದವರಿಗೂ ಒಂದು ರೀತಿಯ ಆಶ್ಚರ್ಯ ಬೆರೆತ ಮನರಂಜನೆ. ವಿದ್ವಾಂಸರಿಗೆ ಕವಿ ಪ್ರಯೋಗ ಪರಿಣತಿಯತ್ತ ದೃಷ್ಟಿ. ನಮಗೆ ಸರಳ ಸಾಧನ. ಆದರೆ ಇಂಥ ದೀರ್ಘ ದೀರ್ಘತರ ಸಮಸ್ತ ಪದಪುಂಜಗಳ ಸುಸ್ಪಷ್ಟ ಉಚ್ಚಾರ ಸಹಿತವಾದ ಅವಸರ ಪಠಣ ಕಾರ್ಯಕ್ಕೆ ನಾಲಗೆ ಸಂಸ್ಕಾರ ಬಹಳ ಬೇಕಾದುದು ಅತ್ಯವಶ್ಯಕ. ಇಂಥ ಒಂದು ಮಹಾಸಭೆಯಲ್ಲಿ ಉಪನ್ಯಾಸಕ್ಕೆ ನಿಂತದ್ದು ಇದೇ ಮೊದಲು. ಇದಕ್ಕೂ ಮೊದಲು ನೂರಾರು ಸಭೆಗಳಲ್ಲಿ ಭಾಷಣ, ಶಿವಕಥೆಗಳನ್ನು ಮಾಡಿದ್ದರೂ ಆ ಎಲ್ಲ ಸಭೆಗಳಂತೆ ಈ ಸಭೆಯಲ್ಲ. ಇಲ್ಲಿ ದೊಡ್ಡ ವಿದ್ವಾಂಸರು, ಸಂಗೀತಗಾರರು, ಮಠಾಧಿಪತಿಗಳು, ಮುಖ್ಯವಾಗಿ ಮೃತ್ಯುಂಜಯಪ್ಪಗಳು, ಹಳ್ಳಿಹಳ್ಳಿಗಳಿಂದ ಬಂದಿದ್ದ ಮುಗ್ಧರು, ವಿದ್ಯಾರ್ಥಿಗಳು, ಇತರ ಪಟ್ಟಣಿಗರು - ಇಂಥ ಭಿನ್ನ ಭಿನ್ನ ಸಂಸ್ಕೃತಿ, ಅಭಿರುಚಿಯ ಜನಗಳಿಗೆಲ್ಲ ಹಿಡಿಸುವಂತೆ ಭಾಷಣ ಬಿಗಿಯ ಬೇಕಾದರೆ ಅದಕ್ಕೆ ವಿಶೇಷವಾದ ಸಿದ್ಧತೆ ಬೇಕೇಬೇಕು. ಗಂಭೀರ ವಿಷಯಗಳ ಜೊತೆಗೆ ಪೊಳ್ಳು ಪೊಳ್ಳಾದ ಮನರಂಜನೆಯ ಪಟ್ಟನ್ನೂ ಭಾಷಣಕಾರ ಪಡೆದಿರಲೇಬೇಕು. ಗಂಭೀರವಾದ ಹಾಸ್ಯ ಬೆರೆತ ತಂತ್ರಗಳನ್ನೂ ಆಗಾಗ ನುಗ್ಗಿಸಬೇಕಾಗುತ್ತದೆ. ಆಗಲೇ ಭಾಷಣಕಾರ ಎಲ್ಲ ವರ್ಗದ ಜನರ ಮೆಚ್ಚುಗೆಗೆ ಪಾತ್ರನಾಗುತ್ತಾನೆ. ಇಲ್ಲದಿದ್ದರೆ

ಏಕೆ ಬಾಯಿಮುಚ್ಚಬಾರದು. ಈ ಮೂದೇವಿ! ಅನ್ನಿಸಿಕೊಳ್ಳಬೇಕಾಗುತ್ತದೆ ಎಂಬುದೇ ನನ್ನ ತೀರ್ಮಾನ.

ಮನ್ಮಥನು ಮತಂಗಪರ್ವತದ ಮೇಲೆ ಏರಿ, ಪಕ್ಕದಲ್ಲಿ ರತಿಯನ್ನು ನಿಲ್ಲಲು ತಿಳಿಸಿ, ಮಹೇಶನ ವಾಮಭಾಗದಲ್ಲಿ ನಿಂತು ಆಕಾಶದಲ್ಲಿ ದೇವಸಮೂಹ ಭಾಪು-ಭಾಪುರೇ ಎಂದು ಉತ್ಸಾಹದ ಕೂಗಾಟ ಮಾಡುತ್ತಿರುವುದನ್ನು ಕೇಳಿ, ಶಿವನ ಮೇಲೆ ತನ್ನ ಬಾಣಾನುಸಂಧಾನ ಮಾಡುವಲ್ಲಿಂದ ಮುಂದೆ ನನ್ನ ಉಪನ್ಯಾಸದ ವೈಖರಿ ಬಣ್ಣವೇರಿ, ಕೇಳುವವರನ್ನು ಕುತೂಹಲದ ಕಡಲಲ್ಲಿ ಮುಳುಗಿಸುವಂತೆ ಕವಿಯ ವರ್ಣನಾಭಾಗವನ್ನು ವಿಸ್ತರಿಸಿ ಹೇಳುತ್ತಿದ್ದೆ. ಬಾಣ ಪ್ರಯೋಗದಿಂದ ಎಚ್ಚರಗೊಳ್ಳುವ ಶಿವನ ಸ್ವರೂಪ ವರ್ಣನೆ ಮಾಡುವಾಗಿನ ಕವಿಯ ಗದ್ಯಖಂಡವೊಂದನ್ನು ನಿರರ್ಗಳವಾಗಿ ಹೇಳುವುದರ ಮೂಲಕ ಸನ್ನಿವೇಶದ ಭವ್ಯತೆಯನ್ನು ಅಧಿಕಗೊಳಿಸುತ್ತಿದ್ದೆ. ಸಮಾಧಿಸ್ಥಿತಿಯಲ್ಲಿರುವ ಶಿವನ ಹತ್ತಿರ ಬಂದು -

ಪಾರ್ವತಿಯು ನವೀನ ಪುಷ್ಪಕುಲಮಂಡನವನ್ನು ಶಿವನ ಜಡೆಯೊಳ್, ಭುಜಂಗಳೊಳ್ ತೋಳುರಸ್ಥಳದೊಳ್ ಪದಂಗಳೊಳ್ ಸಿಂಗರಿಸುತ್ತೆ ಕಟಾಕ್ಷ ಕಾಂತಿಯೊಳ್ ನೋಡುತ್ತಿರುವುದು ಕೋಟ್ಯನುಕೋಟಿ ಕುಸುಮಾಯುಧರು ಹುಟ್ಟಿಸುತ್ತಿರುವಂತಿತ್ತು. ಈ ಸನ್ನಿವೇಶ ಕಂಡು ಮನ್ಮಥನು "ಇನ್ನಂಜೆನಂಜೆನಾಹಾ! ಉನ್ನತ ಬಲವಾಯ್ತೆನಗೆನುತ್ತೆ ತನ್ನ ಉದಂಚಿತ ಪಂಚಬಾಣಗಳನ್ನು ಬತ್ತಳಿಕೆಯಿಂದ ತೆಗೆದು ಇಕ್ಷುಕೋದಂಡಕ್ಕೆ ಹೂಡಿ ಆಕರ್ಣಂಬರಂ ಹೆದೆಯನ್ನು ಜಗ್ಗಿ ಒಂದೊಂದೇ ಬಾಣದಿಂದ ಹೊಡೆದು ವಿಫಲನಾಗಿ, ಕೊನೆಗೆ ಏಕಕಾಲದಲ್ಲಿ ಪಂಚಬಾಣಗಳನ್ನು ಅನುಸಂಧಾನ ಮಾಡಿಬಿಟ್ಟೆನೆಂದು ಹೇಳುವಾಗ ನಾನೂ ಬಾಣಬಿಡುವಾಗಿನ ಮನ್ಮಥನ ವೀರಾವೇಶದಲ್ಲಿ ಸಮರಸಗೊಂಡವನಂತೆ ವೀರಾವೇಶದ ಹಾವಭಾವದಿಂದ ನಾಟಕದ ಮನುಷ್ಯನಾಗಿ ಬಿಡುತ್ತಿದ್ದೆ. ಈ ನಾಟಕ ಜನಗಳಲ್ಲಿ ಆಶ್ಚರ್ಯವನ್ನುಂಟು ಮಾಡುತ್ತಿತ್ತೆಂಬುದನ್ನು ಬಾಯಿಬಿಟ್ಟು ಕಣ್ಣರಳಿಸಿ ಕೇಳುವ ಅವರ ಸ್ವರೂಪದಿಂದಲೇ ತಿಳಿಯುತ್ತಿದ್ದೆ. ಆಗ ನನ್ನ ಉತ್ಸಾಹ ತುತ್ತತುದಿಗೇರಿಬಿಡುತ್ತಿತ್ತು. ಪೂರ್ತಿ ಬಿಗಿಯನ್ನು ಸಡಿಲುಗೊಳಿಸದೆ ಅದೇ ಆವೇಶದಲ್ಲಿ -

ಮುಂದೆ ಬರುವ ಶಿವನ ನೇತ್ರಾಗ್ನಿಯ ಭಯಂಕರ ಸ್ವರೂಪವನ್ನು ವರ್ಣಿಸುವ ಮೂರುನಾಲ್ಕು ಪದ್ಯಗಳನ್ನು ವೀರರಸ ಪ್ರತಿಪಾದಕ ರಾಗಗಳಿಂದ-

*ನೋಡದಮುನ್ನಂದೋಪಂ / ನಾಡೆಯುಮೊತ್ತರಿಸಿ ನೀಳ್ದು ನಿಟಿಲೇಕ್ಷಣದೊಳ್ /*
*ಕೂಡೆ ಬಳಿಬಳಿದು ಸುಳಿಸುಳಿ / ದೀಡಿರಿದೊಳಗೊಳಗೆ ಘುಳುಘುಳಿಸಿ ಕುದಿದಾಗಳ್,*
*ಪೊಗೆದುದು, ಪತ್ತಿದತ್ತು, ಕಿಡಿಯಿಟ್ಟಿದು, ನಾಲ್ದೆಸೆದೋರಿದತ್ತು ಬಾನ್*
*ಗೊಗೆದುದು ನಿಂದ ಕೆಂಬೆಳಗು ಮಂ ಪರಪುತ್ತದು ಧಂಧಗಿಲ್ ಧಗಿಲ್*
*ಧಗಿಲೆನುತಟ್ಟೆ ತಟ್ಟಿದುದು ಮುಟ್ಟಿತು ಸುಟ್ಟಿತು ತಿಂದು ತೇಗಿದ*
*ತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣು ಪಂಪೆಯಾಳ್ದನಾ*

ಎಂದು ಹೇಳಿಬಿಡುತ್ತಿದ್ದೆ., ಇಲ್ಲಿಗೊಂದು ಘಟ್ಟ. ಈ ಆವೇಶದ ಕವಿಯ ಅತ್ಯುತ್ಸಾಹಭರಿತ ವಾಕ್ಯಗಳು ಸಭೆಯನ್ನು ಮಂತ್ರಮುಗ್ಧಗೊಳಿಸಿ, ಚಪ್ಪಾಳೆ ತಟ್ಟಿದ್ದೇ ತಟ್ಟಿದ್ದು. ಕವಿ ಶಬ್ದಗಳಿಂದ ಕಟ್ಟಿದ ಸುಂದರ ದೃಶ್ಯದ ಪ್ರತಿಮೆ ಆ ಕ್ಷಣದಲ್ಲಾದರೂ ವಿಲಕ್ಷಣಾನಂದಗೊಳಿಸಿ

ಮೈಮರೆಸುತ್ತಿತ್ತು. ಇದೇ ನನ್ನ ಗತ್ತುಗಾರಿಕೆ. ಅನಂತರ ಇದೇ ಸಂದರ್ಭವನ್ನು ಕಾಳಿದಾಸ ಕುಮಾರಸಂಭವದಲ್ಲಿ ನಿರೂಪಿಸಿದ ಸನ್ನೇವೇಶದ ತೌಲನಿಕ ವಿಮರ್ಶೆಗೆ ತೊಡಗಿ, ಆ ಚಿತ್ರವನ್ನೂ ಚಿತ್ರಿಸುತ್ತಿದ್ದೆ. ಇದು ಒಂದು ಬಗೆಯಲ್ಲ. ಪ್ರೌಢರಲ್ಲಿ ವಿಮರ್ಶಾಜ್ಞಾನವನ್ನೂ, ಸಾಮಾನ್ಯರಲ್ಲಿ ಕೌತುಕವನ್ನೂ, ಸಾಹಿತ್ಯದ ಆಳನೀಳಗಳನ್ನರಿಯದ ಮುಗ್ಧರಿಗೆ ಮಾತಿನ ಮೋಡಿಯ ಅಲೌಕಿಕಾನಂದವನ್ನೂ ಉಂಟುಮಾಡಿತೆಂದು ನನ್ನ ತೀರ್ಮಾನ. ಹೀಗೆ ಹರೀಶ್ವರನ ಗಿರಿಜಾ ಕಲ್ಯಾಣದ ಅನೇಕ ಪ್ರಸಂಗಗಳ ಶಬ್ದಚಿತ್ರಣ ನೀಡುತ್ತ ನೀಡುತ್ತ ಸುಮಾರು ಒಂದೂವರೆ ಗಂಟೆಗಳ ಕಾಲವನ್ನು ಉಪಯೋಗಿಸಿಕೊಂಡು ಕೊನೆಯಲ್ಲಿ ಕಾವ್ಯದಲ್ಲಿ ಬರುವ ಶಿವಾನುಭವ ದೃಷ್ಟಿಯನ್ನು ಅನೇಕ ಪ್ರಸಂಗಗಳ ದೃಷ್ಟಾಂತಗಳಿಂದ ದೃಢೀಕರಿಸಿ ಉಪನ್ಯಾಸ ಮುಗಿಸಿದ ನಂತರ ಮೃತ್ಯುಂಜಯಪ್ಪಗಳ ಪಾದಗಳಿಗೆ ನಮಸ್ಕರಿಸಿದೆ. ಅವರು ಬೆನ್ನಮೇಲೆ ಕೈಯಿಕ್ಕಿ "ಅಪ್ಪಾ, ನೀವು ಬಹಳ ಚೆನ್ನಾಗಿ ಮಾತಾಡಿದಿರಪ್ಪ. ಬಹಳ ಆನಂದವಾಯಿತು" ಎಂದು ಆಶೀರ್ವದಿಸಿದರು. ಆ ದಿನ ಸಭೆಗೆ ಬಂದಿದ್ದ ಧಾರವಾಡ ಜಿಲ್ಲಾ ಕಲೆಕ್ಟರರು "ಅದ್ಭುತವಾಗಿ ಮಾತನಾಡಿದಿರಿ. ಮೈಮರೆಸಿಬಿಟ್ಟಿರಿ. ನಿಮ್ಮ ಆಳವಾದ ಸಂಸ್ಕೃತಾಭ್ಯಾಸ ನನ್ನನ್ನು ಈ ದಿನ ಬೆರಗುಗೊಳಿಸಿಬಿಟ್ಟಿತು" ಎಂದರು. ಆದರೆ ನನ್ನ ಸಂಸ್ಕೃತ ಭಾಷಾಜ್ಞಾನ ಆಳವಾದದ್ದೇನೂ ಅಲ್ಲ ಎಂದು ನನಗೆ ನಾನೇ ಮನದಲ್ಲಿ ಅಂದುಕೊಂಡೆ. ನಾನು ಬಾಣಭಟ್ಟನ ಕಾದಂಬರಿಯನ್ನು, ಕುಮಾರ ಸಂಭವದ ಅನೇಕ ಶ್ಲೋಕಗಳನ್ನು ಬಾಯಿಪಾಠ ಮಾಡಿದುದರ ಪ್ರಭಾವದಿಂದ ಅನೇಕ ಪ್ರಸಂಗಗಳನ್ನು ತಡಬಡಿಸದೆ ಗಂಭೀರ ವಾಣಿಯಿಂದ ಹೇಳಿದುದೇ ಇವರಲ್ಲಿ ಹೀಗೆ ಭಾವಿಸಲು ಕಾರಣವಾಗಿತ್ತು. ಅನೇಕ ಜನ ದೊಡ್ಡ ದೊಡ್ಡವರು ಬಂದು ಚಿಕ್ಕ ವಯಸ್ಸಿನಲ್ಲಿ ನೀವು ಇಷ್ಟೊಂದು ಪಾಂಡಿತ್ಯ ಗಳಿಸಿದ್ದು ದೊಡ್ಡದೆಂದು ಶ್ಲಾಘಿಸಿದ್ದು ಇನ್ನೂ ಹೆಮ್ಮೆಯನ್ನುಂಟು ಮಾಡುತ್ತಿದೆ. ಆದರೆ ನನ್ನ ಈ ಭಾಷಣ ಕೇಳಿ ಅಂದಿನ ಸಭೆಯ ಓರ್ವ ಉಪನ್ಯಾಸಕರು ಮಾತ್ಸರ್ಯಪಟ್ಟು ಏನೇನೋ ಗೊಣಗಾಡಿದುದು ಗೊತ್ತಾಯಿತು. ಅವರ ಹೆಸರು ಹೇಳುವುದು ಇಲ್ಲಿ ಅಪ್ರಸ್ತುತ.

ಅನಂತರ ಮೃತ್ಯುಂಜಯಪ್ಪಗಳಿಗೆ 'ಬುದ್ಧಿ ನಾನು ನಸುಕಿನಲ್ಲಿ ಗಾಡಿಗೆ ಹೋಗಬೇಕು. ಅಪ್ಪಣೆ ಕೊಡಿರೆಂದು ಕೇಳಿದೆ. ಅಷ್ಟರಲ್ಲಿ ಅವರಿಗೆ ಯಾರೋ ಇವರು ಒಳ್ಳೆ ಕೀರ್ತನಕಾರರೆಂದೂ, ನಾಳೆ ಇವರಿಂದ ಒಂದು ಕೀರ್ತನ ಮಾಡಿಸಿಯೇ ಕಳಿಸಬೇಕು ಎಂದು ಹೇಳಿಬಿಟ್ಟಿದ್ದರಂತೆ. ಅದಕ್ಕೆ ಶ್ರೀಗಳವರೂ ಸಮ್ಮತಿಸಿ, "ಅಪ್ಪಾ, ನೀವು ಚೆನ್ನಾಗಿ ಕಥೆ ಮಾಡುತ್ತೀರೆಂದು ಎಲ್ಲರೂ ಹೇಳುತ್ತಿದ್ದಾರೆ. ಅದರಲ್ಲೂ ಸಿದ್ಧರಾಮೇಶ್ವರ ಕಥಾ ಪ್ರಸಂಗವನ್ನು ಅತ್ಯುತ್ತಮವಾಗಿ ಮಾಡುವರೆಂದು ತಿಳಿದು ಬಂದಿದೆ. ಈ ದಿನ ಹರಿಹರ ಮಹಾಕವಿಯ ಗಿರಿಜಾ ಕಲ್ಯಾಣ ಕಾವ್ಯದ ಬಗ್ಗೆ ಬಹು ಪ್ರಭಾವಯುತವಾಗಿ ಪ್ರವಚನ ಮಾಡಿದ್ದೀರಿ. ನಾಳೆ ಅವರ ಅಳಿಯಂದಿರಾದ ರಾಘವಾಂಕ ಕವಿಗಳ ಸಿದ್ಧರಾಮ ಚಾರಿತ್ರ್ಯವನ್ನು ನಾನು ಕೇಳಲೇಬೇಕು. ಅದನ್ನು ಮಾಡಿ ಊರಿಗೆ ಹೋಗಬೇಕು" ಎಂದುಬಿಟ್ಟರು. ನಾನು ನಿರುಪಾಯನಾದರೂ "ಬುದ್ಧಿ, ನಾನು ನಾಳೆ ಹೋಗಿ, ನಾಡಿದ್ದೇ ನನಗೆ ವರ್ಗವಾಗಿರುವ ತಿಪಟೂರು ಹೈಸ್ಕೂಲಿಗೆ ಕೆಲಸಕ್ಕೆ ಹಾಜರಾಗಬೇಕಾಗಿದೆ" ಎಂದೆ. "ಎಲ್ಲದಕ್ಕೂ ಮುರುಘೇಶ ಇದ್ದಾನೆ. ಮುರುಘೇಶನ ಈ ಸೇವೆಯನ್ನು ಮುಗಿಸಿಯೇ ಹೋಗಬೇಕು" ಎಂದುಬಿಟ್ಟರು. ನಾನು ಇನ್ನೇನು ಮಾಡಲು ಸಾಧ್ಯ. ಈ ಲಕ್ಷ್ಮಣರೇಖೆಯನ್ನು ದಾಟುವ ಸಾಮರ್ಥ್ಯ ನನಗೂ ಬರಲಿಲ್ಲ.

ಆದರೆ ನನ್ನಲ್ಲಿ ಒಂದು ಭಯವು ಮೂಡಿತು. ಮುರುಘಾಮಠದಲ್ಲಿ ಸೇರಿದಂಥ ವಿವಿಧ ವಿದ್ಯಾವಾರಿನಿಧಿಗಳೂ, ಪಂಡಿತೋತ್ತಮರೂ, ಸಂಗೀತ, ಸಾಹಿತ್ಯ ಕಲಾ ಕೋವಿದರುಗಳ ಮಹಾಸಭೆಗಳಲ್ಲಿ ಈ ಮೊದಲು ಕೀರ್ತನೆಗಳನ್ನು ಎಲ್ಲೂ ಮಾಡಿರಲಿಲ್ಲ. ನಾನು ಮಾಡಿದುದು ಸಾಮಾನ್ಯ ಸಭೆಗಳಲ್ಲಿ ಹಳ್ಳಿಪಳ್ಳಿಗಳಲ್ಲಿ. ಮೈಸೂರಿನಂಥ ಪಟ್ಟಣಗಳಲ್ಲಿ ಮಾಡಿದ್ದರೂ ಅದೂ ಸಾಮಾನ್ಯ ಜನಸಮೂಹದ ಸಭೆಗಳೇ. ಮುರುಘಾಮಠದ ಸಭೆ ಅಂತಹುದಲ್ಲ. ಆದರೂ ಇಂಥ ಒಂದು ಸಭೆಯಲ್ಲಿ ನಾನು ಮಾಡಿದ ಭಾಷಣ ಕಾರ್ಯಕ್ರಮ ಯಶಸ್ವಿಯಾದ ಬಗೆಗೆ ಆತ್ಮಪ್ರತ್ಯಯ ಮಾಡಿತ್ತು ನಿಜ. ಕೀರ್ತನ ಕಾರ್ಯಕ್ರಮಕ್ಕೆ ಶಾಸ್ತ್ರೀಯ ಸಂಗೀತದ ನೆರವು ಒದಗಿ ಬಂದಾಗಲೇ ಅದರ ಯಶಸ್ಸು. ಅದು ನಾದ ಮಾಧುರ್ಯ, ವಾಕ್‌ಶೋಭೆ, ದರ್ಶನಜ್ಞಾನ, ಸಾಹಿತ್ಯ ಜ್ಞಾನವನ್ನೆಲ್ಲ ಒಳಗೊಂಡುದಾಗಿದ್ದರೇ ಶೋಭೆ. ಇಲ್ಲಿ ನೆರವೇರುವ ಸಭೆಯಲ್ಲಾದರೂ ಮಲ್ಲಿಕಾರ್ಜುನ ಮನ್ಸೂರ, ಬಸವರಾಜ ಮನ್ಸೂರರಂಥ ಸಂಗೀತ ದಿಗ್ದಂತಿಗಳೂ, ತಬಲಾ ಇನ್ನಿತರ ವಾದ್ಯವಿದ್ಯಾ ಚತುರರೂ ಆಮಂತ್ರಿತರಾಗಿ ಬಂದು ದಿನವೂ ಸೊಗಸಾದ ಸಂಗೀತ ಕಾರ್ಯಕ್ರಮ ನಡೆಸಿಕೊಡುತ್ತಿರುವುದು ಗೊತ್ತಿತ್ತು. ಅಂಥ ಸಂಗೀತಜ್ಞರೂ, ನಾದಮಾಧುರ್ಯ ಸಾಗರದಲ್ಲಿ ಜನಮನವನ್ನು ಮುಳುಗಿಸುವವರೂ ಆದ ಕಲಾವಂತರ ಎದುರಿನಲ್ಲಿ ನಾನು 'ಸಂಗೀತ'ವಂದು ಬಾಯಿ ಬಿಡುವುದು ಹೇಗೆ? ಭಾಷಣಗಳಲ್ಲಿ ಸಾಹಿತ್ಯ ಖಂಡಗಳನ್ನೇನೋ ರಾಗವಾಗಿ ಹೇಳುತ್ತಿದ್ದೆ ನಿಜ. ಇಲ್ಲಿ ಸಂಗೀತ ಮುಖ್ಯವಲ್ಲ, ಸಾಹಿತ್ಯ ಮುಖ್ಯವಾಗಿತ್ತು. ಕೀರ್ತನದಲ್ಲಿ ಹಾಡುವ ಹಾಡುಗಳು ಸಂಗೀತಶಾಸ್ತ್ರ ಪ್ರಧಾನವಾಗಿರಬೇಕಲ್ಲವೆ? ಸುಮ್ಮನೇ ಅಡ್ಡಾದಿಡ್ಡಿ ಹಾಡಿದರೆ ಇವರೇನೆಂದುಕೊಂಡಾರು ಎಂಬ ಅಳುಕು ಇತ್ತು. ನನಗೆ ಕೆಲವು ರಾಗಗಳ ಹೆಸರೇನೋ ಭೀಮಪ್ಲಾಸ್, ಜೀವನ್ಪುರಿ, ಬಾಗೇಶ್ರೀ, ಪಟದೀಪ ಎಂದು ಗೊತ್ತಿತ್ತು ನಿಜ. ಆದರೆ ಅವುಗಳನ್ನು ಶಾಸ್ತ್ರೀಯವಾಗಿ ಹಾಡುತ್ತಿದ್ದೆನೆಂದಲ್ಲ. ಆ ರಾಗಗಳ ಛಾಯೆಯಲ್ಲಿ ಹೇಗೆ ಹೇಗೋ ಹಾಡಿ ಸಾಮಾನ್ಯ ಸಭೆಗಳಲ್ಲಿ ಕಥೆ ಮಾಡಿ ಪಾರಾಗಿ ಬರುತ್ತಿದ್ದೆ. ಎಷ್ಟೋ ವೇಳೆ ನಾನು ನಾಟಕಗಳನ್ನು ನೋಡಿ ನೋಡಿ ಸ್ವತಃ ನನ್ನಷ್ಟಕ್ಕೆ ನಾನೇ ನನ್ನದೇ ಆದ ವಿಧಾನದಿಂದ ಹಾಡಿ ಹಾಡಿ ಅಭ್ಯಾಸ ಮಾಡಿದ್ದ ರಾಗವೇ ಗೊತ್ತಿಲ್ಲದ ಹಾಡುಗಳಿಗಂತೂ ರಾಗ ತಾನಾಗಿಯೇ ಬಂದು ಕೂಡಿಕೊಳ್ಳಬೇಕಾಗಿತ್ತಲ್ಲದೆ ರಾಗ ಗೊತ್ತಾಗಿ ಅದರ ಶಾಸ್ತ್ರೀಯತೆಯ ಚೌಕಟ್ಟಿನಲ್ಲಿ ಹಾಡುತ್ತಿದ್ದೆನೆಂದೇನೂ ಅಲ್ಲ. ಇಂಥ ತರ್ಲೆಯ ಸಂಗೀತವನ್ನು ಕಳೆದ ಹತ್ತು ಹನ್ನೆರಡು ವರ್ಷಗಳಿಂದ ಹಾಡುತ್ತ ಕಥೆ ಮಾಡಿಕೊಂಡು ಬಂದಿದ್ದೆ. ಇಂಥ ನಾನು ನಾಳಿನ ನನ್ನ ಕಥೆಯ ಕಾರ್ಯಕ್ರಮದಲ್ಲಿ ಯಶಸ್ಸು ಸಂಪಾದಿಸೇನೇಯೇ? ಎಂಬ ಅಳುಕು ರಾತ್ರಿಯೆಲ್ಲ ಕಾಡಿದರೂ, ಈ ಮೊದಲು ಹೇಳಿದಂತೆ ಮೊಂಡುಧೈರ್ಯವೊಂದು ಹೆದರುವುದೇಕೆ? ಸಂಗೀತದ ಐಬನ್ನು ಸಾಹಿತ್ಯದಲ್ಲಿ ಮುಚ್ಚಿದರಾಯಿತು. ಸಿದ್ಧರಾಮ ಚರಿತ್ರೆಯ ಸಾಹಿತ್ಯಸೊಬಗಿನ ಬೇಕಾದಷ್ಟು ಬಂಡವಾಳವಿಟ್ಟುಕೊಂಡು ಈ ಸಂಗೀತದ ಐಬಿಗಾಗಿ ಭಯಪಡಬೇಕಾದುದೇ ಇಲ್ಲ. ಮೊದಲೇ ಸಂಗೀತಜ್ಞರ ಎದುರು ನಾನು ಸಂಗೀತಗಾರನಲ್ಲ ಎಂದು ತೋರಿಕೊಂಡು ಧೈರ್ಯವಾಗಿ ಬಾಯಿ ತೆರೆದರಾಯಿತು! ಎಂದು ಮನಸ್ಸು ಒಳಗಿನಿಂದ ಧೈರ್ಯ ಹೇಳಿ ಬೆನ್ನು ಚಪ್ಪರಿಸುತ್ತಿತ್ತು.

ಮರುದಿನ ಸಾಯಂಕಾಲ ಐದು ಘಂಟೆಗೆ ಸಭೆ ಪ್ರಾರಂಭವಾಗಿ ಮೊದಲ ಸಂಗೀತಾದಿ ಕಾರ್ಯಕ್ರಮ ಮುಗಿದ ಮೇಲೆ ಆರು ಘಂಟೆಗೆ ನನ್ನ 'ಸಿದ್ಧರಾಮೇಶ್ವರ' ಕಥಾ

ಕಾರ್ಯಕ್ರಮ ಪ್ರಾರಂಭವಾಯಿತು. ನಾನು ಮೊದಲೇ ಹೇಳಿದಂತೆ ಬಸವರಾಜ ಮನಸೂರರರೇ ಹಾರ್ಮೋನಿಯಂ ಮೇಲೆ ಕೈಯಾಡಿಸಿದರು. ಪಂಚಾಕ್ಷರಿ ಗವಾಯಿಗಳಲ್ಲಿ ಹನ್ನೆರಡು ವರ್ಷ ವಿದ್ಯಾಭ್ಯಾಸ ಮಾಡಿದ ಹುಬ್ಬಳ್ಳಿಯ ಓರ್ವರು (ಹೆಸರು ಗೊತ್ತಿಲ್ಲ) ತಬಲಾ ಎಳೆದುಕೊಂಡು ನಿಮ್ಮ ಶ್ರುತಿ ಯಾವುದು ಎಂದು ಕೇಳಿದ. 'ಎರಡೂವರೆ' ಎಂದೆ. ಎರಡೂವರೆಗೆ ತಬಲಾ ಕೂಡಿಸಿಕೊಂಡು ಚಾಪುಹಾಕಿದ. ಯಾರೋ ಇನ್ನೊಬ್ಬರು ಪಿಟೀಲು ಸರಿಪಡಿಸಿಕೊಂಡು 'ಕೊಂಯ್' ಗುಡಿಸಿದರು. ನನ್ನ ಎದೆ ಡವಡವ ಬಡಿದುಕೊಳ್ಳತೊಡಗಿತು. ಧೈರ್ಯತಂದುಕೊಂಡೆ. ಪ್ರಾರ್ಥನೆಗೆ ಯಮುನ ಕಲ್ಯಾಣಿ ರಾಗದ ಛಾಯೆಯ ರಾಗ ಪ್ರಾರಂಭಿಸಿದ್ದೇ ತಡ ಮನ್ಸೂರು ಬಸವಣ್ಣೆಪ್ಪ 'ಶಾಬ್ಬಾಸ್' ಎಂದು ಹಾರ್ಮೋನಿಯಂನ ಗಂಭೀರ ಧ್ವನಿಯನ್ನೆತ್ತಿ ಮಾಧುರ್ಯದ ಸೋನೆಯನ್ನೇ ಸುರಿಸತೊಡಗಿದ. ಪಿಟೀಲಿನ ರಾಗದ ಬಣ್ಣ ಭವ್ಯಗೊಂಡು ಕೂಡಿ ಸ್ವರ ಮೇಳದ ಸುರಸ ಸುಧೆಯೇ ಸುರಿಯತೊಡಗಿತು. ನನ್ನ ಉತ್ಸಾಹಕ್ಕೆ ಗರಿಮೂಡಿದಂತಾಯಿತು. ಈ ರಾಗ ನನ್ನ ಅತ್ಯಂತ ಪ್ರೀತಿಯ ರಾಗ. ಇದರ ಛಾಯೆಯನ್ನು ಶಾಸ್ತ್ರೀಯವಾಗಿ ಸುಂದರವಾಗಿ ರಾಗವಿಸ್ತಾರದಲ್ಲಿ ಬಸವಣ್ಣೆಪ್ಪ ಮುಖದಲ್ಲಿ ಸಂತೋಷ ಸೂಸುತ್ತ ಪ್ರಾರಂಭಿಸಿದ ಕೂಡಲೆ ನಾನು ಸಿದ್ಧರಾಮ ಚರಿತೆಯ ಮೊದಲ ಮಂಗಳಪದವಾದ -

*ಶ್ರೀ ಮಹಾಗುರು ಬಲೋದಗ್ರ ವಿಗ್ರಹನಚಳ*
*ಸೋಮಧಾಮಾವೃತ ತಟಿಪಟಲ ವೇಷನಾ*
*ಶಾಮ(ಯ ಭಯಾತೀತ ನೂತನಾಂಗಂ ಮಂಗಳೋದಯ ದಯಾಭರಿತನು*
*ಪ್ರೇಮದಿಂದೆಮಗೀಗೆ ಭಕ್ತಿಯಂ ಶಿವಸಿದ್ಧ*
*ರಾಮನಭಿರಾಮನುದ್ದಾಮ ಜಿತಕಾಮನತಿ*
*ಭೀಮ ಸುಖಧಾಮ ಮಾಯಾಮಥನ ಸಂಗ್ರಾಮ ಸೋಮಧರ ಸಲಹುಗೆಮ್ಮ ॥*

ಇದನ್ನು ರಾಗ ತಾಲ ಲಯಬದ್ಧವಾಗಿ ಹಾಡತೊಡಗಿದೆ. ಈ ರಾಗದ ಸೌಂದರ್ಯ ನನಗೆ 1942ರಿಂದಲೂ ಪ್ರಿಯವಾದುದಾಗಿತ್ತು. ಇಂಗಳಿಗಿ ವಿರೂಪಾಕ್ಷಶಾಸ್ತ್ರಿ ಎಂಬುವರು ಹಾಡುತ್ತಿದ್ದುದನ್ನು ಅನುಕರಿಸಿ ಉಳಿದಂತೆ ಬೇರೆಯವರಿಂದ ಅಲ್ಲಿ ಇಲ್ಲಿ ಕೇಳಿ ಸ್ವಲ್ಪ ಅಭ್ಯಾಸ ಮಾಡಿದ್ದೆ. ಈ ರಾಗದ ಸೌಂದರ್ಯ ನನ್ನ ಮನಸ್ಸನ್ನು ಆವರಿಸಿಕೊಂಡಿತ್ತು. ಆದ್ದರಿಂದ ಇದೆ ನನ್ನ ಮಂಗಲಪದ್ಯದ ರಾಗವಾಗಿರುತ್ತಿತ್ತು. ಇದರ ಛಾಯೆಯನ್ನು ಸ್ವಲ್ಪ ಸ್ವಲ್ಪ ಸ್ಪಷ್ಟ ಧ್ವನಿಯಲ್ಲೂ, ಉಳಿದ ರಾಗ ವಿಸ್ತಾರಾದಿಗಳನ್ನು ಹಾರ್ಮೋನಿಯಂ ಧ್ವನಿಯ ಸಂಧಿಯಲ್ಲಿ ಕಳ್ಳದನಿಯಲ್ಲಿ ನುಗ್ಗಿಸಿ ಗುಂಯ್‌ಗುಡುತ್ತ ತಲೆಹಾಕುತ್ತ ತಾಳಹಾಕುತ್ತ ನಿಂತರೆ, ಬಸವಣ್ಣೆಪ್ಪನವರು ಸೊಗಸಾಗಿ ಆ ರಾಗವಿಸ್ತಾರವನ್ನು ಮನಮೋಹಕವಾಗಿ 'ಶಾಬಾಸ್' ಎನ್ನುತ್ತ ತಲೆ ಕುಣಿಸಿ ನುಡಿಸಲಿಕ್ಕೆ ಹತ್ತಿದರು. ನನಗೆ ಧೈರ್ಯ ಬಂತು. ಉತ್ಸಾಹ ಇಮ್ಮಡಿಸಿತು. ಸಂಗೀತ ವಿದ್ವಾಂಸರೆದುರು ನಾವು ತಲೆಹರಟೆ ಮಾಡಬಾರದಲ್ಲವೆ? ಅವರೂ ಪಿಟೀಲಿನವರೂ ರಾಗವನ್ನು ಎಳೆದೊಯ್ಯುತ್ತಿದ್ದರೆ ಹಾಗೆ ನಾನೂ ಹೊಂದಿಕೊಂಡವನಂತೆ ನಟಿಸಿ ಹಾಡಿಬಿಟ್ಟೆ. ಅನಂತರ ಸ್ವಲ್ಪಹೊತ್ತು ಪೀಠಿಕಾಪ್ರಕರಣವನ್ನು ಹೇಳುತ್ತ ಪ್ರಭುಲಿಂಗಲೀಲೆಯಲ್ಲಿ ಬರುವ -

ಕಂತುವನೆ ಕಂಗೆಡಿಸಿ ಒಳಪೊ
ಕ್ಕಂತರಂಗ ವಿಚಾರವೆಲ್ಲವ
ಸಂತೆಯಂಗಡಿಯಂತೆ ಸೊನ್ನಲಾಪುರದೊಳೊಡ್ಡೈಸಿ
ಚಿಂತಿತಾರ್ಥವನವರ್ಗಿತ್ತು
ನಿರಂತರಖಿಳರಿಗರಿವನೀವ ಮ
ಹಂತನೆನಿಸಿದ ಸಿದ್ದರಾಮಯ್ಯಗೆ ಶರಣಾರ್ಥಿ

ಈ ಭಾಮಿನಿ ಷಟ್ಪದಿಯನ್ನು ಬಸವರಾಜ ಮನ್ಸೂರರು ತಮ್ಮ ಅಕ್ಷಯಾಂಬರ ನಾಟಕದಲ್ಲಿ ದ್ರೌಪದಿಯ ಪ್ರಶಂಸನೆಮಾಡುವ ಸಂದರ್ಭದಲ್ಲಿ ಹಾಡುತ್ತಿದ್ದ "ಶಾಮಾ ನೀ ಕೋಮಲೆ...." ಎಂಬ ಹಾಡಿನ ಧಾಟಿಯಲ್ಲಿಯೇ ಹಾಡಿಬಿಟ್ಟೆ, ಕೇಳಬೇಕೆ, ಮನ್ಸೂರರು ತಾನಿನ ಮೇಲೆ ತಾನುಗಳನ್ನು ನಗುನಗುತ್ತ ನುಡಿಸತೊಡಗಿದರು. ನಾನು ರಾಗಹಚ್ಚಿ ಕೊಡುವುದೇ ತಡ ಥಟ್ಟನೆ ಹಿಡಿದು ನುಡಿಸುತ್ತಿದ್ದಾಗ ತಬಲಾ ವಾದಕನೂ ಅತ್ಯುತ್ಸಾಹದಿಂದ ತಬಲಾ ನುಡಿಸತೊಡಗಿಬಿಟ್ಟ. ನನ್ನ ಕಥೆಗೆ ರಂಗೇರಿ ಹೋಯಿತು. ಸಾಮಾನ್ಯವಾಗಿ ನನ್ನ ಹಾಡಿನ ಮಟ್ಟುಗಳೆಲ್ಲ ಆ ಕಾಲದಲ್ಲಿದ್ದ ನಾಟ್ಯಸಂಗೀತದ ಮಟ್ಟುಗಳೇ, ಅದರಲ್ಲೂ ಬಸವರಾಜ ಮನ್ಸೂರರ ನಾಟಕ ಕಂಪನಿಯಲ್ಲಿ ಆಗ ಆಡುತ್ತಿದ್ದ ಅಕ್ಷಯಾಂಬರ, ಉಷಾಸ್ವಯಂವರ, ಕಡ್ಲಿಮಟ್ಟಿ ಸ್ಟೇಷನ್ ಮಾಸ್ತರ್ ನಾಟಕಗಳೊಳಗಿನವೇ. ಇವರ ಕಂಪನಿಯ ನಾಟಕಗಳನ್ನು ಅನೇಕ ಸಲ ನೋಡಿದ್ದ ಬಗೆಗೆ ಹಿಂದಿನ ಪುಟಗಳಲ್ಲಿ ವಿವರಿಸಿದ್ದೇನೆ. ಅಪೂರ್ವ ಚೀಜುಗಳನ್ನುಳ್ಳ ಕಂದಗಲ್ ಹನುಮಂತರಾಯರ ಪ್ಲಾಟನ್ನು ಇವರು ಪ್ರದರ್ಶಿಸುತ್ತಿದ್ದರು. ಆ ಕಂಪನಿಯಲ್ಲಿದ್ದ 'ಸುಶೀಲಾ'ಎಂಬ ಅಪೂರ್ವ ನಟಿಯ ಸುಮಧುರ ಸಂಗೀತಕ್ಕೆ ಮರುಳಾಗಿದ್ದ ನಾನು ಅವಳು ಹೇಳುತ್ತಿದ್ದ ಅನೇಕ ಟುಮರಿ ಚೀಜುಗಳನ್ನು ನನ್ನ ಮನಸ್ಸಿಗೆ ಬಂದ ಹಾಗೆ ಹಾಡಿ ಹಾಡಿ ಆಗ ನಾನು ಮಾಡುತ್ತಿದ್ದ ಕಥೆಗಳಿಗೆ ಜೋಡಿಸಿಕೊಂಡಿದ್ದೆ. ಒಮ್ಮೊಮ್ಮೆ ಹಾರ್ಮೋನಿಯಂನವರು ಒಂದು ಹಾಡಿನ ಲಯವನ್ನು ಹಿನ್ನೆಲೆಯಾಗಿ ಎತ್ತಿಕೊಂಡ ಕೂಡಲೇ ಮಾತನಾಡುವ ಮಾತುಗಳನ್ನೇ ಹಾಡಿನ ಮಟ್ಟುಗಳನ್ನಾಗಿ ಪರಿವರ್ತಿಸಿಕೊಂಡು ಒಂದೊಂದು ಚುಟುಕಿ ಹಾಡಿಬಿಡುತ್ತಿದ್ದೆ. ಮನ್ಸೂರರು ತಮಗೆ ಅತಿ ಪರಿಚಿತವಾಗಿದ್ದ ಈ ಚೀಜುಗಳ ರಾಗಗಳನ್ನು ಅಂದವಾಗಿ ನುಡಿಸುತ್ತಾ ನಗುನಗುತ್ತ ಶಾಬಾಸ್ ಎಂದು ಉದ್ಗರಿಸುತ್ತ ನನ್ನ ಹುಚ್ಚನ್ನು ಕೆರಳಿಸಿಬಿಡುತ್ತಿದ್ದರು. ಹೀಗಾಗಿ ಬಹಳ ರಂಗಿನಿಂದ ನನ್ನ ಕಥೆ ಪ್ರಾರಂಭವಾಗಿಬಿಟ್ಟಿತು. ನನ್ನ ಕಥೆಯ ಪ್ರಾರಂಭ ಉತ್ಸಾಹಪೂರ್ಣವಾಗಿ ರಂಗುಗೊಂಡು ಬಿಟ್ಟರೆ ಮುಕ್ತಾಯದವರೆಗೆ ಆ ಬಿಗುವನ್ನು ಇಳಿಯಗೊಡದಂತೆ ಕಥೆಯನ್ನು ತೆಗೆಸಿಕೊಂಡು ಹೋಗಿಬಿಡುತ್ತಿದ್ದೆ. ಪ್ರಾರಂಭದ ಹದಿನೈದು ಇಪ್ಪತ್ತು ನಿಮಿಷಗಳಲ್ಲಿ ನನ್ನ ಕಥೆಯ ಫಲಿತಾಂಶವನ್ನು ನಾನೇ ನಿರ್ಣಯಿಸಿಕೊಂಡುಬಿಡುತ್ತಿದ್ದೆ. ಸಾಥಿಗಳು ನನ್ನ ಸಂಗೀತದ ಮತ್ತು ಮಾತಿನ ಧ್ವನಿ ವಿಶೇಷಗಳಿಗೆ ಚಟ್ಟನೆ ಹೊಂದಿಕೊಂಡು ಸಾಥಿ ಕೊಟ್ಟರೆ ನಾನೂ ಏರಿಬಿಡುತ್ತಿದ್ದೆ. ಅವರೇನಾದರೂ ಎತ್ತು ಏರಿಗೆ, ಕೋಣ ಕೆರೆಗೆ ಅನ್ನುವಂತೆ ಸಾಥಿ ಕೊಡುವುದರಲ್ಲಿ ತರಲೆ ಮಾಡಿಬಿಟ್ಟರೆ ಕಥೆ ಕಳೆಗಟ್ಟುತ್ತಿರಲಿಲ್ಲ. ಕರ್ಮಧರ್ಮ ಸಂಯೋಗವೋ ಎನ್ನುವಂತೆ ಆ ದಿನ ಬಸವಣ್ಣೆಪ್ಪ ಮನ್ಸೂರರಂಥ ನನ್ನ ಮಟ್ಟುಗಳನ್ನೆಲ್ಲ ಬಲ್ಲವರೂ ಸ್ವತಃ ಸಂಗೀತಜ್ಞರೂ, ಒಳ್ಳೇ ಹಾರ್ಮೋನಿಯಂ ವಾದಕರೂ

ಸಿಕ್ಕದ್ದು ಆ ದಿನ ನನ್ನ ಕಥೆ ಯಶಸ್ವಿಗೊಳಿಸಲು ಬಹಳಷ್ಟು ಸಹಕಾರಿಯಾಗಿಬಿಟ್ಟರು. ಸಿದ್ಧರಾಮನ ಜನನ ವೃತ್ತಾಂತವನ್ನು ತಿಳಿಸುವ ನಿಮಿತ್ತ ರೇವಣಸಿದ್ಧೇಶ್ವರರು ಸೊನ್ನಲಿಗೆಗೆ ಬಂದಾಗ ಅಲ್ಲಿದ್ದ ಚಾಮಲಾದೇವಿಯು ರೇವಣಸಿದ್ಧರನ್ನು ಎದುರ್ಗೊಳ್ಳುವ ವಿಚಾರ ತಿಳಿಸುವಾಗ ಹರಿಹರ ಮಹಾಕವಿಯು ರೇವಣಸಿದ್ಧೇಶ್ವರ ರಗಳೆಯ ಹೊಂದಿಕೆಯಾಗುವಂತಹ ಒಂದು ಭಾಗವನ್ನು ಬಾಯಿಪಾಠ ಮಾಡಿಬಿಟ್ಟಿದ್ದೆ.

*ಸಂದ ಸೊನ್ನಲಿಗೆಯಿಂದೊಲ್ದು ಚಾಮಲದೇವಿ ।*
*ಮುಂದೆ ಮೈಯಿಕ್ಕುತುಂ ಬಂದು ಗುರುಪದಭಾವಿ ।*
*ತನ್ನ ಗುರುವಂ ಕಂಡು ಚನ್ನಗುರುವಂ ಕಂಡು ।*
*ಉನ್ನತ ಶಿವಜ್ಞಾನ ಕಲ್ಪತರುವಂ ಕಂಡು ।*
*ಕೃತಕೃತ್ಯಳಾಗುತುಂ ಕೈಮುಗಿದು ನಿಂತಿರಲ್ ।*
*ಅತಿಶಯಜ್ಞಾನಿ ಸಿದ್ಧನ ಮುಂದೆ ನಿಂತಿರಲ್ ।*
*ಇಲ್ಲಿಮೊರಡಿಯ ಮುದ್ದಗೌಡನರ್ಧಾಂಗಿಯೊಳ್ ।*
*ಸಲ್ಲಲಿತ ಸುಗ್ಗವ್ವೆಯೆಂಬ ಕಾರಣಿಕೆಯೊಳ್ ।*
*ಕಾರಣಿಕ ಸಿದ್ಧನುದಯಿಸುವನೊರ್ವಂ ಕೇಳ ।*
*ಮುರಾರಿಯಂ ಬಯಸಿ ಭಾವಿಸುವ ವಿಭು ಕೇಳ ॥*

ಹೀಗೆ ರಗಳೆಯ ಖಂಡವನ್ನು ಅರಜಂಪೆ ತಾಳದಲ್ಲಿ ಕುಣಿದಾಡಿ ತಾಳಹಾಕುತ್ತ ಒಳ್ಳೆ ಗತ್ತುಗಾರಿಕೆಯಿಂದ ರಾಗವಾಗಿ ಹೇಳಿಬಿಡುತ್ತಿದ್ದೆ. ಹೀಗೆ ಹೇಳಿ ಅದೇ ರಾಗದಲ್ಲಿಯೇ ಒಂದು ಚೀಜನ್ನು ಕಥೆಗೆ ಸಂಬಂಧಿಸಿದಂತೆ ಹೇಳಿದರೆ ಸಭೆ ಚಪ್ಪಾಳೆಗಳ ಸುರಿಮಳೆ ಸುರಿಸಿಬಿಡುತ್ತಿದ್ದರು. ಹರಿಹರನ ರಗಳೆಗಳು ರಾಗತಾಲ ಲಯಬದ್ಧವಾಗಿ ಹೇಳಿದಾಗ ಬಹು ಸೊಗಸಾಗಿ ಮೂಡಿಬಂದು ಜನಮನವನ್ನು ತಣಿಸಿಬಿಡುತ್ತವೆ. ಇಂಥ ಸಂದರ್ಭದಲ್ಲಿ ಕವಿಯ ಕಾವ್ಯಶಕ್ತಿಯನ್ನು ಸ್ವಲ್ಪ ವಿವರಿಸುತ್ತ ದೃಷ್ಟಾಂತಕ್ಕೆ ಕುಂಬಾರಗುಂಡಯ್ಯನ ರಗಳೆಯ ಗದ್ಯ ಖಂಡವನ್ನು ಹೇಳಿ ಕಾವ್ಯದ ಸೊಗಸನ್ನು ಜನಮನದಲ್ಲಿ ಅಚ್ಚೊತ್ತಿ ನಿಲ್ಲುವಂತೆ ಮಾಡುವ ಒಂದು ಪಟ್ಟು ನನ್ನ ಕಥೆಯಲ್ಲಿನ ಒಂದು ವೈಶಿಷ್ಟ್ಯವಾಗಿತ್ತು. ಅದು ಜನತೆಯ ಕಾವ್ಯಾಮೃತ ರಸಾಸ್ವಾದನದ ಇಚ್ಛೆಯನ್ನು ಅಧಿಕಗೊಳಿಸುವ ಒಂದು ತಂತ್ರ. ಇಂಥ ತಂತ್ರಗಳು ಯಶಸ್ವಿಯಾಗಬೇಕಾದರೆ ಇವನ್ನೆಲ್ಲ ಬಾಯಿಪಾಠ ಮಾಡಿದ್ದರೇ ಸಾಧ್ಯ. ಅವಷ್ಟನ್ನೂ ನಾನು ಬಾಯಿಪಾಠ ಮಾಡಿದ್ದೆ.

ಒಂದು ರೋಮಾಂಚಕಾರಿ ಪ್ರಸಂಗ ಸಭೆಯಲ್ಲಿ ಆಗ ನಡೆದುದು ಇನ್ನೂ ನನ್ನ ಕಣ್ಣು ಮುಂದೆ ಕಟ್ಟಿದಂತಿದೆ. ನೆನೆಸಿಕೊಂಡು ಈಗಲೂ ನಾನು ಪುಳುಕಗೊಳ್ಳುತ್ತಿದ್ದೇನೆ. ಅದು ಸಿದ್ಧರಾಮನು ಹುಟ್ಟಿದ ಸಮಯ. ಮೃತ್ಯುಂಜಯಸ್ವಾಮಿಗಳು ಒಂದು ಮಂಡಿಯ ಮೇಲೆ ಎರಡೂ ಕೈಗಳನ್ನು ಕಟ್ಟಿ ಊರಿಕೊಂಡು ಅದರ ಮೇಲೆ ತಮ್ಮ ಗದ್ದವನ್ನಿಟ್ಟುಕೊಂಡು ನನ್ನ ಮುಖವನ್ನೇ ನೋಡುತ್ತ ತನ್ಮಯತೆಗೊಂಡು ನೋಡುತ್ತಲೇ ಇದ್ದುದನ್ನು ನಾನು ಗಮನಿಸುತ್ತಿದ್ದೆ. ಉಪಾಧ್ಯಾಯರಿಗೆ ಪಾಠ ಒಪ್ಪಿಸುವ ಹುಡುಗನಂತೆ ನಾನು ಅವರ ಕಡೆಗೆ ವಿಶೇಷವಾಗಿ

ನೋಡುತ್ತ ನಾನು ಕಲಿತಿದ್ದ ಕಥೆಯ ಪಾಠವನ್ನು ಒಪ್ಪಿಸುವವನಂತೆ ಹೇಳುತ್ತಿದ್ದೆ. ಸಿದ್ಧರಾಮನು ಹುಟ್ಟಿದ ಸಮಯಕ್ಕೆ ಸರಿಯಾಗಿ ಸೂರ್ಯೋದಯವಾದುದನ್ನು ಕವಿ ಉತ್ಪ್ರೇಕ್ಷಿಸುತ್ತಾ,

ಅಂಬಿಕಾಪತಿ ಲೋಕಮಂ ಸಾಕಲೊಗೆದನೆಂ ।
ದೆಂಬುದಂ ತನ್ನ ದಶಶತ ಕರದಿ ಗಗನವೆಂ ।
ದೆಂಬ ಜೇಗಟೆಯಿಂದ ಧರೆಗೆ ಡಂಗುರವೊಯ್ಯಲೆಂದಂದು ನಿಂದಿರ್ದನೋ
ಎಂಬಂತೆ ರವಿಯುದಯಗಿರಿಗೆ ಬಂದಂ ಜನ ಕ ।
ದಂಬವಾ ಪೂಮಳೆಗೆ ಜನನಕ್ಕೆ ಶಿಶುಗೆ ಚೋ ।
ದ್ಯಂಬಟ್ಟರಲ್ಲಲ್ಲಿ ತನತನಗೆ ಹರಿಹರಿದು ನೆರೆನೆರೆದು ನುಡಿನುಡಿದರು ॥

ಹೀಗೆ ಹೇಳಿರುವ ಪದ್ಯವನ್ನು ಅತ್ಯುತ್ಸಾಹದಿಂದ ಉತ್ತರಸ್ವರದಲ್ಲಿ ಹಾಡಿ 'ಜೈ ನಮಃ ಪಾರ್ವತೀಪತೇ ಹರಹರಮಹಾದೇವ' ಎಂದೆ. ಜನವೆಲ್ಲ ಹೋಹೋ!! ಎಂದು ಚಪ್ಪಾಳೆ ತಟ್ಟಿದರು. ಮೃತ್ಯುಂಜಯ ಸ್ವಾಮಿಗಳವರಿಗೆ ಸಾತ್ವಿಕ ಭಾವೋದ್ರೇಕವಾಗಿ ಆನಂದಬಾಷ್ಪ ಸುರಿಸುತ್ತ 'ಆಹಾಹಾ! ಅಪ್ಪನ ಜನನವಾಯಿತು. ಲೋಕಕ್ಕೆಲ್ಲ ಸೂರ್ಯ ಜೇಗಟೆ ಬಾರಿಸಿ ಡಂಗುರ ಹೊಡೆದುಬಿಟ್ಟ' ಎಂದು ಎದ್ದು ಕುಣಿದಾಡಿಬಿಟ್ಟರು. ನನ್ನ ಮೈಯ ರೋಮ ರೋಮಗಳೂ ನಿಗುರಿ ನಿಂತವು. ಮನಸ್ಸಿನಲ್ಲಿ ನಾನು ಧನ್ಯತೆ ಪಡೆದೆನೆಂದುಕೊಂಡೆ. ಹೀಗೆ ಕಥೆಯನ್ನು ಮೊದಲಿನಿಂದ ಕೊನೆಯವರೆಗೆ ಯೋಗ್ಯ ಸಾಥಿಗಳೊಡನೆ ಅತ್ಯುತ್ತಮವೆನ್ನುವಂತೆ ಮಾಡಿ ಮಂಗಳಾರತಿ ತಟ್ಟೆ ಎತ್ತಿಸಿದೆ. ಆ ದಿನ ಮಂಗಳಾರತಿ ತಟ್ಟೆಗೆ ಬಿದ್ದ ಹಣ ನನ್ನ ಹಿಂದಿನ ಮಂಗಳಾರತಿ ತಟ್ಟೆಯ ದಾಖಲೆಯನ್ನೇ ಮುರಿದಿತ್ತು. ಎಷ್ಟಿತ್ತೆಂಬುದು ನೆನಪು ಹಾರಿದೆ. ಸುಮಾರು ಐವತ್ತು ರೂಪಾಯಿ! ಮಹಾಂತಪ್ಪನವರು ಎಲ್ಲವನ್ನೂ ನನ್ನ ಮುಂದೆ ಸುರಿದುಬಿಟ್ಟರು. ನಾನು ಎಲ್ಲವನ್ನೂ ಕರವಸ್ತ್ರದಲ್ಲಿ ಕಟ್ಟಿದೆ. ಕಥೆ ಮುಗಿಸಿ ಊಟಮಾಡಿ ಬೆಳಿಗ್ಗೆ ನಸುಕಿನಲ್ಲಿಯೇ ಹೊರಡಬೇಕೆಂದು ಹಿಂದಿನ ದಿನವೇ ಸ್ವಾಮಿಗಳಲ್ಲಿ ಬಿನ್ನವಿಸಿಕೊಂಡಿದ್ದೆನಲ್ಲವೆ? ಆದುದರಿಂದ ಶ್ರೀಗಳವರು ಸಭೆಯೆಲ್ಲ ಮುಗಿದ ಮೇಲೆ ಕರೆಸಿದರು. ಆಶೀರ್ವಾದ ಮಾಡಲು ತಟ್ಟೆ ತರಿಸಿ ಅದರಲ್ಲಿ ಐವತ್ತು ರೂಪಾಯಿ, ಎರಡು ತೆಂಗಿನಕಾಯಿ, ಒಂದು ಜೊತೆ ಪಂಚೆ, ಒಂದು ವಸ್ತ್ರ ಇಟ್ಟಿದ್ದರು. ಮೃತ್ಯುಂಜಯಪ್ಪನವರು ಆ ಹಣವನ್ನು ಮುಟ್ಟಿನೋಡಿ ಐವತ್ತುರೂಪಾಯಿ ಇದ್ದುದನ್ನು ತಿಳಿದು.. "ಮಹಾಂತಪ್ಪ, ಮಹಾಂತಪ್ಪ" ಎಂದು ತಮ್ಮ ಶಿಷ್ಯನನ್ನು ಕೂಗಿದರು. ಅವರು "ಬಂದಿನ್ರೆಪ್ಪ ಬಂದೆ" ಎನ್ನುತ್ತ ಓಡಿ ಬಂದರು. "ಮಹಾಂತಪ್ಪ ಇವರಿಗೆ ಸಂಭಾವನೆ. ಇದು ಬರಿ ಭಾಷಣ ಮಾಡಲಿಕ್ಕೆ ಬಂದುದು ಸಂದಂತಾಯ್ತು. ಇನ್ನು ಇನ್ನು...ಆ ಕಥೆ ಸಂಭಾಷಣೆ....ಆ ಸಂಭಾವನೆ....ಮರೆತುಬಿಟ್ಟಿದ್ದೀರಿ" ಎಂದರು. ಅವರು "ಹೂನ್ರೆಪ್ಪ...ಮ....ಮ...ಮರೆತಿದ್ದೆನ್ರಪ್ಪ" ಎನ್ನುತ್ತ ಮತ್ತೆ ಐವತ್ತು ರೂಪಾಯಿ ಇಟ್ಟುಬಿಟ್ಟರು. ಆಗ ಮೃತ್ಯುಂಜಯಪ್ಪನವರು ನನಗೆ ವಜ್ರಕವಚವನ್ನು ಹೊದ್ದಿಸಿದಂತೆ ಪಂಚೆ ಟವಲ್ಲುಗಳನ್ನು ಹೆಗಲಮೇಲೆ ಹಾಕಿ ಕೈಯಲ್ಲಿ ತಟ್ಟೆ ಕೊಟ್ಟರು. ತೆಗೆದುಕೊಂಡೆ. ಅನಂತರ ಮತ್ತೆರಡು ತೆಂಗಿನಕಾಯಿ ಹತ್ತು ರೂಪಾಯಿಗಳನ್ನು ನನ್ನ ಕೈಗೆ ಕೊಟ್ಟು, ದಕ್ಷಿಣ ದಿಕ್ಕಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಇದನ್ನು ಸಿದ್ಧಗಂಗೆಯ ಅಪ್ಪಗಳಿಗೆ (ಶ್ರೀ ಶಿವಕುಮಾರಸ್ವಾಮಿಗಳಿಗೆ) ನನ್ನ ಭಕ್ತಿಯ ಕಾಣಿಕೆ ಎಂದು ಹೇಳಿ ಅರ್ಪಿಸಿಬಿಡಿ" ಎಂದು ಹೇಳಿ ನನ್ನನ್ನು ಪುಳಕಿತಗಾತ್ರನಾಗುವಂತೆ ಮಾಡಿಬಿಟ್ಟರು. ಇಷ್ಟು ಹೊತ್ತಿಗಾಗಲೇ ನಾನು ಸಿದ್ಧಗಂಗೆಯವನೇ ಎಂಬ ಭಾವನೆ ಎಲ್ಲರಿಗೂ

ಉಂಟಾಗಿತ್ತು. ಅಂತೆಯೇ ನನ್ನ ಮೂಲಕ ಸಿದ್ಧಗಂಗಾ ಪರಮತಪಸ್ವಿಗಳಿಗೆ ತಮ್ಮ ಭಕ್ತಿ ಕಾಣಿಕೆ ಕಳಿಸಿದರು.

ನಿಜವಾಗಿ ಮೃತ್ಯುಂಜಯ ಸ್ವಾಮಿಗಳು ಭಕ್ತಿಯ ಪುತ್ಥಳಿ, ಶಿವಜ್ಞಾನ ನಿಧಿ, ಭಕ್ತ ಜನಮನೋಮಂದಿರವಾಸರೆಂಬುದನ್ನು ಇಂದೂ ನಾನು ನೆನೆಯುತ್ತಲೇ ಇರುತ್ತೇನೆ. ಅವರು ಅಸಾಮಾನ್ಯ ಸಮಾಜಸಂಘಟಕರು, ನಿರ್ಮತ್ಸರರು, ನಿರಹಂಭಾವ, ನಿರೀಹಂಭಾವ ನಾನಾ ವಿಶಿಷ್ಟ ಹೃದಯಶ್ರೀ ಸಮನ್ವಿತರು ಎಂಬಲ್ಲಿ ನಕಿಂಚಿತ್ ಸಂಶಯ. ಅಂಥ ಮಹಾತೇಜೋರಾಶಿಯ ಕೃಪೆ ನನಗಾದುದು ನನ್ನ ಜೀವನದಲ್ಲಿ ಬಹುದೊಡ್ಡ ಸಾಧನೆ ಎನಿಸಿತ್ತು. ಇಷ್ಟೆಲ್ಲ ನನ್ನ ಧಾರವಾಡದ ಕಾರ್ಯಕ್ರಮಗಳನ್ನು ಮುಗಿಸಿ ಫೆಬ್ರುವರಿ ಐದನೆಯ ದಿನಾಂಕ ಬೆಳಗಿನ ಜಾವದ ಗಾಡಿಯನ್ನೇರಿ ನೇರವಾಗಿ ಸಿದ್ಧಗಂಗೆಗೆ ಬಂದು ಧಾರವಾಡದ ಎಲ್ಲ ವೃತ್ತಾಂತಗಳನ್ನು ಚಾಚೂ ತಪ್ಪದೆ ಶ್ರೀಗಳವರಿಗೆ ತಿಳಿಸಿ ಶ್ರೀಗಳವರ ಮುಖದಲ್ಲಿ ನಗೆ ಚಿಮ್ಮುವಂತೆ ಮಾಡಿದೆ. ಮೃತ್ಯುಂಜಯ ಸ್ವಾಮಿಗಳವರ ಕಾಣಿಕೆ ಮತ್ತು ಎರಡು ಕಾಯಿಗಳನ್ನು ಶ್ರೀಗಳವರ ಮುಂದಿಟ್ಟು ನಮಸ್ಕರಿಸಿದೆ. ಅಂದು ತಾರೀಖು 6.2.1952.

ಮರುದಿನ ತಿಪಟೂರಿಗೆ ಹೋಗಿ, ಕೆಲಸಕ್ಕೆ ಹಾಜರಾಗಿ, ಅದೇ ದಿನವೇ ತಿಂಗಳಿಗೆ ಐದು ರೂಪಾಯಿ ಬಾಡಿಗೆಯ ಒಂದು ಮನೆಯನ್ನು ನೋಡಿ, ಮುಂಗಡ ತೆತ್ತು ಬೀಗ ಹಾಕಿಕೊಂಡು ಸಿದ್ಧಗಂಗೆಗೆ ಅದೇ ಸಂಜೆಗೆ ಬಂದುಬಿಟ್ಟೆ.

# ಅಧ್ಯಾಯ - 10

## ಈಚಿನ ಕಥೆ

1952ರಿಂದ ಈಚೆಗಿನ ನನ್ನ ಕಥೆ ಎಲ್ಲರಿಗೂ ತಿಳಿದೇ ಇದೆ. ಅದನ್ನೂ ಸಂಕ್ಷಿಪ್ತವಾಗಿ ಹೇಳಿ ಮುಗಿಸಿಬಿಡುತ್ತೇನೆ. ಧಾರವಾಡದ ಮುರುಘಾಮಠದ ಜಾತ್ರೆಯ ಸಮಯದ ಕಾರ್ಯಕ್ರಮದಲ್ಲಿ ಭಾಗವಹಿಸಿ ಉಪನ್ಯಾಸ, ಕಥೆ ಎರಡನ್ನೂ ಮುಗಿಸಿಕೊಂಡು ಬಂದು 1952ನೆ ಫೆಬ್ರವರಿ 6ನೇ ತಾರೀಖು ತಿಪಟೂರು ಗೌರ್ನಮೆಂಟ್ ಹೈಸ್ಕೂಲಿನಲ್ಲಿ ಕೆಲಸಕ್ಕೆ ಹಾಜರಾದೆ. ಅಲ್ಲಿನ ಹೈಸ್ಕೂಲಿನ ಹುಡುಗರು ಪುಂಡರು ಎಂದು ಎಲ್ಲಾ ಹೆದರಿಸಿದರು. ಆದರೆ ನನಗೇನೂ ಹಾಗೆ ಅನ್ನಿಸಲಿಲ್ಲ. ಊರಿನ ಗಣ್ಯರನೇಕರು ನನಗೆ ಪರಿಚಿತರು, ಆತ್ಮೀಯರಾಗಿದ್ದರು. ಕನ್ನಡ ಪಾಠಗಳು ರುಚಿಕಟ್ಟಾಗಿರುತ್ತಿದ್ದವು. ಹೀಗಾಗಿ ವಿದ್ಯಾರ್ಥಿಗಳು ಶಿಸ್ತಿನಿಂದ ಇರುತ್ತಿದ್ದರು. ತಿಪಟೂರಿನಲ್ಲಿ ಒಳ್ಳೆಯ ಸುಸಂಸ್ಕೃತ ವಾತಾವರಣವಿತ್ತು. ಅಲ್ಲಿದ್ದ ಕರ್ನಾಟಕ ಸಂಘದ ಮೂಲಕ ಅನೇಕ ಕಾರ್ಯಕ್ರಮಗಳು ನಡೆಯುತ್ತಿದ್ದವು. ಅಲ್ಲಿ ಮತ್ತು ಇತರ ಸಮಾರಂಭಗಳಲ್ಲಿ ನನ್ನ ಉಪನ್ಯಾಸಗಳು, ಕಥಾ ಸಂಕೀರ್ತನೆಗಳು ನಡೆದವು. ಬಹಳ ಜನಾನುರಾಗ ಗಳಿಸಿದೆ. ಉತ್ಸಾಹದ ವಾತಾವರಣ ಅಲ್ಲಿತ್ತು. ತಿಪಟೂರಲ್ಲಿ ಸಂಸಾರ ಹೂಡಿದೆ. ಒಳ್ಳೆಯ ಮನೆ ಸಿಕ್ಕಿತ್ತು. ನಂಜಪ್ಪನವರು, ಸೋಮಣ್ಣ ಸಹೋದರರು, ಪುರಸಭಾಧ್ಯಕ್ಷರಾಗಿದ್ದ ಮಲ್ಲಪ್ಪನವರೇ ಮೊದಲಾದವರು ವಿಶೇಷ ವಿಶ್ವಾಸ ತೋರಿಸಿದರು. ನಾಲ್ಕು ವರ್ಷ ಅಲ್ಲಿದ್ದೆ.

ಹೆಂಡತಿಯು ಹೆರಿಗೆಗೆ ತೌರೂರು ಸಿದ್ಧಾಪುರಕ್ಕೆ ಹೊರಟಳು. ಅಲ್ಲಿ ಹೆರಿಗೆಗೆ ಅನಾನುಕೂಲ ಕಳಿಸಬೇಡಿ ಎಂದು ಪರಿಚಯದವರು ಹೇಳಿದರು. ಆದರೂ ತೌರಿನವರು ಕರೆದೊಯ್ದರು. ಕೆಲವೇ ದಿನಗಳಲ್ಲಿ ಆಕೆ ಹೆರಿಗೆಯಲ್ಲೇ ತೀರಿಕೊಂಡಳು. ಅವರು ಟೆಲಿಗ್ರಾಂನ್ನೂ ಸಿದ್ಧಗಂಗೆಗೆ ಕಳಿಸಿದ್ದರು. ಅಲ್ಲಿಂದ ತಿಪಟೂರಿಗೆ ಆಳು ಬಂದು ನನಗೆ ಸುದ್ದಿ ತಿಳಿದು ಹೋಗುವುದರೊಳಗೆ ಎಲ್ಲಾ ಕೆಲಸ ಮುಗಿದು ಹೋಗಿತ್ತು. ಬಡವನ ಹೆಂಡತಿ ಸಾಯಬಾರದು, ಶ್ರೀಮಂತರ ಮನೆ ಸುಡಬಾರದು ಅಂತಾ ಒಂದು ಮಾತಿದೆ. ಹಾಗೆ ಕೆಲಕಾಲ ಒಂಟಿ ಜೀವನ ಸಾಗಿತು. ಅನಂತರ ಪುನರ್ವಿವಾಹದ ಚಿಂತೆ. ತುಮಕೂರು ಬಳಿಯ ನಾಗವಲ್ಲಿಯ ಪ್ರತಿಷ್ಠಿತ ಮನೆತನದ ಪಾರ್ವತಮ್ಮ ಎಂಬ ಕನ್ಯೆ ಗೊತ್ತಾಯಿತು. ಸಿದ್ಧಗಂಗಾಮಠದ ಮೂಲಕವೇ ಪರಿಚಯವಾದದ್ದು. ಆಕೆ ತುಮಕೂರಿನ ಪ್ರಸಿದ್ಧ ವರ್ತಕರಾದ ಕೆಂಪಹೊನ್ನಯ್ಯನವರ ಅಣ್ಣನ ಮಗಳು.

ಹೊಸ ಸಂಸಾರ ಆರಂಭವಾಯಿತು. ತಿಪಟೂರಿನ ವ್ಯಾಪಾರಸ್ಥರೆಲ್ಲಾ ಪರಿಚಿತರಾಗಿದ್ದರು. ಇದುವರೆಗೆ ಪ್ರೈಮರಿ ಮತ್ತು ಮಿಡ್ಲ್‌ಸ್ಕೂಲುಗಳಲ್ಲಿ ಪಾಠ ಮಾಡಿದ್ದ ನನಗೆ ಹೈಸ್ಕೂಲಿನಲ್ಲಿ ಪಾಠ ಮಾಡಲು ಹೆಚ್ಚಿನ ಉತ್ಸಾಹವಿತ್ತು. ಬೇರೆ ಕ್ಲಾಸಿನ ಹುಡುಗರೂ ಸಹ ತರಗತಿಯಲ್ಲಿ ಹಾಜರಿದ್ದು ಪಾಠ ಕೇಳುತ್ತಿದ್ದುದೂ ಉಂಟು.

1956ರಲ್ಲಿ ಮಾಯಕೊಂಡ ಹೈಸ್ಕೂಲಿಗೆ ವರ್ಗವಾಯಿತು. ತಿಪಟೂರಿನವರು ನನ್ನನ್ನು ಬಿಟ್ಟುಕೊಡಲು ಸಿದ್ಧರಿರಲಿಲ್ಲ. ನಿಮಗೇನು ಕೊರತೆಯಾಗಿದೆ? ಯಾಕೆ ವರ್ಗ ಮಾಡಿಸಿಕೊಂಡಿರಿ?

ಸೈಟು ಬೇಕಾ. ಕೊಡುತ್ತೇವೆ ಎಂದು ಮುಂತಾಗಿ ಒತ್ತಾಯ ತಂದರು. ಮಾಯಕೊಂಡವು ಊರಿಗೆ ಹತ್ತಿರ, ಹೊಲಮನೆ ನೋಡಿಕೊಳ್ಳಬೇಕು ಎಂದು ಸುಳ್ಳು ಹೇಳಬೇಕಾಯಿತು. ಈ ನಡುವೆ ಕಾ.ಸ. ಧರಣೇಂದ್ರಯ್ಯನವರ ಪರಿಚಯವಾಗಿ ಅವರೊಡನೆ ನಾಡಹಬ್ಬ, ಸಂಸ್ಕೃತಿ ಪ್ರಸಾರ ಕಾರ್ಯಕ್ರಮಗಳಿಗೆ ನಾನಾ ಕಡೆ ಸುತ್ತಾಡಿದೆ.

**ಮಾಯಕೊಂಡದಲ್ಲಿ**

ತಿಪಟೂರಿಗೆ ವಿದಾಯ ಹೇಳಿ ಮಾಯಕೊಂಡಕ್ಕೆ ಬಂದೆ. ಮಾಯಕೊಂಡದಲ್ಲಿ ಅದ್ಭುತ ಸ್ವಾಗತವೇ ಸಿಕ್ಕಿತೆನ್ನಬೇಕು. 9 ರೂ. ಬಾಡಿಗೆಗೆ ಒಂದು ದೊಡ್ಡ ಮನೆಯನ್ನೇ ಕೊಟ್ಟರು. ಬಹಳ ವಿಶ್ವಾಸದಿಂದ ನಮ್ಮನ್ನು ನೋಡಿಕೊಂಡರು. ಶಾಲೆಯಲ್ಲಿ ಅಧ್ಯಾಪಕನಾಗಿರುವುದರ ಜೊತೆಗೆ ಪ್ರವಚನ, ಕಥೆ ಮಾಡುತ್ತಿದ್ದುದರಿಂದ ಜನರ ಮನಗೆಲ್ಲುವ ಅವಕಾಶ ಸಿಕ್ಕಿತು. ಅಲ್ಲಿ ನಮ್ಮ ಮನೆಯ ಜಗಲಿಯ ಮೇಲೆಯೇ ಪ್ರವಚನ ನಡೆಯುತ್ತಿತ್ತು. ಹಳ್ಳಿಗಳಲ್ಲಿ ಆಗ ಯಾವ ಮನರಂಜನೆಗೂ ಅವಕಾಶಗಳಿರಲಿಲ್ಲವಾಗಿ ನನ್ನ ಕಥಾ ಕಾಲಕ್ಷೇಪಗಳು ಜನಪ್ರಿಯ ಕಾರ್ಯಕ್ರಮವಾಗಿ ಬಹಳ ಯಶಸ್ವಿಯಾದವು. ಅವರ ಮೇಲೆ ಎಂತ ಪರಿಣಾಮ ಬೀರಿದವು ಎಂದರೆ ಉದಾಹರಣೆಗೆ ನಾನಿದ್ದ ಮನೆಯ ಯಜಮಾನರು ಬಾಡಗೆ ತೆಗೆದುಕೊಳ್ಳುವುದನ್ನು ಬಿಟ್ಟರು. ಶಾಲೆಯ ಹುಡುಗರೂ ಕೂಡ ನಯಭಯದಿಂದ ನಡೆದುಕೊಳ್ಳುತ್ತಿದ್ದರು.

ಇಷ್ಟೆಲ್ಲಾ ಅನುಕೂಲ ವಾತಾವರಣವಿದ್ದರೂ ನಮ್ಮ ಆರೋಗ್ಯ ಮಾತ್ರ ಸರಿಯಿರಲಿಲ್ಲ. ಮಕ್ಕಳೂ ಸಹ ಅನಾರೋಗ್ಯದಿಂದ ನರಳಿದರು. ಕಾಲಚಕ್ರ ಉರುಳಿತು. ನಾಲ್ಕು ವರ್ಷ ಕಳೆದೇ ಹೋದವು. ಅನಂತರ ಚಿತ್ರದುರ್ಗಕ್ಕೆ ವರ್ಗ ಮಾಡಿಸಿಕೊಂಡೆ. ಆ ವೇಳೆಗಾಗಲೇ ಮುರುಘರಾಜೇಂದ್ರ ಬೃಹನ್ಮಠದ ಸಂಪರ್ಕವಾಗಿತ್ತು. ಪೂಜ್ಯ ಜಗದ್ಗುರು ಶ್ರೀ ಜಯವಿಜಯ ಸ್ವಾಮಿಗಳ ಅನುಗ್ರಹಕ್ಕೆ ಪಾತ್ರನಾಗಿದ್ದೆ.

**ಚಿತ್ರದುರ್ಗದಲ್ಲಿ**

ಚಿತ್ರದುರ್ಗಕ್ಕೆ ಬಂದ ಮೇಲಂತೂ ಹೆಚ್ಚಿನ ಒಡನಾಟ ಆರಂಭವಾಯಿತು. ನನ್ನನ್ನು 'ಗುರುಪುತ್ರ' ಎನ್ನುವಷ್ಟು ನಿಕಟವರ್ತಿಯಾಗಿಬಿಟ್ಟೆ. "ನೀವು ಮಠದ ಸೇವೆ ಮಾಡಿ. ನಾವು ನಿಮ್ಮ ಮಕ್ಕಳ ನೆತ್ತಿಗೆ ಒಂದು ಸೂರು ಮಾಡಿಕೊಡುತ್ತೇವೆ" ಎಂದು ಪೂಜ್ಯರು ತುಂಬುಮನದಿಂದ ಆಶೀರ್ವದಿಸಿದರು. ಅಲ್ಲಿ ಇದ್ದ ನಾಲ್ಕು ವರ್ಷಗಳೂ ಸಹ ಶ್ರಾವಣ ಮಾಸಗಳಲ್ಲಿ ಒಂದು ತಿಂಗಳು ಪ್ರವಚನ ನಡೆಸಿದೆ. ಪಕ್ಕ ವಾದ್ಯಗಳೊಡನೆ ನಡೆಸುತ್ತಿದ್ದ ಕಥಾ ಕಾಲಕ್ಷೇಪ ಜನರನ್ನು ರಂಜಿಸುತ್ತಿತ್ತು. ಜಗದ್ಗುರುಗಳವರು ತುಂಬಿದ ಸಾರ್ವಜನಿಕ ಸಭೆಯಲ್ಲಿ "ಚೆನ್ನಪ್ಪನವರು ಚಿತ್ರದುರ್ಗದಲ್ಲೇ ಖಾಯಂ ಆಗಿ ನೆಲೆಸಬೇಕು. ಅವರಿಗೆ ಹೊಲ ಮನೆ ಮಾಡಿಕೊಡುತ್ತೇವೆ. ಏಕೆಂದರೆ ಇನ್ನೊಬ್ಬ ಚೆನ್ನಪ್ಪನನ್ನು ಹುಡುಕಲಾರೆವು. ಅವರು ವಿದ್ವಾಂಸರು, ಸಜ್ಜನರು, ರಸಿಕರು, ಗುರುಲಿಂಗಜಂಗಮಪ್ರಿಯರು" ಎಂದು ಅಪ್ಪಣೆ ಕೊಡಿಸಿದ್ದುಂಟು. ಆದರೆ ಮೂರೇ ತಿಂಗಳಲ್ಲಿ ಅವರು ಶಿವೈಕ್ಯರಾದರು. ನನಗೆ ಬೆಂಗಳೂರಿಗೆ ವರ್ಗವಾಯಿತು. ರಾಜಧಾನಿಯಲ್ಲಿ ಸೇವೆ ಸಲ್ಲಿಸಬೇಕೆಂಬ ಆಸೆಯೂ ಇತ್ತು.

## ಬೆಂಗಳೂರಿನಲ್ಲಿ

ಬೆಂಗಳೂರಿಗೆ ಬಂದಮೇಲೆ ನನ್ನ ಕಾರ್ಯಕ್ಷೇತ್ರ ವಿಸ್ತಾರವಾಯಿತು. 1965ರಿಂದ ಸರ್ಕಾರಿ ಸೆಂಟ್ರಲ್ ಹೈಸ್ಕೂಲಿನಲ್ಲಿ. ಆಮೇಲೆ ಅಲ್ಲಿನ ಶಿಕ್ಷಕ ತರಬೇತಿ ಸಂಸ್ಥೆಯಲ್ಲಿ ಸಂಜೆ ಹೊತ್ತು ಹತ್ತು ವರ್ಷ ಸೇವೆ ಸಲ್ಲಿಸಿದೆ. ವಿದ್ಯಾರ್ಥಿಗಳ, ಅಧ್ಯಾಪಕರ ಪ್ರೀತಿಗೆ ಪಾತ್ರನಾದೆ. ಯಶಸ್ವೀ ಸೇವೆಯಿಂದ ತೃಪ್ತಿ ಹೊಂದಿದೆ. ಸರ್ಪಭೂಷಣ ಮಠದಲ್ಲಿ ಪ್ರವಚನ, ಕಥಾ ಕಾಲಕ್ಷೇಪಗಳನ್ನು ನಡೆಸುತ್ತಿದ್ದೆ.

ವಿದ್ಯಾ ಇಲಾಖೆ ನೇಮಿಸಿದ ವ್ಯಾಕರಣ ಸಮಿತಿಯಲ್ಲಿ ಡಾ. ಶಿ.ಚೆ. ನಂದೀಮಠರೊಡನೆ ಕೆಲಸ ಮಾಡಿದೆ. ಹೈಸ್ಕೂಲು ತರಗತಿಗಳಿಗೆ ಕನ್ನಡ ವ್ಯಾಕರಣವನ್ನು ರಚಿಸಿ ಕೊಟ್ಟೆವು. ಇದ್ದಬದ್ದ ದುಡ್ಡಿನಲ್ಲಿ ವಿಜಯನಗರ ಬಡಾವಣೆಯಲ್ಲಿ ಒಂದು ಸೈಟುಕೊಂಡೆ. 1967ರಲ್ಲಿ ಬರೀ ಕೈಲಿ ಮನೆ ಕಟ್ಟಲು ಆರಂಭಿಸಿದೆ. ಚಿತ್ರದುರ್ಗದ ಜಗದ್ಗುರುಗಳ ಆಶೀರ್ವಾದ ಸುಳ್ಳಾಗಲಿಲ್ಲ. ಅವರ ಅನುಗ್ರಹದಿಂದಲೇ ಒಂದು ಗೂಡು ಮಾಡಿಕೊಂಡೆ. 1974ರಲ್ಲಿ ಸೇವೆಯಿಂದ ನಿವೃತ್ತನಾದೆ. ನಿಜವಾಗಿ ನನ್ನ ಬರವಣಿಗೆ ಆದದ್ದೇ ನಿವೃತ್ತಿಯ ನಂತರ. ರಾಜಶೇಖರ ವಿಳಾಸ, ವೃಷಭೇಂದ್ರ ವಿಜಯದಂಥ ಪ್ರೌಢ ಕಾವ್ಯಗಳಿಗೆ ಗದ್ಯಾನುವಾದ ಮಾಡಿದ್ದು, ವಿಶ್ವವಿದ್ಯಾಲಯದ ಸಾಹಿತ್ಯ ಚರಿತ್ರೆಯ ಸಂಪುಟಗಳಿಗೆ ಬೇರೆ ಬೇರೆ ಲೇಖನಗಳನ್ನು ಬರೆದದ್ದು, ಶ್ರೀ ಸಿದ್ಧಗಂಗೆಯ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಪಟ್ಟಾಧಿಕಾರ ಮಹೋತ್ಸವದ ಸವಿನೆನಪಿನ ಸಂಪುಟ 'ಸಿದ್ಧಗಂಗಾ ಶ್ರೀ' ಮತ್ತು ವಜ್ರಮಹೋತ್ಸವ ಮಹಾಸಂಪುಟ 'ದಾಸೋಹಸಿರಿ' ಉದ್ಗ್ರಂಥಗಳನ್ನು ಆತ್ಮೀಯರಾದ ಶ್ರೀ ಟಿ.ಆರ್. ಮಹಾದೇವಯ್ಯನವರೊಡನೆ ಸರ್ವಾಂಗ ಸುಂದರವಾಗಿ ಹೊರತಂದ ಸಮಾಧಾನ ನನಗಿದೆ. 'ಉದ್ದಾನೇಶ್ವರ ಚರಿತೆ'ಯೆಂಬ ಷಟ್ಪದಿಕಾವ್ಯ ಬರೆದದ್ದು, ವಿವಿಧ ಗ್ರಂಥಗಳ ಸಂಪಾದನೆ ಕೆಲಸ ನಿವೃತ್ತನಾದ ನಂತರವೇ ನಡೆದದ್ದು.

1975ರ ನಗರಪಾಲಿಕೆಯು ಮೇಯರ್ ಅವರ ಮೂಲಕ ನನಗೆ ಉತ್ತಮ ಶಿಕ್ಷಕ ಪ್ರಶಸ್ತಿ ನೀಡಿ ಗೌರವಿಸಿತು. ಅನೇಕ ಸಂಘ-ಸಂಸ್ಥೆಗಳು ರಾಜ್ಯೋತ್ಸವವೇ ಮೊದಲಾದ ಪ್ರಸಂಗಗಳಲ್ಲಿ ಸನ್ಮಾನ ಮಾಡಿದವು. 1988ರಲ್ಲಿ ಆದಿ ಚುಂಚನಗಿರಿಯಲ್ಲಿ ನಡೆದ ಮಕ್ಕಳ ಸಾಹಿತ್ಯ ಸಮ್ಮೇಳನದಲ್ಲಿ ನನ್ನನ್ನು ಗೌರವಿಸಿದರು. 1992ರಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ಕೊಪ್ಪಳದಲ್ಲಿ ನಡೆದಾಗ ಪರಿಷತ್ತು ನನ್ನನ್ನು ಸನ್ಮಾನಿಸಿತು. 1997ರಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ವಿಜಯಪುರದಲ್ಲಿ ಜಿಲ್ಲಾ ಶರಣ ಸಾಹಿತ್ಯ ಸಮ್ಮೇಳನ ನಡೆಸಿದಾಗ ನನ್ನನ್ನು ಸಮ್ಮೇಳನಾಧ್ಯಕ್ಷನನ್ನಾಗಿ ಮಾಡಿತ್ತು. ಮೈಸೂರು ಸುತ್ತೂರು ಮಠವು ನೀಡುವ ಕಾವ್ಯಪುರಸ್ಕಾರ ನನ್ನ ಉದ್ದಾನೇಶ್ವರ ಚರಿತೆಗೆ ಲಭ್ಯವಾಯಿತು. 1998ರಲ್ಲಿ ಶ್ರೀ ಸಿದ್ಧಗಂಗೆಯಲ್ಲಿ ಜರುಗಿದ ಗುರುವಂದನೆಯ ಸಂದರ್ಭದಲ್ಲಿ ಗುರುಗಳು ನನ್ನನ್ನು ಸನ್ಮಾನಿಸಿ ಆಶೀರ್ವದಿಸಿದರು.

1984ರಲ್ಲೇ ನನ್ನ ಪತ್ನಿ ನನ್ನನ್ನು ಅಗಲಿದಳು. ನನ್ನ 3 ಗಂಡು, 4 ಹೆಣ್ಣುಮಕ್ಕಳು ಎಲ್ಲರೂ ಚೆನ್ನಾಗಿದ್ದಾರೆ. ಕುಟುಂಬದ ವಿಚಾರದಲ್ಲಿ ನಾನು ಸುಖಿ. ಹೀಗೆ ಸಾಗಿದೆ ನನ್ನ ಕಥೆ. 9 ರೂಪಾಯಿ ಪಗಾರದ ಗಾವಠೀ ಶಾಲೆಯಿಂದ ಆರಂಭವಾದ ನನ್ನ ವೃತ್ತಿಜೀವನ ಶಿಕ್ಷಕ

ತರಬೇತಿ ಸಂಸ್ಥೆಯ ಅಧ್ಯಾಪಕನವರೆಗೆ ಸಾಗಿಬಂತು. 37 ವರ್ಷ ಮೇಷ್ಟರ ಕೆಲಸ ಮಾಡಿದೆ. ಜೊತೆಗೆ ಪ್ರವಚನ, ಶಿವಕಥೆ ಮಾಡಿ ದಣಿದಿದ್ದೆ. ಪಾಠ ಮಾಡುವಲ್ಲಿ ಮೈಗಳ್ಳತನ ತೋರಲಿಲ್ಲ. ಕಥೆ ಮಾಡಲು ನಿಂತರೆ ಬಹಳ ಕೂಗುತ್ತಾ ಇದ್ದೆ. ಕಂಠಶೋಷಣೆ ಬಹಳವಾಗಿತ್ತು. ಶಾಲೆಯಲ್ಲಿ ಮಕ್ಕಳನ್ನು ತಿದ್ದುವುದು ಸುಲಭವಲ್ಲ. ಅವರ ಮಟ್ಟಕ್ಕೆ ಇಳಿದು ಹೇಳಬೇಕಾಗುತ್ತೆ. ಸಾರ್ವಜನಿಕ ಭಾಷಣಗಳ, ಕಥಾ ಕಾಲಕ್ಷೇಪದ ರೀತಿ ಬೇರೆ. ಅಲ್ಲಿ ನವರಸ ಸಂಪಾದನೆ ಬೇಕು. ಜನರಿಗೆ ರುಚಿಸುವಂತೆ ರಸವತ್ತಾಗಿ ಹೇಳಬೇಕು. ಈ ಎರಡೂ ಕೆಲಸಗಳನ್ನು ಯಥಾಶಕ್ತಿ ಮಾಡಿ ಗೆಲುವನ್ನು ಪಡೆದೆನೆಂಬ ಸಮಾಧಾನ ನನಗಿದೆ. ಈಚಿನ ದಿನಗಳಲ್ಲಿ ಆರೋಗ್ಯ ಸರಿಯಿಲ್ಲ. ಜ್ಞಾಪಕಶಕ್ತಿ ಕುಗ್ಗಿದೆ. ಲೇಖನಿ ಹಿಡಿದು ಬರೆಯಲು ಸಾಧ್ಯವಾಗುತ್ತಿಲ್ಲ. ನನ್ನ ಬರವಣಿಗೆ, ಸಾರ್ವಜನಿಕ ಸೇವೆ, ಸಂಕ್ಷೇಪ ಪರಿಚಯ ಇತ್ಯಾದಿಗಳ ಬಗೆಗೆ ಮುಂದೆ ಪರಿಶಿಷ್ಟದಲ್ಲಿ ಕೊಡಲಾಗಿದೆ. ವಿವರವಾಗಿ ನನ್ನ ಇಂದಿನವರೆಗಿನ ಚರಿತ್ರೆ ಕೊಡಲಾಗಲಿಲ್ಲ. ಇಷ್ಟು ಸಾಕೇನೋ!



# ನನ್ನ ಸಾಹಿತ್ಯಸಂಪದ ಮತ್ತು ಸಾಧನೆಗಳು

## ಸ್ವತಂತ್ರ ಕೃತಿಗಳು

| | |
|---|---|
| 1. ಹೊಸಗನ್ನಡ ಸರಳ ವ್ಯಾಕರಣ ಪಾಠಗಳು | : ಮಿಡಲ್ ಸ್ಕೂಲ್ ನಾಲ್ಕು ತರಗತಿಗಾಗಿ (1953) |
| 2. ಜೇನು | : (ಮಕ್ಕಳ ಪುಸ್ತಕ ಸಚಿತ್ರ) 1963 ರಾಜ್ಯ ಸರಕಾರದ ಪ್ರಥಮ ಬಹುಮಾನ |
| 3. ತೆಂಗು | : (ಸಚಿತ್ರ ಮಕ್ಕಳ ಪುಸ್ತಕ) 1963 |
| 4. ಅರವಿಂದ | : ಮಕ್ಕಳ ಪುಸ್ತಕ ಸಚಿತ್ರ (1963) |
| 5. ಸಾಲ ತೀರಿಸಿದ ನಾಯಿ | : ಮಕ್ಕಳ ಪುಸ್ತಕ ಸಚಿತ್ರ (ರೀಸರ್ಚ್ ಬ್ಯೂರೋ, ಬೆಂಗಳೂರು) (1962) |
| 6. ಬಸವಣ್ಣನವರ ಕ್ರಾಂತಿಕಹಳೆ | : 1968 |
| 7. ಬಸವಣ್ಣ ಬೋಧಿಸಿದ ಬೋಧೆ | : 1968 |
| 8. ಬಸವಣ್ಣನವರ ಪಂಚಪರುಷ | : 1969 |
| 9. ಅಜಗಣ್ಣ - ಮುಕ್ತಾಯಕ್ಕ | : 1968 |
| 10. ಸಿದ್ಧರಾಮನ ಲಿಂಗತಪಸ್ಸು | : 1968 |
| 11. ತೋಂಟದ ಸಿದ್ಧಲಿಂಗೇಶ್ವರ | : 1968 |
| 12. ಸಿದ್ಧಗಂಗಾ ಕ್ಷೇತ್ರದ ಇತಿಹಾಸ-ಪರಂಪರೆ | : 1969 |
| 13. ಚನ್ನಮಲ್ಲಿಕಾರ್ಜುನ (ವ್ಯಕ್ತಿಚಿತ್ರ) | : ಗದುಗಿನ ತೋಂಟದಾರ್ಯ ಮಠದ ಪ್ರಕಟಣೆ (1975) |
| 14. ಉದ್ದಾನ ಶಿವಯೋಗಿ (ವ್ಯಕ್ತಿಚಿತ್ರ) | : ಹುಬ್ಬಳ್ಳಿ ಮೂರುಸಾವಿರ ಮಠದ ಪ್ರಕಟಣೆ (1976) |
| 15. ಉದ್ದಾನೇಶ ಚರಿತೆ (ಷಟ್ಪದಿ ಕಾವ್ಯ) | : ಗೌರಮ್ಮ ವಿದ್ಯಾರ್ಥಿನಿಲಯ, ಬೆಂಗಳೂರು ಅವರ ಪ್ರಕಟಣೆ (1973) |
| 16. ರಾಜಶೇಖರ ವಿಳಾಸ (ಗದ್ಯಾನುವಾದ) | : ಕನ್ನಡ ಸಾಹಿತ್ಯ ಪರಿಷತ್ ಪ್ರಕಟಣೆ (1976) |
| 17. ಬಸವರಾಜ ವಿಜಯ (ವೃಷಭೇಂದ್ರ ವಿಜಯ) | : ಕ.ಸಾ.ಪ. ಪ್ರಕಟಣೆ 1976 |
| 18. ಜಯದೇವ ಮುರುಘ ರಾಜೇಂದ್ರ ಸ್ವಾಮಿಗಳು | : 1956 |

